ಸೇಡಿಯಾಪು ಕೃಷ್ಣ ಭಟ್ಟ ಸ್ಮಾರಕ ಗ್ರಂಥಮಾಲಿಕೆ ಪುಷ್ಪ ಒಂಬತ್ತು

# ಸೇಡಿಯಾಪು ಛಂದಸ್ಸಂಪುಟ

[ಛಂದೋಗತಿ, ಕನ್ನಡ ಛಂದಸ್ಸು ಎಂಬ ಕೃತಿದ್ವಯ
ಮತ್ತು ಪೂರಕವಿಚಾರಗಳ ಸಮಗ್ರಸಂಪುಟ]

ಸಂಪಾದಕ
ಡಾ. ಪಾದೇಕಲ್ಲು ವಿಷ್ಣು ಭಟ್ಟ



ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ. ಜಿ. ಎಂ. ಕಾಲೇಜು, ಉಡುಪಿ – 576 102

SEDIYAPU CHANDASSAMPUTA (A combined volume of works on Prosody by Sediyapu Krishna Bhatta), edited with appendices and indices by Dr. Padekallu Vishnu Bhatta, Dhathri, P.O. Athrady, published by Rashtrakavi Govind Pai Samshodhana Kendra, M.G.M. College, Udupi, 576102

First Edition (Combined Vol.) : 2006



Price : Rs. 420/-        Pages : X + 578

ISBN : 81-86668-56-x

ಅಕ್ಷರಸಂಯೋಜನೆ : ಸವಿತಾ ಶಾಂತಪ್ರಿಯ, ಮಾರ್ಪಳ್ಳಿ, ಉಡುಪಿ.

ಮುದ್ರಣ : ಪ್ರಕಾಶ್ ಆಫ್‌ಸೆಟ್, ಮಂಗಳೂರು.



ಈ ಗ್ರಂಥಪುಷ್ಪದ ವಿಕಸನಕ್ಕೆ ಸೇಡಿಯಾಪು ಕೃಷ್ಣ ಭಟ್ಟರ ಮೊಮ್ಮಗಳು ಶ್ರೀಮತಿ ಶರ್ವಾಣಿ ಜೋಸೆಫ್, ಅಮೆರಿಕ, ಇವರು ಉದಾರ ಸಹಾಯವಿತ್ತುದನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಲಾಗಿದೆ.





"'ಪಂಡಿತರೆಂದರೆ ಹೀಗಿರುತ್ತಾರೆ' – ಎಂದು ನಾನು ಸಂತೋಷದಿಂದ ಹೆಸರೆತ್ತಿ ಹೇಳಬಹುದಾದವರು ಸೇಡಿಯಾಪು"

– ಡಾ. ಶಿವರಾಮ ಕಾರಂತ



*

❋ "ಪ್ರತಿಯೊಂದು ವಿಚಾರದಲ್ಲಿಯೂ 'ವೈಜ್ಞಾನಿಕ ದೃಷ್ಟಿ' ಇರ-ಬೇಕೆಂಬ ಕೂಗು ಎಲ್ಲ ದಿಕ್ಕುಗಳಿಂದಲೂ ಕೇಳಿಬರುತ್ತಿದೆ. ಆದರೆ 'ವೈಜ್ಞಾನಿಕ ದೃಷ್ಟಿ' ಎಂದರೇನು? ಆ ಭಾವನೆಯ ತಿರುಳೇನು? - ಕೇವಲ ತಥ್ಯೈಕನಿಷ್ಠೆ; ಸತ್ಯೈಕನಿಷ್ಠೆ ಎಂದರೂ ಸರಿ. ಅಭಿಮಾನ ಮಮತಾದಿಗಳಿಗೆ ಅಲ್ಲಿ ಎಡೆ ಇಲ್ಲ. ಆದರೆ ಈ ದೃಷ್ಟಿ ಜನಪ್ರಿಯ-ವಾಗುವುದು ಕಡಮೆ."

*   *

❋ "ಸಂಶೋಧನಾಸಕ್ತರು ಹಿಂದಿನದನ್ನೂ ಇಂದಿನದನ್ನೂ ಕೂಲಂಕಷವಾಗಿ ಅಭ್ಯಾಸಮಾಡಿ ಪ್ರತಿಯೊಂದನ್ನೂ ಸ್ವತಂತ್ರವಾಗಿ ಸೂಕ್ಷ್ಮ ಪರೀಕ್ಷೆಗೊಳಪಡಿಸಬೇಕು. ಆಗ ಅಲ್ಲಿ ಕಂಡುಬಂದ ಲೋಪದೋಷಗಳನ್ನು ಸಪ್ರಮಾಣವಾಗಿ ಎತ್ತಿತೋರಿಸಿ ತಿದ್ದಬೇಕು. ಪೂರ್ವದ ಶಾಸ್ತ್ರಕಾರರ ಅಭ್ಯರ್ಥನೆಯೂ ಹೀಗಿತ್ತು. ಕೇಶಿರಾಜನು ವಿನಯದಿಂದ ಹೀಗೆ ಕೇಳಿಕೊಂಡಿದ್ದಾನೆ: 'ಅವಧರಿಪುದು ವಿಬು-ಧರ್, ದೋಷವಿದಱೊಳೇನಾನುಮುಳ್ಳೊಡಂ ಪ್ರಿಯದಿಂ ತಿರ್ದು-ವುದು.' ಶಾಸ್ತ್ರವು ಬೆಳೆಯುವುದಕ್ಕೆ ಸರಿಯಾದ ಮಾರ್ಗವಿದು."

*   *   *

❋ "ನಾಮೂಲಂ ಲಿಖ್ಯತೇ ಕಿಂಚಿತ್" ಎಂಬ ಮಲ್ಲಿನಾಥಸೂರಿಯ ಮುದ್ರಾವಾಕ್ಯ(Motto)ವು ನನಗೆ ಪ್ರಿಯವಾದುದು. ಅದನ್ನಿಲ್ಲಿ ತಪ್ಪದೆ ಅನುಸರಿಸಲು ಯತ್ನಿಸಿದ್ದೇನೆ."

**– ಸೇಡಿಯಾಪು ಕೃಷ್ಣ ಭಟ್ಟ**

'ಕೆಲವು ದೇಶನಾಮಗಳು' ಕೃತಿಯ 'ಲೇಖಕನ ವಿಜ್ಞಾಪನೆ'ಯಲ್ಲಿ.

[ಸೇಡಿಯಾಪು ಅವರ ಎಲ್ಲ ಬರೆಹಗಳಿಗೆ ಈ ಮಾತುಗಳು ಅನ್ವಯಿಸುತ್ತವೆ. – ಸಂ.]

# ವಿಷಯಾನುಕ್ರಮ

***

# ಪ್ರಕಾಶಕರ ಮಾತು

ಕರ್ನಾಟಕದ ಹಿರಿಯ ವಿದ್ವಾಂಸ, ಶಾಸ್ತ್ರಪಂಡಿತ ಸೇಡಿಯಾಪು ಕೃಷ್ಣ ಭಟ್ಟರು ನಮ್ಮನ್ನಗಲಿ ಹತ್ತು ವರ್ಷಗಳಿಗೆ ಸಮೀಪ ಬರುತ್ತಿದೆ. ಅವರ ಮರಣಾ- ನಂತರ ಅವರಿಗೆ ಕರ್ನಾಟಕ ಸರಕಾರದ ಅತ್ಯುಚ್ಚ ಸಾಹಿತ್ಯಪುರಸ್ಕಾರವಾದ 'ಪಂಪಪ್ರಶಸ್ತಿ'ಯು ನೀಡಲ್ಪಟ್ಟಿತು. ಪ್ರಶಸ್ತಿಯನ್ನು ಸ್ವೀಕಾರಮಾಡಿದ ಸೇಡಿಯಾಪು ಸುಪುತ್ರರಾದ ಡಾ. ಎಸ್. ಜೆ. ಭಟ್ಟರು ಆ ಪ್ರಶಸ್ತಿಯ ಮೊತ್ತವಾದ ರೂ. ಒಂದು ಲಕ್ಷವನ್ನೂ ಸೇಡಿಯಾಪು ಅವರ ಎಲ್ಲ ಕೃತಿಗಳ ಸ್ವಾಮ್ಯವನ್ನೂ ನಮ್ಮ ಸಂಸ್ಥೆಗೆ ನೀಡಿದರು. ಅದರೊಂದಿಗೆ ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ ಮತ್ತು ಇತರ ಸೇಡಿಯಾಪು ಅಭಿಮಾನಿಗಳು ಒಟ್ಟು ಸೇರಿಸಿದ ಇನ್ನೊಂದು ಲಕ್ಷ ರೂಪಾಯಿಯ ನಿಧಿಯೂ ನಮ್ಮ ಸಂಸ್ಥೆಗೆ ಸೇರಿತು. ಈ ಮೂಲಧನವನ್ನಿರಿಸಿಕೊಂಡು ನಮ್ಮ ಸಂಸ್ಥೆಯು ಪ್ರತಿವರ್ಷವೂ 'ಸೇಡಿಯಾಪುಪ್ರಶಸ್ತಿ'ಯನ್ನಿತ್ತು ಹಿರಿಯ ಕನ್ನಡ ವಿದ್ವಾಂಸರನ್ನು ಪುರಸ್ಕರಿಸುತ್ತಿದೆ. ಈ ವರೆಗೆ ಕನ್ನಡ ನಾಡಿನ ಒಂಬತ್ತು ಮಂದಿ ಹಿರಿಯ ವಿದ್ವಾಂಸರು ಈ ಪ್ರಶಸ್ತಿಯನ್ನು ಸ್ವೀಕರಿಸಿರುತ್ತಾರೆ.

2001 – 2002ರಲ್ಲಿ ಪೂರ್ತಿ ಒಂದು ವರ್ಷ ಕಾಲವನ್ನು ಸೇಡಿಯಾಪು ಜನ್ಮಶತಮಾನೋತ್ಸವ ರೂಪದಲ್ಲಿ ನಾವು ಆಚರಿಸಿದ್ದು ಕನ್ನಡನಾಡಿನ ವಿವಿಧ ಪ್ರದೇಶಗಳಲ್ಲಿ ಸ್ಥಳೀಯ ಆಸಕ್ತರ ಸಹಯೋಗದಲ್ಲಿ ಉಪನ್ಯಾಸ ಕಾರ್ಯಕ್ರಮ- ಗಳನ್ನೂ ಸೇಡಿಯಾಪು ಅವರ ವಿಚಾರಗಳನ್ನು ಜನತೆಗೆ ತಿಳಿಸುವ ಕಾರ್ಯಕ್ರಮ- ಗಳನ್ನೂ ನಡೆಸಿದೆವು. ಅಲ್ಲದೆ ಅವರ ಜೀವನ ಮತ್ತು ಕೃತಿಗಳ ಬಗೆಗೆ ಪುಸ್ತಕ- ಗಳನ್ನೂ ನಾವು ಪ್ರಕಟಿಸಿದೆವು. ಒಟ್ಟಿನಲ್ಲಿ ಸೇಡಿಯಾಪು ಅವರು ಸಾರಸ್ವತ ಪ್ರಪಂಚಕ್ಕೆ ನೀಡಿದ ಕೊಡುಗೆಗಳನ್ನು ಜನತೆಯ ಸ್ಮರಣೆಯಲ್ಲಿ ಉಳಿಸುವ ನಿಟ್ಟಿನಲ್ಲಿ ಹಲವು ಕಾರ್ಯಗಳನ್ನು ಯಥಾಸಾಧ್ಯ ನಾವು ಮಾಡುತ್ತಲೇ ಇದ್ದೇವೆ. ಈ ಕಾರ್ಯಕ್ಕೆ ನಮಗೆ ಕನ್ನಡನಾಡಿನ ವಿದ್ವಾಂಸರ ಮತ್ತು ಸಾಹಿತ್ಯಾಸಕ್ತರ ಸಹಾಯ ಸಹಕಾರಗಳು ದೊರಕಿವೆ, ದೊರಕುತ್ತಿವೆ.

ಸೇಡಿಯಾಪು ಅವರ ಕೃತಿಗಳ ಸ್ವಾಮ್ಯವು ನಮ್ಮ ಸಂಸ್ಥೆಯ ಕೈಯಲ್ಲಿ- ರುವುದರಿಂದ ಅವರ ಕೃತಿಗಳೆಲ್ಲ ಆಸಕ್ತ ಅಧ್ಯಯನಶೀಲರಿಗೆ ದೊರಕುತ್ತಿರುವಂತೆ ವ್ಯವಸ್ಥೆಮಾಡುವ ಹೊಣೆಯೂ ನಮ್ಮ ಮೇಲಿದೆಯೆಂದಾಯಿತು. ಆದುದರಿಂದ ಅವರ ಕೃತಿಗಳಲ್ಲಿ ಪ್ರತಿಗಳು ಮುಗಿದಿದ್ದ 'ಪಳಮೆಗಳು', 'ತಥ್ಯದರ್ಶನ' ಮತ್ತು 'ವಿಚಾರಪ್ರಪಂಚ' – ಇವನ್ನು ನಾವು ಪುನರ್ಮುದ್ರಿಸಿದೆವು. ಈ ಕೃತಿಗಳು ಪ್ರಸ್ತುತ ಲಭ್ಯವಿವೆ. 1985ರಲ್ಲಿ ಪ್ರಕಟಗೊಂಡ ಅವರ 'ಛಂದೋಗತಿ' ಮತ್ತು 1988ರಲ್ಲಿ ಪ್ರಕಟಗೊಂಡ 'ಕನ್ನಡ ಛಂದಸ್ಸು' ಎಂಬ ಕೃತಿಗಳು ಅನುಪಲಬ್ಧವಾದುದರಿಂದ ಆ ಎರಡೂ ಛಂದೋವಿಷಯಕ ಗ್ರಂಥಗಳನ್ನು ಒಟ್ಟು ಸೇರಿಸಿ ಸಂಯುಕ್ತಸಂಪುಟ

ರೂಪದಲ್ಲಿ ಪ್ರಕಟಿಸುವ ಯೋಜನೆಯನ್ನು ಹಾಕಿದ್ದು ಅದು ಪ್ರಸ್ತುತ 'ಸೇಡಿಯಾಪು ಛಂದಸ್ಸಂಪುಟ' ಎಂಬ ಹೆಸರಿನಲ್ಲಿ ಇದೀಗ ನಿಮ್ಮ ಮುಂದಿದೆ.

ಸೇಡಿಯಾಪು ಅವರ ಈ ಅಮೂಲ್ಯ ಛಂದೋಗ್ರಂಥಗಳಿಗೆ ಸೂಚಿಗಳು, ಪೂರಕ ಲೇಖನಗಳು, ಪ್ರಾಸ್ತಾವಿಕ ವಿಚಾರಗಳು ಇತ್ಯಾದಿಗಳನ್ನು ಸೇರಿಸಿ ಸೂಕ್ತ ಶೀರ್ಷಿಕೆ, ಉಪಶೀರ್ಷಿಕೆ ಮತ್ತು ಸಾಂದರ್ಭಿಕ ಟಿಪ್ಪಣಿಗಳನ್ನು ಕೂಡಿಸಿ ಉತ್ತಮರೀತಿಯಲ್ಲಿ ಈ ಸಂಪುಟವನ್ನು ಸಂಪಾದಿಸಿಕೊಟ್ಟವರು ಸೇಡಿಯಾಪು ಅವರಿಗೆ ಆಪ್ತರಾಗಿದ್ದು ಅವರ ಹಲವಾರು ಲೇಖನಗಳನ್ನು ಬರೆದುಕೊಂಡ ಲಿಪಿಕಾರರೂ ಹೆಬ್ರಿಯ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರೂ ನಮ್ಮ ಸಂಸ್ಥೆಯ ಕಾರ್ಯಕಾರಿ ಸಮಿತಿ ಸದಸ್ಯರೂ ವಿದ್ವನ್ಮಿತ್ರರೂ ಆದ ಡಾ. ಪಾದೇಕಲ್ಲು ವಿಷ್ಣು ಭಟ್ಟರು. ಸೇಡಿಯಾಪು ಅವರ ಶಾಸ್ತ್ರೀಯ ಕೃತಿಗಳನ್ನು ಅಧ್ಯಯನ ಮಾಡುವವರಿಗೆ ತುಂಬ ಅನುಕೂಲವಾಗುವಂತೆ ಈ ಗ್ರಂಥವನ್ನು ಅನುಬಂಧಗಳು, ಸೂಚಿಗಳು ಮತ್ತು ಅವಶ್ಯ ಟಿಪ್ಪಣಿಗಳ ಸಹಿತವಾಗಿ ಅವರು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಈ ಕೃತಿಯ ಅಕ್ಷರಸಂಯೋಜನೆ ಅತಿಸುಲಭವೇನೂ ಅಲ್ಲ. ಏಕೆಂದರೆ ಇದು ಒಂದು ರೀತಿಯಿಂದ ಶಾಸ್ತ್ರಜಟಿಲವೆನ್ನಬಹುದಾದ ನಿರೂಪಣೆ. ಈ ಕಾರ್ಯವನ್ನು ನಮಗೆ ಮಾಡಿಕೊಟ್ಟವರು ಮಾರ್ಪಳ್ಳಿಯ 'ದೃಶ್ಯಕಾವ್ಯ'ದ ಶ್ರೀಮತಿ ಸವಿತಾ ಶಾಂತಪ್ರಿಯ ಅವರು. ಸೊಗಸಾಗಿ ಮುದ್ರಣ ಮಾಡಿದವರು ಪ್ರಕಾಶ್ ಆಫ್‌ಸೆಟ್, ಮಂಗಳೂರು ಅವರು. ಅವರೆಲ್ಲರಿಗೆ ವಂದನೆಗಳು ಸಲ್ಲುತ್ತವೆ.

ಜೂನ್ 11, 2006
ಉಡುಪಿ – 576 102

ಹೆರಂಜೆ ಕೃಷ್ಣ ಭಟ್ಟ

*

## ಉಪಕ್ರಮ ವಿಭಾಗ



*

ಹೆಚ್ಚು ಬರೆದವನಲ್ಲ
ನಿಚ್ಚ ಬರೆದವನಲ್ಲ
ಮೆಚ್ಚಿಸಲು ಬರೆಯುವಭ್ಯಾಸವಿಲ್ಲ
ಇಚ್ಚೆಗೆದೆಯೊಪ್ಪಿ ಬಗೆ
ಬಿಚ್ಚಿದರೆ ಕಣ್ಗೆ ಮಯ್
ಎಚ್ಚುವಂದದಿ ತಿದ್ದಿ ತೀಡಿ ಬರೆವೆ

– ಸೇಡಿಯಾಪು ಕೃಷ್ಣ ಭಟ್ಟ

# ಪ್ರಸ್ತಾವನೆ

ಪಂಡಿತಶ್ರೇಷ್ಠ, ವಿದ್ವದ್ವರ ದಿ. ಸೇಡಿಯಾಪು ಕೃಷ್ಣ ಭಟ್ಟರ ಸಾನ್ನಿಧ್ಯ ನನಗೆ ಒದಗಿಬಂದುದು ಛಂದಸ್ಸಂಬಂಧದಿಂದಲೇ ಎಂದು ಮೊದಲಿಗೆ ನೆನಪಿಸಿಕೊಳ್ಳುತ್ತಿದ್ದೇನೆ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿ ಸಿದ್ಧಗೊಳ್ಳುತ್ತಿದ್ದ ತುಳುನಿಘಂಟು ಯೋಜನೆಯಲ್ಲಿ ಸಹಾಯಕ ಸಂಪಾದಕನಾಗಿ ನಾನು 1986ರಲ್ಲಿ ಸೇರಿದಾಗ ಸೇಡಿಯಾಪು ಅವರು ಮಣಿಪಾಲದಲ್ಲಿ ವಾಸವಾಗಿದ್ದುದು ನನಗೆ ತಿಳಿದಿದ್ದರೂ ಬೇರಾವುದೇ ಪೂರ್ವಪರಿಚಯವಿಲ್ಲದುದರಿಂದ ಅವರಲ್ಲಿಗೆ ಹೋಗಲಾಗಿರಲಿಲ್ಲ. ಅವರಿಗೆ ಲೇಖನವೊಂದನ್ನು ಬರೆದುಕೊಳ್ಳಲು ಸೂಕ್ತಲಿಪಿಕಾರರೊಬ್ಬರು ಬೇಕೆಂಬುದನ್ನು ಡಾ. ಉಪ್ಪಂಗಳ ರಾಮ ಭಟ್ಟರು ಆಗ ಎಂ. ಜಿ. ಎಂ. ಕಾಲೇಜಿನಲ್ಲಿ ತಾತ್ಕಾಲಿಕ ಕನ್ನಡ ಉಪನ್ಯಾಸಕನಾಗಿ ಕಾರ್ಯನಿರ್ವಹಿಸುತ್ತಿದ್ದ ನನ್ನ ತಮ್ಮ ಗಣಪತಿಯೊಡನೆ ತಿಳಿಸಿದಾಗ ನಾವಿಬ್ಬರೂ ಸೇಡಿಯಾಪು ಅವರ ಭೇಟಿಗಾಗಿ ಒಂದು ಸಂಜೆ ಅವರಲ್ಲಿಗೆ ಹೋದೆವು. ಪರಿಚಯ ಮಾತುಕತೆಗಳಾದುವು; ತಿಂಡಿತೀರ್ಥಗಳ ಸೇವನೆಯಾಯಿತು. ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ಪ್ರಕಟಗೊಳ್ಳುವ 'ಲೋಚನ' ಪತ್ರಿಕೆಗಾಗಿ 'ಛಂದೋವತಂಸ' ಎಂಬ ವಿಷಯದ ಬಗೆಗೆ ಲೇಖನವೊಂದನ್ನು ಅವರಿಗೆ ಬರೆಯಿಸಬೇಕಾಗಿತ್ತು. ಆಗ ಅವರು ಪೂರ್ತಿಯಾಗಿ ದೃಷ್ಟಿವಿಹೀನರಾಗಿದ್ದುದರಿಂದ ಲೇಖನವನ್ನು ಹೇಳಿಯೇ ಬರೆಯಿಸಬೇಕಿತ್ತು. ಸೇಡಿಯಾಪು ಅವರು ನನ್ನನ್ನು ಬರವಣಿಗೆಗೆ ಆಯ್ಕೆ ಮಾಡಿದರು. ಹೀಗೆ ನನಗೆ ಅವರ ಸಹಯೋಗಭಾಗ್ಯ ದೊರಕಿತು.

ಛಂದೋವತಂಸವನ್ನು ಬರೆಯಿಸುವ ಮೊದಲು ನನಗೆ ಆ ವಿಷಯದಲ್ಲಿ ಆಸಕ್ತಿ ಇದೆಯೇ ಇಲ್ಲವೇ ಎಂದು ತಿಳಿಯಲು ಅವರು ಅವರ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ಕೃತಿಯನ್ನು ಓದಲು ಕೊಟ್ಟರು. 'ಛಂದೋಗತಿ'ಯನ್ನು ಓದಬೇಕೆಂದು ಹೇಳಿದರು. ನಾನು ಆ ಮೊದಲೇ ಛಂದೋಗತಿಯನ್ನು ಕೊಂಡುಕೊಂಡಿದ್ದೆ; ಪೂರ್ಣವಾಗಿ ಓದಿರಲಿಲ್ಲ. ಎರಡೂ ಕೃತಿಗಳನ್ನು ಪಟ್ಟು ಹಿಡಿದು ಓದಿದೆ. ಛಂದೋಗತಿಯಲ್ಲಿ ಹಲವು ವಿಷಯಗಳು ಆಗ ಅರ್ಥವಾಗಲಿಲ್ಲವಾದರೂ ಬಿಡದೆ ಪೂರ್ಣವಾಗಿ ಓದಿಕೊಂಡು ಹೋದೆ. ನಾನು ಅವೆರಡನ್ನು ಸಂಪೂರ್ಣ ಓದಿದ್ದೇನೆಂದು ತಿಳಿದಾಗ ಅವರಿಗೆ ಸಮಾಧಾನವಾಯಿತು. ನನಗೆ ಸಂಗೀತದ ಮೂಲವಿಷಯಗಳು ಮತ್ತು ತಾಳವಿಚಾರದ ಜ್ಞಾನವಿದೆಯೇ ಎಂದು ವಿಚಾರಿಸಿದರು. ನಾನು ಅದು ನನಗಿಲ್ಲವೆಂದಾಗ ಛಂದೋಗತಿ ಪೂರ್ತಿ ಅರ್ಥವಾಗಬೇಕಾದರೆ ಸಂಗೀತಜ್ಞಾನವು ಅವಶ್ಯವೆಂದೂ ತಿಳಿಸಿದರು. ಮತ್ತು 'ಗೇಯವೇದಸ್ಯ ಛಂದೋವೇದಾನತಿರಿಕ್ತತ್ವಾತ್' ಎಂಬುದನ್ನಾಧರಿಸಿ

ಸಂಗೀತಶಾಸ್ತ್ರವು ಛಂದಃಶಾಸ್ತ್ರಕ್ಕೆ ಹೊರಗಾದುದಲ್ಲವೆಂದು ವಿವರಿಸಿದರು.[1] ಉಡುಪಿಗೆ ನಾನು ಬರುವ ಮೊದಲು ಪುತ್ತೂರಿನ ವಿವೇಕಾನಂದ ಕಾಲೇಜಿನಲ್ಲಿ ಐಚ್ಛಿಕ ಕನ್ನಡ ವಿದ್ಯಾರ್ಥಿಗಳಿಗೆ ಛಂದಸ್ಸಿನ ಪಾಠಮಾಡಿದ್ದುದನ್ನೂ ವಿಚಾರಿಸಿ ತಿಳಿದುಕೊಂಡುದಲ್ಲದೆ ನಾನು ಆ ಸಂಬಂಧವಾಗಿ ಯಾವ ಯಾವ ಕೃತಿಗಳನ್ನು ಓದಿರುವೆನೆಂಬುದನ್ನೂ ತಿಳಿದುಕೊಂಡರು. ಅಂತೂ 'ಛಂದೋವತಂಸ' ಲೇಖನ-ವನ್ನು ಬರೆದುಕೊಳ್ಳಲು ನಾನು ಆಗಬಹುದೆಂದು ಅವರಿಗೆ ತೋರಿತು. ಕೆಲವು 'ಬೈಠಕ್ಕು'ಗಳಲ್ಲಿ ಲೇಖನ ಪೂರ್ತಿಯಾಯಿತು. ಶುದ್ಧಪ್ರತಿ ಸಿದ್ಧವಾದ ಮೇಲೆ ಮತ್ತೊಂದು ವಾಚನದ ಅನಂತರ ಪತ್ರಿಕೆಗೆ ಪ್ರಕಟನೆಗಾಗಿ ಅದು ಕಳುಹಿಸಲ್ಪಟ್ಟಿತು.

ಅವರ ಚಿಂತನೆ ಯೋಚನೆಗಳಿಗೆ ಭಂಗವಾಗದಂತೆ ತಾಳ್ಮೆಯಿಂದ ನಾನು ಬರೆದುಕೊಳ್ಳುತ್ತಿದ್ದುದನ್ನು, ಯಾವ ಔದಾಸೀನ್ಯವೂ ಇಲ್ಲದೆ ಅವರು ಹೇಳಿದಷ್ಟು ಬಾರಿ ಅವರು ಬರೆಯಿಸಿದುದನ್ನು ಓದಿಹೇಳಿ, ಹೇಳಿದಷ್ಟು ತಿದ್ದುಪಡಿಗಳನ್ನು ಮಾಡಿ, ಲೇಖನವು ಶುದ್ಧವಾಗಿ ಬರಲು ಪ್ರಯತ್ನಪಟ್ಟುದನ್ನು ಕಂಡು (= ತಿಳಿದು) ಅವರಿಗೆ ಮೆಚ್ಚುಗೆಯಾಗಿ 'ಕನ್ನಡ ಛಂದಸ್ಸು' ಎಂಬ ಅವರ ಹಳೆಯ ಲೇಖನ ಪರಿಷ್ಕರಣದೊಂದು ಯೋಚನೆ ಪುನಃ ಕುಡಿಯೊಡೆಯಿತು. 1932ರಲ್ಲಿ ಅವರು ಮಡಿಕೇರಿಯ ಸಾಹಿತ್ಯಸಮ್ಮೇಳನದಲ್ಲಿ ಮಂಡಿಸಿದ್ದ 'ಕನ್ನಡ ಛಂದಸ್ಸು' ಎಂಬ ಲೇಖನವು ಐತಿಹಾಸಿಕ ಮಹತ್ತ್ವದ್ದಾಗಿದ್ದು ಕನ್ನಡದ ಸಹಜ ಛಂದೋಬಂಧಗಳ ಬಗೆಗಿನ ಮೊತ್ತಮೊದಲ ಯಶಸ್ವಿಯಾದ ವಿಶ್ಲೇಷಣೆಯಾಗಿತ್ತು. ಆ ಲೇಖನದ ಆಧಾರದಿಂದಲೇ ಕನ್ನಡದ ವಿದ್ವದ್ವಲಯಕ್ಕೆ ತ್ರಿಮೂರ್ತಿ (= ಅಂಶ) ಗಣಗಳ ಸ್ವಭಾವ ಮತ್ತು ಆ ಗಣಗಳನ್ನು ಆಧರಿಸಿದ 'ಕನ್ನಡಜಾತಿ' ಪದ್ಯಬಂಧಗಳ ಸ್ವಭಾವಪರಿಚಯವಾಗಿತ್ತು. ಆ ಲೇಖನವನ್ನು ಪರಿಷ್ಕರಿಸಿ ಟಿಪ್ಪಣಿಗಳೊಡನೆ ನವೀಕರಿಸಿ ಪ್ರಕಟಿಸಬೇಕೆಂಬ ಆಸೆಯಿಂದ ಅವರು ಪರಿಷ್ಕರಣಕ್ಕೆ ತೊಡಗಿದ್ದರು. ಆದರೆ ಅದರ ಸ್ವಲ್ಪಭಾಗದ ಪರಿಷ್ಕರಣ ನಡೆದಾಗಲೇ ಅವರ ದೃಷ್ಟಿಶಕ್ತಿ ಪೂರ್ತಿಯಾಗಿ ಹೊರಟುಹೋಗಿ ಆ ಕೆಲಸವು ಇನ್ನು ನಡೆಯಲಾರದೆಂಬ ನಿರಾಸೆಯಲ್ಲೇ ಅವರಿದ್ದರು. 'ಛಂದೋವತಂಸ' ಬರೆಯಿಸಿದ ಮೇಲೆ 'ಕನ್ನಡ ಛಂದಸ್ಸು' ಪರಿಷ್ಕರಣದ ಕಾರ್ಯಕ್ಕೆ ಅವರು ನನ್ನನ್ನು ಬಳಸಿದರು.

ಈ ಮಧ್ಯದಲ್ಲಿಯೇ 'ಛಂದೋಗತಿ' ಗ್ರಂಥವನ್ನು ವಿಮರ್ಶಿಸಿ ಪ್ರೊ. ಎಂ. ವಿ. ಸೀತಾರಾಮಯ್ಯನವರು 'ಲೋಚನ' ಪತ್ರಿಕೆಯಲ್ಲಿ ಲೇಖನ ಬರೆದಾಗ ಅದಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ ಒಂದು ಲೇಖನವನ್ನು ಬರೆಯಬೇಕಾಯಿತು. ಅದನ್ನು ನನ್ನಿಂದಲೇ ಬರೆಯಿಸಿದರು. 'ಕನ್ನಡ ಛಂದಸ್ಸು' ಪರಿಷ್ಕೃತಗೊಂಡು 1988ರಲ್ಲಿ ಪ್ರಕಾಶನಕ್ಕೆ ಸಿದ್ಧವಾಯಿತು. ಮಣಿಪಾಲ ಸಾಹಿತ್ಯ ಸಂಘದ ಕಾರ್ಯದರ್ಶಿ ಮತ್ತು

1. ಈ ವಿಚಾರವನ್ನು ಛಂದೋಗತಿಯ ಮೊದಲನೆಯ ಪರಿಚ್ಛೇದದಲ್ಲಿ ಪ್ರಸ್ತಾವಿಸಿದ್ದುದನ್ನು ನಾನು ಓದಿದ್ದುದರಿಂದ ಅವರ ಅಭಿಪ್ರಾಯಗಳು ನನಗೆ ಬೇಗನೆ ತಿಳಿಯುವಂತಾಯಿತು.

ಸಾಹಿತ್ಯಸೇವಕ ದಿ. ಅ. ಬಾ. ಶೆಟ್ಟಿ ಪೊಳಲಿಯವರು ಮಣಿಪಾಲ ಸಾಹಿತ್ಯ ಸಂಘದ ಮೂಲಕ ಅದನ್ನು ಪ್ರಕಾಶಪಡಿಸುವ ಹೊಣೆ ಹೊತ್ತರು. ದಿನಾಂಕ 20–2–1999ರಂದು ಮಣಿಪಾಲದ ನೆಹರೂ ಸ್ಮಾರಕ ಗ್ರಂಥಭಂಡಾರದಲ್ಲಿ ಕನ್ನಡದ ಹಿರಿಯ ನಿಘಂಟುಕಾರ ವಿದ್ವಾಂಸ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಈ ಕೃತಿಯನ್ನು ಅನಾವೃತಗೊಳಿಸಿ ಉಪನ್ಯಾಸ ನೀಡಿದರು.[2]

ಸೇಡಿಯಾಪು ಅವರೇ 'ಕನ್ನಡ ಛಂದಸ್ಸು' ನಿಬಂಧವನ್ನು ಪರಿಷ್ಕರಿಸು–ತ್ತಿದ್ದಲ್ಲಿ ಅದು ಇಷ್ಟು ಗಾತ್ರಕ್ಕೆ ಬೆಳೆಯುತ್ತಿದ್ದಿರಲಿಲ್ಲವೆಂಬುದನ್ನು ಅವರು ನನ್ನಲ್ಲಿ ಆಗಾಗ ಹೇಳಿದ್ದುಂಟು. ನಿಬಂಧವನ್ನು ಅವರು 15ನೇ ಟಿಪ್ಪಣಿಯವರೆಗೆ ಪರಿಷ್ಕರಿಸಿದ್ದರು. ಅನಂತರದ ಪರಿಷ್ಕರಣಗಳನ್ನೆಲ್ಲ ನನ್ನಿಂದಲೇ ಮಾಡಿಸಿದ್ದರು. ಸಂದರ್ಭ ನೋಡಿ ನಾನು ಕೇಳುತ್ತಿದ್ದ ಕೆಲವು ಪ್ರಶ್ನೆಗಳಿಂದಾಗಿ ಟಿಪ್ಪಣಿಗಳ ಸಂಖ್ಯೆ ಹೆಚ್ಚಾಯಿತು; ಕೆಲವು ಟಿಪ್ಪಣಿಗಳು ಪುಟ್ಟಪುಟ್ಟ ಲೇಖನಗಳಷ್ಟು ವಿಸ್ತಾರಗೊಂಡುವು. ನಿಬಂಧದ ಟಿಪ್ಪಣಿಗಳಲ್ಲಿರುವ ತ್ರಿಪದಿ–ತ್ರಿವಿಧಿ ವಿಚಾರ, ಏಳೆ–ಕುರಳ್ ಸಂಬಂಧ, ಬಾದಾಮಿಯ ಶಾಸನದ ಪಾಠ, ಕಲಿಯುಗವಿಪರೀತನ್ ಪಾಠದೋಷ, ಆ ತ್ರಿಪದಿಗಳ ಅರ್ಥ, ಯತಿವಿಚಾರ – ಇತ್ಯಾದಿಗಳು ನಿಬಂಧಕ್ಕೆ ಸೇರ್ಪಡೆಗೊಂಡುದು ಅಥವಾ ಟಿಪ್ಪಣಿ ವಿಸ್ತಾರಗೊಂಡುದು ನನ್ನ ಪ್ರಶ್ನೆಗಳಿಂದಾಗಿ ಎಂಬುದನ್ನು ನಿರೂಪಿಸಬಯಸುತ್ತೇನೆ. "ಅದನ್ನೆಲ್ಲ ಹೇಳಿದರೆ ವಿಸ್ತಾರವಾಗುತ್ತದೆ; ನೀನೇ ಕಷ್ಟ ಪಡಬೇಕು" ಎಂಬುದು ಅವರು ಆಗ ಹೇಳುತ್ತಿದ್ದ ಮಾತು. "ನೀವು ಹೇಳುತ್ತಾ ಹೋಗಿ, ಎಷ್ಟು ವಿಸ್ತಾರವಾದರೂ ನಾನು ಬರೆದುಕೊಳ್ಳುತ್ತೇನೆ. ಕಷ್ಟವಾಗುವುದಿಲ್ಲ" ಎಂಬುದು ನನ್ನ ಮಾತು. ಅಂತೂ ಅವರು ಬೇಕಷ್ಟು ಪರಿಷ್ಕರಣ ಮಾಡಿಸಿದರು. ಪ್ರಬಂಧವು ಗ್ರಂಥರೂಪಕ್ಕೆ ಬಂದು ಸಾಕಷ್ಟು ವಿಸ್ತೃತವೂ ಪರಿಪುಷ್ಟವೂ ಆಯಿತು. ಅದರಲ್ಲಿ ನನ್ನ ಕೈಂಕರ್ಯವೂ ಒಂದಂಶ ಇದೆಯೆಂಬುದು ನನಗೆ ಇಂದೂ ಪುಲಕವನ್ನುಂಟುಮಾಡುವ ವಿಚಾರವಾಗಿದೆ.

'ಛಂದೋಗತಿ' 1985ರಲ್ಲಿ ಪ್ರಕಟಗೊಳ್ಳುವಲ್ಲಿಯವರೆಗೆ ಸೇಡಿಯಾಪು ಅವರಿಗೆ ದೃಷ್ಟಿಶಕ್ತಿ ಸಹಾಯನೀಡಿತ್ತು. 'ಛಂದೋಗತಿ' ಹೊರಬಂದು ಕೆಲವೇ ಸಮಯದಲ್ಲಿ ಅವರ ಕಣ್ಣುಗಳು ಪೂರ್ತಿಯಾಗಿ ದೃಷ್ಟಿಶಕ್ತಿಯನ್ನು ಕಳೆದು–ಕೊಂಡುವು. 1986ರ ಮಧ್ಯದಲ್ಲಿ ನಾನು ಅವರ ಭೇಟಿಗೆ ಹೋದಾಗ ಅವರು ಹಗಲು ಮತ್ತು ರಾತ್ರಿಯನ್ನು ಗುರುತಿಸಬಲ್ಲಷ್ಟು ಮಾತ್ರ ಶಕ್ತಿ ಪಡೆದಿದ್ದರು. ಕತ್ತಲು ಕೋಣೆಯಲ್ಲಿ ಬೆಳಕು ಮಾಡಿದರೆ ಗುರುತಿಸುತ್ತಿದ್ದರು. ಆ ಮೇಲೆ ಆ ಶಕ್ತಿ ಮರಳಲು ಅಷ್ಟಿಷ್ಟು ಚಿಕಿತ್ಸೆ ನಡೆಸುತ್ತಿದ್ದರೂ ಫಲಕಾರಿಯಾಗಲಿಲ್ಲ. ಜೀವನದ

2. 1988ರಲ್ಲಿ ಗ್ರಂಥದ ಮುದ್ರಣವು ತೊಡಗಿದ್ದು ಮುದ್ರಿತ ಗ್ರಂಥದ ಅನಾವರಣ ಕಾರ್ಯಕ್ರಮವು 1989ರಲ್ಲಿ ನಡೆದುದಾಗಿದೆ. ಪುಸ್ತಕದಲ್ಲಿ 'ಮುದ್ರಣ 1988' ಎಂದೇ ಮುದ್ರಿತವಾದುದರಿಂದ ಎಲ್ಲ ಕಡೆಗೂ ಹಾಗೆಯೇ ದಾಖಲಿಸಲ್ಪಟ್ಟಿದೆ.

ಕೊನೆಯವರೆಗೆ ಅವರು ಹೊರಗಿನ ಕಣ್ಣುಗಳಿಲ್ಲದೆ ಸಾರಸ್ವತಸೇವೆ ನಡೆಸಿದರು. 1986ರ ಅನಂತರದ ಅವರ ಬರವಣಿಗೆಗಳೆಲ್ಲವೂ ಹೇಳಿ ಬರೆಯಿಸಿದ ಬರವಣಿಗೆಗಳು.

'ಛಂದೋಗತಿ' 1985ರಲ್ಲಿ ಪ್ರಕಟಗೊಂಡರೂ ಅದು ಶಾಸ್ತ್ರೀಯಗ್ರಂಥ-ವಾಗಿದ್ದು ಪ್ರಚಲಿತ ಛಂದೋವಿಮರ್ಶಕರೂ ಛಂದಃಸಂಶೋಧಕರೂ ಮಾಡುತ್ತಿದ್ದ ಬರವಣಿಗೆಗಳ ವಿಧಾನಗಳಿಂದ ಪೂರ್ತಿ ಬೇರೆಯಾಗಿದ್ದುದು ಮಾತ್ರವಲ್ಲದೆ ಪ್ರಸ್ತುತ ಅಧ್ಯಯನ ಮಾಡುತ್ತಿದ್ದ ಛಂದೋವಿಷಯಗಳಿಗೆ ಅಪರಿಚಿತವೆಂದೇ ಹೇಳಬಹುದಾದ ವಿಚಾರಗಳನ್ನು ವಿವೇಚಿಸುತ್ತಿದ್ದುದರಿಂದ ಅದೇನೂ ಬಹಳ ಜನಪ್ರಿಯವಾಗಲಿಲ್ಲ. ಜನಪ್ರಿಯವಾಗಲು ಅದು 'ಜನಪ್ರಿಯ ಮಾದರಿ'ಯ ಕೃತಿಯಲ್ಲ. ಅದು ಬಹಳಷ್ಟು 'ವಿದ್ವಜ್ಜನಪ್ರಿಯ'ವಾದ ಬಗೆಗೂ ಸೇಡಿಯಾಪು ಅವರಿಗೆ ತಿಳಿದುಬರಲಿಲ್ಲ. ಛಂದೋಗತಿಯನ್ನು ಓದಿ ವಿಮರ್ಶಿಸುವವರೊಡನೆ ಸಂವಾದ ನಡೆಸಿ ತಮ್ಮ ನಿಗಮನಗಳನ್ನು ವಿದ್ವಾಂಸರು ಹೇಗೆ ಸ್ವೀಕರಿಸಿದ್ದಾ-ರೆಂಬುದನ್ನು ತಿಳಿಯುವ ಕುತೂಹಲ ಅವರಿಗಿತ್ತು. ಅಂತಹ ಸಂದರ್ಭಗಳಲ್ಲಿ 'ಲೋಚನ'ದಲ್ಲಿ ಪ್ರೊ. ಎಂ. ವಿ. ಸೀತಾರಾಮಯ್ಯನವರ ವಿಮರ್ಶೆ ಪ್ರಕಟ-ಗೊಂಡುದಾಗಿತ್ತು. ಅದನ್ನು ನೋಡಿ ವಿದ್ವಾಂಸರು ಸಹ ತಮ್ಮ ಅಭಿಪ್ರಾಯಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲವೆಂಬ ಖೇದ ಅವರಿಗುಂಟಾಗಿ ಅವರು ಆ ವಿಮರ್ಶಲೇಖನಕ್ಕೆ ಪ್ರತಿಕ್ರಿಯೆಯನ್ನು ಬರೆಯಿಸಿದರು.

ಕನ್ನಡ ಗಣಗಳ ಮೂಲಸ್ವರೂಪವೇನೆಂಬುದನ್ನು ಹುಡುಕುತ್ತಾ ಕೆಲವರು ಮಾತ್ರಾಗಣಗಳಲ್ಲೂ ಕೆಲವರು ಅಕ್ಷರಗಣಗಳಲ್ಲೂ ಅರಸುತ್ತಿದ್ದಾಗ ಸೇಡಿಯಾಪು ಅವರು ಅವುಗಳ ವಿಶಿಷ್ಟಸ್ವರೂಪವನ್ನು 1932ರಲ್ಲಿ ಮಡಿಕೇರಿಯಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನದಲ್ಲಿ ಓದಿದ 'ಕನ್ನಡ ಛಂದಸ್ಸು' ಎಂಬ ನಿಬಂಧದಲ್ಲಿ ಪ್ರಕಟಪಡಿಸಿದ್ದರು. ಲಗಾದಿ (ᴗ–) ಗಣನಿಷೇಧವು ಕನ್ನಡಗಣಗಳ ಮುಖ್ಯಲಕ್ಷಣವೆಂಬುದನ್ನು ಅವರು ಅಲ್ಲಿ ಮೊತ್ತಮೊದಲಾಗಿ ಪ್ರತಿಪಾದಿಸಿದರು. ಆದುದರಿಂದ ಆ ಲೇಖನಕ್ಕೆ ಐತಿಹಾಸಿಕ ಪ್ರಾಮುಖ್ಯವಿತ್ತು. ಆ ಲೇಖನದ ಮೂಲಸ್ವರೂಪವನ್ನಿರಿಸಿಕೊಂಡು ಪರಿಷ್ಕರಣಗಳನ್ನು ಟಿಪ್ಪಣಿಗಳಲ್ಲಿ ಕೊಟ್ಟು ಅನವಶ್ಯ ಭಾಗಗಳನ್ನು ಕಳೆದುಹಾಕಿ ಅನುಬಂಧಗಳನ್ನು ಸೇರಿಸಿ ಹೊಸ ರೂಪ ಕೊಟ್ಟು ಪ್ರಕಟಿಸಿದ ಗ್ರಂಥವೇ 'ಕನ್ನಡ ಛಂದಸ್ಸು'. ಈ ಹಿಂದೆ ಉಲ್ಲೇಖಿಸಿದಂತೆ 1988ರಲ್ಲಿ ಇದು ಪ್ರಕಟಗೊಂಡಿತು. ಇದರ ಐತಿಹಾಸಿಕ ಮಹತ್ತ್ವವನ್ನು ತಿಳಿಸುವ ಹಲವು ಉದಾಹರಣೆಗಳನ್ನು ಸೇಡಿಯಾಪು ಅವರು ಕೃತಿಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಈ ಕೃತಿಯಲ್ಲಿಯೂ ಅನೇಕ ಹೊಸ ವಿಷಯಗಳನ್ನು ಅವರು ನಿರೂಪಿಸಿದ್ದರೂ ಕರ್ನಾಟಕದ ವಿದ್ವಜ್ಜನ ಅದನ್ನು ಹೇಗೆ ಸ್ವೀಕರಿಸಿದರೆಂಬ ಬಗೆಗೆ ಅವರಿಗೆ ಸರಿಯಾಗಿ ತಿಳಿದುಬರಲಿಲ್ಲ.

ಹೀಗಿದ್ದಾಗ 1989ರ ಸುಮಾರಿನಲ್ಲಿ ಅವರಿಗೆ ಬೆಂಗಳೂರಿನ ಅಷ್ಟಾವಧಾನಿ (ಈಗ ಶತಾವಧಾನಿ) ಆರ್. ಗಣೇಶ್ ಅವರ ಪತ್ರ ಬಂತು. ಅದು ಬಂದ ಕೂಡಲೇ ಪ್ರಾಯಶಃ ನನಗೆ ಸೇಡಿಯಾಪು ಅವರ ಕಾರ್ಡು ಬಂದು ನಾನು ಅವರನ್ನು ಭೇಟಿಮಾಡಿದೆ. ಬಹಳ ಸಂತೋಷದಿಂದ ಗಣೇಶರ ಪತ್ರವನ್ನು ತೋರಿಸಿ "ಇಲ್ಲೊಬ್ಬ ಯುವಕ ನನ್ನ ಛಂದೋಗತಿಯನ್ನು ಓದಿ ಅರ್ಥಮಾಡಿ-ಕೊಂಡಿದ್ದಾನೆ" ಎಂದು ಹೇಳಿದರು. ಸೇಡಿಯಾಪು ಅವರ ಎರಡು ಛಂದೋ-ಗ್ರಂಥಗಳನ್ನೂ ಓದಿ ಬರೆದ ಪತ್ರವಾಗಿತ್ತು ಅದು.[3] ಅದನ್ನು ಪುನಃ ನನ್ನಿಂದ ಓದಿಸಿ ಸಂತೋಷಪಟ್ಟರು. ತಮ್ಮ ಪ್ರೌಢಚಿಂತನಗಳನ್ನು ಅರ್ಥಮಾಡುವ ಮತ್ತು ಆ ದಾರಿಯಲ್ಲಿ ಮುಂದುವರಿಯುವ ಹೊಸ ತಲೆಮಾರಿನ ವಿದ್ವಾಂಸರಿದ್ದಾರೆಂ-ಬುದು ಅವರಿಗೆ ತಿಳಿದುಬಂದುದರಿಂದ ಅವರು ತುಂಬ ಸಮಾಧಾನ ಮತ್ತು ತೃಪ್ತಿಯ ಮಾತುಗಳನ್ನು ಹೇಳಿದರು. ತರುಣ ವಿದ್ವಾಂಸರಾದ ಆರ್. ಗಣೇಶರನ್ನು ನೋಡಿ ಮಾತಾಡಬೇಕೆಂಬ ಹಂಬಲ ಸೇಡಿಯಾಪು ಅವರಿಗೆ ತುಂಬಾ ಉಂಟಾಗಿ ಒಮ್ಮೆ ಬಂದು ಭೇಟಿಮಾಡುವಂತೆ ಅವರಿಗೆ ಪತ್ರ ಬರೆಯಿಸಿದರು. ಹಲವು ತಿಂಗಳುಗಳ ಬಳಿಕ ಗಣೇಶರು ಸೇಡಿಯಾಪು ಅವರನ್ನು ಭೇಟಿಮಾಡಿದಾಗ ಪ್ರೀತಿಪೂರ್ವಕವಾಗಿ ಅವರು ಗಣೇಶರನ್ನು ಆಲಿಂಗಿಸಿಕೊಂಡು ಆಶೀರ್ವದಿಸಿದ ಸಂದರ್ಭದಲ್ಲಿ ನಾನೂ ಅಲ್ಲೇ ಇದ್ದೆ. ತಮ್ಮ ಕೃತಿಯನ್ನು ನಿಜವಾಗಿ ಅರ್ಥ ಮಾಡಿಕೊಂಡವನನ್ನು ಕಂಡ ತೃಪ್ತಿ ಹೀಗೆ ಸೇಡಿಯಾಪು ಅವರಿಗುಂಟಾಯಿತು.

1988ರಲ್ಲಿ ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿ ಸಿದ್ಧಗೊಳ್ಳುತ್ತಿದ್ದ ತುಳುನಿಘಂಟು ಯೋಜನೆಯ ಮೂಲಕ ತುಳು ನಿಘಂಟುವಿನ ಮೊದಲ ಸಂಪುಟದ ಅನಾವರಣ ಮತ್ತು ಅದಕ್ಕೆ ಪೂರ್ವ-ಭಾವಿಯಾಗಿ ಒಂದು ನಿಘಂಟು ರಚನಾಕ್ರಮದ ಬಗೆಗಿನ ಕಮ್ಮಟ ನಡೆಯಿತು. ಅದಕ್ಕೆ ಸಂಪನ್ಮೂಲವ್ಯಕ್ತಿಗಳಾಗಿ ಹಿರಿಯ ನಿಘಂಟುಕಾರ ಪ್ರೊ. ಜಿ. ವೆಂಕಟ-ಸುಬ್ಬಯ್ಯನವರೂ ಹಿರಿಯ ವಿದ್ವಾಂಸ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳೂ ಬಂದಿದ್ದರು. ಅವರಿಬ್ಬರನ್ನೂ ಸೇಡಿಯಾಪು ಅವರ ಭೇಟಿಗಾಗಿ ಕರೆದುಕೊಂಡು ಹೋಗುವ ಅವಕಾಶ ನನಗೆ ದೊರಕಿತು. ಪರಸ್ಪರ ಕುಶಲವಾರ್ತೆಗಳಾದ ಮೇಲೆ ಸೇಡಿಯಾಪು ಅವರು ತಮ್ಮ 'ಕನ್ನಡ ಛಂದಸ್ಸು' ಪ್ರಬಂಧವು ಪರಿಷ್ಕೃತವಾಗು-ತ್ತಿರುವುದನ್ನು ತಿಳಿಸಿದರು. (ಆ ಸಮಯದಲ್ಲಿ ಅದರ ಪರಿಷ್ಕರಣಕಾರ್ಯಕ್ಕಾಗಿ

3. ಈ ಪತ್ರದ ಕೊನೆಗೆ ಸೇಡಿಯಾಪು ಅವರ ಬಗೆಗೆ ಪ್ರಶಂಸೆ ಮತ್ತು ವಂದನೆಗಳನ್ನು ಸಲ್ಲಿಸುವ ಒಂದು ಸಂಸ್ಕೃತ ಭಾಷೆಯ ಮತ್ತು ಒಂದು ಕನ್ನಡ ಭಾಷೆಯ ಒಟ್ಟು ಎರಡು ವೃತ್ತಗಳನ್ನೂ ಆರ್. ಗಣೇಶರು ರಚಿಸಿದ್ದರು. ಈ ಎರಡು ಪದ್ಯಗಳನ್ನು ಅವರು 'ಛಂದೋವಿದ ಸೇಡಿಯಾಪು' ಎಂಬ ಲೇಖನದ ಕೊನೆಗೂ ಬಳಸಿಕೊಂಡಿದ್ದಾರೆ. ಆ ಲೇಖನವು ಈ 'ಛಂದಸ್ಸಂಪುಟ'ದ 'ಪೂರಕವಿಚಾರವಿಭಾಗ'ದಲ್ಲಿದೆ.

ನಾನು ಅವರಲ್ಲಿಗೆ ವಾರದಲ್ಲಿ ಎರಡು ಮೂರು ಬಾರಿಯಾದರೂ ಹೋಗುತ್ತಿದ್ದೆ.) ಮತ್ತು ಅದೇ ಹೆಸರಿನಿಂದ ವಿಸ್ತೃತರೂಪದಲ್ಲಿ ಪುಸ್ತಕವಾಗಿ ಪ್ರಕಟವಾಗಲಿರು-ವುದನ್ನು ತಿಳಿಸಿದರು. ಡಾ. ವೆಂಕಟಾಚಲ ಶಾಸ್ತ್ರಿಗಳು ಕನ್ನಡ ಛಂದಸ್ಸಿನ ಕ್ಷೇತ್ರದಲ್ಲಿ ತುಂಬ ದುಡಿದವರು ಮತ್ತು ಆ ಶಾಸ್ತ್ರಕ್ಕೆ ಸಂಬಂಧಿಸಿದ ಹಲವು ಕೃತಿಗಳನ್ನು ಪ್ರಕಟಿಸಿದವರು. ಅವರಿಗೆ ಆ ಕೃತಿಯ ಹೆಸರಿನ ಬಗೆಗೆ ಪೂರ್ಣ ಸಮಾಧಾನ-ವಾಗಲಿಲ್ಲ. ಏಕೆಂದರೆ 'ಕನ್ನಡ ಛಂದಸ್ಸು' ಎಂಬ ಹೆಸರಿನಲ್ಲಿ ಡಾ. ವೆಂಕಟಾಚಲ ಶಾಸ್ತ್ರಿಗಳ ಒಂದು ಲೇಖನಸಂಕಲನ ಅದಾಗಲೇ ಹೊರಬಂದಿತ್ತು.[4] ಅದು ಸೇಡಿಯಾಪು ಅವರಿಗೆ ತಿಳಿದೂ ಇತ್ತು. "ಆ ಹೆಸರಿನ ಒಂದು ಪುಸ್ತಕ ಈಗಾಗಲೇ ಬಂದಿದೆಯಲ್ಲ" ಎಂದು ಡಾ. ಶಾಸ್ತ್ರಿಗಳು ಹೇಳಿದರು. "ಆ ಹೆಸರಿನಲ್ಲಿ ಮೊದಲು ಬಂದ ಬರಹ ಯಾವುದು? ಮೊದಲು ಬಂದುದು ಅದೇ ಹೆಸರಿನಿಂದ ಪುಸ್ತಕವಾಗುವುದು ಯೋಗ್ಯವಲ್ಲವೆ? ಆದುದರಿಂದ ಆ ಹೆಸರಿನಲ್ಲೇ ಕೃತಿಯನ್ನು ಪ್ರಕಟಿಸುವ ಸಂಕಲ್ಪ ಮಾಡಿದ್ದೇನೆ" ಎಂದು ಸೇಡಿಯಾಪು ಅವರು ಹೇಳಿದರು. ಹೆಸರನ್ನು ಬದಲಾವಣೆ ಮಾಡಲು (ಆ ಹೆಸರಿನ ಇನ್ನೊಂದು ಪುಸ್ತಕ ಬಂದಿ-ದ್ದರೂ) ಸೇಡಿಯಾಪು ಅವರಿಗೆ ಇಷ್ಟವಿರಲಿಲ್ಲ. ಏಕೆಂದರೆ "ಕನ್ನಡ ಛಂದಸ್ಸು" ಎಂಬ ಆ ಲೇಖನಕ್ಕೆ ಕನ್ನಡದ ಛಂದಃಶಾಸ್ತ್ರಕ್ಷೇತ್ರದಲ್ಲಿ ವಿಶಿಷ್ಟ ಇತಿಹಾಸವಿತ್ತು. ಅವರಿಗೆ ಆ ಲೇಖನದ ಬಗೆಗೆ ಅಷ್ಟು ಅಭಿಮಾನವೂ ಇತ್ತು. ಸೇಡಿಯಾಪು ಅವರು ಮೊತ್ತಮೊದಲು ಅಖಿಲಕರ್ನಾಟಕದ ವಿದ್ವಾಂಸರಿಗೆ ಪರಿಚಿತರಾದುದು ಆ ಲೇಖನದ ಮೂಲಕವಾಗಿತ್ತು. ಆದುದರಿಂದ ಆ ಹೆಸರನ್ನು ಅವರು ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಮುಂದೆ 1989ರಲ್ಲಿ 'ಕನ್ನಡ ಛಂದಸ್ಸು' ಕೃತಿಯ ಅನಾವರಣಕ್ಕೆ ಪ್ರೊ. ಜಿ. ವೆಂಕಟಸುಬ್ಬಯ್ಯನವರೇ ಬರಬೇಕೆಂದು ಸೇಡಿಯಾಪು ಅವರು ಬಯಸಿದರು. ಹಾಗೆಯೇ ಅವರಿಂದಲೇ ಆ ಕಾರ್ಯ ನಡೆಯಿತು. 1991ರಲ್ಲಿ 'ಸೇಡಿಯಾಪು – ೯೦ – ಅಭಿವಂದನ' ಕಾರ್ಯಕ್ರಮ ನಡೆದಾಗ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಯವರು 'ರಸಋಷಿ : ಪಂಡಿತಶ್ರೇಷ್ಠ' ಎಂಬ ಉಪ-ನ್ಯಾಸ ನೀಡಿದರು.[5] ಈ ಇಬ್ಬರೂ ವಿದ್ವಾಂಸರಿಗೆ ಸೇಡಿಯಾಪು ಮರಣಾ ನಂತರ ವಿವಿಧ ವರ್ಷಗಳಲ್ಲಿ 'ಸೇಡಿಯಾಪು ಪ್ರಶಸ್ತಿ' ನೀಡಿ ಪುರಸ್ಕರಿಸಲಾಗಿರುವುದೂ

4. 1970ರಲ್ಲಿ ಈ ಕೃತಿ ಮೊದಲು ಮುದ್ರಿತವಾಗಿ 1976ರಲ್ಲಿ ಎರಡನೆಯ ಮುದ್ರಣ ಹೊರಬಂದಿತ್ತು. (ಪರಿಷ್ಕೃತ ಚತುರ್ಥ ಮುದ್ರಣ 2000)

5. ಆ ಉಪನ್ಯಾಸ ಪ್ರಬಂಧವು ಸೇಡಿಯಾಪು ಸ್ಮರಣಸಮುಚ್ಚಯ ರೂಪದ 'ನಂದಾದೀವಿಗೆ' (ಸಂ. ಎಂ. ರಾಮಚಂದ್ರ – 1997) ಎಂಬ ಕೃತಿಯಲ್ಲಿ ಮುದ್ರಿತವಾಗಿದ್ದು ಅದರ ಛಂದಸ್ಸಂಬಂಧಿಯಾದ ಭಾಗವನ್ನು ಮಾತ್ರ ಪ್ರಸ್ತುತ ಸಂಪುಟದ 'ಪೂರಕವಿಚಾರವಿಭಾಗ'ದಲ್ಲಿ ಸೇರಿಸಿಕೊಳ್ಳಲಾಗಿದೆ.

ಉಲ್ಲೇಖನೀಯ. (ಪ್ರೊ. ಜಿ. ವೆಂಕಟಸುಬ್ಬಯ್ಯ - 1998 ಮತ್ತು ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ - 1999.)

'ಕನ್ನಡ ಛಂದಸ್ಸು' ಪ್ರಕಟನೆಯ ಅನಂತರ ಛಂದಸ್ಸಿನ ಕುರಿತಾಗಿ ತಾವು ಮುಂದೆ ಏನನ್ನೂ ಬರೆಯಿಸುವುದಿಲ್ಲವೆಂದು ಸೇಡಿಯಾಪು ಹೇಳಿದ್ದರು.[6] "ಅಷ್ಟಿಷ್ಟು ವಿಚಾರಗಳನ್ನು 'ಕನ್ನಡ ಛಂದಸ್ಸು' ಪರಿಶಿಷ್ಟಗಳಲ್ಲಿ ಹೇಳಿದ್ದೇನೆ. ದಾಸರ ಪದಗಳನ್ನೂ ಯಕ್ಷಗಾನದ ತಾಳಾನುಸಾರಿಯಾದ ಪದಗಳನ್ನೂ ವಿವೇಚಿಸುವ ದಾರಿಗಳನ್ನು ಸೂಚನೆ ಮಾಡಿದ್ದೇನೆ. ಇನ್ನು ಮುಂದಿನವರು ನೋಡಿಕೊಳ್ಳಲಿ" ಎಂಬ ಮಾತುಗಳನ್ನು ಅವರು ನನ್ನಲ್ಲಿ ಹೇಳಿದ್ದರು. ಛಂದಸ್ಸಿನ ಕ್ಷೇತ್ರದಲ್ಲಿ ತಾವು ಮಾಡಲೇಬೇಕಾಗಿದ್ದ ಕೆಲಸಗಳು ಪೂರ್ಣಗೊಂಡುವೆಂಬ ತೃಪ್ತಿ ಅವರಲ್ಲಿದ್ದಂತಿತ್ತು.

ಅದೇ ಸಮಯಕ್ಕೆ ಕೊಳ್ಳೇಗಾಲದ ಶ್ರೀ ಶಂಭುಲಿಂಗೇಶ್ವರ ಕ್ಷೇತ್ರದ ಶ್ರೀ ಪಿ. ಬಸವಣ್ಣ ಅವರು ಸೇಡಿಯಾಪು ಅವರಿಗೆ ಒಂದು ಪತ್ರಬರೆದು ಅದನ್ನೂ ಅದರೊಂದಿಗೆ ಅವರು ರಚಿಸಿದ 'ಶ್ರೀ ಶಿವಕುಮಾರಚರಿತಂ' ಎಂಬ ವಿಶಿಷ್ಟ ಕೃತಿಯನ್ನೂ ಶ್ರೀ ಆರ್. ಗಣೇಶರ ಮೂಲಕ ಕಳುಹಿಸಿಕೊಟ್ಟು ತಲುಪಿಸಿದರು. ಆ ಕೃತಿ ಒಂದು ವಿಶಿಷ್ಟವಾದ ರಚನೆ. ಅದರಲ್ಲಿ ಶ್ರೀ ಪಿ. ಬಸವಣ್ಣ ಅವರು ಅನೇಕ ನೂತನ ಷಟ್ಪದಿಗಳನ್ನು ರಚಿಸಿ ಅವುಗಳಲ್ಲಿ ಶ್ರೀ ಸಿದ್ಧಗಂಗಾಮಠದ ಶ್ರೀ ಶಿವ-ಕುಮಾರಸ್ವಾಮಿಗಳ ಮಹಿಮಾವರ್ಣನ ಮಾಡಿದ್ದರು. ಸುದೀರ್ಘ ಪ್ರಸ್ತಾವನೆ-ಯಲ್ಲದೆ ಕಿರಿಯ ಪಾದವೊಂದರಲ್ಲಿ ಮೂರು ಮೂರು ಮಾತ್ರೆಗಳ ಎರಡು ಗಣಗಳುಳ್ಳ ಷಟ್ಪದಿಯಿಂದ ತೊಡಗಿ ಕಿರಿಯ ಪಾದದಲ್ಲಿ ನಾಲ್ಕು ಮಾತ್ರೆಗಳ ಹತ್ತು ಗಣವುಳ್ಳ, ಎಂದರೆ ೪೦ ಮಾತ್ರೆಗಳ ಷಟ್ಪದಿಯವರೆಗೆ ವಿವಿಧ ಗಣವಿನ್ಯಾಸಗಳ ೧೪೫ ಷಟ್ಪದಿಗಳನ್ನು ಅವರು ಸೃಷ್ಟಿಸಿದ್ದರು.[7] ಪ್ರಸ್ತಾವನೆಯಲ್ಲಿ ಸೇಡಿಯಾಪು ಅವರ 'ಛಂದೋಗತಿ'ಯಿಂದ ಕೆಲವಂಶಗಳನ್ನು ಉದ್ಧರಿಸಿದ್ದರು. ಅದು

---

6. ಕನ್ನಡ ಛಂದಸ್ಸು - ಒಂದು ವಿವರಣೆ ಎಂಬೊಂದು ಸ್ಪಷ್ಟೀಕರಣವನ್ನು ಮಾತ್ರ ಅನಂತರ (1989ರಲ್ಲಿ) ಬರೆಯಿಸಿದ್ದರು. ಅದೂ ಪ್ರಸ್ತುತ ಸಂಪುಟದ 'ಪೂರಕವಿಚಾರವಿಭಾಗ'ದಲ್ಲಿ ಸೇರಿದೆ.

7. ಶ್ರೀ ಬಸವಣ್ಣನವರು ನಿಜಗುಣ ಶಿವಯೋಗಿಗಳು ವಾಸವಾಗಿದ್ದ ಶಂಭುಲಿಂಗನ ಬೆಟ್ಟದಲ್ಲಿ ಸಾತ್ತ್ವಿಕ ಜೀವನವನ್ನು ಮಾಡುವ ವಿರಕ್ತಜೀವಿಗಳು. ಕನ್ನಡದಲ್ಲಿ ಹಲವು ವಾರ್ಧಕಷಟ್ಪದೀ ಕಾವ್ಯಗಳನ್ನೂ ಛಂದಸ್ಸಿನಲ್ಲಿ ಹೊಸ ಹೊಸ ಪ್ರಯೋಗಗಳನ್ನೂ ಮಾಡಿದವರು. ಸಿದ್ಧಗಂಗಾ ಮಠದ ಶ್ರೀ ಶಿವಕುಮಾರಸ್ವಾಮಿಗಳ ಶಿಷ್ಯರು. 'ಕುಮಾರನಿಜಗುಣ' ಎಂಬುದೂ ಇವರದೇ ಹೆಸರು. 'ಛಂದೋವಿಲಾಸವೈಭವಂ' (ಪ್ರ. ಮು. 2002) ಎಂಬ ಗ್ರಂಥದಲ್ಲಿ ಶ್ರೀಯುತರು ನೂರಾರು ನವೀನ ವೃತ್ತಗಳನ್ನು ನಿರ್ಮಾಣ ಮಾಡಿದ್ದು ಆ ವೃತ್ತಗಳಲ್ಲಿ ಹಲವು ರಚನೆಗಳನ್ನು ಮಾಡಿದ್ದಾರೆ. ನಿಜಗುಣ ಶಿವಯೋಗಿಗಳ ಬಗೆಗೆ ವಿವಿಧ ನವೀನವೃತ್ತಗಳಲ್ಲಿ ಕಾವ್ಯವೊಂದನ್ನು ಬರೆಯತೊಡಗಿ ಅದರ ಪೂರ್ಣಗೊಂಡ ಒಂದು ಪ್ರಕರಣವನ್ನು ಈ ಕೃತಿಯಲ್ಲಿ ಸೇರ್ಪಡೆ-ಗೊಳಿಸಿದ್ದಾರೆ. ಈ ಭಾಗದಲ್ಲಿ ಒಮ್ಮೆ ಉಪಯೋಗಿಸಿದ ವೃತ್ತವನ್ನು ಮತ್ತೊಮ್ಮೆ ಬಳಸಿಲ್ಲ. ಮೇಲೆ ಹೇಳಿದ 'ಶ್ರೀ ಶಿವಕುಮಾರಚರಿತಂ' ಕೃತಿಯು ಪೂರ್ತಿಯಾಗಿ ಇದರಲ್ಲಿ ಸೇರಿದೆ.

ಮುಖ್ಯವಾಗಿ, ಷಟ್ಪದಿಗಳು ಸತಾಲಬಂಧಗಳೇ ಆಗಿದ್ದರೂ ಅವುಗಳನ್ನು ವಿತಾಲ ಬಂಧಗಳಂತೆ ಹಾಡುವುದು ಹೆಚ್ಚು ರೂಢಿಯಲ್ಲಿದೆಯೆಂಬುದನ್ನು ಸೇಡಿಯಾಪು ಅವರು ವಿವರಿಸಿದ ಭಾಗವಾಗಿತ್ತು.[8] ಪ್ರಸ್ತಾವನೆಯ ಈ ಅಂಶಗಳನ್ನೆಲ್ಲ ಓದಿಹೇಳಿ ಬಸವಣ್ಣನವರ ಕೆಲವು ಷಟ್ಪದೀರಚನೆಗಳನ್ನೂ ಓದಿ ಹೇಳಿದೆ. ಅವನ್ನೆಲ್ಲ ಕೇಳಿದ ಮೇಲೆ ಸೇಡಿಯಾಪು ಅವರು "ಸಾಕು. ಬಸವಣ್ಣನವರ ಅಭಿಪ್ರಾಯಗಳು ಏನೆಂದು ತಿಳಿಯಿತು" ಎಂದರು. ಅನಂತರ ಸಾವಕಾಶವಾಗಿ "ಪದ್ಯದಲ್ಲಿ ಮುಖ್ಯವಾಗಿರಬೇಕಾದುದು ಶ್ರವ್ಯತ್ವ. ಅದಿಲ್ಲದಲ್ಲಿ ಅದು ಪದ್ಯರೂಪದಲ್ಲಿದ್ದರೂ ಆಕರ್ಷಕವಾಗಲಾರದು. ಲೆಕ್ಕಾಚಾರದಿಂದ ಪದ್ಯವಾಗುವುದಿಲ್ಲ. ಬರಿಯ ಲೆಕ್ಕಾ-ಚಾರದಿಂದ ನೂರಾರು ಪದ್ಯರೂಪದ ರಚನೆಗಳನ್ನು ಮಾಡಬಹುದು. ಆದರೆ ಅವುಗಳಲ್ಲಿ ಶ್ರವ್ಯತ್ವವಿಲ್ಲದಿದ್ದರೆ ಅವುಗಳನ್ನು ನಿಜವಾದ ಪದ್ಯಗಳೆಂದು ಹೇಳುವುದು ಹೇಗೆ? ಛಂದಸ್ಸೆಂದರೆ ಬರಿಯ ಅಕ್ಷರಗಳ ಅಥವಾ ಮಾತ್ರೆಗಳ ಅಥವಾ ಗಣಗಳ ಲೆಕ್ಕಾಚಾರವಲ್ಲ. ಸತಾಲವಿರಲಿ, ವಿತಾಲವಿರಲಿ ಗತಿಸುಭಗತೆಯಿಲ್ಲದಲ್ಲಿ ಆ ಪದ್ಯ ಬಂಧವು ಉಪಾದೇಯವಾಗದು. ಅಕ್ಷರವೃತ್ತಗಳಲ್ಲಿ ೨೬ ಛಂದಸ್ಸುಗಳೊಳಗೆ ಸಾವಿರಾರು ವೃತ್ತಗಳಾಗುತ್ತವೆ. ಆದರೆ ಬಳಕೆಗೆ ಬಂದ ವೃತ್ತಗಳು ಕೆಲವೇ ಕೆಲವು. ಛಂದಃಶಾಸ್ತ್ರಜ್ಞರು ಲಕ್ಷಣನಿರೂಪಣೆ ಮಾಡಿದ ಪದ್ಯಗಳು ಹಲವಿವೆ. ಆ ಪದ್ಯಗಳೆಲ್ಲವೂ ಬಳಕೆಯಲ್ಲಿಲ್ಲ. ಹಾಗೆಯೇ ನೂರಾರಲ್ಲ, ಸಾವಿರಾರು ಷಟ್ಪದಿ-ಗಳನ್ನು ಮಾಡಬಹುದು. ೪೦ ಮಾತ್ರೆಗಳೇ ಏಕೆ ನೂರು ಮಾತ್ರೆಯ ಪಾದಗಳುಳ್ಳ ಷಟ್ಪದಿಗಳನ್ನೂ ರಚಿಸಬಹುದಲ್ಲವೆ? ಹೀಗೆ ಮಾಡಿದ್ದರಿಂದ ಛಂದಃಶಾಸ್ತ್ರಕ್ಕೆ ಲಾಭವೇನೂ ಆಗದು. ಬಸವಣ್ಣನವರೇನೋ ಲೆಕ್ಕಾಚಾರಮಾಡಿ ಹೊಸಹೊಸ ಷಟ್ಪದಿಗಳನ್ನು ಮಾಡಿದ್ದಾರೆ, ಆದರೆ ಅವರು ಇಂಥದೊಂದು ಸಾಹಸದ ಪ್ರಯೋಗ ಮಾಡಿದ್ದಾರೆಂದು ದಾಖಲಾಗಬಹುದೇ ಹೊರತು ಆ ಷಟ್ಪದಿಗಳು ಬಳಕೆಗೆ ಬರಲಾರವು" ಎಂಬ ಮಾತುಗಳನ್ನು ಹೇಳಿದರು.[9] ಈ ಬಗೆಗೆ ಬಸವಣ್ಣನವರಿಗೆ ಅವರು ಯಾವುದೇ ಪತ್ರವನ್ನು ಬರೆಯಿಸಿದಂತೆ ನನಗೆ

---

8. ಇದು ಛಂದೋಗತಿಯ ಆರನೆಯ ಪರಿಚ್ಛೇದದಲ್ಲಿರುವ 48ನೆಯ ಟಿಪ್ಪಣಿಯಲ್ಲಿದೆ. ಆ ಟಿಪ್ಪಣಿಯಲ್ಲಿ ತ್ರಿಪದಿ, ತ್ರಿಮೂರ್ತಿಗಣಬಂಧವಾದ ಪುರಾತನ ಷಟ್ಪದಿ, ವಿತಾಲಬಂಧಗಳನ್ನು ಸತಾಲವಾಗಿಸಿ ಹಾಡುವ ವಿಚಾರ – ಇತ್ಯಾದಿಗಳೂ ಇವೆ.

9. ಅಂದಿನ ಮಾತುಗಳ ದಾಖಲೆ ಇದಲ್ಲ. ಆದರೂ ಅಂದು ಅವರು ಹೇಳಿದ ಒಟ್ಟು ಅಭಿಪ್ರಾಯವಿದು. ನೆನಪಿನಿಂದ ಇಲ್ಲಿ ನಿರೂಪಣೆ ಮಾಡಲಾಗಿದೆ. ಬಸವಣ್ಣನವರ 'ಛಂದೋ-ವಿಲಾಸವೈಭವ'ವನ್ನು ಸೇಡಿಯಾಪು ಅವರ ನೋಡಿಲ್ಲ. ಅದು ಅವರ ಮರಣಾನಂತರ ಬಂದ ಕೃತಿ. ಈ ಕೃತಿಯಲ್ಲಿ ಬಸವಣ್ಣನವರ ಸಾಧನೆಗಳನ್ನು ಪ್ರಶಂಸಿಸಿ ಕನ್ನಡದ ವಿದ್ವಾಂಸರು ಬರೆದ ಅಭಿಪ್ರಾಯವಾಕ್ಯಗಳನ್ನೂ ಮುದ್ರಿಸಲಾಗಿದೆ. ಶ್ರೀಯುತರ ಬೌದ್ಧಿಕಶ್ರಮ ಮತ್ತು ಸಾಧನೆ ಅಗಾಧವೇ ಸರಿ. ಆದರೂ ಅವರ ಮೊದಲನೆಯ ಪುಸ್ತಕದ ಬಗೆಗೆ ಸೇಡಿಯಾಪು ಅವರು ಹೇಳಿದ ಮಾತುಗಳು ಈ ಕೃತಿಗೂ ಅನ್ವಯವಾಗುತ್ತವೆ.

ನೆನಪಿಲ್ಲ. ಅನಂತರ ಆ ಪುಸ್ತಕವನ್ನು ನನ್ನ ಕೈಗಿತ್ತು "ಇದು ನಿನ್ನ ಸಂಗ್ರಹ-ದಲ್ಲಿರಲಿ. ಈ ಪುಸ್ತಕದಿಂದ ನನಗೆ ವಿಶೇಷವಾಗಿ ಏನೂ ಪ್ರಯೋಜನವಿಲ್ಲ." ಎಂದು ಹೇಳಿದರು. ಕೇವಲ ಲೆಕ್ಕಾಚಾರಗಳಿಂದ ಏನೇನು ವಿಚಿತ್ರವಾದ ನಿರ್ಣಯ-ಗಳಿಗೆ ಸಂಶೋಧಕರು ಬರುತ್ತಾರೆಂಬುದಕ್ಕೆ ಉದಾಹರಣೆಯಾಗಿ ಸಂಶೋಧಕ-ರೊಬ್ಬರು ಖ್ಯಾತಕರ್ಣಾಟಕ ವೃತ್ತಗಳಲ್ಲಿ ತ್ರಿಮೂರ್ತಿಗಣಲಕ್ಷಣಗಳನ್ನು ಹುಡುಕಿ ಹಿಡಿದ ಉದಾಹರಣೆಯನ್ನು ನೀಡಿ ಇರುವುದಕ್ಕಿಂತ ಭಿನ್ನವಾದುದನ್ನೋ ಹೊಸತನ್ನೋ ಹೇಳುವುದೆಂಬುದೇ ಸಂಶೋಧನೆಯಲ್ಲ, ಯಾವುದೇ ವಿಷಯದಲ್ಲಿ ಗಂಭೀರಚಿಂತನೆ ನಡೆಸಿದಾಗ ಹೊಸ ವಿಷಯ ಬಂದಲ್ಲಿ ಸಂತೋಷ. ಸತ್ಯವನ್ನು ಹುಡುಕುವುದೇ ನಿಜವಾದ ಸಂಶೋಧನೆಯೆಂದು ವಿವರಿಸಿದರು.[10]

1991ರಲ್ಲಿ ಸೇಡಿಯಾಪು ಅವರ ತೊಂಬತ್ತನೆಯ ವರ್ಷದ ಅಭಿವಂದನ ಕಾರ್ಯಕ್ರಮ ನಡೆಯಿತು. ಆದಿನ ಪೂರ್ವಾಹ್ಣ ಅವರ ಸಾಹಿತ್ಯದ ಬಗೆಗಿನ ಒಂದು ವಿಚಾರಗೋಷ್ಠಿಯೂ ನಡೆಯಿತು. ಸೇಡಿಯಾಪು ಅವರ ವ್ಯಾಕರಣ ಮತ್ತು ಛಂದೋವಿಚಾರಗಳ ಬಗೆಗೆ ಶ್ರೀ ಆರ್. ಗಣೇಶರು ಉಪನ್ಯಾಸ ನೀಡಿದರು.[11] ಅಪರಾಹ್ಣದ ಸಭಾಕಾರ್ಯಕ್ರಮದಲ್ಲಿ ಸೇಡಿಯಾಪು ಅಭಿವಂದನ ಮತ್ತು ಮೂಡಬಿದರೆಯ ವರ್ಧಮಾನ ಪ್ರಶಸ್ತಿಪೀಠದವರು ಕೊಡಮಾಡುವ

---

10. ಈ ವಿಷಯವನ್ನು ಅವರು 'ಕನ್ನಡ ಛಂದಸ್ಸು' ನಿಬಂಧಕ್ಕೆ ಅನುಬಂಧವಾಗಿರುವ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ಲೇಖನದ ಟಿಪ್ಪಣಿಯೊಂದರಲ್ಲಿ ಹೇಳಿದ್ದಾರೆ. ಅದೇ ಟಿಪ್ಪಣಿಗೆ ಪೂರ್ವಭಾವಿಯಾಗಿ ಅವರು ಹೇಳಿದ ಒಂದು ಮಾತು ಇಲ್ಲಿ ಪ್ರಸ್ತುತ – "ಧಾಟಿ ಹಿಡಿಯಲಾರದೆ, ಗಣಗಣನೆ ಮಾಡುತ್ತಾ ಪದ್ಯ ಬರೆಯುವವರು ಇಲ್ಲವೆಂದು ನಾನು ಹೇಳಲಾರೆ, ಇದ್ದಾರೆ. ಆದರೆ ಅವರನ್ನು ಕವಿಗಳೆನ್ನುವುದಕ್ಕಿಂತ ಪದ್ಯಶಿಲ್ಪಿಗಳೆಂದು ಕರೆಯುವುದು ಸೊಗಸು."

11. ಈ ಕಾರ್ಯಕ್ರಮವು 9–6–1991ರ ಆದಿತ್ಯವಾರದ ದಿನ ಉಡುಪಿ ಎಂ. ಜಿ. ಎಂ. ಕಾಲೇಜಿನ ಆವರಣದಲ್ಲಿ ನಡೆದಿದ್ದು ಡಾ. ಶ್ರೀನಿವಾಸ ಹಾವನೂರರ ಅಧ್ಯಕ್ಷತೆಯಲ್ಲಿ ಬೆಳಗಿನ ಉದ್ಘಾಟನ ಕಾರ್ಯಕ್ರಮವನ್ನು ಡಾ. ಶಿವರಾಮಕಾರಂತರು ನೆರವೇರಿಸಿದರು. ಪದ್ಮಶ್ರೀ ಡಾ. ಬಿ. ಪಿ. ರಾಧಾಕೃಷ್ಣ ಅವರು ಸೇಡಿಯಾಪು ಅವರ 'ತಥ್ಯದರ್ಶನ' ಕೃತಿ ಬಿಡುಗಡೆ ಮಾಡಿದರು. ಸಾಹಿತ್ಯಗೋಷ್ಠಿಯ ಅಧ್ಯಕ್ಷತೆಯನ್ನು ಡಾ. ಕೀರ್ತಿನಾಥ ಕುರ್ತಕೋಟಿಯವರು ವಹಿಸಿದ್ದು ಸೇಡಿಯಾಪು ಅವರ ದೇಶೀಯ ಚಿಂತನಪದ್ಧತಿಯನ್ನು ಮತ್ತು ಶಾಸ್ತ್ರವಿಚಾರಗಳಲ್ಲಿರುವ fidelityಯನ್ನು (ಇದು ಆದಿನ ಕುರ್ತಕೋಟಿಯವರೇ ಬಳಸಿದ ಶಬ್ದ. ಇದಕ್ಕೆ ನಿಷ್ಠೆ, ಶ್ರದ್ಧೆ ಎಂಬರ್ಥ. ಉದಾ: fidelity to principles - ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಕನ್ನಡ ನಿಘಂಟು.) ವಿಶೇಷವಾಗಿ ಉಲ್ಲೇಖಿಸಿದರು. ವ್ಯಾಕರಣ ಛಂದಸ್ಸು ವಿಷಯಗಳ ಬಗೆಗೆ ಮೇಲೆ ಹೇಳಿದಂತೆ ಶ್ರೀ ಆರ್. ಗಣೇಶರು, ಕಥೆ–ಕಾವ್ಯಕೃತಿಗಳ ಬಗೆಗೆ ಪ್ರೊ. ಅಮೃತ ಸೋಮೇಶ್ವರರು ಮತ್ತು ಸಂಶೋಧನ–ಗದ್ಯಪ್ರಬಂಧಗಳ ಬಗೆಗೆ ಪ್ರೊ. ಅ. ರಾ. ಮಿತ್ರರು ಉಪನ್ಯಾಸ ನೀಡಿದರು.

ವರ್ಧಮಾನ ಪ್ರಶಸ್ತಿಪುರಸ್ಕಾರ ಕಾರ್ಯಕ್ರಮವೂ ನಡೆಯಿತು.[12] ವರ್ಧಮಾನ ಸಾಹಿತ್ಯಪೀಠವು ಪ್ರತಿವರ್ಷ ಒಬ್ಬರು ಹಿರಿಯರಿಗೆ ಮತ್ತು ಒಬ್ಬರು ಪ್ರವರ್ಧಮಾನ ಬರಹಗಾರರಿಗೆ ಪ್ರಶಸ್ತಿ ನೀಡುತ್ತ ಬಂದಿದ್ದು ಆ ವರ್ಷ ಹಿರಿಯ ಲೇಖಕರಿಗೆ ನೀಡುವ ಪ್ರಶಸ್ತಿಯನ್ನು 'ಛಂದೋಗತಿ' ಕೃತಿಯನ್ನು ಹೆಸರಿಸಿ ಸೇಡಿಯಾಪು ಅವರಿಗೆ ನೀಡುವ ನಿರ್ಣಯವನ್ನು ಮಾಡಿತ್ತು. ಸೇಡಿಯಾಪು ಅವರ ಹೆಚ್ಚಿನ ಎಲ್ಲ ಕೃತಿಗಳಿಗೆ ಒಂದಲ್ಲ ಒಂದು ಸಾಹಿತ್ಯ ಬಹುಮಾನ ಬಂದಿದ್ದು ಛಂದೋ-ಗ್ರಂಥಗಳಲ್ಲಿ ಈ ಕೃತಿ ಮಾತ್ರ ಇದೊಂದು ಬಹುಮಾನಕ್ಕೆ ಪಾತ್ರವಾದುದಾಗಿದೆ.

1995ರಲ್ಲಿ ಕಿನ್ನಿಗೋಳಿಯ ನಿವೃತ್ತ ಶಿಕ್ಷಕರೂ ಯಕ್ಷಗಾನ ಛಂದಸ್ಸಿನಲ್ಲಿ ವಿಶೇಷಾಧ್ಯಾಯನ ಮಾಡಿದವರೂ ಆದ ಶ್ರೀ ಎನ್. ನಾರಾಯಣ ಶೆಟ್ಟಿಯವರು[13] ಸೇಡಿಯಾಪು ಅವರಿಗೆ ಒಂದು ಸುದೀರ್ಘ ಪತ್ರ ಬರೆದು ಅದರಲ್ಲಿ ಕೆಲವು ಛಂದೋವಿಚಾರಗಳ ವಿಮರ್ಶೆ ಇತ್ಯಾದಿಗಳನ್ನು ಮಾಡಿದ್ದಲ್ಲದೆ ಅದರಲ್ಲಿ ಛಂದಸ್ಸಿಗೆ ಸಂಬಂಧಿಸಿದ ಕೆಲವು ಪ್ರಶ್ನೆಗಳನ್ನೂ ಮುಂದಿಟ್ಟಿದ್ದರು. ಆದರೆ ಸೇಡಿಯಾಪು ಅವರು ದೈಹಿಕವಾಗಿ ಆಗ ತುಂಬ ದುರ್ಬಲರಾಗುತ್ತಾ ಸಾಗಿದ್ದರಿಂದ ಡಾ. ನಾರಾಯಣ ಶೆಟ್ಟಿಯವರಿಗೆ ಒಂದು ಪತ್ರವನ್ನು ನನ್ನಲ್ಲೇ ಬರೆಯಿಸಿ ವಯಸ್ಸಿನ ಕಾರಣದಿಂದ ದೈಹಿಕ ದೌರ್ಬಲ್ಯವುಂಟಾಗಿದ್ದು ಆಗ ಆ ಪ್ರಶ್ನೆಗಳ ಬಗೆಗೆ ಹೆಚ್ಚು ಚಿಂತಿಸುವ ಮತ್ತು ವಿಮರ್ಶೆ ಮಾಡಿ ಉತ್ತರಿಸುವ ಸಾಮರ್ಥ್ಯವಿಲ್ಲವಾಗಿದ್ದುದ-ರಿಂದ ಆ ಬಗೆಗೆ ಹೆಚ್ಚು ಪತ್ರವ್ಯವಹಾರ ಅವಶ್ಯವಿಲ್ಲವೆಂಬ ಹಾಗೆ ತಿಳಿಸಿದರು.[14]

---

12. ಅಭಿವಂದನ ಕಾರ್ಯಕ್ರಮಕ್ಕೆ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು ಅಧ್ಯಕ್ಷರಾಗಿದ್ದರು. ಶ್ರೀ ಕಯ್ಯಾರ ಕಿಞ್ಞಣ್ಣ ರೈ, ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಮತ್ತು ಪ್ರೊ. ಎಂ. ರಾಜಗೋಪಾಲಾಚಾರ್ಯರು ಅಭಿವಂದನ ಭಾಷಣಗಳನ್ನು ಮಾಡಿದರು.

13. ಇವರು 'ಯಕ್ಷಗಾನ ಛಂದೋಂಬುಧಿ' ಎಂಬ ಯಕ್ಷಗಾನ ಛಂದೋಲಕ್ಷಣ ವಿವೇಚನೆಯ ಗ್ರಂಥವನ್ನು ಬರೆದಿದ್ದು ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಅವರಿಗೆ --- ರಲ್ಲಿ ಡಿ. ಲಿಟ್ ಪ್ರಶಸ್ತಿಯನ್ನು ನೀಡಿರುತ್ತದೆ. 'ಯಕ್ಷಗಾನ ಛಂದೋಂಬುಧಿ'ಯ ಕೃತಿಕಾರರಾದ ಇವರನ್ನು 'ಯಕ್ಷಗಾನ ನಾಗವರ್ಮ' ಎಂದು ಗುರುತಿಸಿದ್ದುಂಟು. (ಉದಾ: ಯಕ್ಷಗಾನ ಛಂದೋಂ-ಬುಧಿಯ ಅಭಿನವ ನಾಗವರ್ಮ - ಎನ್. ನಾರಾಯಣ ಶೆಟ್ಟಿ' ಎಂಬ ಲೇಖನ. ಲೇಖಕರು ಕಬ್ಬಿನಾಲೆ ವಸಂತ ಭಾರದ್ವಾಜ - ಹೊಸದಿಗಂತ ದಿನಪತ್ರಿಕೆ 24-2-1995, ಡಾ. ಕಬ್ಬಿನಾಲೆ ವಸಂತ ಭಾರದ್ವಾಜರು 'ಯಕ್ಷಗಾನ ಛಂದಸ್ಸು' ಎಂಬ ವಿಷಯದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದಿಂದ ಪಿ. ಎಚ್. ಡಿ. ಪದವಿಯನ್ನು ಅನಂತರ ಗಳಿಸಿದವರು, 'ಯಕ್ಷಗಾನ ಛಂದೋಂಬುಧಿ' ಇದೀಗ 2005ರಲ್ಲಿ ಪ್ರಕಟಗೊಂಡಿದೆ.

14. 27-4-1995ರಲ್ಲಿ ಡಾ. ನಾರಾಯಣ ಶೆಟ್ಟಿಯವರು ಬರೆದ ಪತ್ರದಲ್ಲಿ ಕೆಲವು ಮುಖ್ಯ ಪ್ರಶ್ನೆಗಳನ್ನೆತ್ತಿದ್ದರು. ೧) ತ್ರಿಮೂರ್ತಿಗಣಬದ್ಧ ಷಟ್ಪದಿಯೆಂದರೆ ವಿಷ್ಣುಗಣಾತ್ಮಕ ಷಟ್ಪದಿಯೆಂದು ಸಿದ್ಧವಾಗಿದೆಯೆ? ೨) ಯಕ್ಷಗಾನದಲ್ಲಿ ಬ್ರಹ್ಮಗಣಗಳಿಂದಲೇ ಘಟಿತವಾದ ಮತ್ತು ರುದ್ರಗಣಗಳಿಂದಲೇ ಘಟಿತವಾದ ಷಟ್ಪದಿಗಳಿವೆ. ಇದನ್ನು ಯಾಕೆ ಷಟ್ಪದಿಗಳೊಳಗೆ ಲೆಕ್ಕಿಸಿಲ್ಲ? ೩) ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಉದ್ದಂಡ ಷಟ್ಪದಿಯನ್ನು ವಿಶ್ಲೇಷಿಸಿದುದು ಸರಿಯೆ?

ಆ ಮೇಲೆ ಛಂದಸ್ಸಿಗೆ ಸಂಬಂಧಿಸಿದಂತೆ ಮತ್ತಾರೊಡನೆಯೂ ಅವರಿಗೆ ಪತ್ರ-ವ್ಯವಹಾರ ನಡೆದಂತಿಲ್ಲ. ('ಛಂದೋಗತಿ'ಯ ಬರವಣಿಗೆಯ ಸಂದರ್ಭದಲ್ಲಿ

---

೪) ರುದ್ರಗಣಘಟಿತ ಷಟ್ಪದಿಯೇ ಮಾತ್ರಾಗತಿಯಲ್ಲಿ ಭಾಮಿನಿಷಟ್ಪದಿಯೂ ಆಗಬಲ್ಲುದು. ಆಗ ರುದ್ರಗಣದ ಲಯ ಭಾಮಿನಿಗೆ ಜನ್ಮಕೊಟ್ಟಿಲ್ಲವೆನ್ನಬಹುದೆ? ೫) ರುದ್ರಗಣಬದ್ಧ ಷಟ್ಪದಿಯಲ್ಲಿ ಎಲ್ಲ ಲಘುಗಳ ಗಣ ಬಂದಾಗ ಅದು ಕುಸುಮಷಟ್ಪದಿಯಾಗಬಲ್ಲುದು. ಹೀಗಿರುವಾಗ ಛಂದೋಗತಿಯ 32ನೆಯ ಟಿಪ್ಪಣಿಯಲ್ಲಿ ವಾರ್ಧಕಷಟ್ಪದಿಯ ಉಗಮದ ಬಗೆಗೆ ಮಾಡಲಾದ ವಿಶ್ಲೇಷಣೆ ಸಾಧುವೆ? ಇವು ಅವರು ಕೇಳಿದ ಪ್ರಶ್ನೆಗಳು. ಈ ಪ್ರಶ್ನೆಗಳ ಜೊತೆಗೆ, ಎಂಟು ಮಾತ್ರೆಯ ಆವರ್ತದ ಧಾಟಿಯೂ ಆರು ಮಾತ್ರೆಯ ಆವರ್ತದ ಧಾಟಿಯೂ ಬಿ. ಎಂ. ಶ್ರೀಯವರ 'ಇಂಗ್ಲಿಷ್ ಗೀತೆಗಳು' ಮತ್ತು 'ಅಶ್ವತ್ಥಾಮನ್' ಕೃತಿಗಳಲ್ಲಿ ಪುನರ್ಜನ್ಮ ಪಡೆದ ಮತ್ತು ಹೊಚ್ಚಹೊಸದಾಗಿ ಆವಿರ್ಭವಿಸಿದ ಧಾಟಿಗಳೆಂಬ ತೀ. ನಂ. ಶ್ರೀಯವರ ವಾದವನ್ನು ಸೇಡಿಯಾಪು ಅವರು ಪುರಸ್ಕರಿಸದೆ ಆ ಧಾಟಿಗಳು ಕನ್ನಡದಲ್ಲಿ ಧಾರಾಳವಾಗಿದ್ದು ದಾಸಕವಿಗಳೂ ಯಕ್ಷಗಾನ ಕವಿಗಳೂ ರಚಿಸಿದ ಪದಗಳಲ್ಲಿ, ಹಾಡುಗಳಲ್ಲಿ ಈ ಧಾಟಿಗಳನ್ನು ಧಾರಾಳ ಕಾಣಬಹುದೆಂದು ನಿರೂಪಿಸಿರುವುದನ್ನು ನಾರಾಯಣ ಶೆಟ್ಟಿಯವರು ಅನುಮೋದಿಸಿ ಬರೆದಿದ್ದರು. ಮಾತ್ರವಲ್ಲ, ಸೇಡಿಯಾಪು ಅವರು ಛಂದೋಗತಿಯ ಆರನೆಯ ಪರಿಚ್ಛೇದದಲ್ಲಿ ಆರು ಮಾತ್ರೆಗಳ ಗತಿಯ ಪದ್ಯವೊಂದನ್ನು ಪಾರ್ತಿಸುಬ್ಬನ 'ಶ್ರೀಕೃಷ್ಣ ಚರಿತೆ' ಪ್ರಸಂಗದಿಂದ ಉದ್ಧರಿಸಿದ್ದನ್ನು ಎತ್ತಿಹೇಳಿದ್ದರು. ಸೇಡಿಯಾಪು ಅವರು ಈ ಆರು ಮಾತ್ರೆಗಳ ಆವರ್ತದ ಗತಿಯಲ್ಲಿ ತಮ್ಮ 'ಚಂದ್ರಖಂಡ'ದಲ್ಲಿ 'ಓವೋ ಮುದ್ದಣ್ಣಾ' ಎಂಬ ಕವಿತೆಯನ್ನೂ ಬರೆದಿದ್ದರು. ಅದನ್ನೂ ಶ್ರೀ ಕೃಷ್ಣ ಚರಿತೆಯ ಪದ್ಯವೊಂದನ್ನೂ ಉದ್ಧರಿಸಿ ಯಕ್ಷಗಾನ ಕೃತಿಗಳಲ್ಲಿ ಈ ಬಂಧ ಅಲ್ಲಲ್ಲಿದೆಯೆಂದು ಹೇಳಿ ಇದು ಹೆಸರಿಲ್ಲದೊಂದು ಬಂಧವೆಂದೂ ಸೇಡಿಯಾಪು ಅವರು ಬರೆದಿದ್ದರು. ನಾರಾಯಣ ಶೆಟ್ಟಿಯವರು ಉದ್ಧೃತವಾದ ಪದ್ಯಬಂಧವನ್ನು ಹೆಸರಿಲ್ಲದೊಂದು ಬಂಧವೆಂದು ಆ ಸಂದರ್ಭದಲ್ಲಿ ಬರೆದುದನ್ನು ಆಕ್ಷೇಪಿಸಿ "ಇದು ನೀಲಾಂಬರಿ ರೂಪಕ" ಎಂಬ ಬಂಧವಲ್ಲವೆ?" ಎಂದು ಆ ಪತ್ರದಲ್ಲಿ ಪ್ರಶ್ನಿಸಿದ್ದರು. ಸೇಡಿಯಾಪು ಅವರಿಗೆ ಕನ್ನಡಗಣಗಳ ಸ್ವಭಾವವನ್ನು ಕಂಡುಹಿಡಿಯುವಲ್ಲಿ ಯಕ್ಷಗಾನದ ಹಾಡುಗಳ ಛಂದಸ್ಸಿನ ಅಧ್ಯಯನವೂ ಒಂದು ಮುಖ್ಯ ಆಧಾರವಾಗಿತ್ತು. ಆದರೂ ಅವರು ಬೇರೆಡೆಗಳಲ್ಲಿ ಯಕ್ಷಗಾನ ಪ್ರಸಂಗಗಳ 'ಪದ'ಗಳನ್ನು ಉದಾಹರಿಸುವಾಗ ಛಂದಸ್ಸಿನ ಹೆಸರನ್ನು ಹೇಳಿದಂತಿಲ್ಲ. ರಾಗತಾಳಗಳ ಹೆಸರನ್ನೇ ಒಟ್ಟುಮಾಡಿ ಛಂದಸ್ಸಿನ ಹೆಸರಿನಂತೆ ಉಪಯೋಗಿಸುವ ರೂಢಿ ಇತ್ತೀಚೆಗೆ ನೆಲೆಗೊಂಡಿದೆ. ಸೇಡಿಯಾಪು ಅವರು ಅದನ್ನು ತಿಳಿಯದವರಲ್ಲ. ನಾರಾಯಣ ಶೆಟ್ಟಿಯವರು ಆ ವಿಧಾನವನ್ನು ಅನುಸರಿಸುವವರು. ಮೊದಲಿಗೆ ಯಕ್ಷಗಾನ ಛಂದಸ್ಸಿನ ಬಗೆಗೆ ಕೆಲಸಮಾಡಿ ಕೃತಿಗಳನ್ನೂ ಪ್ರಕಟಿಸಿದ ಶ್ರೀ ಕ. ಪು. ಸೀತಾರಾಮ ಕೆದಿಲ್ಲಾಯರು ಸುಮಾರಾಗಿ ಅದೇ ವಿಧಾನವನ್ನು ಅನುಸರಿಸಿದ್ದಾರೆ. ಡಾ. ಕಬ್ಬಿನಾಲೆ ವಸಂತ ಭಾರದ್ವಾಜರು 'ಯಕ್ಷಗಾನ ಛಂದಸ್ಸು – ಒಂದು ಅಧ್ಯಯನ' ಕೃತಿಯಲ್ಲಿ ಅದೇ ವಿಧಾನವನ್ನನುಸರಿಸಿದ್ದಾರೆ. ಪ್ರಾಯಶಃ ಸೇಡಿಯಾಪು ಅವರಿಗೆ ಈ ರೀತಿ ರಾಗತಾಳಗಳ ಹೆಸರನ್ನು ಛಂದೋಬಂಧದ ಹೆಸರಾಗಿ ಉಪಯೋಗಿಸುವುದರಲ್ಲಿ ಪೂರ್ಣಸಮ್ಮತಿಯಿರಲಿಲ್ಲ. (ಆದರೆ ಆ ಕುರಿತು ಅವರು ಸಾಂದರ್ಭಿಕವಾಗಿಯಾದರೂ ಏನನ್ನೂ ಹೇಳಿದ ನೆನಪು ನನಗಿಲ್ಲ.) ಆದುದರಿಂದಲೇ ಯಕ್ಷಗಾನದ ಬಂಧಗಳನ್ನು ಹೆಸರಿಲ್ಲದ ಬಂಧಗಳೆಂದು ಅವರು ಪರಿಗಣಿಸಿದರು– ಎಂದು ತಿಳಿಯಬೇಕಾಗುತ್ತದೆ.

ಅವರಿಗೂ ತೆಕ್ಕುಂಜ ಗೋಪಾಲಕೃಷ್ಣ ಭಟ್ಟರಿಗೂ ಛಂದೋವಿಷಯಕವಾಗಿ ತುಂಬ ಪತ್ರವ್ಯವಹಾರವಿತ್ತು. ಆದರೆ ಆ ಯಾವ ಪತ್ರಗಳೂ ಉಪಲಬ್ಧವಿಲ್ಲ.)

'ಛಂದೋಗತಿ' ಗ್ರಂಥವು ಮೈಸೂರಿನ ಗೀತಾಬುಕ್ ಹೌಸ್ ಅವರಿಂದ ಪ್ರಕಾಶಿತವಾಯಿತು.[15] ಈ ಕೃತಿಯ ಪ್ರಕಾಶನದಲ್ಲಿ ಸೇಡಿಯಾಪು ಅವರಿಗೆ ಸಹಾಯ ಮಾಡಿದವರು ಪ್ರೊ. ಕು. ಶಿ. ಹರಿದಾಸ ಭಟ್ಟರು. ಮೈಸೂರಿನ ಗೀತಾ ಬುಕ್ ಹೌಸಿನ ಎಂ. ಸತ್ಯನಾರಾಯಣರಾವ್ ಅವರು ಪ್ರೊ. ಕು. ಶಿ. ಯವರ ಮಿತ್ರ-ರಾಗಿದ್ದರು. ಆದುದರಿಂದ ಅವರನ್ನು ಸಂಪರ್ಕಿಸಿ ಪ್ರಕಾಶನದ ವ್ಯವಸ್ಥೆಯನ್ನು ಕು. ಶಿ. ಯವರು ಮಾಡಿದರು. ಮುದ್ರಣಪ್ರತಿಯನ್ನು ಸಿದ್ಧಪಡಿಸಿದವರು ಸೇಡಿಯಾಪು ಅವರಿಗೆ ಆಪ್ತರಾದ ಅ. ಬಾ. ಶೆಟ್ಟಿ ಪೊಳಲಿ ಮತ್ತು ಯು. ಮಹೇಶ್ವರಿಯವರು. ಛಂದೋಗತಿಯು ಬಹಳ ಸುಲಭದಲ್ಲಿ ಅರ್ಥವಾಗುವ ಕೃತಿಯಲ್ಲವೆಂಬ ಕಾರಣ-ದಿಂದ ಅದರ ಸಾರಾಂಶರೂಪವಾಗಿ 'ಸೇಡಿಯಾಪು ಕೃಷ್ಣ ಭಟ್ಟರ ಛಂದೋಗತಿ' ಎಂಬ ಕಿರು ಹೊತ್ತಗೆಯೊಂದನ್ನು ಪ್ರಸಿದ್ಧ ವಿದ್ವಾಂಸರಾಗಿದ್ದ ಪ್ರೊ. ಎಂ. ರಾಜ-ಗೋಪಾಲಾಚಾರ್ಯರಿಂದ ಪ್ರೊ. ಕು. ಶಿ. ಯವರು ಬರೆಯಿಸಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದಿಂದ ಪ್ರಕಾಶಪಡಿಸಿದರು. (1985) ೧೩ ಪುಟಗಳ ಈ ಕೃತಿಯಲ್ಲಿ 'ಛಂದೋಗತಿ'ಯಲ್ಲಿ ಸೇಡಿಯಾಪು ಅವರು ಪ್ರಸ್ತಾವಿಸಿದ, ವಿವರಿಸಿದ ಮುಖ್ಯ ವಿಷಯಗಳನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಹೊತ್ತಗೆಯ ಕೊನೆಯಲ್ಲಿ ಪ್ರೊ. ಎಂ. ರಾಜಗೋಪಾಲಾಚಾರ್ಯರು ಹೇಳಿದ ಮಾತುಗಳು ಹೀಗಿವೆ: ".... ಹಲವಾರು ವಿಚಾರಗಳನ್ನು ಪೂಜ್ಯ ಸೇಡಿಯಾಪು ಅವರು ತಮ್ಮ ಈ ನಿಬಂಧದಲ್ಲಿ (ಛಂದೋಗತಿ) ವಿವೇಚಿಸಿದ್ದಾರೆ. ಒಂದು ವಿಷಯವನ್ನು ಪ್ರಸ್ತಾವ ಮಾಡಿ, ಅದಕ್ಕೆ ಸಾಕಷ್ಟು ಪೂರ್ವಪಕ್ಷಗಳನ್ನು ತಾವೇ ಹಾಕಿಕೊಂಡು ಅವನ್ನೆಲ್ಲಾ ಹಿಂಜಿ ಹಿಂಜಿ ಬಿಡಿಸಿ ಉತ್ತರಿಸಿ ತಮ್ಮ ಸಿದ್ಧಾಂತವನ್ನು ತಿಳಿಯಾಗಿ ಆದರೆ ವಿನಯಪೂರ್ವಕವಾಗಿ ಬಿತ್ತರಿಸುವುದು ಅವರ ಜಾಯಮಾನ. ಛಂದಸ್ಸಿಗೆ ಸಂಬಂಧಿಸಿದ ಹಲವಾರು ಗ್ರಂಥಗಳು ಈವರೆಗೆ ಪ್ರಕಟವಾಗಿದ್ದರೂ ಅದರ ಗತಿಯನ್ನು ಮಾತ್ರ ವಿಶ್ಲೇಷಿಸುವ ಇಷ್ಟು ನಿಡಿದಾದ ಪ್ರಬಂಧ ಈ ವರೆಗೆ ಬಂದಿಲ್ಲವೆಂದು ಕಾಣುತ್ತದೆ. ಛಂದಸ್ಸಿನ ಧಾಟಿಯನ್ನು ತೆಗೆದುಕೊಂಡು ಅದರ

---

15. ಮುದ್ರಣ- ಜಿ. ಎಸ್. ಕೃಷ್ಣಮೂರ್ತಿ, ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು. 1996ರಲ್ಲಿ ಸೇಡಿಯಾಪು ಅವರ ಮರಣಾನಂತರ ಅವರ ಜೀವನ ಮತ್ತು ಕೃತಿಗಳ ಬಗೆಗೆ ನಾನು ಬರೆದ 'ಸೇಡಿಯಾಪು' ಎಂಬ ಕೃತಿಯಲ್ಲಿ, ಈ ಪುಸ್ತಕವು ಸೇಡಿಯಾಪು ಅವರಿಗೆ ಕರಡಚ್ಚುಗಳನ್ನು ನೋಡಲು ಅನುಕೂಲವಾಗುವಂತೆ ಪರ್ಕಳದಲ್ಲಿ ಮುದ್ರಿತವಾಯಿತೆಂದು ಬರೆದಿದ್ದೆ. (ಸೇಡಿಯಾಪು – ಪು. 50) ಇದು ಪ್ರಾಮಾದಿಕ. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಿಂದ ಪುಸ್ತಕರೂಪದಲ್ಲಿ ಪ್ರಕಟಗೊಂಡ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ಕೃತಿಯು ಪರ್ಕಳದ ಸರಸ್ವತಿ ಪ್ರಿಂಟರ್ಸ್ ಅವರಲ್ಲಿ ಮುದ್ರಿತವಾಗಿತ್ತು.

ಸೊಬಗು ಎಂಥದು, ಕಾವ್ಯದಲ್ಲಿ ಅದರ ಸ್ಥಾನವೇನು? ಗದ್ಯದಲ್ಲೂ ಆ ಗತಿ ಹೇಗೆ ಸಂಪನ್ನವಾಗಿ ಭಾಷೆಗೆ ಮೆರುಗನ್ನು ಕೊಡುತ್ತದೆ – ಮುಂತಾದ ವಿಚಾರಗಳನ್ನು ವೇದಸಾಹಿತ್ಯದಿಂದ ತೊಡಗಿ ಆಧುನಿಕಸಾಹಿತ್ಯದವರೆಗೂ ಉದಾಹರಿಸಿ ವಿವರಿಸಿ-ದ್ದಾರೆ. ಇದಕ್ಕೆ ನಿಡುಗಾಲದ ಅಧ್ಯಯನ, ಪರಿಶ್ರಮ, ತಾಳ್ಮೆಯಿರಬೇಕು. ಇದೊಂದು ಸಾರ್ಥಕವಾದ ಪ್ರಯತ್ನ. ಇಷ್ಟಿದ್ದರೂ ಛಂದಸ್ಸಿನ ಮೂಲತತ್ತ್ವಗಳನ್ನು ಏನೂ ತಿಳಿಯದವರಿಗೆ ಇದು ಅರ್ಥವಾಗುವುದು ಸ್ವಲ್ಪ ಕಷ್ಟವಾಗಬಹುದು. ಏಕೆಂದರೆ ಆ ಬಗೆಗೆ ಇದರಲ್ಲಿ ಏನೂ ಹೇಳುವುದಿಲ್ಲ. ಛಂದೋಲಕ್ಷ್ಯಲಕ್ಷಣಗಳನ್ನು ತಿಳಿದ ಒಬ್ಬ ಸಹೃದಯನಿಗೆ ಅದರ ಸೌಂದರ್ಯವನ್ನು ಆಸ್ವಾದಿಸಲು ಇದು ಚೆನ್ನಾಗಿ ನೆರವಾಗಬಲ್ಲುದು.''

'ಕನ್ನಡ ಛಂದಸ್ಸು' ಕೃತಿಯನ್ನು 1988ರಲ್ಲಿ ಪ್ರಕಟಿಸಿದ್ದು ಮಣಿಪಾಲ ಸಾಹಿತ್ಯ ಸಂಘ. ಪ್ರೊ. ಜಿ. ಆರ್. ರೈಗಳು ಅದರ ಅಧ್ಯಕ್ಷರೂ ದಿ. ಅ. ಬಾ. ಶೆಟ್ಟಿ ಪೊಳಲಿಯವರು ಅದರ ಕಾರ್ಯದರ್ಶಿಗಳೂ ಆಗಿದ್ದರು. ಉಡುಪಿಯ ನವಯುಗ ಪ್ರೆಸ್ಸಿನಲ್ಲಿ ಇದು ಮುದ್ರಿತವಾಯಿತು. ಈ ಹಿಂದೆ ಉಲ್ಲೇಖಿಸಿದಂತೆ ಇದರ ಪರಿಷ್ಕರಣ, ಮುದ್ರಣ, ಕರಡಚ್ಚುಗಳ ಪರಿಶೀಲನ – ಇತ್ಯಾದಿ ಕಾರ್ಯ-ಗಳಲ್ಲಿ ಸೇವೆಸಲ್ಲಿಸುವ ಅವಕಾಶ ನನಗೆ ಸಾಕಷ್ಟು ಸಿಕ್ಕಿರುತ್ತದೆ. ಮುದ್ರಣದ ಸಮಯದವರೆಗೂ ಕೃತಿಯೊಳಗೆ ಪರಿಷ್ಕರಣಗಳು ನಡೆಯುತ್ತಲೇ ಇದ್ದುವು. ಕೊನೆಯವರೆಗೂ ತಿದ್ದಿ ತೀಡುವುದು ಸೇಡಿಯಾಪು ಅವರ ಬರವಣಿಗೆಯ ಪದ್ಧತಿ. ಪರಿಶಿಷ್ಟಗಳಲ್ಲಿ ಪೂರಕವಿಷಯಗಳನ್ನೆಲ್ಲ ಹೇಳಿದ್ದರೂ ಪುಸ್ತಕವು ಮುದ್ರಿ-ತವಾಗುತ್ತಿರುವಾಗಲೇ ಹೊಳೆದ ವಿಷಯವನ್ನು 'ಅವಶಿಷ್ಟ' ಎಂಬ ಹೆಸರಿನಿಂದ ಸೇರಿಸಿದರು.[16] ಹೀಗೆ ಪ್ರಬಂಧರೂಪದಲ್ಲಿದ್ದ ಬರಹವು ಗ್ರಂಥರೂಪದಲ್ಲಿ ಪರಿಪುಷ್ಟವಾಯಿತು. ಪ್ರೊ. ಜಿ. ವೆಂಕಟಸುಬ್ಬಯ್ಯನವರು ಈ ಕೃತಿಯನ್ನು ಮಣಿ-ಪಾಲದಲ್ಲಿಯೇ ಏರ್ಪಡಿಸಿದ ಸಮಾರಂಭದಲ್ಲಿ ಅನಾವರಣಗೊಳಿಸಿದರು. ಈ ಕಾರ್ಯಕ್ರಮದಲ್ಲಿ ಸೇಡಿಯಾಪು ಅವರೂ ಭಾಗವಹಿಸಿದರು.[17]

'ಕನ್ನಡ ಛಂದಸ್ಸು' ಕೃತಿಯ ಅನಾವರಣ ಕಾರ್ಯಕ್ರಮಕ್ಕೆ ಮಣಿಪಾಲಕ್ಕೆ ಬಂದಿದ್ದ ಪ್ರೊ. ಜಿ. ವೆಂಕಟಸುಬ್ಬಯ್ಯನವರು ಸೇಡಿಯಾಪು ಅವರ ಎಲ್ಲ ಲೇಖನಗಳನ್ನು ಒಟ್ಟು ಸೇರಿಸಿ ಸಂಪುಟರೂಪದಲ್ಲಿ ಸಿದ್ಧಪಡಿಸುವಂತೆ ನನಗೆ

---

16. ನಾಲ್ಕನೆಯ ಪರಿಶಿಷ್ಟಕ್ಕೆ ಸೇರಿಸಬೇಕಾಗಿರುವ ಈ ಅವಶಿಷ್ಟವನ್ನು ಪ್ರಸ್ತುತ ಸಂಪುಟದಲ್ಲಿ ಹಾಗೆ ಸೇರಿಸಿಯೇ ಮುದ್ರಿಸಿದೆ.

17. ಸೇಡಿಯಾಪು ಅವರು ಮನೆಯಿಂದ ಹೊರಗೆ ಬಂದು ಭಾಗವಹಿಸಿದ ಎರಡೇ ಕಾರ್ಯಕ್ರಮಗಳನ್ನು ನಾನು ನೋಡಿದ್ದು, ಒಂದು ಇದು, ಇನ್ನೊಂದು 'ಸೇಡಿಯಾಪು 90 – ಅಭಿವಂದನ' ಕಾರ್ಯಕ್ರಮ. ಉಳಿದಂತೆ 'ವಿಚಾರಪ್ರಪಂಚ' ಅನಾವರಣ ಕಾರ್ಯಕ್ರಮ 1992ರಲ್ಲಿ ಉಡುಪಿಯಲ್ಲೇ ನಡೆದಿದ್ದರೂ ಅವರಿಗೆ ಭಾಗವಹಿಸಲು ಸಾಧ್ಯವಾಗಿರಲಿಲ್ಲ.

ಪ್ರೇರಣೆ ನೀಡಿ ನಾನು ಸಂಪಾದಕನಾಗಿ ಹೊರಬಂದ 'ವಿಚಾರಪ್ರಪಂಚ' ಎಂಬ ಆ ಕೃತಿ ಈಗಾಗಲೇ ಎರಡು ಮುದ್ರಣಗಳನ್ನು ಕಂಡಿದೆ. (1992 ಮತ್ತು 2002)

* * * * *

ಇದುವರೆಗೆ ಈ ಪ್ರಸ್ತಾವನಾಭಾಗದಲ್ಲಿ 'ಛಂದಃಶಾಸ್ತ್ರ'ಕ್ಕೆ ಹೊರತಾದ ಸೇಡಿಯಾಪು ಅವರಿಗೆ ಸಂಬಂಧಿಸಿದ ಕೆಲವು 'ಛಂದೋವಿಷಯ'ಗಳನ್ನು ನಿರೂಪಿಸಿದಂತಾಯಿತು. ಪ್ರಸ್ತಾವನೆಯಲ್ಲಿ ಸೇಡಿಯಾಪು ಅವರ ಪರಿಚಯ ಮತ್ತು ಛಂದಃಶಾಸ್ತ್ರದಲ್ಲಿ ಅವರ ಸಾಧನೆ, ಸ್ಥಾನಮಾನ – ಇತ್ಯಾದಿಗಳನ್ನು ಸಂಪಾದಕನಾಗಿ ಪುನಃ ಪ್ರಸ್ತಾವಿಸಬೇಕಾದ ಆವಶ್ಯಕತೆಯಿಲ್ಲ. ಏಕೆಂದರೆ, ಈ ಸಂಪುಟದ ಉಪಕ್ರಮ ವಿಭಾಗದಲ್ಲಿ ಶತಾವಧಾನಿ ಡಾ. ಆರ್. ಗಣೇಶರು ಬರೆದ 'ಪಂಡಿತಪರಮೇಷ್ಠಿ ಸೇಡಿಯಾಪು' ಎಂಬ ಲೇಖನವಿದೆ. 'ಪೂರಕವಿಚಾರವಿಭಾಗ'ದಲ್ಲಿ ಸೇಡಿಯಾಪು ಅವರ ಛಂದೋವಿಚಾರಗಳಿಗೆ ಸಂಬಂಧಿಸಿದ ಹಲವು ಬರಹಗಳಿವೆ. ಆದುದ-ರಿಂದ ಆ ಬಗೆಗೆ ಹೇಳದೆ ಪ್ರಸ್ತುತ 'ಛಂದಸ್ಸಂಪುಟ'ದ ಸಂಪಾದನೆ ಮತ್ತು ಗ್ರಂಥ ಯೋಜನೆಯ ಬಗೆಗೆ ಮಾತ್ರ ನಾಲ್ಕು ಮಾತುಗಳನ್ನು ಹೇಳಬೇಕಾಗಿದೆ.

* * * * *

ಸೇಡಿಯಾಪು ಅವರ ಛಂದೋವಿಷಯಕವಾದ ಬರವಣಿಗೆಗಳೆಲ್ಲ ಎರಡು ಕೃತಿಗಳಲ್ಲಿ ಒಟ್ಟಾಗಿವೆ. ಈ ಕೃತಿಗಳ ಹೊರತಾದ ಛಂದೋವಿಷಯಕ ಲೇಖನ-ಗಳೆಂದರೆ ಎರಡು ಪ್ರತಿಕ್ರಿಯೆಗಳು ಮಾತ್ರ. ಅವೆಲ್ಲವನ್ನೂ ಈ ಸಂಪುಟದಲ್ಲಿ ಒಟ್ಟು ಸೇರಿಸಲಾಗಿದೆ.

'ಸೇಡಿಯಾಪು ಛಂದಸ್ಸಂಪುಟ'ವು ನಾಲ್ಕು ಭಾಗಗಳಲ್ಲಿದೆ. ಮೊದಲನೆಯ 'ಉಪಕ್ರಮವಿಭಾಗ'ದಲ್ಲಿ ಅವರ ಬಗೆಗಿನ ಲೇಖನ, ಸಂಪಾದಕೀಯ ಪ್ರಸ್ತಾವನೆ, ಡಾ. ಶ್ರೀನಿವಾಸ ಹಾವನೂರರು ಛಂದೋಗತಿಗೆ ಬರೆದ ಮುನ್ನುಡಿ, ಮತ್ತು ಸೇಡಿಯಾಪು ಅವರೇ ಅವರ ಎರಡು ಕೃತಿಗಳಿಗೆ ಬರೆದ ಮುನ್ನುಡಿಯ ಮಾತುಗಳು ಸೇರಿವೆ. ಕಾಲಾನುಕ್ರಮವಾಗಿ ಮೊದಲು ಪುಸ್ತಕರೂಪದಲ್ಲಿ ಪ್ರಕಟ-ಗೊಂಡ (1985) 'ಛಂದೋಗತಿ' ಎರಡನೆಯ ವಿಭಾಗದಲ್ಲಿದೆ. ಅನಂತರ ಪ್ರಕಟಗೊಂಡ 'ಕನ್ನಡ ಛಂದಸ್ಸು' (1988) ಮೂರನೆಯ ವಿಭಾಗದಲ್ಲಿದೆ. ವಿಮರ್ಶೆಯ ಲೇಖನಗಳು, ಪ್ರತಿಕ್ರಿಯೆಗಳು ಸೇಡಿಯಾಪು ಅವರ ಕೃತಿಗಳಲ್ಲಿರುವ ವಿಷಯಗಳನ್ನು ಅರ್ಥಮಾಡಿಕೊಳ್ಳಲು ಅವಶ್ಯವಾದುದರಿಂದ (ಕೆಲವು ಲೇಖನ-ಗಳಲ್ಲಿ ಒಂದಿಷ್ಟು ಪುನರುಕ್ತಿಯಿದ್ದರೂ, ಎಲ್ಲ ಅಧ್ಯಯನ ಸಾಮಗ್ರಿ, ಒಟ್ಟಾಗುವುದು ಮುಖ್ಯವೆಂಬ ದೃಷ್ಟಿಯನ್ನಿರಿಸಿಕೊಂಡು) ಅವೆಲ್ಲವನ್ನು ಒಟ್ಟು ಸೇರಿಸಿ ನಾಲ್ಕನೆಯದಾದ 'ಪೂರಕವಿಚಾರವಿಭಾಗ'ದಲ್ಲಿರಿಸಿದೆ.

ಇದಲ್ಲದೆ ಸಂಪಾದಕನಾಗಿ ಕೃತಿಯೊಳಗಡೆ ಮಾಡಿದ ಹಸ್ತಕ್ಷೇಪವನ್ನು ಇಲ್ಲಿ ಹೇಳಬೇಕಾಗಿದೆ. ಸೇಡಿಯಾಪು ಅವರ ಎರಡೂ ಕೃತಿಗಳಲ್ಲಿ ಶೀರ್ಷಿಕೆ, ಉಪಶೀರ್ಷಿಕೆ – ಮೊದಲಾದ ವಿಭಾಗಗಳಿಲ್ಲ. 'ಛಂದೋಗತಿ'ಯಲ್ಲಿ ಪರಿಚ್ಛೇದ ವಿಭಾಗ ಮಾತ್ರವಿದೆ. ಪರಿಚ್ಛೇದಶೀರ್ಷಿಕೆಗಳನ್ನು ಪರಿವಿಡಿಯಲ್ಲಿ ಮಾತ್ರ ಕೊಡಲಾಗಿತ್ತು. ಪ್ರಸ್ತುತ ಸಂಪುಟದಲ್ಲಿ ಪರಿಚ್ಛೇದಗಳು ತೊಡಗುವಲ್ಲಿಯೂ ಆ ಪರಿಚ್ಛೇದಶೀರ್ಷಿಕೆಗಳನ್ನು (ಅವು ಒಂದಿಷ್ಟು ದೀರ್ಘವಾಗಿದ್ದರೂ) ನೀಡಲಾಗಿದೆ. 'ಕನ್ನಡ ಛಂದಸ್ಸು' ಕೃತಿಯಲ್ಲಿ ಪೂರ್ವಾರ್ಧ – ಉತ್ತರಾರ್ಧ ವಿಭಾಗವಿದೆಯಷ್ಟೆ ಹೊರತು ಇತರ ಶೀರ್ಷಿಕೆಗಳಿಲ್ಲ. ಸೇರಿಸಲಾದ ಅನುಬಂಧಗಳಿಗೆ ಶೀರ್ಷಿಕೆಗಳಿವೆ. ಪರಿಶಿಷ್ಟಗಳಿಗೆ ಶೀರ್ಷಿಕೆಗಳಿಲ್ಲ. ಇಂತಹ ಒಂದು ಕೃತಿಗೆ ಅಲ್ಲಲ್ಲಿ ಉಪ–ಶೀರ್ಷಿಕೆಗಳು ಬಹಳ ಅವಶ್ಯ ಎಂಬುದನ್ನು 'ಛಂದೋಗತಿ' ಗ್ರಂಥವನ್ನು ಅತಿಗಂಭೀರವಾಗಿ ಅಧ್ಯಯನ ಮಾಡಿದ ಬೆಂಗಳೂರಿನ ಶ್ರೀ ಸುಧೀರ್ ಕೃಷ್ಣಸ್ವಾಮಿಯವರು ಹೇಳಿದರೆಂದು ಶತಾವಧಾನಿ ಡಾ. ಆರ್. ಗಣೇಶ್ ಅವರು ಸಾಂದರ್ಭಿಕವಾಗಿ ಮಾತಾಡುತ್ತಾ ಒಮ್ಮೆ ತಿಳಿಸಿದ್ದರು. ಅವರದೂ ಅದೇ ಅಭಿಪ್ರಾಯವಾಗಿತ್ತು. ಆ ಮಾತು ನನಗೂ ಸರಿಯೆಂದು ಕಂಡಿತು. ಆದುದರಿಂದ ಗ್ರಂಥದ ಕಾಂಡಭಾಗದಲ್ಲಿ ಮತ್ತು ಟಿಪ್ಪಣಿಭಾಗಗಳಲ್ಲಿ ಅಲ್ಲಲ್ಲಿ ಉಪಶೀರ್ಷಿಕೆ–ಗಳನ್ನು ದಪ್ಪ ಅಕ್ಷರಗಳಲ್ಲಿ ಕೊಟ್ಟಿರುತ್ತೇನೆ. ಈ ಉಪಶೀರ್ಷಿಕೆಗಳು ಆಯಾ ಖಂಡಗಳಲ್ಲಿ ಪ್ರತಿಪಾದಿಸಿದ ಮುಖ್ಯ ವಿಷಯಗಳನ್ನು ಸೂಚಿಸುತ್ತಿದ್ದು ಹೆಚ್ಚಿನ ಕಡೆಗಳಲ್ಲಿ ಸೇಡಿಯಾಪು ಅವರು ಉಪಯೋಗಿಸಿದ ಮಾತುಗಳನ್ನೇ ಶೀರ್ಷಿಕೆ–ಗಳಿಗೆ ನೀಡಿದೆ. ಅತಿ ಅವಶ್ಯವಿದ್ದಲ್ಲಿ ಕೆಲವೆಡೆ ಸಂಪಾದಕೀಯ ಟಿಪ್ಪಣಿಗಳನ್ನು ನೀಡಲಾಗಿದೆ. ಈ ಶೀರ್ಷಿಕೆಗಳೂ ಟಿಪ್ಪಣಿಗಳೂ ಮೂಲಗ್ರಂಥಕ್ಕೆ ಸಂಪಾದಕೀಯ ನೆಲೆಯಲ್ಲಿ ಸೇರಿಸಲಾದುವೆಂಬುದನ್ನು ತಿಳಿಸಲಿಕ್ಕಾಗಿ ಅವುಗಳನ್ನು {......} ಪುಷ್ಪಾವರಣ ಗುರುತುಗಳೊಳಗೆ ನೀಡಲಾಗಿದೆ.

ಇಷ್ಟು ಮಹತ್ತ್ವಪೂರ್ಣವಾದ ಗ್ರಂಥಗಳಿಗೆ ಅಧ್ಯಯನಾನುಕೂಲಿಗಳಾದ ಸೂಚಿಗಳಿಲ್ಲವೆಂಬುದು ಒಂದು ಕೊರತೆಯೆಂದು ಕೆಲವು ವಿಮರ್ಶಕರ ಅಭಿಪ್ರಾಯವಾಗಿದೆ. ಪ್ರೊ. ಎಂ. ವಿ. ಸೀತಾರಾಮಯ್ಯನವರು ಈ ಕೃತಿಗೆ (ಛಂದೋಗತಿಗೆ) ಪಾರಿಭಾಷಿಕ ಪದಗಳ ಅಕಾರಾದಿಯಿಲ್ಲದಿರುವುದು ಕೊರತೆ–ಯೆಂದು ಅವರ ವಿಮರ್ಶಲೇಖನದಲ್ಲಿ ಗುರುತಿಸಿದ್ದಾರೆ. ("ಅವರು ಛಂದಸ್ಸಿನ ಪರಿಭಾಷೆಗೆ ಒಂದು ದೊಡ್ಡ ಕೊಡುಗೆಯನ್ನು ಕೊಡಬಲ್ಲಷ್ಟು ವಿಪುಲವಾಗಿ ಶಬ್ದಕೃಷಿ ಮಾಡಿದ್ದಾರೆ" ಎಂಬುದು ಪ್ರೊ. ಅ. ರಾ. ಮಿತ್ರರ ಮಾತು.) 'ಪೂರಕ–ವಿಚಾರವಿಭಾಗ'ದಲ್ಲಿ ಈ ಕೊರತೆಯನ್ನು ನೀಗಿಸುವ ಉದ್ದೇಶದಿಂದ ಏಳು ವಿಧದ ಸೂಚಿಗಳನ್ನು ಸಂಪಾದಕೀಯ ನೆಲೆಯಲ್ಲಿ ಸಿದ್ಧಪಡಿಸಿ ಸೇರಿಸಲಾಗಿದ್ದು ಅಧ್ಯಯನಾಸಕ್ತರು ಅವುಗಳ ಉಪಯೋಗವನ್ನು ಪಡೆಯಬಹುದಾಗಿದೆ. ಇವು–ಗಳಲ್ಲಿ ಕೊನೆಯದು ಪಾರಿಭಾಷಿಕಪದಗಳ ಸೂಚಿ. ಇದರಲ್ಲಿ ಸೇಡಿಯಾಪು

ಅವರೇ ಟಂಕಿಸಿದ ಪಾರಿಭಾಷಿಕಪದಗಳನ್ನು ಶಾಸ್ತ್ರೀಯ ಸಂದರ್ಭಗಳಲ್ಲಿ ಬಳಸಬಹುದಾದ ಹಲವು ವಿಶಿಷ್ಟ ಪದಗಳನ್ನು ಕಾಣಬಹುದಾಗಿದೆ. (ಸೇಡಿಯಾಪು ಅವರ ಪದಪ್ರಯೋಗಗಳ ಬಗೆಗೇ ಅಧ್ಯಯನಮಾಡಿ 'ಸೇಡಿಯಾಪು ಪದ-ಪ್ರಯೋಗಕೋಶ'ವೊಂದನ್ನು ಸಿದ್ಧಪಡಿಸುವ ಅವಕಾಶವಿದೆ.)

* * * * *

ಸೇಡಿಯಾಪು ಅವರೊಂದಿಗೆ ಹತ್ತು ವರ್ಷಗಳ ಕಾಲ ಸಂಪರ್ಕ ಹೊಂದುವ ಒಂದು ಭಾಗ್ಯ ನನಗೊದಗಿದೆ. ಇದೀಗ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ನಿರ್ದೇಶಕರು 'ಸೇಡಿಯಾಪು ಛಂದಸ್ಸಂಪುಟ'ವನ್ನು ಸಂಪಾದಿಸುವ ಹೊಣೆಯನ್ನು ನನಗೆ ವಹಿಸಿದ್ದರಿಂದ ಅವರ ಛಂದೋವಿಚಾರ-ಗಳನ್ನೆಲ್ಲ ಇನ್ನೊಮ್ಮೆ ಪೂರ್ತಿಯಾಗಿ ಅಧ್ಯಯನಮಾಡುವ ಸುಸಂದರ್ಭ ಒದಗಿತು. ಆ ದಿನಗಳಲ್ಲಿ ಅವರು ಆಡಿದ್ದ ಮಾತುಗಳನ್ನು ನೆನಪಿಸಿ ಮೆಲುಕುಹಾಕು-ವಂತೆಯೂ ಆಯಿತು. ಸೇಡಿಯಾಪು ಅವರ ವಿಚಾರಗಳು ಕನ್ನಡ ಛಂದಸ್ಸಿನ ಕ್ಷೇತ್ರದಲ್ಲಿ ಮಾತ್ರವಲ್ಲ ಭಾರತೀಯ ಛಂದಃಶಾಸ್ತ್ರಕ್ಕೇ ಹೊಸ ದಿಕ್ಕುಗಳನ್ನು ತೋರಿಸುವಂತಹ ಉನ್ನತಮಟ್ಟದವೆಂದು ಭಾರತದ ಹಲವು ಭಾಷೆಗಳನ್ನು ಬಲ್ಲ ಡಾ. ಆರ್. ಗಣೇಶರು ಹೇಳಿದ್ದುಂಟು. ಆ ವಿಚಾರಗಳನ್ನು ಭಾರತದ ಇತರ ಭಾಷೆಗಳ ವಿದ್ವಾಂಸರಿಗೂ ತಿಳಿಸುವ ಕಾರ್ಯಗಳು ಮುಂದೆ ಆಗಬೇಕಿವೆ. ಶಾಸ್ತ್ರಾಸಕ್ತರೂ ಬಹುಭಾಷಾವಿದರೂ ಆದ ಡಾ. ಗಣೇಶರಂತಹ ಬಹುಶ್ರುತ-ರಿಂದಲೇ ಆ ಕೆಲಸಗಳು ಆಗಬೇಕಷ್ಟೆ.[18] ಅಂತಹ ಕಾರ್ಯಗಳು ನಡೆಯಲೆಂದು ಹಾರಯಿಸುತ್ತಾ ಅಂತಹ ಕಾರ್ಯಗಳಿಗೆ ಈ ಸಂಪಾದನ ಪ್ರಕಾಶನ ಕಾರ್ಯಗಳು ಸಹಕಾರಿಗಳಾದರೆ ನಾವು ಕೃತಾರ್ಥರೆಂದು ಭಾವಿಸುತ್ತಾ ಸೇಡಿಯಾಪು ಅವರು ಸದಾ ಉಚ್ಚಸ್ಥಾನ ನೀಡಿದ್ದ 'ವಿಚಾರಶಕ್ತಿ'ಗೆ ಮಣಿದು ವಿರಮಿಸುತ್ತೇನೆ.

ಪಾದೇಕಲ್ಲು ವಿಷ್ಣು ಭಟ್ಟ

---

18. 'ಛಂದೋಗತಿ'ಯ ಸಾರವನ್ನು ಸಂಕ್ಷೇಪಿಸಿ ಸಂಸ್ಕೃತದಲ್ಲಿ ಅನುವಾದರೂಪದಲ್ಲಿ ಸಿದ್ಧಪಡಿಸುವ ಸಂಕಲ್ಪವನ್ನು ಡಾ. ಆರ್. ಗಣೇಶರು ಮಾಡಿರುವುದನ್ನು ಅವರೇ ತಿಳಿಸಿರು-ವುದುಂಟು. ಸಂಸ್ಕೃತದಲ್ಲಿ ಈ ಕೃತಿ ಪ್ರಕಟಗೊಂಡಾಗ ಸೇಡಿಯಾಪು ಅವರ ಛಂದಶ್ಚಿಂತನ-ಗಳು ಅಖಿಲಭಾರತದ ವಿದ್ವದ್ವರ್ಗಕ್ಕೆ ವಿವರವಾಗಿ ತಿಳಿಯುವಂತಾಗಬಹುದು.

# ಪಂಡಿತಪರಮೇಷ್ಠಿ ಶ್ರೀ ಸೇಡಿಯಾಪು*

– ಶತಾವಧಾನಿ ಡಾ. ಆರ್. ಗಣೇಶ್

ಶ್ರೀ ಶಂಕರಭಗವತ್ಪಾದರದೆನ್ನಲಾದ 'ಪ್ರಶ್ನೋತ್ತರರತ್ನಮಾಲಿಕೆ'ಯಲ್ಲಿಯ ಒಂದು ಪ್ರಶ್ನೋತ್ತರವಿಂತಿದೆ: 'ಕಿಂ ಪಾಂಡಿತ್ಯಂ?', 'ಪರಿಚ್ಛೇದಃ'. ಇದೇ ಮಾತುಗಳನ್ನುಳ್ಳ ಮತ್ತೊಂದು ಪ್ರಾಚೀನಸೂಕ್ತಿಯೂ ಇಲ್ಲಿ ಸ್ಮರಣೀಯ. ಆದಿಂತಿದೆ: 'ಪರಿಚ್ಛೇದೋ ಹಿ ಪಾಂಡಿತ್ಯಂ'. ಈ ಮಾತುಗಳಲ್ಲಿ ದಿಟವಾದ ಪಾಂಡಿತ್ಯವೆಂದರೆ ವಿವೇಕ ಮತ್ತು ವಿರಕ್ತಿಗಳೆಂಬ ಅರ್ಥಚ್ಛಾಯೆಯಿದ್ದರೂ ನಿರ್ಧಾರ, ನಿಶ್ಚಯ ಎಂಬಿವೇ ಅರ್ಥಗಳೂ ಅನಪೇಕ್ಷಿತವಾಗವು. ಶ್ರೀ ಸೇಡಿಯಾಪು ಕೃಷ್ಣ ಭಟ್ಟರನ್ನು ನೆನೆದಾಗ ನನಗೆ ಉಭಯಾರ್ಥಗಳಲ್ಲಿಯೂ ಅವರು ಪರಿಚ್ಛೇದವನ್ನುಳ್ಳ (ವಿವೇಕ ಮತ್ತು ನಿಶ್ಚಯ) ಪಂಡಿತರೆಂಬುದು, ಪಂಡಿತೋತ್ತಮರೆಂಬುದು ಪದೇ ಪದೇ ಪ್ರತೀತವಾಗುವ ಸತ್ಯ. ಈ ಮಹನೀಯರ ಸಾಧನಸ್ವಾರಸ್ಯದ ಕೆಲವಂಶಗಳನ್ನು ಪ್ರಸ್ತಾವಿಸುವ ಮುನ್ನ ಈಚಿನ ದಿನಗಳಲ್ಲಿ ಕನ್ನಡದ ಯಾವ ಸದಸ್ಸೂ ಮಾಡದ ಒಂದು ಸತ್ಕಾರ್ಯವನ್ನು ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತ್ಯ ಸಮ್ಮೇಳನದ ಪದಾಧಿಕಾರಿಗಳು ಪಂಡಿತಪರಂಪರೆಯ ಸಂಸ್ಮರಣೆಯ ಮೂಲಕ ಮಾಡುತ್ತಿರುವುದನ್ನು ಮನಸಾ ಅಭಿನಂದಿಸಬೇಕಿದೆ. ಏಕೆಂದರೆ ಪಂಡಿತರನ್ನೂ ಪಾಂಡಿತ್ಯವನ್ನೂ ಇಡಿಯ ಈ ಪರಂಪರೆಯನ್ನೂ ಕೊಂದು ಕೂಗುತ್ತಿರುವ ಆಧುನಿಕ ಕನ್ನಡ ಸಾಹಿತ್ಯ ಪುರೋಗಾಮಿಗಳೇ ತುಂಬಿ ತುಳುಕಿರುವ ಈ ಸಂದರ್ಭದಲ್ಲಿ ಇಂಥ ವಿಚಾರಗೋಷ್ಠಿಗಳ ಔಚಿತ್ಯ–ಮಹತ್ತ್ವಗಳು ಅದೆಷ್ಟು ಮುಖ್ಯವೆಂಬುದನ್ನು ವಿಸ್ತರಿಸಬೇಕಿಲ್ಲ. ಪಾಂಡಿತ್ಯದ ಬಗ್ಗೆ ನಾನು ಸೇಡಿಯಾಪು ಅವರ ಛಂದೋವೈದುಷ್ಯವನ್ನು ಕುರಿತಂತೆ ಬರೆದ ಮತ್ತೊಂದು ಲೇಖನದಲ್ಲಿ[1] ವಿಸ್ತಾರವಾಗಿ ಹೇಳಿರುವ ಕಾರಣ ಇಲ್ಲಿ ಪುನರುಚ್ಚರಿಸಲಾರೆನಾದರೂ 'ಪಂಡಿತ' ಎಂಬ ಶಬ್ದವು ನಮ್ಮ ಪರಂಪರೆಯಲ್ಲಿ ಬರಿಯ ಗಿಳಿಯೋದಿನಂಥ ಪುಸ್ತಕಪ್ರಭುತ್ವವನ್ನಲ್ಲದೆ ಶೀಲಸೌಭಾಗ್ಯವನ್ನೂ

---

* ದಕ್ಷಿಣಕನ್ನಡ ಜಿಲ್ಲಾ ಒಂಬತ್ತನೆಯ ಸಾಹಿತ್ಯಸಮ್ಮೇಳನವು ಶ್ರೀ ವ್ಯಾಸರಾಯ ಬಲ್ಲಾಳರ ಅಧ್ಯಕ್ಷತೆಯಲ್ಲಿ ಕಾರ್ಕಳದಲ್ಲಿ ೧೯೯೬ರ ದಶಂಬರ ೨೪–೨೬ರಲ್ಲಿ ನಡೆದಾಗ ಅದರೊಳಗಿನ 'ದಕ್ಷಿಣ ಕನ್ನಡ ಪಂಡಿತ ಪರಂಪರೆ' ಗೋಷ್ಠಿಯಲ್ಲಿ ಡಾ. ಆರ್. ಗಣೇಶ್ ಅವರು ಮಾಡಿದ ಉಪನ್ಯಾಸವಿದು. ಇದು ಸಮ್ಮೇಳನದ ಸಮಗ್ರ ಸ್ಮೃತಿಸಂಚಯರೂಪದಲ್ಲಿ ಪ್ರೊ. ಎಂ. ರಾಮಚಂದ್ರ ಅವರ ಸಂಪಾದಕತ್ವದಲ್ಲಿ ೧೯೯೭ರಲ್ಲಿ ಪ್ರಕಟಗೊಂಡ 'ತುರಾಯಿ' ಎಂಬ ಗ್ರಂಥದಲ್ಲಿ ಸೇರಿದೆ. – ಸಂ.

1. ಆ ಲೇಖನವು ಪ್ರಸ್ತುತ ಸಂಪುಟದ 'ಪೂರಕವಿಚಾರವಿಭಾಗ'ದಲ್ಲಿ ಸೇರ್ಪಡೆಗೊಂಡಿದೆ. ಲೇಖನದ ಹೆಸರು 'ಛಂದೋವಿದ ಸೇಡಿಯಾಪು'. ಆ ಲೇಖನವು ಹಿಂದೆ ಪ್ರಕಟಗೊಂಡ ಬಗೆಗಿನ ವಿವರಗಳು ಅಲ್ಲೇ ಟಿಪ್ಪಣಿಯಲ್ಲಿವೆ. – ಸಂ.

ಒಳಗೊಂಡ ಸಂಕೇತವಾಗಿತ್ತೆಂಬುದನ್ನು ನೆನಪಿಸದಿರಲಾರೆ. ಆದುದರಿಂದಲೇ ಭಗವಾನ್ ಪತಂಜಲಿಯು ಮಹಾಭಾಷ್ಯದಲ್ಲಿ ಶಿಷ್ಟರ ಲಕ್ಷಣವನ್ನು ಹೇಳುತ್ತಾ '.....ಕುಂಭೀಧಾನ್ಯಾಃ ಅಲೋಲುಪಾಃ ಅಗೃಹ್ಯಮಾಣಕಾರಣಾಃ ಕಿಂಚಿದಂತರೇಣ ಕಸ್ಯಾಶ್ಚಿದ್ವಿದ್ಯಾಯಾಃ ಪಾರಗಾಃ ತತ್ರ ಭವಂತಃ ಶಿಷ್ಟಾಃ' ಎಂದಿದ್ದಾನೆ (VI-3-109) ಶ್ರೀ ಸೇಡಿಯಾಪು ಕೃಷ್ಣ ಭಟ್ಟರು ದಿಟವಾಗಿ ಇಂಥ ಶಿಷ್ಟರೆನಿಸಿದ್ದರು. ಹೀಗಾಗಿ ಅವರ ಬದುಕು ಮತ್ತು ಬರಹಗಳಲ್ಲಿ ಬಿರುಕಿಲ್ಲದ ಬೆಳಕು ಬೀದಿವರೆದಿದೆ.

ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ಬಗ್ಗೆ ಸೊಗಸಾದ ಪುಸ್ತಕವನ್ನೇ ಶ್ರೀ ಪಾದೇಕಲ್ಲು ವಿಷ್ಣು ಭಟ್ಟರು ಈಚೆಗೆ ಹೊರತಂದಿದ್ದಾರೆ.[2] ಪ್ರೊ । ಎಮ್. ರಾಮಚಂದ್ರ ಅವರೂ ಈ ಮೊದಲೇ ಬರೆದಿದ್ದಾರೆ.[3] ಶ್ರೀಯುತರ ಗ್ರಂಥಗಳ ಬಗ್ಗೆ, ವ್ಯಕ್ತಿತ್ವವನ್ನು ಕುರಿತು ಈ ಮೊದಲೇ ಹತ್ತಾರು ಲೇಖನಗಳು ಪ್ರಕಟವಾಗಿವೆ. ಹೀಗಿರಲು ಅವುಗಳನ್ನೆಲ್ಲ ಮೀರುವಂಥ ಹೊಸ ಅಂಶಗಳನ್ನು ನಾನೀ ಸಣ್ಣ ಉಪನ್ಯಾಸದಲ್ಲಿ ಹೇಳಲಾರೆ. ಹಾಗೆಂದು ಅವುಗಳ ಸಾಮಗ್ರಿಯನ್ನೇ ಯಥಾ ತಥಾ ಪುನರುಚ್ಚರಿಸಲಾರೆ. ಮಧ್ಯಮಾರ್ಗವಾಗಿ ಶ್ರೀ ಸೇಡಿಯಾಪು ಅವರ ಪಾಂಡಿತ್ಯದ ಪರಿಯನ್ನು ತುಸುಮಟ್ಟಿಗೆ ಪ್ರಪಂಚಿಸಬಯಸುವೆ.

ಪಾಂಡಿತ್ಯವು ಅನಾಮತ್ತಾಗಿ ತೋರಿಕೊಳ್ಳುವ, ಜಲಕ್ಕನೆ ಮಿಂಚಿ ಮೂಡುವ ಆಕಸ್ಮಿಕ ತತ್ತ್ವವಲ್ಲ. ಅದು ಸತತಪ್ರಯತ್ನದಿಂದ ಕಣಕಣವಾಗಿ ಸಂಗ್ರಹಗೊಳ್ಳುವ ಬಹುಪರಿಶ್ರಮಸಿದ್ಧ ನಿಧಿ. ಇದರ ಪುಷ್ಟಿಗಾಗಿ ಅದೆಷ್ಟು ವ್ಯಾಸಂಗ, ಶುಶ್ರೂಷೆ, ಲೋಕಾನುಭವ, ತರ್ಕ, ಊಹೆ ಮತ್ತು ವಿಮರ್ಶನಗಳಿದ್ದರೂ ಸಾಕಾಗವು. ಶ್ರೀಯುತರು ತಮ್ಮ ಪಾಂಡಿತ್ಯವನ್ನು ಈ ಎಲ್ಲ ಅಂಶಗಳಿಂದ ಸಂಚಯಿಸಿ-ಕೊಂಡಿದ್ದುದಲ್ಲದೆ ಅನೇಕರಿಗೆ ದುರ್ಲಭವಾದ ಅಂತರ್ದೃಷ್ಟಿ ಮತ್ತು ಸ್ವೋಪಜ್ಞತೆ-ಗಳೆಂಬ ಸ್ಪರ್ಶವೇಧಿ ಮಣಿಯಿಂದ ಯಾವುದೇ ವಿದ್ವತ್ತೆಯ ಮಾಹಿತಿಯೆಂಬ ಕಬ್ಬಿಣವನ್ನಾಗಲಿ ವಿಚಾರದೀಪ್ತಿಯಿಂದ ಮಿರುಗುವ, ಮೌಲಿಕತತ್ತ್ವದಿಂದ ಬೆಲೆ-ಯುಳ್ಳ ಬಂಗಾರವನ್ನಾಗಿಸಿ ಲೋಕಕ್ಕೆ ಒಸಗೆಯಿಡುತ್ತಿದ್ದುದು ಮಹಾವಿಶೇಷ. ನಾನು ಅನೇಕ ಸಂದರ್ಭದಲ್ಲಿ ಶ್ರೀಯುತರ ನಿಕಟವರ್ತಿಗಳನ್ನು ಕೇಳಿದ್ದುಂಟು –

---

2. ಸೇಡಿಯಾಪು ಲೇ. ಪಾದೇಕಲ್ಲು ವಿಷ್ಣು ಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೬. ಈ ಪುಸ್ತಕವಲ್ಲದೆ ಪ್ರಸ್ತುತ ಸಂಪಾದಕನು ಬರೆದ 'ಸೇಡಿಯಾಪು ಕೃಷ್ಣ ಭಟ್ಟರು' ಎಂಬ ಕಿರುಹೊತ್ತಗೆಯನ್ನು ಮಂಗಳೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರು-ತ್ತದೆ. ಸೇಡಿಯಾಪು ಶತಮಾನೋತ್ಸವ ಸಂದರ್ಭದಲ್ಲಿ ೨೦೦೧ರಲ್ಲಿ 'ಪಂಡಿತವರೇಣ್ಯ' ಎಂಬ ಕೃತಿಯೂ ಪ್ರಕಟಗೊಂಡಿರುತ್ತದೆ (ಪ್ರಕಾಶನ – ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ). – ಸಂ.

3. ಇದು ದಿ. ಸೇಡಿಯಾಪು ಕೃಷ್ಣ ಭಟ್ಟರ ಬಗೆಗೆ ಬಂದ ಮೊದಲನೆಯ ಕಿರುಹೊತ್ತಗೆ. ನವೋದಯ ಪುಸ್ತಕಮಾಲೆ, ಎಂ. ಜಿ. ಎಂ. ಕಾಲೇಜು, ಉಡುಪಿ, ೧೯೬೪ – ಸಂ.

"ಸೇಡಿಯಾಪು ಅವರ ಚಿಂತನಕ್ರಮವನ್ನು ಅವರಿಂದಲೇ ಗ್ರಹಿಸಿ ವಿಶದವಾಗಿ ನಿರೂಪಿಸಿ ಪ್ರಕಟಿಸಿರಿ. ಅದು ವಿದ್ವತ್ತೆಯ ಕ್ಷೇತ್ರಕ್ಕೆ ಹೊಸ ಹಾದಿಯನ್ನು ತೋರುವುದು" – ಎಂದು. ಅಲ್ಲದೆ ಸ್ವಯಂ ಶ್ರೀ ಸೇಡಿಯಾಪು ಅವರನ್ನೇ ಪ್ರಾರ್ಥಿಸಿದ್ದೆ ಕೂಡ. ಅವರು ತಮ್ಮ ಬತ್ತಿದ ಕಣ್ಣುಗಳಿಂದಲೇ ಬೆಳಕನ್ನುಕ್ಕಿಸುವಂತೆ ಹೂನಗೆ ನಕ್ಕು ತಮ್ಮ ವ್ಯಾಸಂಗವು ಪರಿಮಿತವಾದದ್ದಾದರೂ ಪಡೆದಷ್ಟನ್ನು ಪರಿಪೂರ್ಣವಾಗಿ ಜೀರ್ಣಿಸಿಕೊಳ್ಳುವ ಹಠ, ಜೀರ್ಣಿಸಿಕೊಂಡದ್ದನ್ನಷ್ಟನ್ನೂ ರಕ್ತಗತವಾಗಿಸಿಕೊಳ್ಳಬೇಕೆಂಬ ಮನೀಷೆಯಿಂದ ನಿರಂತರವಾಗಿ ಚಿಂತಿಸುವ ಚೈತನ್ಯ ಮತ್ತು ಆಲೋಚಿಸಿ ನಿಷ್ಕರ್ಷಿಸಿದ್ದನ್ನು ನಿಖರವಾಗಿ ಮಾತಿನಲ್ಲಿ ಮೂಡಿಸುವ ವಾಗ್ವ್ಯವಸಾಯಗಳೇ ಇಂಥ ಕೆಲಸಕ್ಕೆ ಆಸರೆಯಾದುವೆಂದಿದ್ದರು. ಅಲ್ಲದೆ ಅವರೇ ಒಂದೆಡೆ ಮಹಾತ್ಮಗಾಂಧಿಯವರ ಸತ್ಯಾನ್ವೇಷಣೆಯ ಶುದ್ಧಜೀವನ, ಲೋಕಮಾನ್ಯ ಬಾಲಗಂಗಾಧರ ತಿಲಕರ 'ಗೀತಾರಹಸ್ಯ'ದ ತರ್ಕಯುಕ್ತಿ, ಸ್ವಾಮಿ ರಾಮತೀರ್ಥರ ಪ್ರವಚನಗ್ರಂಥಗಳ ವಿಶುದ್ಧಾದ್ವೈತ ತತ್ತ್ವದೀಧಿತಿಗಳು ತಮ್ಮ ಜೀವಿತವನ್ನು ರೂಪಿಸಿದುವೆನ್ನುವಾಗ ಅವರ ಪಾಂಡಿತ್ಯಪಥದ ಪಾಥೇಯವು ತತ್ತ್ವ ಮತ್ತು ತರ್ಕಗಳ ಹದವುಳ್ಳ ಜೀವನಶ್ರದ್ಧೆ, ಸೌಂದರ್ಯಸಾಕಲ್ಯವೆಂಬುದು ತಿಳಿಯದಿರದು. ಜೊತೆಗೆ ಅಚುಂಬಿತ ವಿಚಾರಗಳನ್ನು ಗ್ರಹಿಸಿ ನಿರೂಪಿಸುವ ಸಾಹಸೀಪ್ರವೃತ್ತಿಯೂ ಅವರ ವೈದುಷ್ಯವಿಶೇಷತೆಗಳಲ್ಲೊಂದೆನ್ನಬಹುದು. ಜೊತೆಗೆ ಛಂದಸ್ಸು, ವ್ಯಾಕರಣ, ಭಾಷಾಶಾಸ್ತ್ರಗಳಂಥ ವಿದ್ಯೆಗಳನ್ನು ಅಭ್ಯಸಿಸುವಾಗ ಅನಿವಾರ್ಯವಾಗಿ ಉಂಟಾಗುವ ವೈಜ್ಞಾನಿಕಪ್ರಜ್ಞೆ ಅವರನ್ನು ನಿರ್ಮೋಹದಿಂದ, ಸತ್ಯೈಕಪ್ರವಣತೆಯಿಂದ ವಿಷಯಗಳ ಗ್ರಹಣ – ವಿಸ್ತರಣಗಳತ್ತ ಪ್ರೇರಿಸಿದುದೂ ಮುಖ್ಯಸಂಗತಿಯೆಂದರೆ ತಪ್ಪಾಗದು. ಹೀಗಾಗಿ ಬಹುಸಂದರ್ಭಗಳಲ್ಲಿ ಭಾಷಾಸಂಬಂಧಿಯಾದ, ಸಾಹಿತ್ಯಸಂಬದ್ಧವಾದ ಸಂಗತಿಗಳ ಶೋಧ – ಬೋಧೆಗಳು ರಾಗ – ದ್ವೇಷಗಳ ಮಬ್ಬಿನಲ್ಲಿ ಹದಗೆಡುವ ಪ್ರಮಾದವಿರಲು ಇಂಥ ಅಚಾತುರ್ಯವು ಶ್ರೀ ಸೇಡಿಯಾಪು ಅವರಲ್ಲಿ ಸಲ್ಲದಾದುವು, ನಿಲ್ಲದಾದುವು. ಅವರೇ ಮತ್ತೊಂದೆಡೆ ತಿಳಿಸಿದಂತೆ ಅವರ ಯಾವುದೇ ಬರಹ-ವಾಗಲಿ ಪ್ರಯೋಜಕವೆನಿಸಿದ ಹೊಸ ಸಂಗತಿಗಳನ್ನು ತಿಳಿಸುವುದಕ್ಕೋ, ಇರುವ ವಿಚಾರಗಳ ಪರಿಧಿವಿಸ್ತರಣಕ್ಕೋ ಅಥವಾ ಅಪವ್ಯಾಖ್ಯಾನದಿಂದ ತಪ್ಪಾಗಿ ತಿಳಿಯ-ಲ್ಪಟ್ಟ ವಿಷಯಗಳ ಪರಿಷ್ಕರಣಕ್ಕೋ ತೊಡಗಲೆಂದು ಉದ್ಯುಕ್ತವಾಗಿದೆಯಲ್ಲದೆ ಕೇವಲ ಲೇಖನರಚನಾಕಂಡೂತಿಯಿಂದ ಹೊಮ್ಮಿಲ್ಲ. ಇಂಥ ಬರವಣಿಗೆ-ಯೊಂದು ಅಸಿಧಾರಾವ್ರತ. ಇದನ್ನು ಸಾಧಿಸಬಲ್ಲವರು ಹಲವರಿಲ್ಲ. ಸೇಡಿಯಾಪು ಅವರ ಮಲ್ಲಿನಾಥೀಯ ಆದರ್ಶವೆನಿಸಿದ 'ನಾಮೂಲಂ ಲಿಖ್ಯತೇ ಕಿಂಚಿನ್ನಾನ-ಪೇಕ್ಷಿತಮುಚ್ಯತೇ' ಎಂಬ ಸೂಕ್ತ್ಯನುಸರಣೆಯು ನಿಜಕ್ಕೂ ಸಾರ್ಥಕವಾಗಿದೆ.

ಶ್ರೀ ಸೇಡಿಯಾಪು ಅವರ ಪಾಂಡಿತ್ಯದ ಪರಿಯನ್ನು ನಿರೂಪಿಸಲು ಮೊದಲಿಗೆ ಯಾವುದೇ ಶಾಸ್ತ್ರದ ಸಂಜ್ಞೆ ಮತ್ತು ಪರಿಭಾಷೆಗಳಿಗೆ ಸಂಬಂಧಿಸಿದಂತೆ ಅವರು ತೋರುವ ಕಾಳಜಿಯನ್ನು ಗಮನಿಸಬಹುದು. ಬಹುಮಟ್ಟಿಗೆ ಅವರ

ಮಹಾಶೋಧನೆಗಳೆಲ್ಲ ಮೊದಲಿಗೆ ಈ ಮೂಲಭೂತಾಂಶಗಳ ಪರಿಶುದ್ಧೀಕರಣ-ಕ್ಕಾಗಿಯೇ ಉದ್ಭವಿಸಿದುವೆನ್ನಲೂಬಹುದು. ಛಂದಃಶಾಸ್ತ್ರದಲ್ಲಿ ಲಯ ಮತ್ತು ಗತಿಗಳಿಗಿರುವ ವ್ಯತ್ಯಾಸವನ್ನು ತೋರಲೆಂದೇ ಅವರ ಉದ್ಗ್ರಕೃತಿ 'ಛಂದೋಗತಿ' ನಿರ್ಮಿತವಾದದ್ದಿಲ್ಲಿ ಸ್ಮರಣೀಯ. ಅಂತೆಯೇ ಇಲ್ಲಿ ಯತಿ, ಪ್ರಾಸ, ಖಂಡಪ್ರಾಸ, ಧಾಟಿ ಮುಂತಾದ ಹಳೆಯ ಸಂಜ್ಞೆ-ಪರಿಭಾಷೆಗಳಿಗೆ ಖಚಿತವಾದ ಲಕ್ಷಣಗಳನ್ನು ಕೊಡುವುದಲ್ಲದೆ ಅರ್ಥಯತಿ, ವಾಕ್ಯಯತಿ ಮುಂತಾದ ಅನಪೇಕ್ಷಿತ ನೂತನ ಸಂಜ್ಞೆಗಳನ್ನು ಸಾಧಾರವಾಗಿ ನಿರಾಕರಿಸುತ್ತಾರೆ. ಆದರೆ ಪದಗತಿ, ಪದ್ಯಗತಿ, ಛಂದೋಗತಿ, ಕ್ರಿಯಾಕಾಲ, ಭಾಷಾಪದಗತಿ, ಛಂದಃಪದಗತಿ, ಅಕ್ಷರಜಾತಿ, ಸಂತುಲಿತಮಧ್ಯಾವರ್ತಿಗತಿಯೇ ಮೊದಲಾದ ಅನೇಕ ಮೌಲಿಕ ನೂತನ ಸಂಜ್ಞೆಗಳನ್ನು ನಿರ್ಮಿಸಿ ಅವುಗಳ ಅನಿವಾರ್ಯತೆಯನ್ನೂ, ಪ್ರಯೋಜನವಿಶೇಷ-ವನ್ನೂ ಮನದಟ್ಟು ಮಾಡಿಕೊಡುತ್ತಾರೆ. 'ಕನ್ನಡ ಛಂದಸ್ಸು' ಕೃತಿಯಲ್ಲಿಯೂ ಸಹ ಇದೇ ರೀತಿ ಶ್ರಾವಣರೂಪ, ಚಾಕ್ಷುಷರೂಪ, ಪ್ರಕೃಷ್ಟಬಂಧ, ಸುಕುಮಾರಬಂಧ ಮುಂತಾದ ಹೊಸ ಪರಿಭಾಷೆಯನ್ನು ನೀಡುವುದಲ್ಲದೆ ವರ್ಣ, ಅಕ್ಷರ, ಕರ್ಷಣ ಮುಂತಾದ ಸಂಜ್ಞೆಗಳಿಗೂ ಖಚಿತವಾದ ಲಕ್ಷಣಗಳನ್ನು ರೂಪಿಸಿದ್ದಾರೆ. 'ಸಾಹಿತ್ಯದ ಉದ್ದೇಶ' ಎಂಬ ಲೇಖನದಲ್ಲಿ ಸಾಹಿತ್ಯ ಮತ್ತು ವಾಙ್ಮಯ ಎಂಬ ಎರಡು ಪದಗಳು ಹೇಗೆ ಭಿನ್ನ ಮತ್ತು 'ಲಿಟರೇಚರ್' ಎಂಬ ಆಂಗ್ಲಪದಕ್ಕೆ ಬಂದ ಅತಿವ್ಯಾಪ್ತಿ-ಅವ್ಯಾಪ್ತಿ ದೋಷಗಳನ್ನು ನಾವು ಹೇಗೆ ನಿವಾರಿಸಿಕೊಳ್ಳಬಹುದೆಂದು ಚರ್ಚಿಸುವಾಗ ಮತ್ತು ಈ ಪರಿಯ ಸಂಜ್ಞಾಶೋಧನೆ ಕಾಣುತ್ತದೆ. 'ಕನ್ನಡ ಭಾಷಾಸೇವೆ' ಎಂಬ ಲೇಖನದಲ್ಲಿ ಸೇವೆ ಮತ್ತು ಉದ್ಧಾರಗಳೆಂಬ ಪದಗಳ ಅರ್ಥವ್ಯಾಪ್ತಿಯನ್ನು ನಿರ್ಧರಿಸುವಾಗಲೂ ಇಂಥ ಪ್ರಜ್ಞೆಯನ್ನು ಕಾಣಬಹುದು. 'ಭಾನುಮತಿಯ ನೆತ್ತ' ಎಂಬ ಅನುಪಮ ಲೇಖನದಲ್ಲಿ ಭೂಮಿಕೆ ಮತ್ತು ಪ್ರಕೃತಿ ಎಂಬ ಎರಡು ಪಾರಿಭಾಷಿಕ ಶಬ್ದಗಳನ್ನು ಪಾತ್ರ ಎಂಬೊಂದು ಪ್ರಚಲಿತ ಅಸ್ಪಷ್ಟ ಪರಿಭಾಷೆಯೊಡನೆ ಹೋಲಿಸಿ ಇವು ಮೂರರ ನೆಲೆಗಳನ್ನು ಖಚಿತ ಪಡಿಸಿರುವುದೂ ಇಲ್ಲಿ ಸ್ಮರಣೀಯ. ಅಂತೆಯೇ 'ಶಕಟರೇಫ' ಎಂಬುದನ್ನು 'ಅಱ'ವೆಂದು ಹೆಸರಿಸಿರುವ ಹೊಸ ಪರಿಯೂ, ಱ, ಳ ಮತ್ತು ಕ್ಷಳಗಳ ಹೆಸರಿನ ಹಿಂದಿನ ಔಚಿತ್ಯವನ್ನು ಮನಗಾಣಿಸಿರುವುದೂ ಅವರ ಪ್ರಜ್ಞೆಗೆ ಸಾಕ್ಷಿ-ಯಾಗಿದೆಯೆಂದು ಅವರದೇ 'ಕನ್ನಡ ವರ್ಣಗಳು' ಗ್ರಂಥದಲ್ಲಿ ನೋಡಬಹುದು. ಇಂಥ ಇನ್ನೂ ಹತ್ತಾರು ನಿದರ್ಶನಗಳಿಗೆ ಬರವಿಲ್ಲ. ಆದರೆ ವಿಸ್ತಾರಭೀತಿ-ಯಿಂದಾಗಿ ಇಲ್ಲಿಗೇ ನಿಲ್ಲಿಸಿ ಇತರತ್ರ ಪರಿಶೀಲಿಸೋಣ.

ಸಂಜ್ಞಾ-ಪರಿಭಾಷೆಗಳ ಖಾಚಿತ್ಯದ ಬಳಿಕ ನಾವು ಲಕ್ಷಣಪರಿಷ್ಕಾರದತ್ತ ಸೇಡಿಯಾಪು ಅವರು ಹೊಂದಿದ ಕಾಳಜಿಯನ್ನು ಗಮನಿಸಬಹುದು. ಲಕ್ಷಣವನ್ನು 'ಡೆಫಿನೇಷನ್' ಎಂದು ಇಂಗ್ಲಿಷಿನಲ್ಲಿ ಹೆಸರಿಸಬಹುದು. ಯಾವುದೇ ವಿಚಾರದ ತಥ್ಯವು ಅದರ ನಿಷ್ಕೃಷ್ಟಲಕ್ಷಣದಿಂದಲ್ಲದೆ ತಿಳಿಯದು. ಆದುದರಿಂದಲೇ

ಶ್ರೀಯುತರು ನಿಖರವಾಗಿ ಲಕ್ಷಣವನ್ನು ನಿರೂಪಿಸುವಾಗ ತೋರುವ ಎಚ್ಚರ ಸರ್ವದಾ ಅನುಸಂಧೇಯ. 'ಛಂದೋಗತಿ' ಗ್ರಂಥದಲ್ಲಿ ಅಕ್ಷರವೃತ್ತಗಳ, ಮಾತ್ರಾಜಾತಿಗಳ, ತ್ರೈಸ್ವರ್ಯ ವಿಧಾನದ ಹಾಗೂ ವಿವಿಧ ಗತಿಗಳ, ಮಾತ್ರಾಜಾತಿ-ಯಲ್ಲಿ ಪ್ರಾಸಕ್ಕಿರುವ ಅಕ್ಷರಾಕಾರದ ವಿಶೇಷತೆಗಳ ಮತ್ತು ಲಯರಹಿತ ವೃತ್ತಗಳ ಲಕ್ಷಣಸ್ವಾರಸ್ಯಗಳನ್ನು ನಿರೂಪಿಸಿದ ಬಗೆಯಿಲ್ಲಿ ಸ್ಮರಣೀಯ. ಅಂತೆಯೇ 'ಕನ್ನಡ ಛಂದಸ್ಸು' ಕೃತಿಯಲ್ಲಿ ತ್ರಿಮೂರ್ತಿಗಣವಿನ್ಯಾಸದ ಎಲ್ಲ ದೇಶೀಯ ಬಂಧಗಳ ಲಕ್ಷಣಗಳನ್ನು ಅನವದ್ಯವಾಗಿ ಪ್ರತಿಪಾದಿಸಿರುವ ಕ್ರಮವೂ ಮನನೀಯ. ಇನ್ನು 'ಕನ್ನಡ ವರ್ಣ'ಗಳಲ್ಲಂತೂ ಪ್ರಾಯಶಃ ಎಲ್ಲ ವರ್ಣಗಳ ಲಕ್ಷಣೋತ್ಪತ್ತಿ ಮೀಮಾಂಸೆಯೇ ನಡೆದಿರುವ ಕಾರಣ ಪ್ರತ್ಯೇಕವಾಗಿ ಹೇಳಲೇಬೇಕಿಲ್ಲ. ಅವರ ಬಿಡಿಯಾದ ಲೇಖನಗಳಲ್ಲಿಯೂ ಈ ಬಗೆಯ ನಿರ್ದುಷ್ಟ ಲಕ್ಷಣರೂಪಣಕ್ಕೆ ಏಕಾಂಕ ನಾಟಕ, ಗಮಕಸಮಾಸ, ಪಂಚಮೀವಿಭಕ್ತಿ, ಋ ೠ ಗಳ ಸ್ವರವರ್ಣತ್ವ, ದ್ರಾವಿಡ – ಗೌಡ ವಿಚಾರ, ಸಂಬಂಧ ವಿಭಕ್ತಿ ಮುಂತಾದ ಅನೇಕ ಬರಹಗಳು ಸಾಕ್ಷಿಯಾಗಿವೆ. ಈ ಸಂದರ್ಭದಲ್ಲಿ ಶ್ರೀ ಸೇಡಿಯಾಪು ಅವರು ತಪ್ಪಾಗಿ ತಿಳಿಯ-ಲ್ಪಟ್ಟ ಅಥವಾ ಅವಗಣಿಸಲ್ಪಟ್ಟ ಇಲ್ಲವೇ ಸುಮ್ಮನೆ ಅವ್ಯಾಪ್ತಿ-ಅತಿವ್ಯಾಪ್ತಿಗಳಿಗೆ ಒಳಪಡಿಸಲ್ಪಟ್ಟ ಹಲವು ಲಕ್ಷಣಗಳನ್ನು ಸರಿಯಾದ ದಾರಿಗೆ ತಂದಿರುವ ಅನನ್ಯ-ಸಾಧಾರಣ ಯತ್ನಕ್ಕೆ ಕೇವಲ ದಿಕ್ಸೂಚಿಯಾಗಿ ಅವರ 'ಛಂದೋಗತಿ'ಯಲ್ಲಿ ಚರ್ಚಿಸಿರುವ 'ಗ್ಲಿತಿ ಸಮಾನೀ, ಲ್ಗಿತಿ ಪ್ರಮಾಣೀ, ವಿತಾನಮನ್ಯತ್' ಎಂಬ ಮೂರು ಪಿಂಗಲಚ್ಛಂದಃಸೂತ್ರಗಳ ಸೂತ್ರಾರ್ಥ ಹಾಗೂ ಲಕ್ಷಣವಿಮರ್ಶೆಯನ್ನು ನೆನಪಿಸಿದರೆ ಸಾಕು.

ಶ್ರೀ ಸೇಡಿಯಾಪು ಕೃಷ್ಣ ಭಟ್ಟರಿಗೆ ಸಂಜ್ಞೆ, ಪರಿಭಾಷೆ ಮತ್ತು ಲಕ್ಷಣಗಳ ಒಪ್ಪದಂತೆಯೇ ಪ್ರಾಚೀನರು ಶುದ್ಧವಾಗಿ ಉಳಿಸಿಕೊಂಡ ಶಬ್ದರೂಪಗಳನ್ನು-ವಿಶೇಷತಃ ಶಾಸ್ತ್ರೀಯ ಚರ್ಚೆಗೆ ಬಳಕೆಯಾಗುವ ಪ್ರಮುಖ ಪಾರಿಭಾಷಿಕ ಶಬ್ದಗಳನ್ನು ಅವುಗಳ ಎಲ್ಲ ಗಹನತೆ ಮತ್ತು ಸಂಕೀರ್ಣತೆಗಳ ಸಾಕಲ್ಯದೊಂದಿಗೆ ವಾಡಿಕೆಗೆ ತರಬೇಕೆಂಬ ಇರಾದೆಯೂ ಇತ್ತು. ಹೀಗಾಗಿಯೇ ಅವರು ಓಜಪಾದ, ಯುಕ್ಪಾದ, ತ್ರಿಮೂರ್ತಿಗಣ, ಭೂಮಿಕೆ, ಪ್ರಕೃತಿ, ಧಾಟಿ, ಕರಾಸ್ಫಾಲ ಮುಂತಾದ ಅನೇಕ ಪದಗಳನ್ನು ಹದವರಿತು ಬಳಸಿದ್ದಾರೆ. ಅಲ್ಲದೆ ಕುಂಸಾರು, ಬಾರೂದು, ಶಿಕಸ್ತು, ಮದಿಮ್ಮೆ > ಮದುವೆ ಎಂಬಿವೇ ಮೊದಲಾದ ರೂಢಿಯಲ್ಲಿಲ್ಲದ ಲೋಕಪ್ರಚುರ ಶಬ್ದಗಳನ್ನೂ ಮರುಕಳಿಸಿಕೊಟ್ಟಿದ್ದಾರೆ. ಅಲ್ಲದೆ ಶಾಸ್ತ್ರೀಯ ರೀತಿ-ಯಲ್ಲಿ ಅನೇಕ ಗಂಭೀರಪದಗಳನ್ನು ಟಂಕಿಸಿರುವುದಲ್ಲದೆ ಲಘುಧಾಟಿಯ-ವಾದರೂ ಸ್ವಾರಸ್ಯವುಳ್ಳ ಕುರ್ಜಿಗೆ, ಸೈಕೋಲಜ್ಜಿ, ಪಿಕ್ಕಾಸಿನ ಕಲೆ, ಕತ್ರಿ ಮುಂತಾದ ಶಬ್ದಗಳನ್ನೂ ನಿರ್ಮಿಸಿದ್ದಾರೆ. ಅವರ ಶಬ್ದಕಲ್ಪದಲ್ಲಿ ಸರ್ವದಾ ನಾವು ಓರ್ವ ಪ್ರಬುದ್ಧ ನೈಘಂಟುಕನನ್ನು ಸುಲಭವಾಗಿ ಕಾಣಬಹುದಲ್ಲದೆ ಸಂಸ್ಕೃತಿ ಮತ್ತು ಶಾಸ್ತ್ರಪರ್ಯವೇಕ್ಷಕನನ್ನೂ ಗುರುತಿಸಬಹುದು.

ಇನ್ನು ಅವರ ವಾಕ್ಯರಚನೆ, ಅಭಿವ್ಯಕ್ತಿಮಾರ್ಗಗಳಂತೂ ಅನವದ್ಯವೆಂದರೆ ಅಲ್ಪವಾದೀತು, ಆದರ್ಶವೆನ್ನಬೇಕು. ಕನ್ನಡಭಾಷೆಯಲ್ಲಿ ಶಾಸ್ತ್ರೀಯವಾಗಿ ವಿಚಾರ-ಗಳನ್ನು ವೈಜ್ಞಾನಿಕ ನಿಷ್ಕರ್ಷೆಯಿಂದಲೂ, ರಮಣೀಯ ಸ್ಫುರಣೆಯಿಂದಲೂ ತಿಳಿಸುವುದರಲ್ಲಿ ಡಿ. ವಿ. ಜಿ. ಹಾಗೂ ಸೇಡಿಯಾಪು ಅವರೇ ಆಚಾರ್ಯ ಪುರುಷರೆನ್ನಬೇಕು. ವಿಷಯದ ಗಹನತೆಯನ್ನು ಎಂದೂ ಅನವಶ್ಯವಾಗಿ ತೆಳು-ಗೊಳಿಸದೆ, ಅವಹಿತನಾಗಿ ಅಭ್ಯಸಿಸುವ ಜಿಜ್ಞಾಸುವಿಗೆ ಎಳ್ಳಷ್ಟೂ ಗೊಂದಲವೆನಿಸದೆ ನೂತನೋದಾರಸಂಗತಿಗಳನ್ನು ಅಭಿವ್ಯಕ್ತಿಸುವ ಕಲೆಯ ಬಲ್ಲಿದರವರು. ಅಸ್ಪಷ್ಟತೆ, ಅಸಮರ್ಪಕತೆ ಮತ್ತು ಅನವಶ್ಯವಿಸ್ತಾರಗಳು ಅವರಲ್ಲಿ ಎಂದೂ ಕಾಣದ ಅಂಶಗಳು. ಇದಕ್ಕೆ ಕಾರಣ ಶ್ರೀ ಸೇಡಿಯಾಪು ಓದುಗನನ್ನೂ, ವಿದ್ಯೆಯನ್ನೂ ಗೌರವಿಸಿ, ಅಭಿವ್ಯಕ್ತಿಯ ಎಲ್ಲೆಯನ್ನು ಪರಿಭಾವಿಸಿ ಇವೆರಡನ್ನೂ ಅನ್ವಿತಗೊಳಿಸುವ ವ್ರತವನ್ನು ತಮ್ಮದನ್ನಾಗಿಸಿಕೊಂಡದ್ದೇ! ತಮ್ಮ ಪತ್ರಗಳಲ್ಲೊಂದೆಡೆ ಅವರು ವಿಷಯಗಳ ಸ್ಪಷ್ಟೀಕರಣಕ್ಕೆ ತೊಡಕಾದೀತೆಂದು ಅದೆಷ್ಟನ್ನೋ ಪಕ್ಕಕ್ಕಿಡುವ, ಮತ್ತೆಷ್ಟನ್ನೋ ವಿಸ್ತರಿಸಿ ಹೇಳುವ, ಬಿಡಿಸಿ ಬಿಡಿಸಿ ಬಣ್ಣಿಸುವ ಕೆಲಸಕ್ಕೆ ತೊಡಗಬೇಕಾಯಿತೆಂದು ತಿಳಿಸಿರುವುದು ಅವರ ಅಭಿವ್ಯಕ್ತಿ ಪ್ರಾಮಾಣಿಕತೆಗೂ, ವಿಷಯವಿಶದೀಕರಣ ನಿಷ್ಠೆಗೂ, ಶಾಸ್ತ್ರಶುದ್ಧಿಗೂ ಸೂರ್ಯಸಾಕ್ಷಿ.

ಎಲ್ಲ ಶಾಸ್ತ್ರಗಳಲ್ಲಿಯೂ ವ್ಯಾಕರಣವು ಹಿರಿದು. ಅಂತೆಯೇ ಆನಂದ-ವರ್ಧನನಂಥ ಸರ್ವಶಾಸ್ತ್ರನಿಷ್ಣಾತನಾದ ಕಾವ್ಯಮೀಮಾಂಸಕನೂ ವೈಯಾಕರಣ-ರನ್ನು ಪ್ರಥಮಪಂಕ್ತಿಯ ವಿದ್ವಾಂಸರೆಂದು ಗೌರವಿಸಿದ್ದಾನೆ. ಭೌತಾದಿ ವಿಜ್ಞಾನ ಶಾಸ್ತ್ರಗಳ ಮಾರ್ಗ ಗಣಿತವಾದರೆ ಇಡಿಯ ಮನುಕುಲದ ಆಲೋಚನೆಯ ಮಾರ್ಗವಾದ ಭಾಷೆಯೇ ವ್ಯಾಕರಣದ ಸಂಪುಟದಲ್ಲಿದೆಯೆಂದರೆ ಈ ಶಾಸ್ತ್ರದ ಮಹತ್ತ್ವ ಎಷ್ಟೆಂದೂ, ಇದರ ನಿಷ್ಕರ್ಷೆಯ ಹಿರಿಮೆ ಮತ್ತೆಷ್ಟೆಂದೂ ತಿಳಿಯ-ದಿರದು. ಇಂಥ ಶಾಸ್ತ್ರದಲ್ಲಿ ಪ್ರವೀಣನಾಗದವನು ಭಾಷೆ ಮತ್ತು ಸಂಸ್ಕೃತಿಗಳ ಕ್ಷೇತ್ರದಲ್ಲಿ ಏನನ್ನೂ ಮಾಡಲಾರ. ಈ ವಿದ್ಯೆಗೆ ತುಂಬ ಪೂರಕವಾದದ್ದು ವಿಶುದ್ಧ ತಾರ್ಕಿಕಪ್ರಜ್ಞೆ. ಶ್ರೀ ಸೇಡಿಯಾಪು ಸ್ವಯಮಾಚಾರ್ಯಪದ್ಧತಿಯಿಂದ ಕನ್ನಡ ವ್ಯಾಕರಣವನ್ನು ಕೂಲಂಕಷವಾಗಿ ತಿಳಿದದ್ದಲ್ಲದೆ ಸಂಸ್ಕೃತ ವ್ಯಾಕರಣದ ಉತ್ತಮ ಪರಿಚಯವನ್ನೂ ಪಡೆದಿದ್ದರು. ಇದಕ್ಕೆ ಪುಟವಿಟ್ಟಂತೆ ಅಸಾಧಾರಣ ತಾರ್ಕಿಕ-ನೈಶಿತ್ಯವನ್ನು ಅನುಪಮಾನ ಪದ್ಧತಿಯಲ್ಲಿ ಹೊಂದಿದ್ದರು. ಹೀಗಾಗಿಯೇ 'ಕಾಣಾ-ದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಂ' ಎಂಬ ಮಾತಿನ ಸಾರ್ಥಕ್ಯಕ್ಕೆ ಇವರಲ್ಲಿ ಅವಕಾಶವಿತ್ತು. ನಿಜ, ಸೇಡಿಯಾಪು ನ್ಯಾಯ'ಶಾಸ್ತ್ರ'ವನ್ನು ಅಭ್ಯಸಿಸಿರ-ಲಿಲ್ಲ. ಆದರೆ ಪ್ರಮಾಣ-ಪ್ರಮೇಯ-ಹೇತ್ವಾಭಾಸ-ನಿಗ್ರಹಸ್ಥಾನಾದಿ ಸಮಸ್ತ ನ್ಯಾಯಶಾಸ್ತ್ರವಿಚಾರಗಳೂ ಅವರಿಗೆ ತತ್ತ್ವತಃ ಅಳವಟ್ಟ ವಿದ್ಯೆಗಳೇ ಆಗಿದ್ದವು. ಅವರೊಬ್ಬ ತರ್ಕವನ್ನೋದದ ತಾರ್ಕಿಕರೆಂದರೂ ನಡೆದೀತು. ಆದರೆ ಅವರ ತರ್ಕಪದ್ಧತಿಯು ಅನುಭವಪರಿಷ್ಕೃತವಾಗಿದ್ದುದಲ್ಲದೆ ಅಂತರ್ವಾಣಿಯ ಆತ್ಮ-

ಸಾಕ್ಷ್ಯವನ್ನೂ ಒಪ್ಪಿದ ಕಾರಣ ವೇದಾಂತಸೌರಭಸಮಂಚಿತವಾಗಿತ್ತು. ಹೀಗಾಗಿ ಅದು ಅಪ್ರತಿಷ್ಠಿತವೂ, ವಾಚಾರಂಭಣವೂ ಆಗದೆ ಸದಾ ಸಮ್ಮತವೆನಿಸಿತ್ತು. ಅವರ ತರ್ಕಶುದ್ಧ ವ್ಯಾಕರಣವಿವೇಕದಿಂದಾಗಿಯೇ ಅವರಿಗೆ ಭಟ್ಟಾಕಳಂಕನು ಕನ್ನಡದ ನೆಚ್ಚಿನ ವೈಯಾಕರಣನೆನಿಸಿದ್ದ. ಆತನ ಇತಿ–ಮಿತಿಗಳನ್ನವರು ಬಲ್ಲವರಾಗಿದ್ದರೂ ಅವನ ತರ್ಕಖಾಚಿತ್ಯಕ್ಕೆ ಬೆಲೆಯಿತ್ತಿದ್ದರು. ಇದೇ ರೀತಿ ತಿಲಕರ ಗೀತಾರಹಸ್ಯ–ವನ್ನೂ ಅವರು ಪ್ರತಿಪಾದನವಿಧಾನಕ್ಕಾಗಿ ಮೆಚ್ಚಿದ್ದರು. ಒಟ್ಟಿನಲ್ಲಿ ಇತರ ಸಾಮಾನ್ಯ ವೈಯಾಕರಣರಿಗಿಂತ ಸೇಡಿಯಾಪು ಅವರು ವಿಶಿಷ್ಟರಾಗಿದ್ದುದಕ್ಕೆ ಅವರ ಸುನಿಶಿತ ತರ್ಕಪ್ರಜ್ಞೆ ಒಂದು ಮುಖ್ಯ ಹೇತು.

ಇನ್ನು ಮುಂದೆ ಪ್ರಮಾಣಗಳ ವಿಷಯವನ್ನು ಗಮನಿಸಬಹುದು. ಶ್ರೀ ಸೇಡಿಯಾಪು ತಮ್ಮ ಯಾವ ಚಿಂತನೆಗಾಗಲಿ, ಬರಹಕ್ಕಾಗಲಿ ಮೂಲಭೂತವೂ ನಿರ್ವಿವಾದವೂ ಆದ ಪ್ರಮಾಣಗಳನ್ನು ಅವಲಂಬಿಸುತ್ತಿದ್ದರು. ವಿಜ್ಞಾನಿಯಂತೆ ಪ್ರಕೃತಿಯನ್ನು ಪ್ರತ್ಯಕ್ಷದಿಂದ ಅರಿತು ನಡೆಸುವ ಸಂಶೋಧನೆ ಅವರದಲ್ಲದ ಕಾರಣ ಅವರು ಸಹಜವಾಗಿಯೇ ಶಬ್ದಪ್ರಮಾಣ(ಆಪ್ತವಾಕ್ಯ ಪ್ರಮಾಣ)ವನ್ನು ಆಧರಿಸುವ ವರ್ಗದವರು. ಆದರೆ ಇಲ್ಲಿಯೂ ಅವರ ಪ್ರತ್ಯಕ್ಷಪರಿಶೀಲನದಿಂದ ಬಂದ ಬಹಿರಿಂದ್ರಿಯಾನುಭವಗಳು ವಿಪುಲಸಹಾಯವನ್ನು ನೀಡಿರುವುದಕ್ಕೆ 'ಕೆಲವು ದೇಶನಾಮಗಳು' ಗ್ರಂಥದಲ್ಲಿ 'ಪಾಂಡಿ' ಎಂಬ ಶಬ್ದವು ಪಾಂಡ್ಯ ರಾಜವಂಶಕ್ಕೆ ಮೀಟುಗೋಲಾಗಿ ವರ್ತಿಸಿರುವ ಒಂದೇ ಸಾಕ್ಷಿ ಸಾಕು. ಲೋಕರೂಢಿಯ ಅನೇಕ ಶಬ್ದಗಳು, ಆಡುನುಡಿಯ ಹತ್ತಾರು ಮಾತುಗಳು, ವ್ಯವಹಾರದ ನೂರಾರು ವಾರ್ತಾವಿಚಾರಗಳು ಅವರಿಗೆ ಶಬ್ದಪ್ರಮಾಣಪೋಷಕ–ವಾಗಿ, ಅನುಮಾನಪ್ರಮಾಣದಲ್ಲಿ ನಿಗಮನಾನುಕೂಲವಾಗಿ ಪರಿಣಮಿಸಿರುವುದನ್ನು ಅವರ ಬಹುಮಟ್ಟಿನ ಕೃತಿಗಳಲ್ಲೆಲ್ಲ ಕಾಣಬಹುದು. ಯಾವುದೋ ಪ್ರವಾಸದಲ್ಲಿ ಕಂಡದ್ದು, ಮತ್ತಾವುದೋ ಪತ್ರಿಕೆಯಲ್ಲಿ ನೋಡಿದ್ದು, ಇನ್ನಾವುದೋ ಸಂಭಾಷಣೆ–ಯಲ್ಲಿ ನುಸುಳಿದ್ದು – ಹೀಗೆ ಕಣಶಃ ದೊರೆತ ಸಂಗತಿಗಳನ್ನೆಲ್ಲ ತಮ್ಮ ಪ್ರಮಾಣಾನುಕೂಲಿಯಾಗಿ ಬಳಸಿಕೊಳ್ಳುತ್ತಿದ್ದದ್ದಲ್ಲದೆ ತಮ್ಮ ಬಾಲ್ಯದ ಘಟನೆಗಳು, ಕರಾವಳಿಯ ಜನಜೀವನ – ಸಂಸ್ಕೃತಿ ಮುಂತಾದುವನ್ನೂ ಯಥಾವಸರವಾಗಿ ದೃಷ್ಟಾಂತ, ಉಪಮಾನಾದಿ ಪ್ರಮಾಣಗಳಿಗೆ ಆಯ್ದುಕೊಳ್ಳುತ್ತಿದ್ದುದು ಗಮನಾರ್ಹ (ಅವರು 'ಭಾನುಮತಿಯ ನೆತ್ತ'ದಲ್ಲಿ ಪ್ರಸ್ತಾವಿಸುವ ಒಂಟಿಕಿವಿಯ ಅಶ್ವಮೇಧದ ಕುದುರೆ, 'ತಥ್ಯದರ್ಶನ'ದಲ್ಲಿ ಉದಾಹರಿಸುವ ಆರ್ಯಕೋಣಗಳು, ಬಿಲ್ಲವ–ಬೈದ್ಯ–ನಾಡವ–ಬಂಟ ಮುಂತಾದ ಜಾತಿಗಳು ಇಲ್ಲಿ ದಿಗ್ದರ್ಶನಕ್ಕಾಗಿ ಸ್ಮರಣೀಯವಾಗಿವೆ.) ಜೊತೆಗೆ ಆಕಾಶವಾಣಿಯಂಥ ಸಾಧನವನ್ನೂ ವಿವಿಧ ಪ್ರಾಂತಗಳ ಭಾಷೋಚ್ಚಾರಣೆ, ಗೇಯಪದ್ಧತಿ, ವಿಚಾರಸಂಪಾದನೆಗಾಗಿ ಬಳಸಿ–ಕೊಳ್ಳುವುದನ್ನು ಅರಿತಾಗ ನಮಗೆ ವಿಸ್ಮಯವಾಗದಿರದು. ವಿಶೇಷತಃ ಅವರ 'ಛಂದೋಗತಿ'ಯಲ್ಲಿಯೂ, 'ತಥ್ಯದರ್ಶನ'ದಲ್ಲಿಯೂ ಈ ಬಗೆಯ ವಿನಿಯೋಗಗಳ

ಪ್ರಯೋಜನ ದರ್ಶನೀಯವಾಗಿದೆ. ಇವೆಲ್ಲದರ ಜೊತೆಗೆ ಅದ್ವೈತಿಗಳು ಅತಿ-ಶಯವಾಗಿ ಆಧರಿಸಿರುವ ಸಾರ್ವತ್ರಿಕಾನುಭವದಂಥ ಅಂತರಂಗಪ್ರಮಾಣವನ್ನು ಸಹ ಸೇಡಿಯಾಪು ಅವರು ಅಲ್ಲಲ್ಲಿ ಬಳಸಿದ್ದಾರೆ. ಈ ಅಂಶವು ಸೌಂದರ್ಯ, ರಸಾನುಭವ, ಛಂದೋಮಾಧುರ್ಯ, ಈಶ್ವರಾಸ್ತಿತ್ವ ಮುಂತಾದ ಆಧ್ಯಾತ್ಮಿಕ ಸಂಗತಿ-ಗಳ ಪ್ರಸ್ತಾವದಲ್ಲಿ ಸಹಜವಾಗಿಯೇ ಬಂದಿದೆ. ವಸ್ತುತಃ ಶ್ರೀ ಸೇಡಿಯಾಪು ಕೃಷ್ಣ ಭಟ್ಟರು 'ಆರ್ಯ'ವೆನಿಸಿದ ಮನಸ್ಸನ್ನುಳ್ಳ ಸಜ್ಜನರಾಗಿದ್ದುದರಿಂದ ಅವರ ಅಂತಃ-ಕರಣಪ್ರವೃತ್ತಿಗಳ ಪ್ರಾಮಾಣ್ಯ ಎಲ್ಲ ಋಜುಬುದ್ಧಿಗಳಿಗೂ ಅಂಗೀಕಾರ್ಯವಾಗಿದೆ.

ಯಾವುದೇ ತಾತ್ಪರ್ಯವನ್ನು ಗ್ರಹಿಸುವುದರಲ್ಲಿ, ತಮ್ಮ ಯಾವುದೇ ವಿಚಾರದ ಸಾರವನ್ನು ಕೊಡುವುದರಲ್ಲಿ ಸೇಡಿಯಾಪು ತೋರುತ್ತಿದ್ದ ಪರಿಷ್ಕಾರವು ಷಡ್ಲಿಂಗಗಳಿಂದ ವಾಕ್ಯಾರ್ಥವೊಂದನ್ನು ನಿರ್ಧರಿಸಿ ತಾತ್ಪರ್ಯವೃತ್ತಿಯನ್ನು ಹೊರಡಿಸುವ ಮೀಮಾಂಸಕರ ದಕ್ಷತೆಗೆ ಇನಿತೂ ಕೊರೆಯಾಗದ ಶಕ್ತಿಯೇ ಸರಿ. ಮೀಮಾಂಸಾಶಾಸ್ತ್ರದ ಪರಿಭಾಷೆಗಳಿಲ್ಲದೆಯೇ ಆ ಶಾಸ್ತ್ರಪರಿಷ್ಕಾರಪದ್ಧತಿಯು ಇವರದಾಗಿತ್ತೆನ್ನಬಹುದು.

ಇನ್ನು ಮುಂದೆ ಶ್ರೀ ಸೇಡಿಯಾಪು ಅವರ ನಿರುಕ್ತಿಶಕ್ತಿಯನ್ನು ಗಮನಿಸ-ಬಹುದು. ಇದಂತೂ ಅವರ ಸಾಮರ್ಥ್ಯಶಿಖರವೆನ್ನಬಹುದು. ಅವರೇ ಒಂದೆಡೆ ಹೇಳಿಕೊಂಡಂತೆ ವ್ಯಾಕರಣವಿರುದ್ಧವಾದ ನಿರುಕ್ತವು ಅಶಾಸ್ತ್ರೀಯ, ನಿರುಕ್ತವು ವ್ಯಾಕರಣದ ಪೂರಕಸಾಮಗ್ರಿ(ಇದನ್ನು ಯಾಸ್ಕನೇ ಒಪ್ಪಿದ್ದಾನೆ)ಯಾದುದರಿಂದ ಅವರ ಶಬ್ದಾರ್ಥಗವೇಷಣಲ್ಲಿ ಮಿಂಚುವ ನೈರುಕ್ತಿಕ ಪ್ರಜ್ಞೆಯು ವ್ಯಾಕರಣ ಸಂಮತವಾಗಿದೆಯಲ್ಲದೆ ಎಂದೂ ಅಡ್ಡದಾರಿ ಹಿಡಿದಿಲ್ಲ. ಜೊತೆಗೆ ಈ ಬಗೆಯ ಚಿಂತನೆಗಳಲ್ಲಿ ಅವರ ಭಾಷಾಶಾಸ್ತ್ರೀಯ ಪ್ರೌಢಿಮೆ ಮತ್ತು ತೌಲನಿಕ ಭಾಷಾ ಶಾಸ್ತ್ರಾಧ್ಯಯನಗಳೂ ಹದವಾಗಿ ಬೆರೆತಿವೆ. ಇಲ್ಲಿಯೂ ಸಹ ಅವರು ನವ್ಯೋ-ತ್ಸಾಹಿಗಳಂತೆ ವ್ಯಾಕರಣ ಮತ್ತು ಭಾಷಾಶಾಸ್ತ್ರಗಳಿಗೆ ಆಗರ್ಭವೈರವನ್ನು ಕಾಣದೆ ಪರಸ್ಪರ ಪೂರಕವಾಗಿ ಬಳಸಿಕೊಂಡಿದ್ದಾರೆ. ಈ ಬಗೆಯ ಸ್ಪಷ್ಟೀಕರಣದ ಆವಶ್ಯಕತೆ ಏಕೆಂದರೆ ನಮ್ಮಲ್ಲಿ ಹಲವರು ವಿದ್ವಾಂಸರು ವ್ಯಾಕರಣನಿರಪೇಕ್ಷ ನಿರುಕ್ತವನ್ನೂ, ವ್ಯಾಕರಣವಾಸನಾಚ್ಯುತ ಭಾಷಾಶಾಸ್ತ್ರವನ್ನೂ ಪರಿವೆಯಿಲ್ಲದೆ ಬಳಸಿ ವೇದಾರ್ಥ-ನಿರ್ಣಯಕ್ಕೂ, ವೇದಸಂಸ್ಕೃತಿನಿರ್ಣಯಕ್ಕೂ ಹೊರಟು ಅತಿರೇಕದ ವಿಕಾರ-ಗಳಿಗೂ, ಸತ್ಯದೂರ 'ಸಿದ್ಧಾಂತ'ಗಳಿಗೂ ಕಾರಣವಾಗಿದ್ದಾರೆ. ಆದರೆ ಸೇಡಿಯಾಪು ಎಂದಿಗೂ ಈ ಪ್ರಮಾದಗಳನ್ನೆಸಗದೆ ದಿಟವಾದ ಸಂಶೋಧಕರೆನಿಸಿದ್ದಾ-ರೆಂಬುದನ್ನು ಒತ್ತಿ ಹೇಳಬೇಕಿದೆ.

ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ನಿರುಕ್ತಿಸ್ವಾರಸ್ಯಗಳು ಅವರ ಗ್ರಂಥ-ಗಳಲ್ಲಿಯೂ ಲೇಖನಗಳಲ್ಲಿಯೂ ಬಹುತ್ರ ಬಂದಿವೆ. ಉಪಜಾತಿ, ಖಂಡಪ್ರಾಸ, ಸೀಸ ಮುಂತಾದ ಅನೇಕ ಶಬ್ದಗಳ ಬಗ್ಗೆ ಅವರ ಲೇಖನಗಳಲ್ಲಿ, ಗ್ರಂಥಗಳಲ್ಲಿ ನಿರುಕ್ತಿಯು ಗಚ್ಚಿದ್ರೂಪವಾಗಿ ಬಂದಿರುವುದಲ್ಲದೆ ಹಲವಾರು ಲೇಖನಗಳೂ

ಎರಡು ಮುಖ್ಯ ಗ್ರಂಥಗಳೂ ಕೆಲವು ಶಬ್ದನಿರುಕ್ತಿಗಳಿಗಾಗಿಯೇ ಉದಿಸಿವೆ. ತಾಲಿ, ಇಡ್ಲಿ, ತುಳು, ಕೊಂಕಣ, ಚೇರ, ಕೇರಳ, ಪಾಂಡಿಚೇರಿ, ಕೊಂಕ, ಕೊಡಿಯಾಲ, ಆಳುಪ, ಮರೆ, ಆರ್ಯ, ದ್ರಾವಿಡ, ಗೌಡ, ವರ್ಣ, ಜಾತಿ, ಲಿಂಗ, ದಸ್ಯು, ತ್ರಯೀ, ಬ್ರಾಹ್ಮಣ, ಸರಸ್ವತೀ, ದೃಷದ್ವತೀ ಮುಂತಾದ ಅನೇಕ ಶಬ್ದಗಳ ವ್ಯಾಪಕವೂ ತಲಸ್ಪರ್ಶಿಯೂ ಆದ ಖಚಿತ ನಿರುಕ್ತಿ ಇಲ್ಲಿ ತುಂಬಿ ತುಳುಕಿದೆ. ವಿಶೇಷತಃ ಅವರು ಆರ್ಯ ಮತ್ತು ದ್ರಾವಿಡ ಶಬ್ದಗಳಿಗೂ, ಆರ್ಯಾವರ್ತ, ಬ್ರಹ್ಮಾವರ್ತ, ಗೌಡದೇಶ, ಪಂಚದ್ರಾವಿಡಬ್ರಾಹ್ಮಣವರ್ಗಾದಿ ಸಂಗತಿಗಳಿಗೂ ನೀಡಿರುವ ನಿರುಕ್ತಿ, ಸಲ್ಲಿಸಿರುವ ಯಥಾರ್ಥಸ್ವರೂಪದರ್ಶನವು ಅನಿತರಸಾಧಾರಣ. ಕೇವಲ ಅವರ ಆರ್ಯ, ದ್ರಾವಿಡ, ಲಿಂಗ, ಪಾಂಡ್ಯ ಮತ್ತು ತ್ರಯೀ ಶಬ್ದಗಳ ನಿರ್ವಚನವೇ ಸಾಕು; ಅವರನ್ನು ವಿಶ್ವದ ಭಾಷಾ-ಸಾಂಸ್ಕೃತಿಕ ಐತಿಹಾಸಿಕ ಶೋಧಪ್ರಪಂಚದಲ್ಲಿ ಶಾಶ್ವತ ಕೀರ್ತಿಶಾಲಿಗಳನ್ನಾಗಿ ನಿಲ್ಲಿಸುತ್ತದೆ. ಅಪವಾದಾಸ್ಪದವಾಗಿ ಸರಸ್ವತೀಶಬ್ದದ ನಿರ್ವಚನದಲ್ಲಿಯೋ, ಆ ನದಿಯ ಹರಿವಿನ ದಿಕ್ಕಿನ ಬಗೆಗೋ ಒಂದಿಷ್ಟು ಪರಿಷ್ಕಾರಕ್ಕೆ ಆಸ್ಪದವಿದೆಯೆಂಬುದನ್ನುಳಿದರೆ ಶ್ರೀ ಸೇಡಿಯಾಪು ಅವರು ಆರ್ಯಾ-ವರ್ತ ಹಾಗೂ ಬ್ರಹ್ಮಾವರ್ತಗಳ ನೆಲೆಯನ್ನು ನಿರ್ಧರಿಸಿರುವುದೂ, 'ಆರ್ಯ'ರ ಭಾರತೀಯ ಮೂಲವನ್ನು ಸ್ಥಾಪಿಸಿರುವುದೂ, ದ್ರಾವಿಡದೇಶದ ವಾಸ್ತವಾರ್ಥ-ವನ್ನು ನಿರ್ಣಯಿಸಿರುವುದೂ ಅನುಪಮಶೋಧನೆ, ಅನನ್ಯಸಾಧನೆ. ವೈಯಕ್ತಿಕವಾಗಿ ನನಗೆ ವಿಸ್ಮಯವೆನಿಸುವ ಸಂಗತಿಯೇನೆಂದರೆ ವೃದ್ಧರೂ, ಅಂಧರೂ, ರುಗ್ಣರೂ ಆಗಿ ಅಸಹಾಯಸ್ಥಿತಿಯಲ್ಲಿ ಹಾಸಿಗೆ ಹಿಡಿದು ಮಸ್ತಕೈಕಾವಲಂಬನರಾಗಿದ್ದ ಶ್ರೀ ಸೇಡಿಯಾಪು ತಮ್ಮ ತೊಂಬತ್ತನೆಯ ಹಣ್ಣು ವಯಸ್ಸಿನಲ್ಲಿ ಈಚೆಗಷ್ಟೇ ಅತ್ಯಾಧು-ನಿಕ ಪರಿಕರಗಳಾದ ಕಂಪ್ಯೂಟರ್, ಉಪಗ್ರಹ ಛಾಯಾಚಿತ್ರ, ಅತ್ಯಂತ ಸುಸಜ್ಜಿತ ಪ್ರಯೋಗಾಲಯ, ಗ್ರಂಥಭಂಡಾರಗಳೊಡನೆ ವಿದ್ವತ್ಸಮಾಲೋಚನೆ, ಕ್ಷೇತ್ರ-ಸಮುತ್ಖನನ, ರೇಡಿಯೋ ಕಾರ್ಬನ್ ಡೇಟಿಂಗ್, ಗಣಿತ ಶಾಸ್ತ್ರೇತಿಹಾಸ, ಲೋಹಸಂಸ್ಕರಣ, ಭೂಗರ್ಭಶಾಸ್ತ್ರ, ಪರ್ಯಾವರಣಶಾಸ್ತ್ರ, ಪುರಾತತ್ತ್ವಪ್ರಕ್ರಿಯೆ-ಗಳೇ ಮುಂತಾದ ಅನೇಕ ಸೌಲಭ್ಯಗಳೊಡನೆ ಹಲವು ಹತ್ತು ಜನ ವಿದ್ವಾಂಸರು ಆರ್ಯ ಸಮಸ್ಯೆಯ ಬಗ್ಗೆ ತಲೆಕೆಡಿಸಿಕೊಂಡು ನಡೆಸಿದ ಸಂಶೋಧನೆಗಳಿಗೆ ಹೊಯ್ - ಕೈಯಾಗಿ, ಅವರ ಅನ್ವೇಷಣೆಗಳಿಗೆ ಅದ್ಭುತವಾದ ಭಾಷಾಶಾಸ್ತ್ರೀಯ ಸಮರ್ಥನೆಯಾಗಿ ರೂಪಿಸಿರುವ 'ತಥ್ಯದರ್ಶನ' ಮಹಾಗ್ರಂಥ. ಈ ಒಂದು ಉತ್ತಮೋತ್ತಮ ಸಂಶೋಧನೆಯ ಬೆಲೆಯನ್ನು ತೀರ ಇತ್ತೀಚಿನ ಅತ್ಯಂತ ಪ್ರೌಢ-ಸ್ತರದ ಸಂಶೋಧನೆಗಳ ಫಲಗಳನ್ನರಿತವರೂ, ಅನೇಕ ಶಾಸ್ತ್ರಗಳಲ್ಲಿ ನುರಿತವರೂ ತಿಳಿಯಬಹುದಲ್ಲದೆ ಹುಸಿ ಸೆಕ್ಯುಲರಿಸ್ಟುಗಳೂ, ಸ್ವಯಂಘೋಷಿತ ಬುದ್ಧಿಜೀವಿ-ಗಳೂ, ಪ್ರಾಜ್ಞಂಮನ್ಯ ಸಾಹಿತಿಗಳೂ ಅರಿಯಲಾರರು.

ಇಂಥ ಅಪ್ರತಿದ್ವಂದ್ವ ಮೇಧೆಯಿಂದಾಗಿಯೇ ಶ್ರೀ ಸೇಡಿಯಾಪು ಆನಂದ-ವರ್ಧನನ ಧ್ವನ್ಯಾಲೋಕಕ್ಕೆ ಕಾವ್ಯಮೀಮಾಂಸಾಕ್ಷೇತ್ರದಲ್ಲೆಂಥ ಆಚಾರ್ಯಸ್ಥಾನ-

ವುಂಟೋ ಅಂಥ ಬೆಲೆಯುಳ್ಳ 'ಛಂದೋಗತಿ'ಯೆಂಬ ಛಂದೋಮೀಮಾಂಸೆಯ ಮಹಾಕೃತಿಯನ್ನು ನಿರ್ಮಿಸಲು ಸಾಧ್ಯವಾಯಿತು; ಪಂಚಮೀವಿಭಕ್ತಿ, ಯಕ್ಷಗಾನದ ಸ್ತ್ರೀವೇಷ, ಭಾನುಮತಿಯ ನೆತ್ತ, ಹೊಸಗನ್ನಡ ಗದ್ಯಭಾಷೆ, ಸೌಂದರ್ಯ, ಹೊಸ ಗನ್ನಡ ಪದ್ಯಕವಿತೆ, ಏಕಾಂಕನಾಟಕ, ಪದಭೇದಗಳು ಎಂಬಿವೇ ಮೊದಲಾದ ಉತ್ಕೃಷ್ಟ ಲೇಖನತಲ್ಲಜಗಳನ್ನು ರಚಿಸಲು ಸಾಧ್ಯವಾಯಿತು. ಶ್ರೀ ಶಂಕರಾಚಾರ್ಯರ ಬಗೆಗೆ ಬರೆದ ಅವರ ಆರಂಭಿಕ ಲೇಖನವೊಂದೇ ಸಾಕು, ಸೇಡಿಯಾಪು ತಮ್ಮ ಚಿಕಿತ್ಸಕ ಬುದ್ಧಿಯಿಂದ ವಾಸ್ತವವನ್ನೆಷ್ಟು ಘನವಾಗಿ, ನಿಸ್ಸಂದಿಗ್ಧವಾಗಿ ಕಂಡರಿಸು-ವರೆಂದರಿಯಲು! ಇದೇ ರೀತಿ ಶ್ರೀರಾಮನ ಬಗೆಗೆ ಬರೆದ ಲೇಖನವಿರಲಿ, ಕಾಲಮಾನವನ್ನು ಕುರಿತು ಬಾಲಕರಿಗಾಗಿ ಬರೆದ ಬರೆಹವಿರಲಿ ಸರ್ವತ್ರ ಅವರ ಸ್ವೋಪಜ್ಞತೆ ಹಾಗೂ ಆ ಕ್ಷೇತ್ರದಲ್ಲಿ ಮುಂದೆ ಯಾರಾದರೂ ಏನನ್ನಾದರೂ ಮಾಡಬೇಕಿದ್ದಲ್ಲಿ ಇವರ ರಚನೆಗಳು ಮುಂದೊಡ್ಡುವ ಅನಿವಾರ್ಯತೆ ಸದಾ ಗಮನಾರ್ಹ. ಇಷ್ಟೇಕೆ, ನಾವೆಲ್ಲ ಗಮನಿಸದೆಯೇ ಗೃಹೀತವಾಗಿ ಸಾಗುವ ಅದೆಷ್ಟೋ ಸಂಗತಿಗಳ ಬಗೆಗೆ ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ನಿತ್ಯಪ್ರಬುದ್ಧಮತಿ ಸದಾ ಅವಹಿತವಾಗಿರುತ್ತದೆಂಬುದಕ್ಕೆ ಹೆಸರು ಮತ್ತು ವಿಳಾಸದ ಬಗೆಗೆ ಅವರು ಈಗ್ಗೆ ಅರುವತ್ತು ವರ್ಷಗಳ ಹಿಂದೆ ನಡೆಸಿದ ಚಿಂತನೆಯೇ ದೊಡ್ಡ ನಿದರ್ಶನವಾಗುವುದು.

ಸೇಡಿಯಾಪು ಅತ್ಯುತ್ತಮ ನೈಘಂಟುಕರೂ ಹೌದು. ಸಹಕರ್ತೃವಾಗಿ ಅವರು ರೂಪಿಸಿದ 'ಕನ್ನಡ ನಿಘಂಟು'ವಿನಿಂದಾಗಿ ಮಾತ್ರವಲ್ಲದೆ ನಿತ್ಯವಿದ್ಯಾರ್ಥಿ-ಯೆಂಬಂತೆ ಶ್ಲಥೀಕೃತಗ್ರಂಥಗ್ರಂಥಿಯಾಗಿ ಅವರು ಪರಾಮರ್ಶಿಸಿರುವ ಕಿಟ್ಟೆಲ್ ಮತ್ತು ಆಪಟೆನಿಘಂಟುಗಳೇ ಸಾಕು ಅವರ ಪದಸಂಪದವನ್ನೂ, ಶಬ್ದಮಾರ್ಗದ ಅಶ್ವಧಾಟಿಯನ್ನೂ ಸೊಗಸಾಗಿ ಮನವರಿಕೆ ಮಾಡುತ್ತವೆ.

ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ಬರಹಗಳ ಪ್ರಮುಖಾಂಶಗಳಲ್ಲಿ ಮತ್ತೂ ಎರಡು ವಿಶೇಷತೆಗಳನ್ನು ಗುರುತಿಸಬಹುದು. ಅವುಗಳಲ್ಲೊಂದು ಅಡಿಟಿಪ್ಪಣಿಗಳ ಸಂಗತಿ; ಮತ್ತೊಂದು ಉಪಫಲಸಂತತಿ. ಇವೆರಡೂ ಹಲವು ಬಾರಿ ಸಂಬದ್ಧವೇ ಆಗಿವೆ. ಸಾಮಾನ್ಯವಾಗಿ ಇತರ ಹಲವರು ವಿದ್ವಾಂಸರಂತೆ ಸೇಡಿಯಾಪು ಉದ್ಧ-ರಣಗಳಿಗಾಗಿಯೋ, ಆಕರಗಳ ಸೂಚನೆಗಾಗಿಯೋ ಅಡಿಟಿಪ್ಪಣಿಗಳನ್ನು ಸೀಮಿತ-ಗೊಳಿಸದೆ ತಮ್ಮ ಲೇಖನ ಅಥವಾ ಗ್ರಂಥದ ಪ್ರಧಾನವಿಷಯಕ್ಕೆ ಆನುಷಂಗಿಕ-ವಾಗಿ, ಅಪ್ರಧಾನವಾಗಿ ಸಂಬಂಧಿಸಿದ ಅನೇಕ ವಿಚಾರಗಳ ಚರ್ಚೆಗೆ, ನಿರೂಪಣೆಗೆ ಇವುಗಳನ್ನು ಬಳಸಿಕೊಂಡಿದ್ದಾರೆ. ಹೀಗಾಗಿಯೇ ಅವರ ಕನ್ನಡ ವರ್ಣಗಳು, ಛಂದೋಗತಿ, ಕನ್ನಡ ಛಂದಸ್ಸು, ತಥ್ಯದರ್ಶನ ಮತ್ತು ವಿಚಾರಪ್ರಪಂಚ ಗ್ರಂಥಗಳ ಪುಟಪುಟಗಳೂ ಅಡಿಟಿಪ್ಪಣಿಯ ಅಲಂಕಾರದಿಂದ ಮೆರೆದಿವೆ. ನೂರಾರು ಟಿಪ್ಪಣಿಗಳು ನಾಲ್ಕು ಸಾಲಿನಿಂದ ಮೊದಲ್ಗೊಂಡು ಹದಿನೆಂಟಿಪ್ಪತ್ತು ಪುಟಗಳವರೆಗೆ ಅವರ ಅಷ್ಟೇನೂ ಸುಗಾತ್ರದ್ದಲ್ಲದ ಕೃತಿಗಳಲ್ಲಿ ಕಿಕ್ಕಿರಿದಿವೆಯೆಂದರೆ ಪ್ರತ್ಯೇಕ

ವಿವರಣೆ ಬೇಕಾಗದು. ಇಲ್ಲೆಲ್ಲ ಅವರ ಪ್ರಧಾನ ಚರ್ಚಾಸಂಗತಿಗಿರುವ ಬಹು-ಮುಖಗಳ ವ್ಯಾಪ್ತಿಯನ್ನು ಗ್ರಹಿಸಿದ ಸರ್ವಗ್ರಾಸಿಧಿಷಣೆ ಮಾತ್ರವಲ್ಲದೆ ಯಾವುದು ಪ್ರಧಾನ, ಮತ್ತಾವುದು ಪ್ರಾಸಂಗಿಕ, ಇನ್ನಾವುದು ಅಧೀನಸಂಗತಿಯೆಂಬ ನಿಷ್ಕೃಷ್ಟ ಪೃಥಕ್ಕರಣಶಕ್ತಿ ಹಾಗೂ ಓದುಗರಿಗೆ ಎಲ್ಲವನ್ನೂ ಕದಂಬದಂತೆ ಬಡಿಸಿ ಗಲಿಬಿಲಿ-ಗೊಳಿಸಬಾರದೆಂಬ ಸ್ಪಷ್ಟತಾಪ್ರಿಯತೆಗಳೂ ಪ್ರಕಾಶಿಸುತ್ತವೆ. ಇನ್ನು 'ಬೈಪ್ರಾಡಕ್ಟ್' ಅಥವಾ ಉಪಫಲಗಳೆನ್ನಬಹುದಾದ ಅನೇಕ ವಿಚಾರಗಳು ಇವರ ಗ್ರಂಥಗಳಲ್ಲಿ ಬೇಲೂರ ಗುಡಿಯ ಮದನಿಕಾಮೂರ್ತಿಗಳಂತೆ ಅಲ್ಲಲ್ಲಿ ಕಂಗೊಳಿಸುತ್ತಿರುವುದು ವಾಚಕರಿಗೆ ಸುವೇದ್ಯ. ಕಪ್ಪೆ ಅರಭಟ್ಟನ ಶಾಸನಪದ್ಯಪಾಠದ ಪರಿಷ್ಕಾರ, ಜೈಮಿನಿ ಭಾರತದ ನಾಂದೀಪದ್ಯ ಪಾಠದ ಪರಿಷ್ಕಾರ, ಕ್ರೈಸ್ತ ಮಿಷನರಿಗಳು ತಿದ್ದಿದ ರಾಜ-ಶೇಖರವಿಳಾಸದ ಪದ್ಯವೊಂದರ ಗತಿಭಂಗವಿಚಾರ, ತ್ರೈಸ್ವರ್ಯದ ಸ್ವಾರಸ್ಯ, ಪಾಶ್ಚಾತ್ಯ ಛಂದೋಬಂಧಗಳ ಲಯಾನ್ವಿತ ರೀತಿಯ ಕ್ಲೇಶ, ಪಂಪನ 'ಕದಳೀ-ಗರ್ಭಶ್ಯಾಮಂ' ವರ್ಣದ ವಿವೇಚನೆ, ಕಾಳಿದಾಸನು ತಿಳಿದಿದ್ದ ದಕ್ಷಿಣಭಾರತ, ಜವನ-ಜವನಿಕಾ ಶಬ್ದದ ಚರ್ಚೆ, ಪುರುಷಸೂಕ್ತದ ಮಂತ್ರವೊಂದರ ವಿವರಣೆ, ಪಂಚವಾದ್ಯಗಳ ಮೀಮಾಂಸೆ ಮುಂತಾದ ಅನೇಕ ಸ್ವಾರಸ್ಯಕರ ಉಪಫಲಗಳನ್ನಿಲ್ಲಿ ನೆನೆಯಬಹುದು.

ಇನ್ನು ಮುಂದೆ ಸೇಡಿಯಾಪು ಅವರ ಔಚಿತ್ಯಪೂರ್ಣ ಪಾಂಡಿತ್ಯವು ಕವಿತೆಗಳಲ್ಲಿಯೂ ಹೇಗೆ ಹೆಡೆಯುತ್ತಿದೆಯೆಂಬುದನ್ನು ಅವರ ಅಲಂಕಾರಶಾಸ್ತ್ರ ಶಾಲೀನತೆಯ ಹಿನ್ನೆಲೆಯಲ್ಲಿ ನೋಡಬಹುದು. ಸಂಸ್ಕೃತದ ಪ್ರತಿಪದ್ಯರಸೋ-ದಯವಿರುವ, ಪ್ರತಿಪದ್ಯಚಮತ್ಕಾರದ ಸರ್ಗಬಂಧವುಳ್ಳ ಮಹಾಕಾವ್ಯರೂಪದ ಮಿಡಿಯನ್ನೇ ಅವರ 'ತರುಣಧಮನಿ'ಯಲ್ಲಿ ಕಾಣಬಹುದು. ಇದು ದಿಟವಾಗಿ ಅನನ್ಯ ಕೃತಿ, ಅಭಿಜಾತಶೈಲಿಯ ಆದರ್ಶಕವಿತೆ. ಕನ್ನಡದಲ್ಲಿ ಕಾಳಿದಾಸೀಯ ಮಾರ್ಗವೆಂಬುದೇನಾದರೂ ಇದ್ದಲ್ಲಿ ಅದು ಇಲ್ಲಿಯೇ ಸಾಕ್ಷಾತ್ಕರಿಸಿರುವುದೆಂಬು-ದನ್ನು ನಾನು ಸಪ್ರಮಾಣವಾಗಿ ತೋರಿಸಬಲ್ಲೆ. ರಸಾಭಾಸವಿಲ್ಲದೆ ತಿರ್ಯಗ್ಜಂತುಗಳಲ್ಲಿ ರಸವಿಲ್ಲವೆಂಬ ಅಲಂಕಾರಶಾಸ್ತ್ರದ ಅಪ್ರಬುದ್ಧ ನಿರ್ಣಯವೊಂದನ್ನು ಲಕ್ಷ್ಯದಿಂದ ನಿರಾಸಮಾಡಿದ 'ಶ್ವಮೇಧ' ಖಂಡಕಾವ್ಯವು ಸುಂದರವಾದ ಪ್ರತಿಭಾಪ್ರೇರಿತ ಪಾಂಡಿತ್ಯದ ಫಲ. 'ಪುಣ್ಯಲಹರಿ'ಯು ಆವರೆಗೆ ಯಾರೂ ಮುಟ್ಟದೆ ಬಿಟ್ಟಿದ್ದ ಪ್ರಾಚೀನ ಛಂದೋಬಂಧವೊಂದರ ರಮಣೀಯ ಪರಿವೇಷದ ಸಮುದ್ಧಾರ. ಹೀಗೆಯೇ ಅವರ ಬಿಡಿಗವಿತೆಗಳಲ್ಲಿಯೂ ಪಾಂಡಿತ್ಯದ ಪುಟಪಾಕದಲ್ಲಿ ಹದ-ಗೊಂಡ ತೊಡವುಗಳು ಪ್ರತಿಭಾಶಾರದೆಗೆ ಸಿಂಗಾರಗಳಾಗಿವೆ.

ಹೀಗೆ ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ಪಾಂಡಿತ್ಯದ ಪರಿ ಒಂದು ಅಚ್ಛೋದಸರಸ್ಸು, ಒಂದು ಕಾಂಚನಗಂಗಾಶಿಖರ, ಒಂದು ಶಾರದಶರ್ವರೀ-ಸುಖೇಂದು. ಇಂಥ ಮಹಾಮನೀಷಿತೆಗೆ ನಾವೇನನ್ನು ಸಲ್ಲಿಸಲಾದೀತು? 'ನಮಸ್ಕುರ್ಮೋ ಯಥಾಬಲಂ'.

# ವಂದನೆ, ಅಭಿನಂದನೆ ಮತ್ತು ಉಪಕಾರ ಸ್ಮರಣೆ*

'ಛಂದೋಗತಿ' ಎಂಬ ಹೆಸರಲ್ಲಿ ಈಗ ಪುಸ್ತಕರೂಪವನ್ನು ಪಡೆದಿರುವ ಈ ಬರವಣಿಗೆಯನ್ನು ತೊಡಗಿದಾಗ ನನ್ನ ಉದ್ದೇಶವು – ಈಗೀಗ ಕನ್ನಡದಲ್ಲಿ ನಡೆಯುವ ಛಂದೋವಿಚಾರಗಳಲ್ಲಿ, ಅಸ್ಪಷ್ಟವೂ ನೈಕರೂಪವೂ ಆದ ಅರ್ಥಗಳಲ್ಲಿ ಪ್ರಯೋಗವಾಗುತ್ತಿರುವ 'ಲಯ' ಎಂಬ ಸಂಜ್ಞೆಯ ನಿಜಾರ್ಥವನ್ನು ಸಪ್ರಮಾಣ-ವಾಗಿ ವಿಶದೀಕರಿಸುವುದು ಮಾತ್ರವೇ ಆಗಿತ್ತು. ಆದರೆ ಬರೆಯುತ್ತಾ ಹೋದಂತೆ ವಿಚಾರಕ್ಷೇತ್ರವು ಅನಿವಾರ್ಯವಾಗಿ ವಿಸ್ತರಿಸುತ್ತಾಹೋಗಿ – ಮೊದಲು ಕಲ್ಪಿಸಿ-ಕೊಂಡಂತೆ, ಇದು ಹತ್ತಿಪ್ಪತ್ತು ಪುಟಗಳದೊಂದು ಸಣ್ಣ ನಿಬಂಧವಾಗಿ ಕೊನೆಗೊಳ್ಳದೆ – ಅಷ್ಟೊಂದು ಸಣ್ಣದೇನೂ ಅಲ್ಲವೆಂದು ಹೇಳಬಹುದಾದ ಒಂದು 'ಗ್ರಂಥ'ವೇ ಆಗಿಬಿಟ್ಟಿತು. ನನ್ನ ಈ ವಯಸ್ಸಿನಲ್ಲಿ, ಈ ದೇಹಸ್ಥಿತಿಯಲ್ಲಿ, ಇಂತಹದೊಂದು ಬರವಣಿಗೆಗೆ ಕೈಯಿಕ್ಕುವ ಧೈರ್ಯವೇ ಆಗ ನನ್ನಲ್ಲಿದ್ದಿಲ್ಲ. ಈ ಪುಸ್ತಕದಲ್ಲಿ ಪ್ರಕಟವಾಗಿರುವ ವಿಚಾರಗಳಲ್ಲಿ ಹೆಚ್ಚಿನವೆಲ್ಲ ಎಷ್ಟೋ ವರ್ಷಗಳ ಹಿಂದೆಯೇ ನನ್ನ ಅಂತರಂಗದಲ್ಲಿ ತಲೆಯೆತ್ತಿದವುಗಳಾದರೂ, ಹಲವಾರು ವರ್ಷಗಳಿಂದ ಹಾಸಿಗೆಯಲ್ಲಿಯೇ ದಿನಗಳೆಯುತ್ತಿರುವ ನನ್ನೊಳಗಿಂದ ಅವು ಹೊರಬರಲಾರದೆ ಅಲ್ಲಲ್ಲಿ ಮಡುಗಟ್ಟಿ ಗುಳುಗುಳಿಸುತ್ತಾ ಆಗಾಗ ನನ್ನನ್ನು ಪೀಡಿಸುತ್ತಿದ್ದುವು. ಆದರೆ ಒಂದು ದಿನ ಯಾವುದೋ ಕಾರಣದಿಂದ ಚಿಮ್ಮಿದ ಉತ್ಸಾಹಕ್ಕೆ ವಶನಾಗಿ ನಾನು ಲೇಖನಿ ಹಿಡಿದಾಗ, ಅವು ಒಂದರ ಹಿಂದೊಂದು ಹೊರಹೊಮ್ಮಿಬಂದು ಸ್ರೋತೋರೂಪವಾಗಿ ಹರಿಯತೊಡಗಿ, ನನ್ನನ್ನು ತಳ್ಳಿ-ಕೊಂಡು ಬಹುದೂರಕ್ಕೆ ಸಾಗಿ, ಇಷ್ಟೆಲ್ಲ ಪುಟಗಳನ್ನು ತುಂಬಿದವು. ನನ್ನ ಬಹುಕಾಲದ ಚಿಂತನಧಾರೆ – ಈ ಅಪರವಯಸ್ಸಿನಲ್ಲಾದರೂ – ನನ್ನ ಕನ್ನಡ ತಾಯಿಯ ಪಾದಾಭಿಷೇಚನಕ್ಕೆ ಒದಗುವಂತೆಸಗಿದ ವಿಶ್ವನಿಯಾಮಕನ ಕೃಪೆಯ-ನ್ನೀಗ ನೆನಸಿ ನೆನಸಿ ವಿನಮ್ರನಾಗುತ್ತಿದ್ದೇನೆ, 'ನಮೋ ನಮೋ' ಎನ್ನುತ್ತಿದ್ದೇನೆ.

ನನ್ನ ಮಿತ್ರರನೇಕರು ನನ್ನೀ ಕೆಲಸದಲ್ಲಿ ಹೃತ್ಪೂರ್ವಕವಾದ ನೆರವನ್ನು ನೀಡದಿರುತ್ತಿದ್ದರೆ ಇದು ಈ ರೂಪವನ್ನು ಪಡೆದು ವಾಚಕರ ಕೈಸೇರುವಂತಿರಲಿಲ್ಲ. ಹಾಗೆ ಉಪಕರಿಸಿದವರಿಗೆಲ್ಲರಿಗೂ ಕೃತಜ್ಞತೆಯಿಂದ ವಂದಿಸಿ, ಅವರೊಳಗೆ ಮುಖ್ಯರಾದ ಕೆಲವರ ನಾಮನಿರ್ದೇಶವನ್ನು ಮಾತ್ರ ಇಲ್ಲಿ ಮಾಡುತ್ತೇನೆ. ಅವು-ಗಳೊಳಗೆ ಮೊದಲಾಗಿ ಹೇಳಬೇಕಾಗಿರುವ ಹೆಸರು ದಿ| ತೆಕ್ಕುಂಜ ಗೋಪಾಲಕೃಷ್ಣ ಭಟ್ಟರದು. ಈ ಪುಸ್ತಕದಲ್ಲಿ ನಾನು ಉದಾಹರಿಸಿರುವ ಪದ್ಯಗಳೊಳಗೆ ಹೆಚ್ಚಿನವು-ಗಳ ಆಕರಗ್ರಂಥಗಳು ನನ್ನ ಬಳಿಯಲ್ಲಿ ಇಲ್ಲದವುಗಳೇ ಆಗಿದ್ದವು. ಆ

---

* ಸೇಡಿಯಾಪು ಅವರು 'ಛಂದೋಗತಿ' (ಪ್ರಕಾಶಕರು – ಗೀತಾಬುಕ್ ಹೌಸ್, ಮೈಸೂರು, ೧೯೮೫) ಕೃತಿಗೆ ಲೇಖಕರ ಮಾತಿನ ರೂಪದಲ್ಲಿ ಬರೆದುದು. – ಸಂ.

ಉದಾಹರಣಗಳು ನನ್ನ ಸ್ಮೃತಿಯಿಂದಲೇ ಎತ್ತಿ ಬರೆದವುಗಳು. ಅವುಗಳ ಆಕರ-ಸ್ಥಾನಗಳನ್ನು ಆ ನನ್ನ ಸನ್ಮಿತ್ರರು ತಮ್ಮ ಗ್ರಂಥಸಂಗ್ರಹದಿಂದ ಮಾತ್ರವಲ್ಲ, ಮಂಗಳೂರಿನ ಪುಸ್ತಕಭಂಡಾರಗಳ ಸಂಗ್ರಹಗಳಿಂದಲೂ ಪ್ರಯತ್ನಪೂರ್ವಕ ತಿಳಿದುಕೊಂಡು ನನಗೆ ಬರೆದು ಕಳುಹಿಸಿ, ನನ್ನಲ್ಲಿಲ್ಲದ ಕೆಲವು ಛಂದೋಗ್ರಂಥ-ಗಳನ್ನೂ ತಂದುಕೊಟ್ಟು ಉಪಕರಿಸಿದ್ದಲ್ಲದೆ, ಇದರ ಆದಿಯ ಕೆಲವು ಪರಿಚ್ಛೇದ-ಗಳನ್ನು ಅವಲೋಕಿಸಿ ಬಹಳ ಮೆಚ್ಚಿಯೂ ಇದ್ದರು. ಆದರೆ ಪೂರ್ತಿಯಾದ ಗ್ರಂಥವನ್ನು ಅವರಿಗೆ ತೋರಿಸಿ ಸಂತೃಪ್ತಿಪಡುವ ಯೋಗ ನನಗೆ ಒದಗಲಿಲ್ಲ; ಅಷ್ಟರೊಳಗೆ ಅವರು ಕಣ್ಮರೆಯಾಗಿಹೋದರು. ಅವರಿಗೆ ನಾನು ಕೃತಜ್ಞನೆಂದು ಎಷ್ಟು ಬಾರಿ ಹೇಳಿದರೂ ಅದು ಕಡಮೆಯೇ ಸರಿ. ಇನ್ನು, ಈ ರಚನೆಗೆ ಅವಶ್ಯವಾಗಿ ಬೇಕಾಗಿದ್ದ ಕೆಲವು ಗ್ರಂಥಗಳನ್ನು ನನಗೆ ದೊರಕಿಸಿಕೊಟ್ಟವರೊಳಗೆ ಮುಖ್ಯರಾದವರು – ಶಿಶಿಲದ ಶ್ರೀ ಸೀತಾರಾಮ ಕೆದಿಲಾಯರು, ಸುರತಕಲ್ಲಿನ ವಿದ್ವಾನ್ ವೆಂಕಟರಾಯಾಚಾರ್ಯರು ಮತ್ತು ಕಾರ್ಕಳದ ಶ್ರೀಭುವನೇಂದ್ರ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ನನ್ನ ಶಿಷ್ಯೋತ್ತಮರಾದ ಶ್ರೀ ಎಂ. ರಾಮಚಂದ್ರ, ಎಂ.ಎ., ಎಂಬೀ ಮೂವರು. ಇವರಲ್ಲದೆ – ಈ ಶಾಸ್ತ್ರೀಯ ನಿಬಂಧದ ಪ್ರಾಮಾಣ್ಯಕ್ಕೆ ಬೇಕಾಗಿದ್ದ ಕೆಲವು ಆಧಾರಗಳನ್ನೊದಗಿಸಿ ಅತ್ಯಮೂಲ್ಯ-ವಾದ ಸಾಹಾಯ್ಯವನ್ನು ಮಾಡಿದವರು – ನನ್ನ ಮಾನ್ಯಮಿತ್ರರೂ ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರೂ ಸಾಮವೇದಜ್ಞರೂ ಆಗಿರುವ ಶ್ರೀ ಎಂ. ರಾಜಗೋಪಾಲಾಚಾರ್ಯ, ಎಂ.ಎ., ಸಾಹಿತ್ಯಶಿರೋಮಣಿ – ಇವರು. ಈ ಮೇಲೆ ಹೆಸರಿಸಿದ ಮಿತ್ರರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಇವರಲ್ಲದೆ ಇನ್ನೂ ಕೆಲವರು ವಿದ್ವನ್ಮಿತ್ರರು ಸಹಾಯಹಸ್ತವನ್ನು ನೀಡಿದ್ದಾರೆ. ಅವರನ್ನೂ ಕೃತಜ್ಞತಾಪೂರ್ವಕ ಸ್ಮರಿಸುತ್ತೇನೆ.

ನಾನು ಬರೆದು ಹೊಡೆದು ಗೀಚಿ ಹಾಕಿದ ಕರಡು ಬರವಣಿಗೆಯನ್ನು ಮುದ್ರಣಕ್ಕೆ ಯೋಗ್ಯವಾಗುವಂತೆ ನಕಲುಮಾಡಿ ಸಹಕಾರ ನೀಡಿದವರು – ನನಗೆ ಬಹು ಸಮಯದಿಂದಲೂ ನಾನಾ ಬಗೆಯಲ್ಲಿ ಉಪಕಾರ ಮಾಡುತ್ತಲೇ ಇರುವ ಹಾಗೂ ಅಸಾಮಾನ್ಯವಾದ ಸಜ್ಜನಿಕೆಯುಳ್ಳ ಸನ್ಮಿತ್ರರಾದ ಶ್ರೀ ಬಾಲಕೃಷ್ಣ ಶೆಟ್ಟಿ ಪೊಳಲಿ – ಇವರು, ಮತ್ತು ನನ್ನ ಮಗಳೆಂಬಂತೆ ಸಮಯಕ್ಕೊದಗಿಬಂದ ಕುಮಾರಿ ಮಹೇಶ್ವರಿ, ಎಂ.ಎ., ಕನ್ನಡ ಪ್ರಾಧ್ಯಾಪಿಕೆ, ಸರಕಾರಿ ಕಾಲೇಜು, ಕಾಸರಗೋಡು – ಇವರು. ಈ ಕಿರಿಯರಿಬ್ಬರಿಗೂ ಕೃತಜ್ಞತಾಪೂರ್ವಕವಾದ ಆಶೀರ್ವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಈಗ ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿರುವ ಡಾ। ಶ್ರೀನಿವಾಸ ಹಾವನೂರ ಅವರು ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಕಾಲದಲ್ಲಿ, ನನ್ನ ಈ ಪುಸ್ತಕವನ್ನು ವಿಶ್ವವಿದ್ಯಾನಿಲಯದ ಪ್ರಕಾಶನವಾಗಿ ಹೊರತರಬೇಕೆಂಬ ತಮ್ಮ

ಬಯಕೆಯನ್ನು ನನ್ನಲ್ಲಿಗೆ ತಾವೇ ಬಂದು ತಿಳಿಸಿದ್ದರು. ದೈವವಶಾತ್ ಅದು ಫಲಿಸಲಿಲ್ಲವಾದರೂ, ನನ್ನ ಅಭ್ಯರ್ಥನೆಯಂತೆ ಈ ಪುಸ್ತಕಕ್ಕೆ ಮುನ್ನುಡಿ ಬರೆಯಲೊಪ್ಪಿಕೊಂಡು, ಪ್ರೀತಿಯಿಂದ ಬರೆದುಕೊಟ್ಟರು. ಇದಕ್ಕಾಗಿ ನನ್ನ ಕೃತಜ್ಞತೆಯನ್ನೂ ಅವರ ಸಹೃಯತೆಗಾಗಿ ಅಭಿನಂದನೆಯನ್ನೂ ಗೌರವ-ಪೂರ್ವಕವಾಗಿ ಸಲ್ಲಿಸುತ್ತೇನೆ.

ಈ ಪುಸ್ತಕದ ಪ್ರಕಾಶನದಲ್ಲಿ ಆಸಕ್ತಿವಹಿಸಿ, ಅದಕ್ಕೆ ಬೇಕಾದ ವ್ಯವಸ್ಥೆ-ಗಳನ್ನೆಲ್ಲ ಅಚ್ಚುಕಟ್ಟಾಗಿ ಮಾಡಿ ಮಹೋಪಕಾರ ಮಾಡಿದವರು ನನ್ನ ಆಪ್ತಮಿತ್ರ-ರಾದ ಶ್ರೀಮಾನ್ ಕು. ಶಿ. ಹರಿದಾಸ ಭಟ್ಟರು. ಸಾಮಾನ್ಯ ಸಾಹಿತ್ಯಪುಸ್ತಕಗಳಂತೆ ಹೆಚ್ಚಿನ ಲಾಭವನ್ನೇನೂ ತರಲಾರದ ಈ ಶಾಸ್ತ್ರೀಯ ಗ್ರಂಥವನ್ನು ಪ್ರಕಾಶಪಡಿಸುವ ಹೊಣೆಯನ್ನು, ಕನ್ನಡದ ಮೇಲೆ ತಮಗಿರುವ ಅಭಿಮಾನವಿಶೇಷದಿಂದ ಸಂತೋಷಪೂರ್ವಕವಾಗಿ ಒಪ್ಪಿಕೊಂಡು ಅನತಿಕಾಲದಲ್ಲಿ ಕಾರ್ಯನಿರ್ವಹಣೆ ಮಾಡಿದವರು ಗೀತಾ ಬುಕ್ ಹೌಸಿನ ಶ್ರೀ ಎಂ. ಸತ್ಯನಾರಾಯಣರಾವ್ ಸೋದರರು. ಈ ಮಾನ್ಯಮಿತ್ರರೆಲ್ಲರಿಗೂ ನನ್ನ ವಂದನೆಗಳನ್ನೂ ಅಭಿನಂದನೆ-ಗಳನ್ನೂ ಒಂದುಗೂಡಿಸಿ ಸಲ್ಲಿಸುತ್ತಿದ್ದೇನೆ.

ಪುಸ್ತಕಗಳ ಅಂತರಂಗದ ಶುದ್ಧತೆ ಹಾಗೂ ಲಿಪಿರೂಪಸೌಷ್ಠವಗಳಿಗಿಂತ ಅವುಗಳ ಬಹಿರಂಗದ ಬಣ್ಣ ಬೆಡಗುಗಳಿಗೆ ಅಧಿಕ ಮಹತ್ತ್ವ ಬಂದಿರುವ ಈ ಕಾಲದಲ್ಲಿಯೂ – ಸಾಮಾನ್ಯ ಸಾಹಿತ್ಯರಚನೆಗಳಂತಿರದೆ, ಅಪರಿಚಿತಶಬ್ದ-ಬಹುಲವೂ ನಾನಾಚಿಹ್ನನಿಬಿಡವೂ ಆಗಿದ್ದು, ಕ್ಲಿಷ್ಟವೂ ಜಟಿಲವೂ ಆದ ಮುದ್ರಣ ವ್ಯವಸ್ಥೆಯ ಆವಶ್ಯಕತೆಯಿರುವ ಈ ಪುಸ್ತಕದ ಅಂತರಂಗದ ಶುದ್ಧತೆಯನ್ನು ಕಾಪಾಡುವುದಕ್ಕಾಗಿ ತಮ್ಮ ಶಕ್ತಿಮೀರಿ ಪ್ರಯತ್ನಿಸಿ, ತೃಪ್ತಿಕರವಾಗಿಯೇ ಮುದ್ರಣ-ಕಾರ್ಯವನ್ನು ನೆರವೇರಿಸಿಕೊಟ್ಟ ಅಚ್ಚುಕೂಟದ ಅಧಿಕಾರಿಗಳಿಗೂ ಲಿಪಿ ಸಂಯೋಜನೆ ಮಾಡಿದ ಕಾರ್ಮಿಕರಿಗೂ ಕರಡಚ್ಚುಗಳನ್ನು ಶ್ರದ್ಧೆಯಿಂದ ತಿದ್ದಿದ ಸಜ್ಜನರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ.

ಇನ್ನೊಂದು ಮಾತು : ಇದಕ್ಕೆ ಮುನ್ನುಡಿ ಬರೆದ ಡಾ । ಹಾವನೂರರು ಹೇಳುವಂತೆ – ಅರ್ಥ ಗ್ರಹಣಮಾಡುವುದು ಒಂದಿಷ್ಟು ಕ್ಲೇಶದಾಯಕವೆನಿಸಲೂ ಬಹುದಾದ ಈ ಶಾಸ್ತ್ರೀಯ ಗ್ರಂಥವನ್ನು ಪ್ರೀತಿಯಿಂದ ಓದುವ ಶ್ರಮವನ್ನು ಕೈಕೊಳ್ಳುವ ಸರ್ವರಿಗೂ ನನ್ನ ಅನಂತಪ್ರಣಾಮಗಳನ್ನು ಪೂರ್ವಭಾವಿಯಾಗಿ ಸಮರ್ಪಿಸುತ್ತೇನೆ.

ಮಣಿಪಾಲ
ಜನವರಿ ೧೪, ೧೯೮೫

ಸೇಡಿಯಾಪು ಕೃಷ್ಣ ಭಟ್ಟ

# ಛಂದೋಗತಿ – ಮುನ್ನುಡಿ*

ಛಂದಸ್ಸನ್ನು ಕುರಿತು ಕನ್ನಡದಲ್ಲಿ ಕಳೆದ ೫೦-೬೦ ವರ್ಷಗಳಿಂದ ವಿವೇಚನೆ ನಡೆದಿದ್ದು, ಅನೇಕ ಮೌಲಿಕ ವಿಚಾರಗಳು ವ್ಯಕ್ತವಾಗಿವೆ. ಈಚೆಗೆ ಕನ್ನಡ ಛಂದಸ್ಸಿನ ಸಮಗ್ರ ಚರಿತ್ರೆಯನ್ನು ವಿಸ್ತಾರವಾಗಿ ರೂಪಿಸಲಾಗಿದೆ. ಆದರೆ ಹೆಚ್ಚಿನ ಬರಹಗಳಲ್ಲಿ ವಿವಿಧ ಛಂದೋರೂಪಗಳ ಸ್ವರೂಪ ಮತ್ತು ರಚನಾ ವಿಧಾನಗಳು ಪ್ರಧಾನವಾಗಿದ್ದು, ಆ ವಿವೇಚನೆ ವಿವರಣಾತ್ಮಕವಾಗಿದೆ. ಛಂದಃ ಶಾಸ್ತ್ರದ ಪ್ರಮೇಯಮೀಮಾಂಸೆ ಅಥವಾ ತಾತ್ತ್ವಿಕಚಿಂತನೆಯು ಗ್ರಂಥವಿಡೀ ಅಭಿವ್ಯಕ್ತಗೊಂಡುದು ಇಲ್ಲಿ ಮಾತ್ರ.

ಸೇಡಿಯಾಪು ಅವರ ಛಂದಸ್ಸಿನ ವ್ಯಾಸಂಗದ ನಿದರ್ಶನವು ಅರ್ಧ-ಶತಮಾನದಷ್ಟು ಹಿಂದೆಯೇ ಕಂಡುಬಂದಿದೆ – 'ಕನ್ನಡ ಛಂದಸ್ಸು' ಎಂಬ ಪ್ರಬಂಧದ ಮೂಲಕ. ಅದರಲ್ಲಿಯ 'ಛಂದಃಶಾಸ್ತ್ರವು ಲೆಕ್ಕಕ್ಕೆ ಮಗ್ಗಿಯಿದ್ದಂತೆ', 'ಸಂಗೀತವು ಛಂದಸ್ಸೆಂಬ ಬಟ್ಟೆಯ ಹಾಸುಹೊಕ್ಕು' ಎಂಬಂತಹ ಉಕ್ತಿಗಳೂ ಸಂಗೀತದ ದೃಷ್ಟಿಯಿಂದ ಪದ್ಯದ ಚತುರಸ್ರತೆ ಹಾಗೂ ಪಾದಾಂತ್ಯಗಣದ ಅಪೂರ್ಣತೆ – ಇವನ್ನು ಮನಗಾಣಿಸಲು Twinkle, twinkle, little star ಪದ್ಯಕ್ಕೆ ಪ್ರಸ್ತಾರಹಾಕಿ ಉದಾಹರಿಸಿದ ರೀತಿಯೂ ನನ್ನನ್ನು ವಿದ್ಯಾರ್ಥಿದೆಸೆಯಿಂದಲೇ ಸೆಳೆದಿದ್ದುವು. ಆ ಸುದೀರ್ಘಬರಹವು ಪ್ರಕಟವಾಗಿ ಎಷ್ಟೋ ವರ್ಷಗಳಾದ ಮೇಲೆ ಅವರು 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ'ಯನ್ನು ಕುರಿತು ಬರೆದದ್ದುಂಟು. ಛಂದಸ್ಸಿನ ಬಗೆಗೆ ಈ ವಿದ್ವಾಂಸರು ಇದಕ್ಕೂ ಹೆಚ್ಚು ಹೇಳಬೇಕೆಂದು ಇಟ್ಟುಕೊಂಡಿಲ್ಲವೆಂದು ತಿಳಿದಿದ್ದೆ. ಈಗ '**ಛಂದೋಗತಿ**'ಯನ್ನು ನೋಡಿದಮೇಲೆ ಈ ಶಾಸ್ತ್ರದ ಬಗ್ಗೆ ಅವರ ಚಿಂತನೆ ಅಖಂಡವಾಗಿ ನಡೆದೇ ಇತ್ತು ಎಂದು ಭಾವಿಸಬೇಕಾಗಿದೆ.

ಪಿಂಗಳನಿಂದ ಮೊದಲ್ಗೊಂಡು ಹಳೆಯ ಸಂಸ್ಕೃತ – ಕನ್ನಡ ಛಂದೋ-ಗ್ರಂಥಗಳಲ್ಲಿ ಅಕ್ಷರ ಅಥವಾ ಮಾತ್ರಾಸಂಖ್ಯೆಯನುಸಾರ ಸಿದ್ಧಿಸುವ ಪದ್ಯಗಳ ಸ್ವರೂಪ ಹಾಗೂ ರಚನಾವಿಧಾನವು ಹೇಳಲ್ಪಟ್ಟಿದೆಯಷ್ಟೆ. ಆದರೆ ಪದ್ಯಗಳ ಪಠನಕ್ರಮವನ್ನು ವಿವರಿಸುವಲ್ಲಿ ಸಂಗೀತಾದಿ ಅನ್ಯಶಾಸ್ತ್ರಗಳನ್ನು ಆಶ್ರಯಿಸ-ಬೇಕಾಗುವುದು. ಗತಿಲಯಾದಿಗಳ ಲಕ್ಷಣನಿರೂಪಣೆಯು ಅಲ್ಲಿಯೇ ದೊರೆಯ ಬಲ್ಲುದು. 'ಮಾನಸೋಲ್ಲಾಸ'ದಲ್ಲಿ ಸೋಮೇಶ್ವರನು ಸಂಗೀತಕ್ಕೆ ಸಂಬಂಧಿಸಿದ ಪ್ರಕರಣದಲ್ಲಿ "ಪದಾಂತರೇ ಸ್ವರನ್ಯಾಸೈರ್ಗೀಯತೇ ವೃತ್ತಜಾತಯಃ" ಎಂದು

---

* ಕನ್ನಡದ ಹಿರಿಯ ಸಂಶೋಧಕ ಪ್ರಾಧ್ಯಾಪಕ ಶ್ರೀನಿವಾಸ ಹಾವನೂರ ಅವರು ಸೇಡಿಯಾಪು ಅವರ 'ಛಂದೋಗತಿ' ಕೃತಿಗೆ ಬರೆದ ಮುನ್ನುಡಿ. – ಸಂ.

ಮುಂತಾಗಿ ಛಂದೋಬದ್ಧವೃತ್ತಜಾತಿಗಳ ಪಠನವಿಧಾನವನ್ನು ತಿಳಿಸಿದ್ದಾನೆ. ಆಚಾರ್ಯ ಮಧ್ವರ ಪಠನರೀತಿಯು ಶಿಕ್ಷಾಶಾಸ್ತ್ರದಲ್ಲಿನ ಲಕ್ಷಣಗಳಿಗೆ ಲಕ್ಷ್ಯ-ಗಳಂತಿದ್ದಿತು – ಎಂಬ ಮಾತು 'ಸುಮಧ್ವವಿಜಯ'ದಲ್ಲಿ ಬರುತ್ತದೆ. ಭೋಜ-ರಾಜನು (೧೧ನೇ ಶತಕ) 'ಸರಸ್ವತೀಕಂಠಾಭರಣ'ವೆಂಬ ತನ್ನ ಅಲಂಕಾರ ಗ್ರಂಥದಲ್ಲಿ, ಕಾವ್ಯಗಳಲ್ಲಿ ಕಂಡುಬರುವ ಭಿನ್ನಭಿನ್ನಗತಿಗಳನ್ನು ವಾಗಲಂಕಾರ-ಗಳೆಂದು ಹೆಸರಿಸಿರುವನು. ಅನಂತರ ಶಾರದಾತನಯ ಎಂಬವನು (೧೩ನೇ ಶತಕ) ಸಿಂಹ, ಜಿಂಕೆ, ರಥ, ಬಂಡಿ – ಇವುಗಳ ಚಲನವನ್ನು ಧ್ವನಿಸುವ ಐದು ಗೀತಗತಿಗಳನ್ನು ಹೇಳಿದ್ದಾನೆ. ಅವನದು ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಕೃತಿ-ಯಾದರೂ ಗತಿವಿಚಾರ ಬಂದದ್ದನ್ನು ಗಮನಿಸಬೇಕು. ಹೀಗೆಯೇ ಛಂದೋಗತಿ-ವಿಷಯಕವಾದ ಇಲ್ಲಿಯ ವಿವೇಚನೆಯಲ್ಲಿ ಶಿಕ್ಷಾಶಾಸ್ತ್ರಸಂಗೀತಶಾಸ್ತ್ರಾದಿಗಳಿಗೆ ಸಂಬಂಧಿಸಿದ ವಿಚಾರಗಳ ಹಿನ್ನೆಲೆ ಇರುವುದು ಇದರದೊಂದು ವಿಶೇಷತೆ-ಯಾಗಿದೆ.

ಗತಿ ಎನ್ನುವುದು ಎಲ್ಲ ಪದ್ಯಬಂಧಗಳಲ್ಲಿ ಇರಲೇಬೇಕಾದ ಒಂದು ಛಂದೋಗುಣ. ಗತಿಗೂ ವಿವಿಧ ಛಂದೋರೂಪಗಳಲ್ಲಿ ಅಡಕವಾದ ಗುರು ಲಘುಗಳ ಯೋಜನೆಗೂ ಅವಿನಾಭಾವಸಂಬಂಧವಿದೆ. 'ಛಂದೋಗತಿ' ಎಂಬ ಕೂಡುನುಡಿಯು ತನ್ನಷ್ಟಕ್ಕೆ ಈ ಅನ್ಯೋನ್ಯತೆಯನ್ನು ಸೂಚಿಸುವಂತಿದೆ. ಆದರೆ ಗತಿಸೌಂದರ್ಯ ಮೂಡಬೇಕಾದರೆ ಗುರುಲಘುಸಂಯೋಜನೆಯಲ್ಲಿ ಏನಾದ-ರೊಂದು ಅಸಾಮಾನ್ಯತೆ – ಆಕರ್ಷಕತೆ – ಇರಬೇಕಾಗುವುದು. ಈ ತಾರ್ಕಿಕ ಹಿನ್ನೆಲೆಯಿಟ್ಟುಕೊಂಡು ಈ ಲೇಖಕರು ಛಂದಸ್ಸಿಗೆ ಸಂಬಂಧಿಸಿದ ಎಷ್ಟೆಲ್ಲ ಅಂಶಗಳನ್ನು ತಮ್ಮ ಗ್ರಂಥದಲ್ಲಿ ತಂದಿದ್ದಾರೆ! ಇಲ್ಲಿ 'ಛಂದಸ್ಸು' ಪದದ ಮೂಲಾರ್ಥವನ್ನು ಅರಸಿಕೊಂಡು ಹೋದದ್ದಿದೆ. ಲಯ, ತಾಳ, ರಿದಮ್ – ಈ ಸಂಜ್ಞೆಗಳನ್ನು ಬಹಳ ಶಿಥಿಲವಾದ ಅರ್ಥದಲ್ಲಿ ವಿಧವಿಧವಾಗಿ ಬಳಸುತ್ತೇವಾದ್ದ-ರಿಂದ, ಅವುಗಳ ಖಚಿತಾರ್ಥವನ್ನು ಹೇಳಿದ್ದಾರೆ. "ಯಾವುದೊಂದು ಕ್ರಿಯೆಯ (ಕರಾಸ್ಫಾಲನ, ಅಂಗವಿನ್ಯಾಸ, ಇತ್ಯಾದಿ) ಮೂಲಕ ಗೀತಾದಿಗಳ ಕಾಲವನ್ನು ಅಳೆಯುವುದೇ ತಾಳ; ಹಾಗೆ ಉದ್ಭೂತವಾಗುವ ಕಾಲಖಂಡಗಳ ಪರಸ್ಪರ ಸಮತ್ವವೇ ಲಯ" ಎಂಬ ಅಧಿಕೃತವೆನಿಸುವ ವ್ಯಾಖ್ಯೆಯನ್ನು ನೀಡಿದ್ದಾರೆ. ಲಯತಾಳಗಳ ಬಗ್ಗೆ ಇಷ್ಟೊಂದು ಕೂಲಂಕಷವೂ ಮೌಲಿಕವೂ ಆದ ವಿವೇಚನೆ ಕನ್ನಡದಲ್ಲಿ ಬೇರೆಡೆ ಬಂದಂತಿಲ್ಲ.

ಈ ಮುಂದೆ ಛಂದೋಬಂಧಗಳಲ್ಲಿಯ ಲಯಾನ್ವಿತತೆಯನ್ನು ಎತ್ತಿಕೊಂಡು ಅದು ಸಮಗತಿಯಲ್ಲಿ ವ್ಯಕ್ತವಾಗುವುದನ್ನು ವಿವರಿಸಿದ್ದಾಗಿದೆ. ಅಕ್ಷರವೃತ್ತಗಳೆಲ್ಲವೂ ವಿಷಮಗತಿಯವಲ್ಲವೆಂಬುದನ್ನೂ, ಅವುಗಳೊಳಗೆ ಲಯಾನ್ವಿತವಾದವುಗಳೇ – ಎಂದರೆ ಸಮಗತಿಯವೇ – ಅಧಿಕಸಂಖ್ಯೆಯವೆಂಬುದನ್ನೂ ಗುರುತಿಸಿದ್ದಾರೆ. ಈ ಮಧ್ಯೆ ಪಿಂಗಳನ ಗತಿದರ್ಶಕವಾದ ಕೆಲವು ಸೂತ್ರಗಳ ಸಂದಿಗ್ಧತೆಯನ್ನು

ಪರಿಹರಿಸಿದ್ದಾರೆ. ಗತಿಯಲ್ಲಿ ನಿಷ್ಕಿತವಾಗಿರುವ ದ್ರುತಾದಿಭೇದಗಳನ್ನು ಹೇಳುತ್ತ, 'ಅಕ್ಷರಗತಿಭೇದ', 'ಆವರ್ತಿಗತಿಭೇದ' ಎಂಬ ನವೀನಪರಿಕಲ್ಪನೆಗಳನ್ನು ಸೃಷ್ಟಿಸಿ-ದ್ದಾರೆ. ಅದರಂತೆ ವೃತ್ತಗಳಲ್ಲಿಯ ಸತಾನವಿತಾನಗತಿಗಳ ಹಾಗೂ ಅವುಗಳ ಭೇದೋಪಭೇದಗಳ ಪ್ರಸ್ತಾವವೂ ಬಂದಿದೆ. ಇದೆಲ್ಲ ವಿವರಣೆಗೆ ಬಹುತೇಕ ಕನ್ನಡ ಪದ್ಯಗಳು – ಕೆಲವು ಸಂಸ್ಕೃತ ಪದ್ಯಗಳು ಸಹ (ವಿವಿಧ ಕಾವ್ಯಗಳಿಂದ ಆಯ್ದುಕೊಂಡವುಗಳು) – ಲಕ್ಷ್ಯಗಳಾಗಿದ್ದು, ಅನೇಕ ಅಪೂರ್ವ ಹಾಗೂ ಅಪರಿಚಿತವಾದ ಪದ್ಯಗಳ ಬಂಧದ ಗತಿಸೌಂದರ್ಯವನ್ನು ಹೊರಗೆಡವಲಾಗಿದೆ. ವಿಶೇಷತಃ ಕಂದಪದ್ಯ, 'ಖ್ಯಾತಕರ್ನಾಟಕ' ವೃತ್ತಗಳು – ಇವನ್ನು ವಿವರಿಸಿದ ರೀತಿಯು ಅತ್ಯಂತ ಮನೋಜ್ಞವಾಗಿದೆ. ಹಾಗೆಯೇ ಅನುಷ್ಟುಪ್ ಶ್ಲೋಕವು ಕನ್ನಡಕ್ಕೆ ಏಕೆ ಒಗ್ಗಲಿಲ್ಲವೆಂಬುದರ ವಿವೇಚನೆಯೂ ಅನುಪಮವಾದುದು. ಮುಳಿಯ ತಿಮ್ಮಪ್ಪಯ್ಯನವರು ಹೊಸಗನ್ನಡದಲ್ಲಿ ಅನುಷ್ಟುಪ್ ಶ್ಲೋಕದ ರಚನೆಗೆ ಯತ್ನಿಸಿದ್ದರಂತೆ ! ಹಳೆಯ ಪತ್ರಿಕೆ 'ಕನ್ನಡ ಕೋಗಿಲೆ'ಯಲ್ಲಿ ಮುದುಡಿಕೊಂಡು ಇದ್ದ ಆ ಪದ್ಯಗಳನ್ನು ಹೆಕ್ಕಿ ತೆಗೆದು ಆ ಪ್ರಯತ್ನದ ವಿಫಲತೆಯನ್ನು ತೋರಿಸಿದ್ದಾರೆ.

ಪ್ರಾಸ ಮತ್ತು ಯತಿಗಳ ವಿಚಾರವು ಸಾಮಾನ್ಯವಾಗಿ ಎಲ್ಲ ಛಂದೋ-ಗ್ರಂಥದಲ್ಲಿ ಬಂದೇ ಇರುತ್ತದೆ. ಪ್ರಾಸವು ಅಲಂಕಾರಶಾಸ್ತ್ರದ್ದಾದರೂ, ಅದು ಛಂದೋನಿಯಮವೂ ಆಗಿ ಪರಿಣಮಿಸಿರುವುದನ್ನು ಈ ಗ್ರಂಥಕರ್ತರು ವಿಶದ-ಪಡಿಸಿ, ಪದ್ಯದ ಪಾದಾದಿಯಲ್ಲಿ ಸಮಾನವಾದ ಛಂದೋವಿನ್ಯಾಸ ಇಲ್ಲದಿದ್ದರೆ, ಅಲ್ಲಿ ಪ್ರಾಸಕ್ಕೆ ಆಸ್ತಿತ್ವವೇ ಇಲ್ಲವೆಂಬುದನ್ನು ತೋರಿಸಿದ್ದಾರೆ. ಯತಿವಿಚಾರದಲ್ಲಿ, ಪಾದಾಂತ್ಯದ ಯತಿಯನ್ನು ವಿಲಂಘನ ಮಾಡಿದುದರ ಪರಿಣಾಮವಾಗಿ 'ಖಂಡಪ್ರಾಸ'ವು ಉದ್ಭವಿಸಿತೆಂಬ ನಿಲುವು ಅತ್ಯಂತ ಉದ್ಬೋಧಕವಾಗಿದೆ.

ಈ ಗ್ರಂಥದಲ್ಲಿ ಎದ್ದುಕಾಣುವ ಒಂದು ಘಟಕ – ಅಡಿಟಿಪ್ಪಣಿಯದು. ಅಲ್ಲಲ್ಲಿಯ ಅವತರಣಿಕೆಗಳು, ಸಂಕ್ಷಿಪ್ತ ಉಲ್ಲೇಖಗಳು –ಇವುಗಳಿಗಷ್ಟೇ ಅವು ಸೀಮಿತವಾಗಿಲ್ಲ. (ಅವುಗಳ ಗಾತ್ರ ಅರ್ಧಪುಟದಿಂದ ೧೬ ಪುಟಗಳವರೆಗೂ ಚಾಚಿದೆ.) ಸ್ವತಂತ್ರವಾಗಿ ಪ್ರತಿಪಾದಿತವಾದ ಹಲವು ಪೂರಕವಿಷಯಗಳಿವೆ. ಈ ಬಗೆಯ ಅಡಿಟಿಪ್ಪಣಿಗಳು ಅವರ ವ್ಯಾಸಂಗದ ವಿಸ್ತಾರವನ್ನು ತೋರ್ಪಡಿಸು-ವುದಲ್ಲದೆ, ಯಾವುದೊಂದು ಅಂಶವು ಮುಖ್ಯವಿಷಯಕ್ಕೆ ನೇರಸಂಬಂಧ ಇರುವುದರ ಅಥವಾ ಇಲ್ಲದಿರುವುದರ ಖಚಿತವಾದ ಪರಿಜ್ಞಾನವನ್ನೂ ಸೂಚಿಸ-ಬಲ್ಲವುಗಳಾಗಿವೆ. ಹಾಗೆಂದು ಅವು ಅಮುಖ್ಯ ವಿಷಯಗಳು ಅಲ್ಲವೇ ಅಲ್ಲ. ಅಲ್ಲಿ ಬಂದಿರುವ ತಂತ್ರೀಲಯದ ವಿಚಾರ, 'ವೃತ್ತ' ಮತ್ತು 'ಜಾತಿ'ಯ ವಿಚಾರ, ವೈದಿಕಛಂದೋರೂಪಗಳ ಸ್ವಭಾವ ಹಾಗೂ ತ್ರೈಸ್ವರ್ಯದ ವಿಚಾರ – ಇವು ಒಂದೊಂದೂ ಪರಿಪೂರ್ಣವಿಷಯಗಳೇ ಆಗಿ ಮೂಡಿವೆ.

ಇದೇ ಸಂದರ್ಭದಲ್ಲಿ ಸುವಿಖ್ಯಾತ ಛಂದಃಶಾಸ್ತ್ರಜ್ಞ ವೇಲಣಕರರ ಕೆಲವು ಅಭಿಪ್ರಾಯಗಳ (ವೈದಿಕ ಕವಿಗಳಿಗೆ ತಾಳಪ್ರಜ್ಞೆ ಇರಲೇ ಇಲ್ಲ – ಇತ್ಯಾದಿ) ಖಂಡನೆ ಬಂದಿದೆ. ಅದರಂತೆ ಮೊನಿಯರ್ ವಿಲಿಯಮ್ಸ್ ತನ್ನ 'ಇಂಗ್ಲಿಷ್ – ಸಂಸ್ಕೃತ ಶಬ್ದಕೋಶ'ದಲ್ಲಿ ರಿದಮ್, ಮೀಟರ್ ಇತ್ಯಾದಿ ಸಂಜ್ಞೆಗಳಿಗೆ ತಪ್ಪು ಅರ್ಥ ಕೊಟ್ಟದ್ದರ ಟೀಕೆಯೂ ಇದೆ. ಬೇರೆಯವರ ತಪ್ಪಾದ ಹೇಳಿಕೆ, ತಪ್ಪು ವಿಧಾನಗಳನ್ನು ಎತ್ತಿತೋರುವುದು ಇಂಥ ಗ್ರಂಥಗಳಲ್ಲಿ ಇರಬೇಕಾದದ್ದೇ. ಮತ್ತು ತೀ.ನಂ.ಶ್ರೀ. ಅವರ ಹೇಳಿಕೆಯಲ್ಲಿನ ಒಂದೆರಡು ಲೋಪಗಳನ್ನು, ಕಿಟ್ಟೆಲ್ಲರ ಬುದ್ಧಿಪೂರ್ವಕವಾದ ಒಂದು ಪ್ರಮಾದವನ್ನು ಹಾಗೆ ತೋರಿಸಿದ್ದೂ ಇದೆ. ಅದೇ, ವೇಲಣಕರ, ಮೊನಿಯರ್ ವಿಲಿಯಮ್ಸ್ ಇವರ ಕುರಿತಾದ ಆಕ್ಷೇಪಣೆ ತುಸು ಕಟುವಾಯಿತೆಂದು ಕೆಲವರಿಗೆ ಅನಿಸಲೂಬಹುದು. ಆದರೆ ವೇಲಣಕರರು ಛಂದಃಶಾಸ್ತ್ರವಿಚಾರದಲ್ಲಿ ಒಬ್ಬ 'ಅಥಾರಿಟಿ' ಎಂದು ನಾವು ತಿಳಿಯುತ್ತಿರುವಾಗ, ಅವರು ಈ ರೀತಿಯ ಅಸಂಗತ ಹೇಳಿಕೆ ನೀಡಬಾರದಿತ್ತು – ಎಂಬ ವಿದ್ವದ್ವ್ಯಾಕುಲದಿಂದ ಕಟೂಕ್ತಿ ಬಂದಿರಬೇಕು – ಎಂದುಕೊಂಡಿದ್ದೇನೆ.

ಇನ್ನೊಂದು ಎದ್ದುಕಾಣುವ ಸಂಗತಿಯೆಂದರೆ, ಇದುವರೆಗೆ ಕನ್ನಡದಲ್ಲಿ ಛಂದಃಶಾಸ್ತ್ರ ವಿವೇಚನೆ ಮಾಡಿದ ಆಧುನಿಕರು ಯಾರನ್ನೂ ಸೇಡಿಯಾಪು ಅವರು ಉಲ್ಲೇಖಿಸಲು ಅಥವಾ ಆಧರಿಸಲು ಹೋಗಿಲ್ಲ. ಅವರಿಗೆ ಅದರ ಅಗತ್ಯವಾದರೂ ಎಲ್ಲಿದೆ? ಈ ಗ್ರಂಥವು ಅತ್ಯಂತ ಸ್ವತಂತ್ರವಾದ ಸಂಶೋಧನ–ಗ್ರಂಥವಾಗಿ ಯಾವ ಕಾಲಕ್ಕೂ ಉಳಿಯುವಂತಹದು. ಇಲ್ಲಿಯ ವಿವೇಚನೆಯು ಪ್ರೌಢವಾಗಿದ್ದರೂ, ಅವರು ಮೊದಲಿಗೆ ತಾವೇ ಪ್ರಶ್ನೆಹಾಕಿ, ಸಮಸ್ಯೆಯೊಂದನ್ನು ಎತ್ತಿಕೊಂಡು ಅದಕ್ಕೆ ಸ್ವೋಪಜ್ಞತೆಯಿಂದ ಕೂಡಿದ ವಿವರಣೆಯನ್ನು ಕೊಟ್ಟಾದ ಮೇಲೆ, "ಈವರೆಗೆ ಮಾಡಿದ ವಿಚಾರದ ಫಲಿತಾಂಶವೇನೆಂದರೆ" – ಎಂಬುದಾಗಿ ಅದರ ಸಾರವನ್ನು ತಪ್ಪದೇ ಕೊಡುತ್ತಾರೆ. ಹಾಗಿದ್ದರೂ, ಛಂದಃಶಾಸ್ತ್ರದ ವಿವಿಧ ಅಂಗಗಳ ಪೂರ್ಣಪರಿಚಯವಿದ್ದವರಿಗೇ ಇದರ ಮೌಲಿಕತೆಯ ಅರಿವಾದೀತು. (ಈ ಮುನ್ನುಡಿಯನ್ನು ಬರೆಯುವ ಮುನ್ನ ನಾನು ಅನೇಕ ಅಂಶಗಳನ್ನು ಎರಡೆರಡು ಬಾರಿ ಓದಬೇಕಾಗಿ ಬಂತು!) "ಲಯಾನುಭವಸ್ಥಾನವು ಕ್ರಿಯಾ–ಕಾಲದ ಕೊನೆ", "ನಿಲುಗಡೆ ಎಂದರೆ ಗತಿಯ ಅವಸಾನ; ನಿಲುಗಡೆಯ ಅವಸಾನವೇ ಗತಿಯ ಆರಂಭ" – ಎಂಬಿವೇ ಮೊದಲಾದ ಸೂತ್ರಪ್ರಾಯದ ವಾಕ್ಯಗಳ ಅರ್ಥವಾಗುವುದು ಛಂದಸ್ಸಿನ ವಿಚಾರದಲ್ಲಿ ಅಭಿಜ್ಞತೆ ಇದ್ದಾಗ ಮಾತ್ರ ಸಾಧ್ಯ.

ಪ್ರಸ್ತುತ ಗ್ರಂಥವು ಛಂದಃಶಾಸ್ತ್ರದ ಅನೇಕ ಪ್ರಮೇಯಗಳಿಗೆ ತಾತ್ತ್ವಿಕ ತಳಹದಿಯನ್ನು ಒದಗಿಸಿದೆ. ಆ ಮೂಲಕ ಛಂದಸ್ಸಿನ ಜೀವಾಳವನ್ನೇ ಹೊರ–ಹಾಕಿದಂತಾಗಿದೆ. ಅಲ್ಲದೆ ಅನಿರ್ಣೀತವಾದ ಹಲವಾರು ಅಂಶಗಳಿಗೆ ಸಮರ್ಪಕ–ವಾದ ವಿವರಣೆಯೂ ಬಂದಿದೆ. ಅವರ ವಿದ್ವತ್ತೆಯ ಆಳ, ಅನ್ವೇಷಣಸಾಮರ್ಥ್ಯ

ಹಾಗೂ ಖಚಿತತೆಯುಳ್ಳ ನೇರ ನಿರೂಪಣೆ – ಇವು ಪುಟಪುಟದಲ್ಲಿಯೂ ಎದ್ದು ಕಾಣುತ್ತವೆ. ಕನ್ನಡ ಛಂದಸ್ಸಿನ ಬಗೆಗಿರುವ ನಮ್ಮ ಇದುವರೆಗಿನ ತಿಳಿವಿನ ಮಟ್ಟವನ್ನು ಈ ಗ್ರಂಥವು ಇನ್ನಷ್ಟು ಎತ್ತರಿಸಿದೆಯಲ್ಲದೆ, ಈ ಕೃತಿಯಿಂದ ಭಾರತೀಯ ಛಂದಸ್ಸಿನ ವಲಯವು ಸಾಕಷ್ಟು ವಿಸ್ತಾರ–ಗೊಂಡಿದೆಯೆಂದೂ ಹೇಳಬಹುದಾಗಿದೆ. ಹತ್ತು ವರ್ಷಗಳ ಹಿಂದೆ ಅವರ "ಕೆಲವು ದೇಶನಾಮಗಳು" ರಚಿತವಾಗುತ್ತಿದ್ದಾಗಲೇ ಈ ವಿದ್ವಾಂಸರು ವೃದ್ಧಾಪ್ಯ, ಅನಾರೋಗ್ಯಗಳಿಂದ ಬಳಲುತ್ತಿದ್ದರು. ಆ ಸ್ಥಿತಿಯನ್ನು ನಾನು ಈಚೆಗೆ ಸಹ ಕಣ್ಣಾರೆ ಕಂಡವನು. ಅಂಥದರಲ್ಲಿ ಇಷ್ಟೊಂದು ಪ್ರಗಲ್ಭವಾದ ಕೃತಿಯನ್ನು ವಿರಚಿಸಿದುದು ಪವಾಡಸದೃಶವಾಗಿದೆ.

ಈ ಮುನ್ನುಡಿಯ ಬಗ್ಗೆ ಒಂದು ಮಾತು ಹೇಳಬೇಕು. ಹಿರಿಯರು ಕಿರಿಯ ವಯಸ್ಸಿನವರಿಂದ ಮುನ್ನುಡಿ ಬರೆಯಿಸುವುದು ಇದ್ದೇ ಇದೆ. ಆದರೆ ಯೋಗ್ಯತೆಯಿಂದಲೂ ಕಿರಿಯರಾಗಿರುವವರಿಂದ ಮುನ್ನುಡಿ ಬರೆಸುವ ಪ್ರಸಂಗ–ಗಳು ಕ್ವಚಿತ್ತಾಗಿ ದೊರೆತಾವು. ಸಾಹಿತ್ಯಕ್ಷೇತ್ರದಲ್ಲಿ ಜಿಜ್ಞಾಸೆ ಹಾಗೂ ಪರಿಶ್ರಮ – ಇವನ್ನು ಬಿಟ್ಟರೆ, ಹೇಳಿಕೊಳ್ಳುವಂತಹ ಗುಣಗಳು ನನ್ನಲ್ಲಿಲ್ಲ. ಆದರೂ ಈ ವಿದ್ವಾಂಸರು ನನಗೆ ಆ ಕೆಲಸ ಒಪ್ಪಿಸಿದ್ದಾರೆ. ಅವರಿಗೆ ನಮ್ರಭಾವದಿಂದ ವಂದಿಸುವೆ. ಅವರಿಂದ ಕನ್ನಡದ ಉಚ್ಚ ಅಧ್ಯಯನಕ್ಕೆ ನೆರವಾಗುವ ಇಂತಹ ಉದ್ಧಕೃತಿಗಳು ಇನ್ನಷ್ಟು ಹೊರಬರಲೆಂದು ಮನವಾರೆ ಇಚ್ಛಿಸುವೆ.

ಮುಂಬಯಿ – ೪೦೦೦೯೮
ಡಿಸೆಂಬರ್ ೧೫, ೧೯೮೪.

ಶ್ರೀನಿವಾಸ ಹಾವನೂರ
ಕನ್ನಡ ಅಧ್ಯಯನ ವಿಭಾಗ
ಮುಂಬಯಿ ವಿಶ್ವವಿದ್ಯಾಲಯ

# ಕನ್ನಡ ಛಂದಸ್ಸು ಮುನ್ನುಡಿ*

ಇದೀಗ ಟಿಪ್ಪಣಿ ಪರಿಶಿಷ್ಟ ಹಾಗೂ ಅನುಬಂಧಗಳೊಡನೆ ಪ್ರಕಟವಾಗು-ತ್ತಿರುವ ನನ್ನ ಲೇಖನದ ಮೂಲಭಾಗಕ್ಕೆ ಒಂದು ಚರಿತ್ರೆಯಿದೆ.

1927ನೆಯ ಇಸವಿಯಲ್ಲಿ ಮಂಗಳೂರಲ್ಲಿ ಕೀ. ಶೇ. ಆರ್. ತಾತಾಚಾರ್ಯರ ಅಧ್ಯಕ್ಷತೆಯಲ್ಲಿ ನೆರೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನಕ್ಕೆ ಮೈಸೂರುಕರ್ಣಾಟಕದ ಪ್ರತಿನಿಧಿಗಳಾಗಿ ಕೀರ್ತಿಶೇಷರಾದ ಎ. ಆರ್. ಕೃಷ್ಣಶಾಸ್ತ್ರಿಗಳು, ಟಿ. ಎಸ್. ವೆಂಕಣ್ಣಯ್ಯನವರು ಮತ್ತು ವಿ. ಸೀತಾರಾಮಯ್ಯನವರು ಆಗಮಿಸಿದ್ದರು. ಆ ಕಾಲದಲ್ಲಿ ನಾನು ವಾಸಿಸುತ್ತಿದ್ದುದು ಮಂಗಳೂರಿನಲ್ಲಿ ಅಲ್ಲವಾಗಿದ್ದರೂ ನನ್ನ ಸಾಹಿತ್ಯಪ್ರೀತಿಯು ನಮ್ಮ ಹಳ್ಳಿಯಿಂದ ಮಂಗಳೂರಿಗೆ ನನ್ನನ್ನು ಕರೆದು ತಂದಿತ್ತು. ಆ ಸಭೆಯಲ್ಲಿ – ಎ. ಆರ್. ಕೃಷ್ಣಶಾಸ್ತ್ರಿಗಳೋ ಟಿ. ಎಸ್. ವೆಂಕಣ್ಣಯ್ಯನವರೋ ಯಾರೆಂದು ಖಚಿತವಾಗಿ ನೆನಪಿಲ್ಲ, ಇವರೊಳಗೊಬ್ಬರು – ಆವರೆಗೆ ಕನ್ನಡ ವಿದ್ವಾಂಸರಲ್ಲಿ ಯಾರಿಗೂ ಪಿರಿಯಕ್ಕರಗಳನ್ನು ಪಠಿಸುವ ಧಾಟಿ ಹೇಗೆಂಬುದು ತಿಳಿದಿರಲಿಲ್ಲವೆಂಬುದರಿಂದ, ಪಂಪಭಾರತದಲ್ಲಿರುವ ಪಿರಿಯಕ್ಕರಗಳನ್ನು ಪಠಿಸಿ ತೋರಿಸುವ ಒಂದು ಪ್ರಯತ್ನವನ್ನು ಅವರು ಮಾಡಿದರು. ಆದರೆ, ಆ ಪಠನದಿಂದ ಪಿರಿಯಕ್ಕರಕ್ಕೆ ಕ್ರಮಬದ್ಧವಾದೊಂದು ಧಾಟಿ ಇರುವಂತೆ ಅಲ್ಲಿ ಯಾರಿಗೂ ಭಾಸವಾಗಲಿಲ್ಲ. ಯಾವುದೊಂದು ವ್ಯವಸ್ಥೆಯಿಲ್ಲದೆ ಅಲ್ಲಲ್ಲಿ ಪದಾಂತಗಳನ್ನು ದೀರ್ಘೀಕರಿಸಿ, ಅಕ್ಷರೋಚ್ಚಾರಗಳನ್ನು ಇಷ್ಟ ಬಂದಂತೆ ತೇಲಿಸಿ ಮಾಡಿದ ಆ ಪಠನವು ಒಂದು ಪದ್ಯಪಠನವೆಂದು ಹೇಳುವಂತಿರಲಿಲ್ಲ. ಅವರ ಪಠನದ ಈ ಅಸಮಂಜಸತೆಯೇ ಪಿರಿಯಕ್ಕರ ಮೊದಲಾದ ಆದಿಕಾಲದ ಛಂದೋಬಂಧಗಳ ಧಾಟಿಯನ್ನು ಕಂಡುಹಿಡಿಯುವ ನನ್ನ ಪ್ರಯತ್ನಕ್ಕೆ ಮೂಲಹೇತುವಾಯಿತು.

ನಾಗವರ್ಮನ ಛಂದೋಂಬುಧಿಯ ಯತ್ಕಿಂಚಿತ್ ಪರಿಚಯವು ಬಾಲ್ಯ-ದಲ್ಲಿಯೇ ನನಗಾಗಿತ್ತು. ಪಿರಿಯಕ್ಕರ, ಅಕ್ಕರಿಕೆ ಮೊದಲಾದ ಹೆಸರುಗಳನ್ನು

---

* 'ಕನ್ನಡ ಛಂದಸ್ಸು' (ಮೂಲ–1932; ಟಿಪ್ಪಣಿಗಳು– 1985–1988). [1932ನೆಯ ಇಸವಿ ದಶಂಬರ ತಿಂಗಳಲ್ಲಿ ನೆರೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನದಲ್ಲಿ ಓದಲ್ಪಟ್ಟು 1933ನೇ ಇಸವಿಯ "ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ"ಯ ೧ನೆಯ ಮತ್ತು ೨ನೆಯ (ಶ್ರೀಮುಖ ಸಂ. ಚೈತ್ರ ಮತ್ತು ಆಷಾಢ ಮಾಸಗಳ) ಸಂಚಿಕೆಗಳಲ್ಲಿ ಪ್ರಕಟಗೊಂಡ ನಿಬಂಧದ ಸಾರಸಂಗ್ರಹ–ಟಿಪ್ಪಣಿಗಳು, ಪರಿಶಿಷ್ಟಗಳು ಮತ್ತು ಅನುಬಂಧಗಳು ಸಹಿತ]– ಪ್ರಕಾಶಕರು : ಮಣಿಪಾಲ ಸಾಹಿತ್ಯ ಸಂಘ, ಮಣಿಪಾಲ, 1988. ಈ ಕೃತಿಗೆ ಸೇಡಿಯಾಪು ಅವರು ಬರೆದ ಮುನ್ನುಡಿ. ಮೂಲಲೇಖನಕ್ಕಿರುವ ಚರಿತ್ರೆಯನ್ನು ಸೇಡಿಯಾಪು ಅವರು ಇದರಲ್ಲಿ ವಿವರವಾಗಿ ತಿಳಿಸಿದ್ದಾರೆ. – ಸಂ.

ಅದರಲ್ಲಿ ನಾನು ಕಂಡಿದ್ದೆ. ಆಗ ಅಕ್ಕರಿಕೆಯನ್ನೇನೋ ಓದಲು ನಾನು ಸಮರ್ಥನಾಗಿದ್ದರೂ ಇತರ ಕೆಲವು ಕರ್ಣಾಟಕವಿಷಯಜಾತಿ ಬಂಧಗಳನ್ನು ಓದಲಾರದೆ ಬಿಟ್ಟುಬಿಟ್ಟಿದ್ದೆ. ಮಂಗಳೂರಿನ ಸಾಹಿತ್ಯ ಸಮ್ಮೇಳನಾನಂತರ ಛಂದೋಂಬುಧಿಯನ್ನು ಕೈಗೊತ್ತಿಕೊಂಡೆ. (ಬಾಲ್ಯದಲ್ಲಿ ನಾನು ನೋಡಿದ್ದು ಕಿಟ್ಟೆಲ್ ಸಾಹೇಬರಿಂದ ಸಂಪಾದಿಸಲ್ಪಟ್ಟ ಮಂಗಳೂರು ಮುದ್ರಣವನ್ನು. ಛಂದೋಂಬುಧಿಯ ಸೂಕ್ಷ್ಮವಾದ ಅಭ್ಯಾಸವನ್ನು ನಾನು ತೊಡಗಿದಾಗ ಕೀ. ಶೇ. ಮಂ. ಆ. ರಾಮಾನುಜಯ್ಯಂಗಾರ್ಯರಿಂದ ಸಂಪಾದಿತವಾದ ಮೈಸೂರು ಪ್ರತಿಯೂ ಆಗ ನನಗೆ ಲಭ್ಯವಾಗಿದ್ದುದರಿಂದ ಅದನ್ನೂ ಪರಾಮರ್ಶೆಗೆ ತೆಗೆದು-ಕೊಂಡೆ. ಅವೆರಡು ಪ್ರತಿಗಳನ್ನು ಹೋಲಿಸಿ ನೋಡಿದಾಗ ಮೈಸೂರು ಪ್ರತಿಯೇ ಅಧಿಕ ವಿಶ್ವಾಸಾರ್ಹವೆಂಬುದು ತಿಳಿದುಬಂದು ಮುಂದಿನ ನನ್ನ ಪ್ರಯತ್ನಕ್ಕೆ ಆ ಪ್ರತಿಯನ್ನೇ ಆಧಾರವಾಗಿ ಮಾಡಿಕೊಂಡೆ.) ಅದರ ಪಂಚಮಾಧಿಕಾರವನ್ನು ಸೂಕ್ಷ್ಮವಾಗಿ ಪರಾಮರ್ಶಿಸತೊಡಗಿದಾಗ, ಬ್ರಹ್ಮ ವಿಷ್ಣು ರುದ್ರ ಎಂಬ ಗಣಗಳು – ಕಿಟ್ಟೆಲ್ ಸಾಹೇಬರು ಅವುಗಳನ್ನು 'ಮಾತ್ರಾಗಣಂಗಳ್' ಎಂದು ತಮ್ಮ ಪುಸ್ತಕದಲ್ಲಿ ಹೆಸರಿಸಿದ್ದರಾದರೂ – ಅವು ಮಾತ್ರಾಗಣಗಳಲ್ಲ ಎಂಬುದು ನನಗೆ ಮನವರಿಕೆಯಾಯಿತು. ಅವು ಅಕ್ಷರಗಣಗಳಂತೂ ಅಲ್ಲವೇ ಅಲ್ಲವೆಂಬುದು ಮೊದಲೇ ತಿಳಿದ ವಿಷಯವಾಗಿತ್ತು. ಹಾಗಾದರೆ ಈ ಮೂರು ಗಣವರ್ಗಗಳಲ್ಲಿ ಪ್ರತಿಯೊಂದು ವರ್ಗದ ಗಣಗಳೊಳಗೆ ಇರತಕ್ಕ ಸಮಾನಧರ್ಮವೇನೆಂಬುದನ್ನು ಹುಡುಕತೊಡಗಿದಾಗ ಆ ಗಣಗಳ ಸ್ವಭಾವದ ರಹಸ್ಯವು ನನಗೆ ಹೊಳೆಯಿತು.

ನನಗೆ ಹೊಳೆದ ಆ ಮಾರ್ಗವನ್ನನುಸರಿಸಿ ಪಿರಿಯಕ್ಕರ ಮೊದಲಾದ ಕೆಲವು ಬಂಧಗಳನ್ನು ಓದುವ ಪ್ರಯತ್ನಮಾಡಿದಾಗ ಆ ಬಂಧಗಳ ನಿಜವಾದ ಧಾಟಿಯ ಪರಿಚಯವು ನನಗಾಯಿತು. ಆ ಧಾಟಿ ನಮ್ಮೂರಲ್ಲಿ ಎಲ್ಲರಿಗೂ ಪರಿಚಿತವಾಗಿದ್ದ ಸಾಂಗತ್ಯದ ಧಾಟಿಯನ್ನೇ ಹೆಚ್ಚು ಕಡಮೆ ಹೋಲುತ್ತದೆ-ಯೆಂಬುದು ಗೊತ್ತಾಗಿ ಛಂದೋಲಕ್ಷಣದ ನಿರ್ಬಂಧವಿಲ್ಲದ ಬರಿಯ ಹಾಡೆಂದು ಆವರೆಗೆ ಭಾವಿಸಲ್ಪಡುತ್ತಿದ್ದ ಸಾಂಗತ್ಯವು ಸಹ ಒಂದು ತ್ರಿಮೂರ್ತಿಗಣಬಂಧ-ವೆಂಬುದರ ಅರಿವು ನನಗಾಯಿತು. ಈ ದೃಷ್ಟಿಯನ್ನೇ ಅವಲಂಬಿಸಿಕೊಂಡು ಪರೀಕ್ಷಿಸುತ್ತಾ ಹೋದಾಗ, ಪುರಂದರದಾಸ ಕನಕದಾಸಾದಿಗಳ ಎಷ್ಟೋ 'ಪದ'-ಗಳೂ ಹೆಣ್ಣು ಮಕ್ಕಳು ಹಾಡುತ್ತಿದ್ದ ಹಲವು ಹಾಡುಗಳೂ ಯಕ್ಷಗಾನಗಳಲ್ಲಿ ಕಂಡುಬರುವ ಅನೇಕಾನೇಕ 'ಪದ'ಗಳೂ ತ್ರಿಮೂರ್ತಿಗಣಘಟಿತಗಳಾಗಿ – ಮುಖ್ಯವಾಗಿ ವಿಷ್ಣುಗಣಬಂಧಗಳಾಗಿ – ಇರುವುದು ಪ್ರತ್ಯಕ್ಷವಾಯಿತು. ಅನಂತರ ಕವಿರಾಜಮಾರ್ಗವನ್ನು ಓದಿದಾಗ ಛಂದೋಂಬುಧಿಯಲ್ಲಿ ಲಕ್ಷಣ ಹೇಳಲ್ಪಟ್ಟಿರುವ ಗೀತಿಕೆಗಳೆಂಬ ಛಂದೋಬಂಧಗಳು ಅದರಲ್ಲಿರುವುದು ಕಂಡುಬಂದುದು ಮಾತ್ರ-ವಲ್ಲ, ಮಾರ್ಗಕಾರನು ತನ್ನ ಗ್ರಂಥದ ಪೀಠಿಕಾಭಾಗದಲ್ಲಿ ಹೇಳಿರುವ ಮಾತು-ಗಳಿಂದ ನಾಗವರ್ಮನು ಹೆಸರಿಸಿರುವ ಕರ್ಣಾಟಕವಿಷಯಜಾತಿಗಳೆಂಬ

ಛಂದೋಬಂಧಗಳು ಕನ್ನಡದ ಆದಿಕಾಲದ ಪದ್ಯಸ್ವರೂಪಗಳಾಗಿದ್ದವೆಂಬುದೂ ಸುಸ್ಪಷ್ಟವಾಯಿತು.

ನನಗೆ ಹೀಗೆ ಲಬ್ಧವಾದೊಂದು ತಿಳಿವನ್ನು ಕನ್ನಡ ವಿದ್ವಜ್ಜನರ ಮುಂದೆ ಪ್ರಕಟಪಡಿಸುವ ಸುಯೋಗವೂ ದೈವವಶದಿಂದ ನನಗೆ ದೊರೆಯಿತು. ಅದು ಹೇಗೆಂದರೆ – 1932ನೆಯ ಇಸವಿಯ ದಶಂಬರ ತಿಂಗಳಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನವು ಮಡಿಕೇರಿಯಲ್ಲಿ ನೆರೆಯುವುದಾಗಿ ನಿಶ್ಚಿತ-ವಾಯಿತು. ಅದರ ಸ್ವಾಗತಸಮಿತಿಯ ಕಾರ್ಯದರ್ಶಿಗಳಾಗಿ ಕೀ. ಶೇ. ಓಡ್ಲಮನೆ ಆತ್ಮಾರಾಮ ಶಾಸ್ತ್ರಿಗಳು ನಿಯಕ್ತರಾಗಿದ್ದರು. ಅವರು ಮಡಿಕೇರಿಯ ಹೈಸ್ಕೂಲಿನಲ್ಲಿ ಪಂಡಿತರಾಗಿರುವುದಕ್ಕೆ ಮೊದಲು ಮಂಗಳೂರಿನ ಮಿಶನ್ ಹೈಸ್ಕೂಲಿನಲ್ಲಿ ಪಂಡಿತರಾಗಿ ಕೆಲಸ ಮಾಡುತ್ತಿದ್ದುದರಿಂದ ಆಗ ಮಂಗಳೂರಿನಲ್ಲಿ ನೆಲಸಿದ್ದ ನನಗೆ ಅವರು ಪರಿಚಿತರೇ ಆಗಿದ್ದರು. ಅವರ ಮಿತ್ರರಾಗಿದ್ದ ಕೀ. ಶೇ. ಪಂಡಿತ ಮುಳಿಯ ತಿಮ್ಮಪ್ಪಯ್ಯನವರೇ ಮೊದಲಾದವರಿಗೆ ಸಮ್ಮೇಳನದ ಆಹ್ವಾನವನ್ನು ಸಾಕಷ್ಟು ಮೊದಲೇ ತಿಳಿಸುವ ಸಂದರ್ಭದಲ್ಲಿ ನನಗೂ ಒಂದು ಆಹ್ವಾನವನ್ನು ಅವರು ಕಳುಹಿಸಿದ್ದರು; ಮತ್ತು ಸಮ್ಮೇಳನದದಲ್ಲಿ ಓದತಕ್ಕ ಒಂದು ಪ್ರಬಂಧವನ್ನು ಬರೆದು ತರುವಂತೆಯೂ ಕೇಳಿಕೊಂಡಿದ್ದರು. ಅವರ ಈ ಆಹ್ವಾನವನ್ನು ಸಂತೋಷದಿಂದ ಸ್ವೀಕರಿಸಿದ ನಾನು, ಕೆಲವು ವರ್ಷಗಳಿಂದ ನನ್ನ ವಿಚಾರ-ಕ್ಷೇತ್ರದಲ್ಲಿ ಸಂಚರಿಸುತ್ತಿದ್ದ ಕನ್ನಡದ ಆದಿಕಾಲದ ಛಂದಸ್ಸಿನ ಕುರಿತೇ ಪ್ರಬಂಧ ಬರೆಯುವ ಸಂಕಲ್ಪವನ್ನು ಮಾಡಿ, ಅದನ್ನವರಿಗೆ ಮುಂದಾಗಿ ತಿಳಿಸಿ, ಸಮಯಕ್ಕೆ ಸರಿಯಾಗಿ ಅದನ್ನು ಸಿದ್ಧಪಡಿಸಿಕೊಂಡು, ಮಡಿಕೇರಿಗೆ ಪ್ರಯಾಣ ಬೆಳೆಸಿ, ನನ್ನ ಲೇಖನವನ್ನು ಪರಿಷತ್ತಿನ ಅಧಿಕಾರಿಗಳಿಗೆ ಒಪ್ಪಿಸಿದೆ. ಆ ಸಮ್ಮೇಳನಕ್ಕೆ ಕೀ. ಶೇ. ಡಿ. ವಿ. ಗುಂಡಪ್ಪನವರು ಅಧ್ಯಕ್ಷರಾಗಿ ನಿಯುಕ್ತರಾಗಿದ್ದರು. ಸಮಾರಂಭಕ್ಕಿಂತ ಸ್ವಲ್ಪ ಮೊದಲೇ ಅವರು ತಾವು ತಂಗಿದ್ದಲ್ಲಿಗೆ ನನ್ನನ್ನು ಕರೆಯಿಸಿ, ನನ್ನ ಪ್ರಬಂಧವನ್ನು ತಾವು ಪರಾಮರ್ಶಿಸಿದ್ದಾಗಿ ಹೇಳಿ ತಮ್ಮ ಮೆಚ್ಚುಗೆಯನ್ನು ನನಗೆ ಸೂಚಿಸಿದರು. ತದನಂತರ ನೆರೆದ ಸಭೆಯಲ್ಲಿ ನನ್ನ ಪ್ರಬಂಧವನ್ನು ಓದುವುದಕ್ಕೆ ಅವಕಾಶವನ್ನೂ ಕೊಟ್ಟರು. ಪ್ರಬಂಧವೇನೋ ದೀರ್ಘವಾಗಿದ್ದುದರಿಂದ ಸುಮಾರು ಅರ್ಧಘಂಟೆಯ ಕಾಲ ಓದಿದಾಗ ವೇದಿಕೆಯ ಮೇಲಿದ್ದ ದೊಡ್ಡ ಮನುಷ್ಯರೊಬ್ಬರು – ಅಧ್ಯಕ್ಷರಲ್ಲ – ನನ್ನ ವಾಚನವನ್ನು ನಿಲ್ಲಿಸುವಂತೆ ಹೇಳಿದರು. ನಾನು ಹಿಂದೆ ಮುಂದೆ ನೋಡುವಷ್ಟರೊಳಗೆ ಸಭೆಯಲ್ಲಿ ಆಸೀನರಾಗಿದ್ದ ಕೀ. ಶೇ. ಸುಬೋಧ ರಾಮರಾಯರು ಎದ್ದು ನಿಂತು ಅದನ್ನು ಇನ್ನೂ ತಮ್ಮಲ್ಲಿ ಹಲವರಿಗೆ ಕೇಳುವ ಇಚ್ಛೆಯುಂಟೆಂದೂ ವಾಚನವನ್ನು ನಿಲ್ಲಿಸಕೂಡದೆಂದೂ ಗಟ್ಟಿಯಾಗಿ ಹೇಳಿದರು. ಆಗ ವಾಚನವನ್ನು ಮುಂದುವರಿಸುವಂತೆ ಅಧ್ಯಕ್ಷರು ನನಗೆ ಅಪ್ಪಣೆ ಮಾಡಿದರು. ಇಡೀ ಲೇಖನವನ್ನು ಓದಿ ಮುಗಿಸುವುದಕ್ಕೆ ಮತ್ತೂ ಒಂದು ಗಂಟೆಯ ಕಾಲ ಬೇಕಾಗಬಹುದೆಂಬುದರಿಂದ ಮುಂದಿನ ಭಾಗವನ್ನು ಸಾಧ್ಯವಾದಷ್ಟು ಸಂಕ್ಷೇಪಿಸಿ,

ಮುಖ್ಯವಾಗಿ ಪಿರಿಯಕ್ಕರದ ಲಕ್ಷಣ ನಿರೂಪಣೆ ಮಾಡಿ, ನಾನು ಕಂಡುಕೊಂಡ ಅದರ ಪಠನಕ್ರಮವನ್ನು ತಿಳಿಯಪಡಿಸುವುದಕ್ಕಾಗಿ ಪಂಪನ ಎರಡು ಪಿರಿಯಕ್ಕರ-ಗಳನ್ನು ಓದಿ ತೋರಿಸಿದೆ. ಅಲ್ಲಿ ನೆರೆದಿದ್ದ ಮಹನೀಯರೆಲ್ಲರಿಗೂ ಆ ಪಠನ-ಕ್ರಮವು ಸಮ್ಮತವಾದಂತೆ ಕಂಡುಬಂದಿತು. ಒಟ್ಟು ಒಂದು ಗಂಟೆಯೊಳಗೆ ವಾಚನವನ್ನು ಹೇಗೂ ಕೊನೆಗೊಳಿಸಿದೆ. ಮತ್ತು ಪರಿಷತ್ತಿನ ನಿಯಮಾನು-ಸಾರವಾಗಿ, ಅದರ ಕಾರ್ಯದರ್ಶಿಗಳಾಗಿದ್ದ ಕೀ. ಶೇ. ಬೆಳ್ಳಾವೆ ವೆಂಕಟ-ನಾರಣಪ್ಪನವರಿಗೆ ಪ್ರಬಂಧವನ್ನು ಒಪ್ಪಿಸಿದೆ.[1]

ಅದೇ ದಿನ ರಾತ್ರಿ ಅಭ್ಯಾಗತವೃಂದವು ಸಮ್ಮೇಳನದ ಭೋಜನಶಾಲೆಯಲ್ಲಿ ನೆರೆದಿದ್ದಾಗ ಕೀ. ಶೇ. ತೀ. ನಂ. ಶ್ರೀಕಂಠಯ್ಯನವರು ನನ್ನ ಬಳಿಗೆ ಬಂದು ನನ್ನ ಆ ಪ್ರಬಂಧವನ್ನು ಬಹಳವಾಗಿ ಪ್ರಶಂಸಿಸಿ, ತಾವು ಆ ವರ್ಷದ ಎಂ. ಎ. ಪರೀಕ್ಷೆಗೆ ಕಟ್ಟಿದ್ದಾಗಿಯೂ ಪರೀಕ್ಷೆಯ ವಿಶೇಷವಿಷಯವಾಗಿ ಛಂದಸ್ಸನ್ನು ಆರಿಸಿಕೊಂಡಿರುವುದಾಗಿಯೂ ತಿಳಿಸಿ, ಪ್ರಬಂಧದ ಹಸ್ತಪ್ರತಿಯನ್ನು ಅಭ್ಯಾಸಕ್ಕಾಗಿ ತಮಗೆ ಕೊಡಬೇಕೆಂದು ಕೇಳಿಕೊಂಡರು; ಮತ್ತು ಅದನ್ನು ಸಾಧ್ಯವಾದಷ್ಟು ಬೇಗನೆ ನನಗೆ ಹಿಂತಿರುಗಿಸುವೆನೆಂದೂ ಹೇಳಿದರು. ಆಗ ನಾನು "ಲೇಖನವನ್ನು ಪರಿಷತ್ತಿನ ಕಾರ್ಯದರ್ಶಿಗಳಿಗೆ ಒಪ್ಪಿಸಿರುತ್ತೇನೆ; ನೀವು ಅದನ್ನು ಅವರೊಡನೆ ಕೇಳಬಹುದು; ಅವರು ಕೊಟ್ಟರೆ ಅವರಿಗೇ ಅದನ್ನು ಹಿಂತಿರುಗಿಸಿರಿ. ನಾನೀಗ ಅವರನ್ನು ಕೇಳುವಂತಿಲ್ಲ. ಏಕೆಂದರೆ, ಸಾಹಿತ್ಯ ಪರಿಷತ್ಪತ್ರಿಕೆಯ ಮುಂದಿನ

---

1. ಆ ಸಭೆಯಲ್ಲಿ ನಾನು ಲಕ್ಷಣನಿರೂಪಣೆ ಮಾಡಿ ಪಂಪನ ಆ ಬಂಧಗಳನ್ನು ಓದಿ ತೋರಿಸಿದುದು ಮಾತ್ರವಲ್ಲ, ಕೀ. ಶೇ. ಕಡೆಂಗೋಡ್ಲು ಶಂಕರಭಟ್ಟರ ಅಧ್ಯಕ್ಷತೆಯಲ್ಲಿ ಮರುದಿನ ಪೂರ್ವಾಹ್ಣ ನೆರೆದ ಕವಿಸಮ್ಮೇಳನದಲ್ಲಿ ನನ್ನ ಬೇರೆ ಕೆಲವು ಕವನಗಳೊಡನೆ ನನ್ನದೇ ಒಂದು ಪಿರಿಯಕ್ಕರವನ್ನೂ ಹಾಡಿ ತೋರಿಸಿದೆ. ಹೀಗೆ ಮಡಿಕೇರಿಯಲ್ಲಿ ಪ್ರಕಟವಾದ ಪಿರಿಯಕ್ಕರದ ಧಾಟಿ ಬಹುಜನರಿಗೆ ಮಾನ್ಯವಾಯಿತು. ನನ್ನ ಗುರುಜನರೊಲ್ಲೊಬ್ಬರಾದ ಕೀ. ಶೇ. ಪಂಡಿತ ಮುಳಿಯ ತಿಮ್ಮಪ್ಪಯ್ಯನವರೂ ಆ ಧಾಟಿಯನ್ನು ಸ್ವೀಕರಿಸಿ ಮುಂದೆ ಎಷ್ಟೋ ಸಭೆಗಳಲ್ಲಿ ಪಂಪನ ಪಿರಿಯಕ್ಕರಗಳನ್ನು ಆ ಬಗೆಯಾಗಿಯೇ ಹಾಡಿ ಜನರಂಜನೆ ಮಾಡುತ್ತಿದ್ದರು, ಆದರೆ 1936ರಲ್ಲಾದ ಕನ್ನಡ ಕೈಪಿಡಿಯ ಎರಡನೆಯ ಮುದ್ರಣದಲ್ಲಿ ಸೇರಿಸಲ್ಪಟ್ಟ 'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಲೇಖನದಲ್ಲಿ "ಜೈನ ಕಾವ್ಯಗಳಲ್ಲಿ ಒಂದೆರಡು ಪಿರಿಯಕ್ಕರಗಳಿರುವುದುಂಟು. ಇವುಗಳನ್ನು ಯಾವ ಧಾಟಿಯಲ್ಲಿ ಅನ್ನುತ್ತಿದ್ದರೋ ತಿಳಿಯದು" ಎಂದು ಕೀ. ಶೇ. ಬಿ. ಎಂ. ಶ್ರೀಕಂಠಯ್ಯನವರು ಬರೆದಿರುವುದಕ್ಕೆ ಕಾರಣವಿಲ್ಲದಿಲ್ಲ. ಅದೇನೆಂದರೆ ಸಮ್ಮೇಳನದಲ್ಲಿ ನಾನು ಪಿರಿಯಕ್ಕರವನ್ನು ಓದಿದ ದಿವಸ ಅವರು ಮಡಿಕೇರಿಗೆ ಬಂದಿರಲಿಲ್ಲ. ಮರುದಿನ ಬೈಸಾರಿ ಆಗಮಿಸಿದ್ದರಂತೆ. ಆದರೆ, ಆ ದಿನದ ಪೂರ್ವಾಹ್ಣದ ಕಾರ್ಯಕ್ರಮ ಮುಗಿದೊಡನೆ ನಾನು ಮಂಗಳೂರಿಗೆ ಹೊರಟಿದ್ದೆ. ನಾನು ಪಿರಿಯಕ್ಕರವನ್ನು ಓದಿದುದನ್ನು ಅವರು ಕೇಳಿರುತ್ತಿದ್ದರೆ ಅವರು ಆ ಮೇಲೆ ಉದ್ಧರಿಸಿದ ಮಾತನ್ನು ಲೇಖನದಲ್ಲಿ ಸೇರಿಸುತ್ತಿರಲಿಲ್ಲವೆಂಬುದರಲ್ಲಿ ನನಗೆ ಸಂದೇಹವೇನೂ ತೋರುವುದಿಲ್ಲ.

ಸಂಚಿಕೆಯಲ್ಲಿಯೇ ಅದನ್ನು ಪ್ರಕಟಪಡಿಸುವುದಾಗಿ ಮಾನ್ಯರಾದ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರು ನನಗೆ ತಿಳಿಸಿರುತ್ತಾರೆ. ಒಂದು ವೇಳೆ ನಿಮಗೆ ಹಸ್ತಪ್ರತಿ-ಯನ್ನು ಕೊಡದಿದ್ದ ಪಕ್ಷದಲ್ಲಿ, ನಿಮ್ಮ ಪರೀಕ್ಷಾಕಾಲದೊಳಗೆ ಅದು ಪ್ರಕಟ-ವಾಗಲೂಬಹುದು; ಆಗ ಅದನ್ನು ನೀವು ಓದಿಕೊಳ್ಳಬಹುದು" – ಎಂದು ಅವರಿಗೆ ಹೇಳಿದೆ. ಹೀಗೆ ಸಮ್ಮೇಳನಕಾಲದಲ್ಲಿ ನಡೆದ ಘಟನೆಗಳಿಂದ ನನ್ನ ಪ್ರಬಂಧವು ಹಲವರ ಮೆಚ್ಚುಗೆಗೆ ಪಾತ್ರವಾಯಿತೆಂಬುದು ನನಗೆ ಮನವರಿಕೆ-ಯಾಯಿತು.

ಪರಿಷತ್ಪತ್ರಿಕೆಯಲ್ಲಿ ನನ್ನ ಲೇಖನವು ಪ್ರಕಟವಾದ ಮೇಲೆ ಅದು ಬಹು ಜನಪ್ರಿಯವೂ ಛಂದೋವಿದ್ಯಾಸಕ್ತರಿಗೆ ಉಪಯುಕ್ತವೂ ಆಗಿ ಪರಿಣಮಿಸಿ-ತೆಂಬುದಕ್ಕೆ ನನಗೆ ಹಲವು ಸಾಕ್ಷ್ಯಗಳು ಲಭಿಸಿದುವು. ಅದನ್ನೋದಿದ ಕೀ. ಶೇ. ಪಂಜೆ ಮಂಗೇಶರಾಯರು ಲೇಖನವನ್ನು ಮೆಚ್ಚಿದುದು ಮಾತ್ರವಲ್ಲ, ಒಂದಿಷ್ಟು ಆಶ್ಚರ್ಯವನ್ನೂ ಸೂಚಿಸಿ, 'ಇದೆಲ್ಲ ನಿಮಗೆ ಎಲ್ಲಿ ದೊರಕಿತಯ್ಯ?' ಎಂದು ನನ್ನನ್ನು ಕೇಳಿದರು. ಆ ಲೇಖನದಲ್ಲಿ ನಾನು ಮಾಡಿದ ಪ್ರತಿಪಾದನೆಗಳು ಬೇರೆಲ್ಲಿಂದಲೂ ತಂದವುಗಳಾಗಿರದುದರಿಂದ ಹಿರಿಯರಾದ ಅವರ ಪ್ರಶ್ನೆಗೆ ಯಾವ ಉತ್ತರವನ್ನೂ ಕೊಡದೆ ಮೌನದಿಂದ ಅವರ ಮುಖನೋಡುತ್ತಾ ನಿಂತುಬಿಟ್ಟೆ. ಮತ್ತೆ 1933ರಲ್ಲಿಯೋ 1934ರಲ್ಲಿಯೋ – ಸರಿಯಾಗಿ ನೆನಪಿಲ್ಲ – ಮಂಗಳೂರಲ್ಲಿ ಕೆಲವರು ಸಾಹಿತ್ಯಪ್ರೇಮಿಗಳು ಸ್ಥಾಪಿಸಿ ನಡೆಯಿಸಿಕೊಂಡು ಬರುತ್ತಿದ್ದ 'ಮಿತ್ರಮಂಡಲಿ' ಎಂಬ ಸಾಹಿತ್ಯಸಂಘದ ಒಂದು ಸಭೆಗೆ ಭಾಷಣ-ಕರ್ತರಾಗಿ ಆಗಮಿಸಿದ್ದ ಕೀ. ಶೇ. ದೇವುಡು ನರಸಿಂಹ ಶಾಸ್ತ್ರಿಗಳ ಭೇಟಿ ಅಲ್ಲಿ ನನಗಾದಾಗ, ನನ್ನ ಆ ಪ್ರಬಂಧವನ್ನು ತಾವು ಓದಿದುದಾಗಿ ಹೇಳಿ ಅದರ ಪ್ರಶಂಸೆಯನ್ನು ಬಹಳವಾಗಿ ಮಾಡಿದರು. ಆ ಮೇಲೆ ಒಂದೆರಡು ವರ್ಷಗಳಲ್ಲಿ ಯಾವುದೋ ಕಾರ್ಯನಿಮಿತ್ತವಾಗಿ ಮಂಗಳೂರಿಗೆ ಬಂದಿದ್ದ ಕೀ. ಶೇ. ಸ. ಸ. ಮಾಳವಾಡರು ನಮ್ಮ ಮನೆಗೆ ಬಂದು ತಮ್ಮ ಎಂ. ಎ. ಪರೀಕ್ಷೆಗೆ ನನ್ನ ಪ್ರಬಂಧದಿಂದ ಬಹಳ ಸಹಾಯವಾಯಿತೆಂದೂ ಅದಕ್ಕಾಗಿ ತಾವು ಋಣಿ-ಗಳೆಂದೂ ನನಗೆ ತಿಳಿಸಿದರು. ಹಾಗೆಯೇ ಇನ್ನೊಮ್ಮೆ ಶ್ರೀಮಾನ್ ಎನ್. ಕೆ. ಕುಲಕರ್ಣಿಯವರು ತಮ್ಮ ಮಿತ್ರರೊಬ್ಬರ ದರ್ಶನಕ್ಕಾಗಿ ಮಂಗಳೂರಿಗೆ ಬಂದವರು ಆ ಮಿತ್ರರೊಡನೆ ನಮ್ಮ ಮನೆಗೂ ಬಂದು, ತಾವು ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದುದು ನನ್ನ ಪ್ರಬಂಧದ ನೆರವಿನಿಂದ ಎಂಬುದನ್ನು ನನಗೆ ಸೂಚಿಸಿ ತಮ್ಮ ಕೃತಜ್ಞತೆಯನ್ನು ತಿಳಿಸಿದರು.

ಹೀಗೆ ಆ ನನ್ನ ಲೇಖನವು ಹಲವರು ವಿದ್ವಾಂಸರ ಮೆಚ್ಚುಗೆಯನ್ನು ಪಡೆದುದು ಮಾತ್ರವಲ್ಲ, ಅದು ಪ್ರೌಢವಿದ್ಯಾರ್ಥಿಗಳಿಗೂ ಉಪಯುಕ್ತವಾಗು-ವಂತಹದೆಂದು ನನಗೆ ಮನವರಿಕೆಯಾದುದರಿಂದ ಅದನ್ನೊಂದು ಪುಸ್ತಕ ರೂಪವಾಗಿ ಪ್ರಕಾಶಪಡಿಸಬೇಕೆಂಬ ಬಯಕೆ ನನ್ನಲ್ಲಿ ಹುಟ್ಟಿತು. ಆದರೆ ನಾನಾ

ಕಾರಣಗಳಿಂದ ಅದು ಬಯಕೆಯಾಗಿಯೇ ಉಳಿಯಿತು ಹೊರತು ಆ ಕಾರ್ಯವು ಇಷ್ಟು ವರ್ಷಗಳವರೆಗೂ ಕೈಗೂಡದೆ ಹೋಯಿತು. ಆ ಲೇಖನವು ಪ್ರಕಟವಾಗಿ ಕೆಲವು ವರ್ಷಗಳ ಬಳಿಕ ಜಯಕೀರ್ತಿಯ ಛಂದೋನುಶಾಸನವು ಪ್ರಕಾಶಿತವಾಗಿ ನಾಗವರ್ಮನು ಕರ್ಣಾಟಕ ವಿಷಯಜಾತಿಗಳೆಂದು ಹೆಸರಿಸಿರುವ ಛಂದೋ-ಬಂಧಗಳೆಲ್ಲವುಗಳ ಲಕ್ಷಣವು ನಿಸ್ಸಂದಿಗ್ಧವಾಗಿ ತಿಳಿದುಬರುವಂತಾಯಿತು. ಆದುದರಿಂದ ಆ ಗ್ರಂಥದ ಬೆಳಕಿನಲ್ಲಿ ನನ್ನ ಲೇಖನಕ್ಕೆ ಒಂದಿಷ್ಟು ಹೊಸ ರೂಪವನ್ನು ಕೊಟ್ಟು ಪ್ರಕಾಶಪಡಿಸುವುದು ಯುಕ್ತವೆಂಬುದನ್ನು ಮನಗಂಡು ನನ್ನ ಲೇಖನದ ಪರಿಷ್ಕರಣಕ್ಕೆ ತೊಡಗಿದೆ. ಆದರೆ ಅನಾರೋಗ್ಯದಿಂದಾಗಿ ಅದು ಕೈಗೂಡದಿದ್ದುದರಿಂದ ಆ ಬಯಕೆಯನ್ನೇ ತೊರೆದುಬಿಡಬೇಕಾಯಿತು. ಮತ್ತೆ ಯತ್ಕಿಂಚಿತ್ ಆರೋಗ್ಯಲಾಭವಾದ ಮೇಲೆ ನನ್ನ ಲೇಖನಪ್ರವೃತ್ತಿ ಬೇರೆ ಬೇರೆಡೆಗೆ ಸರಿದುದರಿಂದ ಪ್ರಸ್ತುತ ಪ್ರಬಂಧದ ಪರಿಷ್ಕರಣವು ಆಗದೆ ಉಳಿಯಿತು. ಆದರೆ ಛಂದೋವಿಷಯದಲ್ಲಿಯೇ ಬಹುಕಾಲ ಸಂಚರಿಸಿದ ನನ್ನ ಮನಸ್ಸು – ನನ್ನ ಲೇಖನವು ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ ಮೇಲೆ ಛಂದೋವಿಷಯಕವಾಗಿ ಕನ್ನಡದಲ್ಲಿ ಪ್ರಕಟವಾದ ಪುಸ್ತಕಗಳಲ್ಲಿ ಮತ್ತು ಲೇಖನಗಳಲ್ಲಿ 'ಲಯ'ವೆಂಬ ಸಂಜ್ಞೆಯು ಅವ್ಯವಸ್ಥಿತವಾದ ಅರ್ಥದಲ್ಲಿ ಮನಬಂದಂತೆಂಬಂತೆ ಪ್ರಯೋಗಿಸ-ಲ್ಪಡುತ್ತಿರುವುದನ್ನು ನೋಡಿ ನೋಡಿ ಬೇಸತ್ತು ಆ ಸಂಜ್ಞೆಯ ಅರ್ಥವ್ಯಾಪ್ತಿ ಎಷ್ಟೆಂಬುದನ್ನು ನಿಸ್ಸಂದಿಗ್ಧವಾಗಿ ಪ್ರಕಾಶಪಡಿಸುವುದು ಅವಶ್ಯವೆಂಬ ಭಾವನೆಗೆ ವಶವಾದುದರಿಂದ – ಆ ವಿಷಯದಲ್ಲಿ ಲೇಖನವೊಂದನ್ನು ಬರೆಯತೊಡಗಿದೆ. ಆದರೆ ಅದು ಅಷ್ಟಕ್ಕೇ ನಿಲ್ಲದೆ, ಅನೇಕ ಛಂದಸ್ತತ್ತ್ವಗಳ ವಿವೇಚನೆಯಾಗಿ ಪರಿಣಮಿಸಿ, 'ಛಂದೋಗತಿ' ಎಂಬ ಹೆಸರಿನ ಗ್ರಂಥವೇ ಆಗಿ ರೂಪುಗೊಂಡಿತು. ಈ ಅಪರವಯಸ್ಸಿನಲ್ಲಿಯೂ ದೈವಕೃಪೆಯಿಂದ ಒಂದು ಗ್ರಂಥವು ನನ್ನಿಂದ ರಚಿತವಾಯಿತೆಂಬುದರಿಂದ ನನ್ನ ಹಳೆಯ ಬಯಕೆ ಚಿಗುರೊಡೆದು ಪ್ರಸ್ತುತ ಪ್ರಬಂಧದ ಪರಿಷ್ಕರಣಕ್ಕೆ ಕೈಯಿಕ್ಕುವಂತೆ ಮಾಡಿತು. ಆದರೆ ಪ್ರಬಂಧದ ಪೂರ್ವಾರ್ಧವನ್ನು ಪರಿಷ್ಕರಿಸಿ ಮುಗಿಸುವಷ್ಟರಲ್ಲಿ, ಮೊದಲೇ ಬಹಳ ದುರ್ಬಲವಾಗಿದ್ದ ನನ್ನ ದೃಷ್ಟಿ ದಿನದಿನಕ್ಕೆ ಬಲಹೀನವಾಗುತ್ತಾ ಹೋಗಿ ಮುಂದೆ ಬರೆಯುವುದು ಅಸಾಧ್ಯವಾಗಿ ಹೋಯಿತು. ಅಂತೂ ಈ ಪ್ರಬಂಧಕ್ಕೆ ಪುನರ್ಜನ್ಮ ಲಭಿಸುವ ಯೋಗವೇ ಇಲ್ಲವೆಂದು ಭಾವಿಸಿಕೊಂಡೆ. ಆದರೆ ದೈವಕೃಪೆಯಿಂದ ಸಾಹಿತ್ಯಸೇವಾಸಕ್ತರಾದ ತರುಣರೊಬ್ಬರ ಸಹಾಯಹಸ್ತವು ಅಕಸ್ಮಾತ್ತಾಗಿ ನನ-ಗೊದಗಿಬಂತು; ಪ್ರಬಂಧದ ಪುನರುದಯವೂ ಆಯಿತು. ಸಾಹಿತ್ಯಸಮ್ಮೇಳನದಲ್ಲಿ ನಾನು ಓದಿದ ಲೇಖನವು ಪರಿಷತ್ಪತ್ರಿಕೆಯಲ್ಲಿ ಯಥಾವತ್ತಾಗಿ ಪ್ರಕಟವಾದು-ದಾಗಿದೆ. ಅದರಲ್ಲಿ ಪ್ರತಿಪಾದಿಸಿದ ಎಷ್ಟೋ ಅಂಶಗಳು ಆ ಕಾಲದಲ್ಲಿ ಅವಶ್ಯವಾಗಿದ್ದರೂ ಇಂದು ಅವೆಲ್ಲ ಅನವಶ್ಯವಾಗಿ ಕಾಣಬಹುದಾದುರಿಂದ ಅಂದು ಪ್ರಕಾಶಿತವಾದ ಲೇಖನದ ಪೂರ್ಣರೂಪವನ್ನು ಇಲ್ಲಿ ಅಳವಡಿಸಿಕೊಳ್ಳದೆ

ಈಗಲೂ ಇನ್ನು ಮುಂದೆಯೂ ವಾಚನೀಯವಾಗಬಹುದಾದ ಭಾಗವನ್ನು ಮಾತ್ರ ಈ ಪ್ರಕಟನೆಯಲ್ಲಿ ಉಳಿಸಿಕೊಂಡು ಅವಶ್ಯವಿದ್ದಲ್ಲೆಲ್ಲ ಟಿಪ್ಪಣಿಗಳನ್ನು ಹೊಸತಾಗಿ ಸೇರಿಸಿ ಪರಿಶಿಷ್ಟರೂಪದಲ್ಲೂ ಕೆಲವು ವಿಚಾರಗಳನ್ನು ಪ್ರಕಟ-ಪಡಿಸಲಾಗಿದೆ. ಇದೂ ಅಲ್ಲದೆ, ಪರಿಷತ್ಪತ್ರಿಕೆಯಲ್ಲಿ ನನ್ನ ಲೇಖನವು ಪ್ರಕಟವಾದ ಮೇಲೆ ಏತದ್ವಿಷಯಕವಾಗಿ ನಾನು ಬರೆದು ಕೆಲವು ಲೇಖನಗಳನ್ನು ಅನುಬಂಧಗಳಾಗಿಯೂ ಜೋಡಿಸಲಾಗಿದೆ.[2] ಮೂಲಲೇಖನದ ಯಾವ ಯಾವ ಭಾಗಗಳು ಇಲ್ಲಿ ಎಲ್ಲೆಲ್ಲಿ ಲುಪ್ತವಾಗಿವೆ ಎಂಬುದನ್ನು ಆಯಾ ಸಂದರ್ಭಗಳಲ್ಲಿ ಯುಕ್ತವಾದ ಚಿಹ್ನೆಗಳಿಂದ ತೋರಿಸಲಾಗಿದೆ. ಕನ್ನಡ ಛಂದಸ್ಸಿನ ಆದಿರೂಪಗಳ ಅನ್ವೇಷಣೆ ಮಾತ್ರವಲ್ಲ ಧಾಟಿಯನ್ನವಲಂಬಿಸಿ ಅನೇಕ ಭಾಷೆಗಳ ಛಂದೋ-ರೂಪಗಳನ್ನು ಹೋಲಿಸಿ ಮಾಡಿದ ಮೊತ್ತಮೊದಲ ವಿವೇಚನೆಯು ಪರಿಷತ್ಪತ್ರಿಕೆ-ಯಲ್ಲಿ ಪ್ರಕಟವಾದ ನನ್ನ ಲೇಖನದಲ್ಲಿಯೇ ಆಗಿರುವುದರಿಂದ ಅದಕ್ಕೆ ಒಂದಿಷ್ಟು ಐತಿಹಾಸಿಕ ಮಹತ್ತ್ವವೂ ಬಂದಿರುತ್ತದೆ.[3] ಈ ಕಾರಣದಿಂದ ಈ ಪರಿಷ್ಕರಣದಲ್ಲಿ ಮೂಲಭಾಗದಲ್ಲಿ ಯಾವ ಬದಲಾವಣೆಯನ್ನೂ ಮಾಡದೆ, ಹೊಸತಾಗಿ ಹೇಳಬೇಕಾದ ವಿಷಯಗಳನ್ನೆಲ್ಲ ಟಿಪ್ಪಣಿಗಳ ಹಾಗೂ ಪರಿಶಿಷ್ಟಗಳ ರೂಪದಲ್ಲಿ

---

2. ಹೀಗೆ ಜೋಡಿಸಲ್ಪಟ್ಟ ನಾಲ್ಕು ಅನುಬಂಧಗಳೊಳಗೆ ಮೊದಲನೆಯದು ಹಾಗೂ ನಾಲ್ಕನೆಯದು ಆ ಅನುಬಂಧಗಳ ಕೊನೆಗಳಲ್ಲಿ ಸೂಚಿಸಿದ ಪತ್ರಿಕೆಗಳಲ್ಲಿಯೂ ಎರಡನೆಯ ಅನುಬಂಧವು ಒಂದು ಸಂಭಾವನಾಗ್ರಂಥದಲ್ಲಿಯೂ ಮೂರನೆಯದು ಒಂದು ಪುಸ್ತಕ-ರೂಪವಾಗಿಯೂ ಬೇರೆ ಬೇರೆ ಕಾಲಗಳಲ್ಲಿ ಪ್ರಕಟವಾದವುಗಳು. ಇವುಗಳನ್ನು ಪ್ರಕಾಶ-ಪಡಿಸಿರುವ ಮಹನೀಯರೆಲ್ಲರಿಗೆ, ವಿಶೇಷತಃ ಮೂರನೆಯದನ್ನು ಪುಸ್ತಕರೂಪವಾಗಿ ಪ್ರಕಾಶಪಡಿಸಿದ ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ಕಾರ್ಯಕರ್ತರಿಗೆ – ನನ್ನ ಅನಂತ ಕೃತಜ್ಞತೆಗಳನ್ನು ಗೌರವಪೂರ್ವಕವಾಗಿ ಸಮರ್ಪಿಸುತ್ತೇನೆ.

3. 'ಕನ್ನಡ ಛಂದಸ್ಸು' ಎಂಬ ನನ್ನ ಪ್ರಬಂಧವು ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗುವುದಕ್ಕಿಂತ ಮೊದಲು, ಕನ್ನಡದಲ್ಲಿ ಮಾಡಲ್ಪಟ್ಟ ಛಂದೋವಿಚಾರಗಳಲ್ಲಿ ಲಯ, ಗತಿ, ಧಾಟಿ ಇತ್ಯಾದಿ ಸಂಜ್ಞೆಗಳು ಪ್ರಯುಕ್ತವಾದದ್ದೆಲ್ಲಿಯೂ ಕಂಡುಬರುವುದಿಲ್ಲ. (ಎಲ್ಲಿಯಾದರೂ ಕಾಣಿಸಿ-ಕೊಂಡಿದ್ದರೆ ಅದು ನನ್ನ ಗೋಚರಕ್ಕೆ ಬಂದಿಲ್ಲ.) ಆದರೆ ತದನಂತರ ಮಾಡಲ್ಪಟ್ಟ ಛಂದೋವಿಚಾರಗಳಲ್ಲೆಲ್ಲ ಆ ಸಂಜ್ಞೆಗಳು ವಿಪುಲವಾಗಿ ಬಳಸಲ್ಪಟ್ಟಿರುವುದನ್ನು ನೋಡಬಹು-ದಾಗಿದೆ. ಮತ್ತು ತತ್ಪೂರ್ವದಲ್ಲಿ, ಛಂದೋಬಂಧಗಳ ಉತ್ಪತ್ತಿಯು ಗಣಗಣನೆಯಿಂದ, ಎಂದರೆ ವಿದ್ವಾಂಸರು ಮಾಡಿದ ಗಣಿತಕ್ರಿಯೆಯ ಫಲವಾಗಿ ಉಂಟಾದುದೆಂಬ ಭಾವನೆಯು ಸಾಮಾನ್ಯವಾಗಿ ನೆಲೆಗೊಂಡಿತ್ತು. (ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ ನನ್ನ ಲೇಖನದ ಪೂರ್ವಾರ್ಧದ ಹೆಚ್ಚಿನ ಭಾಗವು ಈ ಭಾವನೆಯನ್ನು ತೊಡೆದು ಹಾಕುವುದಕ್ಕಾಗಿ ಮಾಡಲ್ಪಟ್ಟ ಪ್ರಯತ್ನವೇ ಆಗಿದೆ.) ವಿದ್ವತ್ಸಮುದಾಯದಲ್ಲಿ ಈ ಭಾವನೆ ಈಗ ಅಳಿದಿದೆಯೆಂದು ಹೇಳಬಹುದಾದರೂ, ಇದು ಇನ್ನೂ ಪೂರ್ಣವಾಗಿ ಮಾಯವಾಗಿಲ್ಲವೆಂಬುದು, ಬೆಂಗಳೂರಿನ 'ಲೋಚನ' ಎಂಬ ಷಾಣ್ಮಾಸಿಕ ಪತ್ರಿಕೆಯಲ್ಲಿ ಇತ್ತೀಚೆ ಪ್ರಕಟವಾದ ಒಂದು ಉಪನ್ಯಾಸದಿಂದ ವ್ಯಕ್ತವಾಗುತ್ತದೆ.

ಇಲ್ಲಿ ಕೊಟ್ಟದ್ದಾಗಿದೆ. (ಪ್ರಸ್ತುತ ಪರಿಷ್ಕರಣಕ್ಕೆ ಅನುಬಂಧಿಸಿದ ಲೇಖನಗಳು ಬೇರೆ ಬೇರೆ ಕಾಲಗಳಲ್ಲಿ ಬರೆಯಲ್ಪಟ್ಟವುಗಳು. ಈಗ ಇಲ್ಲಿ ಕೊಟ್ಟಿರುವ ಟಿಪ್ಪಣಿಗಳ ಅಭಿಪ್ರಾಯಗಳಿಗೂ ಅನುಬಂಧಗಳಲ್ಲಿ ಪ್ರಕಟವಾಗಿರುವ ಅಭಿಪ್ರಾಯಗಳಿಗೂ ಎಲ್ಲಿಯಾದರೂ ಯತ್ಕಿಂಚಿತ್ ವಿರೋಧವಿರುವಂತೆ ಭಾಸವಾದ ಪಕ್ಷದಲ್ಲಿ – ಅಂತಹದೇನೂ ಬಾರದಿರುವಂತೆ ಸಾಕಷ್ಟು ಎಚ್ಚರ ವಹಿಸಿರುವೆನಾದರೂ ಪ್ರಮಾದವಶಾತ್ ಎಲ್ಲಿಯಾದರೂ ಕಾಣಿಸಿಕೊಳ್ಳುವುದಾದರೆ – ಕಾಲಾನುಕ್ರಮದಲ್ಲಿ ಮತ್ತೆ ಮೂಡಿರುವ ಅಭಿಪ್ರಾಯಗಳೇ ಗ್ರಾಹ್ಯವೆಂಬುದಾಗಿ ತಿಳಿಯಬೇಕೆಂದು ವಾಚಕ ಮಹನೀಯರಲ್ಲಿ ನಮ್ರವಿಜ್ಞಾಪನೆ.)

ಪರಿಷ್ಕೃತವಾದೀ ನಿಬಂಧದ ಉತ್ತರಭಾಗವೆಲ್ಲವನ್ನೂ ಪ್ರತಿಫಲಾಪೇಕ್ಷೆ-ಯೇನೂ ಇಲ್ಲದೆ, ತಿದ್ದಿ ತಿದ್ದಿ ಪುನಃ ಪುನಃ ಬರೆಯಿಸಿದರೂ ತಾಳ್ಮೆಗೆಡದೆ, ನಾನು ಉಚ್ಚರಿಸಿದಂತೆಯೇ ಚಾಚೂ ತಪ್ಪದೆ ಲಿಪಿರೂಪಕ್ಕೆ ತಂದು ಕೊಟ್ಟು, ಇದರ ಅಚ್ಚುಕರಡುಗಳನ್ನು ತಿದ್ದಿದ (ಈ ಮೇಲೆ ಸೂಚಿಸಲ್ಪಟ್ಟ) ಸಾಹಿತ್ಯಸೇವಾಸಕ್ತರಾದ ತರುಣರು ಯಾರೆಂದರೆ – ಪ್ರಕೃತ ಹೆಬ್ರಿಯ ಸರಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಶ್ರೀ ಪಾದೇಕಲ್ಲು ವಿಷ್ಣು ಭಟ್ಟ, ಎಂ. ಎ. ಎಂಬ ಉತ್ಸಾಹಿ ಯುವಕರು. ಇವರು ಉಡುಪಿಯಲ್ಲಿ ಸಿದ್ಧವಾಗುತ್ತಿರುವ ತುಳುನಿಘಂಟುವಿನ ಸಂಪಾದಕ ವರ್ಗದವರಲ್ಲೊಬ್ಬರಾಗಿಯೂ ಕೆಲವು ಸಮಯ ಕೆಲಸಮಾಡಿದ್ದರು. ಭಾಷೆಗೆ ಸಂಬಂಧಿಸಿದ ಶಾಸ್ತ್ರಗಳಲ್ಲಿ ಇವರಿಗೆ ವಿಶೇಷವಾದ ಪ್ರೀತಿಯಿರುವುದು ಮಾತ್ರವಲ್ಲ, ಸಂಸ್ಕೃತದ ಪರಿಚಯವೂ ಸಾಕಷ್ಟು ಇದೆ. ಈ ಕಾರಣಗಳಿಂದಾಗಿ ಪ್ರಬಂಧವನ್ನು ಇವರ ಕೈಯಿಂದ ಬರೆಯಿಸುವುದು ನನಗೆ ಸುಲಭಸಾಧ್ಯವೇ ಆಯಿತೆಂದರೆ ತಪ್ಪಾಗದು. ಅವರ ಈ ಅಸಾಧಾರಣವಾದ ಉಪಕಾರಕ್ಕಾಗಿ ಅವರನ್ನು ಎಷ್ಟು ಕೊಂಡಾಡಿದರೂ ಕಡಮೆಯೇ ಸರಿ.

ಶಾಸ್ತ್ರಸಂಬಂಧವಾದ ಪುಸ್ತಕಗಳನ್ನು ಓದುವವರ ಸಂಖ್ಯೆ ವಿರಳವಾಗಿ-ರುವುದರಿಂದ ಪುಸ್ತಕಪ್ರಕಾಶಕರು ಸಾಮಾನ್ಯವಾಗಿ ಅವುಗಳ ಪ್ರಕಟನೆಯಲ್ಲಿ ಆಸಕ್ತಿಯಿಲ್ಲದವರಾಗಿರುತ್ತಾರೆ. ಆದುದರಿಂದ ಈ ನಿಬಂಧದ ಪ್ರಕಟನೆಯ ಕುರಿತು ಏನು ಮಾಡಬಹುದೆಂದು ಯೋಚಿಸುತ್ತಿರುವಷ್ಟರಲ್ಲಿ ಕೆಲವರು ಮಿತ್ರರ ಪ್ರೀತಿಯ ನೆರವು ಅಯಾಚಿತವಾಗಿ ಲಭಿಸಿತು. ಮತ್ತು ಮಣಿಪಾಲ ಸಾಹಿತ್ಯ ಸಂಘದ ಕಾರ್ಯದರ್ಶಿಗಳೂ ನನ್ನ ಬಹುಕಾಲದ ಮಿತ್ರರೂ ಅಭಿಮಾನಿಗಳೂ ಆದ ಶ್ರೀಮಾನ್ ಪೊಳಲಿ ಬಾಲಕೃಷ್ಣ ಶೆಟ್ಟರು ಸಾಹಿತ್ಯಸಂಘದ ಪ್ರಕಟನೆಯಾಗಿ ಇದನ್ನು ಪ್ರಕಾಶಪಡಿಸಿ, ವಿತರಿಸುವ ಹೊಣೆಯನ್ನು ಸಂತೋಷದಿಂದ ಒಪ್ಪಿಕೊಂಡರು. ಈ ಸುಯೋಗಗಳೆಲ್ಲ ಕೂಡಿಬರುವುದಕ್ಕಾಗಿ ನಾನು ಯಾವ ಪ್ರಯತ್ನವನ್ನೂ ಮಾಡಲಿಲ್ಲ; ಇವೆಲ್ಲವೂ ತಾವಾಗಿ ಒದಗಿ ಬಂದವುಗಳು. ಇವನ್ನು ದೇವರ ದಯೆಯೆಂದಲ್ಲದೆ ಬೇರೇನೆಂದೂ ಹೇಳಲಾರೆ. ಹೀಗೆ ಪರಿಷ್ಕೃತರೂಪವನ್ನು

ಪಡೆದ 'ಕನ್ನಡ ಛಂದಸ್ಸು' ಎಂಬೀ ನಿಬಂಧವನ್ನು ಅವನ ಪದತಲದಲ್ಲಿ ಸಮರ್ಪಿಸುತ್ತೇನೆ.

ಪುಸ್ತಕವು ಕನ್ನಡ ಜನಕ್ಕೆ ಲಭ್ಯವಾಗುವಂತೆ ನಿಷ್ಕಾಮ ಬುದ್ಧಿಯಿಂದ ಪ್ರಯತ್ನಿಸಿದ ಪೂರ್ವೋಕ್ತರಾದ ನನ್ನ ಆಪ್ತರೆಲ್ಲರಿಗೆ ಮತ್ತು ಇದರ ಮುದ್ರಣವನ್ನು ಅಂದವಾಗಿ ನೆರವೇರಿಸಿಕೊಟ್ಟ ನವಯುಗ ಮುದ್ರಣಾಲಯದ ಒಡೆಯರಿಗೆ ಹಾಗೂ ಕೆಲಸಗಾರರಿಗೆ ನನ್ನ ಹಾರ್ದಿಕವಾದ ವಂದನೆಗಳನ್ನೂ ಕೃತಜ್ಞತೆಗಳನ್ನೂ ಸಲ್ಲಿಸಿ ಅವರೆಲ್ಲರ ಮೇಲೆ ಭಗವದನುಗ್ರಹವು ಸದಾ ಇರಲಿ ಎಂದು ಪ್ರಾರ್ಥಿಸುತ್ತೇನೆ.

ಮಣಿಪಾಲ
20–11–1988

**ಸೇಡಿಯಾಪು ಕೃಷ್ಣ ಭಟ್ಟ**

## ಈ ಕೃತಿಯಲ್ಲಿ ನಿರ್ದಿಷ್ಟವಾಗಿರುವ ಗ್ರಂಥಾದಿಗಳ ನಾಮಾವಳಿ

### ೧. ಕನ್ನಡ

೧. ಛಂದೋಂಬುಧಿ – ನಾಗವರ್ಮ
೨. ಕವಿರಾಜಮಾರ್ಗ – ನೃಪತುಂಗ
೩. ಶಬ್ದಮಣಿದರ್ಪಣ – ಕೇಶಿರಾಜ
೪. ಪಂಪಭಾರತ – ಆದಿಪಂಪ
೫. ಗದುಗಿನ ಭಾರತ – ನಾರಣಪ್ಪ (ಕುಮಾರವ್ಯಾಸ)
೬. ಜೈಮಿನಿಭಾರತ – ಲಕ್ಷ್ಮೀಶ
೭. ಜಯನೃಪಕಾವ್ಯ – ಮಂಗರಸ
೮. ಜಗನ್ನಾಥವಿಜಯ – ರುದ್ರಭಟ್ಟ
೯. ಗದಾಯುದ್ಧ – ರನ್ನ
೧೦. ಲೀಲಾವತಿ – ನೇಮಿಚಂದ್ರ
೧೧. ರಾಜಶೇಖರವಿಳಾಸ – ಷಡಕ್ಷರಿ
೧೨. ವೃಷಭೇಂದ್ರವಿಜಯ – ಷಡಕ್ಷರಿ
೧೩. ಅಪ್ರತಿಮವೀರಚರಿತ – ತಿರುಮಲಾರ್ಯ
೧೪. ಶ್ರೀರಾಮಾಶ್ವಮೇಧ – ಮುದ್ದಣ
೧೫. ಪಾರ್ತಿಸುಬ್ಬನ ಯಕ್ಷಗಾನಗಳು
೧೬. ರತ್ನಾಕರಾಧೀಶ್ವರಶತಕ – ರತ್ನಾಕರವರ್ಣಿ
೧೭. ಸೋಮೇಶ್ವರಶತಕ – ಸೋಮನಾಥ
೧೮. ಗೋವಿನ ಹಾಡು – ಅಜ್ಞಾತ ಕವಿ
೧೯. ಡೊಂಬರ ಚೆನ್ನೆ ಇತ್ಯಾದಿ ಕವನಗಳು – ಪಂಜೆ ಮಂಗೇಶರಾವ್
೨೦. ಮುಪ್ಪಿನ ಷಡಕ್ಷರಿಯ "ವಚನ" (ಪದ್ಯ)
೨೧. ಬಸವೇಶ್ವರ ವಚನ (ಗದ್ಯ)
೨೨. ಹಗಲಿರುಳು – ಮುಳಿಯ ತಿಮ್ಮಪ್ಪಯ್ಯ
೨೩. ಸಮಾಲೋಕನ – ತೀ. ನಂ. ಶ್ರೀಕಂಠಯ್ಯ
೨೪. ಕನ್ನಡ ಕೈಪಿಡಿ – (ಮೈಸೂರು ವಿಶ್ವವಿದ್ಯಾನಿಲಯ, ೧೯೫೫)
೨೫. ಕನ್ನಡ ಛಂದಸ್ಸು – ಸೇಡಿಯಾಪು ಕೃಷ್ಣ ಭಟ್ಟ
(ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೧೯೩೩)
೨೬. ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ –
ಸೇಡಿಯಾಪು ಕೃಷ್ಣ ಭಟ್ಟ (೧೯೭೭)
೨೭. ಕೃಷ್ಣಾಕುಮಾರಿ – ಸೇಡಿಯಾಪು ಕೃಷ್ಣ ಭಟ್ಟ
೨೮. ಚಂದ್ರಖಂಡ – ಸೇಡಿಯಾಪು ಕೃಷ್ಣ ಭಟ್ಟ

## ೨. ಸಂಸ್ಕೃತ (ಲೌಕಿಕ)

೨೯. ಛಂದಃಶಾಸ್ತ್ರ – ಪಿಂಗಲಾಚಾರ್ಯ (ಹಲಾಯುಧಭಟ್ಟನ "ಮೃತಸಂಜೀವನೀ" ವ್ಯಾಖ್ಯಾಸಮೇತ)
೩೦. ಛಂದಃಸಮೀಕ್ಷಾ – ಮಧುಸೂದನ ವಿದ್ಯಾವಾಚಸ್ಪತಿ
೩೧. ಅಮರಕೋಶ (ಭಾನುಜಿಕೃತ ಟೀಕಾಸಮೇತ)
೩೨. ಪಾಣಿನೀಯ ಶಿಕ್ಷಾ
೩೩. ಛಂದೋನುಶಾಸನ – ಜಯಕೀರ್ತಿ
೩೪. ಛಂದೋನುಶಾಸನ – ಹೇಮಚಂದ್ರ
೩೫. ವೃತ್ತರತ್ನಾಕರ – ಕೇದಾರಭಟ್ಟ
೩೬. ಜಯದೇವಚ್ಛಂದ (ಹರ್ಷಟನ ವಾಖ್ಯಾನಸಹಿತ)
೩೭. ಮಾನಸೋಲ್ಲಾಸ – ಚಾಲುಕ್ಯ ಸೋಮೇಶ್ವರ
೩೮. ನಾಟ್ಯಶಾಸ್ತ್ರ – ಭರತ
೩೯. ವಾಲ್ಮೀಕಿರಾಮಾಯಣ (ವ್ಯಾಖ್ಯಾನತ್ರಯಸಮೇತ)
೪೦. ಅಧ್ಯಾತ್ಮರಾಮಾಯಣ
೪೧. ಸಂಗೀತರತ್ನಾಕರ – ಶಾರ್ಙ್ಗದೇವ (ಕಲ್ಲಿನಾಥಕೃತ ವ್ಯಾಖ್ಯಾಸಹಿತ)
೪೨. ರಾಮಾಯಣಚಂಪೂ – ಭೋಜರಾಜ
೪೩. ಕಾವ್ಯಾದರ್ಶ – ದಂಡಿ
೪೪. ಸಾಹಿತ್ಯದರ್ಪಣ – ವಿಶ್ವನಾಥ
೪೫. ಜನಾಶ್ರಯೀ – ಜನಾಶ್ರಯ
೪೬. ರಂಭಾಶುಕಸಂವಾದ – ಅಜ್ಞಾತ ಕವಿ
೪೭. ಅಭಿಜ್ಞಾನಶಾಕುಂತಲ – ಕಾಳಿದಾಸ
೪೮. ವಿಕ್ರಮೋರ್ವಶೀಯ – ಕಾಳಿದಾಸ
೪೯. ಮಾಲವಿಕಾಗ್ನಿಮಿತ್ರ – ಕಾಳಿದಾಸ
೫೦. ರಘುವಂಶ – ಕಾಳಿದಾಸ
೫೧. ಕುಮಾರಸಂಭವ – ಕಾಳಿದಾಸ
೫೨. ಮೇಘದೂತ – ಕಾಳಿದಾಸ
೫೩. ಶಿಶುಪಾಲವಧ – ಮಾಘ
೫೪. ಹರ್ಷಚರಿತ – ಬಾಣ
೫೫. ಉತ್ತರರಾಮಚರಿತ – ಭವಭೂತಿ
೫೬. ಗೀತಗೋವಿಂದ – ಜಯದೇವ
೫೭. ಗೋಪಿಕಾಗೀತ (ಭಾಗವತಪುರಾಣ)
೫೮. ನೀತಿಶತಕ – ಭರ್ತೃಹರಿ
೫೯. ವಿಷ್ಣುಸಹಸ್ರನಾಮ ಮತ್ತು ಶ್ರೀಮದ್ಭಗವದ್ಗೀತೆ (ಮಹಾಭಾರತ)

೬೦. ಕಾಲಭೈರವಾಷ್ಟಕ ಇತ್ಯಾದಿ ಸ್ತೋತ್ರಗಳು, ಮತ್ತು
ಸೌಂದರ್ಯಲಹರೀ ಇತ್ಯಾದಿ ಸ್ತೋತ್ರಕಾವ್ಯಗಳು

೩. ಸಂಸ್ಕೃತ (ವೈದಿಕ)

೬೧. ಋಗ್ವೇದ - ಅಗ್ನಿಸೂಕ್ತ (ಪ್ರಥಮಸೂಕ್ತ), ಪುರುಷಸೂಕ್ತ, ಶ್ರೀಸೂಕ್ತ ಇತ್ಯಾದಿ
೬೨. ಯಜುರ್ವೇದ - ರುದ್ರಾಧ್ಯಾಯ ಇತ್ಯಾದಿ
೬೩. ಈಶಾವಾಸ್ಯೋಪನಿಷತ್ ಮತ್ತು ತೈತ್ತಿರೀಯೋಪನಿಷತ್
೬೪. ಮುಂಡಕೋಪನಿಷತ್
೬೫. ನಾರಾಯಣಸೂಕ್ತ
೬೬. ಛಂದೋದರ್ಶನ - ಬ್ರಹ್ಮರ್ಷಿ ದೈವರಾತ

೪. ಸಂಸ್ಕೃತ-ಇಂಗ್ಲೀಷ್

೬೭. Sanskrit-English Dictionary - Apte
೬೮. Sanskrit-English Dictiornary - Monier Williams
೬೯. English-Sanskrit Dictionary - Monier Williams

೫. ಇಂಗ್ಲಿಷ್

೭೦. Encyclopaedia Britannica (1965)
೭೧. Concise Oxford Dictionary (1956)
೭೨. A Manual of English - R. S. Sheppard
೭೩. Music of India - Herbert Popley
೭೪. South Indian Music (Book 11)
- Professor Sambamoorthy
೭೫. Jayadaman (Introduction) -H. D. Velankar

೬. ಇತರ

೭೬. ಛಂದಃಪ್ರಭಾಕರ (ಹಿಂದೀ)
೭೭. ಕೇರಳಕೌಮುದೀ (ಮಲಯಾಳ)
೭೮. ಜ್ಞಾನೇಶ್ವರೀ, ಹಾಗೂ 'ನವನೀತ' (ಮರಾಠಿ)

**ಛಂದೋಗತಿ**

ಎಂಬ

ಈ ನೂತನ ನಿಬಂಧವು

"ಅವಧರಿಪುದು ವಿಬುಧರ್! ದೋ – ।
ಷವಿದರೊಳೇನಾನುಮಿರ್ಪುದಾದೊಡದಂ ತಿ – ॥
ರ್ದುವುದು; ಗುಣಯುಕ್ತಮುಂ ದೋ– ।
ಷವಿದೂರಮುಮಾದೊಡೊಲ್ದು ಕಾಪಿಡುವುದಿದಂ ॥ . ॥"

ಎಂಬೀ

(ಕಿಂಚಿತ್ ಪರಿವರ್ತಿತವಾದ)

ಕೇಶಿರಾಜಸೂಕ್ತಿಪುರಸ್ಸರವಾಗಿ

**ಛಂದೋವಿದ್ಯಾಸಕ್ತರಾದ**

**ವಿದ್ವನ್ಮಹನೀಯರ ಸನ್ನಿಧಿಯಲ್ಲಿ**

ವಿನಯಪೂರ್ವಕ

ಸಮರ್ಪಿತವಾಗಿರುತ್ತದೆ.

❋ "ಪ್ರತಿಯೊಂದು ಭಾಷೆಗೂ ತನ್ನದೇ ಆದೊಂದು ಅಕ್ಷರಗತಿಸ್ವರೂಪವಿರುತ್ತದೆ. ಆ ಸ್ವರೂಪಕ್ಕೆ ಸಂವಾದಿಯಾಗ-ಬಲ್ಲ ಛಂದೋಬಂಧಗಳು ಮಾತ್ರ ಆ ಭಾಷೆಯಲ್ಲಿ ಬೆಳೆಯುತ್ತವೆ. ಬಾಳುತ್ತವೆ.....

ಪ್ರತಿಯೊಂದು ಭಾಷೆಗೂ ತನ್ನದೇ ಆದೊಂದು ಅಕ್ಷರಗತಿಸ್ವರೂಪವಿರುವಂತೆ ತನ್ನದೇ ಆದೊಂದು ವರ್ಣ-ಧ್ವನಿರೂಪವೂ ಇರುತ್ತದೆ. ಹಾಗೂ ಅವರೆಡನ್ನೂ ಅವಲಂಬಿಸಿದ ಗುಣವಿಶೇಷವೊಂದು ಆ ಭಾಷೆಯಲ್ಲಿ ಪ್ರಾಧಾನ್ಯವನ್ನು ಪಡೆಯುತ್ತದೆ.... ಬೇರೆ ಬೇರೆ ಭಾಷೆಗಳೆಲ್ಲ ವಾಗ್ದೇವಿಯ ಬೇರೆ ಬೇರೆ ಅವಯವಗಳು; ಅವು ಒಂದ-ರಂತೆ ಇನ್ನೊಂದಿಲ್ಲ; ಅವುಗಳಲ್ಲಿ ಒಂದೊಂದರ ಶೋಭೆ ಒಂದೊಂದು ವಿಧ."

ಛಂದೋಗತಿ, ಪು. 278–30

## ಪರಿಚ್ಛೇದ ಒಂದು

# ಲಯ ಎಂಬ ಸಂಜ್ಞೆಯ ಅರ್ಥಸ್ವರೂಪ

### ಶಬ್ದಕೋಶಗಳಲ್ಲಿ – ನಾಟ್ಯಶಾಸ್ತ್ರದಲ್ಲಿ – ಶಿಕ್ಷಾಶಾಸ್ತ್ರದಲ್ಲಿ – ಶಾಸ್ತ್ರೇತರ ಗ್ರಂಥಗಳಲ್ಲಿ – ಸಂಗೀತಸಂಪ್ರದಾಯದಲ್ಲಿ

ಕನ್ನಡದಲ್ಲಿಂದು ಛಂದೋವಿಚಾರ ಮಾಡುವವರು 'ಲಯ' ಎಂಬ ಪದವನ್ನು ವಿಪುಲವಾಗಿ ಬಳಸುವುದು ರೂಢವಾಗಿದೆ. ಆದರೆ ಅವರ ಆ ಪದ ಪ್ರಯೋಗಸಂದರ್ಭಗಳನ್ನು ಪರಾಮರ್ಶಿಸಿದರೆ, ಖಚಿತವಾದೊಂದು ಅರ್ಥದಲ್ಲಿ ಅದನ್ನವರು ಬಳಸುತ್ತಿರುವ ಹಾಗೆ ಕಾಣುವುದಿಲ್ಲ. ಅವರು ಒಮ್ಮೆ ಛಂದಃ–ಖಂಡಗಳ ಮಾತ್ರಾಸಮತೆಯನ್ನು ಲಯವೆನ್ನುತ್ತಾರೆ; ಇನ್ನೊಮ್ಮೆ ಗುರುಲಘು–ವಿನ್ಯಾಸಪ್ರಕಾರವನ್ನು ಲಯವೆನ್ನುತ್ತಾರೆ; ಮತ್ತೊಮ್ಮೆ 'ಧಾಟಿ'ಯನ್ನು ಎಂದರೆ ಛಂದೋಗತಿಯನ್ನು ಲಯವೆನ್ನುತ್ತಾರೆ; ಮಗುಳೊಮ್ಮೆ ಗತಿಸೌಂದರ್ಯವನ್ನೋ ಇನ್ನೂ ಏನನ್ನೋ ಲಯವೆನ್ನುತ್ತಾರೆ. ನಮ್ಮ ಕೆಲವು ಹಳೆಯ ಛಂದೋಗ್ರಂಥ–ಗಳಲ್ಲಿಯೂ ಕ್ವಚಿತ್ ಈ ಪದದ ಪ್ರಯೋಗ ಕಂಡುಬರುತ್ತದೆ. ಆದರೆ ಗುರು, ಲಘು, ಯತಿ ಇತ್ಯಾದಿ ಛಂದಃಶಾಸ್ತ್ರ ಪರಿಭಾಷೆಗಳಿಗೆ ಮಾಡಿರುವಂತೆ, 'ಲಯ' ಎಂಬ ಸಂಜ್ಞೆಗೆ ಲಕ್ಷಣವ್ಯಾಖ್ಯೆ ಮಾಡಿದ್ದೇನೂ ಆ ಗ್ರಂಥಗಳಲ್ಲಿ ಕಾಣುವುದಿಲ್ಲ. ಲಯ ಎಂಬುದು ಮುಖ್ಯವಾಗಿ ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ಸಂಜ್ಞೆಯೆಂಬು–ದರಿಂದಲೋ ಏನೋ, ಛಂದಃಶಾಸ್ತ್ರದಲ್ಲಿ ಅದರ ನಿರ್ವಚನದ ಅವಶ್ಯಕತೆ ಆ ಗ್ರಂಥಕಾರರಿಗೆ ಕಂಡು ಬರಲಿಲ್ಲವೆಂದು ತೋರುತ್ತದೆ.

ಆದರೆ ಛಂದಃಶಾಸ್ತ್ರವನ್ನೂ ಸಂಗೀತಶಾಸ್ತ್ರವನ್ನೂ ಒಂದರಿಂದ ಇನ್ನೊಂದನ್ನು ಸಂಪೂರ್ಣವಾಗಿ ಬೇರ್ಪಡಿಸಲಾಗುವುದಿಲ್ಲ.[1] ಪದ್ಯವೂ ಗಾನವೂ

---

1. ಎಷ್ಟೋ ವರ್ಷಗಳ ಹಿಂದೆ ಮಾಡಿದ ಸ್ವತಂತ್ರಚಿಂತನೆಯ ಫಲವಾಗಿ ನಾನು ಈ ನಿರ್ಣಯಕ್ಕೆ ತಲಪಿದ್ದೆ ; ಮತ್ತು ೧೯೩೨ನೆಯ ಇಸವಿಯಲ್ಲಿ ಮಡಿಕೇರಿಯಲ್ಲಿ ನೆರೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನದಲ್ಲಿ ಓದಿದ ನನ್ನ "ಕನ್ನಡ ಛಂದಸ್ಸು" ಎಂಬ ನಿಬಂಧದಲ್ಲಿ ಈ ವಿಷಯವನ್ನು ಪ್ರತಿಪಾದಿಸಿದ್ದೆ. ಆ ನಿಬಂಧವು 'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯ ಸಂಪುಟ ೧೮, ಸಂಚಿಕೆ ೧ ಮತ್ತು ೨ರಲ್ಲಿ (ಏಪ್ರಿಲ್ ಮತ್ತು ಜುಲಾಯಿ ೧೯೩೩) ಪ್ರಕಟವಾಗಿರುತ್ತದೆ. {ಈ ಪ್ರಬಂಧವು ಪರಿಷ್ಕೃತವಾಗಿ ಅನುಬಂಧಾದಿಗಳೊಡನೆ ಪುಸ್ತಕರೂಪದಲ್ಲಿ ೧೯೮೮ರಲ್ಲಿ, ಎಂದರೆ 'ಛಂದೋಗತಿ'ಯು ಮುದ್ರಣಗೊಂಡು ಮೂರು ವರ್ಷಗಳು ಕಳೆದ ಮೇಲೆ, ಪ್ರಕಟಗೊಂಡಿದ್ದು ಆ ಕೃತಿಯೂ ಈ 'ಛಂದಸ್ಸಂಪುಟ'ದಲ್ಲಿ ಈ ಗ್ರಂಥದ ಅನಂತರ ಸೇರಿದೆ – ಸಂ.} ಆದರೆ ನನ್ನೀ ಅಭಿಪ್ರಾಯಕ್ಕೆ ಪೂರ್ವವಿದ್ವತ್ಸಮ್ಮತಿಯೂ ಇದೆ ಎಂಬುದು ನನಗೆ ಗೊತ್ತಾದುದು ಇತ್ತೀಚೆ. ಇಂದಿಗೆ (೧೯೭೬) ಮೂರೋ ನಾಲ್ಕೋ ವರ್ಷಗಳ ಕೆಳಗೆ "ಛಂಧಃಸಮೀಕ್ಷಾ" ಎಂಬೊಂದು ನಿಬಂಧವು ನನ್ನ ಕಣ್ಣಿಗೆ ಬಿದ್ದಿತು. ವೇದವೇದಾಂಗಪಾರಂಗತರಾಗಿ, ಸಂಸ್ಕೃತದಲ್ಲಿ ಹಲವು ನಿಬಂಧಗಳನ್ನು ರಚಿಸಿ

ಆದಿಯಲ್ಲಿ ಅಭಿನ್ನ.[2] ಆದುದರಿಂದ ಲಯ ಎಂಬ ಸಂಜ್ಞೆಯ ನಿಜಾರ್ಥ-ವೇನೆಂಬುದನ್ನು ಖಚಿತಪಡಿಸಿಕೊಳ್ಳುವುದು ಕೂಲಂಕಷವಾಗಿ ಮಾಡುವ ಛಂದೋವಿಚಾರಗಳಲ್ಲಿ ಅವಶ್ಯವಾಗಿರುತ್ತದೆ.

ಲಯ ಎಂಬ ಸಂಜ್ಞೆ ಇಂದುನಿನ್ನೆಯದಲ್ಲ; ಅದಕ್ಕೆ ಎರಡೋ ಮೂರೋ ಸಾವಿರ ವರ್ಷಗಳ ಇತಿಹಾಸವಿದೆ. ಸಂಗೀತಶಾಸ್ತ್ರಗ್ರಂಥಗಳಲ್ಲಿ ಮಾತ್ರವಲ್ಲ, ಸಂಸ್ಕೃತ ಕಾವ್ಯನಾಟಕಾದಿಗಳಲ್ಲಿಯೂ ಅದರ ಪ್ರಯೋಗ ಕಂಡುಬರುತ್ತದೆ; ಸಂಸ್ಕೃತ ಶಬ್ದಕೋಶಗಳಲ್ಲಿ ಅದರ ಅರ್ಥನಿರ್ದೇಶವೂ ಇದೆ. ನಾವೀಗ ಅದರ ನಿಜಾರ್ಥವೇನೆಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕೆ, ಅದನ್ನು ಕುರಿತು ಶಬ್ದ-ಕೋಶಗಳಲ್ಲಿ ಏನು ಹೇಳಲಾಗಿದೆ ಎಂಬುದನ್ನು ಮೊದಲಾಗಿ ತಿಳಿದುಕೊಳ್ಳುವುದು ಲಾಭಪ್ರದ. ಏಕೆಂದರೆ, ಕೋಶಕಾರರು ಮಾಡಿದ ಅರ್ಥನಿರ್ದೇಶವು ಆಯಾ ಪದದ ಅನೇಕಾನೇಕ ಪ್ರಯೋಗಗಳ ಪರೀಕ್ಷಣದ ಫಲಿತಾಂಶ. (ಕೋಶಗತವಾದ ಅರ್ಥವು ಪ್ರಮಾಣವೆಂದು ಸ್ವೀಕೃತವಾಗುವುದಕ್ಕೆ ಇದುವೇ ಕಾರಣ.) ನಮ್ಮ ಪುರಾತನ ಶಬ್ದಕೋಶಗಳಲ್ಲಿ ಅತ್ಯಂತ ಪ್ರಸಿದ್ಧವೂ ಸರ್ವಮಾನ್ಯವೂ ಆಗಿರುವ 'ಅಮರಕೋಶ'ದ ಪ್ರಥಮಕಾಂಡದ ನಾಟ್ಯವರ್ಗದಲ್ಲಿ ತಾಳ ಮತ್ತು ಲಯ ಎಂಬೆರಡು ಸಂಜ್ಞೆಗಳ ನಿರುಕ್ತಿಯನ್ನು ಹೀಗೆ ಅನುಸ್ಯೂತವಾಗಿ ಹೇಳಲಾಗಿದೆ:

ತಾಲಃ ಕಾಲಕ್ರಿಯಾಮಾನಂ, ಲಯಃ ಸಾಮ್ಯಂ

ಪೂರ್ವಕಾಲದ ಮಹಾಪಂಡಿತರನೇಕರು ಅಮರಕೋಶಕ್ಕೆ ವ್ಯಾಖ್ಯಾನ-ಗಳನ್ನು ಬರೆದಿದ್ದಾರೆ. ಅವುಗಳೊಳಗೆ – ಮಹಾವೈಯಾಕರಣನಾಗಿದ್ದ ಭಟ್ಟೋಜಿ ದೀಕ್ಷಿತನ ಮಗ ಭಾನುಜಿ ದೀಕ್ಷಿತನ 'ವ್ಯಾಖ್ಯಾಸುಧಾ' ಎಂಬುದು ತತ್ಪೂರ್ವದ ಕೋಶವ್ಯಾಖ್ಯಾನಗಳನ್ನೆಲ್ಲ ಪರಾಮರ್ಶಿಸಿ ನಾನಾಭಿಪ್ರಾಯಗಳನ್ನು ಮಥಿಸಿ ಬರೆಯಲ್ಪಟ್ಟಿರುವುದರಿಂದ ಅತ್ಯುಪಯುಕ್ತವೆನ್ನಬಹುದು. ಮೇಲೆ ಉದ್ಧರಿಸಿದ ಅಮರವಾಕ್ಯವನ್ನು ಭಾನುಜಿ ಹೀಗೆ ವಿವರಿಸಿದ್ದಾನೆ:

"(ತಾಲಃ) – ಕಾಲಸ್ಯ ಕ್ರಿಯಯಾ, ಆವಾಪ ನಿಷ್ಕ್ರಮಾದಿಕಯಾ,[3] ಮಾನಂ ಪರಿಚ್ಛೇದನಂ." "(ಲಯಃ) – ಗೀತವಾದ್ಯಪಾದಾದಿ ನ್ಯಾಸಾನಾಂ

---

"ಸಮೀಕ್ಷಾಚಕ್ರವರ್ತಿ" ಎಂದು ಖ್ಯಾತರಾಗಿದ್ದ ಮಧುಸೂದನ ವಿದ್ಯಾವಾಚಸ್ಪತಿ ಎಂಬ ಮಹನೀಯರು ತಮ್ಮ ಆ ನಿಬಂಧದ 'ಛಂದೋವಿಜ್ಞಾನಸಾರ್ಥಕತಾ' ಎಂಬ ಪ್ರಕರಣದಲ್ಲಿ ಹೀಗೆ ಹೇಳುತ್ತಾರೆ: "ಗೇಯವೇದಸ್ಯ ಛಂದೋವೇದಾನತಿರಿಕ್ತತ್ವಾತ್" ಎಂದರೆ "ಸಂಗೀತ-ವಿಜ್ಞಾನವು ಛಂದೋವಿಜ್ಞಾನಕ್ಕೆ ಹೊರಗಾದುದಲ್ಲ." – (ಪಿಂಗಲಛಂದಃಶಾಸ್ತ್ರಭೂಮಿಕಾ, ಪುಟ ೬೭, ನಿರ್ಣಯಸಾಗರ ಮುದ್ರಣ, ೧೯೨೪)

2. 'ಕನ್ನಡ ಛಂದಸ್ಸು' ಎಂಬ ನನ್ನ (ಪೂರ್ವೋಕ್ತ) ನಿಬಂಧದಲ್ಲಿ ಇದು ಸವಿಸ್ತರವಾಗಿ ಪ್ರತಿಪಾದಿತವಾಗಿದೆ.

3. ಆವಾಪ, ನಿಷ್ಕ್ರಮ ಇತ್ಯಾದಿಗಳು ಗಾಯಕರು ಮಾಡತಕ್ಕ ತಾಳಸ್ವರೂಪಬೋಧಕವಾದ ಹಸ್ತಕ್ರಿಯೆಗಳು.

ಕ್ರಿಯಾಕಾಲಯೋಃ ಸಾಮ್ಯಂ." ಮತ್ತು, ಲಯ ಎಂಬ ಶಬ್ದಕ್ಕೆ "ಲೀಙ್ (=ಲೀ) ಶ್ಲೇಷಣೇ" ಎಂಬ ಧಾತುವಿನಿಂದ ನಿಷ್ಪತ್ತಿಯನ್ನು ಹೇಳಿ, "ಲಯಃ ತೂರ್ಯ-ತ್ರಯೀ ಸಾಮ್ಯೇ ಸಂಶ್ಲೇಷಣವಿನಾಶಯೋಃ"[4] ಎಂಬ 'ಹೈಮಕೋಶ'ದ ವಾಕ್ಯ-ವನ್ನೂ ಉದ್ಧರಿಸಿದ್ದಾನೆ.[5]

ಲಯ ಎಂಬುದಕ್ಕೆ ಅಮರಸಿಂಹನು ಹೇಳಿದ ನಿರ್ವಚನದ ಹಾಗೂ ಭಾನುಜಿದೀಕ್ಷಿತನು ಅದಕ್ಕೆ ಮಾಡಿರುವ ವ್ಯಾಖ್ಯಾನದ ತಾತ್ಪರ್ಯ ಹೀಗೆ : ಲಯ ಎಂಬ ಶಬ್ದವು 'ಶ್ಲೇಷಣ' ಎಂದರೆ 'ಒಂದರೊಡನೆ ಇನ್ನೊಂದು ಕೂಡುವುದು, ಸೇರಿಕೊಳ್ಳುವುದು' ಎಂಬರ್ಥದ "ಲೀ" (= ಲೀನವಾಗು) ಎಂಬ ಧಾತುವಿನಿಂದ ನಿಷ್ಪನ್ನವಾದುದು; ತಾಲ (= ತಾಳ) ಎಂದರೆ ಕ್ರಿಯಾವಿಶೇಷಗಳಿಂದ (ಗೀತಾದಿ-ಗಳ) ಕಾಲವನ್ನು ಅಳೆಯುವುದು; ಅಂತಹ (ಎರಡೋ ಹಲವೋ) ಕ್ರಿಯಾ-ಕಾಲಗಳ ಎಂದರೆ ಕ್ರಿಯೆ ನಡೆಯುವ ಕಾಲಗಳ ಪರಸ್ಪರಸಮತ್ವವು "ಲಯ"; ಅರ್ಥಾತ್ ತಾಳಕ್ರಿಯೆಯ ಅಳತೆಗೊಳಗಾಗುವ ಗೀತವಾದ್ಯನೃತ್ಯಗಳ ಕಾಲಗಳ ಎಂದರೆ ಕಾಲಖಂಡಗಳ, ಅನ್ಯೋನ್ಯಸಮತ್ವಕ್ಕೆ 'ಲಯ' ಎಂದು ಹೆಸರು.

ತಾಳಲಯಗಳ ಈ ಅವಿಭಾಜ್ಯ ಸಂಬಂಧವನ್ನು ಇನ್ನಷ್ಟು ಸ್ಫುಟ-ಗೊಳಿಸುವ ಬೇರೊಂದು ವಾಕ್ಯವೂ ಅಮರಕೋಶದ ಅದೇ ಪ್ರಕರಣದಲ್ಲಿ ಇದೆ. ಮೇಲೆ ಉದ್ಧೃತವಾದ ತಾಳಲಯಗಳ ಲಕ್ಷಣವ್ಯಾಖ್ಯೆಗಿಂತ ಮೊದಲೇ – ಮಂದ್ರತಾರಾದಿ ಧ್ವನಿಸ್ವರೂಪನಿರೂಪಣವಾದೊಡನೆ –

ಸಮನ್ವಿತಲಯಸ್ತ್ವೇಕತಾಲಃ

ಎಂಬ ವಾಕ್ಯವಿದೆ. ಭಾನುಜಿ ಇದನ್ನು ಹೀಗೆ ವಿವರಿಸಿದ್ದಾನೆ:

ಸಮ್ಯಗನ್ವಿತಃ ಲಯಃ ನೃತ್ಯಗೀತವಾದ್ಯಾನಾಂ ಸಾಮ್ಯಂ, ಯತ್ರ ಸಃ ।[6]
ಏಕಃ ಸಮಃ ತಾಲಃ ಮಾನಂ, ಅಸ್ಯ ಇತಿ ಏಕತಾಲಃ ॥[7]

ಅಮರಸಿಂಹನು ಇಲ್ಲಿ ಪ್ರಯೋಗಿಸಿರುವ 'ಸಮನ್ವಿತಲಯಃ' ಮತ್ತು 'ಏಕತಾಲಃ' ಎಂಬ ಪದಗಳು ಬಹುವ್ರೀಹಿಸಮಾಸಗಳಾಗಿದ್ದು, ತತ್ಪೂರ್ವದಲ್ಲಿ ಉಕ್ತವಾಗಿರುವ (ಮಂದ್ರತಾರಾದಿ) 'ಧ್ವನಿ' ಎಂಬ ಪುಂಲಿಂಗ ಪದಕ್ಕೆ ವಿಶೇಷಣಗಳಾಗಿವೆ. 'ಸಮನ್ವಿತಲಯಃ+ತು+ಏಕತಾಲಃ" ಎಂಬ ಆ ವಾಕ್ಯದ ಪೂರ್ಣಾರ್ಥವು ಹೀಗೆ: "ಲಯಾನ್ವಿತವಾದ ಧ್ವನಿ ಎಂದರೆ ಏಕ(=ಸಮ)ತಾಲಕ್ಕೆ ಅಳವಡುವ ಧ್ವನಿ."

---

4. 'ತೂರ್ಯತ್ರಯ' ಎಂದರೆ ಗೀತವಾದ್ಯನೃತ್ಯಗಳು.
5. ನಿರ್ಣಯಸಾಗರ ಮುದ್ರಣ, ಪುಟ ೭೪-೭೫, ೧೯೪೪.
6. 'ವಾದ್ಯ' ಎಂಬ ಶಬ್ದಕ್ಕೆ ಇಲ್ಲಿ 'ವಾದ್ಯಧ್ವನಿ' ಎಂದರ್ಥ.
7. ನಿರ್ಣಯಸಾಗರ ಮುದ್ರಣ, ಪುಟ ೭೨.

ಅಮರಕೋಶದ ಈ 'ಏಕತಾಲ' ಎಂಬ ಪದಕ್ಕೆ ಪ್ರಚಲಿತ ಸಂಗೀತ ಸಂಪ್ರದಾಯದ ತಾಳಭೇದಗಳಲ್ಲೊಂದಾದ 'ಏಕತಾಳ' ಎಂಬ ಸಂಕುಚಿತವಾದ ಅರ್ಥವನ್ನು ಮಾಡಕೂಡದು. ಭಾನುಜಿ ದೀಕ್ಷಿತನು ಸ್ಪಷ್ಟೀಕರಿಸಿರುವಂತೆ, 'ಏಕ' ಎಂಬುದು ಇಲ್ಲಿ 'ಸಮ' ಎಂಬರ್ಥವನ್ನು ಕೊಡುವ ಶಬ್ದವಾಗಿದೆ. ಈ 'ಏಕ-ತಾಲ'ವು ಎಲ್ಲಾ ತಾಳಗಳನ್ನೂ ಒಳಕೊಳ್ಳುವ ಸಂಜ್ಞೆ. ಗೀತವಾದ್ಯಾದಿ ಧ್ವನಿಗಳು (ತಾಳಬದ್ಧವಾಗಿ) ಪ್ರವರ್ತಿತವಾಗುವಾಗ ಬೇರೆಬೇರೆ ಹೆಸರಿನ ಎಲ್ಲಾ ತಾಳಗಳೂ – ಅವುಗಳ ಭೇದೋಪಭೇದಗಳು ಸಹ – ಸಮಾನವಾದ 'ಆವರ್ತ'ಗಳನ್ನು ಪಡೆಯುತ್ತವೆ; ಎಂದರೆ, ಆಯಾ ತಾಳಭೇದದ ಆವರ್ತಗಳಲ್ಲಿ ಪ್ರತಿಯೊಂದು ಆವರ್ತದ ಕಾಲವೂ ಅದರ ಇನ್ನೊಂದು ಆವರ್ತದ ಕಾಲಕ್ಕೆ ಸಂಪೂರ್ಣ ಸಮ-ವಾಗಿರುತ್ತದೆ. ಇದನ್ನೇ ಇಲ್ಲಿ ಅಮರಸಿಂಹನು 'ಏಕತಾಲ'ವೆನ್ನುವುದು; ಇದನ್ನೇ "ಏಕಃ = ಸಮಃ, ತಾಲಃ = ಮಾನಂ" ಅರ್ಥಾತ್ 'ಸಮಮಾನ' ಎಂದು ಭಾನುಜಿ ವಿವರಿಸಿದುದು. ಸಂಗೀತಶಾಸ್ತ್ರರೀತ್ಯಾ 'ತಾಳ' ಎಂಬುದು – ಲಘು ದ್ರುತ ಇತ್ಯಾದಿ ವಿವಿಧ ಮಾತ್ರಾಸಂಖ್ಯೆಯ ಅಂಗಗಳಿಂದ ಕೂಡಿದ್ದು, ಕ್ರಿಯಾ ವಿಶೇಷಗಳಿಂದ ಮಾಡಲ್ಪಡುವ ಗೀತವಾದ್ಯಾದಿಗಳ ಕಾಲದ ಅಳತೆ –ಎಂಬರ್ಥದ ಒಂದು ಪಾರಿಭಾಷಿಕ ಸಂಜ್ಞೆಯಾಗಿರುವುದಾದರೂ, ಅದರ ಮೂಲಾರ್ಥ ಹಾಗೇನೂ ಅಲ್ಲ. ಭಾನುಜಿ ದೀಕ್ಷಿತನು 'ತಾಲ' ಎಂಬ ಶಬ್ದದ ನಾನಾರ್ಥಗಳನ್ನು 'ವಿಶ್ವಕೋಶ' ಹಾಗೂ 'ಮೇದಿನೀಕೋಶ'ಗಳಿಂದ ಹೀಗೆ ಉದ್ಧರಿಸಿಕೊಟ್ಟಿದ್ದಾನೆ:

> **ತಾಲಃ** ಕರತಲೇಽಂಗುಷ್ಠಮಧ್ಯಮಾಭ್ಯಾಂ ಚ ಸಂಮಿತೇ,
> ಗೀತಕಾಲಕ್ರಿಯಾಮಾನೇ, ಕರಾಸ್ಫಾಲೇ, ದ್ರುಮಾಂತರೇ,
> ವಾದ್ಯಭಾಂಡೇ ಚ ಕಾಂಸ್ಯಸ್ಯ, ತ್ಸರೌ.....
>
> (ನಿರ್ಣಯಸಾಗರ, ಪುಟ ೭೪)

ಯಾವುದೊಂದು ಹಾಡಿನ 'ತಾಳ'ವನ್ನು ಪ್ರಕಟಿಸುವ ಕ್ರಿಯೆಗಳೊಳಗೆ 'ತಾಳಹಾಕುವುದು' ಎಂದರೆ ಕೈತಟ್ಟುವುದು (= ಕರಾಸ್ಫಾಲ) ಪ್ರಧಾನವೂ ಸರ್ವ-ಸಾಧಾರಣವೂ ಆದುದೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. 'ತಲ' ಎಂದರೆ 'ತೆರೆದ ಅಂಗೈ'. ("ತಲಶ್ಚಪೇಟೇ" – ಇದು ಭಾನುಜಿ ಉದ್ಧರಿಸಿದ ಹೈಮಕೋಶದ ಉಕ್ತಿ; "ಪಾಣೌ ಚಪೇಟ ಪ್ರತಲ ಪ್ರಹಸ್ತಾಃ ವಿಸ್ತೃತಾಂಗುಲೌ" – (ಅಮರಕೋಶ, ದ್ವಿತೀಯಕಾಂಡ, ಮನುಷ್ಯವರ್ಗ.) 'ತಲ'ದಿಂದ ಹುಟ್ಟಿದ್ದು 'ತಾಲ' (ತಲೇ ಭವಃ ತಾಲಃ) ಎಂಬುದು ತಾಲ ಶಬ್ದದ ಸಹಜವಾದ ನಿಷ್ಪತ್ತಿ. ಆದುದರಿಂದ ತಾಲ (= ತಾಳ) ಎಂಬುದರ ಮೂಲಾರ್ಥವು 'ಕರಾಸ್ಫಾಲ' ಎಂದರೆ 'ಕೈತಟ್ಟುವಿಕೆ' ಎಂದಾಗಿತ್ತೆಂಬುದು ನಿಶ್ಚಿತ.[8] ಗೀತಾದಿಗಳ ಕಾಲಮಾನ-

---

8. ತಾಳ ಎಂಬ ಶಬ್ದದ ಮೂಲಾರ್ಥವು 'ಕೈತಟ್ಟುವಿಕೆ' ಎಂಬುದನ್ನು, ಪ್ರಚಲಿತವಾದ ಕೆಲವು ತಾಳಭೇದಗಳ ಹೆಸರುಗಳೂ ಸಮರ್ಥಿಸುತ್ತವೆ. ಉದಾ: ತ್ರಿತಾಲ (= ಮೂರು 'ತಾಲ'-

ಬೋಧಕವಾದ ಕ್ರಿಯೆಗಳೊಳಗೆ ಕರಾಸ್ಫಾಲವೇ ಮುಖ್ಯವಾದುದರಿಂದ, ಆ ಅರ್ಥವನ್ನು ಹೇಳುವ 'ತಾಲ' ಎಂಬ ಪದವು 'ತಾಲಮಾನ' ಎಂದರೆ 'ಕರಾ–ಸ್ಫಾಲದ ಮೂಲಕ (ಕಾಲವನ್ನು) ಅಳೆಯುವಿಕೆ' ಎಂಬರ್ಥದ ಪಾರಿಭಾಷಿಕ ಸಂಜ್ಞೆಯಾಗಿ ಪರಿಣಮಿಸಿದುದಾಗಿದೆ.[9] ಅಮರಸಿಂಹನು ಹೇಳುವ 'ಏಕತಾಲ' ಎಂಬುದರಲ್ಲಿರುವ 'ತಾಲ' ಎಂಬ ಶಬ್ದವು ಅದರ ಮೂಲಾರ್ಥವಾದ ಕರಾಸ್ಫಾಲ ಎಂಬರ್ಥದಲ್ಲಿ ಪ್ರಯುಕ್ತವಾದುದೆಂದು ತಿಳಿದಾಗ, ಆ "ಏಕತಾಲಃ" ಎಂಬ (ಬಹುವ್ರೀಹಿ) ಸಮಾಸಪದಕ್ಕೆ "ಸಮಾನಕಾಲಪರಿಮಾಣದ ಕರಾಸ್ಫಾಲವುಳ್ಳದ್ದು" ಎಂಬರ್ಥವಾಗುತ್ತದೆ. ಅದನ್ನೇ ಅವನು 'ಸಮನ್ವಿತಲಯಃ' ಎಂದರೆ 'ಲಯಾ–ನ್ವಿತವಾದುದು' ಎನ್ನುವುದಾಗಿದೆ. ಇದರಿಂದ "ಲಯವೆಂದರೆ ಸಮಾನಕಾಲ ಪರಿಮಾಣದ, ಎಂದರೆ ಸಮಾನಕಾಲಾಂತರದ, ಕರಾಸ್ಫಾಲನಗಳಿಗೆ ಒಳಪಡುವಿಕೆ" ಎಂಬ ಅವನ ಅಭಿಮತವು ನಮಗೆ ಸ್ಪಷ್ಟವಾಗಿ ಗೊತ್ತಾಗುತ್ತದೆ.

ನಾನು ಉದಾಹರಿಸಿದ ಅಮರಸಿಂಹನ ಹಾಗೂ ಭಾನುಜಿ ದೀಕ್ಷಿತನ ಹೇಳಿಕೆಗಳೆಲ್ಲವುಗಳ ತಾತ್ಪರ್ಯವನ್ನು ಹೀಗೆ ಸಂಗ್ರಹಿಸಬಹುದು : "ಯಾವು–ದೊಂದು ಕ್ರಿಯೆಯ ಮೂಲಕ (ಕರಾಸ್ಫಾಲನ ಇತ್ಯಾದಿ ಸಶಬ್ದಕ್ರಿಯೆಗಳಿಂದ ಅಥವಾ ಅಂಗವಿನ್ಯಾಸ, ಅಂಗುಲಿವ್ಯಾಪಾರಾದಿ ನಿಃಶಬ್ದಕ್ರಿಯೆಗಳಿಂದ) ಗೀತಾದಿಗಳ ಕಾಲವನ್ನು ಅಳೆಯುವುದೇ ತಾಳ : ಹಾಗೆ ಉದ್ಭೂತವಾಗುವ ಕಾಲಖಂಡಗಳ ಪರಸ್ಪರಸಮತ್ವವೇ ಲಯ." – ಅಮರಸಿಂಹಾದಿ ಕೋಶಕಾರರು ನಿರೂಪಿಸಿರುವ 'ಲಯ'ದ ಈ ಲಕ್ಷಣವ್ಯಾಖ್ಯೆ ವ್ಯಾಪಕವಾದುದು; ಅದು ಗೀತವಾದ್ಯನೃತ್ಯಗಳಿಗೆ ಮಾತ್ರವಲ್ಲ, ಸಕಲಧ್ವನಿಗಳಿಗೂ ಅತ ಏವ ಛಂದಸ್ಸಿಗೂ ಅನ್ವಯಿಸುವಂತಹದು.

---

ಗಳುಳ್ಳದ್ದು – ಬಹುವ್ರೀಹಿ). ಇದರ ಒಂದು ಆವರ್ತದಲ್ಲಿ ಮೂರು ಬಾರಿ ಕರಾಸ್ಫಾಲನ–ವಾಗುವುದರಿಂದ ಈ ಹೆಸರು ಬಂದುದೆಂಬುದು ಸ್ಪಷ್ಟ. ಒಂದು ತಾಳಭೇದವನ್ನು ಜಯದೇವನ ಗೀತಗೋವಿಂದಕಾವ್ಯ(ಅಷ್ಟಪದಿ)ದಲ್ಲಿ "ಏಕತಾಲೀತಾಲ" ಎಂದು ಹೆಸರಿಸಲಾಗಿದೆ. ಮೇಲೆ ಹೇಳಿದ ಅಭಿಪ್ರಾಯಕ್ಕೆ ಇದೂ ಪೋಷಕ. ಸಂಗೀತಶಾಸ್ತ್ರಗ್ರಂಥಗಳಲ್ಲಿ 'ಏಕತಾಲೀ' ಎಂಬುದು ಏಳು ದೇಶೀತಾಳಗಳಲ್ಲೊಂದೆಂದು ಹೇಳಲ್ಪಟ್ಟಿದೆ. (ಆದ್ಯೋ ಧ್ರುವಃ, ತತೋ ಮಂಠಃ, ಪ್ರತಿಮಂಠೋ, ನಿಸಾರುಕಃ । ಅಡ್ಡತಾಲಶ್ಚ ರಾಸಶ್ಚ ಏಕತಾಲೀತ್ಯಸೌ ಮತಃ ॥) [ಆದರೆ 'ಆಪಟೆ ಸಂಸ್ಕೃತ–ಇಂಗ್ಲೀಷ್ ಕೋಶ'ದಲ್ಲಿ 'ಏಕತಾಲೀ' ಎಂಬ ಶಬ್ದಕ್ಕೆ 'An instrument for beating time; any instrument having but one tone' ಎಂದು – ಯಾವ ಪ್ರಯೋಗ ನಿರ್ದೇಶವೂ ಇಲ್ಲದೆ – ಬರೆದಿರುವ ಅರ್ಥವು ಸಂದೇಹಾಸ್ಪದವಾಗಿದೆ. ತಮ್ಮ ನಾಡಿನಲ್ಲಿ (ಮಹಾರಾಷ್ಟ್ರ) ಪ್ರಚುರವಾಗಿರುವ 'ಏಕತಾರೀ' ಎಂಬ ಹೆಸರಿನ ಒಂಟಿತಂತಿಯ ವಾದ್ಯವು ಆಪಟೆಯವರ ಅಭಿಪ್ರಾಯವನ್ನು ಹೇಗೆ ರೂಪಿಸಿದ್ದಾಗಿರಬಹುದೇ?]

9. ಪಾರಿಭಾಷಿಕವಾದ 'ತಾಳ' ಎಂಬುದಕ್ಕೆ ಗಾಯಕಸಂಪ್ರದಾಯದಲ್ಲಿ 'ತಾಳಮಾನ' ಎಂಬ ಹೆಸರೂ ಹಿಂದಿನ ಕಾಲದಲ್ಲಿ ರೂಢವಾಗಿದ್ದಂತೆ ತೋರುತ್ತದೆ. ಉದಾ: "ತಾಳಮಾನ ಸರಿಸವನರಿಯೆ" – ಬಸವೇಶ್ವರ ವಚನ.

ಆದುದರಿಂದ ಕೋಶಕಾರರ ಮತದಂತೆ, ಯಾವುದೊಂದು ರಚನೆ 'ಏಕತಾಲ-ಬದ್ಧ', ಎಂದರೆ ಸಮತಾಲಬದ್ಧವಾಗಿದ್ದರೆ ಮಾತ್ರ ಅದು 'ಲಯಾನ್ವಿತ' ಎನಿಸಿಕೊಳ್ಳುತ್ತದೆ.

ಭರತನ ನಾಟ್ಯಶಾಸ್ತ್ರದಲ್ಲಿ ಲಯದ ಲಕ್ಷಣವ್ಯಾಖ್ಯೆ ಎರಡು ಸಂದರ್ಭ-ಗಳಲ್ಲಿ ಕಂಡುಬರುತ್ತದೆ. ಅವುಗಳೊಳಗೊಂದು ನೇರವಾಗಿ ಛಂದಸ್ಸಿಗೆ ಸಂಬಂಧಿಸಿದ್ದು, ಅದು ಹೀಗಿದೆ;

ಛಂದೋಕ್ಷರಪದಾನಾಂ ಹಿ ಸಮತ್ವಂ ಯತ್ ಪ್ರಕೀರ್ತಿತಂ ।
ಕಲಾಕಾಲಾಂತರಕೃತಂ, ಸ ಲಯೋ ನಾಮ ಸಂಜ್ಞಿತಃ ॥[10]

ಈ ಶ್ಲೋಕದ ಅನ್ವಯ ಹೀಗೆ: ಛಂದೋಕ್ಷರಪದಾನಾಂ ಹಿ ಕಲಾಕಾಲಾಂತರಕೃತಂ ಯತ್ ಸಮತ್ವಂ ಪ್ರಕೀರ್ತಿತಂ, ಸಃ ಲಯಃ ನಾಮ ಸಂಜ್ಞಿತಃ"[11] (ಕಲಾಕಾಲ = ಮಾತ್ರಾಕಾಲ, ಅಂತರ = ಎಡೆ, ಅವಕಾಶ) ಇದರ ತಾತ್ಪರ್ಯ : ಒಂದು ಛಂದೋಬಂಧದ (ಬೇರೆಬೇರೆ) ಅಕ್ಷರಪುಂಜಗಳಲ್ಲಿ, ಅವುಗಳ ಮಾತ್ರಾಕಾಲಾವಕಾಶದಿಂದಾಗಿ ಉಂಟಾಗುವ ಸಮತ್ವಕ್ಕೆ 'ಲಯ'ವೆಂದು ಹೆಸರು ಕೊಡಲಾಗಿದೆ. ಅರ್ಥಾತ್, ಪದ್ಯದ ಅವಯವಗಳ (= ಛಂದಃಖಂಡಗಳ) ಮಾತ್ರಾಸಮತೆ(= ಉಚ್ಚಾರಕಾಲದ ಸಮತೆ)ಯೇ ಲಯ.[12]

---

10. ನಾಟ್ಯಶಾಸ್ತ್ರ, ಅಧ್ಯಾಯ ೩೧ - ೩೭೨, ನಿರ್ಣಯಸಾಗರ ಮುದ್ರಣ (೧೯೪೩). ಈ ಮುದ್ರಣದಲ್ಲಿ ಸ್ವೀಕೃತವಾದ "ಕೃತಃ" ಎಂಬ ಪಾಠದ ಬದಲಾಗಿ, ನಾನು ಸ್ವೀಕರಿಸಿದ "ಕೃತಂ" ಎಂಬ ಪಾಠವು (ಅದೇ ಪುಸ್ತಕದಲ್ಲಿ) 'ಕಾ' ಎಂದು ಹೆಸರಿಸಿರುವ ಪುಸ್ತಕದ ಪಾಠವಾಗಿ ಕೊಡಲ್ಪಟ್ಟಿರುವ ಪಾಠಾಂತರ.

11. "ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ" ಎಂಬುದರ ಹಾಗೆ ಈ ವಾಕ್ಯವು ವಿಧೇಯ ಪ್ರಧಾನಪ್ರಯೋಗವಾಗಿದ್ದು, ತಚ್ಛಬ್ದವು ಇಲ್ಲಿ ಯಚ್ಛಬ್ದದ ಲಿಂಗದಲ್ಲಿರದೆ, ವಿಧೇಯವಾದ 'ಲಯಃ' ಎಂಬುದರ ಲಿಂಗವನ್ನು ಪಡೆದಿದೆ.

12. {**ಛಂದೋಕ್ಷರವಿಚಾರ**} : 'ಛಂದೋಕ್ಷರಪದಾನಾಂ" ಎಂಬಲ್ಲಿ 'ಛಂದಸ್' ಎಂಬ ಶಬ್ದವು 'ಛಂದೋಬಂಧ' ಅರ್ಥಾತ್ 'ಪದ್ಯ' ("ಛಂದಃ ಪದ್ಯೇ"–ಅಮರಕೋಶ, ತೃತೀಯ ಕಾಂಡ, ನಾನಾರ್ಥವರ್ಗ) ಎಂಬರ್ಥದಲ್ಲಿ ಪ್ರಯುಕ್ತವಾದುದಾಗಿದೆ. ಮತ್ತು 'ಪದ' ಎಂಬ (ಅನೇಕಾರ್ಥವುಳ್ಳ) ಶಬ್ದವು ಅದರ ಮೂಲಾರ್ಥವಾದ "ಹಜ್ಜೆ" ಎಂಬರ್ಥದಲ್ಲಿ ಇಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ತಿಳಿಯುವುದು ಉಚಿತವಾಗಿದೆ. ಹಾಗೆ ಮಾಡದೆ - ಇಲ್ಲಿರುವ 'ಪದ' ಎಂಬುದು 'ಶಬ್ದ' (word) ಪರ್ಯಾಯವೆಂದು ಭಾವಿಸಿದರೆ "ಅಕ್ಷರಪದಾನಾಂ" ಎಂಬುದು ಅರ್ಥಹೀನವಾಗಿ ಪರಿಣಮಿಸುತ್ತದೆ. ಏಕೆಂದರೆ, ಅಕ್ಷರರಹಿತವಾದ 'ಪದ'(word) ವಿಲ್ಲ. (ಸಾರ್ಥಕವಾದ ಶಬ್ದಕ್ಕೆ ಮಾತ್ರ 'ಪದ'ವೆಂಬ ಹೆಸರು ಸಲ್ಲುತ್ತದೆ.) ಅಥವಾ, 'ಅಕ್ಷರಪದಾನಾಂ' ಎಂಬುದು ತತ್ಪುರುಷಸಮಾಸವಲ್ಲವೆಂದೂ ಅದು ದ್ವಂದ್ವಸಮಾಸವೆಂದೂ ಭಾವಿಸಿದರೆ, "ಅಕ್ಷರಗಳ ಮತ್ತು ಪದಗಳ (words) ಸಮತ್ವ" ಎಂಬರ್ಥ ಅಲ್ಲಿ ಹುಟ್ಟುತ್ತದೆ. ಆದರೆ ಈ ಅರ್ಥವು ಪ್ರಸ್ತುತ ವಿಷಯದಲ್ಲಿ ಅಸಮರ್ಥನೀಯವಾಗುತ್ತದೆ. ಏಕೆಂದರೆ-ಸಾರ್ಥಕವಾದ ಒಂದು ಅಕ್ಷರಪುಂಜ(=ಪದ(word))ಕ್ಕೂ, ಮಾತ್ರಾಸಂಖ್ಯೆ ಹಾಗೂ ಗುರು

ಮಾತ್ರಾಸಮತೆ ಎಂದರೂ ಉಚ್ಚಾರಕಾಲಾವಕಾಶದ ಸಮತೆ ಎಂದರೂ ಅರ್ಥ ಒಂದೇ. ಧ್ವನಿಪುಂಜಗಳ ಉಚ್ಚಾರಕಾಲದಲ್ಲಿ ಪರಸ್ಪರ ಸಮತೆ ಇದ್ದರೆ ಮಾತ್ರ ಅವು ಏಕತಾಲಕ್ಕೆ ಎಂದರೆ ಸಮತಾಲಕ್ಕೆ ಒಳಪಡುತ್ತವೆ, ಅರ್ಥಾತ್ ಲಯಾನ್ವಿತವಾಗುತ್ತವೆ. ಆದುದರಿಂದ ಭರತನು ಇಲ್ಲಿ ಮಾಡಿದ ಲಯದ ಲಕ್ಷಣ ವ್ಯಾಖ್ಯೆಗೂ ಅಮರಸಿಂಹಾದಿಗಳು ಮಾಡಿದ ನಿರ್ವಚನಕ್ಕೂ ಯಾವ ವಿರೋಧವೂ ಇಲ್ಲ. ತತ್ತ್ವತಃ ಅವು ಅಭಿನ್ನ. ಅಮರಸಿಂಹನ ಉಕ್ತಿಯಲ್ಲಿ ಲಯದ ಲಕ್ಷಣವು ಸಕಲಧ್ವನಿಗಳಿಗೂ ಸಕಲಕ್ರಿಯೆಗಳಿಗೂ ಅನ್ವಯಿಸುವಂತೆ ವ್ಯಾಪಕವಾಗಿ ಹೇಳಲ್ಪಟ್ಟಿದೆ; ಇಲ್ಲಿ ಭರತನು ಲಯದ ಲಕ್ಷಣವನ್ನು ಛಂದೋಧ್ವನಿಗಳಿಗೆ (ಎಂದರೆ ಪದ್ಯಕ್ಕೂ ಗೀತಕ್ಕೂ) ಅನ್ವಯಿಸುವಷ್ಟರಮಟ್ಟಿಗೆ ಸೀಮಿತವಾಗಿಸಿ ನಿರೂಪಿಸಿದ್ದಾನೆ. ಈ ನಿರ್ವಚನಗಳೊಳಗೆ ಇರುವ ವ್ಯತ್ಯಾಸವು ಇಷ್ಟೇ ಆಗಿದೆ.

ಉಚ್ಚಾರಕಾಲಾವಕಾಶದ ಸಮತೆ ಎಂದರೂ ಮಾತ್ರಾಸಮತೆ ಎಂದರೂ ಒಂದೇ ಎಂಬುದನ್ನು ಈ ಮೇಲೆ ಹೇಳಲಾಗಿದೆಯಷ್ಟೆ. ಛಂದಃಶಾಸ್ತ್ರದಲ್ಲಾಗಲಿ ಸಂಗೀತದಲ್ಲಾಗಲಿ 'ಮಾತ್ರಾಕಾಲ' ಎಂಬುದು 'ಸೆಕುಂಡು' ಇತ್ಯಾದಿಗಳಂತೆ ಕಾಲದ ಒಂದು ಸ್ಥಿರಪರಿಮಾಣವಲ್ಲ. ಅದರ 'ಉದ್ದಳತೆ' ಅಥವಾ ವಿಸ್ತಾರ ನಾವು ಇಟ್ಟುಕೊಂಡಷ್ಟು.[13] ನಾವು ಮಾತನ್ನು ಆಡುವಾಗ ಎಂದರೆ ಅಕ್ಷರೋಚ್ಚಾರ

---

ಲಘುವಿನ್ಯಾಸಗಳಲ್ಲಿ ತತ್ತುಲ್ಯವಾದ ಒಂದು ನಿರರ್ಥಕಾಕ್ಷರಪುಂಜಕ್ಕೂ ಛಂದೋಧರ್ಮದಲ್ಲಿ ಯಾವ ಭೇದವೂ ಇರುವುದಿಲ್ಲವಾದುದರಿಂದ, ಇಲ್ಲಿ 'ಪದ' (= ಸಾರ್ಥಕಶಬ್ದ) ಎಂಬ ಪದಪ್ರಯೋಗವೇ ಅಪ್ರಸ್ತುತವೆಂದಾಗುತ್ತದೆ. ಇದರಿಂದಾಗಿ ಈ ಅರ್ಥವು ಇಲ್ಲಿ ವಿವಕ್ಷಿತವಲ್ಲವೆಂಬುದು ಸ್ಪಷ್ಟ. ಆದಕಾರಣ "ಛಂದೋಕ್ಷರಪದ" ಎಂದರೆ, ಛಂದೋಬಂಧದ ಅಕ್ಷರಗಳದೊಂದು 'ಪದ' (= ಹಜ್ಜೆ) ಅರ್ಥಾತ್ "ಛಂದೋಬಂಧಿತವಾದ ಒಂದು ಅಕ್ಷರಪುಂಜ" ಎಂದರೆ "ಒಂದು ಛಂದಃಖಂಡ" ಎಂಬರ್ಥವು ಇಲ್ಲಿ ಸ್ವೀಕಾರ್ಯವಾಗಿದೆ. (ಲೌಕಿಕ ಛಂದೋಕ್ಷರಗಳು, ಗುಂಪುಗುಂಪಾಗಿ ಹಜ್ಜೆಯಿಡುತ್ತವೆ ಹೊರತು, ಒಂಟೊಂಟಿಯಾಗಿ ಅಲ್ಲ. ಒಂದು ಛಂದೋವಿನ್ಯಾಸವು ಗೋಚರಿಸಬೇಕಾದರೆ ಕನಿಷ್ಠಪಕ್ಷದಲ್ಲಿ ಎರಡಾದರೂ ಅಕ್ಷರಗಳು ಬೇಕಾಗುತ್ತವೆ.) ಛಂದಃಖಂಡಗಳಲ್ಲಿ ಪರಸ್ಪರ ಮಾತ್ರಾಸಮತೆ ಇದ್ದರೆ ಮಾತ್ರ ಅಲ್ಲಿ ಲಯಪ್ರತೀತಿಯುಂಟಾಗುತ್ತದೆ; ಇಲ್ಲದಿದ್ದರೆ ಇಲ್ಲ. ಛಂದಃಶಾಸ್ತ್ರದ ಮಾತ್ರಾಗಣಗಳೆಂದರೆ ಮಾತ್ರಾಸಮತ್ವವುಳ್ಳ ಈ "ಛಂದೋಕ್ಷರಪದ"ಗಳೇ ಆಗಿವೆ. ಮತಂಗನು ತನ್ನ 'ಬೃಹದ್ದೇಶೀ' ಎಂಬ ಸಂಗೀತಶಾಸ್ತ್ರಗ್ರಂಥದಲ್ಲಿ 'ಗಣ' ಎಂಬರ್ಥದಲ್ಲಿ 'ಪದ' ಎಂದೂ ಪ್ರಯೋಗಿಸಿ-ದ್ದಾನೆಂದು ಕೇಳಿಬರುತ್ತದೆ. ಇದರಿಂದಲೂ ಈಮೇಲೆ ಮಾಡಿದ ಅರ್ಥವಿವೃತಿಯ ಸಾಧುತ್ವವು ಸಮರ್ಥಿತವಾದಂತಾಗುತ್ತದೆ.

13. {ಮಾತ್ರಾಕಾಲವೆಂಬುದರ ವಿವರಣೆ} ಕೆಲವು ಪ್ರಾಚೀನ ಗ್ರಂಥಗಳಲ್ಲಿ ಒಂದು ಮಾತ್ರಾಕಾಲ ಅಥವಾ ಕಲಾಕಾಲವೆಂದರೆ ಒಂದು 'ನಿಮೇಷ' – ಎಂದರೆ ಕಣ್ಣು ಮಿಟುಕಿಸುವಷ್ಟು ಕಾಲ ಎಂದು ಹೇಳಿರುವುದುಂಟು. ಇದರಿಂದ 'ಮಾತ್ರೆ' ಎಂಬುದು ಕಾಲದ ಒಂದು ಸ್ಥಿರ ಪರಿಮಾಣವೆಂಬ ಭಾವನೆ ಹುಟ್ಟಬಹುದಾಗಿದೆ. ಆದರೆ, ನಾವು ಮಾತಾಡುವಾಗ ಒಂದು ಲಘ್ವಕ್ಷರವನ್ನು ಉಚ್ಚರಿಸಲು ಬೇಕಾಗುವ ಕಾಲದ ಕನಿಷ್ಠಪರಿಮಾಣವನ್ನು ಒಂದು

ment ಎಂದು ಪ್ರೋಕ್ತವಾಗಿದೆ. ಹಾಗಾದರೆ, "ಛಂದೋವಿಷಯಕವಾದ ರಿಧಮ್" (= poetic rhythm, Rhythm in verse) ಎಂದರೆ **"ಛಂದೋಗತಿ"** ಎಂದಾಯಿತು.[24]

{ರಿಧಮ್ 'Rhythm' ಎಂದರೆ 'ಲಯ'ವಲ್ಲ}

'ಲಯ ಎಂದರೆ ವಸ್ತುತಃ "ಒಂದು ಬಗೆಯ ನಿಲುಗಡೆ" ಎಂಬುದನ್ನು ಹಿಂದೆಯೇ ತಿಳಿದಿದ್ದೇವೆ.[25] Rhythm ಎಂದರೆ "ಒಂದು ಬಗೆಯ ಗತಿ" ಎಂಬು-ದನ್ನು ಈಗ ಕಂಡುಕೊಂಡಿದ್ದೇವೆ. "ನಿಲುಗಡೆ"ಯೂ "ಗತಿ"ಯೂ ಪರಸ್ಪರ ವಿರೋಧಿಗಳು: ನಿಲುಗಡೆ ಎಂದರೆ ಗತಿಯ ಅವಸಾನ: ನಿಲುಗಡೆಯ ಅವಸಾನವೇ ಗತಿಯ ಆರಂಭ. ತಥ್ಯವು ಹೀಗಿರುವಾಗ – Rhythm ಎಂಬ

---

24. {ರಿಧಮ್ Rhythm ಎಂಬುದು ಅನಿರ್ವಚನೀಯವೆನ್ನಿಸಲು ಕಾರಣ} ಪಾಶ್ಚಾತ್ಯರ 'ಛಂದೋಗತಿ' ಎಂಬುದು ಅಕ್ಷರಗಳ ಉಚ್ಚಾರದ ಕಾಲಪ್ರಮಾಣವನ್ನು ಮಾತ್ರ ಅವಲಂಬಿಸಿ-ರದೆ, accent (= ಸ್ವರೋಚ್ಚಾರದ ತೀವ್ರತ್ವ) ಅಥವಾ stress (=ಸ್ವರಭರ) ಎಂಬುದನ್ನೂ ಅವಲಂಬಿಸಿರುವ ಕಾರಣ ಅದು ಧ್ವನಿ(sound) ರೂಪವೇ ಆಗಿದೆ. ಆದರೆ 'ಗತಿ' ಎಂಬುದು ಧ್ವನಿಯ ಹಾಗೆ ಶ್ರವಣೇಂದ್ರಿಯಗ್ರಾಹ್ಯವಲ್ಲ; ಅದು ವಿಭಿನ್ನ ಕಾಲಪರಿಮಾಣದ ಧ್ವನಿಪರಂಪರೆಯ ಶ್ರವಣದ ಪರಿಣಾಮವಾಗಿ ಚಿತ್ತಫಲಕದಲ್ಲಿ ಮೂಡುವ ಒಂದು 'ಭಾವಸರಣಿ'; ಅದು ಕೇವಲ ಬುದ್ಧಿಗ್ರಾಹ್ಯ. 'ಧ್ವನಿ' ಮತ್ತು 'ಧ್ವನಿಯ ಗತಿ' ಎಂಬಿವು – ಕಾಲು ಮತ್ತು ಕಾಲಿನ ನಡಿಗೆಯ ಹಾಗೆಯೇ – ವಾಸ್ತವಿಕವಾಗಿ ಅವಿಭಾಜ್ಯವಾದರೂ, ವೈಚಾರಿಕವಾಗಿ ಅವೆರಡನ್ನು ಬೇರೆ ಬೇರಾಗಿ ಭಾವಿಸುವುದು ಶಕ್ಯವಾಗುತ್ತದೆ. ಆದರೆ, ವಾಸ್ತವಿಕವಾಗಿ ಅವಿಭಾಜ್ಯವಾಗಿರುವ 'ಶಬ್ದ' ಮತ್ತು 'ಛಂದಸ್' ಎಂಬಿವನ್ನು ಭಾರತೀಯ ಛಂದೋವಿದರು ವೈಚಾರಿಕವಾಗಿ ಬೇರ್ಪಡಿಸಿ-ಕೊಂಡಂತೆ (ನಾಟ್ಯಶಾಸ್ತ್ರ ೧೪-೪೦) – ಪಾಶ್ಚಾತ್ಯ ಪಂಡಿತರು Rhythmನ್ನು ಈ ರೀತಿಯಲ್ಲಿ ವಿಶ್ಲೇಷಿಸಿಕೊಳ್ಳದೆ, ಒಮ್ಮೆ 'ಧ್ವನಿರೂಪ'ವನ್ನು (B 2 ಮತ್ತು C) Rhythm ಎನ್ನುತ್ತಾರೆ; ಇನ್ನೊಮ್ಮೆ 'ಧ್ವನಿಯ ಗತಿ'ಯನ್ನು (B 1) Rhythm ಎನ್ನುತ್ತಾರೆ. ಈ ಅವ್ಯವಸ್ಥೆಗೆ – Rhythmನ ಮೂಲಭೂತ (ಗ್ರೀಕ್) ಕಲ್ಪನೆಯಲ್ಲಿ (A 1) speech (= ಅಕ್ಷರರೂಪಧ್ವನಿ), Melody (=ಸ್ವರಾರೋಹಾವರೋಹರೂಪವಾದ ಧ್ವನಿ), Bodily motion (= ಅಂಗವಿಕ್ಷೇಪರೂಪವಾದ ಚಲನವಲನ, ಅರ್ಥಾತ್ ಗತಿ) ಎಂಬಿವು ಒಟ್ಟಾಗಿ ಹೆಣೆದುಕೊಂಡಿರುವುದೂ, (Rhythmನ ಈ ಮೂಲಕಲ್ಪನೆಯು ನಮ್ಮ ಶಾಸ್ತ್ರಗ್ರಂಥಗಳಲ್ಲಿ ಪ್ರೋಕ್ತವಾಗಿರುವ 'ತೂರ್ಯತ್ರಯ'ವನ್ನು ನೆನಪಿಗೆ ತರುತ್ತದೆ.) ಮತ್ತು ಆ ಹೆಣಿಗೆಯನ್ನು ವಿಂಗಡಿಸುವ ಪ್ರಯತ್ನಗಳು (A 1) ಸಮರ್ಪಕವಾಗದಿರುವುದೂ ಕಾರಣಗಳಾಗಿವೆ. ಹೀಗೆ Rhythm ಎಂಬುದರ ಅರ್ಥವು ಅಸ್ಪಷ್ಟವೂ ಅನಿಶ್ಚಿತವೂ ಆಗಿ ಪರಿಣಮಿಸಿರುವುದರಿಂದ (A1) "ರಿಧಮ್ ಎಂಬುದು ಅನಿರ್ವ-ಚನೀಯ" ಎಂಬ ಅಭಿಪ್ರಾಯವನ್ನು ಪಾಶ್ಚಾತ್ಯ ಪಂಡಿತರು ಆಶ್ರಯಿಸುವಂತಾಗಿದೆ (A 3).

25. ಈ ನಿಬಂಧದ 14ನೆಯ ಟಿಪ್ಪಣಿಯನ್ನು ನೋಡಿರಿ; ಮತ್ತು 18ನೆಯ ಟಿಪ್ಪಣಿಯಲ್ಲಿ ಉದ್ಧರಿಸಿರುವ "ಲಯಶಬ್ದಃ...ಸಮಾನಕಾಲಿಕವಿರಾಮಪರಃ" ಎಂಬ 'ರಾಮಾಯಣ ಶಿರೋಮಣಿ'ಯ ವಾಕ್ಯವನ್ನೂ ಪರಾಮರ್ಶಿಸಿರಿ.

ಅರ್ಥದಲ್ಲಿ 'ಲಯ' ಎಂದು ಹೇಳಿದರೆ, movement ಎಂಬ ಅರ್ಥದಲ್ಲಿ pause ಎಂದು ಹೇಳಿದರೆ ಹೇಗೋ ಹಾಗಾಗುತ್ತದೆ!

{ಸಮಗತಿ ಮತ್ತು ವಿಷಮಗತಿ}

ಹೀಗೆ – 'ಗತಿ' ಮತ್ತು 'ನಿಲುಗಡೆ' ಎಂಬವು ತಾತ್ತ್ವಿಕವಾಗಿ ಒಂದು ಇನ್ನೊಂದರ ಅಭಾವರೂಪವಾಗಿದ್ದರೂ – ಪ್ರಸ್ತುತ ವಿಷಯದಲ್ಲಿ ಅವೆರಡ-ರೊಳಗೆ ಅಪರಿಹಾರ್ಯವಾದೊಂದು ಸಂಬಂಧವಿರುತ್ತದೆ. ಅದು ಹೇಗೆಂದರೆ: ಛಂದೋಗತಿ ಎಂಬುದು ಯಂತ್ರವಾಹನದ ಗತಿಯಂತೆ ಏಕಾಕಾರವಾದ ಅಖಂಡಗತಿಯಲ್ಲ; ಅದು ನಮ್ಮ ಕಾಲಿನ ನಡಿಗೆಯಂತೆ ಸಖಂಡಗತಿ; ಅದಕ್ಕೂ 'ಹಜ್ಜೆ'ಗಳಿವೆ. ಪ್ರತಿಯೊಂದು ಹಜ್ಜೆಗೂ ಒಂದು 'ನಿಲುಗಡೆ' ಇದೆ. ಆ ನಿಲುಗಡೆಗಳು ಸಮಕಾಲಿಕವಾಗಿದ್ದರೆ ಆ 'ಗತಿ' ಲಯಾನ್ವಿತವೆನಿಸುವುದೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಹಾಗೆ ಆಗಬೇಕಾದರೆ ಅವುಗಳ 'ಅಂತರ', ಎಂದರೆ ಆ ನಿಲುಗಡೆಗಳ ಮಧ್ಯದ ಉಚ್ಚಾರಕಾಲಾವಕಾಶ ಒಂದಕ್ಕೊಂದು ಸಮಾನವಾಗಿ-ರಬೇಕಾಗುತ್ತದೆ. ಅವಕಾಶಗಳು ಅಸಮಾನವಾಗಿದ್ದರೆ ಆ ಗತಿ ಲಯರಹಿತ-ವಾಗುತ್ತದೆ. ಹೀಗೆ, ಛಂದೋಗತಿಯು ಸಮಾನಾಂತರಗತಿ (=ಸಮಗತಿ) ಎಂದೂ, ಅಸಮಾನಾಂತರಗತಿ (=ವಿಷಮಗತಿ) ಎಂದು ದ್ವಿವಿಧವಾಗಿದೆ. ಈ ಎರಡೂ ಗತಿಯ ಛಂದೋಬಂಧಗಳು ನಮ್ಮ ಛಂದಃಶಾಸ್ತ್ರಗ್ರಂಥಗಳಲ್ಲಿ ನಿರೂ-ಪಿಸಲ್ಪಟ್ಟಿವೆ. ಮಾತ್ರಾಸಮಕ, ಷಟ್ಪದಿ ಮೊದಲಾದ ಎಲ್ಲಾ 'ಮಾತ್ರಾಬಂಧ'ಗಳೂ; ಭುಜಂಗಪ್ರಯಾತ, ಲಲಿತಪದ, ರಥೋದ್ಧತಾ ಇತ್ಯಾದಿ (ಹಾಗೂ ಹಿಂದೆ ಉದಾಹರಿಸಲಾದ ಲಲಿತ, ಲಯಗ್ರಾಹಿ ಇತ್ಯಾದಿ) 'ವೃತ್ತ'ಗಳೂ ಸಮಗತಿಬಂಧ-ಗಳಾಗಿದ್ದು 'ಲಯಾನ್ವಿತ'ವಾಗಿವೆ. ಶಾರ್ದೂಲವಿಕ್ರೀಡಿತ, ಚಂಪಕಮಾಲಾ, ಸ್ರಗ್ಧರಾ, ಮಂದಾಕ್ರಾಂತಾ, ಮಾಲಿನಿ, ಶಾಲಿನಿ ಇತ್ಯಾದಿ ವೃತ್ತಗಳೂ ಅನುಷ್ಟುಪ್ ಶ್ಲೋಕ, ಉಪಜಾತಿ, ಕರಂಬಜಾತಿ ಇತ್ಯಾದಿ 'ಅಕ್ಷರಜಾತಿ'ಗಳೂ ವಿಷಮಗತಿಬಂಧ-ಗಳಾಗಿದ್ದು ಲಯರಹಿತವಾಗಿವೆ.

{'ಲಯ'ದೊಳಗೆ 'ರಿಧಮ್' ಅಡಕವಾಗದು}

ಆಂಗ್ಲಭಾಷೆಯ ಛಂದೋಬಂಧಗಳು ನಮ್ಮ 'ವೃತ್ತ'ಗಳಂತೆ ಗುರುಲಘು-ಸ್ಥಿರವಾದ ಅಕ್ಷರಬಂಧಗಳೇ ಆಗಿರುವವಾದರೂ, ಅವುಗಳ ಛಂದೋಗತಿಯಲ್ಲಿ ಸಮ, ವಿಷಮ ಎಂಬ ದ್ವೈವಿಧ್ಯವಿಲ್ಲ; ಅವೆಲ್ಲವೂ – ಉದ್ದೇಶಪೂರ್ವಕವಾಗಿ, ಕ್ವಚಿತ್ ನಿಯಮೋಲ್ಲಂಘನ ಮಾಡಿದ ಸಂದರ್ಭಗಳಲ್ಲಿ ಹೊರತು – ಸಮಗತಿ ಬಂಧಗಳೇ ಆಗಿರುತ್ತವೆ. ಅಷ್ಟು ಮಾತ್ರವಲ್ಲ, ಒಂದು ಪದ್ಯದಲ್ಲಿ ಬರುವ ಗಣಗಳೆಲ್ಲವೂ 'ಸಮರೂಪ'ದವೇ ಆಗಿರುತ್ತವೆ. ಈ ಪದ್ಯಗಳು ನಮ್ಮ 'ಪಂಚ-

ಚಾಮರವೃತ್ತ'ದಂತೆ ಲಗಂ ಲಗಂ ಲಗಂ (iambic) ಎಂದೋ 'ಸೈನಿಕವೃತ್ತ'ದಂತೆ ಗಾಲ ಗಾಲ ಗಾಲ (trochee) ಎಂದೋ 'ತೋಟಕವೃತ್ತ'ದಂತೆ ಲಲಗಂ ಲಲಗಂ ಲಲಗಂ (anapoestic) ಎಂದೋ 'ವನಮಂಜರೀವೃತ್ತ'ದಂತೆ ಗಾಲಲ ಗಾಲಲ ಗಾಲಲ (dactylic) ಎಂದೋ ಏಕರೂಪದ ಅವಯವಗಳಿಂದ ಘಟಿತವಾಗಿರು-ತ್ತವೆ; ಎಂದರೆ, ಒಂದು ಪದ್ಯದ ಅವಯವಗಳೆಲ್ಲವೂ ಒಂದು ಇನ್ನೊಂದರ ಪಡಿಯಚ್ಚಾಗಿರುತ್ತವೆ. ಇದರಿಂದಾಗಿ ಅವುಗಳಲ್ಲಿ 'ಗತಿ'ಯ ಹಜ್ಜೆಗೂ ಪದ್ಯದ ಅವಯವಕ್ಕೂ ಪರಿಪೂರ್ಣವಾದ ಐಕ್ಯವಿರುವುದಾದರೂ, ಆ ಭಾಷೆಯ ಗುರು-ಲಘುಪರಿಮಾಣಗಳು ನಮ್ಮ ಭಾಷೆಗಳ ಗುರುಲಘುಪರಿಮಾಣಗಳಂತೆ ಸ್ಥಿರ-ವಾಗಿರುವುದಿಲ್ಲವಾದುದರಿಂದ (A 2,3) ನಮ್ಮ ಭಾಷೆಗಳ ಸಮಗತಿಯ ಪದ್ಯ-ಗಳಲ್ಲಿ 'ಗತಿ'ಯ ಹಜ್ಜೆಗಳ ನಿಲುಗಡೆಗಳು ಕಟ್ಟುನಿಟ್ಟಾದ ಸಮಕಾಲದಲ್ಲಿ ಗೋಚರಿಸುವ ಹಾಗೆ ಆಂಗ್ಲಭಾಷೆಯ ಛಂದೋಗತಿಯ ನಿಲುಗಡೆಗಳು (ಪಠನ ಕಾಲದಲ್ಲಿ) ಗೋಚರಿಸದೆ, ಸ್ವಲ್ಪ ಹಿಂದೆಯೋ ಮುಂದೆಯೋ ಗೋಚರಿಸುವುದೂ ಉಂಟು. ಆ ಛಂದೋಗತಿ ನಮ್ಮ ಛಂದೋಗತಿಯಂತೆ ಕೇವಲ ಉಚ್ಚಾರಕಾಲಾ-ವಕಾಶವನ್ನವಲಂಬಿಸಿರದೆ, ಅಕ್ಷರೋಚ್ಚಾರದ accent ಎಂದರೆ ಏರಿಕೆಯನ್ನು ಅಥವಾ 'ಸ್ವರಭರ'ವನ್ನು ಎಂದರೆ ಉಚ್ಚಾರದ ಘನತ್ವ(ictus = stress)ವನ್ನು ಮುಖ್ಯವಾಗಿ ಅವಲಂಬಿಸಿರುವುದರಿಂದ ಹೀಗಾಗುವುದಾಗಿದೆ. ಏತದ್ಗುಣದಿಂದ ವಿಶಿಷ್ಟವಾದ "ಗತಿ"ಯನ್ನೇ (C) ಪಾಶ್ಚಾತ್ಯರು Rhythm ಎನ್ನುವುದು ಹೊರತು "ಲಯ"ವನ್ನಲ್ಲ.[26] 'ಲಯ' ಎಂಬುದು ಸಮಗತಿಯ ಹಜ್ಜೆಗಳ ನಿಲುಗಡೆಗಳಲ್ಲಿ

---

26. {ವಿಭಿನ್ನಶ್ರುತಿರೂಪದ ವಿಭಿನ್ನಪರಿಮಾಣಗಳ 'ಸಂಘಟನೆ'ಯೇ Rhythm} ಸಂಗೀತದಲ್ಲಾದರೆ ಪಾಶ್ಚಾತ್ಯರೂ ಎಷ್ಟೋ ವೇಳೆ ಕಟ್ಟುನಿಟ್ಟಾದ ಕಾಲವಿಭಾಗಸಮತೆಯನ್ನು ಅವಲಂಬಿಸುವುದುಂಟು. ಆಗ ಆ ಸಂಗೀತರಚನೆಗಳು ನಮ್ಮ ಗೀತಾದಿರಚನೆಗಳಂತೆಯೇ 'ತಾಲಬದ್ಧ'(=ಲಯಾನ್ವಿತ)ವಾಗುತ್ತವೆ; ಮತ್ತು ಆ "ತಾಳದ 'ಗತ್ತು'ಗಳ ಆವರ್ತ"ವನ್ನು ಅವರು Rhythm ಎಂದು ಕರೆಯುತ್ತಾರೆ. ಆದರೆ ಅಲ್ಲಿಯೂ ಅವರು Rhythm ಎನ್ನುವುದು ಆ ತಾಳದ ಕಾಲಮಾನವನ್ನಾಗಿರದೆ, ಆವರ್ತಗಳಲ್ಲಿ ಅಡಕವಾಗಿರುವ 'ತಾಳಧ್ವನಿ'ಗಳ ಪುಂಜವನ್ನಾಗಿದೆ. ಅಷ್ಟು ಮಾತ್ರವಲ್ಲ, (B 2) ಅವತರಣಿಕೆಯಲ್ಲಿ ಕಾಣುವಂತೆ, periodical accent (ಧ್ವನಿಗಳ ನಿಯತಕಾಲಿಕ ತೀವ್ರತ್ವ) ಎಂಬುದು ಅಲ್ಲಿಯೂ Rhythmನ ಅಪರಿಹಾರ್ಯವಾದ ಲಕ್ಷಣವಾಗಿರುತ್ತದೆ; 'ಲಯ'ದ ಹಾಗೆ ಅದು ಆವರ್ತಕಾಲಗಳ ಸಮತ್ವ ಮಾತ್ರವಲ್ಲ, ಸರ್ವಸಾಧಾರಣವಾದ Rhythmನಲ್ಲಿಯೂ (Rhythm in general B 4) - "regular succession of strong and weak elements" (ಪ್ರಬಲ – ದುರ್ಬಲ 'ತತ್ತ್ವ'ಗಳ ಅನುಕ್ರಮವಾದ ಪುನರಾವರ್ತನ) ಎಂಬುದು ಇರಲೇಬೇಕಾದ ಲಕ್ಷಣವಾಗಿದೆ. ತಾತ್ಪರ್ಯವೇನೆಂದರೆ : Rhythm ಎಂಬುದು ಅನುಕ್ರಮವಾದ 'ಏರಿಳಿತ'ಗಳುಳ್ಳ (ಮತ್ತು, ಹಲಕೆಲವು ಸಂದರ್ಭಗಳಲ್ಲಿ ಕಾಲಸಮತ್ವವೂ ಉಳ್ಳ) ಧ್ವನಿಪುಂಜಗಳ 'ಗತಿ'; ಅದು

ಪ್ರತೀತವಾಗುವ ಒಂದು ಭಾವ; ಅದು ಸಮಗತಿಯ ಒಂದು ಗುಣ. ಆದುದ-ರಿಂದ ಅದನ್ನು ಸಮಗತಿಯ ಒಂದು ಅಂಶ ಎನ್ನಲೂಬಹುದು. Rhythm ಎಂಬುದು ಸಮವಿಷಮ ಎಂಬ (ಖಚಿತವಾದ) ಕಾಲಭೇದವಿವಕ್ಷೆಯಿಲ್ಲದೆ ಪ್ರಯುಕ್ತವಾಗುವ ಗತ್ಯರ್ಥಕ ಶಬ್ದವಾಗಿರುವುದರಿಂದ, ಅದು ಸಮಗತಿಯನ್ನು ಸೂಚಿಸುವ ಸಂದರ್ಭಗಳಲ್ಲಿ 'ಲಯ'ವನ್ನೂ ಒಳಕೊಳ್ಳುವುದು. ಆದರೆ 'ಲಯ' ಎಂಬುದು ಸಮಗತಿಯ ಅಂಶಮಾತ್ರವಾಗಿರುವುದರಿಂದ, ಗತ್ಯರ್ಥಕವಾದ Rhythmನ್ನು ಅದು ಒಪ್ಪಿಕೊಳ್ಳಲಾರದು. ಒಂದು ಹೋಲಿಕೆಯಿಂದ ಇದನ್ನು ಹೀಗೆ ಚಿತ್ರಿಸಿ ಹೇಳಬಹುದು: ಸಮಗತಿ ಎಂಬುದು 'ಬಸವ'ನಾದರೆ, ಲಯ-ವೆಂಬುದು ಬಸವನ 'ಬಾಲ'. 'ಬಸವ' ಎಂಬ ಮಾತಿನಲ್ಲಿ ಬಸವನ ಬಾಲವೂ ಸೇರಿರುತ್ತದೆ; ಆದರೆ 'ಬಾಲ' ಎಂಬ ಮಾತಿನೊಳಗೆ 'ಬಸವ' ಸೇರುವಂತಿಲ್ಲ. ತಾತ್ಪರ್ಯವೇನೆಂದರೆ: Rhythm ಎಂಬ ಪದದ ಅರ್ಥದೊಳಗೆ 'ಲಯ'ವೂ ಸೇರಬಹುದಾದರೂ, 'ಲಯ' ಎಂಬುದರೊಳಗೆ Rhythm ಅಡಕವಾಗಲಾರದು. ಆದುದರಿಂದ Rhythm ಎಂಬರ್ಥದಲ್ಲಿ 'ಲಯ' ಎಂದು ಹೇಳಿದರೆ 'ಬಸವ' ಎಂಬರ್ಥದಲ್ಲಿ 'ಬಾಲ' ಎಂದು ಹೇಳಿದರೆ ಹೇಗೋ ಹಾಗಾಗುತ್ತದೆ![27]

---

'ಲಯ'ವಲ್ಲ. ತಥ್ಯವು ಹೀಗಿರುವುದರಿಂದಲೇ, Music of India ಎಂಬ ತನ್ನ ಗ್ರಂಥದಲ್ಲಿ Herbert Popley ಎಂಬ ಆಂಗ್ಲವಿದ್ವಾಂಸನು ನಮ್ಮ ಸಂಗೀತಶಾಸ್ತ್ರದ 'ತಾಳ'ವನ್ನು – ಬೇರೆ ಕೆಲವರಂತೆ Rhythm ಎಂದು ಹೇಳದೆ – ತನ್ನ ಆ ಗ್ರಂಥದ "ತಾಳಾಧ್ಯಾಯ"ಕ್ಕೆ 'Tala or Time-measure' ಎಂಬ ಶಿರೋನಾಮೆಯನ್ನು ಕೊಟ್ಟಿರುವುದಾಗಿದೆ. ಪಾಶ್ಚಾತ್ಯರು ಸಂಗೀತದಲ್ಲಿಯೂ Rhythm ಎಂದು ಹೇಳುವುದು ಕಾಲಸಮತ್ವ ಅಥವಾ ಕಾಲಪ್ರಮಾಣ (ಎಂದರೆ ಲಯ)ವನ್ನಾಗಿರದೆ, ವಿಭಿನ್ನಶ್ರುತಿರೂಪದ ಹಾಗೂ ವಿಭಿನ್ನಪರಿಮಾಣದ ಧ್ವನಿಗಳ 'ಸಂಘಟನೆ' ಅಥವಾ ಪರಂಪರೆಯನ್ನೆಂಬುದನ್ನು ತಿಳಿದುಕೊಳ್ಳುವುದಕ್ಕೆ – ಈ ಮೇಲೆ ಹೇಳಿದ Music of India ಎಂಬ ಗ್ರಂಥದಲ್ಲಿ ಉದ್ಧರಿಸಲ್ಪಟ್ಟಿರುವ (ಪುಟ ೭೪) Fox Strangeways ಎಂಬ ವಿದ್ವಾಂಸನ ಒಂದು ಸಂಗೀತಶಾಸ್ತ್ರಗ್ರಂಥದ ಈ ಒಂದೇ ವಾಕ್ಯ ಸಾಕು: "In order that *Rhythm, an articulation of infinite variety of sounds*, may be upon some regular plan, the plan must have some recognizable unit of measurement."....etc.

27. {ಆಧುನಿಕ ನಿಘಂಟುಗಳಲ್ಲಿ Rhythm – ಲಯ} ನಮ್ಮ ಆಧುನಿಕ ವಿದ್ವಾಂಸರು ಹೆಚ್ಚೇನೂ ವಿಚಾರಕ್ಕೆ ಬೀಳದೆ Rhythm ಎಂಬರ್ಥವನ್ನಿಟ್ಟು ಕೊಂಡು ಲಯ ಎಂಬ ಪದವನ್ನು ಬಳಸುತ್ತಿರುವುದಕ್ಕೆ ಬೇರೊಂದು ಕಾರಣವಿದ್ದರೂ ಇರಬಹುದು. ಶಾಸ್ತ್ರೀಯ ವಿಚಾರಮಾರ್ಗವು ನಮ್ಮ ಆಧುನಿಕ ವಿದ್ವಾಂಸರಿಗೆ ಪ್ರಾಪ್ತವಾಗಿರುವುದು ಇಂಗ್ಲೀಷ್ ಭಾಷೆಯ ಅಧ್ಯಯನದಿಂದಲೇ ಆಗಿರುವುದರಿಂದ, ಇಂಗ್ಲೀಷಿನಲ್ಲಿ ಆಲೋಚಿಸಿ ದೇಶಭಾಷೆಯಲ್ಲಿ ಬರೆಯುವ ಅಭ್ಯಾಸವು ಅವರಿಗೆ ಸಹಜವಾಗಿ ಬಂದುಬಿಡುತ್ತದೆ. ಇಂಗ್ಲೀಷ್ ಭಾಷೆಯ ಮೂಲಕ ತಾವು ಗ್ರಹಿಸಿದ ಯಾವುದೊಂದು ಭಾವ(idea)ವನ್ನು ದೇಶಭಾಷೆಯಲ್ಲಿ ವ್ಯಕ್ತಪಡಿಸಬೇಕಾಗುವ ಸಂದರ್ಭಗಳಲ್ಲಿ – ನಮ್ಮ ಶಾಸ್ತ್ರೀಯ ವಿಷಯಗಳನ್ನು ಅವರು ನಮ್ಮ

ದೇಶದ ಭಾಷೆಗಳ ಮೂಲಕ ಗ್ರಹಿಸಿದವರಲ್ಲವಾಗಿರುವುದರಿಂದ – ಆ ಭಾವವನ್ನು ದೇಶ ಭಾಷೆಯಲ್ಲಿ ಪ್ರಕಟಿಸುವುದಕ್ಕೆ ತಕ್ಕುದಾದ ಶಬ್ದವನ್ನು ಇಂಗ್ಲಿಷ್ – ಸಂಸ್ಕೃತ ಶಬ್ದಕೋಶ-ಗಳಿಂದ ಅವರು ಪಡೆಯಬೇಕಾಗುತ್ತದೆ. ಅಂತಹ ಶಬ್ದಕೋಶಗಳೊಳಗೆ ವಿಖ್ಯಾತವಾದುದು ಮೊನಿಯರ್ ವಿಲಿಯಮ್ಸ್ ಎಂಬ ಪಂಡಿತನ *English - Sanskrit Dictionary* ಆಗಿದೆ. ಅದರಲ್ಲಿ Rhythm ಎಂಬ ಪದಕ್ಕೆ 'ಲಯ' ಎಂದೂ, 'ತಾಲ' ಎಂದೂ ನಿರ್ವಿಶೇಷವಾಗಿ ಅರ್ಥ ಕೊಡಲಾಗಿದೆ. ಅಂತಹ ಮಹಾಪಂಡಿತನು ಹೇಳಿದುದರಲ್ಲಿ ಶಂಕಿಸಬೇಕಾದುದೇನೂ ಇರಲಾರದೆಂದು ಭಾವಿಸುವುದು ಸಹಜವೇ ಸೈ. ಇದರಿಂದ ನಮ್ಮ ಆಧುನಿಕ ವಿದ್ವಾಂಸರು ತಮ್ಮ 'ಮನಂಬೊಕ್ಕ' rhythmನ್ನು ವ್ಯಕ್ತಪಡಿಸುವುದಕ್ಕೆ 'ಲಯ' ಎಂಬ ಪದವನ್ನು ಅಲ್ಲಿಂದ ಸ್ವೀಕರಿಸಿದ್ದಾಗಿರಲೂಬಹುದು. ಆ 'ಡಿಕ್ಷನರಿ'ಯಲ್ಲಿ rhythm ಎಂಬುದಕ್ಕೆ ಲಯ, ತಾಳ ಎಂದು ಎರಡು ಪದಗಳನ್ನು ಸಮಾನಾರ್ಥಕಗಳಾಗಿ ಕೊಟ್ಟಿದ್ದರೂ – ತಾಳ ಎಂದರೇನೆಂದೂ ಅದರ ಅರ್ಥದ ವ್ಯಾಪ್ತಿ ಎಷ್ಟೆಂದೂ ನಮ್ಮ ಜನಕ್ಕೆಲ್ಲ ಸಾಮಾನ್ಯವಾಗಿ ಗೊತ್ತಿರುವುದರಿಂದ, rhythm ಎಂಬ ವಿಶಾಲವ್ಯಾಪ್ತಿಯ ಭಾವವನ್ನು 'ತಾಳ' ಎಂಬುದರೊಳಗೆ ತುರುಕುವುದು ಅಶಕ್ಯವೆಂದು ಕಂಡುಬಂದು, – ತಾಳ ಎಂಬ ಶಬ್ದದಷ್ಟು ಪ್ರಸಿದ್ಧವಲ್ಲದ ಮತ್ತು ಅರ್ಥವ್ಯಾಪ್ತಿಯ ವಿಷಯದಲ್ಲಿ ಜನಸಾಮಾನ್ಯಕ್ಕೆ ಅಪರಿಚಿತವೂ ಆದ 'ಲಯ' ಎಂಬುದನ್ನೇ, ತಮ್ಮ ಉದ್ದೇಶಸಿದ್ಧಿಗೆ ಉಪಯುಕ್ತವೆಂದು, ನಮ್ಮ ಆಧುನಿಕ ವಿದ್ವಾಂಸರು ಆರಿಸಿಕೊಂಡು-ದಾಗಿರಲೂಬಹುದು. ಆದರೆ ಅದೇ ಕೋಶಕಾರನು ನಿರ್ಮಿಸಿದ, ಮತ್ತು ಆ ಕೋಶಕ್ಕಿಂತಲೂ ಹೆಚ್ಚು ಪ್ರಸಿದ್ಧವಾಗಿದ್ದು, ದೇಶವಿದೇಶಗಳಲ್ಲಿ ಪ್ರಮಾಣಭೂತವೆಂದು ಮನ್ನಿಸಲ್ಪಡುತ್ತಿರುವ Monier Williams's *Sanskrit - English Dictionary* ಎಂಬ ಬೃಹತ್ತರ ಶಬ್ದಕೋಶದಲ್ಲಿ 'ಲಯ' ಎಂಬುದಕ್ಕಾಗಲಿ 'ತಾಲ' ಎಂಬುದಕ್ಕಾಗಲಿ rhythm ಎಂಬರ್ಥವನ್ನು ಅವನು ಬರೆಯಲಿಲ್ಲ! (ಸುಪ್ರಸಿದ್ಧವಾದ 'ಆಪಟೆ ಸಂಸ್ಕೃತ – ಇಂಗ್ಲೀಷ್ ಶಬ್ದಕೋಶ'ದಲ್ಲಿಯೂ 'ಲಯ' ಎಂಬುದಕ್ಕೆ rhythm ಎಂಬರ್ಥವನ್ನು ಹೇಳಿರುವುದಿಲ್ಲ.) ಇದಕ್ಕೆ ಕಾರಣವೇನು? – ನನಗೆ ಹೀಗೆ ತೋರುತ್ತದೆ: ಸಂಸ್ಕೃತಗ್ರಂಥಗಳ ಪರಿಶೀಲನದಿಂದ ಮತ್ತು ಸಂಸ್ಕೃತವಿದ್ವಾಂಸರ ಅಭಿಪ್ರಾಯಸಂಗ್ರಹಣದಿಂದ – 'ಲಯ' ಎಂಬುದಾಗಲಿ 'ತಾಲ' ಎಂಬುದಾಗಲಿ rhythm ಎಂಬರ್ಥವನ್ನು ಕೊಡುವುದಿಲ್ಲವೆಂಬುದು ಅವನಿಗೆ ತಿಳಿದಿದ್ದ ಕಾರಣ, ಲಯ ಹಾಗೂ ತಾಲ ಎಂಬ ಪದಗಳಿಗೆ (ಸಂಸ್ಕೃತ – ಇಂಗ್ಲೀಷ್ ಶಬ್ದಕೋಶದಲ್ಲಿ) rhythm ಎಂದು ಅವನು ಅರ್ಥ ಬರೆಯಲಿಲ್ಲ. ಆದರೆ, rhythm ಎಂಬರ್ಥವನ್ನು ಕೊಡಬಲ್ಲ ಸಂಸ್ಕೃತ ಪದ ಅವನಿಗೆ ಹೊಳೆಯಲಿಲ್ಲವಾದುದರಿಂದ – rhythmನೊಳಗೆ ಅಡಕವಾಗಬಲ್ಲ ಲಯ ಅಥವಾ ತಾಲ ಎಂಬುದರ ಅರ್ಥವನ್ನು ಹಿಗ್ಗಿಸಿ rhythm ಎಂಬರ್ಥದಲ್ಲಿ (ಸಂಸ್ಕೃತದಲ್ಲಿ) ರೂಢಿಗೆ ತರಬಹುದು ಎಂಬುದು ಅವನ ಆಶಯವಾಗಿತ್ತೆಂದೂ, ಈ ಕಾರಣದಿಂದ ಅವನು ತನ್ನ ಇಂಗ್ಲಿಷ್ – ಸಂಸ್ಕೃತ ಶಬ್ದಕೋಶದಲ್ಲಿ rhythm ಎಂಬುದಕ್ಕೆ 'ಲಯ', 'ತಾಲ' ಎಂದು ಅರ್ಥಬರೆದನೆಂದೂ ಊಹಿಸಬೇಕಾಗುತ್ತದೆ. (ಅವನು 'ಇಂಗ್ಲಿಷ್ – ಸಂಸ್ಕೃತ ಶಬ್ದಕೋಶ'-ವನ್ನು, ಸಂಸ್ಕೃತದಲ್ಲಿ ಬರೆಯಲೆಳಸುವ ಇಂಗ್ಲಿಷ್ ಜನಕ್ಕಾಗಿಯೇ ರಚಿಸಿದನೆಂಬುದು ಆ ಗ್ರಂಥಕ್ಕೆ ಅವನು ಬರೆದ ಮುನ್ನುಡಿಯಿಂದ ತಿಳಿದುಬರುತ್ತದೆ.) ಇದಕ್ಕಿಂತಲೂ ವಿಚಿತ್ರವಾದ ಅರ್ಥನಿರ್ದೇಶನಗಳನ್ನೂ ಆ ಗ್ರಂಥದಲ್ಲಿ ಕಾಣಬಹುದು. ಉದಾ: metre ಎಂಬ ಇಂಗ್ಲಿಷ್ ಪದಕ್ಕೆ 'ವೇದ' ಎಂಬರ್ಥವೂ ಅದರಲ್ಲಿದೆ! ಸಂಸ್ಕೃತದಲ್ಲಿ 'ಛಂದಸ್' ಎಂಬ ಶಬ್ದಕ್ಕೆ metre ಎಂದೂ 'ವೇದ'ವೆಂದೂ ಅರ್ಥವಿರುವ ಮಾತ್ರದಿಂದ, ಇಂಗ್ಲಿಷಿನ Metre ಎಂಬ ಪದಕ್ಕೂ

'ವೇದ' ಎಂಬರ್ಥ ಹೇಗೆ ಬರುವುದೋ! 'ಏಕತಾಲ' ಎಂದರೂ 'ಏಕತಾನ' ಎಂದರೂ ಅವನಿಗೆ ಸಮಾನವಾಗಿ ಕಂಡಿದೆ! Melody ಎಂಬುದಕ್ಕೂ ಅವನು 'ತಾಲ' ಎಂದು ಅರ್ಥ ಬರೆದಿದ್ದಾನೆ! ಇಂಗ್ಲಿಷಿನ trochee ಎಂಬುದಕ್ಕೂ ಅವನ ಅರ್ಥ 'ತಾಲ' ವೆಂದೇ ಆಗಿದೆ! ಇದಕ್ಕೆಲ್ಲ ಅವನಿಗೆ ಎಲ್ಲಿ ಆಧಾರ ಸಿಕ್ಕಿತೋ, ಹೇಳುವವರಾರು? ಕೇಳುವವರಾದರೂ ಯಾರು? – ಪಾಶ್ಚಾತ್ಯಪಂಡಿತರು ಏನು ಬರೆದರೂ ಅದು ನಮಗೆ ಪರಮಪ್ರಮಾಣ !!

"Ours's not to reason why,
Ours's but to do and die."
(with apology to Lord Tennyson)

{ಈ ವಿಷಯದಲ್ಲಿ ಸೇಡಿಯಾಪು ಅವರ ಇನ್ನಷ್ಟು ಚಿಂತನೆಗಳು ಇದೇ ಸಂಪುಟದಲ್ಲಿರುವ 'ಕನ್ನಡ ಛಂದಸ್ಸು' ನಿಬಂಧದ ನಾಲ್ಕನೆಯ ಪರಿಶಿಷ್ಟದಲ್ಲಿವೆ. ಅಲ್ಲಿ ಹೇಳಲಾದ ಅಭಿಪ್ರಾಯಗಳನ್ನೂ ಈ ಮೇಲಿನ ವಿಚಾರಗಳೊಂದಿಗೆ ಸೇರಿಸಿಕೊಂಡು ಅವಲೋಕಿಸಬೇಕು. – ಸಂ.}



# ಪರಿಚ್ಛೇದ ನಾಲ್ಕು

## ಛಂದಸ್ ಮತ್ತು ಗತಿ – ಛಂದಃಪದಾರ್ಥವಿವೇಚನೆ

{'ಗತಿ' ಎಂಬ ಪರಿಭಾಷೆ}

Rhythm ಎಂದರೆ ವಿಭಿನ್ನಸ್ವರೂಪದ ಧ್ವನಿಗಳ "ಗತಿ" (ಅಥವಾ ಅವುಗಳ 'ಸರಣಿ') ಎಂದೂ, 'poetic rhythm' ಎಂದರೆ "ಛಂದೋಗತಿ" ಎಂದೂ ಯಥಾಮತಿಯಾಗಿ ವಿವರಿಸುವ ಪ್ರಯತ್ನವನ್ನು ಈ ಹಿಂದಿನ ಪರಿಚ್ಛೇದದಲ್ಲಿ ಮಾಡಲಾಯಿತು. ಆದರೆ "ಗತಿ" ಎಂಬ ಪದವು ನಮ್ಮ ಛಂದೋಗ್ರಂಥಗಳಲ್ಲಿ ಒಂದು ಪಾರಿಭಾಷಿಕ ಸಂಜ್ಞೆಯಾಗಿ ಹೇಳಲ್ಪಟ್ಟಿಲ್ಲ.[28] ಆದರೂ ಒಮ್ಮೊಮ್ಮೆ ಅವುಗಳಲ್ಲಿ, ಛಂದೋಗತಿಯನ್ನನುಲಕ್ಷಿಸಿ, 'ಗತಿ' ಎಂಬ ಪದ ಪ್ರಯೋಗ ಮಾಡಿದ್ದು ಕಂಡುಬರುತ್ತದೆ. (ಉದಾ: "ವಿಚಿತ್ರಗತಿಲಯೋತ್ತರಂ", ಜಯಕೀರ್ತಿ, ೬-೩೨). ಕೆಲವು ವೃತ್ತಗಳ ಹೆಸರುಗಳಲ್ಲಿಯೂ ಆಯಾ ವೃತ್ತದ ಗತಿಸ್ವಭಾವದರ್ಶಕವಾಗಿ 'ಗತಿ' ಶಬ್ದವು ಸೇರಿರುವುದನ್ನು ಕಾಣಬಹುದು. ಉದಾ: 'ಜಲೋದ್ಧತಗತಿ' (ಪಿಂಗಳ), 'ಲಲಿತಗತಿ', 'ಹಂಸಗತಿ' (ಛಂದೋಂಬುಧಿ) ಇತ್ಯಾದಿ. ಹಿಂದೆಯೇ ನಿವೇದಿಸಿರುವಂತೆ – ಛಂದೋದ್ರವ್ಯಾವಲಂಬಿಯಾದ ಲಕ್ಷಣನಿರೂಪಣಪ್ರಕ್ರಿಯೆಗೆ, ಲಯ ಎಂಬುದು ಹೇಗೋ ಹಾಗೆ "ಗತಿ" ಎಂಬುದೂ ಅನವಶ್ಯ. ಆದರೆ 'ಗತಿ' ಎಂಬುದು ಛಂದೋಗುಣವಿಚಾರವಿಷಯದಲ್ಲಿ ಅತಿಮುಖ್ಯವಾದ ವಸ್ತು. ಛಂದಃಸೌಂದರ್ಯವೆಂದರೆ ಛಂದೋಗತಿಯ ಸೌಂದರ್ಯವೇ ಹೊರತು ಬೇರೇನೂ ಅಲ್ಲ. ಹೀಗಿರುವುದರಿಂದ ಗತಿಗೂ ಛಂದಸ್ಸಿಗೂ ಇರುವ ಸಂಬಂಧದ ನಿಜಸ್ವರೂಪವನ್ನು ತಿಳಿದುಕೊಳ್ಳದೆ 'ಛಂದೋಗತಿ' ಎಂಬುದನ್ನು ಯಥಾರ್ಥವಾಗಿ ತಿಳಿದಂತಾಗುವುದಿಲ್ಲ.

ಹಿಂದೆಯೇ ಸೂಚಿಸಿರುವಂತೆ, ಗತಿ ಎಂಬುದು ಛಂದೋನುಭವ ಕಾಲದಲ್ಲಿ, ಎಂದರೆ ಛಂದೋಬಂಧದ ಶ್ರವಣಕಾಲದಲ್ಲಿ ಬುದ್ಧಿಗೋಚರವಾಗುವ ಒಂದು ಭಾವಸರಣಿ. ಆದುದರಿಂದ ಅದು ಛಂದೋರೂಪವನ್ನವಲಂಬಿಸಿದ ಒಂದು ಗುಣ. ಈ ಕಾರಣದಿಂದ ಗತಿಯ ಯಾಥಾರ್ಥ್ಯವನ್ನು ತಿಳಿಯುವುದಕ್ಕೆ,

---

28. ವೈದಿಕಚ್ಛಂದಗಳಿಗೆ ಸಂಬಂಧಿಸಿ 'ಗತಿ' ಎಂಬ ಸಂಜ್ಞೆಯ ಪ್ರಯೋಗವು ವೈದಿಕಗ್ರಂಥಗಳಲ್ಲಿದೆಯೆಂದು ತಿಳಿದುಬರುತ್ತದೆ. ಆದರೆ ಪ್ರಸ್ತುತವಾದ "ಲೌಕಿಕ ಛಂದೋಗತಿ"ಗೂ ಅದಕ್ಕೂ ಸಾಮ್ಯವಿರುವಂತೆ ತೋರುವುದಿಲ್ಲ. ಋಕ್ಕುಗಳನ್ನು ಪಠಿಸುವಾಗ ಪಾದಾಂತದಲ್ಲಿ ಎಂದರೆ ಯತಿಸ್ಥಾನದಲ್ಲಿ ವಿರಮಿಸದಿರಬೇಕಾಗುವ ಸಂದರ್ಭಗಳನ್ನು ಆ ಪದಪ್ರಯೋಗವು ಸೂಚಿಸುವಂತೆ ಕಾಣುತ್ತದೆ. ಹೇಗೂ, ಅದರ ಕುರಿತು ನನ್ನ ತಿಳಿವು ಅತ್ಯಲ್ಪ.

'ಛಂದಸ್' ಎಂದು ನಾವು ಹೇಳುವುದು ಏನನ್ನು ಎಂಬುದನ್ನು ಮೊದಲು ಖಚಿತಪಡಿಸಿಕೊಳ್ಳುವುದು ಅವಶ್ಯವಾಗುತ್ತದೆ.

**{'ಛಂದಸ್' ಶಬ್ದದ ಪ್ರಯೋಗ ಮತ್ತು ಅರ್ಥವಿಚಾರ}**

'ಛಂದಸ್' ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ಬೇರೆ ಬೇರೆ ಅರ್ಥಗಳಿವೆ. ಪ್ರಾಚೀನ ವಿದ್ವಾಂಸರು ಅದಕ್ಕೆ ಹೇಳಿರುವ ನಿಷ್ಪತ್ತಿಯೂ ಏಕರೂಪವಾಗಿಲ್ಲ. ಆದರೆ ಛಂದಃಶಾಸ್ತ್ರದಲ್ಲಿ "ಛಂದಸ್ ಎಂಬ ಸಂಜ್ಞೆ"ಯ ಅರ್ಥವೇನೆಂಬುದು ಮಾತ್ರ ಪ್ರಸ್ತುತ ವಿಚಾರವಾಗಿರುವುದರಿಂದ, ಆ ಶಬ್ದದ ನಿಷ್ಪತ್ತಿಯಾಗಲಿ ಅದರ ನಾನಾರ್ಥಗಳಾಗಲಿ ನಮಗೆ ಇಲ್ಲಿ ಮುಖ್ಯವಲ್ಲ.[29] ಪಿಂಗಳನು "ಛಂದಃ" (೨-೧) ಎಂದು ಸೂತ್ರಿಸಿರುವನಾದರೂ ಅದಕ್ಕೆ ನಿರುಕ್ತಿಯನ್ನೇನೂ ಹೇಳಿಲ್ಲ.

---

29. **{'ಛಂದಸ್' ಶಬ್ದನಿಷ್ಪತ್ತಿ ವಿಚಾರ}** ಛಂದಸ್' ಶಬ್ದದ ನಿಷ್ಪತ್ತಿಯನ್ನು ಪುರಾತನ ವಿದ್ವಾಂಸರಲ್ಲಿ ಕೆಲವರು ಆಚ್ಛಾದನಾರ್ಥಕವಾದ 'ಛದ್' (ಛದ - ಆಚ್ಛಾದನೇ) ಎಂಬ ಧಾತುವಿನಿಂದಲೂ, ಬೇರೆ ಕೆಲವರು ಸಂವರಣಾರ್ಥಕವಾದ 'ಛಂದ್' (ಛದಿ - ಸಂವರಣೇ) ಎಂಬ ಧಾತುವಿನಿಂದಲೂ, ಮತ್ತೆ ಕೆಲವರು ಆಹ್ಲಾದನಾರ್ಥಕವಾದ "ಚಂದ್=ಛಂದ್" (ಚದಿ- ಆಹ್ಲಾದನೇ, ಚಂದೇರಾದೇಶ್ಚ ಛಃ) ಎಂಬ ಧಾತುವಿನಿಂದಲೂ ಊಹಿಸಿದ್ದಾರೆ. ಇವುಗಳೊಳಗೆ ಕೊನೆಯದನ್ನೇ ಭಾನುಜಿದೀಕ್ಷಿತನು ಸ್ವೀಕರಿಸಿದ್ದಾನೆ. ವೈದಿಕಗ್ರಂಥಕಾರರೂ ತದನುಯಾಯಿ-ಗಳೂ ಮೊದಲನೆಯವುಗಳನ್ನು ಸ್ವೀಕರಿಸಿ, ಛಂದಸ್ ಎಂಬ ಶಬ್ದದ ಅರ್ಥವು 'ಅವಚ್ಛೇದ' ಅರ್ಥಾತ್ 'ಪರಿಮಿತಿ' ಎಂದು ಪ್ರತಿಪಾದಿಸಿದ್ದಾರೆ. ಉದಾ: "ತಸ್ಮಾತ್ ಅವಚ್ಛೇದಶ್ಛಂದ ಇತಿ ಸಿದ್ಧಾಂತಃ । ಸ ಚ... ವಸ್ತುಸ್ವರೂಪಮರ್ಯಾದಾಬಂಧಃ ॥" - ಮಧುಸೂದನ ವಿದ್ಯಾವಾಚಸ್ಪತಿ. (ಪಿಂಗಲಛಂದಃಶಾಸ್ತ್ರಭೂಮಿಕಾ, ಪುಟ ೫, ನಿರ್ಣಯಸಾಗರ.) ಭಾನುಜಿ-ದೀಕ್ಷಿತನು ಅಮರಕೋಶವ್ಯಾಖ್ಯಾನದಲ್ಲಿ (೩-೩) "ಛಂದಃ ಪದ್ಯೇ ಚ ವೇದೇ ಚ ಸ್ವೈರಾಚಾರಾಭಿಲಾಷಯೋಃ" ಎಂದು 'ಛಂದಸ್' ಎಂಬ ಶಬ್ದದ ನಾನಾರ್ಥಗಳನ್ನು 'ಮೇದಿನೀಕೋಶ'ದಿಂದ ಎತ್ತಿ ಬರೆದಿದ್ದಾನೆ. ಛಂದಃಶಬ್ದದ ಇತಿಹಾಸವನ್ನು ಪರೀಕ್ಷಿಸಿದರೆ- ಆದಿಕಾಲದಲ್ಲಿ ಛಂದಸ್ ಎಂಬುದು ಗಾಯತ್ರಿ ಮೊದಲಾದ ವೈದಿಕ ಬಂಧವಿಶೇಷಗಳಿಗೆ, ಅರ್ಥಾತ್ ಪದ್ಯಕ್ಕೆ ಅಥವಾ ಗೀತಕ್ಕೆ ಇದ್ದ ಹೆಸರೆಂಬುದು ತಿಳಿಯುತ್ತದೆ. ಆದುದರಿಂದ ಅದು (ಭಾನುಜಿ ಮೊದಲಾದವರು ಹೇಳುವಂತೆ) ಆಹ್ಲಾದನಾರ್ಥಕವಾದ (ಚಂದ್=ಛಂದ್) ಧಾತುವಿನಿಂದ ನಿಷ್ಪನ್ನವಾಗಿರಬೇಕೆಂದು ಹೇಳುವುದು ಸೂಕ್ತವಾಗಿ ಕಾಣುತ್ತದೆ. ನಮ್ಮ ಪುರಾತನ ಶಾಸ್ತ್ರಕಾರರು ಶಬ್ದನಿಷ್ಪತ್ತಿಯನ್ನು ಹುಡುಕಿ ಹೇಳುವ ವಿಧಾನವು - ಪಾಶ್ಚಾತ್ಯ ವಿದ್ಯಾಪ್ರಭಾ-ವಿತರಾದ ನಾವು ಇಂದು ಹೇಳುವಂತೆ - ಐತಿಹಾಸಿಕ ದೃಷ್ಟಿಯದಲ್ಲ. ವಸ್ತುತಃ, ಭಾಷೆಗೆ ಅಥವಾ ಶಬ್ದಕ್ಕೆ ಒಂದು ಇತಿಹಾಸವಿದೆಯೆಂಬುದನ್ನು ನಮ್ಮ ಪುರಾತನರು ಲಕ್ಷಿಸಿದವರಲ್ಲ. ಶಾಸ್ತ್ರಪ್ರಯುಕ್ತವಾದ ಶಬ್ದಗಳಲ್ಲೆಲ್ಲ ಅನ್ವರ್ಥತೆಯನ್ನು ಕಾಣಿಸುವುದೇ ಅವರ ಆ ವಿಧಾನದ ಗುರಿಯಾಗಿತ್ತು. ಇಂತಹ ಪ್ರಯತ್ನದ ಪರಿಣಾಮವಾಗಿಯೇ, 'ಛದ್' ಎಂಬುದರಿಂದ 'ಛಂದಸ್' ಎಂಬುದು ನಿಷ್ಪನ್ನವಾದುದೆಂಬ ನಿರ್ವಚನವು ಹುಟ್ಟಿದ್ದಾಗಿರಲೂಬಹುದು. [ಛಂದಃಶಬ್ದದ ಮೂಲಾರ್ಥವು 'ಅವಚ್ಛೇದ' ಎಂದಾದರೆ metre ಎಂಬುದರ ಮೂಲಾರ್ಥಕ್ಕೆ (from Greek *Metron* = measure-D) ಇದು ಹೆಚ್ಚು ಕಡಮೆ ಸಮಾನವಾಗುತ್ತದೆ.]

ಹಲಾಯುಧನು ಆ ಸೂತ್ರದ ವ್ಯಾಖ್ಯಾನದಲ್ಲಿ "ಛಂದಃಶಬ್ದೇನ ಅಕ್ಷರ ಸಂಖ್ಯಾವಚ್ಛೇದಃ ಅತ್ರ ಅಭಿಧೀಯತೇ" – ಎಂದರೆ "ಇಲ್ಲಿ ಛಂದಃಶಬ್ದಕ್ಕೆ ಅಕ್ಷರ ಸಂಖ್ಯಾಪರಿಮಿತಿ ಎಂದರ್ಥ" ಎಂದು ಹೇಳಿದ್ದಾನೆ. ಹರ್ಷಟನು ಜಯದೇವನ ಛಂದೋಗ್ರಂಥದ ನಾಂದೀಶ್ಲೋಕದ ಟೀಕೆಯಲ್ಲಿ – "ಛಂದಃ ಅಕ್ಷರಾಣಾಂ ಇಯತ್ತಾವಿಶೇಷಃ" ಎಂದಿದ್ದಾನೆ. (ಇಯತ್ತಾ ಎಂದರೆ – ಇಂತು, ಇಷ್ಟು ಎಂದು ನಿಷ್ಕರ್ಷಿತವಾಗುವ ಪರಿಮಾಣ.) ಹಿಂದೆ ಸೂಚಿಸಿದ ಮಧುಸೂದನ ವಿದ್ಯಾ-ವಾಚಸ್ಪತಿಕೃತ 'ಛಂದಃಸಮೀಕ್ಷಾ' ಎಂಬ ಗ್ರಂಥದಲ್ಲಿ (ಪಿಂಗಲಛಂದಃಶಾಸ್ತ್ರ ಭೂಮಿಕಾ – ಪುಟ ೧, ನಿರ್ಣಯಸಾಗರ) "ಯತ್ ಅಕ್ಷರ ಪರಿಮಾಣಂ ತತ್ ಛಂದಃ" ಎಂದೂ, "ಮಾತ್ರಾಕ್ಷರನಿಯತಾ ವಾಕ್ ಛಂದಃ" ಎಂದೂ ಎರಡು ನಿರ್ವಚನಗಳಿವೆ. ಪುರಾತನ ಶಬ್ದಕೋಶಗಳಲ್ಲಿ 'ಛಂದಸ್' ಎಂದರೆ 'ಪದ್ಯ' ಎಂದೇ ಅರ್ಥ ಹೇಳಲಾಗಿದೆ; (ಛಂದಃ ಪದ್ಯೇ.....ಅಮರಕೋಶ, ಮೇದಿನೀ-ಕೋಶ) ಮತ್ತು ಅಕ್ಷರಸಂಖ್ಯಾವಿಶಿಷ್ಟವಾದ ಪದ್ಯವರ್ಗಗಳಿಗೂ 'ಛಂದಸ್' ಎಂಬ ಹೆಸರೇ ಇದೆ. (ಗಾಯತ್ರೀಪ್ರಮುಖಂ ಛಂದಃ – ಅಮರಕೋಶ, ೨ – ೭) ಪದ್ಯಗಳ ಲಕ್ಷಣಕ್ಕೂ, ಆತ ಏವ 'ಪದ್ಯಲಕ್ಷಣಶಾಸ್ತ್ರ'ಕ್ಕೂ 'ಛಂದಸ್' ಎಂಬ ವ್ಯವಹಾರವಿದೆ. (ಉದಾ: "ಜಯದೇವಚ್ಛಂದಃ" – ಇದು ಆ ಗ್ರಂಥದ ಹೆಸರಾಗಿದೆ. "ಮಾಂಡವ್ಯಪಿಂಗಲಜನಾಶ್ರಯಸೈತವಾಖ್ಯ । ಶ್ರೀಪಾದಪೂಜ್ಯ ಜಯದೇವಬುಧಾದಿಕಾನಾಂ । 'ಛಂದಾಂಸಿ' ವೀಕ್ಷ್ಯ ॥" ಜಯಕೀರ್ತಿ ೮-೧೯. – ಇಲ್ಲಿ ಛಂದಃಶಾಸ್ತ್ರಗ್ರಂಥಗಳನ್ನು "ಛಂದಾಂಸಿ" ಎಂದು ಹೇಳಿದ್ದಾಗಿದೆ.)

ಛಂದಸ್ ಎಂಬ ಸಂಜ್ಞೆಗೆ ಇಲ್ಲಿ ಉದಾಹರಿಸಿದ ವಿವಿಧಾರ್ಥಗಳನ್ನು ಈ ಕೆಳಗಿನಂತೆ ಕ್ರೋಡೀಕರಿಸಬಹುದು:

ಛಂದಸ್ ಎಂದರೆ–

೧. ಅಕ್ಷರಸಂಖ್ಯಾಪರಿಮಿತಿ.

(ಹಲಾಯುಧನ ಈ ಲಕ್ಷಣವ್ಯಾಖ್ಯೆ, ವೈದಿಕಛಂದೋಬಂಧಗಳಿಗೆ ಸೀಮಿತ.)

೨. ಒಂದು ನಿಷ್ಕರ್ಷೆಗೆ ಒಳಪಟ್ಟ ಅಕ್ಷರಗಳ ಎಂದರೆ ಅಕ್ಷರಪುಂಜದ ಪರಿಮಾಣ.

(ಹರ್ಷಟ)

೩. ಅಕ್ಷರಪರಿಮಾಣ.

(ಮಧುಸೂದನ ವಿದ್ಯಾವಾಚಸ್ಪತಿ)

['ಅಕ್ಷರಪರಿಮಾಣ' ಎಂಬ ಸಮಸ್ತಪದಕ್ಕೆ 'ಅಕ್ಷರಗಳ ಅರ್ಥಾತ್ ಅಕ್ಷರಪುಂಜದ ಪರಿಮಾಣ' ಎಂದೂ 'ಯಾವುದೊಂದು ಅಕ್ಷರದ ಪರಿಮಾಣ' ಎಂದೂ ಅರ್ಥವು ಇಬ್ಬಗೆಯಾಗುತ್ತದೆ. ಇವುಗಳೊಳಗೆ ಲಕ್ಷಣಕಾರನ ಆಶಯ ಯಾವುದೆಂಬುದು ಅಸ್ಪಷ್ಟ. ಒಂದು ಅಕ್ಷರದ ಪರಿಮಾಣವನ್ನೇ ಛಂದಸ್ ಎಂದು ಹೇಳಿದರೆ, "ಗುರುತ್ವಲಘುತ್ವಗಳೇ ಛಂದಸ್ಸು" ಎಂದಾಗುತ್ತದೆ. ಇದು ಛಂದಸ್ಸಿನ

ಮೂಲದ್ರವ್ಯದ ಲಕ್ಷಣವ್ಯಾಖ್ಯೆಯಾಗಬಹುದು ಹೊರತು, ವ್ಯವಹಾರ್ಯವಾದ ಛಂದಃಪದಾರ್ಥಲಕ್ಷಣವೆನಿಸಲಾರದು.]

೪. ಮಾತ್ರಾಸಂಖ್ಯೆ, ಅಕ್ಷರ ಸಂಖ್ಯೆ – ಇವುಗಳಿಂದ ನಿಯತವಾದ ಮಾತು.
(ಮಧುಸೂದನ ವಿದ್ಯಾವಾಚಸ್ಪತಿ)

೫. ಪದ್ಯ; ಮತ್ತು ಅಕ್ಷರಸಂಖ್ಯಾವಿಶಿಷ್ಟವಾದ ಪದ್ಯವರ್ಗ.
(ಅಮರಸಿಂಹಾದಿಗಳು)[30]

೬. ಪದ್ಯಲಕ್ಷಣ, ಹಾಗೂ ಪದ್ಯಲಕ್ಷಣಶಾಸ್ತ್ರ.
(ಸಾಮಾನ್ಯ ವ್ಯವಹಾರ)

**{'ಛಂದಸ್' ಶಬ್ದದ ಮೂಲಾರ್ಥ ಗೌಣಾರ್ಥಗಳು}**

ಐತಿಹಾಸಿಕ ದೃಷ್ಟಿಯಿಂದ ಹೇಳುವುದಾದರೆ – 'ಛಂದಸ್' ಎಂಬುದಕ್ಕೆ ಅಮರಸಿಂಹಾದಿಕೋಶಕಾರರು ಹೇಳಿರುವ 'ಪದ್ಯ' (= ಛಂದೋಬಂಧ) ಎಂಬುದೇ ಪರಂಪರಾಗತವಾದ ಮೂಲಾರ್ಥವೆನ್ನಬೇಕಾಗುತ್ತದೆ. ಆ ಸಂಜ್ಞೆಗೆ ರೂಢವಾಗಿರುವ 'ಪದ್ಯಲಕ್ಷಣ' ಹಾಗೂ 'ಪದ್ಯಲಕ್ಷಣಶಾಸ್ತ್ರ' (prosody) ಎಂಬ–ರ್ಥಗಳು ಮೂಲಾರ್ಥವನ್ನವಲಂಬಿಸಿ ಬಂದಿರುವ ಗೌಣಾರ್ಥ(secondary meaning)ಗಳು. ಉಳಿದವುಗಳು, ಛಂದಸ್ತತ್ತ್ವಮೀಮಾಂಸೆಯ ಫಲವಾಗಿ ಹುಟ್ಟಿರುವ ನಿರ್ವಚನಗಳು. ಆ ನಿರ್ವಚನಗಳೊಳಗೆ ೧, ೨, ೩ನೆಯವುಗಳ ತಾತ್ಪರ್ಯದಂತೆ – ಛಂದಸ್ ಎಂದರೆ "ಅಕ್ಷರಗಳ ಅರ್ಥಾತ್ ಶಬ್ದದ ಒಂದು ಅಳತೆ"; ನಾಲ್ಕನೆಯದರಂತೆ – ಛಂದಸ್ ಎಂದರೆ "ಒಂದು ಅಳತೆಗೆ ಒಳಪಟ್ಟ ಮಾತು, ಅರ್ಥಾತ್ ಆ ಶಬ್ದ." ಛಂದೋಮೀಮಾಂಸೆಯಲ್ಲಿ ಸ್ವೀಕೃತವಾಗುವ ಅರ್ಥವು ಮುಖ್ಯವಾಗಿ ಪ್ರಥಮೋಕ್ತ ನಿರ್ವಚನಗಳದಾದರೂ, ಛಂದಃಶಬ್ದಕ್ಕೆ ಪರಂಪರಾಗತವಾಗಿ ನೆಲೆಗೊಂಡ ಅರ್ಥವಾದ 'ಪದ್ಯ' ಎಂಬುದು ಆ ನಿರ್ವಚನಗಳ ವ್ಯಾಪ್ತಿಯಲ್ಲಿ ಅಡಕವಾಗುವುದಿಲ್ಲವೆಂಬುದರಿಂದ, ಅದನ್ನೂ ಒಳಕೊಳ್ಳುವಂತಹ (ಅನಂತರೋಕ್ತವಾದ) ನಾಲ್ಕನೆಯ ನಿರ್ವಚನವು ಹುಟ್ಟಿದ್ದಾಗಿದೆ. ಮತ್ತು ಪ್ರಥಮೋಕ್ತ ನಿರ್ವಚನಗಳ ಅಭಿಪ್ರಾಯದಂತೆ ಛಂದಸ್

---

30. **{'ಛಂದಸ್' – ಪಿಂಗಳಾಮರಸಿಂಹರ ಏಕಾಭಿಪ್ರಾಯ}** ಪಿಂಗಳನು "ಛಂದಃ" (೨ – ೧) ಎಂಬ ಸೂತ್ರವನ್ನು ಹೇಳಿದೊಡನೆ ಗಾಯತ್ರಿ ಮೊದಲಾದ (ವೈದಿಕ) ಛಂದೋಬಂಧಗಳ ಲಕ್ಷಣನಿರೂಪಣಕ್ಕೆ ತೊಡಗುತ್ತಾನೆ. ಇದರಿಂದ ಛಂದಃ (= ಛಂದಸ್) ಎಂದರೆ 'ಛಂದೋಬಂಧ' (= ಪದ್ಯ) ಎಂಬುದು ಅವನ ಆಶಯವೆಂದು ಸೂಚಿತವಾಗುತ್ತದೆ. ಆದುದರಿಂದ ಅಮರಕೋಶದಲ್ಲಿ ಹೇಳಲಾದ "ಗಾಯತ್ರೀ ಪ್ರಮುಖಂ ಛಂದಃ" (೨ – ೭) "ಛಂದಃ ಪದ್ಯೇ..."(೩–೩) ಎಂದರೆ "ಗಾಯತ್ರಿ ಮೊದಲಾದುವು ಛಂದಸ್ಸುಗಳು." "ಛಂದಸ್ ಎಂದರೆ ಪದ್ಯ" ಎಂಬ ಅಮರಸಿಂಹನ ಅಭಿಪ್ರಾಯವೂ ಪಿಂಗಳನ ಅಭಿಪ್ರಾಯವೂ ಒಂದೇ ಎಂದು ತಿಳಿಯಬಹುದಾಗಿದೆ.

ಎಂಬುದು ಪರಿಮಾಣಾರ್ಥಕವಾಗಿಯೂ, ಅನಂತರೋಕ್ತ ನಿರ್ವಚನದಂತೆ ಅದು ಪರಿಮೇಯಾರ್ಥಕವಾಗಿಯೂ ಇರುವುದರಿಂದ – ಹಿಂದೊಮ್ಮೆ ನಿವೇದಿಸಿರು-ವಂತೆ, ಪರಿಮಾಣಪರಿಮೇಯಗಳಿಗೆ ಅಭೇದೋಪಚಾರವುಂಟಾಗುವುದು ಸಹಜ-ವೆಂಬುದರಿಂದ – ಛಂದಸ್ ಎಂಬುದಕ್ಕೆ ಮುಖ್ಯತಃ 'ಶಬ್ದಪರಿಮಾಣವಿಶೇಷ'-ವೆಂದೂ, ಉಪಚಾರತಃ 'ವಿಶಿಷ್ಟಪರಿಮಾಣಕ್ಕೆ ಒಳಪಟ್ಟ ಶಬ್ದ'ವೆಂದೂ ದ್ವಿವಿಧ-ವಾದ ಅರ್ಥವನ್ನು ಛಂದಃಶಾಸ್ತ್ರವ್ಯಾಖ್ಯಾತೃಗಳು ಸ್ವೀಕರಿಸಿದ್ದಾರೆ.

{'ಛಂದಸ್' ಎಂಬುದರ ಪರಮಾರ್ಥವು ಗುರುಲಘುವಿನ್ಯಾಸರೂಪ}

ಛಂದಸ್ ಎಂಬುದಕ್ಕೆ ಯಾವುದೊಂದು ನಿರ್ವಚನವನ್ನು ಭರತನು ಹೇಳಿಲ್ಲವಾದರೂ ಛಂದಸ್ಸೆಂದರೇನೆಂಬ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಪ್ರಕಾರಾಂತರದಿಂದ ತಿಳಿಸಿದ್ದಾನೆ. ಛಂದಃಪದಾರ್ಥಜಿಜ್ಞಾಸಾವಿಷಯದಲ್ಲಿ ಬಹು-ಮೂಲ್ಯವಾದ ಆ ಮಾತು ಹೀಗಿದೆ: (ನಾಟ್ಯಶಾಸ್ತ್ರ; ೧೪-೪೦, ನಿರ್ಣಯಸಾಗರ)

"ಛಂದೋಹೀನಃ ನ ಶಬ್ದೋಸ್ತಿ, ನಚ್ಛಂದಃ ಶಬ್ದವರ್ಜಿತಂ"[31] ಎಂದರೆ- "ಛಂದೋರಹಿತ ಶಬ್ದವಿಲ್ಲ; ಶಬ್ದರಹಿತವಾದ ಛಂದಸ್ಸಿಲ್ಲ." ಸಾರವತ್ತಾದ ಈ ವಾಕ್ಯದ ಮೂಲಕ ಭರತನು, ಶಬ್ದವೂ ಛಂದಸ್ಸೂ ಪರಸ್ಪರ ಅವಿನಾಭಾವಿ-ಗಳೆಂದು ತಿಳಿಸುವುದರೊಡನೆ, ಛಂದಃಸ್ವರೂಪವನ್ನು ನಿರ್ಣಾಯಕವಾಗಿ ವ್ಯಕ್ತೀ-ಕರಿಸುತ್ತಾನೆ. ಅದು ಹೇಗೆಂದರೆ:

ಛಂದಸ್ ಎಂಬುದು "ಶಬ್ದದ, ಎಂದರೆ ಅಕ್ಷರಪುಂಜದ ಪರಿಮಾಣ-ವಿಶೇಷ"ವೆಂದು ಪ್ರೋಕ್ತವಾಗಿದೆಯಷ್ಟೆ. ನಮ್ಮ ಛಂದಃಶಾಸ್ತ್ರಾನುಸಾರವಾಗಿ, ಅಕ್ಷರ-

---

31. {ನಾಟ್ಯಶಾಸ್ತ್ರದ ಶ್ಲೋಕದ ಪಾಠವಿಚಾರ} ಮುದ್ರಿತ ಪುಸ್ತಕದಲ್ಲಿ ಈ ಶ್ಲೋಕಭಾಗದ ಪಾಠವು-"ಛಂದೋಹೀನಃ ನ ಶಬ್ದೋಸ್ತಿ ನಚ್ಛಂದಃ ಶಬ್ದವರ್ಜಿತಃ" ಎಂದಿದೆ. ಆದರೆ 'ಶಬ್ದವರ್ಜಿತಃ' ಎಂಬೀ ಪಾಠದ ಶುದ್ಧಿ ಚಿಂತ್ಯವಾಗಿ ಕಾಣುತ್ತದೆ. ಇಲ್ಲಿ ಪ್ರಸ್ತುತವಾಗಿರುವ 'ಛಂದಸ್' ಎಂಬ ಶಬ್ದವು ಸಕಾರಾಂತ ನಪುಂಸಕ ಪ್ರಕೃತಿ. ಆದುದರಿಂದ ಅದರ ವಿಶೇಷಣವೂ ಅದೇ ಲಿಂಗದಲ್ಲಿ – ಎಂದರೆ "ಶಬ್ದವರ್ಜಿತಂ" ಎಂದಿರಬೇಕಾಗುತ್ತದೆ. ಅಕಾರಾಂತ ಪುಲ್ಲಿಂಗವಾಗಿರುವ 'ಛಂದ' ಎಂಬ ಶಬ್ದಕ್ಕೆ ಕೋಶಗಳಲ್ಲಿ ಛಂದಸ್ಸೆಂಬ ಅರ್ಥವಿಲ್ಲ. ಅಮರಕೋಶದಲ್ಲಿ ಅಕಾರಾಂತವಾದ ಆ ಪುಲ್ಲಿಂಗ ಶಬ್ದಕ್ಕೆ "ಅಭಿಪ್ರಾಯಶ್ಛಂದ ಆಶಯಃ" (೩-೨) ಎಂಬ ಪರ್ಯಾಯಗಳಿವೆ. ಸಕಾರಾಂತ ನಪುಂಸಕವಾದ ಛಂದಃಶಬ್ದಕ್ಕೆ ಅದೇ ಕೋಶದಲ್ಲಿ "ಛಂದಃ ಪದ್ಯೇಭಿಲಾಷೇ ಚ" (೩-೩) ಎಂದೂ, ಅದೇ ಸಂದರ್ಭದಲ್ಲಿ ಭಾನುಜಿದೀಕ್ಷಿತನು ಉದಾಹರಿಸಿದಂತೆ, ಮೇದಿನೀಕೋಶದಲ್ಲಿ "ಛಂದಃ ಪದ್ಯೇ ಚ ವೇದೇ ಚ ಸ್ವೈರಾಚಾರಾಭಿಲಾಷಯೋಃ" ಎಂದೂ ನಾನಾರ್ಥಗಳಿವೆ. ಈ ಎರಡು ಶಬ್ದಗಳು ಅಜ್ಞಾತಕಾಲದಲ್ಲಿ ಒಂದೇ ಶಬ್ದವಾಗಿದ್ದಿರಬಹುದಾದರೂ, ಸಂಸ್ಕೃತವಾಙ್ಮಯದಲ್ಲಿ ಇವಕ್ಕೆ ಭಿನ್ನಾರ್ಥಗಳೂ ಭಿನ್ನಲಿಂಗಗಳೂ ಸ್ಪಷ್ಟವಾಗಿ ಗೋಚರಿಸುವುದರಿಂದ, ಮೇಲೆ ಹೇಳಿದ ಪಾಠವನ್ನು ಇಲ್ಲಿ "ಶಬ್ದವರ್ಜಿತಂ" ಎಂದು ತಿದ್ದಿಕೊಳ್ಳಲಾಗಿದೆ.

ಪುಂಜದ ಪರಿಮಾಣವನ್ನು ನಿರ್ಣಯಿಸುವ ವಿಧಾನಗಳು ಎರಡು: ಶಬ್ದದಲ್ಲಿರುವ ಅಕ್ಷರಗಳ ಸಂಖ್ಯೆಯ ಗಣನೆಯಿಂದ ಒಂದು; ಆ ಅಕ್ಷರಗಳ ಮಾತ್ರಾಸಂಖ್ಯೆಯ ಗಣನೆಯಿಂದ ಇನ್ನೊಂದು. ಆದರೆ ಯಾವುದಾದರೂ ಎರಡು ಅಕ್ಷರಪುಂಜಗಳು ಅಕ್ಷರಸಂಖ್ಯೆಯಲ್ಲಿಯೂ ಮಾತ್ರಾಸಂಖ್ಯೆಯಲ್ಲಿಯೂ ಸಮಾನವಾಗಿರುವ ಮಾತ್ರ-ದಿಂದ ಅವೆರಡರ 'ಛಂದಸ್' ಸರ್ವಾತ್ಮನಾ ಒಂದೇ ಎಂದಾಗುವುದಿಲ್ಲ. ಉದಾ:- ಗಣೇಶ, ಮಾಧವ – ಈ ಎರಡು ಪುಂಜಗಳು ಅಕ್ಷರಸಂಖ್ಯೆಯಲ್ಲಿಯೂ ಮಾತ್ರಾಸಂಖ್ಯೆಯಲ್ಲಿಯೂ ಸಮಾನವಾಗಿವೆಯಾದರೂ ಇವೆರಡು ಪುಂಜಗಳ 'ಛಂದಸ್' ಅಭಿನ್ನವೆಂದು ಪ್ರತೀತವಾಗುವುದಿಲ್ಲ. ಹಾಗಾದರೆ 'ಛಂದಸ್' ಎಂಬುದು ಶಬ್ದಪರಿಮಾಣವನ್ನು ಮಾತ್ರ ಅವಲಂಬಿಸಿರುವುದಿಲ್ಲವೆಂಬುದು ಸ್ಪಷ್ಟ. ಆದರೆ ಗಣೇಶ ಮತ್ತು ಕುಚೇಲ ಎಂಬ ಪುಂಜಗಳ 'ಛಂದಸ್' ಒಂದೇ ಎಂದು ಪ್ರತೀತವಾಗುತ್ತದೆ. ಹಾಗಾದರೆ ಅಕ್ಷರಸಂಖ್ಯೆಯಲ್ಲಿಯೂ ಮಾತ್ರಾಸಂಖ್ಯೆಯ-ಲ್ಲಿಯೂ ಸಮಾನವೇ ಆಗಿರುವ ಆ ಮೂರು ಪುಂಜಗಳೊಳಗೆ ಗಣೇಶ ಹಾಗೂ ಮಾಧವ ಎಂಬವುಗಳ ವೈಧರ್ಮ್ಯಕ್ಕೂ, ಗಣೇಶ ಹಾಗೂ ಕುಚೇಲ ಎಂಬವುಗಳ ಸಾಧರ್ಮ್ಯಕ್ಕೂ ಕಾರಣಭೂತವಾದುದು ಯಾವುದೋ ಅದುವೇ ಛಂದಸ್ಸಿನ ನೈಜತೆ ಎಂದಾಯಿತು. ಆ ಕಾರಣವಾವುವೆಂದರೆ – ಆ ಅಕ್ಷರಪುಂಜಗಳ ಗುರುಲಘುವಿನ್ಯಾಸಸ್ವರೂಪ; ಇದು ಸುವ್ಯಕ್ತ.

ಪ್ರತಿಯೊಂದು ಅಕ್ಷರವೂ ಗುರುವೋ ಲಘುವೋ ಆಗಿರುವುದರಿಂದ, ಅಕ್ಷರಪುಂಜಗಳೆಲ್ಲವೂ ಗುರುಲಘುಪುಂಜಗಳಾಗಿರುತ್ತವೆ. ಮಾತು, ಪದ ಅಥವಾ ಶಬ್ದ – ಎಂಬುದು ಅಕ್ಷರಪುಂಜವೇ ಆಗಿರುವ ಕಾರಣ, ಅದು ಗುರುಲಘು-ಪುಂಜವೂ ಆಗಿರುತ್ತದೆ. ಇದರಿಂದಾಗಿ ಪ್ರತಿಯೊಂದು ಶಬ್ದಕ್ಕೆ ತನ್ನದೇ ಆದ ಒಂದು 'ಗುರುಲಘುವಿನ್ಯಾಸ'ವುಂಟಾಗುತ್ತದೆ.

ಉದಾ: ರಸ, ರಾಮ, ಶಂಕರ, ಗಂಗಾ, ಸಲಿಲ, ಚತುರಾಸ್ಯ, ಗಣೇಶ,
ಸರಸ್ವತಿ, ರಾಮಾಯಣ, ಮಹಾಭಾರತ

–ಇತ್ಯಾದಿ. ಹೀಗೆ ತನ್ನದೊಂದು ಗುರುಲಘುವಿನ್ಯಾಸವಿಲ್ಲದಿರುವ ಶಬ್ದವೇ ಇಲ್ಲ. 'ಗುರುಲಘುವಿನ್ಯಾಸ'ವೊಂದು ಬುದ್ಧಿಗೋಚರವಾಗಬೇಕಾದರೆ, ಒಂದು ಶಬ್ದ- ಅದೊಂದು ಸಾರ್ಥಕಶಬ್ದವಾಗಿರಬಹುದು, ನಿರರ್ಥಕಶಬ್ದವೂ ಆಗಿರಬಹುದು, ಅಥವಾ ಕೇವಲ ಧ್ವನಿಖಂಡಗಳ ಪುಂಜವೂ ಆಗಿರಬಹುದು – ಬೇಕೇ ಬೇಕಾಗುತ್ತದೆ. ಇದರಿಂದ ಶಬ್ದವೂ ವಿಶಿಷ್ಟವಾದೊಂದು ಗುರುಲಘುವಿನ್ಯಾಸವೂ ಪರಸ್ಪರ ಅವಿನಾಭಾವಿಗಳೆಂಬುದು ಸ್ಪಷ್ಟವಾಗುತ್ತದೆ. ಗುರುಲಘುಗಳ ಈ ವಿನ್ಯಾಸಭೇದಗಳಿಂದಾಗಿಯೇ ಪದ್ಯವೆಂಬುದು – ಆತ ಏವ ಗದ್ಯವೂ – ನಾನಾ

ಪ್ರಕಾರಗಳನ್ನು, ಎಂದರೆ ಛಂದೋವೈವಿಧ್ಯವನ್ನು, ಪಡೆಯುವುದಾಗಿದೆ. ಈ ಕಾರಣದಿಂದ ಛಂದಸ್ ಎಂಬುದರ ಪರಮಾರ್ಥವು ಗುರುಲಘುವಿನ್ಯಾಸ-ರೂಪವೆಂದು ಸಿದ್ಧವಾಗುತ್ತದೆ. ಹಾಗಾದರೆ, "ಛಂದೋರಹಿತವಾದ ಶಬ್ದವಿಲ್ಲ, ಶಬ್ದರಹಿತವಾದ ಛಂದಸ್ಸಿಲ್ಲ" ಎಂಬ ವಾಕ್ಯದ ಮೂಲಕ ಭರತನು - ಗುರುಲಘುವಿನ್ಯಾಸಪ್ರಕಾರವೊಂದಿಲ್ಲದ ಶಬ್ದವಿಲ್ಲ, ಶಬ್ದವೊಂದಿಲ್ಲದೆ ಗುರುಲಘು-ವಿನ್ಯಾಸವೂ ಇಲ್ಲ, ಎಂದು ಹೇಳಿದುದೆಂದಾಯಿತು.

{ಛಂದಸ್ಸು - ಭರತ ಜಯಕೀರ್ತಿಗಳ ಏಕಾಭಿಪ್ರಾಯ}

ಛಂದಸ್ಸೆಂದರೇನು ಎಂಬ ವಿಷಯದಲ್ಲಿ ಭರತನ ಅಭಿಪ್ರಾಯವೂ ಜಯಕೀರ್ತಿಯ ಅಭಿಪ್ರಾಯವೂ ಒಂದೇ ಆಗಿದೆ. ಅವನು ತನ್ನ ಛಂದೋನು-ಶಾಸನದ ಪ್ರಥಮಾಧಿಕಾರದ ಎರಡನೆಯ ಶ್ಲೋಕದಲ್ಲಿ-

"ಛಂದೋಭಾಗ್ವಾಙ್ಮಯಂ ಸರ್ವಂ, ನ ಕಿಂಚಿತ್ ಛಂದಸಾ ವಿನಾ"-ಎಂದರೆ, "ಸಮಸ್ತ ವಾಙ್ಮಯವೂ ಛಂದೋಭಾಗಿ (= ಛಂದಸ್ಸನ್ನುಳ್ಳದ್ದು); ಛಂದೋರಹಿತವಾದ ವಾಙ್ಮಯವಾವುದೂ ಇಲ್ಲ" ಎನ್ನುತ್ತಾನೆ. ಜಯಕೀರ್ತಿಯ ಈ ಮಾತು, ಭರತನ "ಛಂದೋಹೀನಃ ನ ಶಬ್ದೋಽಸ್ತಿ, ನಚ್ಛಂದಃ ಶಬ್ದವರ್ಜಿತಂ" ಎಂಬ ಸೂತ್ರಾತ್ಮಕವಾದ ವಾಕ್ಯದ ವಿವೃತಿ ಎಂಬಂತಿದೆ. ಇಷ್ಟು ಮಾತ್ರವಲ್ಲ, 'ರಘಟಾ' ಎಂಬ ಹೆಸರಿನ ನಿಷ್ಪತ್ತಿಯನ್ನು ಹೇಳುವ ಸಂದರ್ಭದಲ್ಲಿ ಅವನು 'ಗುರುಲಘುಗಳ ವಿನ್ಯಾಸ'ವನ್ನು ಛಂದಸ್ ಎಂದೇ ಸ್ಪಷ್ಟವಾಗಿ ಹೇಳಿದ್ದಾನೆ. ಆ ಮಾತು ಹೀಗಿದೆ:

"ಸ್ವಚ್ಛಂದಃಸಂಜ್ಞಾ ರಘಟಾ" (೧-೨೪)

[ಸ್ವಚ್ಛಂದಃಸಂಜ್ಞಾ = ಸ್ವಸ್ಯಾಃ ಛಂದಸಃ ಸಂಜ್ಞಾ ಏವ ಯಸ್ಯಾಃ ಸಂಜ್ಞಾ ಸಾ (ಬಹುವ್ರೀಹಿ) = ತನ್ನ ಛಂದಸ್ಸಿನ ಹೆಸರೇ ಯಾವುದರ ಹೆಸರಾಗಿದೆಯೋ ಅದು.]

ಎಂದರೆ - "ರಘಟಾ (= ರಗಳೆ) ಎಂಬುದು 'ತನ್ನ ಛಂದಸ್ಸಿನ' ಹೆಸರನ್ನುಳ್ಳದ್ದು."

(ರಘಟಾ = ರ + ಘಟಾ = ರಗಣಗಳಸಮೂಹ. ಇದು ಆ ಹೆಸರಿನ ನಿಷ್ಪತ್ತಿ). ಅವನು ಇಲ್ಲಿ 'ರಘಟಾಬಂಧದ ಛಂದಸ್' ಎಂದು ಹೇಳಿದ್ದು 'ರಗಣಸಮೂಹ'ವನ್ನು. 'ರಗಣ'ವೆಂದರೆ '– ᴗ –' ಈ ಪ್ರಕಾರದ ಗುರುಲಘು ವಿನ್ಯಾಸ. ಆದುದರಿಂದ "ಸ್ವಚ್ಛಂದಃಸಂಜ್ಞಾ ರಘಟಾ" ಎಂಬ ಮಾತಿನ ಮೂಲಕ, ಛಂದಸ್ ಎಂದರೆ "ಗುರುಲಘುವಿನ್ಯಾಸಪ್ರಕಾರ"ವೆಂದು ವಾಚ್ಯವಾಗಿಯೇ ಜಯ-ಕೀರ್ತಿ ಹೇಳಿದ ಹಾಗಾಯಿತು.[32]

---

32. {ರಗಳೆ (ರಘಟಾ) ಬಂಧದ ವಿಚಾರ} ನಮಗೀಗ ಲಭ್ಯವಾಗಿರುವ ಛಂದಃಶಾಸ್ತ್ರಗಳೊಳಗೆ ಪಿಂಗಳನದೇ ಅತಿಪುರಾತನವೂ ಅತ್ಯಂತ ಪ್ರಸಿದ್ಧವೂ ಆದುದು. ಪಿಂಗಳನ ಗ್ರಂಥದಿಂದಲೇ

ತಿಳಿದುಬರುವಂತೆ ಮಾಂಡವ್ಯ, ಸೈತವ ಮೊದಲಾದ ಛಂದಃಶಾಸ್ತ್ರಕಾರರು ಅವನಿಗಿಂತ ಹಿಂದಿನವರು. ಪಾಣಿನಿಯ ವ್ಯಾಕರಣವು ಉದಯಿಸಿದಮೇಲೆ ತತ್ಪೂರ್ವದ ವ್ಯಾಕರಣ ಗ್ರಂಥಗಳೆಲ್ಲ ಅಸ್ತಂಗತವಾದಂತೆ, ಪಿಂಗಳನ ಗ್ರಂಥವು ತತ್ಪೂರ್ವದ ಛಂದೋಗ್ರಂಥಗಳನ್ನೆಲ್ಲ ಅದೃಶ್ಯವಾಗಿಸಿತು. ಆದರೆ, ಪ್ರಾಯಶಃ ಹತ್ತನೆಯ ಶತಮಾನದವನಾಗಿದ್ದಿರಬಹುದಾದ ಜಯಕೀರ್ತಿ ತಾನು ಮಾಂಡವ್ಯ ಸೈತವರ ಗ್ರಂಥಗಳನ್ನು ಓದಿರುವುದಾಗಿ (೮-೧೯) ಹೇಳುವುದರಿಂದ, ಆಗ ಅವು ಲಭ್ಯವಾಗಿದ್ದವೆಂದು ಗೊತ್ತಾಗುತ್ತದೆ. ಜಯಕೀರ್ತಿ – ಬೇರೆ ಕೆಲವರಂತೆ, ಕೇವಲ ಪಿಂಗಳಸೂತ್ರಗಳನ್ನೇ ಆಧರಿಸಿ ಗ್ರಂಥರಚನೆ ಮಾಡದೆ – ತನಗೆ ಲಬ್ಧವಾದ ಪೂರ್ವಗ್ರಂಥಗಳನ್ನೆಲ್ಲ ಪರಾಮರ್ಶಿಸಿ, ನಾನಾಕವಿಪ್ರಯೋಗಗಳನ್ನೂ ಪರೀಕ್ಷಿಸಿ (೮-೧೯). ಸ್ವತಂತ್ರವಾಗಿಯೂ ವಿಚಾರಮಾಡಿ ಅಮೂಲ್ಯವಾದೊಂದು ಗ್ರಂಥರಚನೆಮಾಡಿದ ಮಹನೀಯನು. ಭರತನ ನಾಟ್ಯಶಾಸ್ತ್ರವನ್ನೂ ಅವನು ಓದಿರುವ ಹಾಗೆ ತೋರುತ್ತದೆ (೧-೧೩ ; ೧-೨). ರಘಟಾ (= ರಗಳೆ) ಎಂಬ ಛಂದೋನಾಮದ ನಿಷ್ಪತ್ತಿಯನ್ನು ಅವನು ಹೇಳುವ ಸಂದರ್ಭದಲ್ಲಿ ಆ ಛಂದೋಬಂಧದ ಇತಿಹಾಸವು ಅಡಕವಾಗಿದ್ದು, ಅದು ಉದ್ಬೋಧಕವೂ ಆಗಿದೆ:

> ದಂಡಕಾಃ ಚಂಡವೃಷ್ಟ್ಯಾದ್ಯಾಃ ಪಾದಾಂಶನಿಯಮೋದಿತಾಃ ।
> ಅಪಾದನಿಯಮಾಶ್ಚೋಕ್ತಾ ಗಣಧಾ ಗದ್ಯದಂಡಕಾಃ ॥
> ಸ್ವಚ್ಛಂದಃಸಂಜ್ಞಾ ರಘಟಾ, ಮಾತ್ರಾಕ್ಷರಸಮೋದಿತಾಃ ।
> ಪಾದದ್ವಂದ್ವಸಮಾಕೀರ್ಣಾ ಸುಶ್ರವ್ಯಾ ಸೈವ ಪದ್ಧತಿಃ ॥

(ಪ್ರಥಮಾಧಿಕಾರ, ಶ್ಲೋಕ ೨೩ – ೨೪)

('ಸ್ವಚ್ಛಂದಃಸಂಜ್ಞಾ ರಘಟಾ' ಎಂಬ ವಾಕ್ಯದ ಅನಂತರ 'ತಾಃ' ಎಂಬುದು ಅಧ್ಯಾಹಾರ್ಯ.) ಈ ಶ್ಲೋಕಗಳ ತಾತ್ಪರ್ಯ ಹೀಗೆ: "ಚಂಡವೃಷ್ಟಿ ಮೊದಲಾದ ದಂಡಕಗಳು ಪಾದನಿಯಮ ಹಾಗೂ ಗಣನಿಯಮ(ಅಂಶ=ಗಣ)ವುಳ್ಳವುಗಳು; ಪಾದನಿಯಮವಿಲ್ಲದೆ ಕೇವಲ ಗಣನಿಯ-ಮವಿರುವವು ಗದ್ಯದಂಡಕಗಳು. 'ರಘಟಾ' ಎಂಬ ಹೆಸರಿನ ಶಬ್ದಾರ್ಥ 'ರಗಣಸಮೂಹ' ಎಂದಾಗಿದೆ. ರಘಟೆಗಳು (ರಗಣಮಯವಾದ) ಅಕ್ಷರಬಂಧಗಳಾಗಿ ಮಾತ್ರವಲ್ಲ, (ರಗಣ-ತುಲ್ಯವಾದ ಮಾತ್ರಾಸಂಖ್ಯೆಯ) ಮಾತ್ರಾಗಣಬಂಧಗಳಾಗಿಯೂ ಹುಟ್ಟಿರುತ್ತವೆ (=ಉದಿತಾಃ), 'ರಘಟೆ'ಯು ಎರಡೆರಡು ಪಾದಗಳ ಎಂದರೆ ದ್ವಿಪಾದರೂಪ ಪದ್ಯಗಳ ಗುಂಫವಾಗಿರುವು-ದಾದರೆ, ಅದು 'ಪದ್ಧತಿ' ಎಂಬ ಹೆಸರಿನ ಸುಶ್ರಾವ್ಯವಾದ ಬಂಧವಾಗುತ್ತದೆ" – ಜಯಕೀರ್ತಿಯ ಈ ಹೇಳಿಕೆಯಿಂದ – 'ರಘಟಾ' ಬಂಧವು (=ರಗಳೆ) ಮೂಲತಃ (ರಗಣ ಮಯವಾದ) ಅಕ್ಷರಬಂಧವಾಗಿದ್ದು, ಮತ್ತೆ (ರಗಣತುಲ್ಯವಾದ ಮಾತ್ರಾಸಂಖ್ಯೆಯ ಎಂದರೆ ಐದು ಮಾತ್ರೆಯ ಗಣಗಳ) ಮಾತ್ರಾಬಂಧವಾಗಿ ಪರಿಣಮಿಸಿತೆಂದೂ, ಮಾತ್ರಾಬಂಧಗಳಾಗಿ-ರುವ ಬೇರೆಬೇರೆ ಜಾತಿಯ 'ರಗಳೆ'ಗಳೊಳಗೆ ಪಂಚಮಾತ್ರಾಗಣಬದ್ಧವಾದ ರಗಳೆಯೇ ಮೊತ್ತಮೊದಲನೆಯದಾಗಿತ್ತೆಂದೂ, "ಗದ್ಯದಂಡಕ"ವೇ ರಘಟಾಬಂಧದ ತಾಯಿ ಎಂದೂ, "ಪದ್ಧತಿ" ಎಂಬುದು ಪಂಚಮಾತ್ರಗಣಬದ್ಧವಾದ (ಅಥವಾ ರಗಣಮಯವಾದ) ರಗಳೆಯ ಪಾದದ್ವಂದ್ವಗಳ ಗುಂಫವೆಂದೂ ಗೊತ್ತಾಗುತ್ತದೆ. ಸಮಾನಪರಿಮಾಣದ ಪಾದಗಳ ಗುಂಫ-ದೊಳಗೆ ಪಾದದ್ವಂದ್ವಗಳು ಗೋಚರಿಸಬೇಕಾಗಿದ್ದರೆ, ಬೇರೇನಾದರೊಂದು ನಿಯಮ ಅಲ್ಲಿ ಅವಶ್ಯವಾಗುತ್ತದೆ. ಇದಕ್ಕಾಗಿಯೇ ಅವನು 'ಪದ್ಧತಿ'ಯ ಲಕ್ಷಣವನ್ನು ಸೂಚಿಸಿದೊಡನೆ, ಮುಂದಿನ ಪದ್ಯದಲ್ಲಿ (೧-೨೫) "ಪಾದದ್ವಿತೀಯವರ್ಣಃ ಪಾದಂ ಪಾದಂ ಯ ಏತಿ ಸೋನುಪ್ರಾಸಃ" ಎಂದು (ಕನ್ನಡದಲ್ಲಿ ಕಡ್ಡಾಯವಾಗಿದ್ದ) "ಪ್ರಾಸ"ದ ಲಕ್ಷಣವನ್ನು

ನಿರೂಪಿಸಿದ್ದಾಗಿದೆ. [ಮುದ್ರಿತ ಪುಸ್ತಕದಲ್ಲಿರುವಂತೆಯೇ ಇಲ್ಲಿ ಉದಾಹರಿಸಿರುವ ಕಂದ ಪದ್ಯಾರ್ಧದ "ಸೋನುಪ್ರಾಸಃ" ಎಂಬ ಭಾಗವು ಅಪಪಾಠವಾಗಿ ತೋರುತ್ತದೆ. ಏಕೆಂದರೆ, ಇಲ್ಲಿ ಲಕ್ಷಿತವಾದ 'ಪಾದದ್ವಿತೀಯವರ್ಣಪ್ರಾಸ'ಕ್ಕೆ ನಮ್ಮ ಲಾಕ್ಷಣಿಕರು 'ಅನುಪ್ರಾಸ'ವೆಂಬ ಹೆಸರು ಕೊಟ್ಟಿಲ್ಲ. ಈ ಪ್ರಾಸವನ್ನು ಕೇವಲವಾಗಿ 'ಪ್ರಾಸ' ಎಂದಿಷ್ಟೇ ಹೇಳುವುದು ಅನಾದಿಸಂಪ್ರದಾಯ. (ಉದಾ: ಕವಿರಾಜಮಾರ್ಗ, I ೩೦, ೪೫) ಮೂಲಗ್ರಂಥದಲ್ಲಿ ಪ್ರಾಯಶಃ ಇದು "ಸೋ ಹಿ ಪ್ರಾಸಃ" ಎಂದಿದ್ದಿರಬೇಕು; ಸಂಪ್ರದಾಯದ ಅರಿವಿಲ್ಲದಿದ್ದ ಲಿಪಿಕಾರರಾರೋ ಇದನ್ನು "ಸೋನುಪ್ರಾಸಃ" ಎಂದು ರೂಪಾಂತರಿಸಿರಬೇಕು.] ಆದರೆ ಅವನು 'ಪದ್ಧತಿ'ಯ (ಹಾಗೂ ರಗಳೆಯ) ಪಾದಪರಿಮಾಣವನ್ನು ಹೇಳಿಲ್ಲವಾದುದರಿಂದ, ಅದು ಆದಿಯಲ್ಲಿ "ಇಷ್ಟೇ ಇತ್ತು" ಎಂದು ನಾವೀಗ ನಿರ್ಧರಿಸುವುದಕ್ಕಾಗುವುದಿಲ್ಲ. ಆದರೂ, ಪ್ರಾಯಃ ಅದು – ಸೋಮೇಶ್ವರನು 'ಮಾನಸೋಲ್ಲಾಸ'ದ ೧೬ನೆಯ ಅಧ್ಯಾಯದಲ್ಲಿ ಉದಾಹೃತವಾದ 'ಪದ್ಧಡೀ' (ಅಥವಾ ಪದ್ಧಲೀ) ಎಂಬುದರಂತೆ ಇದ್ದಿರಬೇಕೆಂದು ಅನುಮಾನಿಸಬಹುದಾಗಿದೆ. ಸೋಮೇಶ್ವರನು ಹೇಳುವ ಪದ್ಧಡಿ ಇದು:

ಜನಿತಕಮಲಾನಂದ ।  
ಪ್ರಣತಸುರ ಗೋವಿಂದ ॥  
ದನುಜಕುಲಸಂಹಾರ ।  
ಅಘಕಮಲನೀಹಾರ ॥  
ಭಕ್ತಜನಭಯಹರಣ ।  
ಸುರಸಂಘನತಚರಣ ॥  
ಪುಣ್ಯಸಂಚಯಸದನ ।  
ಸರಸಿರುಹನಿಭವದನ ॥ (ಇತ್ಯಾದಿ)

ಈ ಉದಾಹರಣದಲ್ಲಿ ಜಯಕೀರ್ತಿ ಹೇಳಿರುವ "ಪಾದದ್ವಿತೀಯವರ್ಣಪ್ರಾಸ"ವಿಲ್ಲದಿದ್ದರೂ 'ಪಾದಾಂತ್ಯಪ್ರಾಸ'ವಿರುವ ಕಾರಣ, ಪಾದದ್ವಂದ್ವಗಳು ಸ್ಫುರಿಸುತ್ತವೆ. 'ಲಲಿತರಗಳೆ' ಎಂಬ ಹೆಸರಲ್ಲಿ ಪ್ರಸಿದ್ಧವಾಗಿರುವ ಕೆಲವು ರಚನೆಗಳಲ್ಲಿ ಜಯಕೀರ್ತಿ ಹೇಳಿದ 'ಪದ್ಧತಿಬಂಧ'ದ ಲಕ್ಷಣಗಳೆಲ್ಲವನ್ನೂ (ಪಾದಾಂತ್ಯಪ್ರಾಸವೂ ಸಹಿತವಾಗಿ) ಕಾಣಬಹುದಾಗಿದೆ. ಉದಾಃ

ಅಲ್ಲಿ ಮಾಮರದಲ್ಲಿ ।  
ಮಲ್ಲಿಕಾಲತೆಯಲ್ಲಿ ॥  
ಎಳ ಅಸುಗೆ ಮರದಲ್ಲಿ ।  
ಜಳರುಹಾಕರದಲ್ಲಿ ॥ (ಇತ್ಯಾದಿ)

('ರಘಟಾ' ಎಂಬ ಶಬ್ದದ ಅರ್ಥವು 'ರಗಣಸಮೂಹ' ಎಂಬ ಅಭಿಪ್ರಾಯವನ್ನು, ನನ್ನ ವಿದ್ವದ್ಬಂಧುಗಳಾದ ಶ್ರೀ ಕುಕ್ಕಿಲ ಕೃಷ್ಣ ಭಟ್ಟರು ಈ ಮೊದಲೇ ಹೊರಗೆಡಹಿದ್ದಾರೆ – ಅವರಿಂದ ಸಂಪಾದಿತವಾಗಿ, ಡಿ. ವಿ. ಕೆ. ಮೂರ್ತಿಯವರಿಂದ ಪ್ರಕಟಿಸಲ್ಪಟ್ಟಿರುವ 'ಛಂದೋಂಬುಧಿ' – ಪುಟ–೬೦.) {**ಮಾತ್ರಾಷಟ್ಪದಿಗಳ ಉಗಮದ ಬಗೆಗೆ ಊಹೆ**} ಆನುಷಂಗಿಕವಾಗಿ – ಇಲ್ಲಿ ಇನ್ನೊಂದು ಮಾತನ್ನು ಹೇಳಬಹುದಾಗಿದೆ. ಅದೇನೆಂದರೆ: ಜಯಕೀರ್ತಿ ಸೂಕ್ಷ್ಮವಾಗಿ ಹೇಳಿರುವ ರಘಟಾಬಂಧದ ಇತಿಹಾಸದಿಂದ, ನಡುಗನ್ನಡದ ಷಡ್ವಿಧ ಷಟ್ಪದೀಬಂಧಗಳ ಹುಟ್ಟಿನ ಮೇಲೆಯೂ ಬೆಳಕು ಬೀಳುವಂತಿದೆ. ಷಟ್ಪದೀಕಾವ್ಯಗಳೊಳಗೆ ನಮಗೆ ಗೊತ್ತಾಗಿರುವ ಮಟ್ಟಿಗೆ ಮೊತ್ತಮೊದಲಿನದೆಂದರೆ – ನಡುಗನ್ನಡದ ಪ್ರಥಮ ಕಾವ್ಯಾವತಾರವೆನ್ನಬಹುದಾದ

{ಛಂದಸ್ ಎಂಬುದು ಸಮಸ್ತವಾಙ್ಮಯಕ್ಕೆ ಅನ್ವಯಿಸುವ ತಥ್ಯ}

ಈ ವರೆಗೆ ನಾವು ಮಾಡಿದ ಛಂದಃಪದಾರ್ಥವಿಚಾರದ ಫಲಿತಾಂಶ ಇಷ್ಟು: 'ಛಂದಸ್' ಎಂಬ ಸಂಜ್ಞೆಗೆ ಮೂಲತಃ 'ಪದ್ಯ' (=ಛಂದೋಬಂಧ) ಎಂಬುದೇ ಅರ್ಥ; ಅಮರಸಿಂಹಾದಿ ಕೋಶಕಾರರು ಅದಕ್ಕೆ ಹೇಳುವ ಅರ್ಥ ಅಷ್ಟೇ ಎನ್ನಬಹುದು; ಪಿಂಗಳನಿಗೂ ಈ ಅರ್ಥವೇ ಸಂಮತ. ಈ ಅರ್ಥವನ್ನು ಅವಲಂಬಿಸಿಯೇ ಪದ್ಯಲಕ್ಷಣಕ್ಕೂ ಪದ್ಯಲಕ್ಷಣಗಳನ್ನು ನಿರೂಪಿಸುವ ಶಾಸ್ತ್ರಕ್ಕೂ "ಛಂದಸ್ಸು" ಎಂಬ ಹೆಸರು ಬಂದುದಾಗಿದೆ. ಛಂದಸ್ತತ್ತ್ವವನ್ನು ತಿಳಿಯುವ ಪ್ರಯತ್ನ ಮಾಡಿದ ಹರ್ಷಟಾದಿ ಛಂದಃಶಾಸ್ತ್ರವ್ಯಾಖ್ಯಾನಕಾರರು ಛಂದಃಸಂಜ್ಞೆಗೆ ಹೇಳಿರುವ ನಿರ್ವಚನಗಳೂ ವಸ್ತುತಃ 'ಪದ್ಯ' ಎಂಬರ್ಥದ ಪರಿಧಿಯನ್ನು ಮೀರುವುದಿಲ್ಲ. ('ಅಕ್ಷರಾಣಾಂ ಇಯತ್ತಾ' ಎಂಬುದಾಗಲಿ, 'ಅಕ್ಷರಸಂಖ್ಯಾವ-ಚ್ಛೇದಃ' ಎಂಬುದಾಗಲಿ ಪದ್ಯವನ್ನೇ ಲಕ್ಷ್ಯವಾಗಿಟ್ಟುಕೊಂಡು ಹೇಳಿದ ಮಾತೆಂ-ಬುದನ್ನು ಊಹಿಸಲು ಕಷ್ಟವಿಲ್ಲ. ಮಧುಸೂದನ ವಿದ್ಯಾವಾಚಸ್ಪತಿ ಹೇಳಿದ "ಮಾತ್ರಾಕ್ಷರನಿಯತಾ ವಾಕ್ ಛಂದಃ" ಎಂಬ ನಿರ್ವಚನವಂತೂ ನೇರವಾಗಿ ಪದ್ಯವನ್ನೇ ನಿರ್ದೇಶಿಸುತ್ತದೆ.) ಆದರೆ, ಛಂದಸ್ ಎಂದರೇನೆಂಬುದನ್ನು ತಳ ಮುಟ್ಟಿ ಪರೀಕ್ಷಿಸಿ, ಭರತನೂ ಅವನಿಂದ ಪ್ರಭಾವಿತನಾಗಿದ್ದಿರಬಹುದಾದ ಜಯ-ಕೀರ್ತಿಯೂ – 'ಛಂದಸ್' ಎಂಬುದು ಕೇವಲ ಪದ್ಯಕ್ಕೆ ಮೀಸಲಾಗಿರದೆ – ಸಮಸ್ತವಾಙ್ಮಯಕ್ಕೆ ಅನ್ವಯಿಸುವ ಒಂದು ತಥ್ಯವಾಗಿದೆ – ಎಂಬುದನ್ನು ಕಂಡು ಕೊಂಡು, ಛಂದಃಶಬ್ದದ ಅರ್ಥವನ್ನು ಅರಳಿಸಿ ತೋರಿಸಿದ್ದಾರೆ.

---

– ರಾಘವಾಂಕನ 'ಹರಿಶ್ಚಂದ್ರ ಕಾವ್ಯ'. ಇದು ವಾರ್ಧಕ ಷಟ್ಪದಿ ಎಂದು ಪ್ರಸಿದ್ಧವಾಗಿರುವ (ಪಂಚಮಾತ್ರಾಗಣಬದ್ಧವಾದ) ಛಂದೋಬಂಧದಲ್ಲಿ ರಚಿತವಾದುದಾಗಿದೆ. ರಗಣಘಟಿತ-ವಾದ 'ದಂಡಕ'ದಿಂದ ತತ್ಸಮಾನ ಮಾತ್ರಾಸಂಖ್ಯೆಯ 'ರಗಳೆ' ಹುಟ್ಟಿತೆಂದು (ಮಾತ್ರಾಕ್ಷರ-ಸಮೋದಿತಾಃ) ಜಯಕೀರ್ತಿ ಹೇಳುತ್ತಾನೆ. ಆ "ಮೂಲರಗಳೆಯ ಗತಿ"(=ಧಾಟಿ)ಯೂ ಗಣಸ್ವರೂಪವೂ, ವಾರ್ಧಕ ಷಟ್ಪದಿಯ ಗತಿಯೂ ಗಣಸ್ವರೂಪವೂ ಪರಸ್ಪರ ಅಭಿನ್ನ-ವಾದವುಗಳಾಗಿವೆ. [ನಡುಗನ್ನಡದ ಆದಿಷಟ್ಪದಿಯಾದ ವಾರ್ಧಕಷಟ್ಪದಿಯ ಛಂದೋಗತಿಗೂ, ತ್ರಿಮೂರ್ತಿಗಣಬದ್ಧವಾದ 'ಪುರಾತನ ಷಟ್ಪದಿ' (ಷಟ್ಪದಿಕೆ)ಯ ಛಂದೋಗತಿಗೂ ಯಾವ ಹೋಲಿಕೆಯೂ ಇಲ್ಲವಾದುದರಿಂದ ಅವುಗಳೊಳಗೆ ಜನ್ಯಜನಕತ್ವವು ಸರ್ವಥಾ ಅಸಂಭಾವ್ಯ.] ಮೊದಲು ಪಂಚಮಾತ್ರಾಗಣಬದ್ಧವಾದ "ರಗಳೆ" ಹುಟ್ಟಿ, ತದನಂತರ ಚತುರ್ಮಾತ್ರಾಗಣದ ಹಾಗೂ ತ್ರಿಮಾತ್ರಾಗಣದ ರಗಳೆಗಳು ಹುಟ್ಟಿರಬಹುದಾದಂತೆ – 'ರಗಣದಂಡಕ'ದ ಅನಂತರ ಭಗಣಾದಿ ದಂಡಕಗಳೂ ಉತ್ಸಾಹದಂಡಕವೂ (ಜಯಕೀರ್ತಿ, ೬-೩೪) ಹುಟ್ಟಿದಂತೆ – ವಾರ್ಧಕಷಟ್ಪದಿ ಅವತರಿಸಿದ ಮೇಲೆ ಉಳಿದ ಐದು ಷಟ್ಪದಿಗಳು ಹುಟ್ಟಿರಬೇಕೆಂದು ತೋರುತ್ತದೆ. ರಾಘವಾಂಕನೇ ಷಟ್ಪದೀಬಂಧದ ಜನಕನೆಂಬ ಪರಂಪರಾಗತವಾದ ಹೇಳಿಕೆಯೂ ಇದನ್ನು ಸಮರ್ಥಿಸುತ್ತದೆ.

ಭರತಜಯಕೀರ್ತಿಗಳ ಮತವನ್ನವಲಂಬಿಸಿ, ಛಂದಸ್ ಎಂಬುದು ಸಮಸ್ತವಾಙ್ಮಯಕ್ಕೆ ಎಂದರೆ ಪದ್ಯಕ್ಕೆ ಮಾತ್ರವಲ್ಲ, ಗದ್ಯಕ್ಕೂ ಅನ್ವಯಿಸುವುದೆಂದು ಹೇಳತೊಡಗಿದರೆ – ಪದ್ಯಗದ್ಯಗಳೊಳಗೆ ಭೇದವೆಲ್ಲಿ ಉಳಿಯುತ್ತದೆ? ಮತ್ತು ಆಗ 'ಛಂದೋಬಂಧ' 'ಛಂದೋಬದ್ಧ' ಎಂಬ ವ್ಯವಹಾರ ನಿರರ್ಥಕವಾಗಿ ಪರಿ–ಣಮಿಸುವುದಿಲ್ಲವೇ? – ಎಂಬ ಆಕ್ಷೇಪಗಳು ಇಲ್ಲಿ ತಲೆಯೆತ್ತಬಹುದು. ಇವಕ್ಕೆ ಸಮಾಧಾನ ಹೀಗೆ:– ಸಂಪ್ರದಾಯಸಿದ್ಧವಾದ ಛಂದಃಸಂಜ್ಞೆಗೆ ಭರತ ಜಯ–ಕೀರ್ತಿಗಳು ಬೇರೊಂದು ನಿರ್ವಚನವನ್ನೇನೂ ಹೇಳಿಲ್ಲ; ಅವರು ಮಾಡಿದ್ದು ಛಂದಸ್ತತ್ತ್ವದ ಸ್ವಭಾವನಿರೂಪಣವನ್ನು ಮಾತ್ರ. ಆದುದರಿಂದ, ಸಂಪ್ರದಾಯಸಿದ್ಧ–ವಾದ ಛಂದಃಶಬ್ದಾರ್ಥಕ್ಕೆ ಹಾಗೂ ಹರ್ಷಟಾದಿಗಳು ಒಪ್ಪಿದ ಸಾಂಪ್ರದಾಯಿಕವಾದ ಅದರ ನಿರ್ವಚನಕ್ಕೆ, ಭರತಜಯಕೀರ್ತಿಗಳ ಅಭಿಪ್ರಾಯವು ಪೂರಕವೆಂದು ತಿಳಿಯಬೇಕು. ಹಾಗೆ ತಿಳಿದಾಗ, ಛಂದಃಶಬ್ದದ ಅರ್ಥವ್ಯವಸ್ಥೆ ಸರ್ವಸಂಮತವೇ ಆಗುತ್ತದೆ. ಅದು ಹೇಗೆಂದರೆ:

ತಾತ್ತ್ವಿಕವಾಗಿ ಹೇಳುವುದಾದರೆ 'ಛಂದಸ್' ಎಂಬುದು ಗುರುಲಘುಗಳ 'ವಿನ್ಯಾಸ'. ಇದು ಸಮಸ್ತವಾಙ್ಮಯಕ್ಕೆ ಅನ್ವಯಿಸುವ, ಎಂದರೆ ಪದ್ಯದಲ್ಲಿಯೂ ಗದ್ಯದಲ್ಲಿಯೂ ಅರ್ಥಾತ್ ಸಕಲಶಬ್ದಗಳಲ್ಲಿ ಇರುವ ಒಂದು ಗುಣ ಅಥವಾ ಲಕ್ಷಣ. ಶಬ್ದದಿಂದ ಇದನ್ನು ವಾಸ್ತವಿಕವಾಗಿ ಪ್ರತ್ಯೇಕಿಸುವುದಕ್ಕಾಗುವುದಿಲ್ಲ; ವೈಚಾರಿಕವಾಗಿ ಮಾತ್ರ ಭೇದಿಸಬಹುದಾಗಿದೆ. ಅಕ್ಷರಸಂಖ್ಯಾಸಮತ್ವದಿಂದ, ಅಥವಾ ಅಕ್ಷರಪುಂಜಗಳ ಉಚ್ಚಾರದ ಮಾತ್ರಾಸಮತ್ವದಿಂದ ಮರ್ಯಾದಿತವಾದ ಖಂಡಗಳಾಗಿ 'ಛಂದಸ್' ಪ್ರಕಟವಾದಾಗ, ಅದು 'ಪದ್ಯ' ಎನ್ನಿಸಿಕೊಳ್ಳುತ್ತದೆ. ಹೀಗೆ ಮರ್ಯಾದಿತವಾಗದೆ, ಛಂದಃಸ್ರೋತಸ್ಸು ಸ್ವಚ್ಛಂದವಾಗಿ ಹರಿದರೆ, ಅದು 'ಗದ್ಯ' ಎನ್ನಿಸಿಕೊಳ್ಳುತ್ತದೆ. ಗದ್ಯಕ್ಕೆ ಅವಯವಪರಿಮಾಣನಿಯಮವಿಲ್ಲದಿರುವ ಕಾರಣ, ಮತ್ತು ಅದರಿಂದಾಗಿ ಗದ್ಯದ ಛಂದೋರೂಪಭೇದಗಳು ವಸ್ತುತಃ ಅನಂತವಾಗಿ 'ಅಗಣ್ಯ'ವಾಗಿರುವ ಕಾರಣ, ಅದು ನಿಷ್ಕೃಷ್ಟವಾದ ಛಂದೋರೂಪವಿಭಾಗ–ವ್ಯವಸ್ಥೆಗೆ ಆಸ್ಪದವೀಯುವುದಿಲ್ಲ. 'ಪದ್ಯ'ವೆಂಬುದಕ್ಕೆ ಅವಯವಪರಿಮಾಣ ನಿಯಮವಿರುವ ಕಾರಣ, ರೂಪಾನುಗುಣವಾದ ವಿಭಾಗವ್ಯವಸ್ಥೆಗೆ ಅದು ಅಳ–ವಡುತ್ತದೆ. ಈ ಕಾರಣಗಳಿಂದಾಗಿ ಛಂದಃಶಾಸ್ತ್ರವು ಗದ್ಯದ ಗೊಡವೆಗೆ ಹೋಗದೆ, ಕೇವಲ ಪದ್ಯರೂಪಗಳನ್ನೇ ತನ್ನ ಕ್ಷೇತ್ರವಾಗಿ ಮಾಡಿಕೊಂಡಿದೆ ಹೊರತು, ಗದ್ಯವು ಛಂದೋರಹಿತವೆಂದೇನೂ ಅಲ್ಲ. ಸಾರಾಂಶ: ಛಂದಸ್ ಎಂಬುದು 'ನಿಬದ್ಧ'–ವೆಂದೂ 'ಅನಿಬದ್ಧ'ವೆಂದೂ ಎರಡು ವಿಧವಾಗಿದೆ. ಛಂದಸ್ಸಿನ ನಿಬದ್ಧರೂಪವೇ 'ಪದ್ಯ'; ಛಂದಸ್ಸಿನ ಅನಿಬದ್ಧರೂಪವೇ 'ಗದ್ಯ'. ಈ ವ್ಯವಸ್ಥೆಯಿಂದ ಗದ್ಯಪದ್ಯಗಳ ಭೇದವನ್ನು ಗ್ರಹಿಸುವುದಕ್ಕಾಗಲಿ, 'ಛಂದೋಬದ್ಧ' 'ಛಂದೋಬಂಧ' ಇತ್ಯಾದಿ ಪದಗಳ ಪ್ರಯೋಜಕತ್ವಕ್ಕಾಗಲಿ ಯಾವ ಹಾನಿಯೂ ಬರುವುದಿಲ್ಲ.

✷ ✷

# ಪರಿಚ್ಛೇದ ಐದು

# ಗತಿರೂಪಗಳ ವಿವೇಚನೆ

{ಗತಿ – ಆಕರ್ಷಕ ಛಂದಃಸರಣಿ}

ನಾವೀಗ ತಿಳಿದುಕೊಂಡಂತೆ – 'ಛಂದಸ್' ಎಂಬುದು ಪರಮಾರ್ಥದಲ್ಲಿ ಗುರುಲಘುಗಳ ವಿನ್ಯಾಸ. ಗುರು, ಲಘು ಎಂಬ ಶಬ್ದಗಳು ಅಕ್ಷರಪರಿಮಾಣ ವಾಚಕಗಳು. ಅಕ್ಷರಗಳು ಶಬ್ದ(=ಪದ)ದ ಘಟಕಗಳಾಗಿರುವಂತೆ, ಅಕ್ಷರಪರಿ–ಮಾಣಗಳಾದ ಗುರುಲಘುಗಳು ಛಂದಸ್ಸಿನ ಘಟಕಗಳಾಗಿವೆ. ಅರ್ಥಾತ್ ಶಬ್ದವು (= ಪದ) ಅಕ್ಷರಾತ್ಮಕವೂ 'ಛಂದಸ್' ಗುರುಲಘ್ವಾತ್ಮಕವೂ ಆಗಿರುತ್ತದೆ. ಅಕ್ಷರಗಳ ಜೋಡಣೆಯಿಂದ ಶಬ್ದರೂಪವು (= ಪದ) ನಿಷ್ಪನ್ನವಾಗುವ ಕಾರಣ, ಅಕ್ಷರಗಳನ್ನು 'ಶಬ್ದದ್ರವ್ಯ' ಅಥವಾ 'ಪದದ್ರವ್ಯ'(= ಪದಗಳ ಘಟಕದ್ರವ್ಯ)ಗಳೆಂದು ಕರೆಯ–ಬಹುದಾದಂತೆ,[33] ಗುರುಲಘುಗಳ ಜೋಡಣೆಯಿಂದ 'ಛಂದಸ್' ಆವಿರ್ಭವಿಸುವ ಕಾರಣ, ಗುರುಲಘು ಎಂಬ 'ಮಾನ'ಗಳನ್ನು 'ಛಂದೋದ್ರವ್ಯ'(= ಛಂದೋ–ವಿನ್ಯಾಸದ ಘಟಕದ್ರವ್ಯ)ಗಳೆಂದು ಕರೆಯಬಹುದಾಗಿದೆ. ಹೀಗೆ 'ಛಂದಸ್' ಎಂಬುದು ಛಂದೋದ್ರವ್ಯಗಳ ವಿನ್ಯಾಸವಾಗಿದ್ದು ಸಮಸ್ತವಾಙ್ಮಯವನ್ನೂ ಆಲಿಂಗಿಸಿಕೊಂಡಿರುವುದಾದರೂ, ವಾಙ್ಮಯದಲ್ಲೆಲ್ಲ ಅದು ತನ್ನ ಸೌಂದರ್ಯ–ವನ್ನು, ಎಂದರೆ ಆಕರ್ಷಕತ್ವವನ್ನು, ಏಕಪ್ರಕಾರವಾಗಿ ಪ್ರಕಟಿಸುವುದಿಲ್ಲ. ಯಾವುದೊಂದು ವಸ್ತುವಿನ ಆಕರ್ಷಕತ್ವದ ಒಂದು ರಹಸ್ಯವೇನೆಂದರೆ – ಅದರ ಅಸಾಮಾನ್ಯತೆ. ಒಂದು ವಾಙ್ಮಯರೂಪದಲ್ಲಿ ಛಂದೋದ್ರವ್ಯಗಳ ಜೋಡಣೆಯ ಪರಿಣಾಮವಾದ ಅದರ 'ಛಂದಃಸರಣಿ' ನಮ್ಮ ದಿನನಿತ್ಯದ ಬಳಕೆಯ ಮಾತುಗಳ ಛಂದಃಸರಣಿಯಂತೆಯೇ ಭಾಸವಾಗುವುದಾದರೆ, ಅದು ನಮಗೆ ಆಕರ್ಷಕವಾಗಿ ತೋರುವುದಿಲ್ಲ. ಹಾಗಿರದೆ, ಒಂದಿಷ್ಟು ಅಸಾಮಾನ್ಯತೆ ಅಲ್ಲಿ ಗೋಚರಿಸಿದರೆ

---

33. ಶಬ್ದಮಣಿದರ್ಪಣದ ಎರಡು ಸೂತ್ರಗಳು ಹೀಗಿವೆ:

ಅನುಕೂಲಪವನನಿಂ ಜೀ– ।
ವನಿಷ್ಪದಿಂ ನಾಭಿಮೂಲದೊಳ್ ಕಹಳೆಯ ಪಾಂ– ॥
ಗಿನವೋಲ್ ಶಬ್ದದ್ರವ್ಯಂ ।
ಜನಿಯಿಸುಗುಂ ಶ್ವೇತಮದರ ಕಾರ್ಯಂ ಶಬ್ದಂ ॥ ೯ ॥

* * *

ತನು ವಾದ್ಯಂ ನಾಲಗೆ ವಾ– ।
ದನದಂಡಂ ಕರ್ತೃವಾತ್ಮನವನ ಮನೋವ್ಯ – ॥
ತ್ತಿ ನಿಮಿತ್ತಮಾಗೆ ಶಬ್ದಂ ।
ಜನಿಯಿಸುಗುಂ ಧವಲವರ್ಣಮಕ್ಷರರೂಪಂ ॥ ೪೪ ॥

ಅದು ನಮ್ಮನ್ನು ಆಕರ್ಷಿಸುತ್ತದೆ. ನಾವಾಡುವ ಮಾತುಗಳ ಛಂದಃಸರಣಿ, ಸಾಮಾನ್ಯವಾಗಿ, ಒಂದು ಯೋಜಿತವಾದ ವ್ಯವಸ್ಥೆಗೆ ಒಳಪಟ್ಟಿರುವುದಿಲ್ಲ. ಆದರೆ ಯೋಜಿತವಾದಂತಹದೊಂದು ಛಂದೋವ್ಯವಸ್ಥೆ ಮಾತುಗಳಲ್ಲಿ ಗೋಚರಿಸಿದರೆ ಅಲ್ಲೊಂದು ಅಸಾಮಾನ್ಯತೆಯ ಅನುಭವವುಂಟಾಗುವುದರಿಂದ, ಆ ಮಾತುಗಳ ಛಂದಃಸರಣಿ ನಮ್ಮನ್ನು ತನ್ನ ಕಡೆಗೆ ಸೆಳೆಯುತ್ತದೆ. ಹೀಗೆ ನಮ್ಮನ್ನು ಸೆಳೆಯಬಲ್ಲ ಛಂದಃಸರಣಿಯೇ 'ಗತಿ' ಎಂದು ಕರೆಯಲ್ಪಡುವುದಾಗಿದೆ. [ವಾದ್ಯಧ್ವನಿಗಳಲ್ಲಿ ಇದು ಮೂಡಿಬಂದಾಗ 'ಗತ್ತು' ಎನಿಸಿಕೊಳ್ಳುತ್ತದೆ. 'ಗತ್ತು' ಅಥವಾ 'ಗತ್' (ಹಿಂದುಸ್ತಾನಿ) ಎಂಬುದು 'ಗತಿ' ಎಂಬ ಸಂಸ್ಕೃತ ಶಬ್ದದ 'ಅಪಭ್ರಂಶ'-ವೆಂಬುದನ್ನು ಇಲ್ಲಿ ಸ್ಮರಿಸಿಕೊಂಡರೆ 'ಗತಿ'ಯ ಅರ್ಥದ ವ್ಯಾಪ್ತಿ ವಿಶದ-ವಾಗದಿರದು.] 'ಪದ್ಯ' ಎಂದು ನಾವು ಹೇಳುವುದರಲ್ಲೆಲ್ಲ ಈ 'ಗತಿ' ಎಂಬುದು ಇದ್ದೇ ಇರುತ್ತದೆ; ಇರಲೇಬೇಕಾಗುತ್ತದೆ. ಗದ್ಯದಲ್ಲಿಯೂ ಕೆಲಕೆಲವೆಡೆಗಳಲ್ಲಿ ಇದರ ಅನುಭವ ನಮಗೆ ಆಗುವುದುಂಟು. (ಮುದ್ದಣನ ರಾಮಾಶ್ವಮೇಧದಲ್ಲಿ ಗದ್ಯದ 'ಗತಿ'ಯ ವಿಪುಲವೈಭವವನ್ನು ಕಾಣಬಹುದು.)[34]

{ಸಂಗೀತರತ್ನಾಕರದ ಗತಿಭೇದನಿರೂಪಣೆ}

'ಗತಿ' ಎಂಬುದಕ್ಕೆ ನಮ್ಮ ಶಾಸ್ತ್ರಕಾರರು ಮಾಡಿದ್ದಿರಬಹುದಾದ ಲಕ್ಷಣ ವ್ಯಾಖ್ಯೆ ಎಲ್ಲಿಯೂ ನನ್ನ ಕಣ್ಣಿಗೆ ಬಿದ್ದಿಲ್ಲವಾದರೂ, ಶಾರ್ಙ್ಗದೇವನು ತನ್ನ 'ಸಂಗೀತರತ್ನಾಕರ'ದ ಪ್ರಬಂಧಾಧ್ಯಾಯದ ೧೯೨, ೧೯೩, ೧೯೪ನೆಯ ಶ್ಲೋಕ-ಗಳಲ್ಲಿ (ಅಡ್ಯಾರ್ ಮುದ್ರಣ, ೧೯೫೯) ಮಾಡಿರುವ ಗದ್ಯಗತಿಭೇದಗಳ ನಿರೂಪಣೆಯಿಂದ – "ಒಂದು ವ್ಯವಸ್ಥೆಗೆ ಒಳಪಟ್ಟ, ಅತಏವ ಆಕರ್ಷಕವಾದ, ಗುರುಲಘುಯೋಜನೆಯ ಪರಿಣಾಮವೇ ಗತಿ" ಎಂಬುದು ಪೂರ್ವಾಚಾರ್ಯರ ಮತವಾಗಿತ್ತೆಂದು ವಿಶದವಾಗುತ್ತದೆ. ಆ ನಿರೂಪಣೆ ಇಂತಿದೆ:

> ದ್ರುತಾ ವಿಲಂಬಿತಾ ಮಧ್ಯಾ । ದ್ರುತಮಧ್ಯಾ ತಥಾ ಪರಾ
> ಗತಿರ್ದ್ರುತವಿಲಂಬಾ ಸ್ಯಾತ್ । ಷಷ್ಠೀ ಮಧ್ಯವಿಲಂಬಿತಾ ॥
> ಇತಿ ಗದ್ಯಸ್ಯ ಷಟ್ ಪ್ರೋಕ್ತಾ । ಗತಯಃ ಪೂರ್ವಸೂರಿಭಿಃ ॥
> ಲಘುಭಿರ್ಬಹುಲೈರಲ್ಪೈಃ । ಸಮೈರಾದ್ಯತ್ರಯಂ ಕ್ರಮಾತ್ ॥
> ಪೃಥಗ್ಲಗತ್ವೇ ಮಿಶ್ರೈಸ್ತು । ಲಗೈಸ್ತದ್ವತ್ ಪರಂ ತ್ರಯಂ ॥

ಈ ಶ್ಲೋಕಗಳ ತಾತ್ಪರ್ಯ ಹೀಗೆ: "ಯಾವುದೊಂದು ಗದ್ಯಖಂಡದಲ್ಲಿ ಲಘ್ವಕ್ಷರಗಳು ಅತ್ಯಧಿಕವಾಗಿದ್ದರೆ ಅಲ್ಲಿ 'ದ್ರುತಗತಿ'; ಗುರ್ವಕ್ಷರಗಳು ಅತ್ಯಧಿಕ-ವಾಗಿದ್ದರೆ 'ವಿಲಂಬಿತಗತಿ'; ಗುರುಲಘುಗಳು ಸಮಸಮವೆಂಬಂತಿದ್ದರೆ

34. 'ಗತಿಸಂಪನ್ನ'ವಾದ ಗದ್ಯರಚನೆಯಲ್ಲಿ (ಮುಂದೆ ವಿವೃತವಾಗಲಿರುವ) ಪದಪರಿಮಾಣಗಳ ಮೈತ್ರಿಯೂ ಇದ್ದರೆ, ಆ ಗದ್ಯವು "ವೃತ್ತಗಂಧಿ" ಎನಿಸಿಕೊಳ್ಳುತ್ತದೆ.

'ಮಧ್ಯಗತಿ'. ಮತ್ತು – ಯಾವುದೊಂದು ಗದ್ಯಖಂಡದ ಅರ್ಧದಲ್ಲಿ ಲಘುಗಳು ತುಂಬಿದ್ದು, ಉಳಿದರ್ಧದಲ್ಲಿ ಗುರುಲಘುಗಳು ಮಿಶ್ರಿತವಾಗಿದ್ದರೆ ಅಲ್ಲಿ 'ದ್ರುತ-ಮಧ್ಯಗತಿ'; ಅರ್ಧದಲ್ಲಿ ಲಘುಗಳು ಅತ್ಯಧಿಕವಾಗಿದ್ದು, ಉಳಿದರ್ಧವು ಗುರು-ಬಹುಲವಾಗಿದ್ದರೆ 'ದ್ರುತವಿಲಂಬಗತಿ'; ಅರ್ಧದಲ್ಲಿ ಗುರುಲಘುಗಳು ಮಿಶ್ರಿತ-ವಾಗಿದ್ದು, ಉಳಿದರ್ಧದಲ್ಲಿ ಗುರುಗಳು ಅಧಿಕವಾಗಿದ್ದರೆ 'ಮಧ್ಯವಿಲಂಬಿತಗತಿ' – ಹೀಗೆ ಗದ್ಯದ ಗತಿ ಆರು ಬಗೆಯಾಗಿದೆಯೆಂದು ಪೂರ್ವಾಚಾರ್ಯರು ಹೇಳಿರುತ್ತಾರೆ."[35] [ಈ ಗತಿಭೇದಗಳು ಗದ್ಯರಚನೆಗಳಲ್ಲೆಲ್ಲ ಸರ್ವತ್ರ

---

35. ಇಲ್ಲಿ ಪ್ರೋಕ್ತವಾದ ದ್ರುತವಿಲಂಬಿತಾದಿಗಳು ಛಂದಸ್ತತ್ತ್ವಕ್ಕೆ ನೇರವಾಗಿ ಅನ್ವಯಿಸುವವುಗಳು. (ಈ ನಿಬಂಧದ 15ನೆಯ ಟಿಪ್ಪಣಿಯನ್ನು ನೋಡಿರಿ.) ಈ ಗತಿಭೇದಗಳು ಗದ್ಯವನ್ನನುಲಕ್ಷಿಸಿ ಹೇಳಲ್ಪಟ್ಟವುಗಳಾದರೂ, ಇವು ಪದ್ಯಕ್ಕೆ ಬಹಿರ್ಭೂತವಾದವುಗಳಲ್ಲ. ಪರೀಕ್ಷಿಸಿ ನೋಡಿದರೆ ಇಲ್ಲಿ ಪ್ರೋಕ್ತವಾದ ಎಲ್ಲಾ ಗತಿಭೇದಗಳನ್ನು ಪದ್ಯಗಳಲ್ಲಿಯೂ ಕಾಣಬಹುದು. ಉದಾ:

ಸುರಪುರಗಣಮೆಸೆದಿರೆ ಜಲನಿಧಿಯೊಳ್ ॥ (ಛಂದೋಂಬುಧಿ)

ಇದು 'ಮಣಿಗುಣನಿಕರ'ವೆಂಬ ವೃತ್ತದ ಪಾದ. ಉಕ್ತಗತಿಲಕ್ಷಣದಂತೆ ಇದರಲ್ಲಿ 'ದ್ರುತಗತಿ' ಇದೆ.

ವಂದೇ ದೇವಂ ವಿಷ್ಣುಮಶೇಷ ಸ್ಥಿತಿಹೇತುಂ ॥ (ಅಧ್ಯಾತ್ಮರಾಮಾಯಣ)

ಇದು 'ಮತ್ತಮಯೂರ'ವೆಂಬ ವೃತ್ತದ ಪಾದ. ಇದರಲ್ಲಿ 'ವಿಲಂಬಿತಗತಿ' ಕಾಣುತ್ತದೆ.

ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್ ॥ (ಶಾಕುಂತಲ)

ಇದು 'ವಸಂತತಿಲಕ'ವೆಂಬ ವೃತ್ತದ ಪಾದ. ಇದರಲ್ಲಿರುವುದು 'ಮಧ್ಯಗತಿ'.

ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ ॥ (ಶಾಕುಂತಲ)

ಇದು 'ಮಾಲಿನೀ' ವೃತ್ತದ ಪಾದ. 'ದ್ರುತಮಧ್ಯಗತಿ'ಯನ್ನು ಇದರಲ್ಲಿ ಕಾಣಬಹುದು.

ಎನ್ನಿಂದಾಯ್ತೀ ವೃತ್ತಂ ಕ್ರೀಡಾಹ್ವಯಮಿದನಱವುದು ಸರಸಿರುಹಮುಖೀ (ಛಂದೋಂಬುಧಿ)

ಇದು 'ಕ್ರೀಡಾ' ವೃತ್ತದ ಪಾದ. ಇದರಲ್ಲಿ 'ದ್ರುತವಿಲಂಬಿತಗತಿ'ಯ ಲಕ್ಷಣ ಸುಸ್ಪಷ್ಟ.

ಮಾರ್ಗೇ ಮಾರ್ಗೇ ಜಾಯತೇ ಸಾಧುಸಂಗಃ ॥ (ರಂಭಾಶುಕಸಂವಾದ)

ಇದು 'ಶಾಲಿನೀ' ವೃತ್ತದ ಪಾದ. ಇದರಲ್ಲಿ 'ಮಧ್ಯವಿಲಂಬಿತಗತಿ'ಯ ಲಕ್ಷಣ ವ್ಯಕ್ತವಾಗುತ್ತದೆ.

ಸೂಚನೆ: {ದ್ರುತಾದಿಗತಿಭೇದಗಳೂ ದ್ರುತಾದಿಲಯಭೇದಗಳೂ ಬೇರೆ ಬೇರೆ} ಪದ್ಯಗತಿಯ ವಿಚಾರವನ್ನು, ಪ್ರಸ್ತುತಕ್ಕೆ ಅವಶ್ಯವಿರುವಷ್ಟು ಮಾತ್ರ ಈ ಟಿಪ್ಪಣಿಯಲ್ಲಿ ಮಾಡಲಾಗಿದೆ. ಹೆಚ್ಚಿನ ವಿವರಗಳು ಮುಂದಿನ ಪರಿಚ್ಛೇದದಲ್ಲಿ ಬರಲಿವೆ. ಆದರೂ ಈ ಸಂದರ್ಭದಲ್ಲಿ ಮುಖ್ಯವಾದೊಂದು ತಥ್ಯದ ಕಡೆಗೆ ವಾಚಕರ ಲಕ್ಷ್ಯವನ್ನೆಳೆಯುವುದು ಅವಶ್ಯವಾಗಿದೆ. ಅದೇನೆಂದರೆ – ಶಾರ್ಙ್ಗದೇವನು ಇಲ್ಲಿ ನಿರೂಪಿಸಿರುವ ದ್ರುತಮಧ್ಯ-ವಿಲಂಬಿತಾದಿ ಛಂದೋಗತಿಭೇದಗಳನ್ನು, (ಈ ನಿಬಂಧದ ಆದಿಭಾಗದಲ್ಲಿ ವಿವರಿಸಿರುವ) ದ್ರುತಮಧ್ಯವಿಲಂಬಿತ ಲಯಭೇದಗಳೆಂದು ಸಂಗೀತಶಾಸ್ತ್ರಗ್ರಂಥಗಳಲ್ಲಿ ಹೆಸರಿಸಲಾಗಿರುವ

ಕಾಣುವಂಥವುಗಳಲ್ಲ; ಹುಡುಕಿ ನೋಡಿದರೆ (ಕೆಲವು ಗದ್ಯಗಳಲ್ಲಿ ಹೆಚ್ಚಾಗಿ, ಕೆಲವು ಗದ್ಯಗಳಲ್ಲಿ ಕಡಮೆಯಾಗಿ) ಅಲ್ಲಲ್ಲಿ ಕಾಣಬಹುದಾದ ವಿಶೇಷಗಳು ಇವು. ಗದ್ಯದಲ್ಲಿ ಇಂತಹ ಗತಿ ವಿಪುಲವಾಗಿ ಕಂಡುಬರಬೇಕಾದರೆ, ಉದ್ದೇಶ-ಪೂರ್ವಕವಾಗಿ ಹಾಗೆ ರಚಿಸಬೇಕಾಗುತ್ತದೆ; ಕೆಲವು ಚಂಪೂಪ್ರಬಂಧಗಳಲ್ಲಿ

---

ಉಚ್ಚಾರವೇಗಭೇದಗಳೆಂದು ಭ್ರಮಿಸಕೂಡದು. ಆ ದ್ರುತಾದಿ ತ್ರಿವಿಧ ಲಯಭೇದಗಳೆಂದರೆ - ಪಠನಗಾನಾದಿ ಕ್ರಿಯೆಗಳಲ್ಲಿ (ಪಾಠಕಗಾಯಕವಾದಕಾದಿಗಳ ಇಷ್ಟಾನುಗುಣವಾದ) ಮಾತ್ರಾ-ಕಾಲದ ಹ್ರಾಸವೃದ್ಧಿಗಳ ಪರಿಣಾಮವಾಗಿ ಉಂಟಾಗುವ ವಾಸ್ತವಿಕವಾದ ವೇಗಭೇದಗಳು (= tempo, speed). ಹಿಂದೆಯೇ ಹೇಳಿರುವಂತೆ, ಅವಕ್ಕೂ ಛಂದಸ್ತತ್ತ್ವಕ್ಕೂ ಸಂಬಂಧವಿಲ್ಲ. ಇಲ್ಲಿ ಹೇಳಲಾಗಿರುವ ದ್ರುತಾದಿ ಷಡ್ವಿಧ ಭೇದಗಳು ವಾಙ್ಮಯಸ್ವಭಾವದಲ್ಲಿಯೇ ನಿಶ್ಚಿತವಾಗಿ-ರುವ 'ಗತಿಭೇದ'ಗಳು. ವಿಶಿಷ್ಟಗತಿಸಂಪನ್ನವಾದ ಯಾವುದೊಂದು ಗದ್ಯಖಂಡವನ್ನಾಗಲಿ ಪದ್ಯವನ್ನಾಗಲಿ, ಯಾವ ವೇಗಭೇದ(tempo)ದಲ್ಲಿ ಪಠಿಸಿದರೂ, ಈ ದ್ರುತಾದಿ ಗತಿಭೇದ-ಗಳಿಗೆ ಸರ್ವಥಾ ಚ್ಯುತಿಬರುವುದಿಲ್ಲ. ಏಕೆಂದರೆ, ಇವು ಪಠನದ ವಾಸ್ತವಿಕ ಕಾಲಪರಿಮಾಣ-ವನ್ನು ಅವಲಂಬಿಸಿರದೆ, ಛಂದೋದ್ರವ್ಯಗಳ ಪರಸ್ಪರ ಸಾಪೇಕ್ಷವಾದ ಕಾಲಪರಿಮಾಣವನ್ನು ಮಾತ್ರ ಆಧರಿಸಿರುವವುಗಳು. 'ಗತಿ'ಯ ದ್ರುತತ್ವವಿಲಂಬಿತತ್ವಗಳು - ಯಾವುದೊಂದು ಛಂದೋ ರಚನೆಯ ಪಠನಕಾಲಪರಿಮಾಣದ ಹ್ರಸ್ವತ್ವದೀರ್ಘತ್ವಗಳಲ್ಲ; ಅವು ಛಂದೋ ವಿನ್ಯಾಸವಿಶೇಷದ ಫಲಸ್ವರೂಪವಾಗಿ ಛಂದಃಸರಣಿಯಲ್ಲಿ ಭಾಸವಾಗುವ (ಎಂದರೆ ಪ್ರಾತಿ-ಭಾಸಿಕವಾದ) ಅರ್ಥಾತ್ ಚಿತ್ರಪ್ರಾಯವಾದ ದ್ರುತತ್ವವಿಲಂಬಿತತ್ವಗಳು. ಒಂದು ಛಂದೋ-ರಚನೆಯನ್ನು ಯಥಾಕ್ಷರಗುರುಲಘುವಾಗಿ ವಿಲಂಬಿತವೇಗ(=ವಿಲಂಬಿತಲಯ)ದಲ್ಲಿ ಪಠಿಸು-ವಾಗ ಒಂದು ಗುರ್ವಕ್ಷರಕ್ಕೆ ಅರ್ಧ ಸೆಕೆಂಡು ಬೇಕಾಗುವುದೆಂದಿಟ್ಟುಕೊಂಡರೆ, ಅದರಲ್ಲಿರುವ ಒಂದು ಲಘ್ವಕ್ಷರಕ್ಕೆ ಕಾಲು ಸೆಕೆಂಡು ಬೇಕಾಗುತ್ತದೆ; ಅದೇ ಛಂದೋರಚನೆಯನ್ನು ಮಧ್ಯಮವೇಗ(=ಮಧ್ಯಲಯ)ದಲ್ಲಿ ಪಠಿಸಿದರೆ ಗುರುವಿಗೆ ಕಾಲು ಸೆಕೆಂಡು, ಲಘುವಿಗೆ ಅರೆಕಾಲು ಸೆಕೆಂಡು ಬೇಕಾಗುವುದು; ಅದನ್ನೇ ದ್ರುತವೇಗ(=ದ್ರುತಲಯ)ದಲ್ಲಿ ಪಠಿಸಿದರೆ ಗುರುವಿಗೆ ಅಷ್ಟಾಂಶ ಸೆಕೆಂಡು, ಲಘುವಿಗೆ ಷೋಡಶಾಂಶ ಸೆಕೆಂಡು - ಹೀಗೆ ವಾಸ್ತವಿಕ ಕಾಲಪರಿಮಾಣವಿರುತ್ತದೆ. ಆದರೆ ಈ ಮೂರು ಬಗೆಯ ಪಠನವೇಗಗಳಲ್ಲಿಯೂ ಆ ಛಂದೋರಚನೆಯ ಗುರುಲಘೂಚ್ಚಾರದ ಕಾಲಪರಿಮಾಣಗಳ ಅನುಪಾತವು ಇದ್ದಂತೆಯೇ (೨:೧) ಇರುವುದರಿಂದ, ಆ ಛಂದೋರಚನೆಯ (ಶಾರ್ಙ್ಗದೇವೋಕ್ತ) 'ಗತಿ'ಯ ದ್ರುತಾದಿತ್ವಕ್ಕೆ ಯಾವ ಹಾನಿಯೂ ಬಾರದೆ, ಆ 'ಗತಿಸ್ವರೂಪ'ವು ಯಥಾಸ್ಥಿತವಾಗಿಯೇ ಇರುತ್ತದೆ. ಹೀಗೆ-ಛಂದೋದ್ರವ್ಯಗಳ ಪರಸ್ಪರ ಸಾಪೇಕ್ಷ ಕಾಲಪರಿಮಾಣವನ್ನು ಮಾತ್ರ ಅವಲಂಬಿಸಿರುವ 'ದ್ರುತಾದಿಗತಿ'ಗಳೂ, ಪಠನಾದಿಕ್ರಿಯೆಗಳ ವಾಸ್ತವಿಕ ಕಾಲಪರಿಮಾಣವನ್ನು ಅವಲಂಬಿಸಿರುವ "ದ್ರುತಾದಿಲಯ"(=ವೇಗ)ಗಳೂ ಸ್ವಭಾವತಃ ಬೇರೆಬೇರೆಯೇ ಆದ 'ತತ್ತ್ವ'ಗಳೆಂಬ ತಥ್ಯವು ಕಣ್ಮರೆಯಾಗದಂತೆ ನೋಡಿಕೊಳ್ಳುವುದು ಗತಿಭೇದವಿಚಾರಸಂದರ್ಭದಲ್ಲಿ ಬಹಳ ಮುಖ್ಯ-ವಾಗಿರುತ್ತದೆ. [ಆನುಷಂಗಿಕವಾಗಿ ಒಂದು ಮಾತು: ಗುರುಲಘುಗಳ ವಿನ್ಯಾಸವೈಚಿತ್ರ್ಯದ ಫಲವಾಗಿ ಕಾಣಿಸಿಕೊಳ್ಳುವ (ಶಾರ್ಙ್ಗದೇವೋಕ್ತವಾದ) ಈ ದ್ರುತಾದಿಭೇದಗಳಲ್ಲದೆ, ಛಂದಃ ಖಂಡಗಳ ಪರಿಮಾಣಭೇದದ ಕಾರಣದಿಂದ (ಲಯಾನ್ವಿತಬಂಧಗಳಲ್ಲಿ ಮಾತ್ರ) ಉದ್ಭೂತ-ವಾಗುವ ದ್ರುತಾದಿಭೇದಗಳೂ ಛಂದೋಗತಿಯಲ್ಲಿ ಕಂಡುಬರುತ್ತವೆ. ಅವನ್ನು ಮುಂದಿನ ಪರಿಚ್ಛೇದದಲ್ಲಿ ಸೋದಾಹರಣವಾಗಿ ನಿರೂಪಿಸಲಾಗುವುದು.]

ಕೆಲವೆಡೆ ಕಂಡುಬರುವ ಗದ್ಯಭಾಗಗಳಲ್ಲಿ ಇಂತಹವು ಇರುವುದುಂಟು. 'ಸಂಗೀತರತ್ನಾಕರ'ದಲ್ಲಿ ಈ ಗತಿಭೇದಗಳನ್ನು ನಿರೂಪಿಸಿದ್ದೇಕೆಂದರೆ – ನಮ್ಮ ದೇಶದ ಸಂಗೀತಸಂಪ್ರದಾಯದಂತೆ, ಗಾನವು 'ಸತಾಲ'ವೆಂದೂ 'ವಿತಾಲ'–ವೆಂದೂ ಎರಡು ವಿಧವಾಗಿದೆ. 'ಸತಾಲಗಾನ'ವೇ ವಿಪುಲವಾಗಿ ಕೇಳಿಬರುವು–ದಾದರೂ, ಲಯರಹಿತವಾದ (=ವಿಷಮಗತಿಯ) ವೃತ್ತಗಳನ್ನೂ ಶ್ಲೋಕಗಳನ್ನೂ (ವಿತಾಲವಾಗಿ) ಹಾಡುವ ರೂಢಿ ಈಗಲೂ ಇರುವಂತೆ, ಹಿಂದಿನ ಕಾಲದಲ್ಲಿ ಗದ್ಯವನ್ನೂ (ವಿತಾಲವಾಗಿ) ಹಾಡುವುದಿತ್ತೆಂಬುದು ಸಂಗೀತಶಾಸ್ತ್ರಗ್ರಂಥಗಳಿಂದ ಗೊತ್ತಾಗುತ್ತದೆ. ಆದರೆ ಹಾಡಲ್ಪಡುವ 'ಪ್ರಬಂಧ'ದಲ್ಲಿ (ಸಂಗೀತಶಾಸ್ತ್ರೋಕ್ತವಾದ 'ಪ್ರಬಂಧ'ಗಳಲ್ಲಿ ಗದ್ಯವೂ ಒಂದು) ಗತಿಜನಿತವಾದ ಸೌಂದರ್ಯವೇನೂ ಇಲ್ಲದಿದ್ದರೆ ಗಾನವು ಮನೋರಂಜಕವಾಗುವುದಿಲ್ಲ. (ಶ್ಲೋಕಾದಿಗಳು ವಿತಾಲ–ಗಳಾಗಿದ್ದರೂ, ಅವು ಪದ್ಯಗಳಾದುದರಿಂದ ಅವುಗಳಲ್ಲಿ ಛಂದಃಸೌಂದರ್ಯ ಅರ್ಥಾತ್ ಗತಿಜನಿತಸೌಂದರ್ಯವಿದ್ದೇ ಇರುತ್ತದೆ. 'ತಾಳ' ಎಂಬುದು ಗತಿ ಸ್ವರೂಪವಿಶೇಷವೇ ಆಗಿರುವುದರಿಂದ, 'ಸತಾಲ'ಗಾನದಲ್ಲಿ ಗತಿಸೌಂದರ್ಯವು ನಿತ್ಯಸ್ಥಿತವಾಗಿರುತ್ತದೆ.) 'ಗದ್ಯಗಾನ'ವು ಶೋಭಾವಹವಾಗಬೇಕಾದರೆ ಆ ಗದ್ಯದ ಛಂದಃಸರಣಿ ಮನೋಹರವಾಗಿರಲೇಬೇಕಾಗುತ್ತದೆ. ಹಾಗೆ ಹಾಡುವುದಕ್ಕೆ ಉಪಯುಕ್ತವಾದ, ಎಂದರೆ 'ಶ್ರವ್ಯತ್ವ'ವುಳ್ಳ, ಗದ್ಯಸ್ವರೂಪವನ್ನು ತಿಳಿಸುವುದು ಇಲ್ಲಿ ಗ್ರಂಥಕಾರನ ಉದ್ದೇಶವಾಗಿದ್ದು – ಛಂದಸ್ಸಿನ 'ಶ್ರವ್ಯತ್ವ'ವೆಂದರೆ ಗತಿಯ ಸೌಂದರ್ಯವೇ ಆಗಿರುವುದರಿಂದ – ಅದನ್ನು ಚೆನ್ನಾಗಿ ಸಾಧಿಸಬಲ್ಲ ಹಾಗೂ ಪರಿಸ್ಫುಟವೂ ಸರ್ವಸಂವೇದ್ಯವೂ ಆದ ಭೇದಗಳುಳ್ಳ ಕೆಲವು ಗದ್ಯಗತಿಗಳನ್ನು ಅವನು ಇಲ್ಲಿ ನಿರೂಪಿಸಿದ್ದಾಗಿದೆ.[36] ವಸ್ತುತಃ ಗದ್ಯದ ಗತಿಸ್ವರೂಪಗಳು ಅಗಣಿತ;

---

36. {ಭೋಜರಾಜನ ಗದ್ಯಗತಿ} ಭೋಜರಾಜನು ಚಂಪೂಪ್ರಬಂಧದ ಗುಣಾತಿಶಯವನ್ನು ವರ್ಣಿಸುವ ಸಂದರ್ಭದಲ್ಲಿ (ಚಂಪೂರಾಮಾಯಣ – ಪೀಠಿಕಾಭಾಗ, ಪದ್ಯ–೪) ಹೀಗೆ ಹೇಳುತ್ತಾನೆ:

> ಗದ್ಯಾನುಬಂಧರಸಮಿಶ್ರಿತಪದ್ಯಸೂಕ್ತಿಃ ।
> ಹೃದ್ಯಾ ಹಿ ವಾದ್ಯಕಲಯಾ ಕಲಿತೇವ ಗೀತಿಃ ॥
> ತಸ್ಮಾದ್ದಧಾತು ಕವಿಮಾರ್ಗಜುಷಾಂ ಸುಖಾಯ ।
> ಚಂಪೂಪ್ರಬಂಧರಚನಾಂ ರಸನಾ ಮದೀಯಾ ॥

ಇಲ್ಲಿ ಅವನು ಪದ್ಯವನ್ನು 'ಗೀತಿ' ಎಂದರೆ ಗಾನ(=ಹಾಡುವಿಕೆ)ಕ್ಕೂ, ಗದ್ಯವನ್ನು (ಮೃದಂಗಾದಿ) ವಾದ್ಯವಾದನಕ್ಕೂ ಹೋಲಿಸುತ್ತಾನೆ. ಆದರೆ, ಪದ್ಯವನ್ನು ಗಾನಕ್ಕೆ ಹೋಲಿಸಿ–ದುದರಲ್ಲಿ ಕಾಣುವಷ್ಟು ಔಚಿತ್ಯವು, ಗದ್ಯವನ್ನು ವಾದನಕ್ಕೆ ಹೋಲಿಸಿದುದರಲ್ಲಿ –ಸಕೃದ್ದರ್ಶನಕ್ಕೆ – ಕಾಣುವುದಿಲ್ಲ. ಸಂಗೀತದೃಷ್ಟಿಯಿಂದ ಹೇಳುವುದಾದರೆ 'ಗಾನ'ದಲ್ಲಿ 'ನಾದ'ವು ಗತಿಗಿಂತ ಮುಖ್ಯ; ಮೃದಂಗಾದಿಗಳ ವಾದನದಲ್ಲಿ ನಾದಕ್ಕಿಂತ 'ಗತಿ' (=ಗತ್ತು) ಮುಖ್ಯ. ಗದ್ಯದಲ್ಲಿ ಅಂತಹ 'ಗತಿ' ಸಾಧಾರಣವಾಗಿ ಇರುವುದಿಲ್ಲ. ಹಾಗಾದರೆ ಈ ಉಪಮೆಗೆ ಔಚಿತ್ಯವೆಲ್ಲಿ?–

ಮತ್ತು ಗದ್ಯದಲ್ಲಿ ಶ್ರವ್ಯತ್ವಸಾಧಕವಾದ ಗತಿ ಎಲ್ಲಿ ಇದೆ ಎಲ್ಲಿ ಇಲ್ಲ ಎಂಬುದನ್ನು ಸರ್ವತ್ರ ಸರ್ವಸಂಮತವಾಗಿ ಹೇಳಬರುವಂತೆಯೂ ಇಲ್ಲ. ಸಂವೇದನನಿಪುಣವೂ ಸುಸಂಸ್ಕೃತವೂ ಆದ 'ಗತಿಪ್ರತಿಜ್ಞೆ'ಯೇ ಅದಕ್ಕೆ ಪ್ರಮಾಣ. ಮತ್ತು – 'ಗತಿ' ಎಂಬ ಪದದ ಮೂಲಾರ್ಥವನ್ನವಲಂಬಿಸಿ, ಅದು ವಾಙ್ಮಯದಲ್ಲಿ ಸರ್ವತ್ರ ಇರುವುದೆಂದು ವಾದಿಸಕೂಡದು. ಏಕೆಂದರೆ 'ಗತಿ' ಎಂಬುದರ ಅರ್ಥದ ವ್ಯಾಪ್ತಿ ಇಲ್ಲಿ ಸಂಕುಚಿತವಾಗಿದ್ದು, ಅದು ಒಂದು 'ಸಂಜ್ಞೆ' – ಪಾರಿಭಾಷಿಕ ಸಂಜ್ಞೆ – ಯಾಗಿರುತ್ತದೆಂಬುದನ್ನು ಮರೆಯಬಾರದು.]

{ಗತಿಸ್ರೋತಸ್ಸು ಮತ್ತು ಪದ್ಯ}

ಹಿಂದೆಯೇ ವಿವರಿಸಿದಂತೆ – ಶಬ್ದವೂ ಛಂದಸ್ಸೂ ವಾಸ್ತವಿಕವಾಗಿ ಅವಿಭಾಜ್ಯವಾದರೂ ಅವೆರಡನ್ನು ಬೇರೆಬೇರಾಗಿ ಭಾವಿಸುವುದು ಶಕ್ಯವಾಗುತ್ತದೆ. ಆದರೆ 'ಗತಿ'ಯನ್ನು ಛಂದೋರಹಿತವಾಗಿ ಭಾವಿಸುವುದೂ ಅಶಕ್ಯ. ಛಂದಸ್ ಮತ್ತು ಗತಿ – ಇವುಗಳ ಸಂಬಂಧವನ್ನು, ಸಂಗೀತದ ಸ್ವರಾರೋಹಾವರೋಹ ಮತ್ತು ರಾಗ – ಇವುಗಳ ಸಂಬಂಧಕ್ಕೆ ಹೋಲಿಸಬಹುದು. ಸ್ವರಾರೋಹಾವ–ರೋಹಮಾತ್ರದಿಂದ ಅದೊಂದು 'ರಾಗ'ವೆನಿಸುವುದಿಲ್ಲ; ಆಕರ್ಷಕತ್ವವಿರುವ ಒಂದು ವ್ಯವಸ್ಥೆ ಆ ಸ್ವರಾರೋಹಾವರೋಹಗಳಲ್ಲಿದ್ದರೆ ಮಾತ್ರ ಅದು 'ರಾಗ'ವೆನ್ನಿಸಿ–ಕೊಳ್ಳುತ್ತದೆ. ಇದರಂತೆಯೇ – ವಾಙ್ಮಯವನ್ನೆಲ್ಲ ವ್ಯಾಪಿಸಿರುವ 'ಛಂದಸ್ಸಿ'ನಲ್ಲಿ ಸರ್ವತ್ರ 'ಗತಿ' ಉನ್ಮೀಲಿತವಾಗುವುದಿಲ್ಲ. ಛಂದೋವಿನ್ಯಾಸದಲ್ಲಿ ಒಂದು ಆಕರ್ಷಕತ್ವವಿದ್ದರೆ ಮಾತ್ರ ಅಲ್ಲಿ 'ಗತಿ' ಪ್ರಕಟವಾಗುತ್ತದೆ. ಇಂತಹ

---

ಶಾರ್ಙ್ಗದೇವನು ನಿರೂಪಿಸಿದಂತಹ ಗದ್ಯಗತಿಗಳ ಸ್ವರೂಪವನ್ನು ಭಾವಿಸಿದಾಗ ಮಾತ್ರ ನಾವು ಅಲ್ಲಿ ಔಚಿತ್ಯವನ್ನು ಕಾಣಬಹುದು. ಅಂತಹ ಗದ್ಯವನ್ನೇ ದೃಷ್ಟಿಯಲ್ಲಿಟ್ಟುಕೊಂಡು ಭೋಜರಾಜನು ಹೇಳಿದ ಮಾತು ಇದು ಎಂದು ತಿಳಿಯಬೇಕು. ಅವನ ಆ ಕಾವ್ಯದಲ್ಲಿ ಕಂಡುಬರುವ ಕೆಲವು ಗದ್ಯಭಾಗಗಳನ್ನು ನೋಡಿದರೆ ಇದು ಇನ್ನಷ್ಟು ವಿಶದವಾಗದಿರದು. ಉದಾ: 'ಏಷಮೃಗಾಂಕೋಪಿ....' ಎಂದು ತೊಡಗುವ ಗದ್ಯದ ಒಂದು ಅಂಶವನ್ನು ನೋಡಿರಿ: "ಸಸಂಭ್ರಮಂ ನಮಜ್ಜನ ಪರಿವೃತೇ ಮಜ್ಜನಗೃಹಾಭಿಮುಖೇ ದಶಮುಖೇ, ತತ್ರತ್ಯ ವಿಚಿತ್ರತರ ಶಾತಕುಂಭ ಸ್ತಂಭಾಗ್ರ ಪ್ರತ್ಯಗ್ರ ಪ್ರತ್ಯುಪ್ತ ಸ್ಫಟಿಕಶಿಲಾ ಸಾಲಭಂಜಿಕಾಪುಂಜ ಕರತಲಕಲಿತ ನಿಜೋಪಲಮಯ ಕಲಶಮುಖಾತ್...." (ಬಾಲಕಾಂಡ–೩೭). ಕರ್ಣಾಟಕ ಸಂಗೀತದಲ್ಲಿ ನಾವು ಇಂದೂ ಕೇಳಬಹುದಾದ ಮೃದಂಗಾದಿ ತಾಳವಾದ್ಯಗಳ 'ಗತ್ತು'ಗಳಿಗೂ ಈ ಗದ್ಯಭಾಗದ 'ಗತಿ'ಗೂ ಇರುವ ಹೋಲಿಕೆಗೆ ವಿವರಣೆ ಬೇಕೇ? [ಆದರೆ, ಮೃದಂಗಾದಿಗಳ ಗತ್ತುಗಳಲ್ಲಿ 'ಧ್ವನಿಗುಣತಾರತಮ್ಯ' ಅಥವಾ 'ಧ್ವನಿಬಲತಾರತಮ್ಯ'ವೂ ಸೇರಿಕೊಳ್ಳುತ್ತದೆ. ಇದರಿಂದ ಈ 'ಗತ್ತು' ಎಂಬುದು ಪಾಶ್ಚಾತ್ಯರ Rhythmನ ಲಕ್ಷಣಗಳನ್ನೆಲ್ಲ ಪಡೆದಂತಾ–ಗುತ್ತದೆ. Rhythm ಎಂದರೆ 'ಗತ್ತು' (ಅಥವಾ 'ಗತ್') ಎಂದು ನಾವು ಹೇಳುವ ಗತಿಸ್ವರೂಪ; 'ಲಯ'ವಲ್ಲ – ಇದು ನಿಶ್ಚಯ.]

"ಗತಿಸ್ರೋತ"ಸ್ಸನ್ನು ಒಂದು ಪರಿಮಿತಿಗೆ ಒಳಪಡಿಸಿದಲ್ಲಿ, ಅದು (ಪದ್ಯದ) ಒಂದು 'ಪಾದ'ವೆಂದಾಗುತ್ತದೆ. 'ಪಾದ'ದ (ಪೂರ್ಣಾಪೂರ್ಣ) ಪುನರಾವರ್ತನದಿಂದ ಪದ್ಯವು ಅವಿರ್ಭವಿಸುತ್ತದೆ.

{ಗತಿವಿಷಯಕವಾದ ಮೂರು ಪಿಂಗಲಸೂತ್ರಗಳು}

'ಪದ್ಯ'ವೆಂದು ಕರೆಯಲ್ಪಡುವ ಛಂದೋಬಂಧಗಳ ಸಮಗ್ರಲಕ್ಷಣಗಳನ್ನು[37] ಛಂದೋದ್ರವ್ಯಾವಲಂಬಿಯಾದ ವಿಧಾನದಿಂದ ನಮ್ಮ ಶಾಸ್ತ್ರಕಾರರು ನಿರೂಪಿಸಿರುವ ಕಾರಣ, ಆಯಾ ಪದ್ಯಸ್ವರೂಪವನ್ನು ತಿಳಿಯುವುದಕ್ಕೆ ಅಲ್ಲಿ 'ಗತಿ'ವಿಚಾರವು ಅನವಶ್ಯವೆನಿಸುತ್ತದೆ. ಶಾಸ್ತ್ರೋಕ್ತವಾಗಿರುವ ಗುರುಲಘುಸ್ಥಿರವಾದ 'ವೃತ್ತ'ಗಳನ್ನು ಮತ್ತು (ವಿಶುದ್ಧ) 'ಮಾತ್ರಾಬಂಧ'ಗಳನ್ನು ಯಥಾಕ್ಷರ ಗುರುಲಘುವಾಗಿ ಪಠಿಸುವಾಗ ಆ ಪದ್ಯಗಳ 'ಗತಿ' ಅಲ್ಲಿ ತಾನಾಗಿ ಉನ್ಮೀಲಿತವಾಗುತ್ತದೆ.[38] ಗತಿವಿಹೀನವಾದ ಛಂದೋರೂಪಕ್ಕೆ ಅಲ್ಲಿ ಆಸ್ಪದವೇ ಇಲ್ಲ. ಆದುದರಿಂದ ಅಲ್ಲಿ ಗತಿಸ್ವರೂಪ ನಿರೂಪಣವು ಅನಪೇಕ್ಷಿತವಾಗುತ್ತದೆ. ಅನಪೇಕ್ಷಿತವಾದುದನ್ನು ಹೇಳುವುದು ಶಾಸ್ತ್ರ ಸಂಪ್ರದಾಯದ ಕಟ್ಟುನಿಟ್ಟಿನ ದೃಷ್ಟಿಯಿಂದ ಅಪ್ರಸ್ತುತವೆನಿಸಬಹುದಾಗುತ್ತದೆ. ಹೀಗಿದ್ದರೂ – ಪಿಂಗಳನ ಛಂದಃಶಾಸ್ತ್ರದ ಮೂರು ಸೂತ್ರಗಳು 'ವೃತ್ತ'ಗಳ ಗತಿಯ ಕುರಿತಾಗಿಯೇ ಹೇಳಲ್ಪಟ್ಟವುಗಳೆಂದು ನನಗೆ ಕಂಡು ಬಂದಿದೆ. ಅದನ್ನಿಲ್ಲಿ ಯಥಾಮತಿಯಾಗಿ ನಿವೇದಿಸುವ ಪ್ರಯತ್ನಮಾಡುತ್ತೇನೆ.

ಆ ಗ್ರಂಥದ ಪಂಚಮಾಧ್ಯಾಯದ ಆರಂಭದ ಒಂಬತ್ತು ಸೂತ್ರಗಳು ಹೀಗಿವೆ:

೧. ವೃತ್ತಂ

೨. ಸಮಮರ್ಧಸಮಂ ವಿಷಮಂ ಚ

---

37. ವೈದಿಕ ಛಂದೋಬಂಧಗಳನ್ನೂ ವೈದಿಕಜಾತಿಯ ಲೌಕಿಕಬಂಧವಾದ 'ಅನುಷ್ಟುಪ್ ಶ್ಲೋಕ'ವನ್ನೂ ಹೊರತುಪಡಿಸಿ ಹೇಳಿದ ಮಾತು ಇದು. ವೈದಿಕಬಂಧಗಳ ಮತ್ತು'ಶ್ಲೋಕ'ದ ಗತಿಯ ವಿಚಾರವು ಈ ನಿಬಂಧದಲ್ಲಿ ಮುಂದೆ ಬರಲಿದೆ. {ಒಂಬತ್ತನೆಯ ಪರಿಚ್ಛೇದವನ್ನು ನೋಡಬಹುದು – ಸಂ.}

38. ಮಾತ್ರಾನಿಯಮಬದ್ಧವಲ್ಲದ 'ತ್ರಿಮೂರ್ತಿಗಣ'ಬಂಧಗಳನ್ನು ಯಥಾಕ್ಷರಗುರುಲಘುವಾಗಿ ಪಠಿಸುವಾಗ ಅವುಗಳ ಗತಿ ಉನ್ಮೀಲಿತವಾಗುವುದಿಲ್ಲವಾದುದರಿಂದ, ನಾಗವರ್ಮನಾಗಲಿ ಜಯಕೀರ್ತಿಯಾಗಲಿ ಮಾಡಿರುವ ಆ ಛಂದೋಬಂಧಗಳ ಲಕ್ಷಣನಿರೂಪಣೆ ಅಪರ್ಯಾಪ್ತವಾಗಿರುತ್ತದೆ. "ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ" ಎಂಬ ಹೆಸರಲ್ಲಿ ಪ್ರಕಟವಾಗಿರುವ ನನ್ನದೊಂದು ಛಂದೋನಿಬಂಧದಲ್ಲಿ, ಮತ್ತು ಈ ನಿಬಂಧದ ಆದಿಭಾಗದಲ್ಲಿ ಕೊಟ್ಟಿರುವ ಟಿಪ್ಪಣಿ 1ರಲ್ಲಿ ಸೂಚಿಸಲ್ಪಟ್ಟಿರುವ "ಕನ್ನಡ ಛಂದಸ್ಸು" ಎಂಬ ನನ್ನ ಇನ್ನೊಂದು ನಿಬಂಧದಲ್ಲಿ ಆ ಛಂದೋಬಂಧಗಳ ಸ್ವಭಾವವನ್ನು ಕೂಲಂಕಷವಾಗಿ ಪರಾಮರ್ಶಿಸಲಾಗಿದೆ. {ಇವೆಲ್ಲವೂ ಪ್ರಸ್ತುತ ಸಂಪುಟದ 'ಕನ್ನಡಛಂದೋವಿಭಾಗ'ದಲ್ಲಿ ಸೇರಿವೆ. ಅಲ್ಲಿ ಪರಿಶೀಲಿಸಬಹುದು– ಸಂ.}

೩. ಸಮಂ ತಾವತ್ಕೃತ್ವಃ ಕೃತಮರ್ಧಸಮಂ
೪. ವಿಷಮಂ ಚ
೫. ರಾಶ್ಯೂನಂ
೬. ಗ್ಲಿತಿ ಸಮಾನೀ
೭. ಲ್ಗಿತಿ ಪ್ರಮಾಣೀ
೮. ವಿತಾನಮನ್ಯತ್
೯. ಪಾದಸ್ಯಾನುಷ್ಟುಬ್ವಕ್ತ್ರಂ

ಇವುಗಳೊಳಗೆ ಮೊದಲನೆಯ ಸೂತ್ರವು, ಎತ್ತಿಕೊಂಡ ವಿಷಯದ ವ್ಯಾಪ್ತಿಯನ್ನು ತಿಳಿಸುವ "ಶೀರ್ಷಿಕೆ". ಎರಡನೆಯ ಸೂತ್ರದಲ್ಲಿ ಸಮ, ಅರ್ಧಸಮ, ವಿಷಮ ಎಂದು ವೃತ್ತವು ಮೂರು ವಿಧವೆಂಬುದನ್ನು ಹೇಳಲಾಗಿದೆ. ೩, ೪, ೫ ಈ ಮೂರು ಸೂತ್ರಗಳು ವೃತ್ತಸಂಖ್ಯಾವಿಷಯಕವಾಗಿವೆ. ಒಂಬತ್ತನೆಯ ಸೂತ್ರವು 'ಅನುಷ್ಟುಪ್ ಶ್ಲೋಕ'ದ ಬೇರೆಬೇರೆ ರೂಪಗಳ ಲಕ್ಷಣನಿರೂಪಣೆಯನ್ನು ಆರಂಭಿಸುತ್ತದೆ. ನಮಗಿಲ್ಲಿ ಪ್ರಸ್ತುತವಾದವುಗಳು ೬, ೭, ೮ ಎಂಬೀ ಮೂರು ಸೂತ್ರಗಳು ಮಾತ್ರವಾದರೂ, ಸೂತ್ರರೂಪದ ಶಾಸ್ತ್ರಗ್ರಂಥಗಳಲ್ಲಿ ಸೂತ್ರಾರ್ಥ ನಿರ್ಣಯಕ್ಕೆ ಪ್ರಕರಣ (= context, ಸಂದರ್ಭ) ಪರಿಜ್ಞಾನವು ಬಹಳ ಮುಖ್ಯ-ವಾದೊಂದು ಅವಶ್ಯಕತೆಯಾಗಿರುವುದರಿಂದ, ಪ್ರಕರಣಪರಿಚಯಕ್ಕಾಗಿ ಹಿಂದು ಮುಂದಿನ ಆರು ಸೂತ್ರಗಳನ್ನೂ ಇಲ್ಲಿ ಉದಾಹರಿಸಿದ್ದಾಗಿದೆ. ಪ್ರಸ್ತುತವಾದ ಆ ಮೂರು ಸೂತ್ರಗಳ ಅರ್ಥವೇನೆಂದರೆ–

"ಗ್ಲಿತಿ ಸಮಾನೀ" – ಗುರುಲಘುಗಳು ಒಂದಾದಮೇಲೊಂದು ಅನುಕ್ರಮವಾಗಿ ಬರುವವಾದರೆ, ಅದು 'ಸಮಾನೀ'.

"ಲ್ಗಿತಿ ಪ್ರಮಾಣೀ" – ಲಘುಗುರುಗಳು ಒಂದಾದಮೇಲೊಂದು ಅನುಕ್ರಮವಾಗಿ ಬರುವವಾದರೆ, ಅದು 'ಪ್ರಮಾಣೀ'.

"ವಿತಾನಮನ್ಯತ್" – ಗುರುಲಘುಗಳು 'ಸಮಾನಿ'ಯಲ್ಲಿರುವಂತಾಗಲಿ, 'ಪ್ರಮಾಣಿ'ಯಲ್ಲಿರುವಂತಾಗಲಿ ಇಲ್ಲದೆ ಬೇರೆ ರೀತಿಯಲ್ಲಿರುವವಾದರೆ, ಅದು 'ವಿತಾನ'.

ಈ ಮೂರು ಸೂತ್ರಗಳ ಅನಂತರದ "ಪಾದಸ್ಯಾನುಷ್ಟುಬ್ವಕ್ತ್ರಂ" ಎಂಬ ಸೂತ್ರವು ಗುರುಲಘುಸ್ಥಿರತೆಯಿಲ್ಲದ 'ಅನುಷ್ಟುಪ್ ಶ್ಲೋಕ'ದ ಪ್ರಕಾರಗಳಿಗೆ ಸಂಬಂಧಿಸಿ ಪ್ರೋಕ್ತವಾದುದು. ಪ್ರಸ್ತುತವಾದ ಮೂರು ಸೂತ್ರಗಳು ಗುರುಲಘು ಸ್ಥಿರವಾದ ಛಂದೋರೂಪಗಳಿಗೆ ಮಾತ್ರ ಅನ್ವಯಿಸತಕ್ಕವೆಂಬುದು ಸುಸ್ಪಷ್ಟವೂ ಪಿಂಗಲೋತ್ತರಕಾಲದ ಎಲ್ಲಾ ಛಂದಃಶಾಸ್ತ್ರಗ್ರಂಥಗಳಿಗೆ ಸಂಮತವೂ ಆಗಿರುತ್ತದೆ. ಹೀಗಿರುವಲ್ಲಿ, ಈ ಮೂರು ಸೂತ್ರಗಳಿಗೂ ಅನುಷ್ಟಪ್ ಶ್ಲೋಕವರ್ಗಕ್ಕೂ ಸಂಬಂಧವೇನೂ ಇರುವಂತಿಲ್ಲ.

ಆದರೂ – ಇವು ಗುರುಲಘುಸ್ಥಿರವಾದ ಮೂರು ವೃತ್ತಗಳ ಲಕ್ಷಣವನ್ನು ನಿರೂಪಿಸುವ ಸೂತ್ರಗಳೆಂದು ಭಾವಿಸುವುದಕ್ಕೆ ಇಲ್ಲಿ ಆಸ್ಪದವಿಲ್ಲ. ಏಕೆಂದರೆ, ವೃತ್ತಭೇದಗಳ ಲಕ್ಷಣನಿರೂಪಣೆಗೆ ಅವಶ್ಯವಾದ ಅಕ್ಷರಸಂಖ್ಯಾಪರಿಮಿತಿಯ ಪ್ರಸ್ತಾವವೇ ಇವುಗಳಲ್ಲಿಲ್ಲ. ಅಷ್ಟು ಮಾತ್ರವಲ್ಲ, ನಿಶ್ಚಿತವಾದೊಂದು ಅಕ್ಷರಸಂಖ್ಯೆಯ (ಸಮ)ವೃತ್ತವಿಶೇಷಗಳ ಲಕ್ಷಣನಿರೂಪಣೆಯನ್ನು ಈ ಸೂತ್ರಗಳು ಮಾಡುವವು-ಗಳಾಗಿರುತ್ತಿದ್ದರೆ, ಈ ಸಂದರ್ಭದಲ್ಲಿ ಇವು ಕಾಣಿಸಿಕೊಳ್ಳದೆ, ಯಥಾಕ್ಷರ-ಸಂಖ್ಯಾನುಕ್ರಮವಾಗಿ (ಸಮ)ವೃತ್ತಲಕ್ಷಣಗಳನ್ನು ನಿರೂಪಿಸುವ ಮುಂದಿನ ಅಧ್ಯಾಯಗಳಲ್ಲಿ ಕಾಣಿಸಿಕೊಳ್ಳುತ್ತಿದ್ದುವು; ಮತ್ತು ಪಿಂಗಳನಿಂದಲೇ ನಿರ್ಮಿತವಾ-ದವುಗಳೆಂದು ಪುರಾತನರು ಹೇಳಿರುವ,[39] ಹಾಗೂ ಏತದ್‌ಗ್ರಂಥದ ಆರಂಭ-ದಲ್ಲಿಯೇ ಪ್ರೋಕ್ತವಾಗಿದ್ದು ಗ್ರಂಥದ ಬೇರೆಡೆಗಳಲ್ಲೆಲ್ಲ ವೃತ್ತಲಕ್ಷಣ ನಿರೂಪಣೆಯಲ್ಲಿ ನಿರಪವಾದವಾಗಿ ಪ್ರಯುಕ್ತವಾಗಿರುವ 'ಮಯರಸತಜಭನ' ವಿಧಾನದಿಂದಲೇ ನಿರೂಪಿತವಾಗುತ್ತಿದ್ದುವು ಹೊರತು, ಕೇವಲ ಗುರುಲಘುಸಂಜ್ಞೆಗಳಿಂದಲ್ಲ.[40] ಆದುದರಿಂದ – ಪಿಂಗಲೋತ್ತರಕಾಲದ ಜಯದೇವಾದಿ ಛಂದಃಶಾಸ್ತ್ರಕಾರರು ಭಾವಿಸಿರುವಂತೆ – ಈ ಮೂರು ಸೂತ್ರಗಳು, ಮೂರು ಸಮವೃತ್ತಗಳ ಲಕ್ಷಣ-ವನ್ನು ಹೇಳುವವುಗಳೆನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಪ್ರಕ್ರಮಾನು-

---

39. ಉದಾ: ಮಯರಸತಜಭನಲಗಸಂ-
ಮಿತಂ ಭ್ರಮತಿ ವಾಙ್ಮಯಂ ಜಗತಿ ಯಸ್ಯ ।
ಸ ಜಯತಿ ಪಿಂಗಲನಾಗಃ
ಶಿವಪ್ರಸಾದಾತ್ ವಿಶುದ್ಧಮತಿಃ ॥ (ಹಲಾಯುಧ)

(ಪಿಂಗಲಛಂದಃಶಾಸ್ತ್ರವ್ಯಾಖ್ಯಾನದ ಪೀಠಿಕೆಯ ೫ನೇ ಪದ್ಯ) [ಪಿಂಗಳನಿಗಿಂತ ಮೊದಲು 'ಮಯರಸತಜಭನ'ಗಳ ಪ್ರಯೋಗವಿದ್ದಂತಿಲ್ಲವೆಂಬ ಅಭಿನವಗುಪ್ತನ ವಾಕ್ಯವು ಡಿ. ವಿ. ಕೆ. ಮೂರ್ತಿಯವರಿಂದ ಪ್ರಕಾಶಿತವಾದ 'ಛಂದೋಂಬುಧಿ'ಯ ಪೀಠಿಕೆಯ ಪುಟ xiiiರಲ್ಲಿ ಉದ್ಧೃತವಾಗಿದ್ದು, ಅದು ಹೀಗಿದೆ: "ಪಿಂಗಲಾತ್ ಪೂರ್ವಂ ಛಂದೋಲಕ್ಷಣಂ ಗುರುಲಘುಸಂಖ್ಯಾನೇನೈವ ವ್ಯವಹೃತಮಿತಿ ದ್ಯೋತ್ಯತೇ, ನತು ತ್ರಿಕೈರಿತಿ."]

40. {**ಪಿಂಗಲ ಛಂದಃಶಾಸ್ತ್ರದಲ್ಲಿ ಪ್ರಕ್ಷಿಪ್ತವೃತ್ತ**} ಪಿಂಗಲಛಂದಃಶಾಸ್ತ್ರದ ೭ನೆಯ ಅಧ್ಯಾಯದ ೨೩ನೆಯ ಸೂತ್ರವೊಂದು ಈ ನಿಯಮಕ್ಕೆ ಅಪವಾದರೂಪವಾಗಿ ಅಲ್ಲಿ ಗೋಚರಿಸುತ್ತದೆ. ಪಾದಕ್ಕೆ ೨೦ ಅಕ್ಷರಗಳಿರುವ ಕೃತಿಚ್ಛಂದೋವರ್ಗದ ಒಂದು ವೃತ್ತದ ಲಕ್ಷಣವು ಮಯರಸಾದಿ ವಿಧಾನದಲ್ಲಿಲ್ಲದೆ, "ಗ್ಲಿತಿವೃತ್ತಂ" ಎಂದು ಇದೆ. ಆದರೆ ಈ ವೃತ್ತಕ್ಕೆ ಸ್ವತಂತ್ರವಾದ ಹೆಸರೇ ಇಲ್ಲ! ವ್ಯಾಖ್ಯಾನಕಾರನಾದ ಹಲಾಯುಧನು ಈ ವೃತ್ತದ ಹೆಸರೇ 'ವೃತ್ತ' ('ವೃತ್ತಂ' ನಾಮ ವೃತ್ತಂ) ಎನ್ನುತ್ತಾನೆ! ಇಷ್ಟು ಮಾತ್ರವಲ್ಲ, ಈ ವೃತ್ತದ ಪಾದಗಳ ಕೊನೆಯ ಅಕ್ಷರವು 'ಗ್ಲಿತಿ' ಎಂಬ ಲಕ್ಷಣಾನುಸಾರವಾಗಿ 'ಶುದ್ಧಲಘು'ವಾಗಿರಬೇಕಾಗುತ್ತದೆ; ಎಂದರೆ, ಪಾದಾಂತ್ಯ-ವಾದುದರಿಂದ ಗುರುವಾಗಿ ಮಾರ್ಪಡುವ ಲಘುವಲ್ಲ. ಹೀಗೆ ಕೊನೆಗೊಳ್ಳುವ ಪಾದಗಳ ಸಮವೃತ್ತ ಯಾವುದೂ ಆ ಗ್ರಂಥದಲ್ಲಿ ಬೇರೊಂದು ಇಲ್ಲವೇ ಇಲ್ಲ. ಈ ಕಾರಣಗಳಿಂದ ಇದು ಪ್ರಕ್ಷಿಪ್ತವೆಂಬುದು ನಿಶ್ಚಯ.

ಸಾರವಾಗಿ, ಈ ಮೂರು ಸೂತ್ರಗಳು ಗುರುಲಘುಸ್ಥಿರವಾದ ಪದ್ಯವರ್ಗಕ್ಕೆಲ್ಲ ಅನ್ವಯಿಸುವ ಲಕ್ಷಣಗಳನ್ನು ಹೇಳತಕ್ಕವುಗಳಾಗಿರುವುದರಿಂದ, ಇಲ್ಲಿ ಕೆಲವು ಸಮವೃತ್ತಗಳ ಲಕ್ಷಣಗಳನ್ನು (ಪ್ರಕ್ರಮಭಂಗಮಾಡಿ) ಪಿಂಗಳನು ತುರುಕಿಸಿಬಿಟ್ಟಿದ್ದಾ-ನೆಂದು ಹೇಳುವುದು ಸರ್ವಥಾ ಯುಕ್ತಿಯುಕ್ತವೆಂದಾಗಲಾರದು.[41] ಹಾಗಾದರೆ ಈ ಮೂರು ಸೂತ್ರಗಳು ಪ್ರತಿಪಾದಿಸುವುದೇನನ್ನು?

ಇಲ್ಲಿ ಪಿಂಗಳನಿಂದ ಪ್ರಯೋಗಿಸಲ್ಪಟ್ಟಿರುವ 'ವಿತಾನ' ಎಂಬ ಪದವು ಈ ಸಮಸ್ಯೆಯನ್ನು ಬಗೆಹರಿಸಬಲ್ಲುದಾಗಿದೆ; 'ವಿತಾನ' ಎಂದರೆ 'ತಾನರಹಿತ-ವಾದುದು' ಅಥವಾ 'ತಾನಕ್ಕೆ ಪ್ರತಿಯೋಗಿಯಾದುದು' ಎಂಬರ್ಥವಾಗುತ್ತದೆ. 'ತಾನ'ವೆಂದರೇನು? 'ತಾನ' ಎಂಬ ಶಬ್ದದ ಮೂಲಾರ್ಥವು 'ನೂಲು' ಎಂದಾಗಿದ್ದು 'ನೂಲಿನಂತೆ ಏಕರೂಪವಾಗಿ, ಒಂದೇ ಪ್ರಕಾರವಾಗಿ, ಕೇಳುವ ದೀರ್ಘ ಧ್ವನಿ'' (monotonous tone-Apte) ಎಂಬರ್ಥದಲ್ಲಿ ಹಿಂದಿನ ಕಾಲದಲ್ಲಿ ರೂಢವಾಗಿತ್ತು.[42] ಇದರಿಂದ 'ವಿತಾನ' ಎಂಬುದಕ್ಕೆ ''ಏಕಪ್ರಕಾರವಾಗಿ

---

41. ಪಿಂಗಳನ ಮತ್ತು ಜಯದೇವನ ಗ್ರಂಥಗಳನ್ನು ನೋಡಿದ್ದ ಜಯಕೀರ್ತಿಯೂ ಹೇಮಚಂದ್ರನೂ, 'ಸಮಾನೀ-ಪ್ರಮಾಣೀ ವಿತಾನ' ಎಂಬವುಗಳನ್ನು – ಜಯದೇವನ ಹಾಗೆಯೇ – ಅಷ್ಟಾಕ್ಷರಪಾದದ ಸಮವೃತ್ತವಿಶೇಷಗಳನ್ನಾಗಿ ಸ್ವೀಕರಿಸಿರುವರಾದರೂ, – ಜಯದೇವನು ಮಾಡಿರುವ ಹಾಗೆ, ವೃತ್ತಸಾಧಾರಣ ಲಕ್ಷಣಗಳ ನಿರೂಪಣೆಯ ಮತ್ತು ಅನುಷ್ಟುಪ್‌ಶ್ಲೋಕದ ಲಕ್ಷಣನಿರೂಪಣೆಯ ಎಡೆಯಲ್ಲಿ ಅವುಗಳನ್ನಿಡದೆ – ಅಷ್ಟಾಕ್ಷರಪಾದದ ಸಮವೃತ್ತವರ್ಗದ ಲಕ್ಷಣನಿರೂಪಣ ಸಂದರ್ಭದಲ್ಲಿ ಸೇರಿಸಿದ್ದಾರೆ. ಇದರಿಂದ, ಅವರಿಗೆ ಜಯದೇವನ ಪ್ರಕ್ರಮವು ಅನುಚಿತವಾಗಿ ಕಂಡುಬಂದಿತ್ತೆಂಬುದು ಸುಸ್ಪಷ್ಟವಾಗುತ್ತದೆ. ಮತ್ತು – ಪಿಂಗಲಗ್ರಂಥದಲ್ಲಿ ಆ ಮೂರು ಸೂತ್ರಗಳು ಅಲ್ಲಿ ಏಕೆ ಬಂದವು. ಅವುಗಳ ಆಶಯವೇನು – ಎಂಬುದು ಜಯಕೀರ್ತಿ ಹೇಮಚಂದ್ರರನ್ನು ಯೋಚನೆಗೀಡುಮಾಡಿತ್ತೆಂಬುದೂ ಊಹ್ಯವಾಗುತ್ತದೆ.

42. {ತಾನ ಶಬ್ದಾರ್ಥಕ್ಕೆ ಉದಾಹರಣೆಗಳು}

ಉದಾ: ಯಃ ಪೂರಯನ್ ಕೀಚಕರಂಧ್ರಭಾಗಾನ್ ।
ದರೀಮುಖೋತ್ಥೇನ ಸಮೀರಣೇನ ॥
ಉದ್ಗಾಸ್ಯತಾಮಿಚ್ಛತಿ ಕಿನ್ನರಾಣಾಂ ।
ತಾನಪ್ರದಾಯಿತ್ವಮಿವೋಪಗಂತುಂ ॥ (ಕುಮಾರಸಂಭವ ೧-೮)

ಎಳೆಯ ಬಿದಿರಲ್ಲಿ ಕೀಟಗಳು ತೂತು ಕೊರೆಯುವುದುಂಟು. ಗಿಡ ಬೆಳೆದಾಗ ಆ ತೂತುಗಳು ಮುಚ್ಚಿ ಹೋಗುವುದಿಲ್ಲ. ಅಂತಹ ಬಿದಿರಿಗೆ 'ಕೀಚಕ' ಎಂದು ಹೆಸರು. ಬೀಸುವ ಗಾಳಿ ಆ ತೂತುಗಳೊಳಕ್ಕೆ ರಭಸದಲ್ಲಿ ನುಗ್ಗಿದಾಗ, ಸಿಳ್ಳುಹಾಕಿದಂತಹ ದೀರ್ಘಧ್ವನಿ ಕೇಳಿಬರುತ್ತದೆ. ಈ ಧ್ವನಿಯ ಮೂಲಕ ಹಿಮಾಲಯ ಪರ್ವತವು ಕಿನ್ನರರ ಹಾಡಿಗೆ 'ತಾನ'ವನ್ನೊದಗಿಸುವಂತಿದೆ ಎಂದು ಇಲ್ಲಿ ಕಾಳಿದಾಸನು ಉತ್ಪ್ರೇಕ್ಷಿಸಿದ್ದಾನೆ. (ಮೊನ್ನೆ ಮೊನ್ನೆಯವರೆಗೂ 'ಯಕ್ಷಗಾನ'ದ ಹಾಡುಗಾರಿಕೆಯೊಡನೆ ಊದುತ್ತಿದ್ದ 'ಶ್ರುತಿಬುರುಡೆ'ಯನ್ನು ಈ ವರ್ಣನೆ ನೆನಪಿಗೆ ತರುತ್ತದೆ.) ಇಂದು ರೂಢವಾಗಿರುವ ಸಂಗೀತಪರಿಭಾಷೆಯಲ್ಲಿ, 'ತಾನ'

ಧ್ವನಿಸದಿರುವಂತಹದು" (=ತಾನವಿಲ್ಲದುದು) ಎಂಬುದು ಅರ್ಥವೆಂದು ಗೊತ್ತಾಗುತ್ತದೆ; ಮತ್ತು ಸಮಾನೀ ಪ್ರಮಾಣೀ ಎಂಬವುಗಳಿಗೆ 'ವಿತಾನ'ವು ಪ್ರತಿಯೋಗಿ ಎಂಬುದು "ವಿತಾನಮನ್ಯತ್" ಎಂಬ ಸೂತ್ರದ ಅರ್ಥವಾಗಿರುವು- ದರಿಂದ, ಸಮಾನೀ ಪ್ರಮಾಣೀ ಎಂಬವು "ತಾನವುಳ್ಳವು"ಗಳೆಂಬುದೂ ಆ ಸೂತ್ರದಿಂದಲೇ ವ್ಯಕ್ತವಾಗುತ್ತದೆ. ಇದರಿಂದ, "ಗಾಲ ಗಾಲ,...." ಹೀಗೆ ಗತಾಗತವಾಗಿ ಸಾಗುವ ಛಂದೋರೂಪವು "ಸಮಾನೀ", – ಎಂಬುದು "ಗ್ಲಿತಿ ಸಮಾನೀ" ಎಂಬ ಸೂತ್ರದ ಅರ್ಥವೆಂದೂ; "ಲಗಂ, ಲಗಂ,..." ಹೀಗೆ ಗತಾಗತವಾಗಿ ಸಾಗುವ ಛಂದೋರೂಪವು "ಪ್ರಮಾಣೀ", –ಎಂಬುದು "ಲ್ಗಿತಿ ಪ್ರಮಾಣೀ" ಎಂಬ ಸೂತ್ರದ ಅರ್ಥವೆಂದೂ ಸಿದ್ಧವಾಗುತ್ತದೆ. ಇವೆರಡರಲ್ಲಿಯೂ ಆಯಾ ಛಂದಃಖಂಡದ ಪ್ರತಿಯೊಂದು 'ಹಜ್ಜೆ'ಯೂ ಏಕರೂಪವಾಗಿರುವುದ- ರಿಂದ, ಇಂತಹ ಛಂದೋಬಂಧಗಳನ್ನು ಪಠಿಸುವಾಗ ಅವುಗಳಲ್ಲಿ ವ್ಯಕ್ತವಾಗುವ 'ತಾನ' ಎಂದರೆ ಗತಿಯ ಏಕರೂಪತೆ ಸ್ವಯಂವೇದ್ಯ.

ಉದಾ: 'ಸಮಾನೀ'–

– ∪, – ∪, –∪, – ∪, – ∪, – ∪, – ∪, – ∪
ಯಕ್ಷ ರಾಜ ಬಂಧ ವೇದ ಯಾಲ ವೇನ ಮಃಶಿ ವಾಯ ।

'ಪ್ರಮಾಣೀ'–

∪ –, ∪ –, ∪ –, ∪ –, ∪ –, ∪ –, ∪ –, ∪ –
ನನಾ ದ ಕೇ ಸರೀ ಯದಾ ಚಚಾ ಲ ಮೇ ದಿನೀ ತದಾ ।

ಇನ್ನು – "ವಿತಾನಮನ್ಯತ್" ಎಂಬ ಸೂತ್ರವು ಹೇಳುವಂತೆ – ಯಾವುದೊಂದು ವೃತ್ತಬಂಧವು ಸಮಾನೀ ಪ್ರಮಾಣೀ ಎಂಬವುಗಳ ಹಾಗೆ ಏಕ ಪ್ರಕಾರವಾದ ನೇರ ನಡಿಗೆಯಲ್ಲಿ ಸಾಗದೆ – ಕುಪ್ಪಳಿಸುತ್ತಲೋ ಒಲೆಯುತ್ತಲೋ,

---

ಎಂಬ ಸಂಜ್ಞೆಗೆ ಆ ಹಿಂದಿನ ಅರ್ಥ ಇರುವ ಹಾಗೆ ಕಾಣುವುದಿಲ್ಲ. ಈಗ – 'ತಾನ' ಎಂಬುದನ್ನು ಹಿಂದುಸ್ತಾನಿ ಸಂಗೀತಗಾರರು ವಿಶಿಷ್ಟವಾದ ಒಂದು ಅರ್ಥದಲ್ಲಿ, ಕರ್ಣಾಟಕ ಸಂಗೀತಗಾರರು ವಿಶಿಷ್ಟವಾದ ಬೇರೊಂದು ಅರ್ಥದಲ್ಲಿ ಬಳಸುತ್ತಾರೆ. ಆದರೂ 'ತಾನಪೂರ' (=ತಂಬೂರ, ತಂಬೂರಿ) ಎಂಬ ಶ್ರುತಿವಾದ್ಯದ ಹೆಸರಲ್ಲಿ ಅಡಗಿಕೊಂಡಿರುವ 'ತಾನ' ಶಬ್ದವು, ತನಗೆ ಕಾಳಿದಾಸನ ಕಾಲದಲ್ಲಿ ಇದ್ದ ಆ ಪುರಾತನವಾದ ಅರ್ಥವನ್ನೇ ಇಂದೂ ಉದ್ಘೋಷಿಸುತ್ತಾ ಇದೆ. ಗಾಯನದ 'ಆಧಾರಶ್ರುತಿ'ಗೆ ಮೃದಂಗದ ಧ್ವನಿಯನ್ನು ಸರಿ- ಹೊಂದಿಸುವ ಕ್ರಿಯೆಯನ್ನು "ಶ್ರುತಾನಮಾಡುವುದು" ಎಂದು ಹೇಳುವುದು ರೂಢಿಯಿದೆ- ಯಷ್ಟೆ. ಈ 'ಶ್ರುತಾನ' ಎಂಬ ಪದವು 'ಶ್ರುತಿ' ಮತ್ತು 'ತಾನ' ಎಂಬ ಪದಗಳ ಸಂಯೋಗದಿಂದ ಹುಟ್ಟಿದ್ದಾಗಿದೆ. "ಶ್ರುತಾನಮಾಡುವುದು" ಎಂದರೆ 'ನಾದ(=ಶ್ರುತಿ)ಗಳನ್ನು ಏಕೀಕರಿಸುವುದು' ಅರ್ಥಾತ್ 'ಏಕಶ್ರುತಿ'ಯಾಗಿಸುವುದು ಎಂದರ್ಥ. ಈ ಪದಪ್ರಯೋಗ- ದಲ್ಲಿಯೂ 'ತಾನ' ಶಬ್ದವು ತನ್ನ ಮೂಲಾರ್ಥವನ್ನು ಒಂದಿಷ್ಟು ಉಳಿಸಿಕೊಂಡಿರುವುದನ್ನು ಕಾಣಬಹುದು.

ಒಂದೆಡೆ ದ್ರುತವಾಗಿದ್ದು ಇನ್ನೊಂದೆಡೆ ವಿಲಂಬಿತವಾಗಿಯೋ[43] ಸಾಗುವುದಾದರೆ ಅದು "ವಿತಾನ"ವೆಂದಾಗುತ್ತದೆ. ಸ್ರಗ್ಧರಾ, ಶಾರ್ದೂಲವಿಕ್ರೀಡಿತ, ಮಂದಾಕ್ರಾಂತಾ, ಶಿಖರಿಣೀ, ಶಾಲಿನೀ, ಮಾಲಿನೀ, ಪೃಥ್ವೀ ಇತ್ಯಾದಿ ಸಮವೃತ್ತಗಳೂ, ಕೇತುಮತೀ ಇತ್ಯಾದಿ ಅರ್ಧಸಮವೃತ್ತಗಳೂ, ಉದ್ಗತಾ ಇತ್ಯಾದಿ ವಿಷಮವೃತ್ತಗಳೂ "ವಿತಾನ"ಕ್ಕೆ ಉದಾಹರಣಗಳಾಗುತ್ತವೆ.

ಆ ಮೂರು ಸೂತ್ರಗಳ ಅರ್ಥವನ್ನು, ಹೀಗೆ ಪ್ರಕರಣಾನುಗುಣವಾಗಿ ಪರಿಭಾವಿಸಿದರೆ – ಆ ಸೂತ್ರಗಳಲ್ಲಿರುವ "ಸಮಾನೀ, ಪ್ರಮಾಣೀ, ವಿತಾನ" ಎಂಬ ಮೂರು ಸಂಜ್ಞೆಗಳು ಯಾವುವೋ ಮೂರು ವೃತ್ತಗಳ ಹೆಸರುಗಳಲ್ಲ-ವೆಂದೂ, ವೃತ್ತಸಮುದಾಯಕ್ಕೇ ಅನ್ವಯಿಸುವಂತೆ ಪ್ರೋಕ್ತವಾಗಿರುವ 'ಗತಿಭೇದ'-ಗಳ ಹೆಸರುಗಳೆಂದೂ ವಿಶದವಾಗದಿರದು.

{ಪಿಂಗಲನ ಮೂರು ಸೂತ್ರಗಳಿಗೆ ಹಲಾಯುಧನ ಬಲಾತ್ಕಾರದ ವ್ಯಾಖ್ಯಾನ}

ಆದರೆ, ಪಿಂಗಲಸೂತ್ರವ್ಯಾಖ್ಯಾನಕಾರನಾದ ಹಲಾಯುಧನು – ಈ ಮೂರು ಸೂತ್ರಗಳು ಎಂಟಕ್ಷರಗಳ ಪಾದದ ಸಮವೃತ್ತವರ್ಗಕ್ಕೆ ಮಾತ್ರ ಅನ್ವಯಿಸುವವೆಂದು ಹೇಳುತ್ತಾನೆ. ತನ್ನ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ ಅವನು – ಒಂಬತ್ತನೆಯ ಸೂತ್ರವು "ಪಾದಸ್ಯಾನುಷ್ಟುಬ್ವಕ್ತ್ರಂ" ಎಂದಿರುವುದ-ರಿಂದ, ಆ ಸೂತ್ರದ ಆಂಶಿಕವಾದ ಅರ್ಥವನ್ನು 'ಸಿಂಹಾವಲೋಕಿತನ್ಯಾಯ'ದಿಂದ ಹಿಂದೆಕ್ಕೆಳೆದುಕೊಂಡು, "ಗ್ಲಿತಿ ಸಮಾನೀ" ಮೊದಲಾದ ಮೂರು ಸೂತ್ರಗಳ ಅರ್ಥಕ್ಕೆ ಸೇರಿಸಿಕೊಳ್ಳಬೇಕೆಂದು ಹೇಳುತ್ತಾನೆ. ಬಲಾತ್ಕಾರದ ವ್ಯಾಖ್ಯಾನವಿದೆಂದು ಮೇಲುನೋಟಕ್ಕೇ ಯಾರಿಗಾದರೂ ಹೊಳೆಯುವಂತಿರುವ ಈ ಅಭಿಪ್ರಾಯವನ್ನು ಅವನು ವಿಲಂಬಿಸಲು ಕಾರಣವೇನು? ಇದು ಗೊತ್ತಾಗಬೇಕಾದರೆ ಒಂದಿಷ್ಟು ವಿವರಣೆ ಇಲ್ಲಿ ಅವಶ್ಯವಾಗುತ್ತದೆ.

{ಹಲಾಯುಧನ ಬಲಾತ್ಕಾರದ ವ್ಯಾಖ್ಯಾನಕ್ಕೆ ಕಾರಣ}

ಪಿಂಗಲನ ಛಂದಃಶಾಸ್ತ್ರವು ಅತಿಪುರಾತನವಾದುದು. ಅದರ ಕಾಲ-ನಿರ್ಣಯವನ್ನು ಯಾರೂ ಮಾಡಿದಂತೆ ತೋರುವುದಿಲ್ಲ. ಅದಕ್ಕೆ ವ್ಯಾಖ್ಯಾನ ಬರೆದಿರುವ ಹಲಾಯುಧ ಭಟ್ಟನು – ಇವನು ಹತ್ತನೆಯ ಶತಮಾನದವನೆಂದು

---

43. ಇಲ್ಲಿ ಸೂಚಿಸಿದ ದ್ರುತವಿಲಂಬಿತ ಭೇದಗಳು – ಹಿಂದೆ 15ನೆಯ ಟಿಪ್ಪಣಿಯಲ್ಲಿ ಪ್ರಸ್ತಾವಿಸಲ್ಪಟ್ಟು 35ನೆಯ ಟಿಪ್ಪಣಿಯಲ್ಲಿ ಪರಾಮರ್ಶಿಸಲಾಗಿರುವ "ಗತಿಭೇದ"ಗಳು; ಇವು ಛಂದೋವಿನ್ಯಾಸದಲ್ಲಿ ನಿಶ್ಚಿತವೇ ಆಗಿರುವ ಲಕ್ಷಣಗಳು. ಇವು ಅಕ್ಷರಗಳ ಮಾತ್ರಾಕಾಲದ ಹ್ರಾಸವೃದ್ಧಿಗಳ ಪರಿಣಾಮವಾಗಿ ಪಠನಕಾಲದಲ್ಲಿ (ಐಚ್ಛಿಕವಾಗಿ) ಉಂಟಾಗುವ ದ್ರುತ ವಿಲಂಬಿತ "ಲಯ(=ವೇಗ)ಭೇದ"ಗಳಲ್ಲ.

ಹೇಳುತ್ತಾರೆ – ತನ್ನ ಗ್ರಂಥಕ್ಕೆ "ಮೃತಸಂಜೀವಿನೀ" ಎಂಬ ಹೆಸರನ್ನು ಕೊಟ್ಟಿದ್ದಾನೆ. ಇದರಿಂದ, ಹತ್ತನೆಯ ಶತಮಾನಕ್ಕಾಗುವಾಗ ಪಿಂಗಲನ ಗ್ರಂಥವು ಮೃತಪ್ರಾಯವಾಗಿತ್ತು – ಎಂದರೆ ಅದು ಖಿಲವಾಗಿತ್ತು, ತ್ರುಟಿತವಾಗಿತ್ತು, ಅದರಲ್ಲಿ ಪ್ರಕ್ಷೇಪಗಳಾಗಿದ್ದವು, ಅದರ ಅರ್ಥ ದುರೂಹ್ಯವಾಗಿತ್ತು ಇತ್ಯಾದಿ ಸೂಚಿತ–ವಾಗುತ್ತದೆ. (ಹಲಾಯುಧನಿಗಿಂತ ಮೊದಲು ಪಿಂಗಲನ ಗ್ರಂಥಕ್ಕೆ ಯಾರಾದರೂ ವ್ಯಾಖ್ಯಾನ ಬರೆದಿದ್ದರೋ ಎಂಬುದೂ ಗೊತ್ತಾಗಿಲ್ಲ.) ಪಿಂಗಲಸೂತ್ರಗಳನ್ನೇ ಅವಲಂಬಿಸಿ ಜಯದೇವನು ಬರೆದ ಛಂದೋಗ್ರಂಥವು, ಹಲಾಯುಧನ ಕಾಲದಲ್ಲಿ ಜನಪ್ರಿಯವಾಗಿದ್ದಂತೆ ಕಂಡುಬರುತ್ತದೆ. ಜಯದೇವನ ಕೃತಿ ಪಿಂಗಲ–ನದರಂತೆ ಕೇವಲ ಸೂತ್ರಾತ್ಮಕವಾಗಿರದೆ, ಲೌಕಿಕಚ್ಛಂದಗಳೆಲ್ಲ ಅದರಲ್ಲಿ ಲಕ್ಷ್ಯಲಕ್ಷಣಸಮವಾಯವಾಗಿ ನಿರೂಪಿಸಲ್ಪಟ್ಟಿರುವುದರಿಂದ, ಛಂದೋವಿದ್ಯಾರ್ಥಿ–ಗಳಿಗೆ ಶಾಸ್ತ್ರಾರ್ಥವು ಸುಲಭಗ್ರಾಹ್ಯವಾಗಿದ್ದುದೇ ಅದರ ಜನಪ್ರಿಯತೆಗೆ ಕಾರಣ–ವಾಗಿ ತೋರುತ್ತದೆ. ಈ ಸೌಲಭ್ಯವೊಂದು ಹೊರತಾಗಿ, ಪಿಂಗಳನದರಲ್ಲಿರದ ಬೇರೆ ಯಾವುದೊಂದು ವಿಶೇಷತೆಯೂ ಅದರಲ್ಲಿ ಕಂಡುಬರುವುದಿಲ್ಲ. ಜಯ–ದೇವನ ಕೃತಿಯ ಪರಿಚಯವು ಹಲಾಯುಧನಿಗೆ ಚೆನ್ನಾಗಿ ಇತ್ತೆಂಬುದು ಅವನ ಪಿಂಗಲವ್ಯಾಖ್ಯಾನದಿಂದ ತಿಳಿಯುತ್ತದೆ. ತನ್ನ ಕಾಲದಲ್ಲಿ ಪ್ರಚುರಪ್ರಚಾರವಿದ್ದ ಜಯದೇವಕೃತಿಯ ಪ್ರಭಾವವು ಹಲಾಯುಧನ ಮೇಲೂ ಆಗಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಜಯದೇವನ ಗ್ರಂಥದಲ್ಲಿ ಪಿಂಗಳಸೂತ್ರಗಳ ಪ್ರಕ್ರಮ–ದಲ್ಲಿಯೇ "ಸಮಾನೀ ಪ್ರಮಾಣೀ ವಿತಾನ"ಗಳು ಬಂದಿದ್ದು,

"ಗ್ಲೌ ಸಮಾನ್ಯನುಷ್ಟುಭೀತಿ"

ಎಂಬಿತ್ಯಾದಿಯಾಗಿ ಲಕ್ಷಿತವಾಗಿ, ಎಂಟಕ್ಷರಗಳ ಪಾದದ ಸಮವೃತ್ತವರ್ಗಕ್ಕೆ ಅವು ಖಚಿತವಾಗಿ ಸೇರಿಸಲ್ಪಟ್ಟಿವೆ. ಪಿಂಗಳಸೂತ್ರಾವಲಂಬಿಯಾದ ಈ ಪಠ್ಯಪುಸ್ತಕದ ಪರಿಣಾಮವಾಗಿ, ಸಮಾನೀ ಪ್ರಮಾಣೀ ವಿತಾನಗಳೆಂಬಿವು ಎಂಟಕ್ಷರಗಳ ಪಾದದ ಸಮವೃತ್ತಗಳೆಂಬ ಅಭಿಪ್ರಾಯವು ಜಯದೇವೋತ್ತರಕಾಲದ ವಿದ್ವಾಂಸರಲ್ಲೆಲ್ಲ ನೆಲೆಗೊಂಡಂತೆ ತೋರುತ್ತದೆ. ಏಕೆಂದರೆ, ಅವು ವೃತ್ತನಾಮಗಳಾಗಿರಲಿಕ್ಕಿಲ್ಲವೆಂಬ ಶಂಕೆ ತದನಂತರಕಾಲದ ಯಾವನೊಬ್ಬ ಛಂದೋಗ್ರಂಥಕಾರನಿಗೂ ಬಂದಂತಿಲ್ಲ. ಬೇರೆ ಒಂದೆರಡು ಕಾರಣಗಳಿಗಾಗಿ ಜಯದೇವನನ್ನು ಖಂಡಿಸಿದ ಹಲಾಯುಧ–ನಿಗೂ ಆ ಶಂಕೆ ಹುಟ್ಟಲಿಲ್ಲ.[44] ಬದಲಾಗಿ, ಅವು ಎಂಟಕ್ಷರಗಳ ಪಾದದ

---

44. {ಪಿಂಗಲೋತ್ತರ ಛಂದಃಶಾಸ್ತ್ರಜ್ಞರಲ್ಲಿ ಗತಿವಿಷಯಕ ಪಿಂಗಲಸೂತ್ರಗಳ ಬಗೆಗೆ ಅಭಿಪ್ರಾಯ ಭೇದ} ಪಿಂಗಲನ 'ವಿತಾನಮನ್ಯತ್' ಎಂಬ ಸೂತ್ರವನ್ನು ಜಯದೇವನು ಲಕ್ಷ್ಯಲಕ್ಷಣ–ಸಮವಾಯರೂಪವಾಗಿ "ಅನ್ಯದತೋ ಹಿ ವಿತಾನಂ" (೫–೫) ಎಂದು ಅನುವದಿಸಿದುದನ್ನು ಹಲಾಯುಧಾದಿ ಛಂದೋಗ್ರಂಥವ್ಯಾಖ್ಯಾನಕಾರರು ಪ್ರತಿಭಟಿಸಿ, –ಸಮಾನೀ ಪ್ರಮಾಣೀ ಎಂಬ ಎರಡು ಹೊರತಾಗಿ ಉಳಿದೆಲ್ಲ ಅಷ್ಟಾಕ್ಷರಪಾದದ ಸಮವೃತ್ತಗಳಿಗೆ 'ವಿತಾನ'ವೆಂಬ

ಸಮವೃತ್ತಗಳೆಂಬ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ, "ಪಾದಸ್ಯಾನುಷ್ಟುಪ್ ವಕ್ತ್ರಂ" ಎಂಬ ಸೂತ್ರಾರ್ಥದ ಒಂದು ಭಾಗವನ್ನು (ಇಡೀ ಸೂತ್ರಾರ್ಥವನ್ನು ಹಿಂದಕ್ಕೆ ಅನ್ವಯಿಸಿಕೊಂಡರೆ ಅವನ ಇಷ್ಟಸಿದ್ಧಿಯಾಗುವಂತಿದ್ದಿಲ್ಲ.) ಹಿಂದಕ್ಕೆ ಎಳೆದುಕೊಂಡು ಪೂರ್ವಸೂತ್ರಾರ್ಥವನ್ನು 'ಭರ್ತಿ'ಮಾಡುವ ಪ್ರಯತ್ನವನ್ನು ಅವನು ಮಾಡಿದ್ದಾನೆ. (ಅವು ಎಂಟಕ್ಷರಗಳ ಪಾದದ ಸಮವೃತ್ತಗಳೆಂದು ಹೇಳಿದ ಜಯದೇವನಿಗೂ ಆ ಒಂಬತ್ತನೆಯ ಸೂತ್ರವೇ ಅವಲಂಬವಾಗಿತ್ತೋ ಏನೋ.)

ಸಮಾನೀ ಪ್ರಮಾಣೀ ವಿತಾನಗಳು ಗತಿಭೇದನಾಮಗಳಾಗಿರಲೂಬಹುದೆಂಬ ಶಂಕೆಯೇ ಪಿಂಗಲೋತ್ತರಕಾಲದ ಛಂದೋವಿದರಿಗೆ ಬಾರದಿದ್ದುದಕ್ಕೆ ಮುಖ್ಯವಾದೊಂದು ಬೇರೆ ಕಾರಣವಿದ್ದಿರಲೂ ಬಹುದು. ಅದೇನೆಂದರೆ – ಸಂಸ್ಕೃತ ಛಂದಸ್ಸಿಗೆ ಸೀಮಿತವಾದ ಛಂದೋಗ್ರಂಥಗಳಲ್ಲಿ ಲಕ್ಷಿತವಾಗಿರುವ ಎಲ್ಲಾ ಲೌಕಿಕಚ್ಛಂದಗಳು, (ವೈದಿಕ ಜಾತಿಯ ಲೌಕಿಕಬಂಧವಾದ 'ಅನುಷ್ಟುಪ್ ಶ್ಲೋಕ'ದ ಹೊರತು) ಒಂದೋ ಗುರುಲಘುಸ್ಥಿರವಾದ ವೃತ್ತಬಂಧಗಳು, ಇಲ್ಲವೆ ಯಥಾಕ್ಷರಪರಿಮಾಣಸಿದ್ಧವಾದ ಮಾತ್ರಾಬಂಧಗಳು. (ಮಾತ್ರಾನಿಯಮದಲ್ಲಿ ಶೈಥಿಲ್ಯವುಳ್ಳ ತ್ರಿಮೂರ್ತಿಗಣಬಂಧಗಳಾಗಲಿ, ಕೇವಲ ತಾಳನಿಯಮಿತ ಗೀತ-ಬಂಧಗಳಾಗಲಿ ಅವುಗಳಲ್ಲಿ ಪ್ರವಿಷ್ಟವಾಗಿಲ್ಲ. ಅವು ಸಂಸ್ಕೃತದ ಸಂಗೀತಶಾಸ್ತ್ರ-ಗ್ರಂಥಗಳಲ್ಲಿ ಆಶ್ರಯಪಡೆದಿದ್ದುವು.) 'ವೃತ್ತ'ಬಂಧಗಳನ್ನಾಗಲಿ 'ವಿಶುದ್ಧಮಾತ್ರಾ-

---

ಹೆಸರು ಅನ್ವಯಿಸುವುದೆಂದು ಪ್ರತಿಪಾದಿಸಿದ್ದಾರೆ; ಮತ್ತು ಜಯದೇವನು ಕೊಟ್ಟಿರುವ ಅದರ ಲಕ್ಷ್ಯಸ್ವರೂಪವು ಮುಂದೆ – ಪಿಂಗಳನ ಗ್ರಂಥದಲ್ಲಿ ಮಾತ್ರವಲ್ಲ – ಅವನ ಗ್ರಂಥದಲ್ಲಿಯೇ ಕಂಡುಬರುವ "ಚಿತ್ರಪದಾ" ಎಂಬ ವೃತ್ತದ ಸ್ವರೂಪವೇ ಆಗಿರುವುದರಿಂದ, "ಅನ್ಯದತೋ ಹಿ ವಿತಾನಂ" ಎಂಬುದು ಗತಾರ್ಥವಾಯಿತೆಂದು ಜಯದೇವನ ದೋಷವನ್ನು ಉದ್ಘಾಟಿಸಿದ್ದಾರೆ. ಇದರಿಂದ, ಸಮಾನೀ ಪ್ರಮಾಣೀ ವಿತಾನ ಎಂಬೀ ಮೂರರೊಳಗೆ 'ವಿತಾನ'ವೆಂಬುದು "ಒಂದು ವೃತ್ತದ ಹೆಸರಲ್ಲ" ಎಂಬುದನ್ನು ಆ ವ್ಯಾಖ್ಯಾನಕಾರರು ಒಪ್ಪಿದಂತಾಯಿತು ! ಮತ್ತು 'ವಿತಾನ'ವೆಂಬುದು ಹಲವು ವೃತ್ತಗಳಲ್ಲಿರುವ ಒಂದು ಧರ್ಮವನ್ನು ಸೂಚಿಸುವ ಸಂಜ್ಞೆ ಎಂದೂ ಅವರು ಹೇಳಿದಂತಾಯಿತು. ಹಾಗಾದರೆ – ಸಮಾನೀ ಪ್ರಮಾಣೀ ಎಂಬವುಗಳಿಗೆ ಪ್ರತಿಯೋಗಿಯಾಗಿಯೇ 'ವಿತಾನ'ವನ್ನು ಪಿಂಗಳನು ಹೇಳಿರುವುದರಿಂದ, 'ವಿತಾನ'ವು ಹೇಗೆ ಹಲವು ವೃತ್ತಗಳ ಒಂದು ಧರ್ಮವೋ ಹಾಗೆಯೇ ಸಮಾನೀ ಪ್ರಮಾಣಿಗಳೂ ಹಲವು ವೃತ್ತಗಳ ವಿಶಿಷ್ಟಧರ್ಮಗಳೆಂದೇ ಸಿದ್ಧವಾದಂತಾಯಿತಲ್ಲವೇ? ಪಿಂಗಳಪ್ರೋಕ್ತವಾದ ಈ ಧರ್ಮವಿಶೇಷಗಳು (ಸ್ಥಿರಗುರುಲಘುವಾದ) ನಾನಾಸಂಖ್ಯೆಯ ಪಾದಾಕ್ಷರದ ವೃತ್ತಗಳಲ್ಲಿ ಇರಬಲ್ಲುವಾಗಿರುವಾಗ (ಉದಾ:- ಪಂಚಚಾಮರ) ಕೇವಲ ತರ್ಕನೈಪುಣ್ಯದಿಂದ ಅರ್ಥವನ್ನು ಬಲಾತ್ಕರಿಸಿ, ಅವುಗಳನ್ನು ಅಷ್ಟಾಕ್ಷರಪಾದದ ವೃತ್ತಗಳಿಗೆ ಮಾತ್ರ ಏಕೆ ಸೀಮಿತಗೊಳಿಸಬೇಕು? ಇದನ್ನು ಆ ವ್ಯಾಖ್ಯಾತೃಗಳು ಒಂದಿಷ್ಟು ಚಿಂತಿಸುವ ಪ್ರಯಾಸವನ್ನು ಕೈಕೊಂಡಿದ್ದರೆ, ಪಿಂಗಳನು ಅಲ್ಲಿ ಹೇಳಿದ್ದು 'ವೃತ್ತನಾಮ'ಗಳನ್ನಲ್ಲವೆಂದೂ, ಅವು ವೃತ್ತಗಳಿಗೆ ಅನ್ವಯಿಸು-ವಂತಹ ಧರ್ಮವಿಶೇಷಗಳ ಹೆಸರುಗಳೆಂದೂ ಅವರಿಗೆ ಹೊಳೆಯುದಿರುತ್ತಿರಲಿಲ್ಲವೆಂದು ನನಗೆ ತೋರುತ್ತದೆ.

ಬಂಧ'ಗಳನ್ನಾಗಲಿ ಯಥಾಕ್ಷರಗುರುಲಘುವಾಗಿ ಪಠಿಸುವಾಗಲೇ ಅವುಗಳ ಗತಿ ಉನ್ಮೀಲಿತವಾಗುವುದರಿಂದ, ಅಲ್ಲಿ ಗತಿಸ್ವರೂಪನಿರೂಪಣವು (ಹಿಂದೆಯೇ ಹೇಳಿರುವಂತೆ) ಅನವಶ್ಯವಾಗುತ್ತದೆ. ಈ ಕಾರಣದಿಂದ ಸಂಸ್ಕೃತ ಛಂದೋ ಗ್ರಂಥಗಳ ವಿಷಯಕ್ಕೆ ಗತಿಭೇದವಿಚಾರವು ಬಹಿರ್ಭೂತವಾಗಿ ಪರಿಣಮಿಸಿತ್ತು. ಹೀಗಿರುವಲ್ಲಿ – ಛಂದೋವಿದ್ಯೆಗೆ ಪರಮಪ್ರಮಾಣವೆನಿಸಿಕೊಂಡ ಪಿಂಗಲಛಂದಃ ಶಾಸ್ತ್ರದಲ್ಲಿ ವೃತ್ತಗತಿಭೇದವಿಚಾರವು (ಅನಪೇಕ್ಷಿತವಾಗಿ) ಬಂದಿರಬಹುದೆಂಬ ಭಾವನೆ ಪಿಂಗಲೋತ್ತರಕಾಲದ ಛಂದಃಶಾಸ್ತ್ರಕಾರರಿಗೆ ಹುಟ್ಟುವುದಕ್ಕೆ ಅವಕಾಶ-ವಿರಲಿಲ್ಲ. ಈ ಕಾರಣದಿಂದ, ಪಿಂಗಲೋಕ್ತವಾದ ಸಮಾನೀ ಪ್ರಮಾಣೀ ವಿತಾನ-ಗಳೆಂಬಿವು ವೃತ್ತನಾಮಗಳಾಗಿರಬೇಕೆಂದು ಅವರು ಭಾವಿಸಿಕೊಂಡು, ಅದನ್ನು ಯೇನಕೇನಾಪಿ ಸಮರ್ಥಿಸಿಕೊಳ್ಳುವ ಪ್ರಯತ್ನವನ್ನೂ ಮಾಡಿದರೆಂದೂ ಊಹಿ-ಸಿದರೆ ಅದು ತಪ್ಪಾಗಲಾರದೆಂದು ನನಗೆ ತೋರುತ್ತದೆ.

ಹಾಗಾದರೆ ವೃತ್ತಲಕ್ಷಣನಿರೂಪಣಕ್ಕೆ ಅನಾವಶ್ಯಕವಾದ ಈ ವೃತ್ತಗತಿಭೇದ ವಿಚಾರವನ್ನು ಪಿಂಗಳನು ಈ ಸಂದರ್ಭದಲ್ಲಿ ತಂದುದೇಕೆಂಬ ಶಂಕೆ ಇಲ್ಲಿ ತಲೆಯೆತ್ತಬಹುದಾಗಿದೆ. ಇದಕ್ಕೆ ನನಗೆ ತೋರುವ ಸಮಾಧಾನ ಹೀಗೆ:– ಪಿಂಗಳ ಸೂತ್ರಗಳು ಹುಟ್ಟುವುದಕ್ಕೆ ಮೊದಲು, ರಾತ ಮಾಂಡವ್ಯ ಕಾಶ್ಯಪ ಸೈತವಾದಿಗಳು ಛಂದಃಶಾಸ್ತ್ರಗ್ರಂಥಗಳನ್ನು ನಿರ್ಮಿಸಿದ್ದರು; ಅವರು ಖ್ಯಾತನಾಮರೂ ಆಗಿದ್ದರು – ಎಂಬುದು ಪಿಂಗಲಸೂತ್ರಗಳಿಂದಲೇ ಅವಗತವಾಗುತ್ತದೆ. ನಮ್ಮ ಪುರಾತನರ ಬೇರೆ ಬೇರೆ ಶಾಸ್ತ್ರಗ್ರಂಥಗಳ ಪರಿಶೀಲನೆಯಿಂದ ತಿಳಿದುಬರುವ ಒಂದು ವಿಷಯವೇನೆಂದರೆ – ಯಾವನೊಬ್ಬ ಶಾಸ್ತ್ರಕರ್ತನೂ ತತ್ಪೂರ್ವದಲ್ಲಿ ಆ ಶಾಸ್ತ್ರದ ಬಗೆಗೆ ಹೇಳಲಾದುದನ್ನು ಪೂರ್ಣವಾಗಿ ತ್ಯಜಿಸದೆ – ತನ್ನ ಮತಕ್ಕೆ ವಿರುದ್ಧ-ವೆಂದು ಹೇಳುವಂತಿಲ್ಲದ, ಆದರೆ ತನ್ನ ಪ್ರತಿಪಾದನೆಗೆ ಅವಶ್ಯವೂ ಅಲ್ಲದ, ಪೂರ್ವಶಾಸ್ತ್ರಾಭಿಪ್ರಾಯಗಳಿಗೆ ತನ್ನ ಗ್ರಂಥದಲ್ಲಿಯೂ ಒಂದಿಷ್ಟು ಎಡೆಕೊಟ್ಟು ಆ ಶಾಸ್ತ್ರಗ್ರಂಥಗಳನ್ನು ಗೌರವಿಸುವುದು ಒಂದು ಸಂಪ್ರದಾಯವಾಗಿತ್ತೆಂಬುದಾಗಿದೆ. ಪಿಂಗಳನಿಗಿಂತ ಹಿಂದಿನ ಛಂದಃಶಾಸ್ತ್ರಗ್ರಂಥಗಳಲ್ಲಿ ವೃತ್ತಲಕ್ಷಣನಿರೂಪಣವಿಧಾನ ಹೇಗಿತ್ತೆಂಬುದರ ಬಗೆಗೆ ನಮ್ಮ ತಿಳಿವು ಅತ್ಯಲ್ಪ. ಅವುಗಳಲ್ಲಿ 'ಮಯರಸಾದಿ ವಿಧಾನ'ವಿರಲಿಲ್ಲ; 'ಗುರುಲಘುಸಂಖ್ಯಾನ'ದ ಮೂಲಕ ವೃತ್ತಲಕ್ಷಣನಿರೂಪಣ ಮಾಡಲಾಗುತ್ತಿತ್ತು – ಎಂದಿಷ್ಟು ಮಾತ್ರ ನಮಗೆ ತಿಳಿದುಬಂದ ವಿಷಯ. ಹಾಗೆ ಲಕ್ಷಣ ಹೇಳುವುದಕ್ಕೆ ಪೀಠಿಕೆಯಾಗಿ, ಆ ಪುರಾತನ ಗ್ರಂಥಕರ್ತರು ವೃತ್ತಗಳ ಗತಿಭೇದಗಳ ನಿರೂಪಣೆಯನ್ನು ಮಾಡಿದ್ದರೋ, ಅಥವಾ ಗತಿಭೇದಾನು-ಗುಣವಾಗಿ ಯಾರಾದರೂ ಪೂರ್ವಿಕರು ವೃತ್ತಗಳನ್ನು ವರ್ಗೀಕರಿಸಿದ್ದರೋ ಎಂಬುದಾವುದೂ ನಮಗೀಗ ಗೊತ್ತಿಲ್ಲ. ಆದರೆ ಅಂತಹದೊಂದು ಸಂಭಾವ್ಯತೆ-

ಯನ್ನು ತಳ್ಳಿಹಾಕುವುದಕ್ಕಾಗುವುದಿಲ್ಲ.[45] ಆದುದರಿಂದ ಪಿಂಗಳನು, ತನ್ನ ವಿಧಾನಕ್ಕೆ ಅವಶ್ಯವಲ್ಲದಿದ್ದರೂ, ತನ್ನ ಪ್ರತಿಪಾದನೆಗೆ ಯಾವ ಹಾನಿಯನ್ನೂ ಮಾಡಲಾರದ ಆ ಗತಿಭೇದಗಳ ದಿಗ್ದರ್ಶನವನ್ನು, ಪೂರ್ವಶಾಸ್ತ್ರಗೌರವಬುದ್ಧಿಯಿಂದ ಅಲ್ಲಿ ಮಾಡಿದ್ದಿರಲೂಬಹುದೆಂದು ಅನುಮಾನಿಸಿದರೆ ಅದು ಅಯುಕ್ತವೆನಿಸಲಾರದೆಂದು ನನ್ನ ಭಾವನೆ.[46]

'ಸಮಾನೀ ಪ್ರಮಾಣೀ ವಿತಾನ' ಎಂಬವುಗಳನ್ನು ತನ್ನ ಗ್ರಂಥದಲ್ಲಿ ಪಿಂಗಳನು ಸೇರಿಸಿಕೊಂಡುದರ ಉದ್ದೇಶವೇನೇ ಆಗಿರಲಿ, ಅದು ನಮಗಿಲ್ಲಿ ಮುಖ್ಯವಲ್ಲ. ನಮಗಿಲ್ಲಿ ಮುಖ್ಯವಾದುದು ಆ ಸಂಜ್ಞೆಗಳಿಂದ ಬೋಧಿತವಾಗುವ ಅರ್ಥ ಮಾತ್ರ; ಮತ್ತು ಆ ವಿಷಯದಲ್ಲಿ ನಮಗೆ ಸಂದೇಹವೇನೂ ಉಳಿದಿರು–ವುದೂ ಇಲ್ಲ. ಸಾರಾಂಶ: ಪಿಂಗಲೋಕ್ತವಾದ ಸಮಾನೀ ಪ್ರಮಾಣೀ ವಿತಾನ ಎಂಬವು "ವೃತ್ತನಾಮ"ಗಳಲ್ಲ; ಅವು ವೃತ್ತಗಳ ಗತಿಭೇದಸೂಚಕಸಂಜ್ಞೆಗಳು.[47]

---

45. {ಗತಿಭೇದಾನುಗುಣವಾಗಿ ವೃತ್ತವರ್ಗೀಕರಣವಿತ್ತೆ?} ಎಷ್ಟೋ ವೃತ್ತಗಳ ಹೆಸರುಗಳ ಅರ್ಥವನ್ನು ಪರಿಭಾವಿಸಿದರೆ, ಅವು ಆಯಾ ವೃತ್ತದ ಗತಿಯನ್ನು ಅನುಲಕ್ಷಿಸಿ ಕೊಟ್ಟ ಹೆಸರುಗಳೆಂಬುದು ಗೊತ್ತಾಗುತ್ತದೆ. ಉದಾ: ಹರಿಣೀಪ್ಲುತ, ಖಚರಪ್ಲುತ, ಶಾರ್ದೂಲ ವಿಕ್ರೀಡಿತ, ತರಂಗಮಾಲಿಕಾ, ಭುಜಂಗಪ್ರಯಾತ, ಭುಜಂಗವಿಜೃಂಭಿತ, ಜಲೋದ್ಧತಗತಿ, ಹಂಸಗತಿ, ಮಂದಾಕ್ರಾಂತಾ, ಮತ್ತಮಯೂರ, ತ್ವರಿತಗತಿ, ದ್ರುತವಿಲಂಬಿತ, ಹಂಸಕ್ರೀಡಾ, ಮತ್ತಾಕ್ರೀಡಾ, ವಾತೋರ್ಮಿ ಇತ್ಯಾದಿ. ಒಂದುವೇಳೆ, ಯಾವುದೋ ಒಂದು ಅಜ್ಞಾತ ಕಾಲದಲ್ಲಿ ಗತಿಭೇದಾನುಗುಣವಾಗಿ ವೃತ್ತವರ್ಗೀಕರಣಮಾಡುವ ಪ್ರಯತ್ನವನ್ನು ಅಂದಿನ ಛಂದೋವಿದರಲ್ಲಿ ಯಾರಾದರೂ ಮಾಡಿದ್ದರೋ ಏನೋ! ನಿಶ್ಚಯಿಸಲಳವಲ್ಲ. [ಭಾರತೀಯ ಸಂಗೀತದ ರಾಗಗಳು ಗಣಿತಾವಲಂಬಿಯಾದ 'ಮೇಳಕರ್ತ' ಅಥವಾ 'ಥಾಟ್' ಎಂಬ ವರ್ಗವ್ಯವಸ್ಥೆಗೆ ಒಳಪಡಿಸಲ್ಪಡುವುದಕ್ಕಿಂತ ಮೊದಲು, ರಾಗಭಾವವನ್ನವಲಂಬಿಸಿದ್ದ "ರಾಗ ಪರಿವಾರ" ಎಂಬೊಂದು ವರ್ಗವ್ಯವಸ್ಥೆಗೆ ಅವುಗಳನ್ನು ಅಳವಡಿಸುವ ಪ್ರಯತ್ನವು ನಡೆದಿತ್ತೆಂಬುದನ್ನು ಹೋಲಿಕೆಗಾಗಿ ಇಲ್ಲಿ ಸ್ಮರಿಸಬಹುದು.]

46. ಛಂದಃಶಾಸ್ತ್ರೋಕ್ತವಾದ 'ಷಟ್‌ಪ್ರತ್ಯಯ'ಗಳೊಳಗೆ ಆರನೆಯದಾದ 'ಅಧ್ವಯೋಗ' ಎಂಬುದು ನಿಷ್ಪ್ರಯೋಜಕವಾದರೂ ಪೂರ್ವಶಾಸ್ತ್ರಕಾರರು ಅದನ್ನು ಹೇಳಿರುವುದರಿಂದ ತಾನೂ ಅದನ್ನು ಹೇಳಿದುದೆಂದು – ಹೇಮಚಂದ್ರನು ತನ್ನ 'ಛಂದೋನುಶಾಸನ' ಸೂತ್ರಗಳಿಗೆ ತಾನೇ ಬರೆದ ವ್ಯಾಖ್ಯಾನದಲ್ಲಿ (ಅಧ್ಯಾಯ ೮–ಸೂತ್ರ ೧೭) ಹೇಳಿರುತ್ತಾನೆ. ಇದೇ ಬಗೆಯ ಪೂರ್ವಶಾಸ್ತ್ರಗೌರವಬುದ್ಧಿಯಿಂದಲೇ ಕೇಶಿರಾಜನು, ಕನ್ನಡವ್ಯಾಕರಣಕ್ಕೆ ಅನವಶ್ಯವಾದ – ಆದರೆ ಪೂರ್ವಶಾಸ್ತ್ರಕಾರರು ಹೇಳಿರುವ – "ನಾಮಿ"ಗೆ (ಅವರ್ಣಂ ಪಿಂಗಿದಾ ಸ್ವರಂ ನಾಮಿಯೆಂದು ಪೇೞಲ್ಪಡೆಗುಂ. – ಶಬ್ದಮಣಿದರ್ಪಣ, ಸೂತ್ರ ೧೯) ತನ್ನ ಗ್ರಂಥದಲ್ಲಿಯೂ ಅವಕಾಶವನ್ನು ಕೊಟ್ಟುದಾಗಿದೆ.

47. {ಪಿಂಗಳನ ಆಧಾರದಲ್ಲಿ ಗತಿಭೇದಗಳ ಪುನರ್ವ್ಯವಸ್ಥೆ} ನಾವು ಪರಾಮರ್ಶಿಸಿದ ಆ ಮೂರು ಸೂತ್ರಗಳ ಅಭಿಪ್ರಾಯದಂತೆ – ಅಲ್ಲಿ ಎಲ್ಲಾ ವೃತ್ತಗಳನ್ನು 'ಸತಾನ' ಮತ್ತು 'ವಿತಾನ' ಎಂದು ಎರಡು ರಾಶಿಗಳಾಗಿ ವರ್ಗೀಕರಿಸಿ, ಅನಂತರ 'ಸತಾನವರ್ಗ'ದಲ್ಲಿ ಸಮಾನೀ,

ಪ್ರಮಾಣೀ ಎಂಬ ಎರಡು 'ಉಪವರ್ಗ'ಗಳನ್ನು ಮಾಡಿದುದು ಕಂಡುಬರುತ್ತದೆ. ಈ ವರ್ಗೀಕರಣಾನುಸಾರವಾಗಿ ಸಮಾನೀ (= ಗಾಲ ಗಾಲ ಗಾಲ), ಪ್ರಮಾಣೀ (=ಲಗಂ ಲಗಂ ಲಗಂ) ಎಂಬ ಎರಡು ಗತಿಗಳ ಹೊರತು ಬೇರೆಲ್ಲಾ ಗತಿಗಳು ವಿತಾನಗಳೆಂದಾಗುತ್ತವೆ. ಇದು ಪೂರ್ಣ ತೃಪ್ತಿಕರವೆಂದು ನನ್ನ ಅಲ್ಪಮತಿಗೆ ತೋರುವುದಿಲ್ಲ. ಏಕೆಂದರೆ – ಪಿಂಗಳಸೂತ್ರಗಳಲ್ಲಿ ಮಾಡಲಾದ ಗತಿವರ್ಗೀಕರಣವು 'ತಾನ'ವನ್ನವಲಂಬಿಸಿದುದು; 'ತಾನ' ಎಂದರೆ ಹಿಂದೆ ಹೇಳಿರುವಂತೆ, ಧ್ವನಿಗಳ ಗತಿಯ ಏಕರೂಪತೆ. ಈ ಏಕರೂಪತೆಯ ಎಂದರೆ 'ತಾನ'ದ ಮೂಲಸ್ವರೂಪ ಅಥವಾ ಪೂರ್ಣಸ್ವರೂಪವು ಪಿಂಗಲೋಕ್ತವೃತ್ತಗಳೊಳಗೆ ನಮಗೆ ಕಂಡುಬರುವುದು ಸರ್ವಗುರುವಾದ 'ವಿದ್ಯುನ್ಮಾಲಾ' ವೃತ್ತದಲ್ಲಿ. (ವಿದ್ಯುನ್ಮಾಲಾ ಮೌಗೌ – ಪಿಂಗಲ ೬–೬; "ಕಾಂತಂ ವಿದ್ಯುನ್ಮಾಲಾವೃತ್ತಂ"–ಛಂದೋಂಬುಧಿ) ಪರಮಾವಧಿಯ 'ತಾನ'ಗುಣವುಳ್ಳ ಈ ವೃತ್ತವು, ಪೂರ್ವೋಕ್ತ ವರ್ಗೀಕರಣದಂತೆ 'ವಿತಾನ'ವರ್ಗದಲ್ಲಿ ಸೇರಬೇಕಾಗುತ್ತದೆ! ಆದುದರಿಂದ ಆ ವರ್ಗೀಕರಣವು ಅಪರ್ಯಾಪ್ತವೆಂದು ಹೇಳದೆ ನಿರ್ವಾಹವಿಲ್ಲ. ಇದೂ ಅಲ್ಲದೆ – ಭುಜಂಗಪ್ರಯಾತ, ತೋಟಕ ಇತ್ಯಾದಿ ಏಕರೂಪಗಣ ಘಟಿತವಾದ ವೃತ್ತಗಳಲ್ಲಿಯೂ 'ತಾನ'(=ಗತಿಯ ಏಕರೂಪತೆ)ವು ಭಾಸವಾಗುವುದರಿಂದ ಅವುಗಳನ್ನು ವಿತಾನವರ್ಗಕ್ಕೆ ಸೇರಿಸುವುದೂ ಸಮಂಜಸವಾಗಿ ಕಾಣುವುದಿಲ್ಲ. [ಆದರೆ ಮಹಾಮತಿಯಾದ ಪಿಂಗಲಾಚಾರ್ಯನು ವೃತ್ತಗತಿಭೇದಗಳನ್ನು ಹೀಗೆ ಅಪರ್ಯಾಪ್ತವಾಗಿ ಹೇಳಿರಲಾರನೆಂದೇ ನನಗೆ ತೋರುತ್ತದೆ. ನಮಗೀಗ ಲಭ್ಯವಾಗಿರುವ ಪಿಂಗಲಸೂತ್ರಗಳು ಹಲಾಯುಧನಿಂದ ಸಂಪಾದಿತ(edited)ವಾದವುಗಳು. ಮೂಲಗ್ರಂಥವು ಹಲಾಯುಧನ ಕಾಲದಲ್ಲಿ ಮೃತಪ್ರಾಯವಾಗಿತ್ತೆಂಬುದನ್ನು "ಮೃತಸಂಜೀವಿನೀ" ಎಂಬ ಅವನ ವ್ಯಾಖ್ಯಾನದ ಹೆಸರೇ ಹೇಳುತ್ತದೆ. ಹಲಾಯುಧನು ನಮಗೆ ಒದಗಿಸಿರುವ (ಅವನ ಈ ಶ್ಲಾಘ್ಯವಾದ ಪರಿಶ್ರಮಕ್ಕೆ ನಾವು ಅತ್ಯಂತ ಕೃತಜ್ಞರೇ ಸೈ.) ಪಿಂಗಲಸೂತ್ರಗಳಲ್ಲಿ ಕೆಲವು, ಪ್ರಕ್ಷಿಪ್ತವಾಗಿಯೂ ಕಂಡುಬರುತ್ತವೆ. ಉದಾ: ಹಿಂದೆ 40ನೆಯ ಟಿಪ್ಪಣಿಯಲ್ಲಿ ಸೂಚಿಸಿದ "ವೃತ್ತ". ಇದು ಮಾತ್ರ ಅಲ್ಲ; ಪಿಂಗಲಸೂತ್ರಗಳ ಕೊನೆಯ ಭಾಗದಲ್ಲಿರುವ "ಅತ್ರಾನುಕ್ತಂ ಗಾಥಾ"(೮–೧) ಎಂಬ ಸೂತ್ರಕ್ಕೆ ಹಲಾಯುಧನ ವ್ಯಾಖ್ಯಾನವು – "ಅತ್ರ ಶಾಸ್ತ್ರೇ ನಾಮೋದ್ದೇಶೇನ ಯನ್ನೋಕ್ತಂ ಛಂದಃ, ಪ್ರಯೋಗೇ ಚ ದೃಶ್ಯತೇ ತದ್ಗಾಥೇತಿ ಮಂತವ್ಯಂ" (ಇದರ ತಾತ್ಪರ್ಯ :– ಈ ಶಾಸ್ತ್ರದಲ್ಲಿ ಹೆಸರಿಸಿ ಹೇಳದಿರುವ, ಆದರೆ ಕಾವ್ಯಾದಿಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ಛಂದೋ–ಬಂಧವನ್ನು 'ಗಾಥಾ' ಎಂದು ತಿಳಿಯಬೇಕು.) ಹೀಗಿರುವುದಾದರೂ – ಈ ಸೂತ್ರ–ವ್ಯಾಖ್ಯಾನದ ಅನಂತರ 'ಕುಡ್ಮಲದಂತೀ' ಎಂಬುದು ಮೊದಲುಗೊಂಡು 'ಶಶಿವದನಾ' (="ಪಂಚಕಾವಲೀ" ಎಂದೂ ಇದಕ್ಕೆ ಅಲ್ಲಿ ಹೆಸರು ಕೊಡಲಾಗಿದೆ. ಕನ್ನಡದಲ್ಲಿ ಪ್ರಸಿದ್ಧವಾಗಿರುವ 'ಚಂಪಕಮಾಲಾವೃತ್ತ'ವೆಂದರೆ ಇದೇ.) ಎಂಬುದರವರೆಗೆ ಹದಿನೆಂಟು 'ಸಮವೃತ್ತ'ಗಳ ಲಕ್ಷಣವನ್ನೂ ಅವುಗಳ ಹೆಸರುಗಳನ್ನೂ ಹೇಳುವ ಸೂತ್ರಗಳಿವೆ. (ಇವುಗಳನ್ನು ಹಲಾಯುಧನು 'ಗಾಥಾ' ಎಂದೇ ಹೆಸರಿಸಿದ್ದಾನೆ.) "ಅತ್ರಾನುಕ್ತಂ ಗಾಥಾ" ಎಂಬುದು ಪಿಂಗಳನ ಉಕ್ತಿಯೆಂದಾದರೆ, ಅದರ ಮುಂದಿನ ಆ ಹದಿನೆಂಟು ವೃತ್ತಲಕ್ಷಣಸೂತ್ರಗಳಾಗಲಿ ಅವುಗಳ ಹೆಸರುಗಳಾಗಲಿ ಪಿಂಗಲೋಕ್ತವೆಂದಾಗುವುದು ಹೇಗೆ? ಆದುದರಿಂದ ಇವು ಪಿಂಗಲೋತ್ತರಕಾಲದಲ್ಲಿ ಯಾರಿಂದಲೋ ರಚಿತವಾಗಿ ಪ್ರಕ್ಷಿಪ್ತವಾದವುಗಳೆಂಬುದರಲ್ಲಿ ಸಂದೇಹವಿಲ್ಲ. ಹೀಗೆ ಕೆಲವು ಸೂತ್ರಗಳು ಪ್ರಕ್ಷಿಪ್ತವಾಗಿರುವಂತೆ, ಬೇರೆ ಕೆಲವು ಸೂತ್ರಗಳು ನಷ್ಟವಾಗಿರುವುದೂ ಸಂಭಾವ್ಯವೇ ಸರಿ. ವೃತ್ತಗಳ ಗತಿಭೇದಗಳನ್ನು ನಿರೂಪಿಸುವ

ಸೂತ್ರಗಳೊಳಗೆ ಕೆಲವು ಹಾಗೆ ನಷ್ಟವಾಗಿವೆಯೋ ಏನೋ, ಯಾರು ಹೇಳಬಲ್ಲರು?] ಈ ವರ್ಗೀಕರಣವು ಪರ್ಯಾಪ್ತವೆನಿಸಬೇಕಾದರೆ 'ಸತಾನವರ್ಗ'ದಲ್ಲಿ ಸಮಾನೀ ಪ್ರಮಾಣೀ ಎಂಬ ಎರಡಲ್ಲದೆ, ಇನ್ನೂ ಎರಡು ಮೂರು ಗತಿಭೇದಗಳನ್ನು ಸಂಜ್ಞಿಸಬೇಕಾಗುತ್ತದೆ. ಆಗ ಆ ವ್ಯವಸ್ಥೆ ಈ ತೆರನಾಗುತ್ತದೆ:-

ವೃತ್ತಗತಿ ಮೂಲತಃ 'ಸತಾನ'ವೆಂದೂ 'ವಿತಾನ'ವೆಂದೂ ದ್ವಿವಿಧ. 'ತಾನ' ಹುಟ್ಟುವುದು ಸಮಾನರೂಪದ ಸಣ್ಣ ಸಣ್ಣ ಛಂದಃಖಂಡಗಳ ಪುನರಾವರ್ತನಪರಂಪರೆ-ಯಿಂದ - ಎಂಬುದು ಸಮಾನೀ ಪ್ರಮಾಣೀ ಗತಿಗಳ ಲಕ್ಷಣವನ್ನು ಹೇಳುವ ಪಿಂಗಳ ಸೂತ್ರಗಳಿಂದ ತಿಳಿಯುತ್ತದೆ. ಈ ಪ್ರಕ್ರಮವನ್ನೇ ಅನುಸರಿಸಿ ಪರಿಭಾವಿಸಿದಾಗ - ಒಂದೇ ಬಗೆಯ ಛಂದೋದ್ರವ್ಯ, ಎಂದರೆ ಕೇವಲ ಗುರುಗಳ ಅಥವಾ ಕೇವಲ ಲಘುಗಳ ಪುನಃಪುನರಾವರ್ತನದಿಂದ ಉನ್ಮೀಲಿತವಾಗುವ ಗತಿಯಲ್ಲಿ ತಾನಗುಣದ ಪರಮಾವಧಿಯನ್ನು ನಾವು ಕಾಣುತ್ತೇವೆ. ಈ ಗತಿಯನ್ನು 'ಏಕತಾನಗತಿ' ಅಥವಾ 'ಏಕತಾನೀ' ಎಂದು ಹೆಸರಿಸುವುದು ಉಚಿತವಾಗಬಹುದು. ಇನ್ನು - ಪಿಂಗಲೋಕ್ತವಾದ ಎಂಟು 'ಅಕ್ಷರಗಣ'-ಗಳೊಳಗೆ 'ಮಗಣ'ದ ಅಥವಾ 'ನಗಣ'ದ ಪುನರಾವರ್ತನದಿಂದ ಹುಟ್ಟುವ ಗತಿಗಳು 'ಏಕತಾನಿ'ಗಳೇ ಆಗಿ ಪರಿಣಮಿಸುವುದರಿಂದ, ಅವೆರಡು ಗಣಗಳು ಹೊರತಾಗಿ, ಉಳಿದ ಆರು ಗಣಗಳ ಪುನರಾವರ್ತನದಿಂದ ಹುಟ್ಟುವ ಗತಿಗಳನ್ನು 'ದಂಡಕಗತಿ'ಗಳೆಂದು ಕರೆದರೆ ಒಪ್ಪಬಹುದು. ಏಕೆಂದರೆ, 'ದಂಡಕ' ಎಂಬ ಹೆಸರಿನ ಅಕ್ಷರಚ್ಛಂದೋವರ್ಗವು ಈ ಆರು ಗಣಗಳೊಳಗೆ ಯಾವುದಾದರೊಂದರ ಮಾಲಿಕೆಯಾಗಿರುತ್ತದೆ. ('ದಂಡಕ'ವೆಂಬುದು ಆದಿಯಲ್ಲಿ 'ರಗಣಮಾಲಿಕೆ'ಯಾಗಿದ್ದರೂ ಮತ್ತೆ ಯತಭಾದಿಗಣಘಟಿತವಾದ ದಂಡಕಗಳೂ ಹುಟ್ಟಿದವು.) ಮೂರಕ್ಷರಗಳಿಗಿಂತ ಅಧಿಕಾಕ್ಷರದ ಛಂದಃಖಂಡದ ಪುನರಾವರ್ತನವಿರುವಲ್ಲಿ, ಅದನ್ನು 'ಅತಿದಂಡಕಗತಿ' ಎನ್ನಬಹುದು. ಈ ಗತಿಯನ್ನು ಮುಖ್ಯವಾಗಿ ಮಾಲಾವೃತ್ತಗಳಲ್ಲಿ ಕಾಣುತ್ತೇವೆ. ಈಗ - ಇಲ್ಲಿ (ಹೊಸತಾಗಿ) ಸೂಚಿಸಿರುವ ಸತಾನಗತಿಭೇದಗಳನ್ನೂ ಪಿಂಗ-ಲೋಕ್ತವಾದ (ಸಮಾನೀ ಪ್ರಮಾಣೀ ಎಂಬ) ಸತಾನಗತಿಭೇದಗಳನ್ನು ಸೋದಾಹರಣವಾಗಿ ಕ್ರೋಡೀಕರಿಸೋಣ:

(೧) ಏಕತಾನಗತಿ - ಇದು ದ್ವಿವಿಧ: ಗುರುಪರಂಪರೆಯಿಂದ ಒಂದು, ಲಘುಪರಂಪರೆಯಿಂದ ಇನ್ನೊಂದು, ಗುರುಪರಂಪರೆಗೆ ಉದಾ: 'ವಿದ್ಯುನ್ಮಾಲಾವೃತ್ತ.'

"ಕಾಂತಂ ವಿದ್ಯುನ್ಮಾಲಾವೃತ್ತಂ" (ಛಂದೋಂಬುಧಿ)

ಲಘುಪರಂಪರೆಗೆ ಉದಾ: 'ಲಹರಿಕಾವೃತ್ತ' (ಜಯಕೀರ್ತಿ ೨-೨೭)

"ನಗಣದಶಕಮಪಿ ಸಗುರು ಸಯತಿ ಯದಿ ಸುಗಮರತಿ ಲಸತಿ ಜಗತಿ ಲಹರಿಕಾ"

(೨) ಸಮಾನೀಗತಿ - ಉದಾ: 'ಸ್ಯೈನಿಕವೃತ್ತ'

"ಪಾದ । ಪಾಶ । ನಾರ್ಕ । ಪಾವ । ಕಂ ಲ । ಗಂ" ॥ (ಛಂದೋಂಬುಧಿ)

(೩) ಪ್ರಮಾಣೀಗತಿ - ಉದಾ: 'ಪಂಚಚಾಮರವೃತ್ತ'

"ಚಿದಂ । ಬಿರ । ಸ್ವರೂ । ಪಿ ಚಿ । ತ್ತ್ರಜ । ನ್ಮವಂ । ದ್ಯೆ ಚಿ । ನ್ಮಯೇ ॥

(ವೃಷಭೇಂದ್ರವಿಜಯ)

(೪) ದಂಡಕಗತಿ- ಇದು ಆರು ವಿಧ:

(a) ಯಗಣಗತಿ–'ಭುಜಂಗಪ್ರಯಾತವೃತ್ತ'. ಉದಾ:

"ಕುಶಂವಾ । ರ್ಧಿಪರ್ಯಾ । ಯಮಕ್ಕಂ । ವಿರಾಮಂ ॥ (ಛಂದೋಂಬುಧಿ)

(b) ರಗಣಗತಿ– 'ಸ್ರಗ್ವಿಣೀವೃತ್ತ'. ಉದಾ:

"ಖ್ಯಾತಮಂ । ಭೋಜಪ । ತ್ರೋಪಮಾ । ನೇಕ್ಷಣೇ ॥ (ಛಂದೋಂಬುಧಿ)

(c) ಸಗಣಗತಿ– 'ತೋಟಕವೃತ್ತ'. ಉದಾ:

"ಪವಮಾ । ನ ಚತು । ಷ್ಕಯುತಂ । ಯತಿಯುಂ" ॥ (ಛಂದೋಂಬುಧಿ)

(d) ತಗಣಗತಿ– 'ಲಯಗ್ರಾಹಿವೃತ್ತ'. ಉದಾ:

"ವ್ಯೋಮಂ ನ । ಭೋಕಾಶ । ಮೀಶದ್ವ । ಯಂಗಳ್ ॥" (ಛಂದೋಂಬುಧಿ)

(e) ಜಗಣಗತಿ– 'ಜಗಣ' ಘಟಿತವಾದ ದಂಡಕಗತಿಯ ವೃತ್ತವು ಕನ್ನಡ ಸಂಸ್ಕೃತಗಳಲ್ಲಿ ಅಪೂರ್ವ, (ಈ ಮಾತಿಗೆ ಅಪವಾದವಾಗಿ, ಹೇಮಚಂದ್ರ ಜಯಕೀರ್ತಿಗಳ ಛಂದೋನು ಶಾಸನಗಳಲ್ಲಿ, ನಾಲ್ಕು ಜಗಣಗಳಿಂದ ಘಟಿತವಾದ ಪಾದದ "ಮೌಕ್ತಿಕದಾಮ" ಎಂಬ ವೃತ್ತವೊಂದು ಪ್ರೋಕ್ತವಾಗಿರುವುದು ಕಂಡುಬರುತ್ತದೆ.) ಆದರೆ ಹಿಂದೀ ಭಾಷೆಯಲ್ಲಿ ಅಂಥವುಗಳನ್ನು ಕಾಣಬಹುದಾಗಿದೆ. ಉದಾ: 'ಮುಕ್ತಹರವೃತ್ತ'.

"ಜುಯೋಗ । ಬಲೀಸು । ಮನೋಭ । ವಮುಕ್ತ । ಹರ್ಯಂಶಿ । ವಜೀತಿ । ನಕೇದು ।
ಖಿದಂದ ॥" (ಛಂದಃಪ್ರಭಾಕರ–ಪುಟ ೨೦೫)

(f) ಭಗಣಗತಿ – ಉದಾ: 'ವನಮಂಜರೀವೃತ್ತ'

"ಶೀತಕ । ರಪ್ರಕ । ರಂಗಳ । ವೇಟಿಡೆ । ಯೋಳಿಯೊ । ಳ್ಕೈದಲ । ನುಕ್ರಮ । ದಿಂ"
(ಛಂದೋಂಬುಧಿ)

(೫) ಅತಿದಂಡಕಗತಿ – ಉದಾ: 'ಲಲಿತವೃತ್ತ'.

"ಶ್ರೀನಿಲಯ । ಮಂ ವಿಬುಧ । ಮಾನಿತಮ । ನುಜ್ವಲವ । ಚೋನಿಚಿತ । ಮಂ ರಚಿತ ।
ಮಂ ಕವಿಗ । ಳಿಂದಂ" ॥

ಇವಿಷ್ಟು ಸತಾನಗತಿಗಳು. ಇವುಗಳಂತಿರದ – ಎಂದರೆ ಏಕರೂಪದ (ಸಣ್ಣಸಣ್ಣ) ಛಂದಃ ಖಂಡಗಳ ಆವರ್ತನಪರಂಪರೆಯಾಗಿರದ – ಎಲ್ಲಾ ವೃತ್ತಗಳ ಗತಿ "ವಿತಾನ". (ಹೋಲಿಸಿ ನೋಡಿದರೆ, ಇಂಗ್ಲಿಷ್ ಛಂದೋಬಂಧಗಳೆಲ್ಲವೂ ಸತಾನಗತಿಯವೆಂಬುದು ವಿಶದವಾಗ–ದಿರದು.) 'ಸತಾನಗತಿ'ಯ ವೃತ್ತಗಳೆಲ್ಲವೂ ನಿರಪವಾದವಾಗಿ ಸ್ಫುಟಲಯವುಳ್ಳವುಗಳೇ ಆಗಿರುತ್ತವೆ. 'ವಿತಾನಗತಿ'ಯ ವೃತ್ತಗಳಲ್ಲಿ ಲಯಾನ್ವಿತವಾದವುಗಳೂ ಇವೆ, ಲಯರಹಿತ–ವಾದವುಗಳೂ ಇವೆ. ಉದಾ: ಚಿತ್ರಪದಾ, ರಥೋದ್ಧತಾ, ಜಲೋದ್ಧಗತಿ, ಮತ್ತಮಯೂರ, ತನ್ವೀ, ಭ್ರಮರವಿಲಸಿತ ಇತ್ಯಾದಿ ಸಮವೃತ್ತಗಳೂ, ದ್ರುತಮಧ್ಯಾ (ಪಿಂಗಳ ೫–೩೩) ಇತ್ಯಾದಿ ಅರ್ಧಸಮವೃತ್ತಗಳೂ, ಉದ್ಗತಾ (ಪಿಂಗಳ ೫–೨೫) ಇತ್ಯಾದಿ ವಿಷಮವೃತ್ತಗಳೂ ಲಯಾನ್ವಿತವಾದ ವಿತಾನವೃತ್ತಗಳು. ಶಾರ್ದೂಲವಿಕ್ರೀಡಿತ, ಸ್ರಗ್ಧರಾ, ಮಂದಾಕ್ರಾಂತಾ, ಮಾಲಿನೀ ಇತ್ಯಾದಿಗಳು ಲಯರಹಿತವಾದ ವಿತಾನವೃತ್ತಗಳು. ಹೀಗೆ ಗತಿಭೇದಾನುಗುಣವಾಗಿ 'ವೃತ್ತ'ಗಳನ್ನು (=ಸಮವೃತ್ತ, ಅರ್ಧಸಮವೃತ್ತ, ವಿಷಮವೃತ್ತ ಎಂಬ ಮೂರು ವಿಧದ,

**{ಪಿಂಗಲಸೂತ್ರಗಳಲ್ಲಿ 'ಗತಿ'ಯ ಸೂಚನೆಗಳು}**

"ಮಯರಸತಜಭನಲಗ" ಎಂಬಿಷ್ಟರಿಂದಲೇ ಯಾವುದೊಂದು ವೃತ್ತದ ಗತಿಸ್ವರೂಪವು ಸಂಪೂರ್ಣವಾಗಿ ಪ್ರಕಟಿತವಾಗದಿರುವ ಸಂದರ್ಭ ಬಂದಲ್ಲಿ – ಆ ವೃತ್ತವನ್ನು ಪಠಿಸುವಾಗ ಅನುಸರಿಸಬೇಕಾದ ವಿಧಿಯನ್ನು ಪಿಂಗಳನು ಸೂಚಿಸಿದ್ದುಂಟು. ಉದಾ – (ಪಿಂಗಲ ೫–೨೫) "ಉದ್ಗತಾಮೇಕತಃ" (ಪಠೇತ್ ಇತ್ಯಧ್ಯಾಹಾರ್ಯಂ – ಹಲಾಯುಧ.) 'ಉದ್ಗತಾ' ಎಂಬುದು ಪ್ರಸಿದ್ಧ-ವಾದೊಂದು ವಿಷಮವೃತ್ತ. ಅದರ ಸ್ವರೂಪ ಈ ಕೆಳಗಿನಂತೆ:

∪∪– ∪– ∪ ∪∪–∪
ಕನಕಾಂಗದ ದ್ಯುತಿಭಿರಸ್ಯ ।
∪∪ ∪ ∪ ∪ – ∪– ∪–
ಗಮಿತ ಮರುಚತ್ ಪಿಶಂಗತಾಮ್ ॥
– ∪∪∪ ∪∪∪– ∪∪–
ಕ್ರೋಧಮಯ ಶಿಖಿಶಿಖಾಪಟಲೈಃ ।
∪∪– ∪– ∪∪∪ – ∪ – ∪–
ಪರಿತಃ ಪರೀತಮಿವ ಬಾಹುಮಂಡಲಮ್ ॥

(ಶಿಶುಪಾಲವಧ–ಸರ್ಗ ೧೫–೭)

ಪಿಂಗಳನ ಆ ಸೂತ್ರದಲ್ಲಿ ಬಂದಿರುವ 'ಏಕತಃ' ಎಂಬುದಕ್ಕೆ ಹಲಾಯುಧನ ವ್ಯಾಖ್ಯಾನ ಹೀಗೆ: "ಏಕತಃ ಇತಿ, ಪ್ರಥಮಂ ಪಾದಂ ದ್ವಿತೀಯೇನ ಸಹ ಅವಿಲಂಬೇನ ಪಠೇತ್ ಇತ್ಯರ್ಥಃ" (ಇದರ ತಾತ್ಪರ್ಯ:– ಈ ವೃತ್ತವನ್ನು ಪಠಿಸುವಾಗ ಮೊದಲಿನ ಪಾದದ ಕೊನೆಯಲ್ಲಿ ವಿರಮಿಸದೆ ಎರಡನೆಯ

---

ಗುರುಲಘುಸ್ಥಿರವಾದ ಛಂದೋಬಂಧಗಳನ್ನು) ವರ್ಗೀಕರಿಸುವಾಗ, ಅವುಗಳ ಜನ್ಯಜನಕ ಭಾವವು ಈ ಕೆಳಗಿನಂತಾಗುತ್ತದೆ:

- ವೃತ್ತ
  - ಸತಾನ*
    - ಏಕತಾನೀ**
    - ಸಮಾನೀ
    - ಪ್ರಮಾಣೀ
    - ದಂಡಕೀ
    - ಅತಿದಂಡಕೀ
  - ವಿತಾನ
    - ಲಯಾನ್ವಿತ ವಿತಾನ
    - ಲಯರಹಿತ ವಿತಾನ

* ಸತಾನವೃತ್ತಗಳೆಲ್ಲವೂ ಲಯಾನ್ವಿತಗಳೇ ಆಗಿರುತ್ತವೆ.

**'ಏಕತಾನತೆ'ಯ ಪೂರ್ಣಾನುಭವವಾಗಬೇಕಾದರೆ, ಏಕತಾನಗತಿಯ ವೃತ್ತಗಳನ್ನು ಆಮೂಲಾಗ್ರವಾಗಿ 'ಸಮಾನಧ್ವನಿ'ಯಲ್ಲಿ ಪಠಿಸಬೇಕು; ಎಂದರೆ ಉಚ್ಚಾರದಲ್ಲಿ ಏರಿಳಿತಗಳಿಲ್ಲದಿರಬೇಕು.

ಪಾದವನ್ನೆತ್ತಿಕೊಳ್ಳಬೇಕು ಎಂದಾಗಿದೆ.) ವೃತ್ತಗಳೆಲ್ಲೆಲ್ಲ ಪ್ರತಿಯೊಂದು ಪಾದದ ಕೊನೆಯ ಅಕ್ಷರವು – ಸಾಧಾರಣವಾಗಿ – ಗುರುವೇ ಆಗಿರುತ್ತದೆ; ಒಮ್ಮೊಮ್ಮೆ ಆ ಸ್ಥಾನದಲ್ಲಿ ಲಘುವನ್ನು ಪ್ರಯೋಗಿಸುವುದುಂಟಾದರೂ ಅದು ಗುರುವೆಂದೇ ಗ್ರಹಿಸಲ್ಪಟ್ಟು, ದೀರ್ಘೀಕೃತವಾಗಿ ಪಠಿಸಲ್ಪಡುತ್ತದೆ. ಆದರೆ ಉದ್ಗತಾವೃತ್ತದ ಪ್ರಥಮಪಾದದ ಕೊನೆಯ ಅಕ್ಷರವು ಗುರುವಾಗಿ ಉಚ್ಚರಿಸಲ್ಪಡುವ ಲಘುವಲ್ಲ; ಪಿಂಗಲೋಕ್ತಲಕ್ಷಣಾನುಸಾರವಾಗಿ ಅದು ನಿಯತಲಘು. ಹಲಾಯುಧನು, "ಉದ್ಗತಾ ವೃತ್ತದ ಮೊದಲಿನ ಎರಡು ಪಾದಗಳನ್ನು ಮಾತ್ರ ಒಂದಾಗಿ ಪಠಿಸಬೇಕು" – ಎಂದು ಹೇಳುವುದರ ಕಾರಣವು ಇದುವೇ ಆಗಿದೆ ಎಂಬುದು ಆ ಸೂತ್ರದ ವ್ಯಾಖ್ಯಾನದ ಕೊನೆಯಲ್ಲಿರುವ ಮಾತುಗಳಿಂದ ವ್ಯಕ್ತವಾಗುತ್ತದೆ. (ಪಿಂಗಲ, ೫-೨೫ನೆಯ ಸೂತ್ರದ ವ್ಯಾಖ್ಯಾನ.) ಆದರೆ ಪಿಂಗಲನ ಆಶಯವು ಅಷ್ಟೇ ಆಗಿರುತ್ತಿದ್ದರೆ "ಏಕತಃ ಪಠೇತ್" ಎಂದು ಅಲ್ಲಿ ಹೇಳಬೇಕಾದ ಅವಶ್ಯಕತೆಯೇನೂ ಇರಲಿಲ್ಲ; ಆ ವೃತ್ತದ ಲಕ್ಷಣನಿರೂಪಣೆಯಲ್ಲಿ ಅದರ ಪ್ರಥಮ ಪಾದಾಂತ್ಯವನ್ನು ಲಘುವೆಂದೇ ಅವನು ಸ್ಪಷ್ಟವಾಗಿ ಹೇಳಿದ್ದಾನೆ. ಗುರುವಾಗಿ ಉಚ್ಚರಿಸಲ್ಪಡಬೇಕಾದ ಲಘ್ವಕ್ಷರವು ಪಾದಾಂತದಲ್ಲಿ ಇರಬಹುದಾದ ಸಂದರ್ಭ–ಗಳಲ್ಲೆಲ್ಲ ಆ ಸ್ಥಾನವನ್ನು ಗುರುವೆಂದೇ ಅವನೂ ಸೂತ್ರಿಸಿದ್ದಾನೆ. ಹಾಗಾದರೆ ಇಲ್ಲಿ ಪಿಂಗಲನು "ಏಕತಃ ಪಠೇತ್" ಎಂದು ಹೇಳಿದುದರ ಉದ್ದೇಶವೇನು?

ಇದು ನಮಗೆ ಅವಗತವಾಗಬೇಕಾದರೆ, ಪಿಂಗಳನು "ಏಕತಃ" ಎಂದು ಹೇಳಿದ್ದು ಪದ್ಯದ ಪೂರ್ವಾರ್ಧಕ್ಕೆ ಮಾತ್ರ ಸೀಮಿತವಾದುದಾಗಿರದೆ, ಉತ್ತರಾರ್ಧಕ್ಕೂ ಅನ್ವಯಿಸುವ ಮಾತೆಂದು ಗ್ರಹಿಸಬೇಕು. ಎಂದರೆ– ಈ ವೃತ್ತದ ಎರಡೆರಡು ಪಾದಗಳನ್ನು (ಅವು ಒಂದೊಂದೇ ಪಾದವಾಗಿದ್ದರೆ ಹೇಗೋ ಹಾಗೆ) ಎಡೆಯಲ್ಲಿ ಎಲ್ಲಿಯೂ ನಿಲ್ಲಿಸದೆ ಪಠಿಸಬೇಕು. ಆಗ ಮಾತ್ರ ಇದರ 'ಗತಿ'ಯ ಪರಿಚಯವು ನಮಗಾಗುತ್ತದೆ; ಮತ್ತು ಈ ವೃತ್ತದ ಛಂದೋಗತಿಯ ಸಹಜವಾದ ಹಜ್ಜೆಗಳು ಈ ಕೆಳಗಿನಂತಿರುವುದೂ ಗೊತ್ತಾಗುತ್ತದೆ:

ಕನಕಾಂಗದದ್ಯು । ತಿಭಿರಸ್ಯ ಗಮಿತ । ಮರುಚತ್ ಪಿಶಂಗ । ತಾಮ್– ॥<br>
ಕ್ರೋಧಮಯಶಿಖಿಶಿ । ಖಾಪಟಲ್ಯೈಃ ಪರಿ । ತಃ ಪರೀತಮಿವ ।<br>
ಬಾಹುಮಂಡಲಮ್ ॥

ಈಗ, ಇದು ಲಯಾನ್ವಿತವಾದೊಂದು ವಿತಾನವೃತ್ತವೆಂಬುದು ಗೊತ್ತಾಗದಿರದು. ಗುರುಲಘುಸ್ಥಿರವಾದ ಇದರ ಛಂದಃಖಂಡಗಳು ಎಂಟೆಂಟು ಮಾತ್ರೆಯವು. ಇದರ ಪಾದದ್ವಂದ್ವಗಳನ್ನು, ಮೇಲೆ ಹೇಳಿದ ರೀತಿಯಲ್ಲಿ ಯಥಾಕ್ಷರಗುರುಲಘುವಾಗಿ ಓದುವಾಗ ಎಂಟೆಂಟು ಮಾತ್ರೆಗಳ ಆವರ್ತಗಳು ಸ್ಫುರಿಸುತ್ತವೆ. ಇದರ ಪೂರ್ವಾರ್ಧದ ಕೊನೆಯ ಖಂಡವು ಅಪೂರ್ಣ–ವಾಗಿರುವುದು ವಿರಾಮಾವಕಾಶವನ್ನೊದಗಿಸುವುದಕ್ಕಾಗಿದೆ. (ಲಯಾನ್ವಿತವಾದ

ಪದ್ಯವರ್ಗಗಳಲ್ಲೆಲ್ಲ ಇಂತಹ ವಿರಾಮಾವಕಾಶವಿರುವುದು ಸಾಮಾನ್ಯವಾದೊಂದು ನಿಯಮ; ಈ ನಿಯಮಕ್ಕೆ ಅಪವಾದ ಅತ್ಯಲ್ಪ. ಲಯಾನ್ವಿತವಾದ ಪದ್ಯಶರೀರದಲ್ಲಿ ಎಲ್ಲಿಯೂ ವಿರಾಮಾವಕಾಶವಿಲ್ಲದಿದ್ದರೆ, ಅದು 'ರಗಳೆ'ಯ ಸ್ವರೂಪವನ್ನು ಪಡೆಯುತ್ತದೆ.) ಹೀಗೆ – ಇದೊಂದು ಸಮಗತಿಯ ಎಂದರೆ ಲಯಾನ್ವಿತವಾದ ವೃತ್ತವಾದರೂ 'ವಿಚಿತ್ರಗತಿ'ಗರ್ಭಿತವಾಗಿದ್ದು, ಅಪೂರ್ವವಾದೊಂದು ಗತಿ-ಸೌಂದರ್ಯವನ್ನು ಪ್ರಕಟಿಸುವ ಛಂದೋಬಂಧವಾಗಿದೆ. ಕರ್ಣಾಟಕಸಂಗೀತಪದ್ಧತಿ-ಯಂತೆ, ಎಂಟು ಮಾತ್ರೆಗಳ ಆವರ್ತದ ತಾಳಮಾನವನ್ನವಲಂಬಿಸಿ ಮೃದಂಗ ವಾದನಮಾಡುವ ಸಂದರ್ಭಗಳಲ್ಲಿ ಕೇಳಿಬರುವ ಚಿತ್ರವಿಚಿತ್ರಘಾತ(=ಹೊಡೆತ)-ಗಳನ್ನು ಈ ವೃತ್ತದ ಗುರುಲಘುಗಳು ಬಿಂಬಿಸುವಂತಿವೆ. ಆದರೆ ಇದರ ಪಾದದ್ವಂದ್ವಗಳನ್ನು ಪ್ರತ್ಯೇಕಿಸಿ ಪಠಿಸಿದರೆ ಈ ವೃತ್ತವು ಲಯರಹಿತವೆಂದು ಭಾಸವಾಗುತ್ತದೆ; ಮತ್ತು ವೀರರೌದ್ರರಸೋಚಿತವೂ ವಿಚಿತ್ರವೂ ಆದ ಇದರ ಗತಿಸೌಂದರ್ಯದ ಅನುಭವ ನಮಗಾಗುವುದೂ ಇಲ್ಲ. ಆದುದರಿಂದಲೇ ಪಿಂಗಳನು "ಉದ್ಗತಾಮೇಕತಃ" ಎಂದು ಸೂತ್ರಿಸಿದ್ದಾನೆಂದು ತಿಳಿಯಬೇಕು. (ಮುಂದೆ ೫-೨೮ನೆಯ ಸೂತ್ರದಲ್ಲಿ "ಉಪಸ್ಥಿತಪ್ರಚುಪಿತಂ ಪೃಥಗಾದ್ಯಂ" ಎಂದು ಪಿಂಗಳನು ಹೇಳಿರುವಲ್ಲಿಯೂ – ಮೊದಲಿನ ಎರಡು ಪಾದಗಳನ್ನು ಜೋಡಿಸಿ ಪಠಿಸಬಾರದೆಂದು ಮಾತ್ರ – ಹಲಾಯುಧನು ಹೇಳಿದಂತೆ – ಅರ್ಥಮಾಡದೆ, ಮೂರನೆಯ ಮತ್ತು ನಾಲ್ಕನೆಯ ಪಾದಗಳನ್ನು – ಉದ್ಗತಾವೃತ್ತದಲ್ಲಿ ಹೇಗೋ ಹಾಗೆ – ಜೋಡಿಸಿ ಪಠಿಸಬೇಕು ಎಂದೂ ಅರ್ಥ ಮಾಡಿಕೊಂಡು ಈ ವಿಷಮವೃತ್ತವನ್ನು ಪಠಿಸಿದರೆ, ಉದ್ಗತಾವೃತ್ತದಂತೆಯೇ ಲಯಾನ್ವಿತವಾದ ಅದರ ಗತಿಸೌಂದರ್ಯವು ಪೂರ್ಣವಾಗಿ ಪ್ರಕಾಶಿತವಾಗುತ್ತದೆ.) ಪಿಂಗಳನು "ಉದ್ಗತಾ-ಮೇಕತಃ (ಪಠೇತ್)" ಎಂದು ಹೇಳಿದುದರ ಉದ್ದೇಶವನ್ನು ಹಲಾಯುಧನು ಪೂರ್ಣವಾಗಿ ಗ್ರಹಿಸಿಲ್ಲವಾದರೂ, ಬೇರೆ ಕೆಲವು ಸಂದರ್ಭಗಳಲ್ಲಿ – "ಈ ವೃತ್ತದ ಪಠನಕ್ರಮ ಹೀಗೆ" ಎಂದು ಹೇಳುವ ಮೂಲಕ ಆ ವೃತ್ತಗಳ ಗತಿಸ್ವರೂಪವನ್ನು ಅವನೂ ಒಂದಿಷ್ಟು ತಿಳಿಸಿದ್ದು ಕಂಡುಬರುತ್ತದೆ. ಉದಾ:– 'ತನುಮಧ್ಯಾವೃತ್ತ' ಲಕ್ಷಣಸೂತ್ರ(೬-೨)ದ ವ್ಯಾಖ್ಯಾನದಲ್ಲಿ – "ಅತ್ರ ತು ಪಾದಾಂತೇ ವಿಶೇಷೇಣ ವಿಶ್ರಾಮಃ ಕರ್ತವ್ಯ ಇತ್ಯಾಮ್ನಾಯಃ"; ಎಂದರೆ, "ಈ ವೃತ್ತದ ಪಾದಗಳ ಕೊನೆಯಲ್ಲಿ ಸ್ವಲ್ಪ ಹೆಚ್ಚಾಗಿ ವಿರಮಿಸಿ ಮುಂದಿನ ಪಾದವನ್ನು ಪಠಿಸುವುದು ಅವಶ್ಯವೆಂದು ಪರಂಪರಾಗತವಾಗಿ ಉಪದಿಷ್ಟವಾಗಿದೆ" ಎಂದು ಅವನು ಹೇಳುತ್ತಾನೆ. ಇದಕ್ಕೆ ಕಾರಣವನ್ನಾಗಲಿ, ಇದರ ಪ್ರಯೋಜನವನ್ನಾಗಲಿ ಅವನು ಹೇಳಿಲ್ಲ. (ಪ್ರಾಯಶಃ ಆ ವಿಚಾರಕ್ಕೆ ಅವನು ಹೋಗಿಲ್ಲ.) ಆದರೆ ಆ ವೃತ್ತವನ್ನು ಪಠಿಸಿ ಪರೀಕ್ಷಿಸಿದರೆ, ಅದರ ಪಾದಾಂತರದಲ್ಲಿ "ವಿಶೇಷ ವಿಶ್ರಾಮ"ವೇಕೆಂಬುದು ನಮಗೆ ಗೊತ್ತಾಗುವುದು. ಆರು ಅಕ್ಷರಗಳ ಪಾದದ ಆ ಸಮವೃತ್ತ ಹೀಗಿರುತ್ತದೆ:

ವ್ಯೋಮಾದಿ ಜಲಾಂತಂ ।

ತಾಮಾಗೆ ನಿತಾಂತಂ ॥

ಶ್ರೀಮಾನಿನಿ ಕೇಳಾ ।

ನಾಮಂ ತನುಮಧ್ಯಂ ॥ (ಛಂದೋಂಬುಧಿ)

(ಇದರ ಪಾದಗಳ ಮಧ್ಯದಲ್ಲಿ ಎರಡು ಲಘುಗಳಿದ್ದು, ಹಿಂದೆ ಮುಂದೆ ಎರಡೆರಡು ಗುರುಗಳಿರುವುದರಿಂದ ಇದಕ್ಕೆ 'ತನುಮಧ್ಯ' (= 'ನಡುಸಣ್ಣ') ಎಂಬ ಹೆಸರು ಅನ್ವರ್ಥ.) ಇದನ್ನು ಸಹವಾಗಿ ಪಠಿಸುವಾಗ, ಇದರ ಛಂದಃಖಂಡಗಳು ಈ ಕೆಳಗಿನಂತೆ ಉನ್ಮೀಲಿತವಾಗುತ್ತವೆ:

ವ್ಯೋಮಾದಿ ಜ । ಲಾಂತಂ –।

ತಾಮಾಗೆ ನಿ । ತಾಂತಂ – ॥

ಶ್ರೀಮಾನಿನಿ । ಕೇಳಾ– ।

ನಾಮಂ ತನು । ಮಧ್ಯಂ– ॥

ಆದರೆ, ಪ್ರಥಮಖಂಡವು ಆರು ಮಾತ್ರೆಗಳದಾಗಿದ್ದು, ದ್ವಿತೀಯಖಂಡದ ಅಕ್ಷರಪುಂಜವು ನಾಲ್ಕು ಮಾತ್ರೆಗಳದಾಗಿರುವುದರಿಂದ – ಪಾದಾಂತದ ಬಳಿಕ ಎರಡು ಮಾತ್ರಾಕಾಲಗಳಷ್ಟು ವಿರಮಿಸಿ ಮುಂದಿನ ಪಾದವನ್ನು ಪಠಿಸಿದರೆ ಮಾತ್ರ ಇದರ ಗತಿಸೌಂದರ್ಯವು ಪೂರ್ಣವಾಗಿ ಪ್ರಕಟವಾಗುತ್ತದೆ. ಆಗ ಇದು ಲಯಾನ್ವಿತವಾದ ವೃತ್ತವೆಂಬುದೂ ವ್ಯಕ್ತವಾಗುತ್ತದೆ.

ಯಾವುದೊಂದು ಪದ್ಯದ ಪಠನಕ್ರಮ ಹೀಗೆ – ಎಂದು ಹೇಳುವುದರ ಉದ್ದೇಶವು ಆ ಪದ್ಯದ 'ಧಾಟಿ'(=ಗತಿ)ಯನ್ನು ತಿಳಿಸುವುದೇ ಆಗಿದೆಯಷ್ಟೆ. ಆದುದರಿಂದ ಪಿಂಗಳೋಕ್ತವಾದ "ಉದ್ಗತಾಮೇಕತಃ" "ಉಪಸ್ಥಿತಪ್ರಚುಪಿತಂ ಪೃಥಗಾದ್ಯಂ" ಇತ್ಯಾದಿ ವಾಕ್ಯಗಳನ್ನು ಪರಾಮರ್ಶಿಸಿದರೆ – 'ಗತಿ' ಎಂಬ ಸಂಜ್ಞೆಯನ್ನು ಅವನು ಬಳಸಲಿಲ್ಲವಾದರೂ, ಗತಿಯ ಪರ್ಯಾಲೋಚನೆಯನ್ನು ಅವನು ಮಾಡದಿರಲಿಲ್ಲವೆಂಬುದು ನಮಗೆ ಗೊತ್ತಾಗುತ್ತದೆ. ಇಷ್ಟು ಮಾತ್ರ ಅಲ್ಲ – 'ಯತಿ' ಎಂಬುದು ('ಲಯ' ಎಂಬುದು ಹೇಗೋ ಹಾಗೆಯೇ) ಪದ್ಯದ 'ಗತಿ'ಯ ಒಂದು ಅಂಗವಾಗಿದ್ದು – ಪಾದಪರಿಮಾಣವಾಗಲಿ, ಛಂದೋವಿನ್ಯಾಸವಾಗಲಿ ಬದಲಾಗದಿದ್ದರೂ, ಯತಿಸ್ಥಾನವು ಬದಲಾದರೆ (ಲಯಾನ್ವಿತ–ವಾದ) ವೃತ್ತಗಳ ಗತಿ ಬೇರೊಂದಾಗಿ ಕಾಣಿಸಿಕೊಳ್ಳುವುದುಂಟಾದುದರಿಂದ, ಅಂತಹ ಸಂದರ್ಭಗಳಲ್ಲಿ ಕೇವಲ ಯತಿಭೇದದ ಕಾರಣದಿಂದಲೇ ವೃತ್ತಗಳು ಬೇರೆಬೇರಾಗುತ್ತವೆಂಬುದು ಪಿಂಗಳನ ಅಭಿಪ್ರಾಯವಾಗಿ ಕಂಡುಬರುತ್ತದೆ.

ಉದಾ: "ಚಂದ್ರಾವರ್ತಾನೌನೌಸ್ (೭-೧೧). ಮಾಲರ್ತು ನವಕೌಚೇತ್ (೭-೧೨). ಮಣಿಗುಣನಿಕರೋ ವಸ್ವೃಷಯಃ (೭-೧೩)" ಈ ಮೂರೂ ವೃತ್ತಗಳ ಪಾದಪರಿಮಾಣವೂ ಛಂದೋವಿನ್ಯಾಸವೂ (ಹೀಗೆ: ᴗᴗᴗᴗᴗᴗᴗᴗᴗᴗᴗᴗᴗᴗ–) ಏಕರೂಪ; ಯತಿಸ್ಥಾನಗಳು ಮಾತ್ರ ಬೇರೆ ಬೇರೆ. ಈ ಒಂದೇ ಕಾರಣದಿಂದ ಅವು ಬೇರೆಬೇರೆ ವೃತ್ತಗಳೆನಿಸಿವೆ. ಕೇವಲ ಯತಿಸ್ಥಾನದ ಬದಲಾವಣೆಯಿಂದ ಲಯಾನ್ವಿತ ವೃತ್ತಗಳ ಗತಿಯಲ್ಲಿ ಉಂಟಾಗಬಹುದಾದ ಬದಲಾವಣೆಯ ದಿಗ್ದರ್ಶನಕ್ಕಾಗಿ, ಈ ವೃತ್ತಗಳೊಳಗೆ ಎರಡನ್ನು ಇಲ್ಲಿ ಪರಾಮರ್ಶಿಸಿ ನೋಡೋಣ: 'ಮಣಿಗುಣನಿಕರವೃತ್ತ'ದ ಸ್ವರೂಪ ಹೀಗಿರುತ್ತದೆ:

ᴗ ᴗᴗ ᴗᴗᴗᴗ ᴗ ᴗ ᴗᴗ ᴗᴗᴗᴗ –
ಸುರಪುರಗಣಮೆಸೆ: ದಿರೆ ಜಲನಿಧಿಯೊಳ್ । (ಛಂದೋಂಬುಧಿ)

ಇದರ ಎಂಟನೆಯ ಅಕ್ಷರದಲ್ಲಿ (ಪಾದಮಧ್ಯದ) ಯತಿ ಇರುತ್ತದೆ. ಇದರ ಪರಿಣಾಮವಾಗಿ ಈ ವೃತ್ತದ ಗತಿಯ ಹಜ್ಜೆಗಳು ಈ ಕೆಳಗಿನಂತಾಗುತ್ತವೆ:

ಸುರಪುರ । ಗಣಮೆಸೆ । ದಿರೆ ಜಲ । ನಿಧಿಯೊಳ್ ॥

ಛಂದೋವಿನ್ಯಾಸದಲ್ಲಿ ಇದರಂತೆಯೇ ಇರುವ 'ಮಾಲಾ' ಎಂಬ ವೃತ್ತದ ಸ್ವರೂಪ ಹೀಗೆ:

ᴗᴗᴗᴗᴗᴗ ᴗᴗᴗᴗ ᴗᴗᴗᴗ –
ನವವಿಕಸಿತ : ಕುವಲಯದಲನಯನೇ । (ಹಲಾಯುಧ)

ಇದರ ಆರನೆಯ ಅಕ್ಷರದಲ್ಲಿ (ಪಾದಮಧ್ಯದ) ಯತಿ ಇರುತ್ತದೆ. ಇದರ ಪರಿಣಾಮವಾಗಿ ಈ ವೃತ್ತದ ಗತಿಯ ಹಜ್ಜೆಗಳು ಈ ಕೆಳಗಿನಂತಾಗುತ್ತವೆ:

ನವವಿಕಸಿತ । ಕುವಲಯದಲ । ನಯನೇ– ॥

ಒಂದೇ ಛಂದೋವಿನ್ಯಾಸದ ವೃತ್ತಗಳು ಇವಾದರೂ – ಕೇವಲ ಯತಿಸ್ಥಾನದ ಭಿನ್ನತೆಯಿಂದಾಗಿ – "ಮಣಿಗುಣನಿಕರ" ವೃತ್ತದ ಗತಿಯ ಹಜ್ಜೆಗಳು ನಾಲ್ಕು ಮಾತ್ರೆಯವುಗಳಾಗಿಯೂ, "ಮಾಲಾ"ವೃತ್ತದ ಗತಿಯ ಹಜ್ಜೆಗಳು ಆರು ಮಾತ್ರೆಯವುಗಳಾಗಿಯೂ ಪರಿಣಮಿಸಿವೆ. (ಗತಿಯಲ್ಲುಂಟಾದ ಈ ಭೇದದಿಂದಾಗಿ ಲಯಾನ್ವಿತವಾದ ಈ ಎರಡು ವೃತ್ತಗಳ 'ತಾಳ' ಬೇರೆ ಬೇರಾಗುತ್ತದೆ: ಪ್ರಚಲಿತ ಕರ್ಣಾಟಕಸಂಗೀತಸಂಪ್ರದಾಯವನ್ನನುಸರಿಸಿ ಹೇಳುವುದಾದರೆ – ಇವು ಅನುಕ್ರಮವಾಗಿ ಆದಿತಾಳ ಅಥವಾ ಏಕತಾಳಕ್ಕೆ, ಮತ್ತು ರೂಪಕತಾಳಕ್ಕೆ ಅಳವಡುತ್ತವೆ.) ಸಾರಾಂಶ : ಪಾದಪರಿಮಾಣದಲ್ಲಾಗಲಿ ಛಂದೋವಿನ್ಯಾಸ-ದಲ್ಲಾಗಲಿ ಯಾವ ಬದಲಾವಣೆಯೂ ಆಗದಿದ್ದರೂ, ವೃತ್ತದ 'ಗತಿ'ಯಲ್ಲಿ ಬದಲಾವಣೆಯಾದರೆ ಅದು ಬೇರೊಂದು ವೃತ್ತವೆನಿಸಿಕೊಳ್ಳುತ್ತದೆಂಬುದು ಪಿಂಗಳನ ಅಭಿಪ್ರಾಯವಾಗಿ ಕಂಡುಬರುವುದರಿಂದ – 'ಗತಿ' ಎಂಬ ಸಂಜ್ಞೆ-ಯನ್ನು ಅವನು ತನ್ನ ಗ್ರಂಥದಲ್ಲಿ ಬಳಸದಿದ್ದರೂ ಅದುವೇ (ಲೌಕಿಕ) ಛಂದೋ ನಿಯಮಗಳ ಲಕ್ಷ್ಯವೆಂಬ ತಥ್ಯದ ಅರಿವು ಆ ಮಹನೀಯನಿಗೆ ಪೂರ್ಣವಾಗಿ ಇತ್ತೆಂದು ವ್ಯಕ್ತವಾಗುತ್ತದೆ. ಮತ್ತು – 'ಛಂದಸ್' ಎಂಬುದರ ಅರ್ಥವನ್ನು

“ಛಂದಃ ಪದ್ಯೇ” ಎಂಬಷ್ಟಕ್ಕೆ ಸೀಮಿತಗೊಳಿಸಿದಾಗ, (ಲೌಕಿಕ) ‘ಛಂದಸ್’ ಎಂಬುದು ‘ಗತಿ’ ಎಂಬುದರ ಅರ್ಥವನ್ನೂ ತನ್ನಲ್ಲಿ ಒಳಕೊಳ್ಳುತ್ತದೆ; ಏಕೆಂದರೆ ಗತಿಹೀನವಾದುದು (ಲೌಕಿಕ) ‘ಪದ್ಯ’ವೆನಿಸಿಕೊಳ್ಳುವಂತಿಲ್ಲ. ‘ಛಂದಸ್’ ಎಂಬ ಸಂಜ್ಞೆಗೆ ಸಾಂಪ್ರದಾಯಿಕವೂ ಪುರಾತನವೂ ಆದ ಅರ್ಥ ‘ಪದ್ಯ’ ಎಂಬುದೇ ಆಗಿದ್ದು, ಪಿಂಗಳನಿಗೂ ಅದು ಸಂಮತವೆಂಬುದನ್ನು ಇಲ್ಲಿ ಸ್ಮರಿಸಿಕೊಂಡರೆ – ‘ಗತಿ’ ಎಂಬ ಸಂಜ್ಞೆಯ ಅವಶ್ಯಕತೆ ಅವನಿಗೆ ಕಂಡುಬಾರದಿದ್ದುದಕ್ಕೆ ಅದುವೇ ಕಾರಣವೆಂಬುದು ನಮಗೆ ಹೊಳೆಯದಿರದು. ಆದರೆ – ‘ಛಂದಸ್’ ಮತ್ತು ‘ಗತಿ’ ಎಂಬ ಎರಡು ತತ್ತ್ವಗಳನ್ನು (ಬೇರೆ ಬೇರಾಗಿ) ಅಂಗೀಕರಿಸಿ ವೃತ್ತರೂಪಗಳ ಮೀಮಾಂಸೆಯನ್ನು ಮಾಡಿದಾಗ, ಯತಿಸ್ಥಾನವು ಬೇರಾದರೆ ವೃತ್ತವೂ ಬೇರಾ-ಗುವುದೆಂದು ಹೇಳಬೇಕಾಗುವುದಿಲ್ಲ. ಏಕೆಂದರೆ, ಯತಿಸ್ಥಾನದ ಬದಲಾವಣೆ-ಯಿಂದಾಗಿ ಭಿನ್ನತೆಯನ್ನು ಪಡೆಯುವುದು ಆ ವೃತ್ತದ ‘ಗತಿ’ ಹೊರತು, ಆ ವೃತ್ತದ ‘ಛಂದಸ್’ (= ಗುರುಲಘುವಿನ್ಯಾಸ) ಅಲ್ಲ. ಈ ದೃಷ್ಟಿಯಿಂದ, ಮತ್ತು ನಮ್ಮ ಛಂದಃಶಾಸ್ತ್ರವು ಛಂದೋದ್ರವ್ಯಾವಲಂಬಿಯಾಗಿರುವುದರಿಂದ, ಛಂದೋ-ವಿನ್ಯಾಸವು ಭಿನ್ನವಾಗಿದ್ದರೆ ಮಾತ್ರ “ಅದು ಬೇರೊಂದು ವೃತ್ತ”ವೆಂದು ಹೇಳುವುದು ಯುಕ್ತಿಯುಕ್ತವೂ ಕ್ರಮಪ್ರಾಪ್ತವೂ ಆಗಿರುತ್ತದೆ.



# ಪರಿಚ್ಛೇದ ಆರು

## ಛಂದೋಗತಿಭೇದಗಳು – ಆವರ್ತಗತಿಗಳ ವಿವೃತಿ

{ಅಕ್ಷರಗತಿಭೇದಗಳು ಮತ್ತು ಆವರ್ತಗತಿಭೇದಗಳು}

ಹಿಂದೆ ಈ ನಿಬಂಧದ ಮೂರನೆಯ ಪರಿಚ್ಛೇದದಲ್ಲಿ ಸೂಚಿಸಿರುವಂತೆ– ನಮ್ಮ ದೇಶದ ಎಲ್ಲಾ ಭಾಷೆಗಳಲ್ಲಿರುವ ಛಂದೋಬಂಧ(=ಪದ್ಯ)ಗಳ 'ಗತಿ' ಸಮಗತಿ ಮತ್ತು ವಿಷಮಗತಿ ಎಂದು ಎರಡು ವಿಧವಾಗಿದೆ.[48] ಈ ಹಿಂದಿನ

---

48. {ಕೆಲವು ಸತಾಲಬಂಧಗಳ ವಿತಾಲ ಪಠನಗಾಯನಪದ್ಧತಿಗಳು} ಯಾವುದೊಂದು ಛಂದೋರಚನೆ 'ಪದ್ಯ' ಎನ್ನಿಸಿಕೊಳ್ಳಬೇಕಾದರೆ, ಅಕ್ಷರನಿಯಮಿತವಾದ ಅಥವಾ ಯಥಾಕ್ಷರ ಮಾತ್ರಾನಿಯಮಿತವಾದ ಪಾದವ್ಯವಸ್ಥೆ ಅದಕ್ಕೆ ಇರಲೇಬೇಕು. ಈ ನಿಯಮಗಳಿಗೆ ಕಟ್ಟುನಿಟ್ಟಾಗಿ ಒಳಪಡದೆ ಕೇವಲ ತಾಳನಿಯಮಿತವಾಗಿದ್ದು, 'ಪದ' ಎಂದೋ 'ಹಾಡು' ಅಥವಾ 'ಗೀತ' ಎಂದೋ ಕರೆಯಲ್ಪಡುವ ಗೇಯರಚನೆಗಳೂ ಪರಮಾರ್ಥದಲ್ಲಿ ಛಂದೋಬಂಧಗಳೇ ಆಗಿರುವವಾದರೂ, ಅವುಗಳನ್ನು 'ಛಂದೋಬಂಧ'ಗಳೆಂದು ಕರೆಯುವ ರೂಢಿ ಇಲ್ಲ. ಇದಕ್ಕೆ ಕಾರಣವೇನೆಂದರೆ – ನಮ್ಮ ಛಂದಃಶಾಸ್ತ್ರಪ್ರಕ್ರಿಯೆ (ಗುರುಲಘುರೂಪವಾಗಿರುವ) ಛಂದೋದ್ರವ್ಯಾವಲಂಬಿಯಾಗಿದ್ದು, ಯಾವ ಯಾವ ಛಂದೋರಚನೆಗಳ ಲಕ್ಷಣಗಳನ್ನು ಗುರು ಲಘು ಎಂಬ ಆ ಎರಡೇ 'ಮಾನ'ಗಳ ಅವಲಂಬನದಿಂದ (ಕ್ವಚಿತ್ ಕೇವಲ ಅಕ್ಷರ–ಸಂಖ್ಯಾನಿಯಮದಿಂದ) ನಿರೂಪಿಸುವುದು ಶಕ್ಯವೋ ಅಂತಹ ರಚನೆಗಳು ಮಾತ್ರ ನಮ್ಮ ಛಂದಃಶಾಸ್ತ್ರಗ್ರಂಥಗಳಲ್ಲಿ ಪ್ರವಿಷ್ಟವಾಗಿರುವುದಾಗಿದೆ. ಹೀಗೆ 'ಛಂದೋಬಂಧ' ಅಥವಾ 'ಪದ್ಯ' ಎಂದು ಕರೆಯಲ್ಪಡುವ ಛಂದೋರಚನೆಗಳ 'ಗತಿ' – ಸಮಗತಿ ಎಂದೂ ವಿಷಮಗತಿ ಎಂದೂ ಮೂಲತಃ ದ್ವಿವಿಧವಾಗಿದೆ. (ಪದ್ಯ ಅಥವಾ ಛಂದೋಬಂಧ ಎಂಬ ಹೆಸರಿಗೆ ಹೊರಗಾಗಿರುವ 'ಪದ' ಇತ್ಯಾದಿ ಹೆಸರಿನ ಗೇಯರಚನೆಗಳ ಗತಿಯಲ್ಲಿ ಸಮ, ವಿಷಮ ಎಂಬ ಭೇದವಿಲ್ಲ; ಅವೆಲ್ಲವೂ 'ತಾಳಬದ್ಧ' ಅರ್ಥಾತ್ ಸಮಗತಿಯ ಬಂಧಗಳೇ ಆಗಿರುತ್ತವೆ. 'ಸಮಗತಿ' ಬಂಧವೆಂದರೂ 'ಲಯಾನ್ವಿತ' ಬಂಧವೆಂದರೂ 'ಸತಾಲ' ಬಂಧವೆಂದರೂ ಅರ್ಥ ಒಂದೇ ಎಂಬುದನ್ನು ಈ ಮೊದಲೇ ಶ್ರುತಪಡಿಸಲಾಗಿದೆ.) ಆದರೆ ಸಮಗತಿಯ ಛಂದೋಬಂಧಗಳನ್ನೂ 'ವಿತಾಲ'(=ತಾಲರಹಿತ)ವಾಗಿ ಪಠಿಸುವ ಅಥವಾ ಹಾಡುವ ರೂಢಿಯುಂಟು. ಕನ್ನಡದ ವಾರ್ಧಕ ಭಾಮಿನಿಗಳು ವಸ್ತುತಃ ಸತಾಲಬಂಧಗಳೇ ಆದರೂ ಅವುಗಳನ್ನು ತಾಲಬದ್ಧವಾಗಿ ಪಠಿಸುವ ರೂಢಿ ಇಲ್ಲ. 'ಗಮಕಿ'ಗಳೂ ಅವುಗಳನ್ನು ವಿತಾಲವಾಗಿಯೇ ಹಾಡುತ್ತಾರೆ. ನರ್ತನಪ್ರಧಾನವಾದ ಯಕ್ಷಗಾನಪ್ರಯೋಗಗಳಲ್ಲಿ ಸಹ, ವಾರ್ಧಕಭಾಮಿನಿಗಳನ್ನು ಭಾಗವತರು ವಿತಾಲವಾಗಿಯೇ ಹಾಡುತ್ತಾರೆ ಹೊರತು, ಸತಾಲವಾಗಿ ಎಂದೂ ಹಾಡುವುದಿಲ್ಲ. ಆದರೆ ಈ ರೂಢಿಯಿಂದಾಗಿ ಆ ಛಂದೋಬಂಧಗಳು ವಿತಾಲಬಂಧಗಳೆಂದಾಗಲಾರವು. ವಸ್ತುತಃ, 'ವಾರ್ಧಕಷಟ್ಪದಿ' ಐದು ಮಾತ್ರೆಗಳ ಆವರ್ತದ 'ಝಂಪೆ' (ಯಕ್ಷಗಾನಪರಿಭಾಷೆಯಲ್ಲಿ ಇದು ಝಂಪೆ, ಇಂದಿನ ದಾಕ್ಷಿಣಾತ್ಯ ಸಂಗೀತಪರಿ–ಭಾಷೆಯಲ್ಲಿ ಇದು 'ಖಂಡಛಾಪು') ತಾಳದ ಛಂದೋಬಂಧ. 'ಭಾಮಿನೀಷಟ್ಪದಿ' ಏಳು ಮಾತ್ರೆಗಳ ಆವರ್ತದ 'ತ್ರಿವುಡೆ' (=ತ್ರಿಪುಟ) ತಾಳದ ಛಂದೋಬಂಧ. 'ಶರಷಟ್ಪದಿ'ಯೂ 'ಪರಿವರ್ಧಿನೀಷಟ್ಪದಿ'ಯೂ ನಾಲ್ಕು ಮಾತ್ರೆಗಳ ಆವರ್ತದ ಚತುರಶ್ರ ಏಕತಾಳದ (ಅಥವಾ

ಆದಿತಾಳದ) ಛಂದೋಬಂಧಗಳು. 'ಕುಸುಮಷಟ್ಪದಿ'ಯೂ 'ವಾರ್ಧಕಷಟ್ಪದಿ'ಯೂ ಒಂದೇ ತಾಳದ ಛಂದೋಬಂಧಗಳು. 'ಭೋಗಷಟ್ಪದಿ' ಎಂಬ ಮೂರು ಮಾತ್ರೆಗಳ ಆವರ್ತದ ಏಕ-ತಾಳದ (ಅಥವಾ ಯಕ್ಷಗಾನದಲ್ಲಿ 'ಮಟ್ಟೆ' ಎಂಬ ಹೆಸರುಳ್ಳ ಆರು ಮಾತ್ರೆಗಳ ಆವರ್ತದ ತಾಳದ) ಛಂದೋಬಂಧ. ನಡುಗನ್ನಡದ ಷಟ್ಪದಿಗಳಂತೆ ಮಾತ್ರಾಬಂಧವಾಗಿರದೆ, 'ತ್ರಿಮೂರ್ತಿಗಣ'ಬಂಧವಾಗಿರುವ 'ಪುರಾತನ ಷಟ್ಪದಿ' (=ಷಟ್ಪದಿಕೆ) – ವಿಷ್ಣುಗಣಪ್ರಧಾನ-ಬಂಧವಾಗಿರುವ ಕಾರಣ – ಆರು ಮಾತ್ರೆಗಳ ಆವರ್ತದ ರೂಪಕತಾಳದ, ಅಥವಾ ಏಳು ಮಾತ್ರೆಗಳ (=ಮೂರೂವರೆ ಮಾತ್ರೆಗಳ) ಆವರ್ತದ "ಕೋರೆ" ಎಂಬ ವಿಶಿಷ್ಟವಾದೊಂದು ತಾಳದ ಛಂದೋಬಂಧ. (ಈ ತಾಳವನ್ನು ಯಕ್ಷಗಾನಪರಿಭಾಷೆಯಲ್ಲಿ 'ಅಷ್ಟತಾಳ' ಎನ್ನು-ತ್ತಾರೆ. ಇಂದು ಕರ್ಣಾಟಕ ಪದ್ಧತಿಯ ಸಂಗೀತಜ್ಞರು ಇದನ್ನು 'ಮಿಶ್ರಛಾಪು' ಎನ್ನುತ್ತಾರಾ-ದರೂ, ಈ ಶತಮಾನದ ಆದಿಭಾಗದಲ್ಲಿ ಅವರು ಇದನ್ನು 'ಛಾಪು ಅಟ್ಟತಾಳ'ವೆಂದು ಹೆಸರಿಸುತ್ತಿದ್ದರು.) ಆದರೆ ಶಾರ್ಙ್ಗದೇವನು ಆ 'ಪುರಾತನ ಷಟ್ಪದಿ'ಯನ್ನು "ತಾಲವರ್ಜಿತಾ" ಎಂದೂ, ಆ ಷಟ್ಪದಿಯಂತೆಯೇ ತ್ರಿಮೂರ್ತಿಗಣಬಂಧವಾದ 'ತ್ರಿಪದಿ'ಯನ್ನು "ತಾಲಹೀನಾ" ಎಂದೂ ಹೇಳಿರುವನೆಂಬುದರಿಂದ, ಅವು ವಿತಾಲಬಂಧಗಳೆಂಬ ವಾದವೊಂದು ಹುಟ್ಟಿರು-ತ್ತದೆ. ಶಾರ್ಙ್ಗದೇವನು 'ಕಂದಪದ್ಯ'ದ ವಿಷಯದಲ್ಲಿಯೂ ಹೀಗೆಯೇ "ತಾಲವರ್ಜಿತಃ" ಎಂದು ಹೇಳಿದ್ದಾನೆ (ಸಂಗೀತರತ್ನಾಕರ, ಪ್ರಬಂಧಾಧ್ಯಾಯ, ಶ್ಲೋಕ ೨೦೪). ಆದರೆ 'ಸಂಗೀತರತ್ನಾಕರ'ಕ್ಕೆ ಸುಪ್ರಸಿದ್ಧವಾದ ವ್ಯಾಖ್ಯಾನವನ್ನು ಬರೆದಿರುವ ಕಲ್ಲಿನಾಥನು ಆ ಭಾಗದ ವಿವರಣೆಯಲ್ಲಿ ಹೀಗೆ ಹೇಳುತ್ತಾನೆ: "ತಾಲವರ್ಜಿತ ಇತಿ । ತಾಲಸ್ವರೂಪೇಣ ಶೂನ್ಯಃ ಗೇಯ ಇತ್ಯರ್ಥಃ । ನ ತಾಲನಿಯಮಶೂನ್ಯ ಇತಿ ವಿವಕ್ಷಿತಃ ॥" ಇದರ ತಾತ್ಪರ್ಯ ಹೀಗೆ: 'ಕಂದ ಪದ್ಯವನ್ನು ತಾಲರಹಿತವಾಗಿ ಹಾಡಬೇಕೆಂದು ಹೇಳಿದ್ದು ಹೊರತು, ಇದು ತಾಲನಿಯಮ-ರಹಿತವಾದ ಪದ್ಯವೆಂದು ಹೇಳಿದ್ದಲ್ಲ.' ಇಲ್ಲಿ ಕಲ್ಲಿನಾಥನು ಹೇಳಿರುವ ಮಾತು ಶಾರ್ಙ್ಗದೇವನು ಮಾಡಿರುವ ತ್ರಿಪದಿಷಟ್ಪದಿಗಳ ಸ್ವರೂಪನಿರೂಪಣೆಗೂ ಅನ್ವಯಿಸುವಂತಹದಾಗಿದೆ. ಕಂದ, ತ್ರಿಪದಿ, ಷಟ್ಪದಿಗಳನ್ನು (ತನ್ನ ಕಾಲದಲ್ಲಿ) ಕನ್ನಡ ಸಂಗೀತಗಾರರು ಹಾಡುತ್ತಿದ್ದ ರೀತಿಯನ್ನು ತಿಳಿಸುವುದೇ ಅಲ್ಲಿ ಶಾರ್ಙ್ಗದೇವನ ಉದ್ದೇಶವಾಗಿತ್ತೆಂಬುದು ಅವನು ಮಾಡಿದ ಆ ನಿರೂಪಣೆಗಳಿಂದಲೇ ಸ್ಪಷ್ಟವಾಗಿ ಗೊತ್ತಾಗುತ್ತದೆ. ಆ ಭಾಗಗಳು ಹೀಗಿವೆ:

(ಕಂದ) "ಕರ್ಣಾಟಾದಿಪದ್ಯೈಃ ಪಾಟ್ಯೈಃ ಬಿರುದ್ಯೈಃ ತಾಲವರ್ಜಿತಃ"

(ಅಧ್ಯಾಯ ೪, ಶ್ಲೋಕ ೨೦೪)

(ತ್ರಿಪದಿ) "ಗೀತ್ವಾದ್ಯಪಾದೌ ತದನು ಕಿಂಚಿಚ್ಛೇಷಂ ತೃತೀಯಕಂ ।
ತತಃ ಸಮಗ್ರಂ ತಂ ಗೀತ್ವಾ ಚತುರ್ಥೋ ಯದಿ ಗೀಯತೇ ।
ತದಾ ಸ್ಯಾತ್ ತ್ರಿಪದೀ ತಾಲಹೀನಾ ಕರ್ಣಾಟಭಾಷಯಾ ॥"

(೪-೨೬೯, ೨೭೦)

(ಷಟ್ಪದಿ) "ಕರ್ಣಾಟಭಾಷಯಾ ತಾಲವರ್ಜಿತಾ ನಾದಮುಕ್ತಿಕಾ ॥" (೪-೨೭೩)

ಸಾರಾಂಶವೇನೆಂದರೆ – ಶಾರ್ಙ್ಗದೇವನು ಕಂದಪದ್ಯವನ್ನಾಗಲಿ ತ್ರಿಪದಿಯನ್ನಾಗಲಿ ಷಟ್ಪದಿ-ಯನ್ನಾಗಲಿ ವಿತಾಲವಾದ ಛಂದೋಬಂಧವೆಂದು ಹೇಳಲೇ ಇಲ್ಲ!

ಈ ಸಂದರ್ಭದಲ್ಲಿ – ಪಠನಗಾಯನಶೈಲಿಗಳಿಗೆ ಸಂಬಂಧಿಸಿದ ಕೆಲವು ತತ್ತ್ವ-ಗಳನ್ನು ಮನವರಿಕೆ ಮಾಡಿಕೊಳ್ಳುವುದು ಅವಶ್ಯವೆನಿಸುತ್ತದೆ: ತಾಳಬದ್ಧವಾದ (ಅರ್ಥಾತ್ ಲಯಸಮನ್ವಿತವಾದ) – ವಿಶೇಷತಃ ದ್ರುತವೇಗದ – ಪಠನಗಾಯನಗಳು ಸ್ವಭಾವತಃ ಹರ್ಷೋತ್ಪಾದಕವಾದವುಗಳು. ತಾಳಬದ್ಧವಲ್ಲದ ಮತ್ತು ದ್ರುತವಲ್ಲದ ಪಠನವೂ, ವಿಶೇಷತಃ

ಲಯರಹಿತವಾದ ಇಲ್ಲವೆ ಅಸ್ಫುಟಲಯವಾದ ವಿಲಂಬಿತವೇಗದ ಗಾಯನವೂ ಸ್ವಭಾವತಃ ಸೌಮ್ಯವೂ ಗಂಭೀರವೂ ಆಗಿದ್ದು, ಮನಸ್ಸಿಗೆ ಪ್ರಸನ್ನತೆಯನ್ನೂ ಏಕಾಗ್ರತೆಯನ್ನೂ ತರುವಂಥವುಗಳು. ಅಲ್ಲದೆ, ಪದ್ಯಪಠನವು ಲಯರಹಿತ್ರವಾಗಿದ್ದರೆ ಶ್ರಾವಕರ ಮನಸ್ಸು ಅದರ ಅರ್ಥದ ಕಡೆಗೆ ಹರಿಯುವುದು ಅಧಿಕವಾಗುತ್ತದೆ; ಪಠನದಲ್ಲಿ ಲಯಸ್ಫುಟತೆ ಇದ್ದಲ್ಲಿ ಮನಸ್ಸು ಅದರ ಸೆಳೆತಕ್ಕೊಳಪಟ್ಟು, ಅರ್ಥದ ಕಡೆಗೆ ಲಕ್ಷ್ಯವು ಮಂದೀಭೂತವಾಗುತ್ತದೆ. ಗಾಯನವು ಲಯರಹಿತವೋ ಅಥವಾ (ಅತಿವಿಲಂಬಿತವಾಗಿದ್ದು) ಅಸ್ಫುಟಲಯವೋ ಆಗಿದ್ದರೆ ಮನಸ್ಸು ಉಲ್ಲಸಿತವಾಗಿ ನರ್ತಿಸುತ್ತದೆ. ಉಚಿತಜ್ಞರೂ ಮೇಧಾವಿಗಳೂ ಆದ ಪಾಠಗಾಯಕರು ಈ ತಥ್ಯಗಳನ್ನವಲಂಬಿಸಿ ನಮ್ಮ ದೇಶದ ಪಠನಗಾಯನಸಂಪ್ರದಾಯವಿಶೇಷಗಳನ್ನು ರೂಢಿಗೆ ತಂದಿರುತ್ತಾರೆ. ಪರೀಕ್ಷಿಸಿ ನೋಡಿದರೆ, ಇತರ ದೇಶಗಳ ಪಠನಗಾಯನಸಂಪ್ರದಾಯ-ಗಳಲ್ಲಿಯೂ ಈ ತತ್ತ್ವಗಳು ಅಡಕವಾಗಿರುವುದನ್ನು ಕಾಣಬಹುದು. ಲಯಾನ್ವಿತ(=ಸತಾಲ)ವೇ ಆಗಿರುವ ಛಂದೋಬಂಧಗಳಾದ ವಾರ್ಧಕಭಾಮಿನಿಗಳಲ್ಲಿ ರಚಿತವಾಗಿರುವ ಅರ್ಥಪ್ರಧಾನ-ವಾದ ಕಥನಕಾವ್ಯಗಳನ್ನು ವಿತಾಲವಾಗಿಯೇ ಹಾಡುವ ಗಮಕಸಂಪ್ರದಾಯದಲ್ಲಿಯೂ, ನಾಟಕಾದಿಗಳಲ್ಲಿ ಸಹ ಕಂದಪದ್ಯವನ್ನು ವಿತಾಲವಾಗಿಯೇ ಹಾಡುವ ರೂಢಿಯಲ್ಲಿಯೂ (ಕಂದಪದ್ಯವು ನಾಲ್ಕು ಮಾತ್ರೆಯ ಗಣಗಳ ಬಂಧವಾಗಿದ್ದು ಸ್ವಭಾವತಃ ಚತುರಶ್ರ ಏಕತಾಳ ಅಥವಾ ಆದಿತಾಳಕ್ಕೆ ಅಳವಡುವ ಛಂದೋಬಂಧ) ಇವೇ ತತ್ತ್ವಗಳು ಅಡಕವಾಗಿವೆ. ಜನ್ಮತಃ ಲಯಾನ್ವಿತವೇ ಆಗಿದ್ದು – ವಿಷ್ಣುಗಣಪ್ರಧಾನಬಂಧವಾಗಿರುವುದರಿಂದ ಸಹಜವಾಗಿ ಆರು ಮಾತ್ರೆಯ ಆವರ್ತದ ರೂಪಕತಾಳಕ್ಕೆ ಅಥವಾ ಏಳು ಮಾತ್ರೆಯ (= ಮೂರೂವರೆ ಮಾತ್ರೆಯ) ಆವರ್ತದ 'ಛಾಪು ಅಟ್ಟತಾಳ'ಕ್ಕೆ ಅಳವಡುವ ತ್ರಿಪದಿ – ಮುಖ್ಯವಾಗಿ ಗೃಹಿಣಿಯರ ಸಹಚಾರಿಣಿಯಾಗಿದ್ದುದರಿಂದ, ಅವರ ಸಾಂಸಾರಿಕ ಮನಃಕ್ಷೋಭಶಾಂತಿಗಾಗಿ ಹಾಗೂ ಅವರ ಹಸುಳೆಗಳ ಲಾಲನೆಗಾಗಿ ವಿತಾಲಗಾನವನ್ನು ಆಶ್ರಯಿಸಿತು. ಆದರೆ ಈ ಕಾರಣದಿಂದ ತ್ರಿಪದಿಯಾಗಲಿ, ಆತಏವ ವಾರ್ಧಕ ಭಾಮಿನಿ ಕಂದಪದ್ಯಗಳಾಗಲಿ 'ತಾಲ-ನಿಯಮಶೂನ್ಯ'ವಾದ ಛಂದೋಬಂಧಗಳೆಂದಾಗಲಾರವು. [ಲಯಾನ್ವಿತವಲ್ಲದ 'ಶಿಖರಿಣೀ' ಇತ್ಯಾದಿ ಕೆಲವು ವೃತ್ತಗಳನ್ನೂ ಅನುಷ್ಟುಪ್ ಶ್ಲೋಕವನ್ನೂ ಅತ್ತಿತ್ತ ಎಳೆದು ತಾಳಬದ್ಧವಾಗಿ ಮಾಡಿಕೊಂಡು ಹಾಡುವುದನ್ನು "ಆಕಾಶವಾಣಿ"ಯಲ್ಲಿ (ಈಗೀಗ) ನಾವು ಕೇಳುತ್ತೇವೆ. ಆದರ ಹೀಗೆ ಮಾಡಿದುದರಿಂದಾಗಿ ಅವು ಲಯಾನ್ವಿತ ಛಂದೋಬಂಧಗಳೆಂದಾಗುವವೇ? ಮತ್ತು – ಛಂದೋಬದ್ಧವಾದ 'ಪದ್ಯ'ಗಳಲ್ಲದ, ಅಥವಾ ತಾಳನಿಯಮಿತವಾದ, 'ಪದ'ಗಳೂ ಅಲ್ಲದ, ಬಸವೇಶ್ವರಾದಿ ಶರಣರ "ವಚನ'ಗಳನ್ನು – ಅತ್ತಿತ್ತ ಎಳೆದು, ತೇಲಿಸಿ, ಎಡೆಯೆಡೆಯಲ್ಲಿ ಆವಶ್ಯಕತಾನುಸಾರವಾಗಿ ವಿರಮಿಸಿ – ಹೇಗಾದರೂ ತಾಳಬದ್ಧವಾಗಿ ಮಾಡಿ ಹಾಡುವುದನ್ನೂ ಇಂದು ನಾವು ಕೇಳುತ್ತೇವೆ. ಆದರೆ – ಈ ಪ್ರಯಾಸಗಳಿಂದಾಗಿ ಆ 'ವಚನ'(=ಗದ್ಯ)ಗಳು "ತಾಳಬದ್ಧವಾಗಿ ಜನ್ಮವೆತ್ತಿದ ರಚನೆ"ಗಳೆಂದಾಗುವವೇ? ವಾಸ್ತವಿಕವಾಗಿ – ಶರಣರ "ವಚನ"ಗಳು "ಪದ್ಯಗಂಧಿ ಗದ್ಯ"ಗಳಾಗಿದ್ದು (ಅರ್ಥಪ್ರಧಾನರಚನೆಗಳಾಗಿರುವುದರಿಂದ) ವಿತಾಲವಾಗಿ ಹಾಡಿದರೆ ಅತ್ಯಂತ ಪರಿಣಾಮಕಾರಿಗಳಾಗುವಂಥವುಗಳು.] 'ಉಗಾಭೋಗ' ಎಂಬ ಒಂದು ಬಗೆಯ (ವಚನ?) ಗೇಯರಚನೆಗಳನ್ನು (ವಿತಾಲವಾಗಿ) ಹಾಡುವುದು ಈಗ ಕ್ವಚಿತ್ ಕೇಳಿಬರುತ್ತದೆ. ಇದನ್ನು ಹಾಡುತ್ತಿದ್ದ ಪುರಾತನ ಪದ್ಧತಿ ಹೇಗಿತ್ತೆಂಬುದು ಗೊತ್ತಿಲ್ಲ. ಆ ಗಾಯನಸಂಪ್ರದಾಯವು ನಷ್ಟವಾಗಿ ಹೋಗಿದೆ. ಈಗ ಅವುಗಳನ್ನು ಕೆಲವರು ಗಾಯಕರು ವಿತಾಲವಾಗಿ ಹಾಡುತ್ತಾರೆಂಬ ಮಾತ್ರದಿಂದ ಅವು ವಿತಾಲವಾದ "ಛಂದೋಬಂಧ"-ಗಳೆಂದಾಗಬಲ್ಲವೇ? 'ಆಕಾಶವಾಣಿ' ಪ್ರತಿದಿನವೂ ಪ್ರಭಾತಸಮಯದಲ್ಲಿ ಭಕ್ತಿಭಾವದಿಂದ

ಪರಿಚ್ಛೇದದಲ್ಲಿ ನಿರೂಪಿಸಿದ ದ್ರುತವಿಲಂಬಿತಾದಿ ಭೇದಗಳು ಸಮ, ವಿಷಮ ಎಂಬ ದ್ವಿವಿಧಗತಿಯ ಪದ್ಯಗಳಲ್ಲಿಯೂ – ಗದ್ಯದಲ್ಲಿ ಸಹ – ಕಾಣಬರುವಂಥವುಗಳು; ಮತ್ತು ಗದ್ಯ, ಪದ್ಯ ಎಂಬ ಎರಡು ವಾಙ್ಮಯರೂಪಗಳಿಗೂ ಶೋಭಾವಹವಾದ ವಿಶಿಷ್ಟತೆಯನ್ನು ಒದಗಿಸುವವುಗಳು. ಆದರೆ ಅವು ಕೇವಲ ಗುರುಲಘುವಿನ್ಯಾಸಾವಲಂಬಿಗಳಾಗಿದ್ದು, ಅಕ್ಷರಪುಂಜಪರಿಮಾಣ ನಿಯಮ ಬಾಹಿರವಾಗಿರುವುದರಿಂದ – ಪರಿಮಾಣನಿಯಮವಿಲ್ಲದ ರಚನೆ 'ಪದ್ಯ' ಎಂದಾಗುವುದಿಲ್ಲವಾದುದರಿಂದ – ಅವುಗಳನ್ನವಲಂಬಿಸಿ ಪದ್ಯಗತಿಗಳ ವರ್ಗೀಕರಣವನ್ನು ಖಚಿತವಾದ ರೀತಿಯಲ್ಲಿ ಮಾಡುವುದಕ್ಕಾಗುವುದಿಲ್ಲ.[49] ಆದರೆ

---

ಬಿತ್ತರಿಸುವ ನಮ್ಮ 'ರಾಷ್ಟ್ರೀಯ ಗೇಯ'ವಾದ "ವಂದೇ ಮಾತರಮ್" ಈಗ ವಿತಾಲಗಾನವಾಗಿರುವುದಾದರೂ, ಜನ್ಮತಃ ಅದು ವಿತಾಲಬಂಧವಾಗಿರಲಿಲ್ಲವೆಂದೂ, ಆ ದಿವ್ಯಗೀತದ ಕರ್ತೃವಾದ ಬಂಕಿಮಚಂದ್ರರ ಕಾಲದಲ್ಲಿ ಮೊತ್ತಮೊದಲು ಅದು ಪ್ರಕಟವಾದಾಗ "ರಾಗ – ದೇಶ್, ತಾಲ – ಕವ್ವಾಲಿ" ಎಂದು ಮುದ್ರಿತವಾಗಿತ್ತೆಂದೂ ತಿಳಿದುಬರುತ್ತದೆ. ಪಾಂಡಿಚೇರಿಯ ಅರವಿಂದಾಶ್ರಮದವರು ಅದನ್ನು ಸತಾಲವಾಗಿಯೇ ಹಾಡಿದ್ದನ್ನು, ಆ ಗೀತದ ಆವಿರ್ಭಾವದ ಶತಮಾನೋತ್ಸವ ಸಂದರ್ಭದಲ್ಲಿ ಆಕಾಶವಾಣಿ ಪ್ರಸಾರಮಾಡಿತ್ತು; ಇದನ್ನು ನನ್ನಂತೆ ಹಲವರು ಕೇಳಿರಬಹುದು. ಈಗ ನಮಗೆ ಸಾಧಾರಣವಾಗಿ ಪರಿಚಿತವಾಗಿರುವುದು ಆ ಗೀತದ ಆರಂಭದ ಒಂದು 'ಸೂಲು' (stanza) ಮಾತ್ರ, ಅದು 'ಕವ್ವಾಲಿ' ಶೈಲಿಯ ಗೀತವೆಂಬುದು ಗೊತ್ತಾಗಬೇಕಾದರೆ, ಅದರ ಪೂರ್ಣಪಾಠವನ್ನು ನೋಡಬೇಕು. (೧೯೨೦ರ ಸುಮಾರಿಗೆ ಕನ್ನಡದಲ್ಲಿ ಮುದ್ರಿತವಾಗಿದ್ದ ರಾಷ್ಟ್ರೀಯ ಗೀತಗಳ ಸಂಗ್ರಹದ ಒಂದು ಸಣ್ಣ ಪುಸ್ತಕದಲ್ಲಿ, ಸಂಸ್ಕೃತಭೂಯಿಷ್ಠವಾದ ಆ ಬಂಗಾಲೀ ಗೀತದ ಪೂರ್ಣಪಾಠವನ್ನು ಅಂದು ನಾನು ಕಂಡಿದ್ದೆ, ಪಠಿಸಿದ್ದೆ. ಆ ಇಡೀ ಗೀತವು ನನ್ನ ಸ್ಮೃತಿಯಲ್ಲಿ ಇಂದೂ ಇದೆ.) ಸಾಕಷ್ಟು ವಿಸ್ತಾರವಾಗಿ ನಾನಿಲ್ಲಿ ಮಾಡಿದ ಪ್ರತಿಪಾದನೆಯ ತಾತ್ಪರ್ಯವೇನೆಂದರೆ – ಒಂದು 'ಸತಾಲಬಂಧ'ವನ್ನು ವಿತಾಲವಾಗಿ ಪಠಿಸಿದ ಅಥವಾ ಹಾಡಿದ ಮಾತ್ರಕ್ಕೆ ಆ ರಚನೆಯೇ ವಿತಾಲವೆಂದಾಗುವುದಿಲ್ಲ; ಮತ್ತು ಒಂದು ವಿತಾಲವಾದ ರಚನೆಯನ್ನು ಸತಾಲವಾಗಿ ಪಠಿಸಿದ ಅಥವಾ ಹಾಡಿದ ಮಾತ್ರಕ್ಕೆ ಆ ರಚನೆಯೇ ಸತಾಲವೆನಿಸುವುದೂ ಇಲ್ಲ. ಯಾವುದೊಂದು ರಚನೆ ಪ್ರಕೃತ್ಯಾ ಸತಾಲವಾಗಿದ್ದರೆ ಮಾತ್ರ ಅದು 'ಸತಾಲಬಂಧ'ವೆಂದೂ, ಪ್ರಕೃತ್ಯಾ ವಿತಾಲವಾಗಿದ್ದರೆ ಮಾತ್ರ ಅದು 'ವಿತಾಲಬಂಧ'ವೆಂದೂ ಕರೆಯಿಸಿಕೊಳ್ಳುವುದಕ್ಕೆ ಅರ್ಹವಾಗುತ್ತದೆ.

49. {ಪುರಾತನರ ಪದ್ಯಗತಿವರ್ಗೀಕರಣಪ್ರಯತ್ನಕ್ಕೆ ಸಾಕ್ಷ್ಯ} ಶಾರ್ಙ್ಗದೇವನು ನಿರೂಪಿಸಿರುವಂತಹ – ಗುರುಲಘುವಿನ್ಯಾಸರೂಪಗಳಿಂದ ವ್ಯಕ್ತವಾಗುವ ದ್ರುತಾದಿ ಭೇದಗಳಿಗನುಗುಣವಾಗಿ ಪದ್ಯಗತಿಗಳ ವರ್ಗೀಕರಣವನ್ನು ವ್ಯವಸ್ಥಿತವಾಗಿ ಮಾಡುವುದಕ್ಕಾಗುವುದಿಲ್ಲವಾದರೂ, ಯಾವುದೋ ಒಂದು ಅಜ್ಞಾತಕಾಲದಲ್ಲಿ ಅಂತಹ ಪ್ರಯತ್ನಗಳು – ಮುಖ್ಯವಾಗಿ ವೃತ್ತವಿಷಯದಲ್ಲಿ – ಒಂದಿಷ್ಟು ನಡೆದಿದ್ದವೆಂಬುದಕ್ಕೆ ಸಾಕ್ಷ್ಯಗಳು ಕಂಡುಬರುತ್ತವೆ. ಉದಾ:

U UU– UU– UU– U–
ದ್ರುತವಿಲಂಬಿತಮಾಹನಭೌಭರೌ ॥ (ವೃತ್ತರತ್ನಾಕರ)

ಇದು 'ದ್ರುತವಿಲಂಬಿತ'ವೆಂದು ಹೆಸರಿನ ಸುಪ್ರಸಿದ್ಧವಾದ ಒಂದು ಸಮವೃತ್ತದ ಲಕ್ಷ್ಯಲಕ್ಷಣ ಸಮವಾಯರೂಪದ ಪಾದ. ಈ ವೃತ್ತಕ್ಕೆ ಈ ಹೆಸರು ಇದರ 'ಗತಿ'ಯನ್ನವಲಂಬಿಸಿ

ಪದ್ಯಗಳು ಸಮಗತಿಯವಾಗಿರುವಲ್ಲೆಲ್ಲ ಆಯಾ ಪದ್ಯದ ಪಾದಾವಯವಗಳ ಉಚ್ಚಾರಕಾಲಪರಿಮಾಣವನ್ನು ಅವಲಂಬಿಸಿದ ದ್ರುತತ್ವಾದಿಗಳು ಆ ಪದ್ಯಗಳ ಗತಿಯಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತವೆ; ಮತ್ತು ಅವುಗಳನ್ನಾಧರಿಸಿ ಸಮಗತಿಯ ಛಂದೋಬಂಧಗಳ ಗತಿಭೇದಾನುಗುಣವಾದ ವರ್ಗೀಕರಣವನ್ನು ಖಚಿತವಾದ ರೀತಿಯಲ್ಲಿ ಮಾಡಬಹುದಾಗುತ್ತದೆ. ಈ ದೃಷ್ಟಿಯಿಂದ ಮಾಡಿದ ದ್ರುತ ವಿಲಂಬಿತಾದಿ ಗತಿಭೇದನಿರೂಪಣವನ್ನು ಯಾವ ಶಾಸ್ತ್ರಗ್ರಂಥದಲ್ಲಿಯೂ ನಾನು ಕಂಡಿಲ್ಲ. (ತೆಲುಗು ಛಂದೋಗ್ರಂಥಕಾರರಿಗೆ ಈ ಬಗೆಯ ಗತಿಭೇದವಿಚಾರವು ಹೊಳೆದಿರುವ ಹಾಗೆ ತೋರುವುದಾದರೂ, ಅವರು ದ್ರುತತ್ವಾದಿ ಲಕ್ಷಣಗಳನ್ನು ಅವಲಂಬಿಸಿ ಆ ಭೇದಗಳನ್ನು ನಿರೂಪಿಸದೆ, ಗತಿವೈಚಿತ್ರ್ಯಗಳನ್ನೇ ಲಕ್ಷಿಸಿ ಅದೊಂದು ಬಗೆಯ ಗತಿಭೇದನಿರೂಪಣೆ ಮಾಡಿದ್ದಾರೆ. ಅದೂ ಅಲ್ಲದೆ, ಅವರು ಆ ಗತಿಭೇದಗಳನ್ನು 'ರಗಳೆ'ಗಳಿಗೆ ಮಾತ್ರ ಸೀಮಿತವಾಗಿ ಅನ್ವಯಿಸಿದ್ದಾರೆ; ಮತ್ತು ಅವರು ಕಂಡ ಗತಿಭೇದಗಳು ವಸ್ತುತಃ ನಾಲ್ಕೋ ಐದೋ ಆಗಿರುವವಾದರೂ, ಆ ಗತಿಗಳನ್ನು ಒಂಬತ್ತಾಗಿ ವಿಸ್ತರಿಸಿದ್ದಾರೆ. ಕುತೂಹಲಿಗಳು ಅವುಗಳ ಪರಿಚಯವನ್ನು ಡಿ. ವಿ. ಕೆ. ಮೂರ್ತಿ ಪ್ರಕಾಶಿತ "ಛಂದೋಂಬುಧಿ"ಯ ೧೬೬, ೧೬೭, ೧೬೮ನೇ ಪುಟಗಳಿಂದ ಪಡೆಯಬಹುದಾಗಿದೆ.) ಇಲ್ಲಿ ನಾನೀಗ ಮಾಡುತ್ತಿರುವುದು ಹೊಸತೊಂದು ಪ್ರಯತ್ನವೆಂದರೂ ಸರಿ. ನನಗೆ ಹೊಳೆದಷ್ಟರ

---

ಬಂದುದೆಂಬುದು ಸುವ್ಯಕ್ತ. ಇದರ ಪೂರ್ವಾರ್ಧ(ಎಂದರೆ ದ್ರುತವಿಲಂಬಿತ ಎಂಬಲ್ಲಿಯವರೆಗಿನ ಛಂದಃಖಂಡ)ದಲ್ಲಿ ಶಾರ್ಙ್ಗದೇವನು ಹೇಳಿರುವ "ಲಘುಭಿರ್ಬಹುಲೈಃ' ಎಂಬ ದ್ರುತಗತಿಯ ಲಕ್ಷಣವು ಸ್ಪಷ್ಟವಾಗಿ ಕಂಡುಬರುತ್ತದೆ. ಆದರೆ ಇದರ ಉತ್ತರಾರ್ಧ(ಎಂದರೆ, ಮಾಹನಭೌಭರೌ ಎಂಬ ಛಂದಃಖಂಡ)ದಲ್ಲಿ ಅವನು ಹೇಳಿರುವ 'ಲಘುಭಿಃ ಅಲ್ಪೈಃ' ಎಂಬ ವಿಲಂಬಿತಗತಿಯ ಲಕ್ಷಣವಿರದೆ, "ಲಘುಭಿಃ ಸಮೈಃ" ಎಂದು ಅವನು ಹೇಳಿರುವ ಮಧ್ಯಗತಿಯ ಲಕ್ಷಣವು ಕಾಣುತ್ತದೆ. ಆದುದರಿಂದ, ಶಾರ್ಙ್ಗ-ದೇವೋಕ್ತವಾದ ಷಡ್ವಿಧಗತಿವ್ಯವಸ್ಥೆಯಂತೆ ಹೇಳುವುದಾದರೆ, ಈ ವೃತ್ತಕ್ಕೆ 'ದ್ರುತವಿಲಂಬಿತ' ಎಂಬ ಹೆಸರು ಒಪ್ಪುವಂತಿಲ್ಲ; ಬದಲಾಗಿ, 'ದ್ರುತಮಧ್ಯ' ಎಂದಿರಬೇಕಾಗುತ್ತದೆ. ಆದರೆ ಈ ವೃತ್ತಕ್ಕೆ ಪಿಂಗಲಾದಿಗಳ ಛಂದೋಗ್ರಂಥಗಳಲ್ಲಿ 'ದ್ರುತವಿಲಂಬಿತ' ಎಂಬ ಹೆಸರೇ ಇರುವುದು ಹೊರತು, 'ದ್ರುತಮಧ್ಯ' ಎಂಬ ಹೆಸರು ಯಾವ ಗ್ರಂಥದಲ್ಲಿಯೂ ಕಾಣುವುದಿಲ್ಲ. ಇದರಿಂದ – ಪದ್ಯಗತಿಭೇದಗಳನ್ನು ಪರಾಮರ್ಶಿಸಿದ ಪುರಾತನರು ಅದರ ಮೂಲಭೇದಗಳನ್ನು ದ್ರುತ, ಮಧ್ಯ, ವಿಲಂಬಿತ ಎಂದು ಮೂರಾಗಿ ಕಲ್ಪಿಸದೆ – ದ್ರುತ ಹಾಗೂ ವಿಲಂಬಿತ ಎಂದು ಎರಡೇ ಆಗಿ ಕಲ್ಪಿಸಿರಬಹುದೆಂದು ಭಾವಿಸಬೇಕಾಗುತ್ತದೆ. ಆದರೆ ಆ ಕಲ್ಪನೆ ಹೇಗೆ ಬೇಕಾದರೂ ಇದ್ದಿರಲಿ,–ಇಲ್ಲಿ ನಿಸ್ಸಂದೇಹವಾಗಿ ತಿಳಿದುಬರುವ ತಥ್ಯವೇನೆಂದರೆ ಪಿಂಗಳನಿ-ಗಿಂತಲೂ (ಎಷ್ಟೋ) ಹಿಂದಿನ ಕಾಲದ ಛಂದೋವಿದರು ಪದ್ಯಗತಿಗಳ ಪರ್ಯಾಲೋಚನೆ ಮಾಡಿದ್ದು ಮಾತ್ರವಲ್ಲ, ಯಾವುದೋ ಒಂದು ರೀತಿಯಲ್ಲಿ ಅವುಗಳ ವ್ಯವಸ್ಥೆಮಾಡುವ ಪ್ರಯತ್ನಕ್ಕೂ ಕೈಯಿಕ್ಕಿದ್ದರೆಂಬುದಾಗಿದೆ.

ಮಟ್ಟಿಗೆ ಆ ಗತಿಭೇದಗಳ ಸ್ವರೂಪನಿರೂಪಣೆಯನ್ನು ಇಲ್ಲಿ ಮಾಡುತ್ತೇನೆ. ಅದಕ್ಕಾಗಿ ಮೊದಲು ಕೆಲವು ಸಮಗತಿಯ ಛಂದೋಬಂಧಗಳನ್ನು ಉದಾಹರಿ–ಸುತ್ತೇನೆ:

I. (೧) ಶ್ರೀವಧುವಿ । ನಂಬಕಚ । ಕೋರಕಂ । ಪೊರೆಯೆ ಭ– ।
ಕ್ತಾವಳಿಯ । ಹೃತ್ಕುಮುದ । ಕೋರಕಂ । ಬಿರಿಯೆ ಜಗ ।
ತೀವಲಯ । ದಮಲಸೌ । ಭಾಗ್ಯರ । ತ್ನಾಕರಂ । ಪೆರ್ಚೆನಿಂ ।
ಮೇರೆವರಿ । ಯೆ– । (ಜೈಮಿನಿಭಾರತ)

ಇದು 'ವಾರ್ಧಕ ಷಟ್ಪದಿ' ಎಂದು ಪ್ರಸಿದ್ಧವಾಗಿರುವ ಮಾತ್ರಾಬಂಧದ ಅರ್ಧಭಾಗ.

(೨) ವೃತ್ತಲಲಿ । ತಂ ಲಲಿತ । ನೃತ್ತಮಿವ । ಸುಂದರಲ । ಯಾತ್ತಚರ ।
ಣಂ ಭಜಸ । ನಾಭಜಸ । ನಾಭ್ಯೌ–॥ (ಜಯಕೀರ್ತಿ)

ಇದು 'ಲಲಿತವೃತ್ತ'ವೆಂಬ ಸತಾನವಾದ ಸಮವೃತ್ತದ ಒಂದು ಪಾದ.

II. (೧) ಬಂದಿರೆ । ಪರಿಣಾ । ಮವೆ ಮನೆ । ಯೊಳಗ– ।
ಕ್ಕಂದಿರ । ನುವೆ ಮ । ಕ್ಕಳು ಕುಶ । ಲವೆ ನೀ ।
ವೆಂದುಂ । ಬಾರದ । ವರು ನ । ಮ್ಮಲ್ಲಿಗೆ । ಬಂದಿರಿ ।
ಕರುಣದೊ । ಳು– ॥ (ಜಯನೃಪಕಾವ್ಯ)

ಇದು 'ಪರಿವರ್ಧಿನೀಷಟ್ಪದಿ' ಎಂಬ ಮಾತ್ರಾಬಂಧದ ಅರ್ಧಭಾಗ.

(೨) ಶೀತಕ । ರಪ್ರಕ । ರಂಗಳ । ವೇಟಿಡೆ । ಯೋಳಿಯೊ । ಳ್ಕೈದಲಿ ।
ನುಕ್ರಮ । ದಿಂ– ॥ (ಛಂದೋಂಬುಧಿ)

ಇದು 'ವನಮಂಜರಿ' ಎಂಬ ಸತಾನವಾದ ಸಮವೃತ್ತದ ಒಂದು ಪಾದ.

(೩) ಭೂನಾ । ಕಾಂತದೊ । ಳಿರೆ ತೋ । ಯೇಶಂ ॥ (ಛಂದೋಂಬುಧಿ)

ಇದು 'ಪಣವಕ' ಎಂಬ ವಿತಾನವಾದ ಸಮವೃತ್ತದ ಒಂದು ಪಾದ.

III. (೧) ತಿರುಕ । ನೊರ್ವ । ನೂರ । ಮುಂದೆ ।
ಮುರುಕು । ಧರ್ಮ । ಶಾಲೆ । ಯಲ್ಲಿ ।
ಒರಗಿ । ರುತ್ತ । ಲೊಂದು । ಕನಸ । ಕಂಡ । ನೆಂತೆ । ನೆ– ॥

(ಮುಪ್ಪಿನ ಷಡಕ್ಷರಿ)

ಇದು 'ಭೋಗಷಟ್ಪದಿ' ಎಂಬ ಮಾತ್ರಾಬಂಧದ ಅರ್ಧಭಾಗ.

(೨) ದೇವ । ರಾಜ । ಸೇವ್ಯ । ಮಾನ । ಪಾವ । ನಾಂಘ್ರಿ । ಪಂಕ । ಜಂ ॥
(ಕಾಲಭೈರವಾಷ್ಟಕ)

ಇದು 'ಮಹೋತ್ಸವ' ಎಂಬ ಸತಾನವಾದ ಸಮವೃತ್ತದ ಒಂದು ಪಾದ.

ಇಲ್ಲಿ ಉದಾಹರಿಸಿರುವ ಪದ್ಯಭಾಗಗಳೆಲ್ಲವನ್ನು ಯಥಾಕ್ಷರಗುರುಲಘು-ವಾಗಿ ಮತ್ತು ಒಂದೇ ಕಾಲಪ್ರಮಾಣದಲ್ಲಿ, ಎಂದರೆ ಏಕಪ್ರಕಾರವಾದ ಅಕ್ಷರೋಚ್ಚಾರವೇಗದಲ್ಲಿ, ಪಠಿಸುವಾಗ – । ನೆಯ ವರ್ಗದವಕ್ಕಿಂತ ॥ ನೆಯ ವರ್ಗದವು ತ್ವರಿತವಾಗಿ, ।॥ ನೆಯ ವರ್ಗದವು ॥ ನೆಯ ವರ್ಗದವಕ್ಕಿಂತಲೂ ತ್ವರಿತವಾಗಿ ಹರಿಯುವಂತೆ ಭಾಸವಾಗುತ್ತದೆ. (ಇದು ಅನುಭವೈಕವೇದ್ಯ.) ಹಾಗಾದರೆ ಈ ಮೂರು ವರ್ಗದ ಪದ್ಯಗಳು ಅನುಕ್ರಮವಾಗಿ ವಿಲಂಬಿತ, ಮಧ್ಯ, ದ್ರುತ ಎಂಬ ಗತಿಭೇದಗಳನ್ನು ಪ್ರಕಟಿಸುತ್ತವೆಂದಾಯಿತು. ಆದರೆ ಇಲ್ಲಿ ನಮ್ಮ ಅನುಭವಕ್ಕೆ ಬರುವ ವಿಲಂಬಿತಾದಿ ಗತಿಭೇದಗಳಿಗೆ (ಶಾರ್ಙ್ಗದೇವೋಕ್ತ ಗತಿಭೇದಗಳಿಗೆ ಕಾರಣವಾಗಿರುವ) ಗುರುಲಘುವಿನ್ಯಾಸಪ್ರಕಾರಗಳು ಕಾರಣವಲ್ಲ-ವೆಂಬುದನ್ನು ಉದಾಹೃತ ಪದ್ಯಭಾಗಗಳ ಗುರುಲಘುವಿಸ್ತಾರವು ತೋರಿಸುತ್ತದೆ. ಇದರಿಂದ, ಪ್ರಸ್ತುತವಾದ ಈ ಗತಿಭೇದಗಳು – ಶಾರ್ಙ್ಗದೇವೋಕ್ತ ಗತಿಭೇದ-ಗಳಿಗೆ ಬಹಿರ್ಭೂತವಾದವುಗಳೆಂದೂ, ಬೇರೆಯೇ ಕಾರಣದಿಂದ ಉನ್ಮೀಲಿತ-ವಾಗುವಂಥವುಗಳೆಂದೂ ಸಿದ್ಧವಾಗುತ್ತದೆ. ಆ ಕಾರಣವಾದರೂ ಅಷ್ಟೊಂದು ಗೂಢವಾದುದೇನಲ್ಲ; ಉದಾಹೃತ ಪದ್ಯಭಾಗಗಳ ಛಂದಃಖಂಡಗಳ ಉಚ್ಚಾರ ಕಾಲಪರಿಮಾಣವನ್ನು, ಎಂದರೆ ಆಯಾ ಖಂಡಗಳ ಮಾತ್ರಾಸಂಖ್ಯೆಗಳನ್ನು ಲಕ್ಷಿಸಿದರೆ ಅದು ಗೊತ್ತಾಗಿಬಿಡುತ್ತದೆ. ಆ ಸಂಖ್ಯೆಗಳು ಆ ಮೂರು ಪದ್ಯ ವರ್ಗಗಳಲ್ಲಿ ಅನುಕ್ರಮವಾಗಿ ೫, ೪, ೩ ಎಂದಾಗಿರುವುದನ್ನು ಅಲ್ಲಿ ಕಾಣ ಬಹುದು. ಆ ಪದ್ಯದ 'ನಡೆ'(=ಗತಿ, ಧಾಟಿ)ಗಳಲ್ಲಿ ವೇಗಭೇದಗಳು ಭಾಸ-ವಾಗುವುದಕ್ಕೆ, ಆಯಾ ಪದ್ಯವರ್ಗದ ಛಂದಃಖಂಡಗಳ ಮಾತ್ರಾಸಂಖ್ಯಾ-ಭೇದವೇ ಕಾರಣವೆಂಬುದು ಇದರಿಂದ ವಿಶದವಾಗುತ್ತದೆ. ತಾತ್ಪರ್ಯವೇನೆಂದರೆ – ಲಯಾನ್ವಿತಬಂಧಗಳಿಗೆ ಮೀಸಲಾಗಿರುವ ಈ ಬಗೆಯ ದ್ರುತವಿಲಂಬಿತಾದಿ ಗತಿಭೇದಗಳಿಗೆ, ಆಯಾ ಬಂಧಗಳ (ಪುನಃಪುನರಾವರ್ತಿತವಾಗುವ) ಛಂದಃ-ಖಂಡಗಳ ಪರಿಮಾಣದ ಅಲ್ಪತ್ವಮಹತ್ತ್ವಗಳೇ ಕಾರಣಗಳಾಗಿರುತ್ತವೆ. ಆ ಛಂದಃ ಖಂಡಗಳ ಪರಿಮಾಣವು ಅಲ್ಪವಾಗಿರುವಲ್ಲಿ ಲಯಾನುಭವಗಳು ಬೇಗಬೇಗನೆ ಉಂಟಾಗುವುದರಿಂದ, ಆ ಪದ್ಯವು ತ್ವರಿತವಾಗಿ ಹರಿಯುತ್ತಿರುವಂತೆ ನಮಗೆ ಭಾಸವಾಗುತ್ತದೆ; ಆ ಛಂದಃಖಂಡಗಳ ಪರಿಮಾಣವು ಅನಲ್ಪವಾಗಿರುವಲ್ಲಿ

ಲಯಾನುಭವಗಳು ಅಷ್ಟು ಬೇಗ ಬೇಗನೆ ಉಂಟಾಗುವುದಿಲ್ಲವಾದುದರಿಂದ, ಆ ಪದ್ಯವು ಮಂದವಾಗಿ ಗಮಿಸುತ್ತಿರುವಂತೆ ಭಾಸವಾಗುತ್ತದೆ.[50]

ಛಂದೋಬಂಧಗಳ ಗತಿಯಲ್ಲಿ ನಿಷ್ಕಿತವಾಗಿರುವ ದ್ರುತಾದಿಭೇದಗಳ ಕುರಿತು ನಾವು ಈವರೆಗೆ ಮಾಡಿದ ವಿಚಾರದ ಫಲಿತಾಂಶವಾಗಿ ಈ ಕೆಲವು ಮಾತುಗಳನ್ನು ಹೇಳಬಹುದು; ಛಂದೋಬಂಧಗಳಲ್ಲಿ ಭಾಸವಾಗುವ ದ್ರುತ–

---

50. {ವಾಸ್ತವಿಕ ಕಾಲದ ವೇಗಭೇದಗಳು ಮತ್ತು ಪ್ರಾತಿಭಾಸಿಕ ವೇಗಭೇದಗಳು} ಇಲ್ಲಿ ಪ್ರಸ್ತುತಪಡಿಸಿದ (ಲಯಾನ್ವಿತಬಂಧಗಳಿಗೆ ಮೀಸಲಾಗಿರುವ) ದ್ರುತಾದಿ ಗತಿಭೇದಗಳು, ಹಿಂದೆ ನಿರೂಪಿಸಿರುವ (ಸಕಲ ಛಂದೋಬಂಧಗಳಿಗೆ ಮತ್ತು ಗದ್ಯಕ್ಕೆ ಸಹ ಅನ್ವಯಿಸುವ) ಶಾರ್ಙ್ಗದೇವೋಕ್ತ ದ್ರುತಾದಿ ಗತಿಭೇದಗಳಂತೆಯೇ, "ಪ್ರಾತಿಭಾಸಿಕ"ವಾದ (illusory) ವೇಗಭೇದಗಳು (ಟಿಪ್ಪಣಿ 35 ನೋಡಿರಿ) ಹೊರತು, ಪಠನಾದಿ ಕ್ರಿಯೆಗಳ ವಾಸ್ತವಿಕ ಕಾಲಪರಿಮಾಣಭೇದಗಳನ್ನವಲಂಬಿಸಿರುವ (ತ್ರಿವಿಧಲಯಗಳೆಂದು ವ್ಯವಹಾರವಿರುವ) ಅಕ್ಷರೋಚ್ಚಾರದ ವೇಗಭೇದಗಳಲ್ಲವೆಂಬುದನ್ನು ಸರ್ವಥಾ ಮರೆಯಬಾರದು. [ಛಂದಃ–ಖಂಡಗಳಲ್ಲಿ ಅಡಕವಾಗಿರುವ ಅಕ್ಷರಗಳ ಲಘುತ್ವಗುರುತ್ವಗಳ ಫಲವಾಗಿ ಗತಿಯಲ್ಲಿ "ಭಾಸವಾಗುವ" ವೇಗಭೇದಗಳು ಶಾರ್ಙ್ಗದೇವೋಕ್ತವಾದ ದ್ರುತವಿಲಂಬಿತಾದಿ ಗತಿಭೇದಗಳು; ಲಯಾನ್ವಿತವಾದ ಛಂದೋಬಂಧಗಳಲ್ಲಿ ಅಡಕವಾಗಿರುವ (ಸಮಾನಮಾತ್ರಾಕಾಲದ) ಛಂದಃ–ಖಂಡಗಳ ಅಲ್ಪತ್ವಮಹತ್ವಗಳ ಫಲವಾಗಿ ಗತಿಯಲ್ಲಿ "ಭಾಸವಾಗುವ" ವೇಗಭೇದಗಳು ನಾನಿಲ್ಲಿ ಪ್ರಸ್ತುತಪಡಿಸಿದ ದ್ರುತವಿಲಂಬಿತಾದಿ ಗತಿಭೇದಗಳು. ಇವೆರಡು ಬಗೆಯ ದ್ರುತವಿಲಂ–ಬಿತಾದಿಗಳೂ "ಪ್ರಾತಿಭಾಸಿಕವಾದ (illusory) ವೇಗಭೇದ"ಗಳು ಹೊರತು, ವಾಸ್ತವಿಕವಾದ ವೇಗಭೇದಗಳಲ್ಲ.] ಲಯಾನ್ವಿತಬಂಧಗಳ ಪಠನಗಾಯನ ಸಂದರ್ಭಗಳಲ್ಲಿ ಪಾಠಕಗಾಯಕರು (ಇಷ್ಟಾನುಸಾರ) ಮಾಡಿಕೊಳ್ಳುವ ಮಾತ್ರಾಕಾಲದ ಹ್ರಾಸವೃದ್ಧಿಗಳ ಪರಿಣಾಮವಾಗಿ ಅಕ್ಷರೋ–ಚ್ಚಾರ ಕಾಲಪ್ರಮಾಣದಲ್ಲಿ ಭೇದಗಳುಂಟಾಗುವುದರಿಂದ, ಆ ಬಂಧಗಳ 'ಲಯರೇಖೆ'ಗಳು ನಿಬಿಡವೋ ವಿರಲವೋ ಆಗುತ್ತವೆ. ಇವುಗಳಿಗೆ ಸಂಗೀತಶಾಸ್ತ್ರದಲ್ಲಿ "ದ್ರುತಾದಿ ತ್ರಿವಿಧಲಯ"–ಗಳೆಂದು ಹೆಸರು. (ಇವು ಉಚ್ಚಾರದ ವೇಗಭೇದಗಳ ಪರಿಣಾಮರೂಪವಾಗಿರುವುದರಿಂದ, ಸಂಗೀತಸಂಪ್ರದಾಯದಲ್ಲಿ ಈ ತ್ರಿವಿಧ ಲಯಗಳನ್ನು ತ್ರಿವಿಧವೇಗಗಳೆಂದೂ ಹೇಳುವುದುಂಟು. ಈ ವೇಗಭೇದಗಳು ವಾಸ್ತವಿಕ ಕಾಲಪ್ರಮಾಣಭೇದಗಳು. ಇವಕ್ಕೂ ಛಂದಸ್ತತ್ತ್ವಕ್ಕೂ ಸಂಬಂಧವಿಲ್ಲ.) ಲಯಾನ್ವಿತಬಂಧಗಳಲ್ಲಿ ನಿಷ್ಕಿತವಾಗಿರುವ ಲಯಾನುಭವಸ್ಥಾನ(=ಲಯ–ರೇಖೆ)ಗಳ ನಿಬಿಡತೆ ವಿರಲತೆಗಳ ಪರಿಣಾಮವಾಗಿ – ಉಚ್ಚಾರವೇಗಭೇದನಿರಪೇಕ್ಷವಾಗಿ – ಆ ಬಂಧಗಳ 'ಗತಿ' (='ನಡೆ', ಧಾಟಿ) ತ್ವರಿತವೆಂದೋ ಮಂದವೆಂದೋ ನಮಗೆ ಭಾಸವಾಗುತ್ತದೆ. "ಭಾಸಮಾನ"ವಾದ ಈ ವೇಗಭೇದಗಳೇ ಪ್ರಸ್ತುತವಾದ (ಲಯಾನ್ವಿತ ಬಂಧಗಳ) ದ್ರುತಾದಿಗತಿಭೇದಗಳಾಗಿವೆ. ತಾತ್ಪರ್ಯ:– ಸಂಗೀತಾದಿಗಳಲ್ಲಿ ದ್ರುತಾದಿ "ತ್ರಿವಿಧ–ಲಯ"ಗಳೆಂದು ಕರೆಯಲ್ಪಡುವ "ಕಾಲಪ್ರಮಾಣಭೇದ"ಗಳು ವಾಸ್ತವಿಕವಾದ (ಉಚ್ಚಾರಾದಿ–ಗಳ) ವೇಗಭೇದಗಳು. ಛಂದೋಗತವಾದ "ದ್ರುತಾದಿಗತಿಭೇದ"ಗಳು – (ಶಾರ್ಙ್ಗದೇವೋಕ್ತ ಷಡ್ವಿಧ ಗತಿಭೇದಗಳು, ಹಾಗೂ ನಾನಿಲ್ಲಿ ಪ್ರಸ್ತುತ ಪಡಿಸಿರುವ ಲಯಾನ್ವಿತಬಂಧಗಳಿಗೆ ಮೀಸಲಾದ ಗತಿಭೇದಗಳು) ವಾಸ್ತವಿಕ ಕಾಲದ ವೇಗಭೇದಗಳಲ್ಲ; ಇವು ಕೇವಲ "ಪ್ರಾತಿಭಾಸಿಕ ವೇಗಭೇದ"ಗಳು.

ತ್ವಾದಿಗಳು ಎರಡು ಬಗೆಯವು: ಗುರುಲಘುವಿನ್ಯಾಸಪ್ರಕಾರಗಳ ಫಲವಾಗಿ ಭಾಸವಾಗುವ ದ್ರುತತ್ವಾದಿಗಳದು ಒಂದು ವರ್ಗ; ಪುನಃಪುನರಾವರ್ತಿಸುವ ಸಮಾನಮಾತ್ರಾಸಂಖ್ಯೆಯ ಛಂದಃಖಂಡಗಳ ಅಲ್ಪತ್ವಮಹತ್ತ್ವಗಳ ಫಲವಾಗಿ ಭಾಸವಾಗುವ ದ್ರುತತ್ವಾದಿಗಳದು ಇನ್ನೊಂದು ವರ್ಗ. (ಮೊದಲನೆಯ ವರ್ಗ-ದವು ಶಾರ್ಙ್ಗದೇವಪ್ರೋಕ್ತವಾದವುಗಳು; ಎರಡನೆಯ ವರ್ಗದವು ಈ ಪರಿ-ಚ್ಛೇದದಲ್ಲಿ ಪ್ರಸ್ತುತವಾದವುಗಳು). ಮೊದಲನೆಯ ವರ್ಗದವು ಲಯರಹಿತ, ಲಯಾನ್ವಿತ ಎಂಬ ಭೇದವಿಲ್ಲದೆ ಎಲ್ಲಾ ಛಂದೋಬಂಧಗಳಲ್ಲಿಯೂ – ಗದ್ಯದಲ್ಲಿ ಸಹ – ಗೋಚರವಾಗಬಹುದಾದವುಗಳು. ಇವು ಛಂದಃಖಂಡಗಳ, ಅರ್ಥಾತ್ ಅಕ್ಷರಪುಂಜಗಳ ಉಚ್ಚಾರಕಾಲಪರಿಮಾಣಭೇದಗಳನ್ನು ಅವಲಂಬಿಸಿರದೆ, ಕೇವಲ ಛಂದೋವಿನ್ಯಾಸಪ್ರಕಾರಗಳನ್ನು ಅರ್ಥಾತ್ ಗುರುಲಘುರೂಪವಾದ ಅಕ್ಷರ ನಿವೇಶನಪ್ರಕಾರಗಳನ್ನು ಅವಲಂಬಿಸಿದವುಗಳಾದುದರಿಂದ, ಈ ಗತಿರೂಪಗಳನ್ನು "ಅಕ್ಷರಗತಿಭೇದಗಳು" ಎಂದು ಕರೆಯಬಹುದು. ಎರಡನೆಯ ವರ್ಗದವು ಗುರುಲಘುವಿನ್ಯಾಸಸ್ವರೂಪ ನಿರಪೇಕ್ಷವಾಗಿ, ಸಮಾನಮಾತ್ರಾಕಾಲದ ಛಂದಃ-ಖಂಡಗಳ ಪುನಃಪುನರಾವರ್ತನವನ್ನು ಅವಲಂಬಿಸಿರುವುದರಿಂದ, ಇವನ್ನು "ಆವರ್ತಗತಿಭೇದಗಳು" ಎಂದು ಹೆಸರಿಸಬಹುದು. ಈ ಎರಡೂ ಬಗೆಯ ಗತಿ ಸ್ವರೂಪಗಳನ್ನು ಲಯಾನ್ವಿತವಾದ ಛಂದೋಬಂಧಗಳಲ್ಲಿ ಕಾಣಬಹುದಾದರೂ, ಲಯರಹಿತವಾದ ಛಂದೋಬಂಧಗಳಲ್ಲಿ 'ಆವರ್ತಗತಿ'ರೂಪಗಳನ್ನು ಕಾಣ-ಲಾರೆವು; ಅವುಗಳಲ್ಲಿ ಕೇವಲ 'ಅಕ್ಷರಗತಿ'ರೂಪಗಳನ್ನು ಮಾತ್ರ ಗುರುತಿಸ-ಬಹುದಾಗಿದೆ.[51] ಲಯಾನ್ವಿತವಾದ ಎಲ್ಲಾ ಛಂದೋಬಂಧಗಳಲ್ಲಿಯೂ – ಅವು

---

51. {ಛಂದೋವ್ಯವಹಾರದಲ್ಲಿ ಗ್ರಾಹ್ಯವಾಗಬಹುದಾದ ಆವರ್ತದ ಪರಿಮಿತಿ} ಈ ಮಾತನ್ನು ಕೆಲವರು ಹೀಗೆ ಆಕ್ಷೇಪಿಸಲೂಬಹುದು: "ಯಾವುದೊಂದು 'ಸಮವೃತ್ತ'ದ ಪಾದಗಳಾದರೂ ಮಾತ್ರಾಸಂಖ್ಯೆಯಲ್ಲಿ ವಸ್ತುತಃ ಪರಸ್ಪರ ಸಮಾನವೇ ಆಗಿರುತ್ತವೆಯಷ್ಟೆ. ಆದುದರಿಂದ ಆ ಒಂದೊಂದು ಪಾದವನ್ನು ಒಂದೊಂದು ಆವರ್ತವೆಂದು ಗ್ರಹಿಸಿದ ಪಕ್ಷದಲ್ಲಿ (ವಿಷಮಗತಿಯವೆಂದು ಹೇಳಲಾಗಿರುವ) ಶಾರ್ದೂಲವಿಕ್ರೀಡಿತಾದಿವೃತ್ತಗಳೂ ಲಯಾನ್ವಿತ-ವೆಂದಾಗುತ್ತವೆಯಲ್ಲವೇ? ನಮ್ಮ ದೇಶದ ಸಂಗೀತಸಂಪ್ರದಾಯದಲ್ಲಿ ಹತ್ತೊಂಬತ್ತು, ಮೂವತ್ತು ಇತ್ಯಾದಿಯಾಗಿ ನೂರಕ್ಕಿಂತಲೂ ಅಧಿಕಮಾತ್ರಾಸಂಖ್ಯೆಯ ಆವರ್ತದ 'ತಾಳ'ಗಳೂ ಇರುವುದರಿಂದ, ಶಾರ್ದೂಲಸ್ರಗ್ಧರಾದಿ ವೃತ್ತಗಳೂ ತಾಳಬದ್ಧ(=ಲಯಾನ್ವಿತ)ಗಳೆಂದೇ ಹೇಳುವುದು ಯುಕ್ತವಲ್ಲವೇ?" – ಈ ಆಕ್ಷೇಪಕ್ಕೆ 'ಸಮಾಧಾನ ಹೀಗೆ: ಅಂತಹ ದೀರ್ಘಾ-ವರ್ತದ ತಾಳಗಳು ಜನಸಾಮಾನ್ಯದ 'ಸಹಜಬುದ್ಧಿ'ಗೆ ನಿಲುಕುವಂಥವುಗಳಲ್ಲ. ಬಹಳಕಾಲ ಸಂಗೀತಾಭ್ಯಾಸಮಾಡಿದ ತಾಳವಿದ್ಯಾಪರಿಣತರಿಗೆ ಮಾತ್ರ ಅವುಗಳ ಬೋಧವಾಗುವುದು ಶಕ್ಯ. ಸಂಗೀತವಿದ್ಯೆಯನ್ನೇನೂ ಅಭ್ಯಾಸಮಾಡದಿದ್ದರೂ – ಎಲ್ಲರಲ್ಲಿಯೂ ಜನ್ಮಸಿದ್ಧವಾದೊಂದು ಲಯಗ್ರಹಣಶಕ್ತಿ ಇದ್ದೇ ಇರುತ್ತದೆಂಬುದರಲ್ಲಿ ಮತಭೇದವಿರಲಾರದು; ಏಕೆಂದರೆ, ಇದು ಪ್ರತ್ಯಕ್ಷಾವಗಮ, ಸರ್ವಸಂವೇದ್ಯ. ಆದರೆ ಈ ಸಹಜಶಕ್ತಿಯು (ಅಪ್ರಯತ್ನವಾಗಿ) ಗ್ರಹಿಸಬಲ್ಲ ಆವರ್ತಗಳ ಪರಿಮಾಣಕ್ಕೆ ಒಂದು ಮಿತಿ ಇದೆ. ಆ ಮಿತಿಯೊಳಗಿನ ಆವರ್ತಗಳನ್ನು ಮಾತ್ರ

ಅದು (ನಿರಾಯಾಸವಾಗಿ) ಗ್ರಹಿಸಬಲ್ಲುದು. ಈ ಮಿತಿ, ಹೆಚ್ಚೆಂದರೆ ಎಂಟು ಮಾತ್ರೆಗಳದಾಗಿದೆಯೆಂಬುದು ಪರೀಕ್ಷಿಸಿದರೆ ಖಚಿತವಾಗುತ್ತದೆ. ಸಂಗೀತವಿದ್ಯಾಭ್ಯಾಸವನ್ನು ಒಂದಿಷ್ಟೂ ಮಾಡದಿರುವ ನಮ್ಮ ಜನಸಾಮಾನ್ಯಕ್ಕೂ ದಾಸರ ಪದಗಳ "ಸಾಂಪ್ರದಾಯಿಕ ಹಾಡುಗಾರಿಕೆ"ಯ ತಾಳಲಯಗಳ ಅರಿವು ಸಹಜವಾಗಿಯೇ ಆಗುತ್ತಿರುವುದಕ್ಕೆ, ಅಲ್ಲಿ ಉನ್ಮೀಲಿಸುವ ಆವರ್ತಗಳೆಲ್ಲ ಸಾಮಾನ್ಯವಾಗಿ ಎಂಟು ಮಾತ್ರೆಗಳ ಮಿತಿಯನ್ನು ಮೀರ-ದಿರುವುದೇ ಮುಖ್ಯವಾದ ಕಾರಣವಾಗಿರುತ್ತದೆ, ಇದು ಲಯಾನ್ವಿತವಾದ ಛಂದೋಬಂಧ-ಗಳಿಗೂ ಅನ್ವಯಿಸುವ ತತ್ತ್ವವಾಗಿದೆ. 'ಪದ್ಯ'ವು 'ತಾಳಗಣಿತಪಂಡಿತ'ರ ಮನೋವಿನೋದ-ಕ್ಕಾಗಿ ಹುಟ್ಟಿದುದಲ್ಲ. ಕವಿರಾಜಮಾರ್ಗಕಾರನು ಹೇಳುವಂತೆ, ಪದ್ಯವು "ಸಮಸ್ತಜನತಾಹೃದ್ಯ"-(೧-೩೦)ವಾಗತಕ್ಕ ರಚನೆ. ಅದು ಸರ್ವಸಂವೇದ್ಯವಾದ ಗತಿಸೌಂದರ್ಯವುಳ್ಳ (ಅರ್ಥ-ಪ್ರಧಾನವಾದ) ಕಲಾಮಾಧ್ಯಮ. ಅದು ಗೇಯರೂಪವನ್ನೂ ಪಡೆಯಬಲ್ಲುದಾದರೂ, ಅದರ ಮುಖ್ಯಪ್ರಯೋಜನವು ಪಾಠ್ಯ (recitation). ಪಾಠ್ಯದಲ್ಲಿ ಅರ್ಥವೂ ಪ್ರಧಾನಲಕ್ಷ್ಯ. ಆದುದರಿಂದ ಪಾಠ್ಯೋಪಯುಕ್ತವಾದ 'ಪದ್ಯ'ಗಳಲ್ಲಿ ನಿರಾಯಾಸವಾಗಿ ಅವಗತವಾಗಬಲ್ಲ ಗತಿಪ್ರಕಾರಗಳಿಗೆ ಮಾತ್ರ ಔಚಿತ್ಯ. ವಸ್ತುಸ್ಥಿತಿಯ ಈ ವ್ಯಾಪ್ತಿಯನ್ನು ಮೀರುವಂತಹ ಆವರ್ತಪ್ರಕಾರಗಳ ಮೀಮಾಂಸೆ ಛಂದೋಗುಣಮೀಮಾಂಸೆಗೆ ಬಹಿರ್ಭೂತವಾದ ವಿಚಾರ. ಅಂಥವುಗಳೆಲ್ಲ ಸಂಗೀತವಿದ್ಯೆಗೆ ಮೀಸಲು. ಈ ಕಾರಣಗಳಿಂದ – ಯಾವುದೊಂದು ಛಂದೋಬಂಧದಲ್ಲಿ ಜನಸಾಧಾರಣದ ಸಹಜಬುದ್ಧಿಗೆ ಗಮ್ಯವಾಗಬಲ್ಲ (ಎಂಟು ಮಾತ್ರೆಗಳಿಗೆ ಮೀರದಿರುವ) ಆವರ್ತಗಳು ಉನ್ಮೀಲಿತವಾಗುತ್ತವೋ ಅಂತಹ ಛಂದೋಬಂಧಗಳನ್ನು ಮಾತ್ರ ಲಯಾನ್ವಿತವಾದ ಛಂದೋಬಂಧಗಳೆನ್ನಬೇಕೇ ವಿನಾ, ಆವರ್ತಗಳು ಆ ಮಿತಿಯನ್ನು ಮೀರಿದ ಮಾತ್ರಾಸಂಖ್ಯೆಯವಾಗಿದ್ದರೆ (ಅವು ಸಂಗೀತ ವಿದ್ಯಾಭ್ಯಾಸವಿಲ್ಲದವರ ಹೃದಯವನ್ನು ಸ್ಪರ್ಶಿಸಲಾರವಾದುದರಿಂದ) ಆ ಪದ್ಯಗಳನ್ನು ಲಯಾನ್ವಿತವಾದ ಛಂದೋಬಂಧಗಳೆಂದು ಸಾಧಿಸುವುದು ವ್ಯರ್ಥವೂ ವ್ಯಾವಹಾರಿಕ ದೃಷ್ಟಿಯಿಂದ ಅನುಚಿತವೂ ಆಗುತ್ತದೆ. [ಸಮವೃತ್ತದ ಪಾದಗಳು ಮಾತ್ರಾಸಂಖ್ಯೆಯಲ್ಲಿ ಪರಸ್ಪರ ಸಮಾನವಾಗಿರುವುದರಿಂದ, ಆ ಒಂದೊಂದು ಪಾದವನ್ನು ಒಂದೊಂದು ಆವರ್ತವೆಂದು ಭಾವಿಸಬೇಕೆಂಬ ವಾದವನ್ನು ಒಪ್ಪಿದರೆ, ಅದು ಅಷ್ಟಕ್ಕೇ ಕೊನೆಗೊಳ್ಳುವುದಿಲ್ಲ. ಅರ್ಧಸಮಛಂದೋಬಂಧಗಳ ಪೂರ್ವಾರ್ಧವೂ ಉತ್ತರಾ-ರ್ಧವೂ ಮಾತ್ರಾಸಂಖ್ಯೆಯಲ್ಲಿ ಪರಸ್ಪರ ಸಮಾನವಾಗಿರುವುದರಿಂದ, ಆ ಅರ್ಧಗಳನ್ನು ಆಗ ಆವರ್ತಗಳೆನ್ನಬೇಕಾಗುತ್ತದೆ. ಕೇವಲ ಅಕ್ಷರಸಂಖ್ಯಾನಿಯಮವುಳ್ಳ ಅನುಷ್ಟುಪ್ ಶ್ಲೋಕ ಮೊದಲಾದ ಕೆಲವೇ ಕೆಲವು ಅಕ್ಷರ ಜಾತಿಗಳನ್ನು ಬಿಟ್ಟು – ಉಳಿದ ಎಲ್ಲಾ ಪದ್ಯಗಳು ಮಾತ್ರಾಸಂಖ್ಯೆಯಲ್ಲಿ ಸ್ವವರ್ಗದ ಇತರ ಪದ್ಯಗಳಿಗೆ ಸಮಾನವೇ ಆಗಿರುವುದರಿಂದ, ಒಂದು ಪದ್ಯಸಮುದಾಯದಲ್ಲಿ ಒಂದೇ ವರ್ಗದ ಪದ್ಯಗಳಿರುವಲ್ಲೆಲ್ಲ – (ಉದಾ:– ಮೇಘದೂತ) ಆ ಒಂದೊಂದು ಪದ್ಯವನ್ನು ಒಂದು ಆವರ್ತವೆಂದೇ ಭಾವಿಸಬೇಕಾದ ಪ್ರಸಂಗವೂ ಬರುತ್ತದೆ. 'ಆವರ್ತ' ಎಂಬುದರ ಅರ್ಥವನ್ನು ಹೀಗೆ ವಿಸ್ತರಿಸಿದಾಗ, ಪದ್ಯವೆಂದರೂ ಆವರ್ತವೆಂದರೂ ಒಂದೇ ಎಂದಾಗುತ್ತದೆ! ಈ ವಿಚಾರಸರಣಿ ಉದ್ಬೋಧಕವಾದೊಂದು ತಥ್ಯವನ್ನು ಹೊಳೆಯಿಸಬಹುದಾದರೂ, ವ್ಯಾವಹಾರಿಕವಾದ ಯಾವ ಉಪಯುಕ್ತತೆಯೂ ಇದರಲ್ಲಿಲ್ಲ. ನಮ್ಮ ವ್ಯವಹಾರಗಳೆಲ್ಲವೂ ಮರ್ಯಾದಿತವಾದ ಒಂದು ಕ್ಷೇತ್ರವನ್ನು ಆಶ್ರಯಿಸಿರುತ್ತವೆ, ಇರ-ಬೇಕಾಗುತ್ತವೆ; ಹೊರತು, ತಾತ್ತ್ವಿಕವಾದ ಪೂರ್ಣತೆಯನ್ನಲ್ಲ. ಆದುದರಿಂದ ಛಂದೋ-ವ್ಯವಹಾರದಲ್ಲಿ ಗ್ರಾಹ್ಯವಾಗಬಹುದಾದ 'ಆವರ್ತ'ಕ್ಕೆ ಒಂದು ಪರಿಮಿತಿ ಇದ್ದರೆ ಮಾತ್ರ ಅದು

ಗುರುಲಘುಸ್ಥಿರವಾದ (ಸತಾನವೋ ವಿತಾನವೋ ಆದ) 'ವೃತ್ತ'ಗಳಾಗಿರಲಿ, ಅಥವಾ ಗುರುಲಘುಸ್ಥಿರವಲ್ಲದ ಮಾತ್ರಾಬಂಧಗಳಾಗಿರಲಿ – ಯಾವುದೊಂದು ಆವರ್ತಗತಿರೂಪವು ಇದ್ದೇ ಇರುತ್ತದೆ. ವಸ್ತುತಃ ಆ ಛಂದೋಬಂಧಗಳನ್ನು ಲಯಾನ್ವಿತವಾಗಿಸುವವುಗಳು ಆ ಬಂಧಗಳ ಗತಿಯಲ್ಲಿ ಗೋಚರಿಸುವ ಆವರ್ತ-ಗಳೇ ಆಗಿವೆ. ಆವರ್ತಗಳಿಲ್ಲದಿದ್ದರೆ ಲಯಪ್ರತೀತಿಯೂ ಇಲ್ಲ. 'ಆವರ್ತಗತಿ' ಎಂಬುದು ಆಬಾಲಗೋಪಾಲಸಂವೇದ್ಯವಾಗಿದ್ದು, 'ಅಕ್ಷರಗತಿ'ಗಿಂತ ಸ್ಥೂಲ ಅರ್ಥಾತ್ ಸ್ಫುಟತರವಾಗಿರುವುದರಿಂದ, ಲಯಾನ್ವಿತಬಂಧಗಳಲ್ಲಿ (ಬಹುಧಾ) ಅಕ್ಷರಗತಿರೂಪವಿಶೇಷಗಳು ಹಿನ್ನೆಲೆಗೆ ಸರಿಯುತ್ತವೆ; ಇದರಿಂದಾಗಿ ಅವು – ಮುಖ್ಯವಾಗಿ ಮಾತ್ರಾಬಂಧಗಳಲ್ಲಿ – ಪ್ರಾಯಶಃ (ಸ್ಥೂಲದೃಷ್ಟಿಗೆ) ಅಗೋಚರ-ಪ್ರಾಯವಾಗಿಬಿಡುತ್ತವೆ. ಆದರೆ 'ಸತಾನವೃತ್ತ'ಗಳಲ್ಲಿ ಹೀಗಾಗುವುದು ಅಪೂರ್ವ. ಅವುಗಳಲ್ಲಿ ಉಭಯಗತಿರೂಪಗಳು ಆಪಾತತಃ ಗೋಚರಿಸುತ್ತವೆ. ಅಲ್ಲದೆ – ಯಾವುದೊಂದು ಲಯಾನ್ವಿತಬಂಧದಲ್ಲಾದರೂ, ಕೇವಲ ಲಘುಮಯವಾದ (52–೧) ಅಥವಾ ಕೇವಲ ಗುರುಮಯವಾದ (52–೨) ಛಂದಃಖಂಡಗಳು ವ್ಯವಧಾನರಹಿತವಾಗಿ ಇರುವವಾದರೆ, – ಮತ್ತು 'ಜಗಣ' (u–u) ರೂಪವು ಆ ಛಂದೋಬಂಧದ ಒಂದು ಛಂದಃಖಂಡವಾಗಿ (52–೩) ಅಥವಾ ಯತಿ ನಿವೇಶನ ಪ್ರಕಾರದ ಪರಿಣಾಮವಾಗಿ (52–೪) ಆವಿರ್ಭವಿಸುವುದಾದರೆ (ಮಾತ್ರಾಬಂಧಗಳಲ್ಲಿಯೂ) ಆ ಅಕ್ಷರಗತಿರೂಪಗಳು ಸ್ಥೂಲದೃಷ್ಟಿಯನ್ನೂ ಅಲ್ಲಿ ಆಕರ್ಷಿಸದಿರುವುದಿಲ್ಲ. ಈ ವಿಶೇಷಗಳೆಲ್ಲ ಪಠನಕಾಲದಲ್ಲಿ ಮಾತ್ರ ಅನುಭವಕ್ಕೆ ಬರುವಂಥವುಗಳಾಗಿರುತ್ತವೆ.[52]

---

ಉಪಯುಕ್ತವಾಗಬಲ್ಲುದಾಗಿದೆ. ಛಂದೋಬಂಧ ಅರ್ಥಾತ್ ಪದ್ಯ ಎಂಬುದು ಜನತೆಯ 'ಸಾಮಾನ್ಯಬುದ್ಧಿ'ಗೆ ಆಕರ್ಷಕವಾಗಿ ಕಂಡುಬರುವಂತಹ ಗತಿಪ್ರಕಾರಗಳನ್ನು ಅವಲಂಬಿಸಿರುವ ಕಾರಣ. 'ಆವರ್ತ'ದ ಪರಿಮಿತಿಗೂ ಆ 'ಸಾಮಾನ್ಯಬುದ್ಧಿ'ಯೂ ಪ್ರಮಾಣವಾಗಿರ-ಬೇಕಾಗುತ್ತದೆ. ಆದುದರಿಂದ ಆ 'ಸಾಮಾನ್ಯಬುದ್ಧಿ'ಗೆ ಅಪ್ರಯತ್ನವಾಗಿ ಗೋಚರವಾಗಬಲ್ಲ ಪರಿಮಾಣಸಮತ್ವಕ್ಕೆ ಒಳಪಟ್ಟ ಆವರ್ತಗಳು ಮಾತ್ರ ಛಂದೋಗತಿವಿಚಾರದಲ್ಲಿ ಸ್ವೀಕಾರ್ಯ-ಗಳೆನ್ನಬೇಕಾಗುತ್ತದೆ. ಇದೂ ಅಲ್ಲದೆ ಒಂದು ಪಾದವನ್ನು ಒಂದು ಆವರ್ತವೆಂದು ಗ್ರಹಿಸಿದ ಪಕ್ಷದಲ್ಲಿ – ತದಂತರ್ಗತವಾದ ಆವರ್ತಗಳ ಮತ್ತು ಅವುಗಳಿಂದಾಗಿ ಉನ್ಮೀಲಿತವಾಗುವ ಗತಿಭೇದಗಳ ವಿವೇಚನೆಗೆ ಆಧಾರವೇ ಇಲ್ಲವಾಗುತ್ತದೆ; ತತ್ಪರಿಣಾಮವಾಗಿ (ಲಯಾನ್ವಿತ-ಬಂಧಗಳ ವಿಷಯದಲ್ಲಿ) 'ಛಂದೋಗತಿಮೀಮಾಂಸೆ' ಎಂಬ ಮಾತು ತನ್ನ ಅರ್ಥದ ಅಧಿಕಾಂಶವನ್ನು ಕಳೆದುಕೊಳ್ಳುತ್ತದೆ.]

52. ಈ ವಿಶೇಷಗಳ ಮನವರಿಕೆಗೆ ಈ ಕೆಳಗಿನ ಕೆಲವು ಉದಾಹರಣಗಳು ನೆರವಾಗಬಲ್ಲವು:

೧ ೨ ೩

(೧) ಉದ್ಧೃತ । ನಗ ನಗ । ಭಿದನುಜ ।

೪ ೫ ೬ ೭ ೮
ದನುಜಕು । ಲಾಮಿ । ತ್ರಮಿತ್ರ । ಶಶಿದ್ಯ । ಷ್ವೇ– ॥ (ಶ್ರೀಶಂಕರಾಚಾರ್ಯ)

ಇದು 'ಆರ್ಯಾ' ಎಂಬ 'ಮಧ್ಯಾವರ್ತಗತಿ'ಯ (ಎಂದರೆ ನಾಲ್ಕು ಮಾತ್ರೆಯ ಛಂದಃಖಂಡಗಳ) ಮಾತ್ರಾಬಂಧದ ಪೂರ್ವಾರ್ಧ. ಉದಾಹೃತ ಭಾಗದ ೨, ೩, ೪ನೆಯ ಛಂದಃಖಂಡಗಳು ಲಘುಮಯವಾಗಿರುವುದರಿಂದ, ಅಲ್ಲಿ ಆವರ್ತಬೋಧದೊಡನೆ ಅಕ್ಷರಗತಿಯ ದ್ರುತತ್ವವೂ ಆಪಾತತಃ ಗೋಚರಿಸುತ್ತದೆ.

೧ ೨
B ತನತನಗೆ ಕೊಡು । ಕೊಡು ಎನುತ ಮದ ।
೩ ೪
ಮುದಿತ ನೃಪಕಲ । ಭಗಳು ಕರವನು ।
೫ ೬ ೭ ೮
ತುಡುಕುತಿರಲಾ । ಗೀರ್ವನೋ ಸುತೆ । ನಿನ್ನ ಹೆತ್ತನ । ಗೆ– ॥ (ಕೃಷ್ಣಾಕುಮಾರಿ)

ಇದು 'ಭಾಮಿನೀ ಷಟ್ಪದಿ' ಎಂಬ 'ದ್ರುತಮಧ್ಯಾವರ್ತಗತಿ'ಯ (ಎಂದರೆ ೩+೪=೭ ಮಾತ್ರೆಯ ಛಂದಃಖಂಡಗಳ) ಮಾತ್ರಾಬಂಧದ ಅರ್ಧಭಾಗ. ಉದಾಹೃತ ಭಾಗದ ೧, ೨, ೩, ೪ನೆಯ ಛಂದಃಖಂಡಗಳು ಹಾಗೂ ಕಿಂಚಿನ್ನ್ಯೂನವಾಗಿ ಐದನೆಯ ಖಂಡವು ಸಹ ಲಘುಮಯವಾಗಿದ್ದು, ಆವರ್ತಬೋಧದೊಂದಿಗೆ ಅಲ್ಲಿ ಉನ್ಮೀಲಿಸುವ ಅಕ್ಷರಗತಿಯ ದ್ರುತತ್ವವೂ ಆಪಾತತಃ ಸುಸ್ಪಷ್ಟ.

೧ ೨ ೩
(೨) ಆರಾ । ರೇರರ್ । ಶಾಸ್ತ್ರ ।
೪ ೫ ೬ ೭ ೮
ಶ್ರೀರೋ । ಹಣಗಿರಿ । ಯನಲ್ಲಿ । ನವಕವಿ । ತಾ ಚಂ ॥
ತಾರ । ತ್ನಂ ದೊರೆ । ಗುಮೆ ಮಾ ।
ಗಾರಿಯ । ಕೃಪೆಯಿ । ಲ್ಲದಂಗೆ । ಧರಣೀ । ತಲದೊಳ್ ॥

(ರಾಜಶೇಖರವಿಳಾಸ)

ಇದು 'ಕಂದಪದ್ಯ' ಎಂಬ 'ಮಧ್ಯಾವರ್ತಗತಿ'ಯ ಮಾತ್ರಾಬಂಧ; ಇಲ್ಲಿ ಇದರ ಪೂರ್ವಾರ್ಧದ ೧, ೨, ೩, ೪ನೆಯ ಛಂದಃಖಂಡಗಳು ಗುರುಮಯವಾಗಿದ್ದು, ಆವರ್ತ–ಬೋಧದೊಡನೆಯೇ ಅಕ್ಷರಗತಿಯ ವಿಲಂಬಿತತ್ವವೂ ಅಷ್ಟೇ ಸ್ಫುಟವಾಗಿ ಅಲ್ಲಿ ಅರಿವಿಗೆ ಬರುತ್ತದೆ.

(೩) ಅಸುರಂ । ವಸುಧಾ । ತಳಮಂ ।
ರಸಾತ । ಳಕ್ಕು । ಯ್ಯೆ, ಹರಿತ । ರಲ್ಪೊ । ಕ್ಕವೊಲೀ ॥ (ಗದಾಯುದ್ಧ)

ಈ ಕಂದ ಪದ್ಯಾರ್ಧದ ನಾಲ್ಕನೆಯ ಛಂದಃಖಂಡದ ಅಕ್ಷರವಿನ್ಯಾಸವು ಜಗಣರೂಪವಾಗಿದ್ದು, ಆವರ್ತಬೋಧದೊಡನೆ ಆ ಅಕ್ಷರಗತಿಯ ರೂಪವಿಶೇಷವೂ ಅಲ್ಲಿ ಆಪಾತತಃ ಚಿಮ್ಮುತ್ತದೆ.

(೪) ತುರುಗಿ । ತುಂಬಿ । ಗುರುಳ । ಬಂಬ । ಲಿರೆ ಕ । ಪೋಲ । ರಂಗ । ದೊಳ್, ತು
ಳುಂಕೆ । ಪೊಂಗ । ರಂಗ । ದೊಳ್, ಮ । ಲಂಗೆ । ವಿಜಯ । ಮಂಗದೊಳ್ ॥

(ಲೀಲಾವತೀ)

{ಆವರ್ತಗಳಿಂದ ಉನ್ಮೀಲಿಸುವ ಗತಿಗಳ ವೈವಿಧ್ಯವಿವೇಚನೆ}

ಶಾರ್ಙ್ಗದೇವನು ನಿರೂಪಿಸಿರುವಂತೆ – ಅಕ್ಷರಗತಿಭೇದಗಳೊಳಗೆ ದ್ರುತ, ಮಧ್ಯ, ವಿಲಂಬಿತ ಎಂಬವು ಮೂರು ಮೂಲಭೇದಗಳು; ಉಳಿದ ಮೂರು ಎಂದರೆ ದ್ರುತ, ಮಧ್ಯ, ದ್ರುತವಿಲಂಬಿತ, ಮಧ್ಯವಿಲಂಬಿತ ಎಂಬವು ಮೂಲ ಗತಿಭೇದಗಳ ಸಂಯೋಗದಿಂದ ಉಂಟಾಗುವವುಗಳು. ಇಲ್ಲಿ ನಾನು ಪ್ರಸ್ತಾವಿಸಿದ ಆವರ್ತಗತಿಭೇದಗಳಲ್ಲಿಯೂ (ಈ ಹಿಂದೆ ನಿರೂಪಿಸಿದ) ದ್ರುತ, ಮಧ್ಯ, ವಿಲಂಬಿತ ಎಂಬವನ್ನು ಮೂರು ಮೂಲಭೇದಗಳನ್ನಾಗಿ ತಿಳಿಯಬಹುದಾಗಿದೆ. ಹಾಗೆ ತಿಳಿದಾಗ – ಆವರ್ತಗತಿಯ ಮೂರು ಮೂಲಭೇದಗಳಿಗೆ ಕಾರಣ ಭೂತಗಳಾದ ಛಂದಃಖಂಡಗಳ ಸಂಯೋಗದಿಂದ ಮತ್ತೆ ಮೂರು – ಎಂದರೆ ದ್ರುತಮಧ್ಯ, ದ್ರುತವಿಲಂಬಿತ, ಮಧ್ಯವಿಲಂಬಿತ ಎಂಬ ಆವರ್ತಗತಿಭೇದಗಳು

---

– ಇದು 'ಲಯೋತ್ತರ' ಎಂಬ ಹೆಸರಿನ ದ್ರುತಾವರ್ತಗತಿಯ ಪಂಚವಿಧ ಮಾತ್ರಾಬಂಧಗಳೊಳಗೆ ಎರಡನೆಯ ಪ್ರಕಾರವಾಗಿರುವ ಒಂದು ಪದ್ಯದ ಪ್ರಥಮಪಾದ. (ಜಯಕೀರ್ತಿಯ ಛಂದೋನುಶಾಸನದಲ್ಲಿ ಪಂಚವಿಧ ಲಯೋತ್ತರಗಳ ಲಕ್ಷಣನಿರೂಪಣೆ ಇದೆ – IV–೩೨) ಇದರ ಎರಡು ಸ್ಥಳಗಳಲ್ಲಿ ಆವರ್ತಪೂರ್ತಿಗೆ ಒಂದು ಮಾತ್ರೆ ಬೇಕಾಗಿರುವಾಗಲೇ 'ಯತಿ' ನಿವೇಶನವಿರುತ್ತದೆ. ಇದರ ಪರಿಣಾಮವಾಗಿ (ಪಠನಕಾಲದಲ್ಲಿ) ಆ ಸ್ಥಳಗಳಲ್ಲಿ ಜಗಣರೂಪಗಳು ಥಟ್ಟನೆ ನೆಗೆದುನಿಲ್ಲುವ ಚಮತ್ಕೃತಿ ಸರ್ವಸಂವೇದ್ಯ. ಈ ಪದ್ಯವು ಅತಿಸ್ಫುಟವಾದ ಆವರ್ತಗತಿಯದಾಗಿರುವುದಾದರೂ, ಆ ಎರಡು ಸ್ಥಾನಗಳಲ್ಲಿ ಅಕ್ಷರಗತಿಯ 'ಪ್ಲುತಿ'ಯು ಆವರ್ತಬೋಧಕ್ಕಿಂತಲೂ ಸ್ಫುಟತರವಾಗಿ ವೇದ್ಯವಾಗುತ್ತದೆ. [ಸತಾನವೃತ್ತಗಳಲ್ಲಿ ಉಭಯಗತಿರೂಪಗಳೂ ಏಕಕಾಲದಲ್ಲಿ ಸ್ಫುಟವಾಗುತ್ತವೆಂಬುದನ್ನು, ಇದೇ ಪರಿಚ್ಛೇದದ ಆದಿಭಾಗದಲ್ಲಿ ಉದಾಹರಿಸಿದ I – (೨), II – (೨), III – (೨)ನೇ ಪದ್ಯಗಳ, ಮತ್ತು ಹಿಂದೆ ಐದನೆಯ ಪರಿಚ್ಛೇದದಲ್ಲಿ ಉದಾಹೃತವಾದ ಸತಾನವೃತ್ತಗಳ ಪಠನದಿಂದ ಮನವರಿಕೆ ಮಾಡಿಕೊಳ್ಳಬಹುದು. 'ವಿತಾನ'ವಾದ ಕೆಲವು ಲಯಾನ್ವಿತವೃತ್ತಗಳಲ್ಲಿಯೂ ಉಭಯಗತಿರೂಪಗಳು ಆಪಾತತಃ ಪ್ರಕಟವಾಗುವುದನ್ನು 35ನೆಯ ಟಿಪ್ಪಣಿಯಲ್ಲಿ ಉದಾಹರಿಸಿದ ಮತ್ತಮಯೂರ, ಕ್ರೀಡಾವೃತ್ತಗಳನ್ನು ಪಠಿಸಿ ಗೊತ್ತುಮಾಡಿಕೊಳ್ಳಬಹುದು.] ಒಟ್ಟಿನಮೇಲೆ ಹೀಗೆ ಹೇಳಬಹುದಾಗಿದೆ: ಸಮಾನವಿನ್ಯಾಸದ ಅನೇಕ (=ಒಂದಕ್ಕಿಂತ ಹೆಚ್ಚು) ಛಂದಃಖಂಡಗಳು ಯಾವುದೊಂದು ಲಯಾನ್ವಿತಬಂಧದ (ಅದು ವೃತ್ತವಾಗಿರಲಿ ಅಥವಾ ಮಾತ್ರಾಬಂಧವಾಗಿರಲಿ) ಘಟಕಗಳಾಗಿ ಅವ್ಯವಧಾನತಃ ನಿವೇಶಿತವಾಗಿರುವಲ್ಲಿ – ಉಭಯಗತಿರೂಪಗಳೂ ಆಪಾತತಃ ಸ್ಫುಟವಾಗುತ್ತವೆ; ಹಾಗಿಲ್ಲದಿರುವಲ್ಲಿ ಆವರ್ತಗತಿಯು ಮಾತ್ರ ಆಪಾತತಃ ಉನ್ಮೀಲಿಸಿ, ಅಕ್ಷರಗತಿಯನ್ನು ಹಿನ್ನೆಲೆಗೆ ತಳ್ಳುತ್ತದೆ. ಆದರೆ 'ಪ್ಲುತಿ'ಯನ್ನುಂಟುಮಾಡುವ ಶಕ್ತಿಯುಳ್ಳ ಅಕ್ಷರವಿನ್ಯಾಸವಿರುವೆಡೆಗಳಲ್ಲಿ ಅಕ್ಷರಗತಿಸ್ವರೂಪವು ಆವರ್ತಗತಿಗಿಂತಲೂ ಬಲಶಾಲಿಯಾಗುತ್ತದೆ. [ವಿಷಮಗತಿಯ ಎಂದರೆ ನಿರಾವರ್ತವಾದ (=ಲಯರಹಿತ) ಛಂದೋಬಂಧಗಳಲ್ಲಾದರೆ – ಅಕ್ಷರಗತಿ ನಿರಾತಂಕವಾಗಿ ಪ್ರಕಟವಾಗಿ, ತನ್ನ ರೂಪಸಂಪತ್ತನ್ನು ಪೂರ್ಣವಾಗಿ ಪ್ರಕಾಶಪಡಿಸುತ್ತದೆ. ಪರೀಕ್ಷಾರ್ಥವಾಗಿ – ಶಿಖರಿಣೀ, ಮಂದಾಕ್ರಾಂತಾ, ಶಾಲಿನೀ ಇತ್ಯಾದಿ ಕೆಲವು ವೃತ್ತಗಳ ಅಕ್ಷರಗತಿಯ ಸೊಬಗನ್ನು ಪರಿಭಾವಿಸಬಹುದು.]

ಉಂಟಾಗುತ್ತವೆಂದು ಹೇಳುವುದು ಕ್ರಮಪ್ರಾಪ್ತವಾಗುವುದಾದರೂ, ವಸ್ತುಸ್ಥಿತಿ ಅಷ್ಟು ಸರಳವಾಗಿಲ್ಲ. ಇದಕ್ಕೆ ಕಾರಣವೇನೆಂದರೆ – ಆವರ್ತಗಳಿಂದ ಉನ್ಮೀಲಿಸುವ ಗತಿಯು ಅಕ್ಷರಗತಿಯಂತೆ (ಗುರು, ಲಘು ಎಂಬ) ಅಕ್ಷರಪರಿಮಾಣಾವಲಂಬಿ-ಯಾಗಿರದೆ, ಮಾತ್ರಾಪುಂಜಪರಿಮಾಣಾವಲಂಬಿಯಾಗಿರುವುದಾಗಿದೆ. ಆವರ್ತ ಗತಿಯ ದ್ರುತ, ಮಧ್ಯ, ವಿಲಂಬಿತ ಎಂಬ ಮೂಲಭೇದಗಳು ಅನುಕ್ರಮವಾಗಿ ೩,೪,೫ ಮಾತ್ರೆಗಳ ಪುಂಜಗಳಾದ ಛಂದಃಖಂಡಗಳ ಪುನರಾವರ್ತನಗಳಿಂದ (ಪ್ರತ್ಯಕ್ಷರಪರಿಮಾಣನಿರಪೇಕ್ಷವಾಗಿ) ಉನ್ಮೀಲಿಸುತ್ತವೆ. ಈ ಪುಂಜಗಳ ಪರಸ್ಪರ ಸಂಯೋಗದಿಂದ ೩+೪=೭, ೩+೫=೮, ೪+೫=೯ ಮಾತ್ರಾಸಂಖ್ಯೆಯ ತ್ರಿವಿಧ ಛಂದಃಖಂಡಗಳೇನೋ ರೂಪುಗೊಳ್ಳುವವಾದರೂ – ಇವುಗಳೊಳಗೆ ೪+೫=೯ ಮಾತ್ರೆಯ ಛಂದಃಖಂಡಗಳ ಆವರ್ತಗಳು, ಸಂಗೀತಶಿಕ್ಷಣವಿಲ್ಲದ 'ಸಹಜಬುದ್ಧಿ'ಗೆ ಅಗ್ರಾಹ್ಯವಾಗುವ ಕಾರಣ (ಟಿಪ್ಪಣಿ 51 ನೋಡಿರಿ) "ಶ್ರವ್ಯತ್ವ"ಕ್ಕೆ ಎಂದರೆ ಛಂದಃ-ಸೌಂದರ್ಯಕ್ಕೆ ಸಾಧಕವಲ್ಲವಾದುದುರಿಂದ ಛಂದೋಬಂಧಗತವಾದ ಆವರ್ತ-ಗತಿಭೇದಗಳೊಳಗೆ (ಮಧ್ಯವಿಲಂಬಿತವೆಂದು ಹೆಸರಿಸಬಹುದಾಗಿದ್ದ) ಈ ಗತಿ-ವಿಶೇಷಕ್ಕೆ ಸ್ಥಾನವೇ ಇಲ್ಲವಾಗಿದೆ.[53] ಇನ್ನು – 'ದ್ರುತವಿಲಂಬಿತ'ವೆಂಬ ಹೆಸರಿಗೆ

---

53. {ಆವರ್ತ ಮತ್ತು ಮಾತ್ರಾಗಣ ತಾತ್ತ್ವಿಕವಾಗಿ ಅಭಿನ್ನ} ಛಂದೋಗ್ರಂಥಗಳಲ್ಲಿ ಪ್ರೋಕ್ತವಾಗಿರುವ ಮಾತ್ರಾಗಣಗಳೆಂದರೆ, ಲಯಾನ್ವಿತಛಂದೋಬಂಧಗಳಲ್ಲಿ ಮೂಡಿಬರುವ ವಿಭಿನ್ನಪರಿಮಾಣದ ಆವರ್ತಗಳಲ್ಲಿ ಅಡಕವಾಗಿರುವ ಮಾತ್ರಾಪುಂಜಗಳಾಗಿವೆ. ಇವು ಕೇವಲ (ಯಥಾಕ್ಷರ)ಮಾತ್ರಾಸಂಖ್ಯಾನಿಯತವಾಗಿದ್ದು, ಗುರುಲಘುವಿನ್ಯಾಸವಿಷಯದಲ್ಲಿ ಐಚ್ಛಿಕ-ವಾಗಿಯೂ ಇರುವುದರಿಂದ – ಇವುಗಳ ಉಪಯೋಗವು ಛಂದಃಶಾಸ್ತ್ರದಲ್ಲಿ ಮಾತ್ರಾ ಬಂಧಗಳಿಗೆ ಸೀಮಿತವಾಗಿದೆ. ['ವೃತ್ತ'ಗಳು ಲಯಾನ್ವಿತವಾಗಿರುವಲ್ಲಿ (ಉದಾ: ಭುಜಂಗ ಪ್ರಯಾತ, ಮಲ್ಲಿಕಾಮಾಲೆ ಇತ್ಯಾದಿ) ಮಾತ್ರಾಗಣಗಳು ಉನ್ಮೀಲಿಸುವವಾದರೂ, ವೃತ್ತಗಳಿಗೆಲ್ಲ ಕಟ್ಟುನಿಟ್ಟಾಗಿ ಗುರುಲಘುಸ್ಥಿರತೆ ಇರಬೇಕಾಗಿರುವುದರಿಂದ, ವೃತ್ತಲಕ್ಷಣನಿರೂಪಣೆಗೆ ಮಾತ್ರಾಗಣನಿಯಮಗಳು ಅಪರ್ಯಾಪ್ತವಾಗುತ್ತವೆ; ಮತ್ತು ಅನಪೇಕ್ಷಿತವೂ ಆಗುತ್ತವೆ. ಹೀಗೆ, (ಲಯಾನ್ವಿತ) ವೃತ್ತಲಕ್ಷಣನಿರೂಪಣೆಯಲ್ಲಿ ಮಾತ್ರಾಗಣವಿಚಾರವು ವ್ಯರ್ಥವಾಗುವ ಕಾರಣ. ಅಲ್ಲಿ ಛಂದಃಶಾಸ್ತ್ರಕರ್ತರು ಅದರ ಗೊಡವೆಗೆ ಹೋಗಿರುವುದಿಲ್ಲ.] ಕನ್ನಡಮಾತ್ರಾಬಂಧಗಳಲ್ಲಿ ಕಂಡುಬರುವ ಮಾತ್ರಾಗಣಗಳು, ೩, ೪, ೫ ಮಾತ್ರೆಯವು ಮಾತ್ರ, ಸಂಸ್ಕೃತಛಂದಃ-ಶಾಸ್ತ್ರಗ್ರಂಥಗಳಲ್ಲಿ ನಾಲ್ಕು ಮಾತ್ರೆಯ ಗಣಗಳು ಮಾತ್ರ ಪ್ರೋಕ್ತವಾಗಿರುವುವಾದರೂ, ಪ್ರಾಕೃತಛಂದಃಶಾಸ್ತ್ರದಲ್ಲಿ ೨, ೩, ೪, ೫, ೬ ಮಾತ್ರೆಗಳಿಂದಾಗುವ ಐದು ಬಗೆಯ ಮಾತ್ರಾಗಣಗಳು ಪ್ರೋಕ್ತವಾಗಿದ್ದು, ತದನುಗುಣವಾಗಿ ಪ್ರಾಕೃತಮಾತ್ರಾಬಂಧಗಳ ಲಕ್ಷಣಗಳು ನಿರೂಪಿತವಾಗಿರುತ್ತವೆ. ಪಾರಸೀಛಂದಃಶಾಸ್ತ್ರೋಪಜೀವಿಯಾದ 'ಉರ್ದು' ಛಂದಃಶಾಸ್ತ್ರದಲ್ಲಿ ಏಳು ಮಾತ್ರೆಯವರೆಗೂ ಇರುವ ಗಣಗಳನ್ನು ಪದ್ಯಲಕ್ಷಣನಿರೂಪಣೆಗೆ ಬಳಸಲಾಗಿದೆ ಎಂಬುದು, ಆ ಛಂದೋವಿಧಾನದ 'ಅರಕಾನ' ಎಂಬ ಹೆಸರಿನ ಗಣವಾಚಕಗಳಿಂದ ಗೊತ್ತಾಗುತ್ತದೆ. (ಆ ಗಣಗಳು, ವಿಶಿಷ್ಟ ಛಂದೋವಿನ್ಯಾಸವನ್ನು ಸವಿಕಲ್ಪವಾಗಿ ಅಪೇಕ್ಷಿಸುವ ಮಾತ್ರಾಗಣಗಳಾಗಿರುತ್ತವೆ. ನಾನು ನೋಡಿದ ಹಿಂದೀಛಂದೋಗ್ರಂಥಗಳೊಳಗೆ ಉತ್ತಮವೂ

ಅರ್ಹವಾದ ಆವರ್ತಗತಿಯನ್ನುಂಟುಮಾಡಬಲ್ಲ ೩+೫=೮ ಮಾತ್ರೆಯ ಛಂದಃಖಂಡಗಳು (ಪದಾನುಗುಣವಾಗಿ) ೪+೪=೮ ಎಂದೂ ಆಗಿಬಿಡುವುದ-ರಿಂದ, ಆ (ಎಂಟು ಮಾತ್ರೆಯ) ಛಂದಃಖಂಡಗಳ ಪುನರಾವರ್ತನಗಳಿಂದ ಉನ್ಮೀಲಿತವಾಗುವ ಗತಿ (ಮಾತ್ರಾಬಂಧಗಳಲ್ಲಿ) ನಾಲ್ಕು ಮಾತ್ರೆಯ ಛಂದಃ-ಖಂಡಗಳ ಪುನರಾವರ್ತನತುಲ್ಯವಾಗಿಯೂ ಪರಿಣಮಿಸಿ, ಆ ಗತಿಗೆ ಅಲ್ಲಿ ದ್ರುತವಿಲಂಬಿತತ್ವವು ಉಳಿಯದೆ ಅದು ಆವರ್ತಗತಿಯ ಮೂಲಭೇದಗಳ-ಲ್ಲೊಂದಾದ ಮಧ್ಯಗತಿಯಂತೆ ಶ್ರವಣಗೋಚರವಾಗುತ್ತದೆ. ದ್ರುತವಿಲಂಬಿತ-ವೆನಿಸಬಲ್ಲ ಆವರ್ತಗತಿ ಛಂದೋಬಂಧಗಳಲ್ಲಿ ಉನ್ಮೀಲಿಸಬೇಕಾದರೆ, ಗುರು-ಲಘುವಿನ್ಯಾಸವಿಶೇಷದ ಅಥವಾ 'ಯತಿ'ಯ ಬೆಂಬಲ ಅವಶ್ಯವಾಗುತ್ತದೆ. ಈ ಕಾರಣಗಳಿಂದಾಗಿ, ಮಾತ್ರಾಬಂಧಗಳಲ್ಲಿ ದ್ರುತವಿಲಂಬಿತ ರೂಪದ ಆವರ್ತಗತಿಗೆ (ಸಾಮಾನ್ಯವಾಗಿ) ಸ್ಥಿರತೆಯಿರುವುದು ದುರ್ಲಭ. ಆದರೆ, ಗುರುಲಘುಸ್ಥಿರವಾದ ವೃತ್ತಗಳಲ್ಲಿ ಅದಕ್ಕೆ ಸ್ಥಿರರೂಪ ಬರುತ್ತದೆ.[54] ಇನ್ನುಳಿದ ಒಂದು ಭೇದವಾದ

---

ವಿಸ್ತೃತವೂ ಆದ 'ಛಂದಃಪ್ರಭಾಕರ'ದಲ್ಲಿ ಆ ಗಣಗಳ ಸ್ವರೂಪನಿರೂಪಣವೂ ಇದೆ.) ಹೀಗೆ ನಾನಾಭಾಷೆಗಳ ಛಂದೋಗ್ರಂಥಗಳ ಅವಲೋಕನದಿಂದ ಸಿದ್ಧವಾಗುವುದೇನೆಂದರೆ, (ಲಯಾ-ನ್ವಿತ ಛಂದೋಬಂಧಗಳ ಘಟಕಗಳಾಗಿರುವ) ಮಾತ್ರಾಗಣಗಳೊಳಗೆ ಯಾವುದೊಂದು ಗಣವೂ – ಹಿಂದೆ 51ನೆಯ ಟಿಪ್ಪಣಿಯಲ್ಲಿ ಪ್ರತಿಪಾದಿಸಿರುವಂತೆ – ಛಂದೋಬಂಧಗಳಲ್ಲಿ ಗ್ರಾಹ್ಯವಾಗುವ ಆವರ್ತಪರಿಮಾಣದ ಪರಮಾವಧಿಯನ್ನು ಸರ್ವಥಾ ಮೀರುವುದಿಲ್ಲ-ವೆಂಬುದಾಗಿದೆ. ಮಾತ್ರಾಗಣವೆಂದರೂ ಆವರ್ತವೆಂದರೂ ವ್ಯಾವಹಾರಿಕವಾಗಿ ಬೇರೆಬೇರೆ-ಯಾಗಿರುವವಾದರೂ, ತಾತ್ತ್ವಿಕವಾಗಿ ಅವು ಅಭಿನ್ನ.

54. ಉದಾಹರಣಾರ್ಥವಾಗಿ 'ರಥೋದ್ಧತಾವೃತ್ತ'. ಅದರ ಸ್ವರೂಪ ಹೀಗೆ:

```
        ೮          ೮
 – ∪  – ∪ ∪ ∪   – ∪   – ∪ –
ತ್ರಾಪಿ ತುರ್ನಯನ । ಜೇನ ವಾರಿಣಾ ।
        ೮          ೮
 – ∪  – ∪ ∪ ∪   – ∪   – ∪ –
ಕಿಂಚಿ ದುಕ್ಷಿತಶಿ । ಖಂಡ ಕಾವ್ರುಭೌ ।
 – ∪  – ∪ ∪ ∪   – ∪   – ∪ –
ಧನ್ವಿ ನೌತಮ್ಮೃಷಿ । ಮನ್ವ ಗಚ್ಛತಾಂ ।
 – ∪  – ∪ ∪ ∪   – ∪   – ∪ –
ಪೌರ ದೃಷ್ಟಿಕೃತ । ಮಾರ್ಗ ತೋರಣೌ ॥
```

(ರಘುವಂಶಮಹಾಕಾವ್ಯ)

ಮಾತ್ರಾಬಂಧಗಳಲ್ಲಿ ಈ ಗತಿಭೇದವು ಉನ್ಮೀಲಿಸಬೇಕಾದರೆ ಗುರುಲಘುವಿನ್ಯಾಸವಿಶೇಷದ ಅಥವಾ ಯತಿನಿವೇಶನಪ್ರಕಾರದ ನೆರವು ಅವಶ್ಯವೆಂಬುದನ್ನು ಈ ಕೆಳಗಿನ ಉದಾಹರಣವು ತಿಳಿಸಬಲ್ಲದು:

```
        ೮              ೮
 – ∪  – ∪ –     ∪ ∪ ∪  ∪ ∪ ∪ –
ನಂದ ನಂಗಳೊಳ್ । ಸುಟುವ ಬಿರಯಿಯಿಂ ।
```

ಅ ಅ

ಕಂಪು ಕಣ್ಮಲೆಯೆ । ಪೂತ ಸುರಯಿಯಿಂ ।
ಸುತ್ತ ಲುಂ ಪರಿವ । ಜರಿವೊ ನಲ್ಗಳಿಂ ।
ಎತ್ತ ಲುಂ ನಲಿವ । ಪೊಸನ ವಿಲ್ಗಳಿಂ ॥ (ಪಂಪಭಾರತ)

ಇದು ರಘಟಾ (=ರಗಳೆ) ವರ್ಗದ ಒಂದು ಮಾತ್ರಾಬಂಧ. ಉದಾಹೃತ ಭಾಗದಲ್ಲಿರುವ "ಸುಟಿುವ ಬಿರಯಿಯಿಂ" ಎಂಬ, ಮತ್ತು "ಪೂತ ಸುರಯಿಯಿಂ" ಎಂಬ ಎರಡು ಎಂಟು ಮಾತ್ರೆಯ ಸಂಯುಕ್ತ ಛಂದಃಖಂಡಗಳನ್ನು ಕೇವಲ ಛಂದೋದೃಷ್ಟಿಯಿಂದ, ಎಂದರೆ ಅರ್ಥನಿರಪೇಕ್ಷವಾಗಿ ವಿಭಜಿಸುವಲ್ಲಿ ದ್ವೈವಿಧ್ಯಕ್ಕೆ ಅವಕಾಶವಿದೆ: ಸುಟಿುವ + ಬಿರಯಿಯಿಂ (=೩+೫+೮) ಅಥವಾ, ಸುಟಿುವ ಬಿ+ರಯಿಯಿಂ (=೪+೪=೮); ಪೂತ + ಸುರಯಿಯಿಂ (೩+೫=೮) ಅಥವಾ, ಪೂತ ಸು+ರಯಿಯಿಂ (=೪+೪=೮); ಆದರೂ 'ಸುಟಿುವ' ಎಂಬ ಹಾಗೂ 'ಪೂತ' ಎಂಬ ಮೂರು ಮಾತ್ರೆಯ ಪದಗಳ ಕೊನೆಯಲ್ಲಿ 'ಯತಿ' ಇರುವ ಕಾರಣ, ಪದ್ಯಪಠನಕಾಲದಲ್ಲಿ – "ನಂದ + ನಂಗಳೊಳ್" ಎಂಬ ಪ್ರಕ್ರಮದಿಂದ ಪ್ರಾಪ್ತವಾಗುವ ದ್ರುತವಿಲಂಬಿತ ರೂಪದ ಆವರ್ತಗತಿಯೇ ಅಲ್ಲಿಯೂ ಉನ್ಮೀಲಿಸುತ್ತದೆ ಹೊರತು, ಮಧ್ಯಾವರ್ತಗತಿ ಅಲ್ಲ. ಉದಾಹೃತಭಾಗದ ಉಳಿದ ಛಂದಃಖಂಡಗಳೆಲ್ಲ ೩+೫=೮ ಮಾತ್ರೆಯವುಗಳಾಗಿವೆ; ಅವುಗಳ ೪ನೆಯ ಮತ್ತು ೫ನೆಯ ಮಾತ್ರಾಸ್ಥಾನಗಳನ್ನು ಅಲ್ಲಿರುವ ಗುರ್ವಕ್ಷರವು ಒಂದಾಗಿಸಿಬಿಟ್ಟಿರುವುದರಿಂದ, ಆ ಖಂಡಗಳ ವಿಭಜನೆಯಲ್ಲಿ ಪೂರ್ವೋಕ್ತ ದ್ವೈವಿಧ್ಯಕ್ಕೆ ಅವಕಾಶವಿಲ್ಲ. ಈ ಪದ್ಯವು ಅಕ್ಷರಸ್ವರೂಪನಿರ್ಬಂಧವಿಲ್ಲದ (ಎಂದರೆ ಗುರುಲಘುಸ್ಥಿರವಾಗಿರಬೇಕಾಗಿಲ್ಲದ) ಮಾತ್ರಾಬಂಧವಾಗಿರುವುದಾದರೂ, ಈ ಗತಿವಿಶೇಷದ ಉನ್ಮೀಲನಕ್ಕಾಗಿ ಇದರ ಪ್ರತಿಯೊಂದು ಛಂದಃಖಂಡವೂ ೩+೫=೮ ಎಂದಾಗುವಂತೆ ರಚಿತವಾಗಿರುವುದು ಇಲ್ಲಿ ಲಕ್ಷಿಸತಕ್ಕ ವಿಷಯವಾಗಿದೆ. ಈ ಶತಮಾನದಲ್ಲಿ ರಚಿತವಾಗಿರುವ ಕನ್ನಡಮಾತ್ರಾಬಂಧಗಳಲ್ಲಿ, ಮತ್ತು ಯಥಾಕ್ಷರ ಮಾತ್ರಾನಿಯಮವನ್ನು ಪರಿಪಾಲಿಸಿ ರಚಿತವಾದ ಹಳೆಯ 'ಪದ'ಗಳಲ್ಲಿ, ಈ ಗತಿಯನ್ನು ಉನ್ಮೀಲಿಸುವವುಗಳು ಇರುವವಾದರೂ– ಎಷ್ಟೋ ವೇಳೆ ಅವುಗಳಲ್ಲಿ ಕೇವಲ ದ್ರುತವಿಲಂಬಿತರೂಪದ ಗತಿ ಕಂಡುಬಾರದೆ, ಎಡೆಯೆಡೆಯಲ್ಲಿ ಮಧ್ಯಗತಿ (= ೪+೪ = ೮) ಉನ್ಮೀಲಿಸುವುದುಂಟು. ಮತ್ತು ಮಧ್ಯಗತಿಯಲ್ಲಿ ತೊಡಗಿದ ಪದ್ಯದಲ್ಲಿ ದ್ರುತವಿಲಂಬಿತ ಗತಿ ತಲೆಯೆತ್ತುವುದೂ ಉಂಟು. [ಇಂತಹ ಗತಿ ಸಾಂಕರ್ಯವು ಒಂದು 'ದೋಷ'ವೆಂದೇನೂ ನನ್ನ ಮತವಲ್ಲ. ಗತಿಯ ಏಕರೂಪತೆ– (monotony)ಯಿಂದಾಗಿ ಒಮ್ಮೊಮ್ಮೆ ಉಂಟಾಗಬಹುದಾದ 'ಅರೋಚಕ'ವನ್ನು ಈ ಗತಿಸಾಂಕರ್ಯವು ಪರಿಹರಿಸಿ ಅಲ್ಲೊಂದು ಆಕರ್ಷಕತ್ವವನ್ನು ಹುಟ್ಟಿಸುವುದರಿಂದ, ಎಷ್ಟೋ ವೇಳೆ ಅದು (ಹಿಂದೆ ಈ ನಿಬಂಧದಲ್ಲಿ ಗತಿನಿರೂಪಣೆ ಮಾಡಲಾದ ಉದ್ಗತಾವೃತ್ತದಲ್ಲಿ ಹೇಗೋ ಹಾಗೆ) ಒಂದು 'ಗುಣ'ವೇ ಆಗಿ ಪರಿಣಮಿಸುತ್ತದೆ.]

ಉದಾ:

ಮನಸು + ಮೆಚ್ಚೆ ಮಾ । ಡುವುದೆ + ಧರ್ಮ ಧಾ । ರ್ಮಿಕನು + ಧೈರ್ಯಶಾ । ಲಿ– ॥
ಜನಕೆ + ಬೆಚ್ಚಿ ಮನ । ಮುಚ್ಚಿರೆ + ಬೇಲಿಯ । ಹೊಲದಿ + ಮೇವ ಗೂ । ಳಿ– ॥
(ತರುಣಧಮನಿ)

ಈ ಪದ್ಯದ ಉತ್ತರಾರ್ಧದ "ಮುಚ್ಚಿರೆ + ಬೇಲಿಯ" ಎಂಬ ಸಂಯುಕ್ತಛಂದಃಖಂಡವು ೪ +೪ = ಎಂಟು ಮಾತ್ರೆಯದು; ಉಳಿದವುಗಳು ೩ + ೫ = ೮ ಮಾತ್ರೆಯವು. (ಪದ್ಯಾರ್ಧಗಳ ಕೊನೆಯ ಛಂದಃಖಂಡವು ಅಪೂರ್ಣವಾಗಿರುವುದು ವಿರಾಮಕ್ಕಾಗಿ.)

(b) ಆದಿಯ + ಮಾನವ । ರೀ ಧಾ + ತ್ರಿಯಲ್ಲಿ । ಮಾನವ + ಧಾತ್ರಿಯ ।
ಕಂಡಿರೆ– ।
ಆರ್ಯ + ರಾರೊ ಅ । ಲ್ಲದವ + ರಾರೊ ಒಡ । ಗೂಡಿ + ಒಂದೆ ಹಾ ।
ಉಂಡಿರೆ ।
ತಾಮ್ರ + ತವರಗಳು । ಕರಗಿ + ಕೂಡಿ ಘನ । ಘಂಟೆ + ಯಾಗಿ ಢಾ ।
ಣಿಸುತಿರೆ –।
ತಾಮ್ರ + ವೆಲ್ಲಿ ತಾಂ । ತವರ + ವೆಲ್ಲಿ ಬರಿ । ಗನಸು + ಗಾವರವ ।
ಮಾಣು ರೇ– ॥ . ॥ (ಚಂದ್ರಖಂಡ)

ಈ ಪದ್ಯದ ಮೊದಲನೆಯ ಪಾದವು ಮಧ್ಯಾವರ್ತಗತಿಯನ್ನೂ, ಉಳಿದ ಮೂರು ಪಾದಗಳು ದ್ರುತವಿಲಂಬಿತಾವರ್ತಗತಿಯನ್ನೂ ಪ್ರಕಟಿಸುವುದು ಸುಸ್ಪಷ್ಟ. (ಇದರ ಪ್ರತಿಯೊಂದು ಪಾದದ ಕೊನೆಯ ಛಂದಃಖಂಡವು ವಿರಾಮಾವಕಾಶಕ್ಕಾಗಿ ಅಪೂರ್ಣಖಂಡವಾಗಿರುತ್ತದೆ.)

(ಇ+ ೫ = ೮) (೪ +
(C) ಚೆಂಬ + ನಿಟ್ಟು ಶಿರ । ದಿ–
೪ = ೮)
ಕುಣಿವನ ।
(೩+೫ = ೮) (೮)
ಹಂಬ + ಲಂತೆ ನಿಜ । ದಿ––– ॥
(೩ + ೫ = ೮) (೪ + ೪ = ೮)
ನಂಬಿ + ಸರ್ವದಾ । ಶಂಭುವಿ + ನಂಘ್ರಿಯ ।
(೪ + ೪ = ೮) (೪ + ೪ = ೮)
ಡಂಬವ + ಗೆಯ್ಯದೆ । ಹಂಬಲಿ + ಸುತ್ತಿಹ ॥
(೩ + ೫ = ೮) (೪+
ಸದಾ + ನಂದ ವಿರ । ಲಿ– ।
+ ೪ = ೮)
ಮನವಿದು ।
(೩ + ೫ = ೮) ( ೮)
ಸದಾ + ಶಿವನೊಳಿರ । ಲಿ––– ॥ (ಒಂದು ಹಳೆಯ ಪದ)

ಉದಾಹೃತ ಭಾಗದಲ್ಲಿ ಕಂಡುಬರುವ 'ಕುಣಿವನ' ಮತ್ತು 'ಮನವಿದು' ಎಂಬ ಖಂಡಾ–ರ್ಧಗಳು (ಕೆಲವು 'ಪದ'ಗಳ ವೈಶಿಷ್ಟ್ಯವಾದ) "ವರಣ"ಗಳು. ವರಣವು ಛಂದೋಗಣನೆ–ಯಂತೆ ಪೂರ್ವಪಾದಾಂತ್ಯಭಾಗವೇ ಆದರೂ, ವರಣಕ್ಕಿಂತ ಹಿಂದಣ ಪೂರ್ವಪಾದಾಂಶಕ್ಕೆ

ಉತ್ತರಪಾದವನ್ನು ನಿರವಕಾಶವಾಗಿ ಒಂದುಗೂಡಿಸುವ ಸಾಧನವು ಅದಾಗಿರುವುದರಿಂದ (ವರಣ=ಸೇತು bridge), ಅದಕ್ಕೆ ಸ್ವತಂತ್ರವಾದೊಂದು ಅಸ್ತಿತ್ವವೂ ಉಂಟು. ವರಣವಿರುವ ಪಾದದಲ್ಲಿ, ವರಣಕ್ಕಿಂತ ಮೊದಲು ವಿರಾಮಾವಕಾಶವಿದ್ದೇ ಇರುತ್ತದೆ; (ವರಣವಿಲ್ಲದ) ವರಣೋತ್ತರಪಾದದಲ್ಲಿ ವಿರಾಮಾವಕಾಶವು ವರಣಯುಕ್ತ ಪಾದದಲ್ಲಿರುವುದಕ್ಕಿಂತ ಅಧಿಕ-ತರವಾಗಿರುತ್ತದೆ. (ಇದು ಈ ಬಗೆಯ 'ಪದ'ಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಲಕ್ಷಣ.) ಉದಾಹೃತ ಭಾಗವನ್ನು ಪರಾಮರ್ಶಿಸಿದರೆ ಇದು ವಿಶದವಾಗದಿರದು. [{ಗಣಗಳ ಸಂಧಾನದ **ಪರಿಣಾಮ**} ಹೀಗೆ – ಎಂಟು ಮಾತ್ರೆಯ ಆವರ್ತದ ಛಂದೋಬಂಧಗಳಲ್ಲಿ ಉನ್ಮೀಲಿಸುವ ಈ ಗತಿವಿಶೇಷಕ್ಕೆ ವ್ಯಾಪಕವಾದ ಸ್ಥಿರತೆ ಇಲ್ಲದೆ, ಅದೊಂದು ಮಿಶ್ರಗತಿಯಾಗಿರುವುದೇ ಅಧಿಕವಾಗಿರುತ್ತದೆ. ಅಷ್ಟು ಮಾತ್ರವಲ್ಲ, ಅದಕ್ಕೆ ಸ್ಥಿರರೂಪವಿರುವಲ್ಲಿಯೂ ಆ ಛಂದಃ-ಖಂಡಗಳು ೩ + ೫ = ೮ ಎಂದೇ ಸರ್ವತ್ರ ಸಾಧಿಸುವುದಕ್ಕಾಗುವುದೂ ಇಲ್ಲ. ಏಕೆಂದರೆ, ಹಲವೆಡೆಗಳಲ್ಲಿ ಅದು (ಯತಿನಿವೇಶನಪ್ರಕಾರದ ಫಲವಾಗಿ) ೫ + ೩ = ೮ ಎಂದೇ ಕಂಡುಬರುವಹಾಗಿರುತ್ತದೆ. ಹಿಂದೆ ಉದ್ಧರಿಸಿದ ರಥೋದ್ಧತಾವೃತ್ತದಲ್ಲಿಯೂ ಪಂಪ ಭಾರತದಿಂದ ಉದ್ಧರಿಸಿದ ರಗಳೆಯಲ್ಲಿಯೂ ಕೆಲವು ಛಂದಃಖಂಡಗಳು ಇಂತಹವಾಗಿವೆ.

೩ + ೫<br>
(ಉದಾ: 'ತೌಪಿ + ತುರ್ನಯನ' ಎಂದು ಗಣವಿಭಾಗ ಮಾಡುವುದಕ್ಕಿಂತ<br>
೫ + ೩ ೩ + ೫<br>
'ತೌಪಿತು + ರ್ನಯನ' ಎಂದೂ 'ಧನ್ವಿ + ನೌ ತಮ್ಮೃಷಿ' ಎಂದು ವಿಭಾಗಿಸುವುದಕ್ಕಿಂತ<br>
೫ + ೩ ೩ + ೫<br>
'ಧನ್ವಿನೌ + ತಮ್ಮೃಷಿ' ಎಂದೂ, 'ಸುತ್ತ + ಲುಂ ಪರಿವ' ಎಂಬುದಕ್ಕಿಂತ<br>
೫ + ೩ ೩ + ೫<br>
'ಸುತ್ತಲುಂ + ಪರಿವ' ಎಂದೂ, ಎತ್ತ + ಲುಂ ನಲಿವ' ಎಂಬುದಕ್ಕಿಂತ<br>
೫ ೩<br>
'ಎತ್ತಲುಂ + ನಲಿವ' ಎಂದೂ ವಿಭಜಿಸುವುದು ಉಚಿತತರವಾಗಿ ಕಾಣುತ್ತದೆ.) ಇದೂ ಅಲ್ಲದೆ, ಈ ಗತಿಯ ಉತ್ಪತ್ತಿಯ ವಿಷಯದಲ್ಲಿ ಲಕ್ಷಿಸತಕ್ಕ ಮುಖ್ಯತಮವಾದ ತಥ್ಯವೊಂದಿದೆ. ಅದೇನೆಂದರೆ – ಎಂಟು ಮಾತ್ರೆಯ ಛಂದಃಖಂಡವು ೩ + ೫ ಎಂದಾಗಲಿ ೫ + ೩ ಎಂದಾಗಲಿ, ಯತಿಯ ನೆರವಿಲ್ಲದೆ ವಿಭಕ್ತವಾಗಬೇಕಾದರೆ – ಆ ಛಂದಃಖಂಡದ ನಾಲ್ಕನೆಯ ಮತ್ತು ಐದನೆಯ ಮಾತ್ರಾಸ್ಥಾನಗಳನ್ನು ಒಂದು ಗುರ್ವಕ್ಷರವು ಆಕ್ರಮಿಸಿಕೊಳ್ಳಲೇ-ಬೇಕಾಗುತ್ತದೆ. ಇಲ್ಲದಿದ್ದರೆ, ಅದು ೪ + ೪ ಎಂದೇ ವಿಭಕ್ತವಾಗುತ್ತದೆ. ಈ ತಥ್ಯವನ್ನು ಪರಿಭಾವಿಸಿದಾಗ – ಪ್ರಸ್ತುತವಾದ ಗತಿಭೇದವು ಉನ್ಮೀಲಿಸುವುದು ೩ + ೫ ಮಾತ್ರೆಯ ಗಣಗಳ ಸಂಯೋಗದಿಂದಲೂ ಅಲ್ಲ. ೫ + ೩ ಮಾತ್ರೆಯ ಗಣಗಳ ಸಂಯೋಗದಿಂದಲೂ ಅಲ್ಲ, – ಬದಲಾಗಿ, ನಾಲ್ಕು ಮಾತ್ರೆಯ ಗಣಗಳೆರಡರ 'ಸಂಧಾನ'(=ಬೆಸುಗೆ)ದಿಂದ – ಎಂಬುದು ಗೊತ್ತಾಗುತ್ತದೆ. ಇದರ ಉತ್ಪತ್ತಿ ಈ ಬಗೆಯದಾಗಿರುವುದರಿಂದಲೇ ದ್ರುತವಿಲಂ-ಬಿತಗತಿಕಾರಕವಾದ ಆವರ್ತಗಳೊಂದಿಗೆ (ಮಧ್ಯಾವರ್ತಗತಿಕಾರಕವಾದ) ಚತುಷ್ಕಲ (=ನಾಲ್ಕು ಮಾತ್ರೆಯ) ಗಣದ್ವಂದ್ವಘಟಿತವಾದ ಆವರ್ತಗಳು ಸೇರಿಕೊಂಡಾಗಲೂ ಪದ್ಯದ ಧಾಟಿ (=ಗತಿ)ಗೆ ದೊಡ್ಡ ಆಘಾತವೇನೂ ಆದಂತೆ ಭಾಸವಾಗದಿರುವುದಾಗಿದೆ. ಈ ಕಾರಣಗಳಿಂದ – ಪ್ರಸ್ತುತವಾದ ಈ ಗತಿಭೇದವನ್ನು 'ದ್ರುತವಿಲಂಬಿತಾವರ್ತಗತಿ' ಎನ್ನುವುದರ ಬದಲಾಗಿ – "ಸಂಕಲಿತಮಧ್ಯಾವರ್ತಗತಿ" ಎಂದು ಹೆಸರಿಸುವುದೇ ಮೇಲು. ಸಂಕಲಿತ = blended.]

೩+೪=೭ ಮಾತ್ರೆಯ ಛಂದಃಖಂಡದ ಪುನರಾವರ್ತನಗಳಿಂದ ಉತ್ಪನ್ನವಾಗುವ 'ದ್ರುತಮಧ್ಯ'ವೆಂಬ ಹೆಸರಿಗೆ ತಕ್ಕುದಾದ ಆವರ್ತಗತಿಯಾದರೆ, ವೃತ್ತ ಹಾಗೂ ಮಾತ್ರಾಬಂಧ ಎಂಬ ದ್ವಿವಿಧ ಛಂದೋಬಂಧಗಳಲ್ಲಿಯೂ ಯತಿನಿರಪೇಕ್ಷವಾಗಿ ಸುಸ್ಥಿರವಾಗಿರುವುದು ಕಂಡು ಬರುತ್ತದೆ. ಉದಾ:

(a) ನೀರ + ಜೋತ್ಪಲ । ವರ್ಣ + ನಾಡಿದ । ನಾಡಿ + ದಂಕಮ । ಲೇಕ್ಷ + ಣಂ– ॥[55] (ಜಗನ್ನಾಥವಿಜಯ)

(ಇದು 'ಮಲ್ಲಿಕಾಮಾಲೆ' ಎಂಬ ಸಮವೃತ್ತದ ಒಂದು ಪಾದ.)

---

55. {ಅಕ್ಷರವೃತ್ತವು ಲಯಾನ್ವಿತವಾಗಿರುವ ಕಾರಣಮಾತ್ರದಿಂದ ಮಾತ್ರಾಬಂಧವಾಗದು} ಮೈಸೂರು ವಿ. ವಿ. ನಿಲಯದಿಂದ ಪ್ರಕಾಶಿತವಾದ 'ಕನ್ನಡ ಕೈಪಿಡಿ'ಯ ತೃತೀಯ ಮುದ್ರಣ(೧೯೫೫)ದ 111ನೆಯ ಪುಟದಲ್ಲಿ ಹೀಗಿದೆ: "ಅಕ್ಷರವೃತ್ತಗಳೆಂದು ಲಕ್ಷಣ ಹೇಳುವ ವೃತ್ತಗಳಲ್ಲಿ ಇನ್ನೊಂದು ವಿಶೇಷವುಂಟು : ಕೆಲವು, ಮಾತ್ರಾವೃತ್ತಗಳಾಗಿ ಪರಿಣಮಿಸಿರುವುವು: ಉದಾ: ಮಲ್ಲಿಕಾಮಾಲೆ:

೩ ೪ ೩ ೪ ೩ ೪ ೩ ೨
"ನೀರ । ಜೋತ್ಪಲ । ವರ್ಣ । ನಾಡಿದ । ನಾಡಿ । ದಂ ಕಮ । ಲೇಕ್ಷ । ಣಂ"

(ಇದಲ್ಲದೆ, ತರಳವೃತ್ತ ಹಾಗೂ ಕ್ರೌಂಚಪದ ಮತ್ತು ಶಂಭುನಟನವೃತ್ತಗಳನ್ನು ಮೇಲಿನ ಮಾತಿಗೆ ಆಧಾರವೆಂದು ಉದಾಹರಿಸಲಾಗಿದೆ.)

ಹೀಗೊಂದು ಹೊಸ ಅಭಿಪ್ರಾಯವನ್ನು ಪ್ರಕಟಿಸುವ ಸಂದರ್ಭದಲ್ಲಿ, ಈ ಗ್ರಂಥಕಾರರು ತಮ್ಮ ಮತದಂತೆ, 'ಅಕ್ಷರವೃತ್ತ'ವೆಂದರೆ ಎಂತಹದು? ಅದರ ಲಕ್ಷಣವಿಶೇಷವೇನು? ಮತ್ತು 'ಮಾತ್ರಾವೃತ್ತ'(=ಮಾತ್ರಾಬಂಧ)ವೆಂದರೆ ಎಂತಹದು? ಅದರ ಲಕ್ಷಣವಿಶೇಷವೇನು? – ಎಂಬುದನ್ನು ಅಲ್ಲಿ ವಿವರಿಸಿಲ್ಲ, ಸೂಚಿಸಲೂ ಇಲ್ಲ. ಆದರೆ ಅವರ ನಿರೂಪಣೆಯ ಫಲಿತಾಂಶ ಹೀಗಾಗುತ್ತದೆ: ಅಕ್ಷರವೃತ್ತವೆಂದರೆ ವಿಷಮಗತಿಯ, ಎಂದರೆ ಲಯಾನ್ವಿತವಲ್ಲದ, ಛಂದೋಬಂಧ. – ಇದು ಬೇರೆಲ್ಲಿಯೂ ನಮಗೆ ಕಂಡು ಬರಲಾರದೊಂದು ವಿನೂತನವಾದ ಅಭಿಪ್ರಾಯ ! ಇಂತಹ ಅಸಂಗತವಾದ ಭಾವನೆ ಅಂತಹ ವಿದ್ವಾಂಸರಲ್ಲಿಯೂ ಮೂಡಿರುವುದಕ್ಕೆ ಕಾರಣವೇನಿದ್ದಿರಬಹುದೆಂದು ವಿಚಾರಿಸುತ್ತಾ ಹೋದರೆ – ಅಕ್ಷರವೃತ್ತಗಳಿಗೆ ಮಾತೃಭೂತವಾಗಿದ್ದು ಲಯರಹಿತವಾಗಿರುವ ವೈದಿಕಬಂಧಗಳನ್ನು ನಿರ್ಮಿಸಿದ ಪುರಾತನರಿಗೆ ಲಯಪ್ರಜ್ಞೆ (= ತಾಳಜ್ಞಾನ) ಇದ್ದಿಲ್ಲವೆಂಬ, ಹಾಗೂ ಅದು ಮತ್ತೆ ಮೆಲ್ಲನೆ ಉದಯಿಸಿತೆಂಬ ಒಂದು ಆಧುನಿಕ ವಿದ್ವದ್ಭ್ರಾಂತಿಯೇ ಪ್ರಸ್ತುತವಾದ ವಿಚಿತ್ರಾಭಿಪ್ರಾಯಕ್ಕೆ ಮೂಲಹೇತುವೆಂಬುದು ಹೊಳೆಯದಿರದು. ಮತ್ತು, ಪಿಂಗಳನು ಲಕ್ಷಣನಿರೂಪಣೆ ಮಾಡಿರುವ "ವೃತ್ತ"(= ಗುರುಲಘುಸ್ಥಿರವಾದ ಅಕ್ಷರಬಂಧ)ಗಳೊಳಗೆ ಸಮಗತಿ (= ಲಯಾನ್ವಿತ = ಸತಾಲ) ಬಂಧಗಳೇ ಅತ್ಯಧಿಕವೆಂಬ, ಹಾಗೂ ವಿಷಮಗತಿ (= ಲಯರಹಿತ = ವಿತಾಲ) ಬಂಧಗಳ ಸಂಖ್ಯೆ ಬಹಳ ಕಡಮೆ ಎಂಬ ತಥ್ಯವನ್ನು ಅವರು ಕಾಣದಿದ್ದುದೂ ಆ ವಿಚಿತ್ರಾಭಿಪ್ರಾಯವನ್ನು ಪುಷ್ಟೀಕರಿಸಿತೆಂಬುದು ಗೊತ್ತಾಗದಿರದು. ಆದರೆ ಲಯಾನ್ವಿತವೆಂಬ ಕಾರಣದಿಂದ, ಗುರುಲಘುಸ್ಥಿರವಾದ 'ವೃತ್ತ'ವು ಸರ್ವಥಾ ಮಾತ್ರಾಬಂಧವೆಂದಾಗುವುದಿಲ್ಲ; ಹಾಗಾಗುತ್ತದೆಂದು ಯಾರೇ ಹೇಳಲಿ, ಆ ಮಾತಿಗೆ ಅರ್ಥವೂ ಇಲ್ಲ. [ಈ ಮೇಲೆ 'ಕನ್ನಡ ಕೈಪಿಡಿ'ಯಿಂದ ಉದ್ಧರಿಸಿದ ಅವತರಣಿಕೆಯಲ್ಲಿ ಅನುದ್ದಿಷ್ಟವಾದ ಒಂದು ತಥ್ಯಾಂಶವೂ

(b) ಶ್ರೀವ + ನಿತೆಯರ । ಸನೆ ವಿ + ಮಲರಾ ।
ಜೀವ + ಪೀಠನ । ಪಿತನೆ + ಜಗಕತಿ
ಪಾವ + ನನೆ ಸನ । ಕಾದಿ + ಸಜ್ಜನ । ನಿಕರ + ದಾತಾ । ರ– ॥

(ಗದುಗಿನ ಭಾರತ)

(ಇದು 'ಭಾಮಿನಿ ಷಟ್ಪದಿ' ಎಂಬ ಸುಪ್ರಸಿದ್ಧವಾದ ಮಾತ್ರಾಬಂಧದ ಅರ್ಧ.)

ಈ ಹಿಂದೆ 54ನೆಯ ಟಿಪ್ಪಣಿಯಲ್ಲಿ ಉದಾಹರಿಸಿದ ರಥೋದ್ಧತಾವೃತ್ತದ ಹಾಗೂ ಪಂಪಭಾರತದೊಂದು ರಗಳೆಯ ಪರೀಕ್ಷಣದಿಂದ ಗೊತ್ತಾಗುವಂತೆ – ದ್ರುತವಿಲಂಬಿತ ಸ್ವರೂಪದ ಆವರ್ತಗತಿಯು (ಯತಿನಿರಪೇಕ್ಷವಾಗಿ) ಹುಟ್ಟ-ಬೇಕಾದರೆ (ಎಂಟು ಮಾತ್ರೆಯ ಆ ಛಂದಃಖಂಡದ ನಾಲ್ಕನೆಯ ಮತ್ತು ಐದನೆಯ ಮಾತ್ರಾಸ್ಥಾನಗಳನ್ನು ಒಂದು ಗುರ್ವಕ್ಷರವು ಆಕ್ರಮಿಸಿಕೊಳ್ಳ-ಬೇಕಾಗುತ್ತದೆ; ಹಾಗಾದರೆ ಮಾತ್ರ ಆ ಛಂದಃಖಂಡವು ಮೂರು ಮಾತ್ರೆಯ ಮತ್ತು ಐದು ಮಾತ್ರೆಯ, (ಅಥವಾ ಐದು ಮಾತ್ರೆಯ ಮತ್ತು ಮೂರು ಮಾತ್ರೆಯ) ಗಣಗಳ ಸಂಯೋಗವೆಂದು ಕಾಣಿಸಿಕೊಳ್ಳುತ್ತದೆ. ಆ (ಎಂಟು ಮಾತ್ರೆಯ) ಛಂದಃಖಂಡದ ನಾಲ್ಕನೇ ಐದನೇ ಮಾತ್ರೆಗಳು ಒಂದು ಗುರ್ವ-ಕ್ಷರದಲ್ಲಿ ಸೇರಿಕೊಂಡಿರದಿದ್ದರೆ, ಆ ಛಂದಃಖಂಡವು ನಾಲ್ಕು ಮಾತ್ರೆಯ ಎರಡು ಗಣಗಳಾಗಿ ವಿಭಕ್ತವಾಗದಿರುವುದಿಲ್ಲ. ಆದುದರಿಂದ – ಮೂರು + ಐದು ಅಥವಾ ಐದು + ಮೂರು ಮಾತ್ರೆಯ ಗಣಗಳ ಸಂಯೋಗದಿಂದ ದ್ರುತವಿಲಂಬಿತರೂಪದ ಆವರ್ತಗತಿ ಉನ್ಮೀಲಿಸುತ್ತದೆಂದು ಹೇಳುವುದರ ಬದಲಾಗಿ – ನಾಲ್ಕು ಮಾತ್ರೆಯ ಎರಡು ಗಣಗಳ 'ಸಂಧಾನ' (= ಬೆಸುಗೆ)-ದಿಂದ ಆ ಗತಿ ಉನ್ಮೀಲಿಸುತ್ತದೆಂದು ಹೇಳುವುದೇ ಉಚಿತತರವಾಗಿದೆ. (ವಿಶಿಷ್ಟ ಪ್ರಕಾರದ ಅಕ್ಷರವಿನ್ಯಾಸವಿಲ್ಲದೆ ಕೇವಲ ಯತಿನಿವೇಶನಪ್ರಕಾರದ ಬಲದಿಂದ,

---

ಅಡಗಿಕೊಂಡಿದೆ. ಅದೇನೆಂದರೆ – ಲಯಾನ್ವಿತವಾದ ಕೆಲವು ವೃತ್ತಗಳ ಆವರ್ತಗತಿಯನ್ನೂ ಪಾದಪರಿಮಾಣವನ್ನೂ ಅನುಕರಿಸಿ, ಕೆಲವು ಮಾತ್ರಾಬಂಧಗಳು ಕಾಲಾಂತರದಲ್ಲಿ ಹುಟ್ಟಿ ಬಂದುದು ನಿಜ. ಉದಾ: 'ರಾಜಶೇಖರ ವಿಲಾಸ'ದಲ್ಲಿ ಕಂಡುಬರುವಂತಹ "ತ್ರಿವುಡೆ" ಎಂಬ ಮಾತ್ರಾಬಂಧವು 'ಮಲ್ಲಿಕಾಮಾಲೆ'ಯ ಅಥವಾ 'ತರಳವೃತ್ತ'ದ ಪರಿವರ್ತನದಿಂದಾದ ಒಂದು ಛಂದೋಬಂಧವೆಂಬುದರಲ್ಲಿ ಸಂದೇಹ ತೋರುವುದಿಲ್ಲ; ತರಳ ಮಲ್ಲಿಕಾಮಾಲೆಗಳು ಪುರಾತನವೃತ್ತಬಂಧಗಳು. ಹತ್ತನೆಯ ಶತಮಾನದ 'ಪಂಪಭಾರತ'ದಲ್ಲಿ ತರಳವೃತ್ತದ ಪ್ರಯೋಗವಿದೆ. ಮಲ್ಲಿಕಾಮಾಲೆಯಂತೂ ಅತಿಪುರಾತನ ಬಂಧ; ಹಲಾಯುಧಭಟ್ಟನಿಂದ ಸಂಪಾದಿತವಾದ ಪಿಂಗಳಸೂತ್ರಗಳಲ್ಲಿ ಅದು "ವಿಬುಧಪ್ರಿಯಾ" ಎಂಬ ಹೆಸರಲ್ಲಿ ಪ್ರೋಕ್ತವಾಗಿದೆ. 'ತ್ರಿವುಡೆ'ಯಾದರೋ ಎಷ್ಟೋ ಕಾಲದ ಅನಂತರ ಕಾಣಿಸಿಕೊಂಡುದಾಗಿದೆ. ದಂಡಕವು (ಲಲಿತ)ರಗಳೆಯಾದುದೂ ಹೀಗೆಯೇ ಎಂದು ಜಯಕೀರ್ತಿ ಹೇಳುತ್ತಾನೆ. 32ನೆಯ ಟಿಪ್ಪಣಿಯನ್ನು ಅವಲೋಕಿಸಿರಿ.]

೪+೪=೮ ಎಂಬಂತಿರುವ ಛಂದಃಖಂಡವನ್ನು ೩+೫=೮ (ಅಥವಾ ೫+೩=೮) ಎಂದು ಕಾಣಿಸಿದಾಗಲೂ ತಾತ್ತ್ವಿಕವಾಗಿ ಅಲ್ಲಿ ಉಂಟಾಗುವುದು ಗಣಸಂಧಾನವೇ ಹೊರತು ಬೇರೇನೂ ಅಲ್ಲ.) ಹೀಗೆ, ಮಧ್ಯಾವರ್ತಗತಿಕಾರಕವಾದ ನಾಲ್ಕು ಮಾತ್ರೆಯ ಗಣಗಳೆರಡರ ಸಂಧಾನದಿಂದ ತದ್ಭಿನ್ನವಾದ ಒಂದು ಗತಿವಿಶೇಷವು ಹುಟ್ಟುವುದೆಂದು ತಿಳಿದಾಗ – ದ್ರುತಾವರ್ತಗತಿಕಾರಕವಾದ ಮೂರು ಮಾತ್ರೆಯ ಗಣಗಳೆರಡರ ಸಂಧಾನದಿಂದ ಆರು ಮಾತ್ರೆಗಳ ಆವರ್ತದ ಅದೊಂದು ಗತಿವಿಶೇಷವು ಉತ್ಪನ್ನವಾಗುವುದೂ ಮನವರಿಕೆಯಾಗುತ್ತದೆ. ಆ ಗಣಸಂಧಾನದ ವೈಶಿಷ್ಟ್ಯಗಳನ್ನು ಪರಾಮರ್ಶಿಸುವ ಮೊದಲು, ಆ ಗತಿಯನ್ನು ಪ್ರಕಟಿಸುವ ಕೆಲವು ಪದ್ಯಗಳ ಪರಿಚಯ ಮಾಡಿಕೊಳ್ಳೋಣ :

I. (a) ಲಗಯುಗ್ಮಂ । ನೆಗಟ್ದಾಗಳ್ ॥
ಮೃಗನೇತ್ರೇ । ಮೃಗನೇತ್ರಂ ॥ . ॥ (ಛಂದೋಂಬುಧಿ)

(* ಇದು ಶಿಥಿಲದ್ವಿತ್ವ.)

ಇದು 'ಮೃಗನೇತ್ರ' ಎಂಬ ಸಮವೃತ್ತ.

(b) ಮೇ ಮಧ್ಯೇ । ಧೀಮಂತಃ ॥
ಶ್ಯಾಮಾಂಗೀಂ । ತಾಮಾಹುಃ ॥ . ॥ (ಜಯಕೀರ್ತಿಯ ಛಂದೋನುಶಾಸನ)
ಇದು 'ಶ್ಯಾಮಾಂಗಿ' ಎಂಬ ಸಮವೃತ್ತ.

II. (a) ಕರೆನಾಡಿನ । ಸಿರಿಗನ್ನಡ । ನುಡಿಯನು ನುಡಿ । ವರಗಿಳಿಯೇ ।
ಹಳಗನ್ನಡ । ಕೊಳತುಂಬಿದ । ಹೊಸಗನ್ನಡ । ದೊಸರೇ– ॥
ಉಡುಪಿಯ ಪು । ಣ್ಯದ ಮುರಲಿಯ । ನುಡಿಹೊಮ್ಮಿದ । ರಸರಂಧ್ರವೆ ।
ತಲೆಬಾಗುವೆ । ಕೊಂಡಾಡುವೆ । ಓವೋ ಮು । ದ್ದಣ್ಣಾ– ॥ . ॥

(ಚಂದ್ರಖಂಡ)

ಇದು ಹೆಸರಿಲ್ಲದೊಂದು ಮಾತ್ರಾಬಂಧ. ಹಳೆಯ ಯಕ್ಷಗಾನಪ್ರಬಂಧಗಳಲ್ಲಿ ಈ ಛಂದೋಬಂಧವು ಅಲ್ಲಿಲ್ಲಿ ಕಾಣಿಸಿಕೊಳ್ಳುತ್ತದೆ. ಉದಾ:–

(b) ಮತ್ತೊಂದನು । ಕೇಳೀಸತಿ । ಪೆತ್ತಂದಿಗೆ । ತನುಗುದಿಸಿದ ।
ಪುತ್ರರನಂ । ದಂದೇ ತಂ । ದಿತ್ತೊಂದಿಗೆ । ನಿನ್ನ – ॥
ಚಿತ್ತದ ಭಯ । ನೀಗಿಸುವೆನು । ಸತ್ಯದ ಮಾ । ತಿದು ಲಾಲಿಸು ।
ಉತ್ತಮ ಮಾಂ । ಗಲ್ಯದೊಳವ । ಕೃತ್ಯವ ಮಾ । ಡದಿರು– ॥

(ಪಾರ್ತಿಸುಬ್ಬನ ಯಕ್ಷಗಾನಗಳು–'ಕೃಷ್ಣಚರಿತ್ರೆ')

III. (a) ಕಾಂತಶಶಿ । ವ್ಯೋಮಲಗಂ ।
ಮುಂತಿರಲಂ । ತುಂ ಕೆಳದೀ ॥
ಭ್ರಾಂತಿಯದೇಂ । ನಾಕಿಗನೆಂ ।
ದಂತೆ ಪೆಸರ್ । ಮಾಣವಕಂ ॥ (ಛಂದೋಂಬುಧಿ)

ಇದು 'ಮಾಣವಕ' ಎಂಬ ಸಮವೃತ್ತ.

(b) ಇಂದು ಯುಗಂ । ಗಳ ಮುಂದಂ ।
ಬಂದು ಹರ । ದ್ವಿತಯಂಗಳ್ ॥
ನಿಂದೊಡೆ ಚಿ । ತ್ರಪದಂ ನಾ ।
ಮಂ ದಲಿತಾಂ । ಬುಜನೇತ್ರೇ ॥ . ॥ (ಛಂದೋಂಬುಧಿ)

ಇದು 'ಚಿತ್ರಪದ' ಎಂಬ ಸಮವೃತ್ತ.

ಆರು ಮಾತ್ರೆಗಳ ಒಂದು ಆವರ್ತದಲ್ಲಿ ಅಡಕವಾಗಿರುವ ಛಂದಃಖಂಡವು ೩ + ೩ = ೬ ಎಂದು ವಿಭಕ್ತವಾಗದೆ, ೨ + ೪ = ೬ ಎಂದೋ ಅಥವಾ ೪ + ೨ = ೬ ಎಂದೋ ವಿಭಕ್ತವಾಗುವುದಾದರೆ ಪ್ರಸ್ತುತವಾದ ಗತಿವಿಶೇಷವು ಉನ್ಮೀಲಿಸುತ್ತದೆ. ಯತಿನಿರಪೇಕ್ಷವಾಗಿ ಹೀಗಾಗಬೇಕಾದರೆ, ಆ ಛಂದಃಖಂಡದ ಮೂರನೆಯ ಮತ್ತು ನಾಲ್ಕನೆಯ ಮಾತ್ರಾಸ್ಥಾನಗಳನ್ನು ಒಂದು ಗುರ್ವಕ್ಷರವು ಆಕ್ರಮಿಸಿಕೊಳ್ಳುವ ಮೂಲಕ ಅಲ್ಲಿ ಗಣಸಂಧಾನವುಂಟಾಗಬೇಕು. (ಉದಾಹೃತ ಪದ್ಯಗಳೊಳಗೆ । ನೆಯ ವರ್ಗದವುಗಳು ಇಂತಹ ಸಹಜವಾದ ಗಣಸಂಧಾನಕ್ಕೆ ಉದಾಹರಣಗಳು.) ಇಂತಹ ಛಂದೋವಿನ್ಯಾಸವಿಲ್ಲದಿದ್ದರೂ- ಎಂದರೆ ಕೇವಲ ಛಂದೋದೃಷ್ಟಿಯಿಂದ (= ಅರ್ಥನಿರಪೇಕ್ಷವಾಗಿ) ೩ + ೩ = ೬ ಎಂದು ವಿಭಕ್ತವಾಗುವಂತಿದ್ದರೂ – ಆ ಛಂದಃಖಂಡದ ಮೂರನೆಯ ಮಾತ್ರಾಸ್ಥಾನದಲ್ಲಿ ಯತಿಯನ್ನಿಡದೆ, ನಾಲ್ಕನೆಯ ಮಾತ್ರಾಸ್ಥಾನದಲ್ಲಿ ಅಥವಾ ಎರಡನೆಯ ಮಾತ್ರಾಸ್ಥಾನದಲ್ಲಿ ಯತಿನಿವೇಶನಮಾಡಿದರೆ ಈ ಗತಿ ಮೂಡಿಬರುತ್ತದೆ. (ಉದಾಹೃತ ಪದ್ಯಗಳೊಳಗೆ ॥ (a) ಎಂದು ಗುರುತಿಸಿದ ಪದ್ಯದ ಪ್ರಥಮಪಾದದ ಮೂರನೆಯ ಹಾಗೂ ನಾಲ್ಕನೆಯ, ಮತ್ತು ತೃತೀಯ ಪಾದದ ಒಂದನೆಯ ಹಾಗೂ ಎರಡನೆಯ ಛಂದಃಖಂಡಗಳು ಇದಕ್ಕೆ ಉದಾ- ಹರಣಗಳು. ॥ (b) ಎಂದು ಗುರುತಿಸಿದ ಪದ್ಯಗಳಲ್ಲಿಯೂ ಕೆಲವು ಛಂದಃ- ಖಂಡಗಳು ಹೀಗಿರುವುದನ್ನು ಕಾಣಬಹುದು.) ಈ ಎರಡು ವಿಧಾನಗಳಿಂದಲ್ಲದೆ, ಬೇರೊಂದು ವಿಧದ ಛಂದೋವಿನ್ಯಾಸದ ಫಲವಾಗಿಯೂ ಈ ಆವರ್ತಗತಿ ಉತ್ಪನ್ನವಾಗುತ್ತದೆಂಬುದನ್ನು III ನೆಯ ವರ್ಗದ ಉದಾಹರಣಗಳು ತೋರಿಸಿ- ಕೊಡುತ್ತವೆ. ಈ ವಿಧಾನದಂತೆ – ಆ ಛಂದಃಖಂಡದ ಗುರುಲಘುವಿನ್ಯಾಸವು

ಗಾಲಲಗಂ ಎಂದಿದ್ದರಾಯಿತು, ಅದು ಪೂರ್ವೋಕ್ತ ಗತಿವಿಶೇಷವನ್ನು ಪ್ರಕಟಿಸಲು ಸಮರ್ಥವಾಗುತ್ತದೆ.[56] ಅಲ್ಲಿ ಮೂರನೆಯ ಮಾತ್ರಾಸ್ಥಾನದಲ್ಲಿಯೇ ಯತಿ

---

56. {ಗಣಸಂನಿಕರ್ಷದಲ್ಲಿಯೂ ಗಣಸಂಧಾನದ ಪರಿಣಾಮ} ಆರು ಮಾತ್ರೆಯ ಛಂದಃಖಂಡವು ಗಾಲಲಗಂ ಎಂಬಂತಿರುವಲ್ಲಿ ಉಂಟಾಗುವುದು ಮೂರು ಮಾತ್ರೆಯ ಎರಡು ಗಣಗಳ 'ಸಂನಿಕರ್ಷ' ಮಾತ್ರ; ಅಲ್ಲಿ 'ಗಣಸಂಧಾನ'ವಾಗುವುದಿಲ್ಲ. ಆದುದರಿಂದ ಆ ಛಂದಃಖಂಡವು ೪+೨=೬ ಎಂದೋ ೨+೪=೬ ಎಂದೋ ಭಾಸವಾಗಬೇಕಾದರೆ ನಾಲ್ಕನೆಯ ಅಥವಾ ಎರಡನೆಯ ಮಾತ್ರಾಸ್ಥಾನದಲ್ಲಿ ಯತಿ ಬೇಕೇಬೇಕಾಗುತ್ತದಲ್ಲವೇ? – ಎಂಬೊಂದು ಶಂಕೆ ಇಲ್ಲಿ ಸಹಜವಾಗಿ ಹುಟ್ಟುತ್ತದೆ. ಇದಕ್ಕೆ ಸಮಾಧಾನವೇನೆಂದರೆ – 'ಗಾಲಲಗಂ' ಎಂಬಂತಿರುವ ಛಂದಃಖಂಡದಲ್ಲಿ, ಉಕ್ತಸ್ಥಾನಗಳಲ್ಲಿ ಯತಿ ಇದ್ದರೂ ಇಲ್ಲದಿದ್ದರೂ, ಮೂರು ಮಾತ್ರೆಯ ಗಣದ್ವಂದ್ವದ ಸಂಧಾನದಿಂದ ಗತಿಯಲ್ಲಿ ಯಾವ ಪರಿಣಾಮವುಂಟಾಗುತ್ತದೋ ಹೆಚ್ಚುಕಡಮೆ ಅದೇ ಪರಿಣಾಮವು 'ಗಾಲಲಗಂ' ಎಂಬ ವಿನ್ಯಾಸದ ಫಲವಾಗಿಯೂ ಉಂಟಾಗುತ್ತದೆಂಬುದರಲ್ಲಿ ಗತಿಪ್ರಜ್ಞಾವಂತರಾದ ಯಾರಿಗೂ ಸಂದೇಹವಿರಲಾರದು; ಏಕೆಂದರೆ ಅದು ಶ್ರವಣವೇದ್ಯ, ಅರ್ಥಾತ್ ಪ್ರತ್ಯಕ್ಷಸಿದ್ಧ. ಇನ್ನು, ಇದು ಹೀಗೆ ಶ್ರವಣಗೋಚರವಾಗುವುದಕ್ಕೆ ಕಾರಣವೇನೆಂದು ಕೇಳುವುದಾದರೆ ಅದು ಹೀಗೆ: ಗಾಲ ಮತ್ತು ಲಗಂ ಎಂಬ ಛಂದೋವಿನ್ಯಾಸಗಳು ಪರಸ್ಪರ ಪ್ರತೀಪ (inverted) ರೂಪದವು. ಇವೆರಡರ 'ಅಕ್ಷರಗತಿ'ಯ ಸ್ವಭಾವವನ್ನು ಪರಿಭಾವಿಸಿದರೆ, ಗಾಲ ಎಂಬುದರದು ಅವರೋಹಣ (=ಇಳಿಯುವಿಕೆ)ಪರವೆಂದೂ ಲಗಂ ಎಂಬುದರದು ಆರೋಹಣ(=ಏರುವಿಕೆ)ಪರವೆಂದೂ ಭಾಸವಾಗುತ್ತದೆ; ಮತ್ತು ಗಾಲ ಎಂಬುದನ್ನು ಒಂದು ಆವರ್ತವಾಗಿ ಪಠಿಸಿದೊಡನೆ ಲಗಂ ಎಂಬುದನ್ನು ಮುಂದಿನ ಆವರ್ತವಾಗಿ ಪಠಿಸುವಾಗ, ಏನೋ ಒಂದು ಅತಿಸೂಕ್ಷ್ಮವಾದ (subtle) ಗತಿವಿರೋಧದ ಅನುಭವವೂ ಆಗುತ್ತದೆ. (ಪದ್ಯವನ್ನು ಛಂದೋಗತಿಗನುಗುಣವಾಗಿ ಪಠಿಸುವಾಗ, ಒಂದು ಆವರ್ತದ ಉಚ್ಚಾರಕ್ಕೂ ಅದರ ಮುಂದಿನ ಆವರ್ತದ ಉಚ್ಚಾರಕ್ಕೂ ಮಧ್ಯದಲ್ಲಿ, ವಿಚ್ಛೇದರೂಪವಾದ ಮತ್ತು ಅಳತೆಗೆ ಸಿಕ್ಕದಷ್ಟು ಸೂಕ್ಷ್ಮವಾದ ಒಂದು ಕಾಲವಿರಾಮವಿರುತ್ತದೆಂಬ, ಮತ್ತು ಆವರ್ತಾರಂಭದ ಅಕ್ಷರೋಚ್ಚಾರವು ಸ್ಫುಟತರವಾಗಿ ಪರಿಣಮಿಸುತ್ತದೆಂಬ, ಹಾಗೂ ಈ ಕಾರಣಗಳಿಂದಲೇ ನಮಗೆ ಅಲ್ಲಿ ಲಯಪ್ರತೀತಿಯಾಗುವುದೆಂಬ ತಥ್ಯವನ್ನು ಇಲ್ಲಿ ಲಕ್ಷಿಸಿಕೊಳ್ಳಬೇಕು.) ಗಾಲ + ಲಗಂ ಎನ್ನುವಾಗ ಇದಿರಾಗುವ ಈ ತೊಡಕಿನಿಂದ ತಪ್ಪಿಸಿಕೊಳ್ಳುವುದಕ್ಕಾಗಿ, ಅಲ್ಲಿ ನಮ್ಮ (ಸಹಜವಾದ) ಉಚ್ಚಾರಪ್ರಯತ್ನವು ಗಾಲ ಎಂಬುದರ ಕೊನೆಯಲ್ಲಿ ತಂಗದೆ, ಮುಂದಿನ ಅಕ್ಷರದಲ್ಲಿ ತಂಗುತ್ತದೆ. ಆಗ 'ಗಾಲಲಗಂ' ಎಂಬಂತಿರುವ ಛಂದಃಖಂಡವು ಗಾಲಲ + ಗಂ (೪+೨) ಎಂಬ ಸ್ವರೂಪದಲ್ಲಿ ಶ್ರವಣಗೋಚರವಾಗುತ್ತದೆ. ಅರ್ಥಾನುರೋಧದಿಂದ ಅದು ಗಾ + ಲಲಗಂ (೨+೪) ಎಂದಾಗುವುದೂ ಉಂಟು. (ಉದಾ: III (b) ಎಂದು ಗುರುತಿಸಿದ ಪದ್ಯದ ಚತುರ್ಥಪಾದದ ಪ್ರಥಮಖಂಡ). ಲಲಲ+ಲಗಂ ಎಂಬ ವಿನ್ಯಾಸವಿರುವಲ್ಲಿಯೂ, ಹೆಚ್ಚುಕಡಮೆ ಇಂತಹದೇ ಕಾರಣದಿಂದ ಇದೇ ಪರಿಣಾಮವುಂಟಾಗಿ ಅದು ಲಲಲಲ+ಗಂ ಎಂದು ಕಿವಿಗೆ ಬೀಳುತ್ತದೆ. ಉದಾ: 'ತ್ವರಿತಗತಿ' ಎಂಬ ಸಮವೃತ್ತ. ಪಾದಕ್ಕೆ ಹತ್ತು ಅಕ್ಷರಗಳ

ಇದ್ದರೂ ಪ್ರಸ್ತುತವಾದ ಗತಿಗೆ ಭಂಗವುಂಟಾಗುವುದಿಲ್ಲವೆಂಬುದನ್ನು III (a) ಎಂದು ಗುರುತಿಸಿದ ಪದ್ಯದ ಪ್ರಥಮಪಾದವೂ ತೃತೀಯ ಚತುರ್ಥಪಾದಗಳ ಪ್ರಥಮಖಂಡಗಳೂ ತೋರಿಸಿಕೊಡುತ್ತವೆ. III (b) ಎಂದು ಗುರುತಿಸಿದ ಉದಾಹರಣದಲ್ಲಿಯೂ ಪ್ರಥಮ ಹಾಗೂ ದ್ವಿತೀಯ ಪಾದಗಳ ಪ್ರಥಮಖಂಡಗಳು ಈ ತಥ್ಯವನ್ನು ತಿಳಿಸುತ್ತವೆ. II (b) ಎಂದು ಗುರುತಿಸಿದ ಮಾತ್ರಾಬಂಧದ ದ್ವಿತೀಯಪಾದದ ಪ್ರಥಮಖಂಡವೂ ತೃತೀಯಪಾದದ ಮೂರನೆಯ ಖಂಡವೂ ಚತುರ್ಥಪಾದದ ಮೊದಲನೆಯ ಖಂಡವೂ ಗಾಲಲಗಂ ಎಂಬ ರೂಪದಲ್ಲಿವೆ; ಅಲ್ಲದೆ, ಆ ಖಂಡಗಳ ನಾಲ್ಕನೆಯ ಮಾತ್ರಾಸ್ಥಾನಗಳಲ್ಲಿ ಯತಿಯೂ ಇದೆ. ಹೀಗೆ, ಈ ವಿಶಿಷ್ಟಗತಿವಿಧಾಯಕವಾದ ಎರಡು ಲಕ್ಷಣಗಳು ಅಲ್ಲಿ ಸಮಾವಿಷ್ಟವಾಗಿವೆ. III (b) ಎಂದು ಗುರುತಿಸಿದ ಪದ್ಯದ ಮೂರನೇ ನಾಲ್ಕನೇ ಪಾದಗಳ ಪ್ರಥಮಖಂಡಗಳೂ ಇವೇ ಎರಡು ಲಕ್ಷಣಗಳಿಂದ ಕೂಡಿದ್ದು, ಅವುಗಳೊಳಗೆ ಒಂದರಲ್ಲಿ ನಾಲ್ಕನೆಯ ಮಾತ್ರಾಸ್ಥಾನದಲ್ಲಿಯೂ ಮತ್ತೊಂದರಲ್ಲಿ ಎರಡನೆಯ ಮಾತ್ರಾಸ್ಥಾನದಲ್ಲಿಯೂ ಯತಿ ಇರುವುದನ್ನು ನೋಡಬಹುದು.)

ಆರು ಮಾತ್ರೆಯ ಛಂದಃಖಂಡಗಳ ಪುನಃಪುನರಾವರ್ತನದಿಂದ ಉನ್ಮೀಲಿಸುವ ಈ ಗತಿವಿಶೇಷದ ಕುರಿತು ಈವರೆಗೆ ಮಾಡಿದ ಪ್ರತಿಪಾದನೆಯ ಸಾರಾಂಶವಾಗಿ ಹೀಗೆ ಹೇಳಬಹುದು: ಈ ಗತಿ ಉತ್ಪನ್ನವಾಗಬೇಕಾದರೆ, ಆರು ಮಾತ್ರೆಗಳುಳ್ಳ ಛಂದಃಖಂಡಗಳು ೩+೩ ಎಂದು ವಿಭಕ್ತವಾಗದೆ, ೪+೨ ಎಂದೋ, ೨+೪ ಎಂದೋ ವಿಭಕ್ತವಾಗುವಂತಿರಬೇಕು. ಈ ಸ್ಥಿತಿಯನ್ನು ಮೂರು ಮಾತ್ರೆಯ ಎರಡು ಗಣಗಳ ಸಂಧಾನದಿಂದ, ಅಥವಾ ನಾಲ್ಕನೆಯ ಮಾತ್ರಾಸ್ಥಾನದಲ್ಲಾಗಲಿ ಎರಡನೆಯ ಮಾತ್ರಾಸ್ಥಾನದಲ್ಲಾಗಲಿ ಯತಿನಿವೇಶನ ಮಾಡುವುದರಿಂದ, ಇಲ್ಲವೆ ಗಾಲಲಗಂ ಅಥವಾ ಲಲಲಲಗಂ ಎಂಬ ರೂಪದ ಗುರುಲಘುವಿನ್ಯಾಸದಿಂದ ಸಾಧಿಸಲಾಗುತ್ತದೆ. ಎಂದರೆ – ಕೇವಲ ಆರು ಮಾತ್ರೆಗಳಿದ್ದ ಮಾತ್ರಕ್ಕೆ ಈ ಛಂದಃಖಂಡಗಳಿಂದ ಈ ಗತಿ ಉನ್ಮೀಲಿಸುವುದಿಲ್ಲ; ಪೂರ್ವೋಕ್ತವಾದ

---

ಈ ವೃತ್ತದ ಸ್ವರೂಪವನ್ನು ಲಕ್ಷ್ಯಲಕ್ಷಣಸಮವಾಯವಾಗಿ ಜಯಕೀರ್ತಿ ನಿದರ್ಶಿಸಿರುತ್ತಾನೆ. (೨–೯೪)

"ನಜನಗಧೃತ್ : ತ್ವರಿತಗತಿಃ ॥"

ಹೀಗೆ ಗಾಲಲಗಂ ಎಂಬ (ಹಾಗೂ ಲಲಲಲಗಂ ಎಂಬ) ಗುರುಲಘುವಿನ್ಯಾಸವುಳ್ಳ ಆರು ಮಾತ್ರೆಯ ಛಂದಃಖಂಡಗಳು (ಪಠನದಲ್ಲಿ) ೩+೩ ಎಂದು ನಿರಾಯಾಸವಾಗಿ ವಿಭಕ್ತವಾಗುವುದಿಲ್ಲವಾದುದರಿಂದ – ಮೂರು ಮಾತ್ರೆಯ ಗಣಗಳೆರಡರ ಸಂಧಾನದಿಂದ ಗತಿಯಲ್ಲಿ ಯಾವ ಪರಿಣಾಮವುಂಟಾಗುತ್ತದೋ ಅದೇ ಪರಿಣಾಮವು ಇವುಗಳಿಂದಲೂ ಉಂಟಾಗುತ್ತದೆ.

ದ್ರುತವಿಲಂಬಿತ ಸ್ವಭಾವದ (ಎಂಟು ಮಾತ್ರೆಯ) ಆವರ್ತಗತಿಯಂತೆಯೇ, ಇದು ಸಹ ವಿಶಿಷ್ಟವಾದ ಅಕ್ಷರವಿನ್ಯಾಸಪ್ರಕಾರದ ನೆರವಿನಿಂದಲೇ ಉನ್ಮೀಲಿಸುವುದಾಗಿದೆ. ಆದುದರಿಂದ, ಅದರಂತೆ ಇದೂ ಒಂದು ಮಿಶ್ರಗತಿಯಾಗಿದೆ ಹೊರತು, ೩+೪=೭ ಮಾತ್ರೆಯ "ದ್ರುತಮಧ್ಯಾವರ್ತಗತಿ"ಯ ಹಾಗೆ ಕೇವಲ '(ಸ್ವತಂತ್ರ) ಸಂಯುಕ್ತ ಗತಿ'ಯಲ್ಲ.[57] ಮತ್ತು ೩+೫ ಎಂದೋ ೫+೩ ಎಂದೋ ವಿಭಕ್ತವಾಗುವ ಎಂಟು

57. {ಕನ್ನಡದಲ್ಲಿ ಲಗಾದಿಗಣಗಳಿಲ್ಲ} ದ್ರುತಮಧ್ಯಾವರ್ತಗತಿಗೆ ಉದಾಹರಣವಾಗಿ ಕೊಡಲಾದ 'ಭಾಮಿನೀಷಟ್ಪದಿ'ಯ, ಘಟಕಗಳಾದ ಮೂರು ಮಾತ್ರೆಯ ಹಾಗೂ ನಾಲ್ಕು ಮಾತ್ರೆಯ ಗಣಗಳಲ್ಲಿ ಆಯಾ ಗಣವರ್ಗದ ಎಲ್ಲವಕ್ಕೂ ಪ್ರವೇಶವಿಲ್ಲ; ಲಗಂ ಎಂಬ ವಿನ್ಯಾಸವಿರುವ ಮೂರು ಮಾತ್ರೆಯ ಗಣವೂ, ಲಗಾಲ ಎಂಬ ವಿನ್ಯಾಸದ ನಾಲ್ಕು ಮಾತ್ರೆಯ ಗಣವೂ ಅಲ್ಲಿ ನಿಷಿದ್ಧ. ಆದುದರಿಂದ – ಅಲ್ಲಿ ಉನ್ಮೀಲಿಸುವ ಗತಿಗೆ ಯತಿಯ ನೆರವು ಬೇಕಾಗಿಲ್ಲ-ವಾದರೂ ಅದು ವಿಶಿಷ್ಟವಾದ ಗುರುಲಘುವಿನ್ಯಾಸವನ್ನು ಅವಲಂಬಿಸಿದ ಹಾಗಾಗುತ್ತದೆ; ಹೀಗಿರುವಾಗ ಅದು ಸ್ವತಂತ್ರವಾದ ೩+೪=೭ರ 'ಸಂಯುಕ್ತಗತಿ' ಎಂದಾಗುವುದು ಹೇಗೆ? – ಎಂಬೊಂದು ಆಕ್ಷೇಪವು ಇಲ್ಲಿ ಹುಟ್ಟಲೂಬಹುದು. ಅದಕ್ಕೆ ಸಮಾಧಾನ ಹೀಗೆ: ತ್ರಿಕಲ (= ಮೂರು ಮಾತ್ರೆಯ) ಗಣವರ್ಗದ ಹಾಗೂ ಚತುಷ್ಕಲ ಗಣವರ್ಗದ ಯಾವ ಗಣವನ್ನು ಪ್ರಯೋಗಿಸಿದರೂ 'ದ್ರುತಮಧ್ಯಾವರ್ತಗತಿ'ಗೆ ಭಂಗಬರುವುದಿಲ್ಲ. ಭಾಮಿನೀಷಟ್ಪದಿಯಲ್ಲಿ 'ಲಗಂ' ಮತ್ತು 'ಲಗಾಲ'ಗಳು ನಿಷಿದ್ಧವಾಗಿರುವುದರ ಕಾರಣವೇ ಬೇರೆ. ಕನ್ನಡದಲ್ಲಿಯೇ ಹುಟ್ಟಿಬಂದಿದ್ದ ಯಾವ ಛಂದೋಬಂಧದಲ್ಲಿಯೂ ಈ ಗಣಗಳ ಪ್ರಯೋಗವಿಲ್ಲ. ಕಾರಣ-ವೇನೆಂದರೆ – ಕನ್ನಡದ ಪುರಾತನಬಂಧಗಳಾಗಿರುವ "ಕರ್ಣಾಟಕವಿಷಯಜಾತಿ"ಗಳ ಘಟಕಗಳಾದ ತ್ರಿಮೂರ್ತಿಗಣಗಳೊಳಗೆ (ಬ್ರಹ್ಮಗಣ ೪, ವಿಷ್ಣುಗಣ ೮, ರುದ್ರಗಣ ೧೬ – ಒಟ್ಟು ಗಣಸಂಖ್ಯೆ ೨೮) ಲಗಂ ಎಂಬ ರೂಪದ ಗಣವಾಗಲಿ ಲಗಾದಿಯಾಗಲಿ ಒಂದೂ ಇಲ್ಲ. ಅಂದಿನ ಕನ್ನಡದ ಛಂದೋಗತಿಗೆ ಇದು ಬಹಿರ್ಭೂತ. ಶುದ್ಧಮಾತ್ರಾಬಂಧಗಳಾದ ನಡುಗನ್ನಡದ ಷಟ್ಪದಿಗಳಾದರೂ ಆ ಸಂಪ್ರದಾಯಕ್ಕೆ ಬದ್ಧವಾಗಿಯೇ ಹುಟ್ಟಿ ಬೆಳೆದವುಗಳು. ಈ ಕಾರಣದಿಂದ ಭಾಮಿನಿಯಲ್ಲಿ ಮಾತ್ರವಲ್ಲ, ಶರ ಕುಸುಮ ಭೋಗ ಪರಿವರ್ಧಿನಿ ವಾರ್ಧಕ ಎಂಬ ಉಳಿದ ಷಟ್ಪದಿಗಳಲ್ಲಿಯೂ ಲಗಂ ಎಂಬ ಗಣವಾಗಲಿ, ಲಗಂ ಎಂದು ತೊಡಗುವ ಗಣವಾಗಲಿ ಇಲ್ಲವೇ ಇಲ್ಲ. [ಲಗಂ ಪ್ರಯೋಗದಿಂದ 'ದ್ರುತಮಧ್ಯಾವರ್ತಗತಿ' ಕೆಡುವುದಿಲ್ಲ-ವೆಂಬುದನ್ನು ಈ ಮುಂದಿನ ಉದಾಹರಣವು ತಿಳಿಸಬಲ್ಲುದಾಗಿದೆ:

ಸದಾ + ನೆನೆಯಿರೊ । ಮಹಾ + ದೇವನ ।
ಪದಾಂ + ಭೋಜವ । ನೊಂದೆ + ಮನದಲಿ ॥

೩+೪=೭ ಮಾತ್ರೆಯ ಸಂಯುಕ್ತಛಂದಃಖಂಡದ ಉತ್ತರಭಾಗವು ಲಗಾಲ ಎಂಬಂತಿದ್ದರೆ, ದ್ರುತಮಧ್ಯಾವರ್ತಗತಿಯೇ ಉನ್ಮೀಲಿಸುವುದಾದರೂ (ಪಠನದಲ್ಲಿ) ಅದು ೩+೪=೭ ಎಂಬು-ದರ ಬದಲಾಗಿ ತನ್ನ ಪ್ರತೀಪ (inverted) ರೂಪವನ್ನು, ಎಂದರೆ ೪+೩=೭ ಎಂಬ ಸ್ವರೂಪವನ್ನು ಪ್ರಕಟಿಸುತ್ತದೆ. ಈ ಕೆಳಗಿನ ಉದಾಹರಣದ ಪಠನದಿಂದ ಇದನ್ನು ಗೊತ್ತು-ಮಾಡಿಕೊಳ್ಳಬಹುದು:

ಮಾತ್ರೆಯ ಆವರ್ತಗತಿಯ ರಚನೆಗಳಲ್ಲಿ ೪+೪ ಎಂದು ವಿಭಕ್ತವಾಗುವ ಛಂದಃಖಂಡಗಳೂ – ಪದ್ಯದ ಗತಿಗೆ ಹೆಚ್ಚೇನೂ ಆಘಾತವನ್ನುಂಟುಮಾಡದೆ – ಸೇರಿಕೊಳ್ಳುವ ಹಾಗೆಯೇ, (ಟಿಪ್ಪಣಿ 54 ನೋಡಿರಿ) ೪+೨ ಎಂದೋ ೨+೪ ಎಂದೋ ವಿಭಕ್ತವಾಗುವ ಆರು ಮಾತ್ರೆಯ ಆವರ್ತಗತಿಯ (ಆಧುನಿಕ) ರಚನೆಗಳಲ್ಲಿ ೩+೩ ಎಂದು ವಿಭಕ್ತವಾಗುವ ಛಂದಃಖಂಡಗಳೂ ಸೇರಿಕೊಳ್ಳುವುದುಂಟು. ಉದಾ:

(೩ + ೩)   (೩ + ೩)   (೪ + ೨)   (೩ + ೩)
U U U + – U   U U U + – U   – U U + U U   U U U + – U
IV ಬೆಳಕು ಕತ್ತ । ಲೆಗಳ ನುಂಗಿ । ಕತ್ತಲೆ ಬೆಳ । ಕುಗಳ ನುಂಗಿ ।

(೪ + ೨)   (೪ + ೨)   (೪ + ೨)   (೬)
U U U U + U U   U U – + U U   U U – + –   – O
ಯುಗಯುಗ ಕಳೆ । ಕಳೆಯು ತ್ತಿದೆ । ಗೆಲವೆಂ ದೆ । ತ್ತ– ॥

(೨+೪)   (೩ + ೩)   (೪ + ೨)   (೩ + ೩)
– + – U U   U U U + U U U   – U U + –   U U U + U U U
ನೀ ರಾಸರ । ತಣಿಸಿ ತಣಿಸಿ । ಆಸರು ನೀ । ರೆಣಿಸಿ ಎಣಿಸಿ ।

(೪+೨)   (೨+೪)   (೪+೨)   (೬)
– U U + U U   U U + U U U U   – U U + –   – O
ತೀರದು ತಣಿ । ಯದು ದಣಿಯದು । ಏನಿದು ಚಿ ।ತ್ರ– ॥

(ಚಂದ್ರಖಂಡ)

ಆದುದರಿಂದ – ಎಂಟು ಮಾತ್ರೆಯ ಆವರ್ತಗತಿಯನ್ನು 'ಸಂಕಲಿತ–ಮಧ್ಯಾವರ್ತಗತಿ' ಎಂದು ಹೆಸರಿಸಿದಂತೆಯೇ – ಆರು ಮಾತ್ರೆಯ ಈ ಆವರ್ತಗತಿಯನ್ನು "ಸಂಕಲಿತ ದ್ರುತಾವರ್ತಗತಿ" ಎಂದು ಹೆಸರಿಸಬಹುದಾಗಿದೆ.

{ಆವರ್ತಭೇದಗಳಿಂದಾಗಿ ಆರು ವಿಧದ ಗತಿಭೇದಗಳು}

ಲಯಾನ್ವಿತವಾದ ಛಂದೋಬಂಧಗಳಲ್ಲಿ ಉನ್ಮೀಲಿಸುವ ಆವರ್ತಗತಿ–ಭೇದಗಳ ಕುರಿತು ಯಥಾಮತಿಯಾಗಿ ವಿಚಾರಮಾಡಿದ್ದಾಯಿತು. ಈಗ ಅದರ ಫಲಿತಾಂಶವನ್ನು ಸಂಗ್ರಹಿಸೋಣ:

---

U U U   U – U   – U   U – U   U U U   U   – U   – U   U – U
ನಮಿಪೆ + ಗ,ಣೇಶ । ವಿಘ್ನ + ವಿ,ನಾಶ । ಸಕಲ ಕ, + ಲೇಶ । ಶಂಕ + ರ, ತೋಷ ॥

ಆದರೆ, ಹೀಗೆ ಲಗಂ (U –) ಹಾಗೂ ಲಗಾಲ (U – U) ರೂಪಗಳನ್ನು ಬಳಸಿಕೊಂಡು ರಚಿಸಿದ ದ್ರುತಮಧ್ಯಾ–ವರ್ತಗತಿಯ ಪದ್ಯಗಳು ಅಪೂರ್ವ. ಇವುಗಳ ಪ್ರಯೋಗಗಳಿಂದ ತದ್ಗತವಾದ ಅಕ್ಷರಗತಿ–ಯಲ್ಲಿ ಒಂದು ಬಗೆಯ 'ವಿಕಟತ್ವ' ಉಂಟಾಗುತ್ತದೆ; ಇವುಗಳಿಲ್ಲದ ದ್ರುತಮಧ್ಯಾವರ್ತಗತಿಯ ಛಂದೋಬಂಧಗಳು ಸಮಭೂಮಿಯಲ್ಲಿ ಹರಿಯುವ ಹೊಳೆಯಂತೆ, 'ಉದ್ವೇಗ'ವಿಲ್ಲದೆ ಸುಖವಾಗಿ ಮುನ್ನಡೆಯುತ್ತವೆ.]

ಸಮಗತಿಯ (=ಲಯಾನ್ವಿತವಾದ) ವೃತ್ತಗಳಲ್ಲಿ ಮತ್ತು ವಿವಿಧವಾದ ಮಾತ್ರಾಬಂಧಗಳಲ್ಲಿ (ಮಾತ್ರಾಬಂಧಗಳಲ್ಲಿ ಸಮಗತಿ ವಿಷಮಗತಿ ಎಂಬ ಭೇದವಿಲ್ಲ; ಅವೆಲ್ಲವೂ ಸಮಗತಿಯವೇ, ಎಂದರೆ ಲಯಾನ್ವಿತ(=ಸತಾಲ)ವೇ ಆಗಿರುತ್ತದೆ.) ಮೂರು ಮಾತ್ರೆಯಿಂದ ಮೊದಲುಗೊಂಡು ಎಂಟು ಮಾತ್ರೆಯ ವರೆಗಿನ ಆವರ್ತಭೇದಗಳು ಗೋಚರಿಸುತ್ತವೆ. (ಎಂಟಕ್ಕಿಂತ ಹೆಚ್ಚಿನ ಮಾತ್ರಾ ಸಂಖ್ಯೆಯ ಆವರ್ತಗಳು ಛಂದೋವ್ಯವಹಾರದಲ್ಲಿ ಸ್ವೀಕಾರ್ಯಗಳಲ್ಲ, (ಟಿಪ್ಪಣಿ 51 ನೋಡಿರಿ.) ಈ ಆವರ್ತಭೇದಗಳ ಪರಿಣಾಮವಾಗಿ ಲಯಾನ್ವಿತಪದ್ಯ-ಸಮುದಾಯದಲ್ಲಿ (ಮುಖ್ಯತಃ) ಆರು ವಿಧದ ಗತಿಭೇದಗಳು ಪ್ರಕಟವಾಗುತ್ತವೆ. ಅವುಗಳೊಳಗೆ-

(೧) **ದ್ರುತಾವರ್ತಗತಿ:** ಇದು ಮೂರು ಮಾತ್ರೆಯ ಛಂದಃಖಂಡ (=ಗಣ)ದ ಪುನಃಪುನರಾವರ್ತನದ ಪರಿಣಾಮವಾಗಿ ಉನ್ಮೀಲಿಸುತ್ತದೆ. ಸೈನಿಕ, ಪಂಚಚಾಮರ, ಮಹೋತ್ಸವ ಇತ್ಯಾದಿ ಸತಾನವೃತ್ತಗಳೂ; 'ಸುಮಾಲತೀ' ಇತ್ಯಾದಿ ವಿತಾನವೃತ್ತಗಳೂ; ಕರ್ಣಾಟಕವಿಷಯಜಾತಿಗಳೊಳಗೆ ಒಂದೆಂದು ಹೇಳಲ್ಪಟ್ಟಿರುವ 'ಉತ್ಸಾಹ', ಪಂಚವಿಧಲಯೋತ್ತರ, ಭೋಗಷಟ್ಪದಿ, ಉತ್ಸಾಹ ರಗಳೆ ಇತ್ಯಾದಿ ಮಾತ್ರಾಬಂಧಗಳೂ ಈ ಗತಿಯ ಛಂದೋಬಂಧಗಳಾಗಿವೆ.

(೨) **ಮಧ್ಯಾವರ್ತಗತಿ:** ಇದು ನಾಲ್ಕು ಮಾತ್ರೆಯ ಛಂದಃಖಂಡ (=ಗಣ)ದ ಪುನಃಪುನರಾವರ್ತನದಿಂದ ಉನ್ಮೀಲಿಸುತ್ತದೆ. ವನಮಂಜರಿ, ತೋಟಕ ಇತ್ಯಾದಿ ಸತಾನವೃತ್ತಗಳೂ; ಕ್ರೀಡಾವೃತ್ತ, ಮತ್ತಮಯೂರ, ಕ್ರೌಂಚಪದ, ಹಂಸ ಗತಿ, ಪಣವಕ, ಭ್ರಮರವಿಲಸಿತ ಇತ್ಯಾದಿ ವಿತಾನವೃತ್ತಗಳೂ; ಕರ್ಣಾಟಕವಿಷಯ ಜಾತಿಗಳೊಳಗೆ ಒಂದಾದ "ಅಕ್ಕರಿಕೆ", ಪರಿವರ್ಧಿನಿ ಹಾಗೂ ಶರಷಟ್ಪದಿ, ಮಂದಾನಿಲರಗಳೆ ಇತ್ಯಾದಿ ಮಾತ್ರಾಬಂಧಗಳೂ ಈ ಗತಿಯ ಛಂದೋ-ಬಂಧಗಳಾಗಿವೆ.

(೩) **ವಿಲಂಬಿತಾವರ್ತಗತಿ:** ಇದು ಐದು ಮಾತ್ರೆಯ ಛಂದಃಖಂಡ (= ಗಣ)ದ ಪುನಃಪುನರಾವರ್ತನದಿಂದ ಉನ್ಮೀಲಿಸುತ್ತದೆ. ಭುಜಂಗಪ್ರಯಾತ, ಶಂಭುನಟನ, ವನಮಯೂರ, ಲಲಿತವೃತ್ತ ಇತ್ಯಾದಿ ಸತಾನವೃತ್ತಗಳೂ; ವಿಚಿತ್ರ-ಲಲಿತ(= ಅಲಸಗತಿ), ಲಲಿತಪದ(= ಕುಮುದಲತಾ) ಇತ್ಯಾದಿ ವಿತಾನವೃತ್ತಗಳೂ; ವಾರ್ಧಕಷಟ್ಪದಿ, ಕುಸುಮಷಟ್ಪದಿ, ಲಲಿತರಗಳೆ ಇತ್ಯಾದಿ ಮಾತ್ರಾಬಂಧಗಳೂ ಈ ಗತಿಯ ಛಂದೋಬಂಧಗಳಾಗಿವೆ.

(೪) **ದ್ರುತಮಧ್ಯಾವರ್ತಗತಿ:** ಇದು ಮೂರು ಮಾತ್ರೆಯ ಮತ್ತು ನಾಲ್ಕು ಮಾತ್ರೆಯ ಛಂದಃಖಂಡ(=ಗಣ)ಗಳ ಸಂಯೋಗದ ಪುನಃಪುನರಾವರ್ತನದಿಂದ ಉನ್ಮೀಲಿಸುತ್ತದೆ. ಮಲ್ಲಿಕಾಮಾಲೆ, ತರಳ, 'ಕುಸುಮಾಂಘ್ರಿಪ' ಇತ್ಯಾದಿ ವೃತ್ತಗಳೂ; ಭಾಮಿನೀಷಟ್ಪದಿ, 'ತ್ರಿವುಡೆ', ಪಂಜೆಯವರು ತಮ್ಮ 'ಡೊಂಬರ ಚೆನ್ನೆ'

ಮೊದಲಾದುವುಗಳಲ್ಲಿ ಪ್ರಯೋಗಮಾಡಿದ ಅದೊಂದು ಛಂದೋರಚನೆ[58] ಇತ್ಯಾದಿ ಮಾತ್ರಾಬಂಧಗಳೂ ಈ ಗತಿಯ ಛಂದೋಬಂಧಗಳಾಗಿವೆ.

(೫) **ಸಂಕಲಿತದ್ರುತಾವರ್ತಗತಿ** : ಮೂರು ಮಾತ್ರೆಯ ಎರಡು ಛಂದಃಖಂಡಗಳು ಗಣಸಂಧಾನಾದಿಗಳ ಫಲವಾಗಿ ಏಕೀಭವಿಸಿದಾಗ ಉಂಟಾಗುವ (೪+೨ ಎಂದೋ ೨+೪ ಎಂದೋ ವಿಭಕ್ತವಾಗುವಂತಹ) ಆರು ಮಾತ್ರೆಯ ಛಂದಃಖಂಡದ ಪುನಃಪುನರಾವರ್ತನದಿಂದ ಈ ಗತಿ ಉನ್ಮೀಲಿಸುತ್ತದೆ. ಮೃಗನೇತ್ರ, ಶ್ಯಾಮಾಂಗಿ, ತ್ವರಿತಗತಿ ಇತ್ಯಾದಿ ವೃತ್ತಗಳೂ; ಕರ್ಣಾಟಕ ವಿಷಯ–

---

58. ಪಂಜೆಯವರ ಆ ರಚನೆಯ ಸ್ವರೂಪ ಹೀಗೆ:

> ∪∪∪ –∪∪ ∪∪∪ – ∪∪
> ಬೆರಗು ಕಣ್ಣಿನ । ಬೆರಳ ಮೀಸೆಯ ।
> ∪∪∪ – ∪∪ – ∪ –
> ಬೆರಸಿ ದಾ ನಗು । ವೋರೆ ಯ– ॥
> ∪∪∪ –∪∪ – ∪ – ∪∪
> ಅರಸ ನಿದ್ದನು । ಡೊಂಬ ರಾಟಕೆ ।
> ∪∪∪ –∪∪ ∪ ∪∪ –
> ಸೆರೆಯ ಸಿಕ್ಕಿದ । ಮನದ ಲಿ– ॥ . ॥

'ಗೋವಿನ ಕಥೆ' ಎಂದು ಪ್ರಸಿದ್ಧವಾದ ಒಂದು ಹಾಡಿನ 'ಮಟ್ಟ'ನಲ್ಲಿ ನಿರ್ಮಿಸಿದ ರಚನೆ ಇದು. ಆದರೆ 'ಗೋವಿನಹಾಡಿ'ಗೂ ಪಂಜೆಯವರ ರಚನೆಗೂ ಸಂಪೂರ್ಣ ಸಾಮ್ಯವಿಲ್ಲ. ಗೋವಿನಹಾಡು ಯಥಾಕ್ಷರಗುರುಲಘುಪರಿಮಾಣದ ಮಾತ್ರಾಬಂಧವಲ್ಲ; ಅದರ ಅಕ್ಷರಗಳನ್ನು ಕೆಲವೆಡೆಗಳಲ್ಲಿ ವಿಕರ್ಷಿಸಿ, ಕೆಲವೆಡೆಗಳಲ್ಲಿ ತೇಲಿಸಿ ಧಾಟಿಗೆ ಹೊಂದಿಸಿಕೊಳ್ಳಬೇಕಾಗುತ್ತದೆ. ಉದಾ:

> ಧರಣಿಮಂಡಲ । ಮಧ್ಯದೊಳಗೆ* ।
> ಮೆರೆಯುತಿಹ ಕ । ರ್ಣಾಟದೇಶದಿ ।
> ಇರುವ ಕಾಳಿಂ★ಗ । ನೆಂಬ ಗೊಲ್ಲನ ।
> ಪರಿಯ ನಾನೆಂ★ತು । ಪೇಳ್ವೆನು– ॥ . ॥

ಮೇಲೆ * ಈ ಗುರುತು ಹಾಕಿರುವಲ್ಲಿ 'ಗೆ' ಎಂಬ ಲಘ್ವಕ್ಷರವನ್ನು ವಿಕರ್ಷಿಸಿ ಗುರುವಾಗಿಯೂ, ★ ಈ ಗುರುತು ಹಾಕಿರುವಲ್ಲಿರುವ 'ಳಿಂ' ಮತ್ತು 'ನೆಂ' ಎಂಬ ಗುರ್ವಕ್ಷರಗಳನ್ನು ತೇಲಿಸಿ ಲಘುವಾಗಿಯೂ ಉಚ್ಚರಿಸಿದರೆ ಮಾತ್ರ ಧಾಟಿ ಕೂಡಿಬರುತ್ತದೆ. ಪಂಜೆಯವರ ರಚನೆಯಲ್ಲಿ ಇಂತಹ ಸಂದರ್ಭಗಳಿಲ್ಲದಿರುವುದರಿಂದ ಅದು ಶುದ್ಧವಾದ ಮಾತ್ರಾಬಂಧವಾಗಿದೆ. [ಪಂಜೆಯವರ ರಚನೆ ಅರ್ಧಸಮಛಂದೋಬಂಧವಾಗಿದ್ದು, ಅದರ ಒಂದು 'ಸೂಲಿ'ನಲ್ಲಿ (ಸೂಲು = stanza) ಎರಡು ವಿರಾಮಸ್ಥಾನಗಳಿವೆ. ಆದರೆ ಗೋವಿನ ಹಾಡಿನಲ್ಲಿ ಸೂಲಿನ ಕೊನೆಯಲ್ಲಿ ಮಾತ್ರ ವಿರಾಮಸ್ಥಾನವಿದೆ; ಆದುದರಿಂದ ಅದು ಅರ್ಧಸಮಬಂಧವಲ್ಲ; ಅದರ ಮೂರು ಪಾದಗಳು ಮಾತ್ರ ಸಮಪರಿಮಾಣದವುಗಳಾದುದರಿಂದ, ಅದನ್ನು ಸಮಪಾದಬಂಧವೆನ್ನುವಂತೆಯೂ ಇಲ್ಲ. ಈ ಕಾರಣಗಳಿಂದ ಅದು ಕೇವಲ ತಾಳನಿಯಮಿತವಾದ 'ಪದ'ಗಳ ವರ್ಗಕ್ಕೆ ಸೇರಿದುದೆನ್ನುವ ಹಾಗಿದೆ. ಪಂಜೆಯವರು ಅದರ ಸ್ವರೂಪವನ್ನು ಪರಿಷ್ಕರಿಸಿ ಶುದ್ಧವಾದೊಂದು ಅರ್ಧಸಮ ಮಾತ್ರಾಬಂಧವನ್ನಾಗಿ ಪರಿವರ್ತಿಸಿಕೊಂಡಿದ್ದಾರೆ.]

ಜಾತಿಗಳಲ್ಲೊಂದಾದ "ಮದನವತಿ" ಮತ್ತು ಹಳೆಯ ಯಕ್ಷಗಾನ ಪ್ರಬಂಧಗಳಲ್ಲಿ ಅಲ್ಲಲ್ಲಿ ಕಂಡುಬರುವ (ಹಿಂದೆ ಉದಾಹರಿಸಿರುವಂತಹ) ಒಂದು ಪದ್ಯರೂಪ ಹಾಗೂ ಅದರ ಅನುಕರಣೆಯಿಂದ ಹುಟ್ಟಿದ ಆಧುನಿಕ ರಚನೆಗಳು ಇತ್ಯಾದಿ ಮಾತ್ರಾಬಂಧಗಳೂ ಈ ಗತಿಯನ್ನು ಪ್ರಕಟಿಸುವ ಛಂದೋಬಂಧಗಳಾಗಿವೆ. (ಈ ಹಿಂದೆ IV ಎಂದು ಗುರುತಿಸಿ ಉದಾಹರಿಸಿದ ರಚನೆಯಲ್ಲಿ ಇರುವ ಹಾಗೆ, ಸಂಕಲಿತದ್ರುತಾವರ್ತಗಳೊಡನೆ ಕೇವಲ ದ್ರುತಾವರ್ತದ್ವಂದ್ವಗಳೂ ಸೇರಿ-ಕೊಂಡಿರುವಲ್ಲಿ - ಆ ಗತಿಯನ್ನು "ಸಂಕೀರ್ಣದ್ರುತಾವರ್ತಗತಿ" ಎಂದೂ, ಅದು ಸಂಕಲಿತದ್ರುತಾವರ್ತಗತಿಯದೇ ಒಂದು ಪ್ರಭೇದವೆಂದೂ ಹೇಳುವುದು ಯುಕ್ತ.)[59]

(೬) **ಸಂಕಲಿತಮಧ್ಯಾವರ್ತಗತಿ:** ನಾಲ್ಕು ಮಾತ್ರೆಯ ಎರಡು ಛಂದಃಖಂಡಗಳು ಗಣಸಂಧಾನಾದಿಗಳ ಫಲವಾಗಿ ಏಕೀಭವಿಸಿದಾಗ ಉಂಟಾಗುವ (೩ + ೫ ಎಂದೋ ೫ + ೩ ಎಂದೋ ವಿಭಕ್ತವಾಗುವಂತಹ) ಎಂಟು ಮಾತ್ರೆಯ

---

59. ತೀ.ನಂ.ಶ್ರೀಯವರ "ಸಮಾಲೋಕನ' (೧೯೫೮-ಪುಟ ೧೮೫)ದಲ್ಲಿ ಈ ಮಾತು-ಗಳಿವೆ:- "೮ (=೩+೫) ಮಾತ್ರೆಯ ಗಣವನ್ನು ಪಂಪನು ರಗಳೆಯೊಂದರಲ್ಲಿ (ಪಂಪಭಾರತ, ೩-೨೨) ಪ್ರಯೋಗಿಸಿದ್ದನು; ಹತ್ತು ಶತಮಾನಗಳೀಚೆಗೆ ಮತ್ತೆ ಅದು 'ಇಂಗ್ಲಿಷ್ ಗೀತಗಳ'ಲ್ಲಿ ತಲೆಯೆತ್ತಿತು. ಆರು ಮಾತ್ರೆಯ ಗಣದ ಧಾಟಿ ಮಾತ್ರ, ಈ ಲೇಖಕನಿಗೆ ತಿಳಿದಮಟ್ಟಿಗೆ, ಕನ್ನಡಕ್ಕೆ ಹೊಚ್ಚ ಹೊಸದು; 'ಅಶ್ವತ್ಥಾಮನ್' ನಾಟಕದಲ್ಲೇ ಅದರ ಆವಿರ್ಭಾವವಾದದ್ದು." - ಎಂಟು ಮಾತ್ರೆಯ ಗಣ(=ಆವರ್ತ)ದ ಧಾಟಿಯಾಗಲಿ, ಆರು ಮಾತ್ರೆಯ ಗಣ (=ಆವರ್ತ)ದ ಧಾಟಿಯಾಗಲಿ - ಇಪ್ಪತ್ತನೆಯ ಶತಮಾನದ "ಇಂಗ್ಲೀಷ್ ಗೀತಗಳ"ಲ್ಲಿ ಮತ್ತು "ಅಶ್ವತ್ಥಾಮನ್" ನಾಟಕದಲ್ಲಿ (ಅನುಕ್ರಮವಾಗಿ) ಪುನರ್ಜನ್ಮವನ್ನು ಪಡೆದ ಹಾಗೂ ಹೊಚ್ಚಹೊಸತಾಗಿ ಆವಿರ್ಭವಿಸಿದ ಧಾಟಿಗಳೆಂಬ ಶ್ರೀಯುತರ ಮಾತು ಕೇವಲ ಅವಿಚಾರಿತ-ರಮಣೀಯವೆಂಬುದು, ಈ ನಿಬಂಧದಲ್ಲಿ ಈ ಹಿಂದೆ ಸೋದಾಹರಣವಾಗಿ ಮಾಡಲಾದ ನಿರೂಪಣೆಯಿಂದ ಸುವ್ಯಕ್ತವಾಗದಿರದು. ಇದರ ಹೊರತಾಗಿ, - ಐದಕ್ಷರದೊಳಗಿನ ಪಾದ ಪರಿಮಾಣದ ಸಮವೃತ್ತಗಳೊಳಗೆ, ಛಂದೋಂಬುಧಿಯಲ್ಲಿ ಎಷ್ಟು ವೃತ್ತಗಳು ಪ್ರೋಕ್ತವಾಗಿ-ವೆಯೋ ಅಷ್ಟನ್ನು ಮಾತ್ರ ಪರಾಂಬರಿಸಿದರೂ ಸಾಕು, - ಮೂರು ಮಾತ್ರೆಯ ಆವರ್ತ (=ಗಣ)ದಿಂದ ಮೊದಲ್ಗೊಂಡು ಎಂಟು ಮಾತ್ರೆಯ ಆವರ್ತ(=ಗಣ)ದ ವರೆಗಿನ ಧಾಟಿಗಳೆಲ್ಲವೂ ಅಲ್ಲಿ ಪ್ರತ್ಯಕ್ಷವಾಗುತ್ತವೆ! ಪಂಪನ ಕಾಲದ ಅನಂತರ, ಇಪ್ಪತ್ತನೆಯ ಶತಾನದವರೆಗೆ ಆಗಿಹೋದ ಕವಿಗಳಲ್ಲಿ ಎಲ್ಲರೂ ಎಂಟು ಮಾತ್ರೆಯ ಗಣ(=ಆವರ್ತ)ದ ಧಾಟಿಯನ್ನು ಬಿಟ್ಟುಬಿಟ್ಟವರಲ್ಲವೆಂಬುದನ್ನು - ದುರ್ಗಸಿಂಹ, ಸಿಂಗರಾರ್ಯ ಮೊದಲಾದ-ವರು ರಚಿಸಿದ ರಥೋದ್ಧತಾವೃತ್ತಗಳು ಮಾತ್ರವಲ್ಲ. ಯಕ್ಷಗಾನಕವಿಗಳು ಹಾಗೂ ದಾಸಕವಿ-ಗಳು ರಚಿಸಿದ (ಮಾತ್ರಾನಿಯಮಬದ್ಧ) 'ಪದ'ಗಳೂ ಉದ್ಘೋಷಿಸುತ್ತವೆ. ಆರು ಮಾತ್ರೆಯ ಗಣ(=ಆವರ್ತ)ದ ಧಾಟಿಯನ್ನಂತೂ - ಕನ್ನಡದ ಅತಿಪುರಾತನ ಬಂಧಗಳೊಳಗೊಂದಾದ "ಮದನವತಿ" ಎಂಬ (ಮಾತ್ರಾನಿಯಮಬದ್ಧವಾದ) ಕರ್ಣಾಟಕವಿಷಯಜಾತಿಯಲ್ಲಿ ಕಾಣಬಹುದು; ಅಲ್ಲದೆ, ಹಳೆಯ ಯಕ್ಷಗಾನಪ್ರಬಂಧಗಳಲ್ಲಿ ಅದರ ಪ್ರಾಚುರ್ಯವನ್ನೂ ನೋಡಬಹುದು. ಈ ಹಲವು ವಸ್ತುಸ್ಥಿತಿಗಳೊಳಗೆ ಯಾವುದೊಂದು ಸಹ, 'ಸಮಾಲೋಕನ'ಕರ್ತರ ದೃಷ್ಟಿಗೆ ಬೀಳದಿದ್ದುದು ಆಶ್ಚರ್ಯಕರವಾಗಿದೆ!

ಛಂದಃಖಂಡದ ಪುನಃಪುನರಾವರ್ತನದಿಂದ ಈ ಗತಿ ಉನ್ಮೀಲಿಸುತ್ತದೆ. ರಥೋದ್ಧತಾ, ಚಂದ್ರವರ್ತ್ಮ, ತರಂಗ ಇತ್ಯಾದಿ ವೃತ್ತಗಳೂ 54ನೆಯ ಟಿಪ್ಪಣಿಯಲ್ಲಿ ಉದಾಹರಿಸಲಾದ (ಪಂಪಭಾರತದ) ರಘಟಾವಿಶೇಷದಂತಹ ಮಾತ್ರಾಬಂಧ-ಗಳೂ ಈ ಗತಿಯನ್ನು ಪ್ರಕಟಿಸುವ ಛಂದೋಬಂಧಗಳಾಗಿವೆ. (ಅದೇ ಟಿಪ್ಪಣಿ-ಯಲ್ಲಿ a, b, c ಎಂದು ಗುರುತಿಸಿ ಉದಾಹರಿಸಿದ ರಚನೆಗಳಲ್ಲಿ ಹೇಗೋ ಹಾಗೆ – ಸಂಕಲಿತಮಧ್ಯಾವರ್ತಗಳೊಂದಿಗೆ ಕೇವಲ ಮಧ್ಯಾವರ್ತದ್ವಂದ್ವಗಳೂ ಸೇರಿ-ಕೊಂಡಿರುವಲ್ಲಿ, ಆ ಗತಿಯನ್ನು "ಸಂಕೀರ್ಣಮಧ್ಯಾವರ್ತಗತಿ" ಎಂದೂ, ಅದು ಸಂಕಲಿತ ಮಧ್ಯಾವರ್ತಗತಿಯದೇ ಒಂದು ಪ್ರಭೇದವೆಂದೂ ಹೇಳುವುದು ವಿಹಿತವಾಗಿದೆ.)

ಹೀಗೆ ಆರು ಬಗೆಯಾಗಿ ಕಂಡುಬರುವ ಆವರ್ತಗತಿಗಳೊಳಗೆ ಮೊದಲಿನ ನಾಲ್ಕು ಗತಿಭೇದಗಳು, ಗುರುಲಘುವಿನ್ಯಾಸವಿಶೇಷದ ಅಥವಾ ಯತಿನಿವೇಶನ-ಪ್ರಕಾರದ ನೆರವಿನ ಅಪೇಕ್ಷೆ ಇಲ್ಲದೆ, ಕೇವಲ ಮಾತ್ರಾಸಂಖ್ಯಾಪರಿಮಿತಿಯುಳ್ಳ ಛಂದಃಖಂಡಗಳ ಪುನಃಪುನರಾವರ್ತನದಿಂದಲೇ ಉನ್ಮೀಲಿಸಬಲ್ಲವುಗಳಾದ ಕಾರಣ, ಇವನ್ನು "ಶುದ್ಧಾವರ್ತಗತಿ"ಗಳೆಂದು ಹೆಸರಿಸಬಹುದಾಗಿದೆ.[60] ಉಳಿದೆ-ರಡು ಆವರ್ತಗತಿಭೇದಗಳು, ಗುರುಲಘುವಿನ್ಯಾಸವಿಶೇಷದ ಅಥವಾ ಯತಿನಿವೇ-ಶನಪ್ರಕಾರದ ನೆರವಿಲ್ಲದೆ ಉನ್ಮೀಲಿಸಲಾರದವುಗಳಾದುದರಿಂದ, ಅವು 'ಶುದ್ಧಾ-ವರ್ತಗತಿ'ಗಳೆಂಬ ಹೆಸರಿಗೆ ಅರ್ಹವಲ್ಲ. ಆ ಎರಡು ಆವರ್ತಗತಿಗಳು ಅಕ್ಷರಗತಿ ವಿಶೇಷದ ಅಥವಾ ಯತಿಯ ಸಹಯೋಗದಿಂದ ಉತ್ಪನ್ನವಾಗುವ ಕಾರಣ, ಅವನ್ನು "ಮಿಶ್ರಾವರ್ತಗತಿ"ಗಳೆಂದು ಕರೆಯಬಹುದಾಗಿದೆ.

[ಈ ಮೇಲೆ ನಿರೂಪಿಸಿದ ಆವರ್ತಗತಿಪ್ರಕಾರಗಳನ್ನು ಪ್ರಕಟಿಸುವ ನಾನಾಛಂದೋಬಂಧಗಳಲ್ಲದೆ, ೪+೩=೭ ಮಾತ್ರೆಯ ಆವರ್ತಗಳನ್ನು ಪ್ರಕಟಿಸುವ ನಾಲ್ಕಕ್ಷರಗಳ ಪಾದದ ಒಂದು ಸಮವೃತ್ತವೂ ಕೆಲವು ಛಂದೋಗ್ರಂಥಗಳಲ್ಲಿ ಲಕ್ಷಿತವಾಗಿದೆ. ನಾಗವರ್ಮ ಜಯಕೀರ್ತಿಗಳು ಅನುಕ್ರಮವಾಗಿ ಅದನ್ನು "ಕಾಮಾಂಗ" ಹಾಗೂ "ತಾರಾ" ಎಂದು ಹೆಸರಿಸಿದ್ದಾರೆ. ಅದರ ಸ್ವರೂಪ ಹೀಗೆ;

– – + ∪ – – – + ∪ ∪ –<br>
ವ್ಯೋಮಂ ಹರಂ । ತಾಮಾ ಗಿರಲ್ ॥<br>
– – + ∪ – – – + ∪ –<br>
ಶ್ಯಾಮಾಂ ಗಿ ಕೇಳ್ । ಕಾಮಾಂ ಗಮಂ ॥ . ॥ (ಛಂದೋಂಬುಧಿ)

---

60. ನಡುಗನ್ನಡದ ಷಟ್ಪದಿಗಳೆಲ್ಲವೂ ಶುದ್ಧಾವರ್ತಗತಿಗಳ ಅಡಿಗಟ್ಟಿನಲ್ಲಿಯೇ ಕಟ್ಟಲ್ಪಟ್ಟ ಛಂದೋಬಂಧಗಳು. ಈ ರಹಸ್ಯವನ್ನು ಮತ್ತು ಛಂದೋಬಂಧಗಳಲ್ಲಿ ಗ್ರಾಹ್ಯವಾಗತಕ್ಕ ಆವರ್ತಗಳ ಮಾತ್ರಾಪರಿಮಿತಿಯನ್ನು (ಟಿಪ್ಪಣಿ 51 ನೋಡಿರಿ) ಮನವರಿಕೆ ಮಾಡಿಕೊಂಡರೆ – ಷಟ್ಪದಿಗಳು ಅಷ್ಟೇ ಏಕೆ? ಎಂಬ – ಕೆಲವರ ತಲೆಯನ್ನು ತಿನ್ನುತ್ತಿರುವ ಸಮಸ್ಯೆ ತಾನಾಗಿ ಮಾಯವಾಗುತ್ತದೆ.

ಆದರೆ ಈ ಗತಿಯು ದ್ರುತಮಧ್ಯಾವರ್ತಗತಿಯ ಪ್ರತೀಪರೂಪವಾಗಿರುವ ಕಾರಣ, ಆ ಗತಿಯಲ್ಲಿಯೇ ಅಡಕವಾಗುವುದರಿಂದ – (ಟಿಪ್ಪಣಿ 57 ನೋಡಿರಿ) ಅದನ್ನು ಈ ಆವರ್ತಗತಿಭೇದವಿವೇಚನೆಯಲ್ಲಿ ಕೈ ಬಿಡಲಾಗಿದೆ.[61] (ದ್ರುತಮಧ್ಯಾ-ವರ್ತಗತಿಯ ಪರಸ್ಪರ ಪ್ರತೀಪರೂಪವಾದ ಆವರ್ತಗಳನ್ನು ಸಂಯೋಜಿಸಿದಾಗ, ಆವರ್ತಗಳು ಕಣ್ಮರೆಯಾಗಿ ಅದೊಂದು ವಿಷಮಗತಿಬಂಧವಾಗಿ ಭಾಸವಾಗುತ್ತ-ದೆಂಬುದನ್ನು ಸುಪ್ರಸಿದ್ಧವಾದ 'ವಸಂತತಿಲಕಾವೃತ್ತ'ವು ತೋರಿಸಿಕೊಡುತ್ತದೆ. ಈ ವೃತ್ತವನ್ನು ಏಳು ಮಾತ್ರೆಯ ಆವರ್ತಗಳ ಸತಾಲಬಂಧವೆಂದು ಸಾಧಿಸಬಹು-ದಾದರೂ – ಸಂಗೀತಶಿಕ್ಷಣವಿಲ್ಲದ ಸಾಮಾನ್ಯಪ್ರಜ್ಞೆಗೆ – ಆ ಆವರ್ತಗಳು ಪಠನ ಕಾಲದಲ್ಲಿ ಗೋಚರವಾಗುವುದಿಲ್ಲವೆಂಬುದು ಅನುಭವವೇದ್ಯ.) ಮತ್ತು –ವಿಶುದ್ಧ ತ್ರಿಮೂರ್ತಿಗಣ (= ಅಂಶಗಣ) ಬಂಧಗಳೆಲ್ಲವೂ ಲಯಾನ್ವಿತವೇ ಆಗಿರುವವಾ-ದರೂ, ಅವುಗಳ ಗತಿವಿಚಾರವನ್ನೂ ಇಲ್ಲಿ ಮಾಡಿಲ್ಲ. ಇದಕ್ಕೆ ಕಾರಣವೇನೆಂದರೆ – ಅವು ಛಂದಃಶಾಸ್ತ್ರಪ್ರೋಕ್ತವೇ ಆಗಿದ್ದು, ಅಕ್ಷರಸಂಖ್ಯೆಯ ಕನಿಷ್ಠಗರಿಷ್ಠಮಿತಿಗೆ ಬದ್ಧವಾದ ಛಂದೋಬಂಧವಿಶೇಷಗಳಾದರೂ – ಕೇವಲ ಯಥಾಕ್ಷರ ಗುರು-ಲಘೂಚ್ಚಾರವಿಷಯಕವಾದ ನಮ್ಮ ಪ್ರಕ್ರಮಕ್ಕೆ ಬಹಿರ್ಭೂತವಾದವುಗಳು; ಅಷ್ಟು ಮಾತ್ರವಲ್ಲ, – ಆ ಬಂಧಗಳನ್ನು ಪಠಿಸುವಾಗ, ನಿಯತಸ್ಥಾನಗಳಲ್ಲಿ ಅವುಗಳಿ-

---

61. ದ್ರುತಮಧ್ಯಾವರ್ತಗತಿಯ ಪ್ರತೀಪರೂಪವು ಛಂದೋಬಂಧಗಳಲ್ಲಿ ಮಾತ್ರವಲ್ಲ. 'ಗೇಯ ರಚನೆ'ಗಳಲ್ಲಿಯೂ ವಿರಳವಾಗಿದ್ದು – ಎಲ್ಲಿಯೋ ಒಮ್ಮೊಮ್ಮೆ ಕಾಣಿಸಿಕೊಳ್ಳುತ್ತದೆ. ವಾಲಿ ಸುಗ್ರೀವರ ಕಾಳಗವನ್ನು ವರ್ಣಿಸುವ ಯಕ್ಷಗಾನದ (ಆ ಗತಿವಿಶೇಷದ) 'ಪದ'ವೊಂದು, ಬಾಲ್ಯದಲ್ಲಿ ನನ್ನ ಕಿವಿಗೆ ಬಿದ್ದಿತ್ತು. ಅದರ ಒಂದೆರಡು ತುಣುಕುಗಳು ನನ್ನ ಸ್ಮೃತಿಯಲ್ಲಿ ಉಳಿದುಕೊಂಡಿವೆ. 'ಕಾಮಾಂಗ ವೃತ್ತ'ದ ಗತಿಯೂ ಆ 'ಪದ'ದ ಗತಿಯೂ ಅಭಿನ್ನ. ಆದರೆ ಆ 'ಪದ'ವು ಯಥಾಕ್ಷರಗುರುಲಘುವಾಗಿ ಉಚ್ಚರಿಸತಕ್ಕ ಪದ್ಯಬಂಧವಲ್ಲ. ಅದು ಕೆಲವೆಡೆಗಳಲ್ಲಿ ಲಘುವನ್ನು ಕರ್ಷಿಸಿ ಗುರುವಾಗಿಯೂ ಗುರುವನ್ನು ತೇಲಿಸಿ ಲಘುವಾಗಿಯೂ ಉಚ್ಚರಿಸಿ 'ಧಾಟಿ'ಯನ್ನು ಮೂಡಿಸಿಕೊಳ್ಳಬೇಕಾದ 'ಗೇಯಬಂಧ'. ನನ್ನ ಕಿವಿಗೆ ಬಿದ್ದಿರುವಂತೆ – ಅದರ 'ಶ್ರಾವಣರೂಪ' ಹೀಗೆ:

(೪)+ (೩) (೪) + (೩) (೪) + (೩) (೪) + (೩)

ನಿಲ್ಲೂ ನಿಲೂ । ನಿಲ್ಲೂ ನಿಲೂ । ನಿಲ್ಲೂ ನಿಲೆಂ । ದಗ್ರಾ ಭವಾ

ಕಲ್ಲೂ ಮರಾ । ದಲ್ಲೀ ರಣಾ । ಮಲ್ಲಾ ರುಮಾ । ವಲ್ಲಾ ಭನಾ ॥ . ॥

ಅರ್ಥಾನುಸಾರಿಯಾದ, ಅದರ 'ಚಾಕ್ಷುಷರೂಪ' ಹೀಗೆ;

ನಿಲ್ಲು ನಿಲ್ಲು । ನಿಲ್ಲು ನಿಲ್ಲು । ನಿಲ್ಲು ನಿಲ್ಲೆಂ । ದಗ್ರಭವ ॥
ಕಲ್ಲು ಮರ । ದಲ್ಲಿ ರಣ । ಮಲ್ಲ ರುಮಾ । ವಲ್ಲಭನ ॥ . ॥

ಇದರ ಸ್ವರೂಪ ಈ ಬಗೆಯದಾಗಿರುವುದರಿಂದ – ಇಲ್ಲಿ ನಮ್ಮ ವಿಚಾರಕ್ಕೆ ಒಳಪಟ್ಟಿರತಕ್ಕ ಯಥಾಕ್ಷರಗುರುಲಘುವಾದ ಛಂದೋಬಂಧಗಳೊಳಗೆ ಇದು ಸೇರುವಂತಿಲ್ಲವಾದರೂ, ಗತಿವಿಶೇಷಪರಿಚಯಕ್ಕಾಗಿ ಮಾತ್ರ ಇದನ್ನಿಲ್ಲಿ ಉದಾಹರಿಸಿದ್ದಾಗಿದೆ.

ಗೊದಗುವ ಕರ್ಷಣದ ಪರಿಣಾಮವಾಗಿ ಅವುಗಳಲ್ಲಿ ಉನ್ಮೀಲಿತವಾಗುವ ಆವರ್ತಗತಿಭೇದಗಳು, ಈ ಪರಿಚ್ಛೇದದಲ್ಲಿ ನಿರೂಪಿಸಲಾದ ಆವರ್ತಗತಿ-ಭೇದಗಳೊಳಗೇ ಅಡಕವಾಗುವಂಥವುಗಳೂ ಆಗಿರುತ್ತವೆ.][62]

---

62. ಬ್ರಹ್ಮ, ವಿಷ್ಣು, ರುದ್ರ ಎಂಬ ತ್ರಿಮೂರ್ತಿಗಣ(=ಅಂಶಗಣ)ಗಳಿಗೆ ಚಾಕ್ಷುಷ ಮತ್ತು ಶ್ರಾವಣ ಎಂಬ ಎರಡು ರೂಪಗಳಿರುತ್ತವೆ. ಚಾಕ್ಷುಷರೂಪದಲ್ಲಿ ಆ ಗಣಗಳ ಸಂಖ್ಯೆ ಅನುಕ್ರಮವಾಗಿ ೪, ೮, ೧೬ ಆಗಿರುವವಾದರೂ – ಶ್ರಾವಣರೂಪವನ್ನು ಪಡೆದಾಗ ಅವು ಎರಡೆರಡೇ ಆಗಿ ಪರಿಣಮಿಸುತ್ತವೆ. ಆ ಮೂರು ಗಣವರ್ಗಗಳಲ್ಲಿಯೂ ಆರಂಭದ ಎರಡು ಗಣಗಳು ಮಾತ್ರ ಯಥಾಕ್ಷರಗುರುಲಘುಗಳಾಗಿರುತ್ತವೆ. ಇತರ ಗಣಗಳ ಪ್ರಥಮಾಂಶ ಹೊರತು ಉಳಿದ ಅಂಶಗಳ ಲಘುಗಳು ಕರ್ಷಣೀಯವಾಗಿರುವುದರಿಂದ ಗುರೂಚ್ಚಾರವನ್ನು ಪಡೆಯುತ್ತವೆ. ಇದರಿಂದಾಗಿ ಆ ಗಣಗಳು ಸ್ವವರ್ಗದ ಆರಂಭದ ಎರಡು ಗಣಗಳೊಳಗೆ ಯಾವುದೊಂದರ ಪ್ರತಿಬಿಂಬಗಳಾಗಿ ಪರಿಣಮಿಸುತ್ತವೆ. [ಈ ತಥ್ಯದ ಹೆಚ್ಚಿನ ವಿವರವನ್ನು ತಿಳಿಯಲೆಳಸುವವರು ಈ ಲೇಖಕನ "ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ" (೧೯೭೭) ಹಾಗೂ "ಕನ್ನಡಛಂದಸ್ಸು" (೧೯೩೩) ಎಂಬ ನಿಬಂಧಗಳನ್ನು ನೋಡಬಹುದು. {ಪ್ರಸ್ತುತ ಸಂಪುಟದ ಎರಡನೆಯ ಭಾಗದಲ್ಲಿರುವ 'ಕನ್ನಡ ಛಂದಸ್ಸು' ಎಂಬ ಕೃತಿಯಲ್ಲಿ ಈ ಪ್ರಬಂಧಗಳೆಲ್ಲ ಎಡೆಪಡೆದಿವೆ. ಅಲ್ಲೇ ನೋಡಿಕೊಳ್ಳಬಹುದು. ೪, ೮ ಮತ್ತು ೧೬ ಬಗೆಯ ಬ್ರಹ್ಮವಿಷ್ಣು-ರುದ್ರಗಣಗಳ ವಿವರಕ್ಕೆ 'ಕನ್ನಡ ಛಂದಸ್ಸು' ನಿಬಂಧದ 9ನೆಯ ಟಿಪ್ಪಣಿಯನ್ನು ಪರಿಶೀಲಿಸಬಹುದು – ಸಂ.}] ಹೀಗೆ ಪರಿಣಮಿಸಿದಾಗ – (ಶ್ರಾವಣರೂಪದ) ಬ್ರಹ್ಮವಿಷ್ಣು ರುದ್ರಗಣಗಳು ಅನುಕ್ರಮವಾಗಿ ನಾಲ್ಕು, ಆರು, ಎಂಟು ಮಾತ್ರಾಕಾಲದವುಗಳಾಗುತ್ತವೆ. ತದನುಸಾರವಾಗಿ – ಬ್ರಹ್ಮಗಣಬಂಧಗಳಲ್ಲಿ ಮಧ್ಯಾವರ್ತಗತಿ ಉನ್ಮೀಲಿಸುತ್ತದೆ. ಉದಾ:

(೪) (೪) (೪) (೪) (೪) (೪) (೪)
ಬ್ರಮ್ಮ- । ನಿಂಗೆ- । ಜೋಡು । ಸ್ತೀನಿ-। ಯೆಂಡ_ । ಮುಟ್ಟಿ । ದ್ಯೆನ- ॥ . ॥

ಇದರ ಗಣವಾಚಕಗಳು : ಧಾತ್ರ್ಯ-। ಧಾತ್ರ್ಯ-। ಬ್ರಹ್ಮಂ । ಧಾತ್ರ್ಯ-। ಧಾತ್ರ್ಯ- । ಬ್ರಹ್ಮಂ । ಧಾತ್ರ್ಯ- ॥ . ॥ (ಆದರೆ, ನಾಗವರ್ಮನ ಮತದಂತೆ ಬ್ರಹ್ಮಗಣಬಂಧವಾಗಿರುವ "ಉತ್ಸಾಹಜಾತಿ"ಯು – ಅಕ್ಕರಿಕೆ ಮದನವತಿಗಳು ಹೇಗೋ ಹಾಗೆ – ಮಾತ್ರಾನಿಯಮಬದ್ಧವೂ ಆಗಿರುವುದರಿಂದ, ಅದರಲ್ಲಿ ಮಧ್ಯಾವರ್ತಗತಿ ಉನ್ಮೀಲಿಸುವುದಿಲ್ಲ; ಬದಲಾಗಿ, ಅಲ್ಲಿ ಗೋಚರಿಸುವ ಮೂರು ಮಾತ್ರೆಯ ಆವರ್ತಗಳ ಫಲವಾಗಿ ದ್ರುತಾವರ್ತಗತಿ ಉನ್ಮೀಲಿಸುತ್ತದೆ. ವಸ್ತುತಃ ಅದು ವಿಶುದ್ಧವಾದ ಅಂಶಗಣಬಂಧವಲ್ಲ. ಅದರ ಘಟಕಗಳೂ ಭೋಗಷಟ್ಪದಿಯ ಘಟಕಗಳೂ ಏಕಪ್ರಕಾರವಾಗಿದ್ದು, ತತ್ತ್ವತಃ ಅದು – ಜಯಕೀರ್ತಿ ಹೇಳುವಂತೆ – ಒಂದು ಮಾತ್ರಾ ಬಂಧವೇ ಆಗಿರುತ್ತದೆ.) ಯಾವುದೊಂದು ವಿಷ್ಣುಗಣಬಂಧದಲ್ಲಿ (ಹಾಗೂ ವಿಷ್ಣುಗಣ ಪ್ರಧಾನಬಂಧದಲ್ಲಿ) ಸಹಜವಾಗಿ ಉನ್ಮೀಲಿಸುವುದು (ಆರು ಮಾತ್ರೆಗಳ ಆವರ್ತದ) ಸಂಕಲಿತ ದ್ರುತಾವರ್ತಗತಿಯಾಗಿದೆ. ದಕ್ಷಿಣಕನ್ನಡದಲ್ಲಿ 'ಸಾಂಗತ್ಯ'ವನ್ನು ಸಾಮಾನ್ಯವಾಗಿ ಈ ಗತಿಯಲ್ಲಿ ಹಾಡುತ್ತಾರೆ; ಮತ್ತು ಯಕ್ಷಗಾನಪ್ರಯೋಗಗಳಲ್ಲಿಯೂ ಸಾಂಗತ್ಯವನ್ನು ಆರು ಮಾತ್ರೆಯ ರೂಪಕತಾಳದಲ್ಲಿ ಹಾಡುತ್ತಾರೆ; ಇದರಿಂದ ಅಲ್ಲಿ ಸಂಕಲಿತದ್ರುತಾವರ್ತಗತಿಯೇ ಅದಕ್ಕೆ ಒದಗುತ್ತದೆ. ಇತರ ವಿಷ್ಣುಗಣಪ್ರಧಾನಬಂಧಗಳನ್ನು ಯಕ್ಷಗಾನದಲ್ಲಿ ಬೇರೊಂದು ವಿಶಿಷ್ಟವಾದ ಗತಿಯಲ್ಲಿ ಹಾಡುವುದೇ ಹೆಚ್ಚಾಗಿ ಕೇಳಿಬರುತ್ತದೆ. ಘಟ್ಟದ ಮೇಲಿನವರು ಸಾಂಗತ್ಯವನ್ನು ಹಾಡುವ ರೀತಿ ಅದು. (ವಿಷ್ಣುಗಣಪ್ರಧಾನಬಂಧವಾದ 'ಪಿರಿಯಕ್ಕರ'ಕ್ಕೆ ಈ ವಿಶಿಷ್ಟವಾದ ಗತಿ

ಚೆನ್ನಾಗಿ ಒಪ್ಪುತ್ತದೆ.) ಆದರೆ ಆ ಗತಿ ಉನ್ಮೀಲಿಸಬೇಕಾದರೆ – ವಿಷ್ಣುಗಣದ ಸಹಜೋ-ಚ್ಚಾರದಲ್ಲಿ ಗೋವಿಂದಂ । ಜಲಜಾಕ್ಷಂ । – ಹೀಗೆ ಆರು ಮಾತ್ರೆಯದಾಗುವ ಆವರ್ತವನ್ನು ಏಳು ಮಾತ್ರಾಕಾಲದ ಆವರ್ತವಾಗಿ ಪರಿವರ್ತಿಸಬೇಕು. ಆ ಪರಿವರ್ತನಕ್ರಮದಲ್ಲಿಯೂ ಒಂದು ವೈಶಿಷ್ಟ್ಯವಿದೆ; ಪ್ರತಿಯೊಂದು ಆವರ್ತದಲ್ಲಿ ಎರಡು ಮಾತ್ರಾಕಾಲಗಳು ಕಳೆದೊಡನೆ ಒಂದು ಮಾತ್ರಾಕಾಲವನ್ನು ನಿಃಶಬ್ದವಾಗಿ ಕಳೆದು, ಮತ್ತೆ ಮುಂದಿನ ಭಾಗವನ್ನು ಎತ್ತಿಕೊಂಡು ಆವರ್ತವನ್ನು ಪೂರ್ತಿಗೊಳಿಸುವ ಮೂಲಕ ಏಳು ಮಾತ್ರೆಯ ಆವರ್ತವು ಸಾಧಿತವಾಗುತ್ತದೆ. (ಈ ಗತಿಸ್ವರೂಪದ ಹೆಚ್ಚಿನ ಪರಿಚಯಕ್ಕೆ, ಈ ಹಿಂದೆ ಸೂಚಿಸಿದ "ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ" ಎಂಬ ನಿಬಂಧವನ್ನು ನೋಡಬಹುದು.) ಹೀಗೆ ಇದೊಂದು ಪರಿವರ್ತಿತ-ಗತಿಯಾಗಿರುವುದರಿಂದ – ವಿರಾಮಾದಿ ವಿಧಾನಗಳಿಂದ ಯಾವುದೊಂದು ಲಯಾನ್ವಿತ ಛಂದೋಬಂಧದ ಗತಿಯನ್ನಾದರೂ ಪರಿವರ್ತಿಸುವುದು ಅಸಾಧ್ಯವಲ್ಲವಾದುದರಿಂದ – ಈ ಗತಿವಿಶೇಷವನ್ನು ವಿಷ್ಣುಗಣಬಂಧದ ಸಹಜ ಗತಿ ಎಂದು ಹೇಳುವುದಕ್ಕಾಗುವುದಿಲ್ಲ; ಅತಏವ ಛಂದೋಬಂಧಗಳಲ್ಲಿ ಉನ್ಮೀಲಿಸುವ ಆವರ್ತಗತಿಭೇದಗಳೊಳಗೆ ಇದನ್ನು ಗಣಿಸಬೇಕಾಗಿಯೂ ಇಲ್ಲ. ಯಕ್ಷಗಾನಪರಿಭಾಷೆಯಲ್ಲಿ ಈ ಗತಿಗೆ ಇರುವ "ಕೋರೆ" (=ಓರೆ, ವಕ್ರ) ಎಂಬ ಹೆಸರು ಇದರ ಸ್ವಭಾವವನ್ನು ಯಥಾವತ್ತಾಗಿ ತಿಳಿಸುವ ಅನ್ವರ್ಥನಾಮವಾಗಿದೆ. (ಯಥಾಗಣವಾಗಿ ಆರು ಮಾತ್ರೆಯ ಆವರ್ತದ) ವಿಷ್ಣುಗಣಬಂಧವನ್ನು 'ಕೋರೆ' ಮಾಡಿ ಏಳು ಮಾತ್ರೆಯ ಆವರ್ತದ ಬಂಧವಾಗಿ ಪರಿವರ್ತಿಸಿ ಮಧ್ಯಮವೇಗದಲ್ಲಿ ಹಾಡಿದಾಗ ಆ 'ತಾಳಮಾನ'ವನ್ನು 'ಅಷ್ಟತಾಳ'ವೆಂದೂ, ದ್ರುತವೇಗದಲ್ಲಿ ಹಾಡಿದಾಗ ಅದನ್ನು "ತ್ರಿತ್ರೈ" ತಾಳವೆಂದೂ ಹೇಳು-ವುದು ಯಕ್ಷಗಾನದ ಪರಂಪರಾಗತ ಸಂಪ್ರದಾಯ. [ಯಕ್ಷಗಾನಸಂಪ್ರದಾಯದಂತೆ, ಪ್ರಾಯಶಃ ದಕ್ಷಿಣ ಕನ್ನಡದಲ್ಲಿ ಮಾತ್ರ ರೂಢವಾಗಿರುವ 'ಅಷ್ಟತಾಳ'ವೆಂಬ ಹೆಸರು ಈ ತಾಳದ ನಿಜ-ನಾಮಧೇಯವಲ್ಲ; 'ಅಷ್ಟ' = 'ಎಂಟು' ಎಂಬ ಸಂಖ್ಯೆಗೂ ಈ ತಾಳಕ್ಕೂ ಯಾವ ಸಂಬಂಧವೂ ಇಲ್ಲ. ಇದು 'ಅಟ್ಟತಾಳ' ಎಂಬ ಹೆಸರನ್ನು ಉಜ್ಜ್ವಲೀಕರಿಸಿ ಅಜ್ಞರು ರೂಢಿಗೆ ತಂದ ಹೆಸರು. ಹಿಂದಿನ ಕಾಲದಲ್ಲಿ ಈ ತಾಳಕ್ಕೆ 'ಅಟ್ಟತಾಳ' ಎಂಬ ಹೆಸರೇ ಸರ್ವತ್ರ ರೂಢವಾಗಿತ್ತೆಂದು ತಿಳಿದುಬರುತ್ತದೆ. ತಿರುಮಲಾರ್ಯನ "ಗೀತಗೋಪಾಲ" ಎಂಬ ಗೇಯ-ಪ್ರಬಂಧದಲ್ಲಿ ಈ ತಾಳಕ್ಕೆ "ಅಟ್ಟತಾಳ" ಎಂಬ ಹೆಸರೇ ಇರುವುದಾಗಿದೆ. ಈ 'ಅಟ್ಟತಾಳ' ಎಂಬ ಹೆಸರಾದರೂ ಆ ಪದದ ಮೂಲಸ್ವರೂಪವೆಂದು ಹೇಳುವಂತಿಲ್ಲ. ದೇಶೀತಾಳ-ಗಳಲ್ಲೊಂದೆಂದು ಸಂಸ್ಕೃತಸಂಗೀತಶಾಸ್ತ್ರಗ್ರಂಥಗಳಲ್ಲಿ ಹೇಳಲ್ಪಟ್ಟಿರುವ "ಅಡ್ಡತಾಲ"ವೆಂಬ ಪ್ರಾಕೃತನಾಮವು ದ್ರಾವಿಡೋಚ್ಚಾರದಲ್ಲಿ 'ಅಟ್ಟತಾಳ' ಎಂಬ ರೂಪವನ್ನು ಪಡೆದ ಹಾಗೆ ಕಾಣುತ್ತದೆ. 'ಅಡ್ಡ' ಎಂಬುದು ಸಂಸ್ಕೃತದ 'ಅರ್ಧ' ಎಂಬುದರ ಅಪಭ್ರಂಶವಾಗಿರುವುದ-ರಿಂದ, 'ಅಡ್ಡತಾಲ'ವೆಂಬುದರ ಅರ್ಥವು "ಅರ್ಧತಾಳ'ವೆಂದೇ ಆಗಿತ್ತೋ ಏನೋ. ಈ ಊಹೆ ನಿಜವೆಂದಾದರೆ – ಈ ತಾಳಕ್ಕೆ ಈ ಹೆಸರು ಅನ್ವರ್ಥವೆನ್ನಬಹುದು. ಏಕೆಂದರೆ – "ಕೋರೆ" ಎಂಬ ಹೆಸರಿನ ಈ ತಾಳವನ್ನು ಏಳು ಮಾತ್ರೆಯ ತಾಳವೆನ್ನುವುದರ ಬದಲಾಗಿ – ಮೂರೂವರೆ ಮಾತ್ರೆಯ ತಾಳವೆಂದೇ ಹೇಳುವುದು ಪರಂಪರಾಗತ ಸಂಪ್ರದಾಯ-ವಾಗಿರುತ್ತದೆ.] ತಾತ್ಪರ್ಯವೇನೆಂದರೆ – ವಿಷ್ಣುಗಣಬಂಧಗಳ ಪಠನಗಾಯನಗಳಲ್ಲಿ ಶ್ರವಣ-ಗೋಚರವಾಗುವ ಏಳು ಮಾತ್ರೆಗಳ (ಅಥವಾ ಮೂರೂವರೆ ಮಾತ್ರೆಗಳ) ಆವರ್ತದ 'ಕೋರೆ' ಎಂಬ ಗತಿವಿಶೇಷವು – ಛಂದೋನಿಶ್ಚಿತವಾಗಿರುವ, ಅತಏವ ತಾಳಸ್ವರೂಪ ನಿಯಾಮಕ-ವಾಗಿರುವ, ಒಂದು ಆವರ್ತಗತಿಭೇದವಾಗಿರದೆ – ತಾಳಸ್ವರೂಪದಿಂದ ನಿಯಂತ್ರಿತವಾಗುವ

ಆವರ್ತಗತಿವಿಶೇಷವಾಗಿರುತ್ತದೆ. 'ಕೋರೆ'ಯಲ್ಲಿಯ ಹಾಗೆ ಆವರ್ತದ ಮೂರನೆಯ ಮಾತ್ರಾಕಾಲವು ನಿಃಶಬ್ದವಾಗಿರದೆ – ಆವರ್ತದ ಏಳು ಮಾತ್ರೆಗಳೂ – 'ಸಶಬ್ದ'ವಾಗಿದ್ದರೆ, ಅರ್ಥಾತ್ ಛಂದೋನಿಷ್ಠಿತವಾಗಿದ್ದರೆ, ಆ ತಾಳಮಾನವು "ತ್ರಿವುಡೆ"ಯಾಗಿ ಪರಿಣಮಿಸುತ್ತದೆ; ಮತ್ತು ಆಗ ಅಲ್ಲಿ ಪ್ರಕಟವಾಗುವುದು ದ್ರುತಮಧ್ಯಾವರ್ತಗತಿಯಾಗಿರುತ್ತದೆ. ಇನ್ನು-ಚಾಕ್ಷುಷರೂಪದಲ್ಲಿ ೧೬ ಆಗಿರುವ ರುದ್ರಗಣಗಳ ಶ್ರಾವಣರೂಪವು ಗಂಗಾಧೀಶಂ । ಗಿರಿಜಾಕಾಂತಂ । – ಈ ಎರಡರೊಳಗೆ ಯಾವುದಾದರೊಂದಾಗಿರುತ್ತದೆ; ಇದರಿಂದ ರುದ್ರಗಣಗಳೆಲ್ಲವೂ (ಶ್ರಾವಣರೂಪದಲ್ಲಿ) ಎಂಟು ಮಾತ್ರೆಯವಾಗುವವಾದರೂ –ರುದ್ರಗಣ ಬಂಧಗಳ ಗತಿಗೂ (ಶ್ರಾವಣರೂಪದಲ್ಲಿ ನಾಲ್ಕು ಮಾತ್ರೆಯ ಆವರ್ತಗಳನ್ನು ಹೊಮ್ಮಿಸುವ) ಬ್ರಹ್ಮಗಣಬಂಧಗಳ ಗತಿಗೂ ವ್ಯತ್ಯಾಸವಿರುವುದಿಲ್ಲ. ಎಂದರೆ, ಅವೆರಡೂ ಮಧ್ಯಾವರ್ತ ಗತಿಯನ್ನೇ ಪ್ರಕಟಿಸುತ್ತವೆ. ಕಾರಣವೇನೆಂದರೆ, ರುದ್ರಗಣಗಳ ಶ್ರಾವಣರೂಪಗಳು ನಿರಪ-ವಾದವಾಗಿ ೪+೪=೮ ಎಂದೇ ವಿಭಕ್ತವಾಗುವಂಥವುಗಳಾಗಿರುವುದಾಗಿದೆ. ತಾಳಮಾನ-ಕ್ಕನುಗುಣವಾಗಿ ಹೇಳುವುದಾದರೆ – ತ್ರಿಮೂರ್ತಿಗಣಬಂಧಗಳ ಸ್ವಭಾವಗಳು ಹೀಗೆ: ಬ್ರಹ್ಮ-ಗಣಪ್ರಧಾನಬಂಧಗಳು ಹಾಗೂ ರುದ್ರಗಣಪ್ರಧಾನಬಂಧಗಳು ಆದಿತಾಳ(ಅಥವಾ ಚತುರಶ್ರ ಏಕತಾಳ)ಕ್ಕೆ ಅಳವಡುವವುಗಳಾಗಿರುತ್ತವೆ. ವಿಷ್ಣುಗಣಪ್ರಧಾನಬಂಧಗಳು ಸಹಜರೂಪದಲ್ಲಿ ರೂಪಕತಾಳಕ್ಕೂ, 'ಕೋರೆ'ಯಾಗಿ ಪರಿವರ್ತಿತವಾದಾಗ "ಅಟ್ಟತಾಳ (ಅಷ್ಟತಾಳ =ಮಿಶ್ರಛಾಪು ತಾಳ)ಕ್ಕೂ ಅಳವಡುತ್ತವೆ. [ವಿಷ್ಣುಗಣಬಂಧಗಳ ಗತಿಯ ಕುರಿತು ಇನ್ನೂ ಒಂದಿಷ್ಟು ಹೇಳುವುದು ಅವಶ್ಯವಾಗಿ ಕಾಣುತ್ತದೆ; ಈ ಹಿಂದೆಯೇ ಸೂಚಿಸಿರುವಂತೆ, ಯಾವುದೊಂದು ವಿಷ್ಣುಗಣದ ಸಹಜವಾದ ಶ್ರಾವಣರೂಪವು ಗೋವಿಂದಂ । ಜಲಜಾಕ್ಷಂ ಎಂಬೀ ಎರಡರೊಳಗೆ ಒಂದಾಗಿರುತ್ತದೆ. ಇವುಗಳೊಳಗೆ ಗೋವಿಂದಂ ಎಂಬುದರ 'ಅಕ್ಷರಗತಿ'ಯು ಪರಿಪೂರ್ಣವಾದ ವಿಲಂಬಿತಗತಿ. ಜಲಜಾಕ್ಷಂ ಎಂಬುದರಲ್ಲಿ ಗುರುಲಘುಗಳು ಸಮಾನಸಂಖ್ಯೆಯಲ್ಲಿರುವ-ವಾದರೂ, ಇಡೀ ಗಣದ ಉಚ್ಚಾರಕಾಲದ ಮೂರನೆಯ ಎರಡಂಶವು ಗುರೂಚ್ಚಾರಕ್ಕೆ ಮೀಸಲಾಗಿರುವುದರಿಂದ ಈ ಗಣರೂಪದ ಅಕ್ಷರಗತಿಯು ವಿಲಂಬಿತಪ್ರಾಯವಾಗಿರುತ್ತದೆ; ಮತ್ತು, ಕೇವಲ ಈ ಶ್ರಾವಣರೂಪದ ಗಣಗಳೇ ಯಾವುದೊಂದು ವಿಷ್ಣುಗಣಬಂಧದಲ್ಲಿ ಇರುವುದಾಗಿರದೆ, ಗೋವಿಂದಂ ಎಂಬ ಶ್ರಾವಣರೂಪದ ಗಣಗಳೊಡನೆ ಮಿಳಿತವಾಗಿರುವುದ-ರಿಂದ, ವಿಷ್ಣುಗಣಬಂಧಗಳೆಲ್ಲವೂ (ಗುರುಬಹುಲವಾಗಿ) ವಿಲಂಬಿತಾಕ್ಷರಗತಿಯ ಛಂದೋ-ಬಂಧಗಳಾಗಿ ಪರಿಣಮಿಸುತ್ತವೆ. ಆದುದರಿಂದ, ಯಾವುದೊಂದು ವಿಷ್ಣುಗಣಪ್ರಧಾನ ಬಂಧವನ್ನು (ಉದಾ: ಸಾಂಗತ್ಯ) ಅದರ ಸಹಜಗತಿಯಲ್ಲಿ, ಎಂದರೆ ಅದನ್ನು ಕೋರೆಯಾಗಿ ಪರಿವರ್ತಿಸದೆ ಪಠಿಸಿದಾಗ – ವಸ್ತುತಃ ಅದು ೨+೪=೬ ಮಾತ್ರೆಯ ಆವರ್ತಗಳ ಸಂಕಲಿತದ್ರುತಾವರ್ತಗತಿಯ ಬಂಧವಾಗಿರುವುದಾದರೂ – ಗಣನಿಷ್ಠಿತವಾದ ವಿಲಂಬಿತಾಕ್ಷರ ಗತಿಯ ಪ್ರಭಾವದಿಂದಾಗಿ ಅದು ಆರು ಮಾತ್ರೆಯ ಅಖಂಡವಾದ ಆವರ್ತಗಳ ಅತಿವಿಲಂಬಿತಗತಿಯ ಛಂದೋಬಂಧವೆಂಬಂತೆ ಭಾಸವಾಗುತ್ತದೆ. (ಸಂಕಲಿತದ್ರುತಾವರ್ತಗತಿ-ದರ್ಶಕವಾಗಿ ಹಿಂದೆ ಉದಾಹರಿಸಲಾದ ಶ್ಯಾಮಾಂಗೀ ಎಂಬ ವೃತ್ತದ ಗತಿಯಲ್ಲಿಯೂ ಇಂತಹದೇ ಪರಿಣಾಮವುಂಟಾಗುವುದನ್ನು ಕಾಣಬಹುದು. ಆದರೆ ಸಂಕಲಿತದ್ರುತಾವರ್ತ-ಗತಿಯದೇ ಆದ "ನಜನಗಧೃತ್ ತ್ವರಿತಗತಿಃ" ಎಂದು ಲಕ್ಷಿತವಾಗಿರುವ ವೃತ್ತವನ್ನು ಪಠಿಸಿ-

{ಲಯಾನ್ವಿತ ಬಂಧಗಳಲ್ಲಿ ಗತಿವೈವಿಧ್ಯ – ಅನಂತವೈಚಿತ್ರ್ಯಗಳು}

ಆವರ್ತಗಳೊಳಗೆ ಅಡಕವಾಗಿರುವ ಗುರುಲಘುವಿನ್ಯಾಸಪ್ರಕಾರಗಳ ಮತ್ತು ಯತಿನಿವೇಶನಸ್ಥಾನಭೇದಗಳ ಫಲವಾಗಿ ರೂಪುಗೊಳ್ಳುವ ಗತಿವೈವಿಧ್ಯವು ಲಯಾನ್ವಿತವಾದ ಛಂದೋಬಂಧಗಳಲ್ಲಿ ನಾನಾವೈಚಿತ್ರ್ಯಗಳನ್ನು ನಿರ್ಮಿಸುತ್ತದೆ. ಇವು ಗಣನಾತೀತವಾಗಿರುವುದರಿಂದ ಇವುಗಳ ವರ್ಗೀಕರಣವು ಅಶಕ್ಯ. ಈ ವೈಚಿತ್ರ್ಯಗಳು (ಲಯಾನ್ವಿತ) ವೃತ್ತಬಂಧಗಳಲ್ಲಾದರೆ, ಆ ವರ್ಗದ ವೃತ್ತಗಳಲ್ಲೆಲ್ಲ – ಯತಿಜನಿತಭೇದದ ಹೊರತು – ಏಕರೂಪವಾಗಿರುತ್ತವೆ; ಮಾತ್ರಾಬಂಧ-ಗಳಲ್ಲಾದರೆ, ಪ್ರತಿಯೊಂದು ವರ್ಗದ ಪ್ರತಿಯೊಂದು ಪದ್ಯವೂ ಬೇರೆ ಬೇರೆ ರೂಪದ ವೈಚಿತ್ರ್ಯವನ್ನು ಪ್ರಕಟಿಸುತ್ತದೆ. ಈ ತಥ್ಯದ ದಿಙ್ಮಾತ್ರದರ್ಶನವಾಗಿ – ಪರಿಸ್ಫುಟವಾದ ವೈಚಿತ್ರ್ಯವುಳ್ಳ ಕೆಲವು ಪದ್ಯಗಳನ್ನು ಇಲ್ಲಿ ಉದಾಹರಿಸುತ್ತೇನೆ:

(ಲ) (ಲ) (ಲ) (ಲ)

I (a) ಕನಕಾಂಗದದ್ಯು । ತಿಭಿರಸ್ಯ,ಗಮಿತ । ಮರುಚತ್ಪಿಶಂಗ । ತಾಮ್ ॥

(ಲ) (ಲ) (ಲ)

ಕ್ರೋಧಮಯಶಿಖಿಶಿ । ಖಾಪಟಲೈಃ, ಪರಿ । ತಃ ಪರೀತಮಿವ ।

(ಲ)

ಬಾಹುಮಂಡಲಂ ॥ (ಶಿಶುಪಾಲವಧ)

(ಲ) (ಲ) (ಲ) (ಲ)

(b) ಮರುದರ್ಕವಾಯು । ಲಘು ಮುಂದೆ, ಬರೆ ಸು । ರಮರುದ್ದಿನೇಶ । ಗಂ– ॥

---

ದಾಗ, ವಿಲಂಬಿತತ್ವದ ಲೇಶವೂ ಗೋಚರವಾಗದೆ, ಅದರ ಹೆಸರಿಗೆ ತಕ್ಕುದಾದ ದ್ರುತತ್ವವೇ ಸ್ಫುರಿಸುತ್ತದೆ. ಇವನ್ನೆಲ್ಲ ಪರಾಮರ್ಶಿಸಿದರೆ – ಆವರ್ತಗತಿಯು ಸ್ವಭಾವತಃ ಅಕ್ಷರಗತಿಗಿಂತ ಬಲೀಯವಾದುದಾದರೂ – ವಿಶಿಷ್ಟವೂ ಪರಿಸ್ಫುಟವೂ ಆದ ಅಕ್ಷರಗತಿರೂಪಪರಂಪರೆಗಳು ಅವ್ಯವಧಾನವಾಗಿ ಕಾಣಿಸಿಕೊಳ್ಳುವ ಸಂದರ್ಭಗಳಲ್ಲಿ ಅವು ಆವರ್ತಗತಿಪ್ರಭಾವವನ್ನು ಹಿನ್ನೆಲೆಗೆ ತಳ್ಳಲು ಸಮರ್ಥವಾಗುತ್ತವೆಂಬ ತಥ್ಯವು ಗತಿಪ್ರಜ್ಞಾವಂತರಿಗೆ ವಿಶದವಾಗದಿರದು.) ವಿಷ್ಣುಗಣಬಂಧಗಳನ್ನು 'ಕೋರೆ'ಯಾಗಿ ಪಠಿಸಿದಾಗ ಆವರ್ತದ ಎರಡು ಮಾತ್ರೆಗಳಾ-ದೊಡನೆ ಬರುವ ಒಂದು ಮಾತ್ರಾಕಾಲದ ವಿರಾಮದ ಫಲವಾಗಿ ಗತಿಯು ವಿಭಕ್ತ-ವಾಗುವುದರಿಂದ, ಹಾಗೂ ಆ ಬಗೆಯ ಪಠನದಲ್ಲಿ ಗುರೂಚ್ಚಾರಗಳೆಲ್ಲವೂ ಕುಬ್ಜೀಕೃತ-ವಾಗುವುದರಿಂದ, (ಕುಬ್ಜೀಕರಣದ ವಿವರಗಳನ್ನು ಪೂರ್ವೋಕ್ತವಾದ 'ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ನಿಬಂಧದ ೧೮, ೧೯ನೇ ಪುಟಗಳಲ್ಲಿ ನೋಡಬಹುದು.) ಆ ಗತಿಯು ಏಳು ಮಾತ್ರೆಯ ಆವರ್ತಗಳದಾದರೂ – ವಿಷ್ಣುಗಣದ ಸಹಜಗತಿಯ ಪಠನದಲ್ಲಾಗುವ ಹಾಗೆ –ಅತಿವಿಲಂಬಿತವಾಗಿ ಭಾಸವಾಗುವುದಿಲ್ಲ.]

(೮) (೮) (೮)

– UUUUUU – U U – U U – U – U UU
ವಾರಿಜರಿಪುಸುರ । ಪಾರ್ಕಲಗಂ, ಮರು । ದರ್ಕವಾಯುರವಿ ।

(೮)

– U – U –
ಯೀಶನುದ್ಗತಂ ॥ (ಛಂದೋಂಬುಧಿ)

ಇವೆರಡೂ ಪದ್ಯಗಳೂ 'ಉದ್ಗತಾ' ಎಂಬ ಹೆಸರಿನ (ಸಮಗತಿಯ) "ವಿಷಮವೃತ್ತ"ಗಳು. [ಸಮವೃತ್ತ ವಿಷಮವೃತ್ತ ಎಂಬ ಹೆಸರುಗಳು ಗತಿಯನ್ನನುಲಕ್ಷಿಸಿ ಹುಟ್ಟಿದವುಗಳಲ್ಲ; ಅವು ಪಾದಪರಿಮಾಣವನ್ನು ಸೂಚಿಸುವ ಹೆಸರುಗಳು. 'ಸಮವೃತ್ತ'ವೆಂದರೆ, "ಪಾದಗಳ ಪರಿಮಾಣವು ಸಮಾನವಾಗಿರುವ ವೃತ್ತ"; ವಿಷಮವೃತ್ತವೆಂದರೆ "ಪಾದಗಳ ಪರಿಮಾಣವು ಅಸಮಾನವಾಗಿರುವ ವೃತ್ತ." – ಈ ಹೆಸರುಗಳು ಸೂಚಿಸುವ ಅರ್ಥ ಇಷ್ಟೇ ಎಂಬುದನ್ನು ಮರೆಯ–ಬಾರದು. ಆದರೆ ಇಲ್ಲಿ ಈ (ಸಮಗತಿಯ ಎಂದರೆ ಲಯಾನ್ವಿತವಾದ) ವಿಷಮ ವೃತ್ತಗಳನ್ನು ಪಾದಾನುಗುಣವಾಗಿ ಬರೆಯುವುದರ ಬದಲಾಗಿ – ಗತಿಸ್ವರೂಪಾನು ಗುಣವಾಗಿ ಬರೆದು, ಆವರ್ತವಿಭಾಗ ಮಾಡಲಾಗಿದೆ. ಮತ್ತು, ಪಾದಪರಿಮಾಣ–ಗಳೂ ಗೊತ್ತಾಗುವುದಕ್ಕಾಗಿ ಪ್ರಥಮ ಹಾಗೂ ತೃತೀಯ ಪಾದಗಳು ಕೊನೆ–ಗೊಳ್ಳುವಲ್ಲಿ 'ಕೊಮ' (comma) ಹಾಕಲಾಗಿದೆ. ದ್ವಿತೀಯ ಹಾಗೂ ಚತುರ್ಥ ಪಾದಗಳ ಕೊನೆಗಳಲ್ಲಿ ಗತಿಯೂ ವಿರಮಿಸುವುದರಿಂದ, ಅಲ್ಲಿ ಬೇರೆ ಚಿಹ್ನೆ–ಯನ್ನು ಹಾಕಿರುವುದಿಲ್ಲ.] ಉದ್ಗತಾವೃತ್ತದಲ್ಲಿ ಉನ್ಮೀಲಿಸುವ ಆವರ್ತಗಳೊಳಗೆ ಕೆಲವು ೩+೫=೮ ಮಾತ್ರೆಯವೂ, ಇನ್ನು ಕೆಲವು ೪+೪=೮ ಮಾತ್ರೆಯವೂ ಆಗಿರುವುದರಿಂದ, ಇದು 'ಸಂಕೀರ್ಣಮಧ್ಯಾವರ್ತಗತಿ'ಯ ಛಂದೋಬಂಧ–ವಾಗಿರುತ್ತದೆ. ಉದಾಹೃತವಾದ ಎರಡು ಪದ್ಯಗಳೂ ಪೂರ್ಣವಾಗಿ ಉದ್ಗತಾ–ವೃತ್ತಲಕ್ಷಣಬದ್ಧವಾಗಿದ್ದು, ಗುರುಲಘುವಿನ್ಯಾಸದ ವಿಷಯದಲ್ಲಿ ಪರಸ್ಪರ ಬಿಂಬ ಪ್ರತಿಬಿಂಬರೂಪವಾಗಿರುವುದಾದರೂ – ಇವೆರಡರ ಉತ್ತರಾರ್ಧಗಳ ಪ್ರಥಮಾ–ವರ್ತಗಳ 'ನಡೆ'ಯಲ್ಲಿ ಸ್ಫುಟವಾದ ಭೇದವು (ಪಠಿಸುವಾಗ) ಶ್ರವಣಗೋಚರ–ವಾಗುತ್ತದೆ. ಇದಕ್ಕೆ ಕಾರಣವು ಅವುಗಳೊಳಗಿನ ಯತಿನಿವೇಶನಸ್ಥಾನಗಳು ಭಿನ್ನವಾಗಿರುವುದಾಗಿದೆ. ಮೊದಲನೆಯ ಪದ್ಯದ ಆ ಆವರ್ತವನ್ನು (ಪದಾನು–ಗುಣವಾಗಿ) ಪಠಿಸುವಾಗ – ಕ್ರೋಧ (– U), ಎಂದಾದೊಡನೆ ಅಲ್ಲೊಂದು 'ಯತಿ' (ಎಂದರೆ ವಿಚ್ಛೇದ) ಕಾಣಿಸಿಕೊಳ್ಳುತ್ತದೆ. ಎರಡನೆಯ ಪದ್ಯದ ಅದೇ ಆವರ್ತ–ವನ್ನು ಪಠಿಸುವಾಗ – ವಾರಿಜ (– U U U) ಎಂದಾದಲ್ಲಿ ಯತಿ ತಲೆದೋರುತ್ತದೆ. ಈ ಯತಿಸ್ಥಾನಭೇದಗಳ ಪರಿಣಾಮವಾಗಿ ಮೊದಲನೆಯ ಪದ್ಯದ ಆ ಆವರ್ತವು ೩+೫=೮ ಎಂದೂ, ಎರಡನೆಯದರದು ೪+೪=೮ ಎಂದೂ ರೂಪುಗೊಳ್ಳುತ್ತದೆ. ಹೀಗೆ ಕೇವಲ ಯತಿನಿಮಿತ್ತವಾದೊಂದು ಭಿನ್ನತೆಯಿಂದಾಗಿ, ಆ ಎರಡು

ಆವರ್ತಗಳು – ಛಂದೋವಿನ್ಯಾಸದಲ್ಲಿ ಅಭಿನ್ನವೇ ಆಗಿದ್ದರೂ – ಪದ್ಯದ ಗತಿಯಲ್ಲಿ ಭಿನ್ನತೆಯನ್ನು ಪ್ರಕಟಿಸುತ್ತವೆ.

{ಕಂದಪದ್ಯದ ಗತಿವಿವೇಚನೆ}

|| (a) ಪಾಪಮಿ । ದು ಪುಣ್ಯ । ಮಿದು ಹಿತ ।
ರೂಪಮಿ । ದಹಿತ । ಪ್ರಕಾರ । ಮಿದು ಸುಖ । ಮಿದು ದುಃ ||
ಖೋಪಾ । ತ್ತಮಿದೆಂ । ದಱಪುಗು ।
ಮಾ ಪರ । ಮಕವಿ । ಪ್ರಧಾನ । ರಾ ಕಾ । ವ್ಯಂಗಳ್ || . ||

* * *

(b) ಅದಱೊಳ । ಗಂ ಕಿಸು । ವೊಟಿಲಾ ।
ವಿದಿತ ಮ । ಹಾ ಕೊಪ । ಣನಗರ । ದಾ ಪುಲಿ । ಗೆಱೆಯಾ ||
ಸದಭಿ । ಸ್ತುತಮು । ಪ್ಪೊಂಕುಂ ।
ದದ ನಡು । ವಣ ನಾ । ಡೆ ನಾಡೆ । ಕನ್ನಡ । ದ ತಿರುಳ್ || . ||

* * *

(c) ನೃಪನಾ । ನಭಿನುತ । ಮನನಾ ।
ನುಪಮೇ । ತರನಾ । ನಪಾರ । ಕೀರ್ತಿ । ಧ್ವಜನಂ ||
ವಿಪುಲಗು । ಣಜ್ಞನ । ನುಚಿತನ ।
ನಪಗತ । ದೋಷನ । ನುದಾರ । ಚರಿತೋ । ದಯನಂ || . ||

(d) [ಸಕಲ ಜನವಿನುತನಂ ಶತ
ಮಖಸದೃಶ ವಿಶಾಲ ವಿವಿಧ ವಿಭವೋದನಯನಂ ||
ಪ್ರಗತಗುಣಗಣನನರಿಬಲ
ವಿಘಟನನಂ] ಕಂಡನಣುವನಾ ರಾಘವನಂ || . ||

* * *

(e) [ಗೋಪಾಳಬಾಳಲಲನಾ ।
ಚಾಪಳವಾಚಾಳ] ಕಿತವ [ಬಾಹ್ಲೀಕಾದಿ ||
ವ್ಯಾಪಾರಂಗಳ್ ಗ್ರಾಮ್ಯಾ ।
ಳಾಪಂಗಳ್] ಮಾರ್ಗಯುಗಳಪರಿಹಾರ್ಯಂಗಳ್ || . ||

(ಈ ಐದು ಕಂದಪದ್ಯಗಳು 'ಕವಿರಾಜಮಾರ್ಗ'ದಿಂದ ಎತ್ತಿಕೊಂಡವುಗಳು.)

'ಕಂದಪದ್ಯ' ಎಂಬೀ ಛಂದೋಬಂಧವು ಹಳಗನ್ನಡಕಾವ್ಯಗಳ ಅಧಿಕ ಭಾಗವನ್ನು ಆಕ್ರಮಿಸಿಕೊಂಡಿರುವ ಚತುಷ್ಕಲಗಣಘಟಿತವಾದ (ಮಧ್ಯಾವರ್ತ-ಗತಿಯ) ಅರ್ಧಸಮಮಾತ್ರಾಬಂಧ. ಇದರ ದ್ವಿತೀಯ ಚತುರ್ಥ ಪಾದಗಳ ಮಧ್ಯ ಗಣದ, ಎಂದರೆ ಪದ್ಯಾರ್ಧದ ಆರನೆಯ ಗಣದ, ಗುರುಲಘುವಿನ್ಯಾಸವು ಐಚ್ಛಿಕವಲ್ಲದಿರುವುದರಿಂದ, ಮತ್ತು ಪದ್ಯಾರ್ಧದ ೧, ೩, ೫, ೭ನೆಯ ಗಣಸ್ಥಾನಗಳಲ್ಲಿ 'ಜಗಣ'ಕ್ಕೆ ನಿಷೇಧವೂ ಇರುವುದರಿಂದ, ಇದು ವಿಶಿಷ್ಟವಾದೊಂದು 'ಸಂಶ್ಲಿಷ್ಟಗತಿ' (=ಆವರ್ತಗತಿ ಹಾಗೂ ಅಕ್ಷರಗತಿಗಳ ಸಂಶ್ಲೇಷಣದಿಂದ ಉನ್ಮೀಲಿಸುವ ಗತಿ)ಯ ಛಂದೋಬಂಧವಾಗಿರುತ್ತದೆ. ಹೀಗೆ ಸ್ವಭಾವತಃ 'ಚಿತ್ರಗತಿ'ವ್ಯಂಜಕವಾದ ಈ ಮಾತ್ರಾಬಂಧವು ಗುರುಲಘುವಿನ್ಯಾಸ ಪ್ರಕಾರಭೇದಗಳಿಂದ ಹಾಗೂ ಯತಿನಿವೇಶನ-ಸ್ಥಾನಭೇದಗಳಿಂದಾಗಿ, ವಿಧವಿಧದ ಗತಿವೈಚಿತ್ರ್ಯಗಳನ್ನು ಪ್ರಕಟಿಸಬಲ್ಲ ಅದ್ಭುತ-ವಾದೊಂದು ಪದ್ಯಭೇದವಾಗಿದೆ. ಇಲ್ಲಿ ಉದಾಹೃತವಾದಷ್ಟೇ ಪದ್ಯಗಳನ್ನು ಪರಾ-ಮರ್ಶಿಸಿದರೂ, ಈ ಬಂಧದ ಗತಿವೈವಿಧ್ಯಕಾರಕಶಕ್ತಿಯ ದರ್ಶನವು ಒಂದಿಷ್ಟು ಆಗದಿರದು. ಈ ಮೇಲೆ (a) ಮತ್ತು (b) ಎಂದು ಸಂಕೇತಿಸಿರುವ ಪದ್ಯಗಳಲ್ಲಿ – ಯತಿನಿವೇಶನಸ್ಥಾನವಿಶೇಷಗಳ ಪರಿಣಾಮವಾಗಿ ಉಂಟಾಗಿರುವ ಗತಿಸ್ವರೂಪ-ಗಳನ್ನು ಕಾಣಬಹುದು. ಅವುಗಳೊಳಗೆ (a) ಎಂಬುದನ್ನು ಪದಾನುಸಾರವಾಗಿ ಪಠಿಸುವಾಗ, ಅದರ ಹಜ್ಜೆಗಳು (ಆವರ್ತಾನುಸಾರವಾಗಿ ಗಮಿಸದೆ) ಪಾಪಮಿದು । ಪುಣ್ಯಮಿದು । ಹಿತರೂಪಮಿ । ದಹಿತಪ್ರಕಾರಮಿದು । ಸುಖಮಿದು ।– ಇತ್ಯಾದಿ-ಯಾಗಿ ಮುಂಬರಿಯುತ್ತವೆ. ಇದರಿಂದಾಗಿ ಇಲ್ಲಿ ಆವರ್ತಗತಿ ಹಿನ್ನೆಲೆಗೆ ಸರಿದು – ಇದೊಂದು ನಿರಾವರ್ತಗತಿ(= ವಿಷಮಗತಿ)ಯ ರಚನೆಯೋ ಎಂಬಂತೆ ಭಾಸವಾಗುತ್ತದೆ. (b) ಎಂಬುದನ್ನು ಪದಾನುಸಾರವಾಗಿ ಪಠಿಸುವಾಗ ಅದರ ಹಜ್ಜೆಗಳು – ಅದಱೊಳಗಂ । ಕಿಸುವೊಅಲಾ । ವಿದಿತಮಹಾ । ಕೊಪಣನಗರ – ಹೀಗೆ ಕಾಣಿಸಿಕೊಂಡು, ಇದು ಆರು ಮಾತ್ರೆಗಳ ಆವರ್ತಗತಿಯ, ಎಂದರೆ 'ಸಂಕಲಿತದ್ರುತಾವರ್ತಗತಿ' ರೂಪದ ಛಂದೋಬಂಧವೋ ಎಂಬ ಭ್ರಾಂತಿಯನ್ನು ಹುಟ್ಟಿಸಲು ಸಮರ್ಥವಾಗುತ್ತವೆ. ಆದರೆ (c) ಎಂಬ ಸಂಕೇತದ ಪದ್ಯದಲ್ಲಿ ಪದಗಳೂ ಆವರ್ತಗಳೂ ಒಟ್ಟೊಟ್ಟಿಗೆ ಹಜ್ಜೆಯಿಟ್ಟು ಸಾಗುವುದರಿಂದ, ಅದನ್ನು ಪಠಿಸುವಾಗ ಕಂದಪದ್ಯದ ಅಡಿಗಟ್ಟಾದ ಮಧ್ಯಾವರ್ತಗತಿ ತನ್ನ ಸ್ವರೂಪವನ್ನು ಮುಚ್ಚುಮರೆಯಿಲ್ಲದೆ ಯಥಾವತ್ತಾಗಿ ಹೊರಹೊಮ್ಮಿಸುತ್ತದೆ. ಇನ್ನು (d) ಮತ್ತು (e) ಎಂದು ಗುರುತಿಸಿದ ಪದ್ಯಗಳಲ್ಲಿ – ದ್ರುತ, ಮಧ್ಯ ವಿಲಂಬಿತ ಎಂಬ ಅಕ್ಷರಗತಿಗಳು, ಸಂದರ್ಭವಿಶೇಷಗಳಲ್ಲಿ ಆವರ್ತಗತಿಯನ್ನು ಹಿನ್ನೆಲೆಗೆ ಸರಿಸಿ ತಮ್ಮ ವೈಭವವನ್ನು ಪ್ರಕಟಿಸಲು ಹೇಗೆ ಸಮರ್ಥವಾಗುತ್ತವೆಂಬುದನ್ನು ನೋಡ-ಬಹುದಾಗಿದೆ. [ಆ ಪದ್ಯಗಳೊಳಗೆ (d) ಎಂಬುದರ ಮೊದಲ ಮೂರು ಪಾದ-

ಗಳಲ್ಲಿ ಮತ್ತು ನಾಲ್ಕನೆಯ ಪಾದದ ಆದಿಭಾಗದಲ್ಲಿ ದ್ರುತಾಕ್ಷರಗತಿಯೂ, (e) ಎಂಬುದರ ದ್ವಿತೀಯಪಾದದ ಕೊನೆಯ ಭಾಗದಿಂದ ಚತುರ್ಥಪಾದದ ಆದಿ ಭಾಗದವರೆಗೆ ವಿಲಂಬಿತಾಕ್ಷರಗತಿಯೂ ವಿಜೃಂಭಿಸುತ್ತವೆ; ಮತ್ತು (e) ಎಂಬುದರ ಆದಿಯ ಒಂದೂವರೆ ಪಾದಗಳಲ್ಲಿ ಉನ್ಮೀಲಿಸುವ ಮಧ್ಯಾಕ್ಷರಗತಿಯೂ ಆವರ್ತಗತಿಯನ್ನು ಮರೆಯಿಸುವಷ್ಟು ಆಕರ್ಷಕವಾಗಿದೆ.][63]



63. {ಯತಿನಿಮಿತ್ತವಾಗಿ ಕಂದಪದ್ಯದ ಗತಿಯಲ್ಲಿ ವೈಶಿಷ್ಟ್ಯ} ನಾನಾವಿಧದ ಗತಿವೈಚಿತ್ರ್ಯಗಳನ್ನು ಲೀಲಾಜಾಲವಾಗಿ ಹೊಮ್ಮಿಸಬಲ್ಲ ಶಕ್ತಿಯಲ್ಲಿ ಕಂದಪದ್ಯಕ್ಕೆ ಸರಿದೊರೆಯಾದ ಬೇರೊಂದು ಛಂದೋಬಂಧವು ಕನ್ನಡದಲ್ಲಿ ಈವರೆಗೆ ಕಾಣಿಸಿಕೊಂಡಿಲ್ಲ. ಆದರೆ – ಎಂತಹ ಗತಿ-ವೈಚಿತ್ರ್ಯವುಳ್ಳ ಕಂದಪದ್ಯವನ್ನೇ ಆಗಲಿ – ಅರ್ಥನಿರಪೇಕ್ಷವಾಗಿ, ಎಂದರೆ ಕೇವಲ ಛಂದೋ-ಗಣಾನುಗುಣವಾಗಿ, ಅರ್ಥಾತ್ ಆವರ್ತಗಳು ಪರಿಸ್ಫುಟವಾಗಿ ಶ್ರವಣಗೋಚರವಾಗುವ ರೀತಿಯಲ್ಲಿ ಪಠಿಸಿದರೆ ಅದು (c) ಎಂದು ಸಂಕೇತಿಸಿ ಈ ಹಿಂದೆ ಉದಾಹರಿಸಿದ ಕಂದ-ಪದ್ಯವನ್ನು ಪಠಿಸುವಾಗ ಉನ್ಮೀಲಿಸುವಂತಹ ಸರಳವಾದೊಂದು ಗತಿಸ್ವರೂಪವನ್ನೇ ಪ್ರಕಟ-ಸುತ್ತದೆ. (a) ಹಾಗೂ (b) ಎಂದು ಗುರುತಿಸಿ, ವಿಶಿಷ್ಟಗತಿವೈಚಿತ್ರ್ಯದರ್ಶಕವಾಗಿ ಉದಾಹರಿಸಿದ ಕಂದಪದ್ಯಗಳನ್ನು, ಅಲ್ಲಿ ವಿಭಜಿಸಿ ತೋರಿಸಿರುವಂತೆ, ಕೇವಲ ಗಣಾನುಗುಣವಾಗಿ ಪಠಿಸಿದರೆ ಈ ತಥ್ಯವು ಮನವರಿಕೆಯಾಗದಿರದು. ಇದಕ್ಕೆ ಕಾರಣವೇನೆಂದರೆ – ಕಂದಪದ್ಯದ ಗತಿ-ಚಮತ್ಕೃತಿಗಳೆಲ್ಲವೂ ಅದರಲ್ಲಿ ಅಡಕವಾಗುವಂತಹ ಅಕ್ಷರಗತಿರೂಪಗಳ ಹಾಗೂ ಯತಿ-ಸ್ಥಾನಭೇದಗಳ ಫಲವಾಗಿ ಉದ್ಭೂತವಾಗುವವೇ ಹೊರತು, ಅದರ ಆವರ್ತಗತಿಯಲ್ಲಿ ಅಂತಹ ಚಮತ್ಕೃತಿಯೇನೂ ಇಲ್ಲ; ಅದು ಕೇವಲ ಸರಳವಾದ ಮಧ್ಯಾವರ್ತಗತಿ. [ಕಂದಪದ್ಯದ ಗತಿಯಲ್ಲಿ ಯತಿನಿಮಿತ್ತವಾಗಿ ಉಂಟಾಗುವ ವಿಶೇಷಗಳೊಳಗೆ ಮುಖ್ಯವಾದೊಂದನ್ನು ಇಲ್ಲಿ ಪ್ರಸ್ತಾವಿಸುವುದು ಅವಶ್ಯವಾಗಿ ಕಾಣುತ್ತದೆ: ಪದ್ಯಾರ್ಧದ ಆರನೆಯ ಗಣವು ಒಂದೋ ಜಗಣ ರೂಪದಲ್ಲಿರಬೇಕು, ಇಲ್ಲವೆ ಅದು ಸರ್ವಲಘುವಾಗಿರಬೇಕು; ಮತ್ತು ಅದು ಸರ್ವಲಘು-ವಾಗಿದ್ದರೆ ಆ ಪಾದದ – ಎಂದರೆ ದ್ವಿತೀಯ ಅಥವಾ ಚತುರ್ಥಪಾದದ –ಒಂಬತ್ತನೆಯ ಮಾತ್ರಾಸ್ಥಾನದಲ್ಲಿ ಕಡ್ಡಾಯವಾಗಿ ಯತಿ ಇರಬೇಕು. ಆರನೆಯ ಗಣವು ಜಗಣರೂಪ-ವಾಗಿರುವುದಾದರೆ, ಯತಿ ಒಂಬತ್ತನೆಯ ಮಾತ್ರಾಸ್ಥಾನದಲ್ಲಿಯೇ ಇರಬೇಕೆಂದಿಲ್ಲ; ಎಂಟನೆ-ಯದರಲ್ಲಿದ್ದರೂ ಸರಿ. ಇದು ಕಂದಪದ್ಯದ ನಿಯಮ. ಹೀಗೆ – ಕಡ್ಡಾಯವಾಗಿ ಅಥವಾ ಐಚ್ಛಿಕವಾಗಿ – ಒಂಬತ್ತನೆಯ ಮಾತ್ರಾಸ್ಥಾನದಲ್ಲಿ ಯತಿ ಬಂದಾಗ, ಆ ಪಾದದ ಮೊದಲ ಗಣಗಳು, ಪಠನಕಾಲದಲ್ಲಿ ಚತುಷ್ಕಲ ಪರಂಪರೆಯಾಗಿ ಕಂಡುಬಾರದೆ, ೬+೩+೩ ಎಂದು ಶ್ರವಣಗೋಚರವಾಗುತ್ತವೆ. ಸಮಗತಿಬಂಧಗಳೊಳಗೆ ಇಂತಹ 'ವೈಷಮ್ಯಾಭಾಸ'ಗಳು ಅಡಕ-ವಾಗಿರುವವಾದರೆ ಗತಿಯ 'ಏಕರೂಪತೆ' (monotony) ನಿವಾರಿತವಾಗಿ, ಪದ್ಯದ ಗತಿಗೆ ಅಲ್ಲೊಂದು ನವೀನತೆ ಲಭಿಸುತ್ತದೆ.]

# ಪರಿಚ್ಛೇದ ಏಳು

## ಗತಿ ಮತ್ತು ಯತಿ – ಯತಿತತ್ತ್ವವಿವೇಚನೆ

ಛಂದೋಬಂಧಗಳಲ್ಲಿ, ಎಂದರೆ 'ಪದ್ಯ'ಗಳಲ್ಲಿ ಉನ್ಮೀಲಿಸುವ 'ಸಮ-ಗತಿ'ಯ, ಎಂದರೆ ಲಯಾನ್ವಿತಗತಿಯ ವಿವಿಧರೂಪಗಳ ಪರಾಮರ್ಶವನ್ನು ಈ ಹಿಂದಿನ ಪರಿಚ್ಛೇದದಲ್ಲಿ ಯಥಾಮತಿಯಾಗಿ ಮಾಡಿದ್ದಾಯಿತು.[64] ಇನ್ನು 'ವಿಷಮ-ಗತಿ'ಯ ಎಂದರೆ ಲಯಾನ್ವಿತವಲ್ಲದ ಗತಿಯ ಪರಾಮರ್ಶವನ್ನು ಮಾಡುವುದು ಕ್ರಮಪ್ರಾಪ್ತವಾಗುತ್ತದೆ. ಆದರೆ ಹಾಗೆ ಮಾಡುವುದಕ್ಕೆ ಮೊದಲು, ಪದ್ಯದ ಗತಿಗೂ 'ಯತಿ'ಗೂ ಇರುವ ಸಂಬಂಧದ ಕುರಿತು ಒಂದಿಷ್ಟು ವಿಚಾರಮಾಡುವುದು ಅವಶ್ಯವಾಗಿದೆ.

{ಛಂದೋರಚನೆ ಪದ್ಯವೆನ್ನಿಸುವುದು ಹೇಗೆ?}

'ಪದ್ಯ' ಎಂದು ನಾವು ಹೇಳುವುದು ಒಂದು ಪರಿಮಿತಿಗೆ ಒಳಪಟ್ಟಿರುವ ಗತಿಸಂಪನ್ನವಾದ ಛಂದೋವಿನ್ಯಾಸಮಾತ್ರವನ್ನಲ್ಲ; ಅಕ್ಷರಪರಿಮಿತಿಗೋ ಮಾತ್ರಾ-ಪರಿಮಿತಿಗೋ ಬದ್ಧವಾಗಿದ್ದು, ಗತಿಸಂಪನ್ನವಾದ ಛಂದೋವಿನ್ಯಾಸದಿಂದ ಕೂಡಿದ (ಪಾದಗಳುಳ್ಳ) ಸಾರ್ಥಕ ಶಬ್ದ(=ಪದ, word)ಸಮುದಾಯವನ್ನು ನಾವು 'ಪದ್ಯ' ಎನ್ನುವುದಾಗಿದೆ. ಆದುದರಿಂದ, "ಪದ್ಯದ ಗತಿ" ಎಂದು ಹೇಳುವ ಮಾತಿನಲ್ಲಿ "ಛಂದೋಗತಿ" ಎಂದಿಷ್ಟೇ ಅರ್ಥವು ಅಡಕವಾಗಿರುವುದಲ್ಲ. ಏಕೆಂದರೆ, ಒಂದು ಪದ್ಯದಲ್ಲಿ ಉನ್ಮೀಲಿಸುವ ಛಂದೋಗತಿಯು ಆ ಪದ್ಯಸ್ವರೂಪಕ್ಕೆ ತುಲ್ಯವಾದ ನಿರರ್ಥಕಶಬ್ದ ಸಮುದಾಯದಲ್ಲಿಯೂ ತದ್ವತ್ತಾಗಿ ಉನ್ಮೀಲಿಸುತ್ತದೆ. ಆದರೆ ಅಂತಹ ಒಂದು 'ಛಂದೋರಚನೆ'ಯನ್ನು ನಾವು ಪದ್ಯವೆನ್ನುವುದಿಲ್ಲ. ಒಂದು ಛಂದೋರಚನೆ ಪದ್ಯವೆನಿಸಿಕೊಳ್ಳಬೇಕಾದರೆ ಅದು ಸಾರ್ಥಕ ಶಬ್ದಗಳ, ಎಂದರೆ 'ಪದ'ಗಳ ಸಮನ್ವಿತ ಸಮುದಾಯವಾಗಿರಬೇಕಾಗುತ್ತದೆ.

---

64. {ಅಕ್ಷರಮಾತ್ರಾಪಾದನಿಯಮಗಳಿಲ್ಲದ ಪದ್ಯಗಂಧಿಗಳು ಮತ್ತು ಖಂಡಗದ್ಯಗಳು} ಈ ಶತಮಾನದಲ್ಲಿ ರಚಿತವಾಗಿರುವ ನಾನಾರೂಪದ ಕನ್ನಡ ಪದ್ಯರಾಶಿಯೊಳಗಿನ ಹಲವಾರು 'ಪದ್ಯ'ಗಳಲ್ಲಿ ಪಾದಪರಿಮಾಣಾದಿಗಳು ವ್ಯವಸ್ಥಿತವಾಗಿಲ್ಲದಿದ್ದರೂ, ಅವುಗಳಲ್ಲಿ ಉನ್ಮೀಲಿಸುವ ಗತಿರೂಪಗಳೊಳಗೆ – ಈ ಹಿಂದಿನ ಪರಿಚ್ಛೇದದಲ್ಲಿ ನಿರೂಪಿಸಲಾದ ಆವರ್ತಗತಿಭೇದಗಳಿಗೆ ಹೊರಗಾದುದು ಯಾವುದೂ ಇರುವುದಿಲ್ಲ. ("ನವ್ಯಕಾವ್ಯ" ಎಂಬ ಹೆಸರಿನ ರಚನೆಗಳಲ್ಲಿ – ಅಕ್ಷರನಿಯಮವಾಗಲಿ, ಮಾತ್ರಾನಿಯಮವಾಗಲಿ, ಪಾದನಿಯಮವಾಗಲಿ ಇಲ್ಲದಿರುವುದರಿಂದ ಅವು 'ಪದ್ಯ'ಗಳಲ್ಲ. ಅವು 'ತಾಳ'ಕ್ಕೂ ಒಡಂಬಡದವುಗಳಾದುದರಿಂದ, ಅವು 'ಪದ'ಗಳೂ ಅಲ್ಲ. ಅಂಥವುಗಳೊಳಗೆ – ಆಕರ್ಷಕವಾದ ಅಕ್ಷರಗತಿಯೂ ಪದಪರಿಮಾಣಮೈತ್ರಿಯೂ ಇರುವವುಗಳನ್ನು "ಪದ್ಯಗಂಧಿ"ಗಳೆನ್ನಬಹುದು; ಇಲ್ಲದವುಗಳನ್ನು "ಖಂಡಗದ್ಯ"ಗಳೆಂದು ಕರೆಯಬಹುದು.)

**{ಪದ್ಯಗತಿಯಲ್ಲಿ 'ಛಂದಃಪದಗತಿ' ಮತ್ತು 'ಭಾಷಾಪದಗತಿ'}**

ಯಾವುದೊಂದು ಪದ್ಯದ – ವಿಶೇಷತಃ ಲಯಾನ್ವಿತವಾದ ಪದ್ಯದ – ಪದ(word)ಗಳನ್ನು ಬಿಡಿಬಿಡಿಯಾಗಿ ಉಚ್ಚರಿಸಿದರೆ, ಎಂದರೆ ಪದಾಂತಗಳಲ್ಲಿ ಕಾಲಯಾಪನೆ ಮಾಡದೆ ಅರ್ಥಾತ್ ಆ ಪದ್ಯದ ಛಂದೋಗತಿಯನ್ನು ವಿರೂಪ-ಗೊಳಿಸದೆ ಪಠನಮಾಡುವಾಗ ಅರ್ಥವು ವ್ಯಕ್ತವಾಗಬೇಕಾದರೆ, ಪ್ರತಿಯೊಂದು ಪದದ ಆದ್ಯಕ್ಷರವನ್ನು ಆ ಪದದ ಇತರ ಅಕ್ಷರಗಳಿಗಿಂತ ಕಿಂಚಿತ್ ಸ್ಫುಟತರವಾಗಿ ಉಚ್ಚರಿಸಬೇಕಾಗುತ್ತದೆ. (ಇದು ಅನುಭವೈಕವೇದ್ಯ.) ಹಾಗೆ ಪಠಿಸುವಾಗ ಆಯಾ ಪದಪರಿಮಾಣದ ಅಕ್ಷರಪುಂಜಗಳು – ಆ ಪದ್ಯದ ಛಂದಃಖಂಡಪರಿಮಾಣ-ನಿರಪೇಕ್ಷವಾಗಿ – ಅಲ್ಲಿ ತಲೆಯೆತ್ತುತ್ತವೆ. ಈ "ಪದಾಕ್ಷರಪುಂಜ"ಗಳ ಗಮನದ ಹಜ್ಜೆಗಳಿಗೂ ಆ ಪದ್ಯದ "ಛಂದೋಕ್ಷರಪುಂಜ"(=ಛಂದಃಖಂಡ)ಗಳ ಗಮನದ ಹಜ್ಜೆಗಳಿಗೂ ಏಕಕಾಲಿಕತೆ ಇಲ್ಲದಿರುವಲ್ಲಿ (ಇಂತಹ ಏಕಕಾಲಿಕತೆ ಲಯಾನ್ವಿತ ಬಂಧಗಳಲ್ಲಿರುವುದು ಬಹಳ ಕಡಮೆ.) ಛಂದಃಖಂಡಗಳ ಗಮನದ ಪರಿಣಾಮ-ವಾಗಿ ಉನ್ಮೀಲಿಸುವ ಗತಿರೂಪಗಳನ್ನು ಹಿನ್ನೆಲೆಗೆ ಸರಿಸುವ ತದ್ಭಿನ್ನವಾದೊಂದು ಗತಿವಿಶೇಷವು, ಆ 'ಪದಾಕ್ಷರಪುಂಜ'ಗಳ ಆದ್ಯಕ್ಷರಗಳ ಸ್ಫುಟತರೋಚ್ಚಾರದ ಫಲವಾಗಿ ಅಲ್ಲಿ ಉದಯಿಸುತ್ತದೆ. ಈ ಗತಿವಿಶೇಷವು ಕಾಲಪರಿಮಾಣನಿಯಮ-ನಿರಪೇಕ್ಷವಾಗಿರುವುದರಿಂದ, ತಾತ್ತ್ವಿಕವಾಗಿ ಹೇಳುವುದಾದರೆ, ಇದು "ಛಂದೋ-ಗತಿ" ಅಲ್ಲ; ಇದು ಅಕ್ಷರೋಚ್ಚಾರಗಳ ಸ್ಫುಟತ್ವತಾರತಮ್ಯದ ಫಲವಾಗಿ ಶ್ರವಣ-ಗೋಚರವಾಗುವ ಒಂದು ಬಗೆಯ "ಧ್ವನಿಸರಣಿ".[65] ಪದಸ್ವರೂಪವ್ಯಕ್ತಿಗಾಗಿ

---

65. **{ಪದಾದ್ಯಕ್ಷರಸ್ಫುಟೀಕರಣವು ಆಂಗ್ಲಛಂದಸ್ಸಿನ stress ಅಥವಾ accent ಅಲ್ಲ}** ಇದು ಆಂಗ್ಲಛಂದಸ್ಸಿನ stress(ಅಥವಾ accent)ನ್ನು ಹೋಲುವ ಹಾಗೆ ಭಾಸವಾಗಬಹುದಾದರೂ, ಅದಕ್ಕೆ ಇದು ತುಲ್ಯವಲ್ಲ. stressನ್ನು ಪಡೆದ ಅಕ್ಷರವು (syllable) ಗುರುವಾಗಿ ಪರಿಣಮಿಸುವಂತೆ, ಇಲ್ಲಿ ಪ್ರಸ್ತಾವಿಸಿದ ಸ್ಫುಟತರೋಚ್ಚಾರದಿಂದ ಲಘ್ವಕ್ಷರವು ಸರ್ವಥಾ ಗುರುತ್ವವನ್ನು ಪಡೆಯುವುದಿಲ್ಲ. ಕಾರಣವೇನೆಂದರೆ, ಈ ಸ್ಫುಟೀಕರಣದ ಫಲವಾಗಿ ಉಚ್ಚಾರಕಾಲಪರಿಮಾಣವು ಈಷನ್ಮಾತ್ರವಾದರೂ ಅಧಿಕವಾಗುವುದಿಲ್ಲ. ಅಲ್ಪಪ್ರಾಣಾಕ್ಷರದ ಉಚ್ಚಾರಕ್ಕಿಂತ (ಉದಾ: ದ) ಮಹಾಪ್ರಾಣಾಕ್ಷರದ (ಉದಾ : ಧ) ಉಚ್ಚಾರವು (ಸಹಜವಾಗಿ) ಸ್ಫುಟತರವಾಗಿರುವುದಾದರೂ, ಅದರ ಉಚ್ಚಾರಕಾಲದಲ್ಲಿ ಹೇಗೆ ಆಧಿಕ್ಯವುಂಟಾಗುವುದಿಲ್ಲವೋ ಹಾಗೆಯೇ ಇಲ್ಲಿ ಸಹ ಆಧಿಕ್ಯವುಂಟಾಗುವುದಿಲ್ಲ. (ಆಂಗ್ಲ ಛಂದಸ್ಸಿನ ಗುರುಲಘುಗಳು ಕಾಲಪರಿಮಾಣಪ್ರಧಾನಗಳಲ್ಲವಾದರೂ – ಸರ್ವಾತ್ಮನಾ ಅವು ಕಾಲಪರಿಮಾಣಭೇದನಿರ-ಪೇಕ್ಷಗಳಲ್ಲವೆಂಬುದನ್ನು Encyclopaedia Britanica ಸ್ಪಷ್ಟವಾಗಿ ತಿಳಿಸುತ್ತದೆ. (ಈ ನಿಬಂಧದ IIIನೆಯ ಪರಿಚ್ಛೇದದಲ್ಲಿ ಕೊಟ್ಟಿರುವ A-2 ಹಾಗೂ A-3 ಅವತರಣಿಕೆಗಳನ್ನು ಪರಾ-ಮರ್ಶಿಸಿರಿ.) stress ಎಂಬುದು, ಹೆಚ್ಚುಕಡಮೆ, ನಮ್ಮ ಭಾಷೆಗಳ ದಡ್ಡಕ್ಕರ(ದ್ವಿತ್ವಾಕ್ಷರ)ಗಳ ಉಚ್ಚಾರವಿಧಾನದ ಪ್ರತೀಪ (opposite) ರೂಪವೆನ್ನಬಹುದು. ಉದಾ: 'ಬೆಟ್ಟ' ಎಂಬ ಶಬ್ದ ರೂಪವನ್ನು ಬೆ̄ಟ್ + ಟ̆ ನಾವು ಎಂದು ಉಚ್ಚರಿಸುತ್ತೇವೆ. ಈ ಶಬ್ದವನ್ನು ಆಂಗ್ಲನೊಬ್ಬನು

ಮಾಡುವ ಪ್ರಯತ್ನದ ಫಲವಾಗಿ ಇದು ಉದ್ಭವಿಸುವ ಕಾರಣ, ಇದನ್ನು "ಪದಗತಿ" ಎನ್ನಬಹುದು. ಹೀಗೆ – "ಪದ್ಯಗತಿ" ಎಂಬುದರಲ್ಲಿ (ಮುಖ್ಯವಾಗಿ

---

ತನ್ನ ಭಾಷಾಮರ್ಯಾದೆಯಂತೆ ಉಚ್ಚರಿಸಿದರೆ ಅದು 'ಬ್ಟೆಟ' ಎಂಬಂತೆ ಕಿವಿಗೆ ಬೀಳುತ್ತದೆ. 'ಬ್ಟೆಟ' ಎಂಬ ರೂಪದ ಉಚ್ಚಾರವು ಕಿವಿಗೆ ಬೀಳಬೇಕಾಗಿದ್ದರೆ ಪದೋಚ್ಚಾರಕ್ಕೆ ಮೊದಲು, 'ಒತ್ತುವಿಕೆ'ಯಲ್ಲಿ ಒಂದು ಕಲಾಕಾಲವನ್ನು ಕಳೆಯಬೇಕಾಗುತ್ತದೆ; ಇದು ಅನುಭವೈಕವೇದ್ಯ. [{ಮಾತ್ರೆ ಮತ್ತು ಬಲ} ವೇದಾಂಗಗಳಲ್ಲೊಂದಾದ "ಶಿಕ್ಷಾಶಾಸ್ತ್ರ"ವು ಅಕ್ಷರೋಚ್ಚಾರಸ್ವರೂಪ–ವನ್ನು ಅತಿಸೂಕ್ಷ್ಮವಾಗಿ ಪರಾಮರ್ಶಿಸಿರುತ್ತದೆ. ಆ ಶಾಸ್ತ್ರದ ಪ್ರತಿಪಾದ್ಯ ವಿಷಯಗಳನ್ನು ತೈತ್ತಿ–ರೀಯೋಪನಿಷತ್ತಿನ ಆದಿಭಾಗದಲ್ಲಿ ಹೀಗೆ ಸಂಗ್ರಹಿಸಲಾಗಿದೆ: "ಶೀಕ್ಷಾಂ ವ್ಯಾಖ್ಯಾಸ್ಯಾಮಃ ॥ ವರ್ಣಃ । ಸ್ವರಃ । ಮಾತ್ರಾ । ಬಲಂ । ಸಾಮ । ಸಂತಾನಃ ॥ ಇತ್ಯುಕ್ತಃ ಶೀಕ್ಷಾಧ್ಯಾಯಃ ॥" ('ಶೀಕ್ಷಾ' ಎಂಬುದು 'ಶಿಕ್ಷಾ' ಎಂಬುದರ ಆರ್ಷರೂಪ) ನಮಗಿಲ್ಲಿ ಪ್ರಸ್ತುತವಾಗಿರುವುದು ಅಲ್ಲಿ ನಿರ್ದಿಷ್ಟವಾಗಿರುವ ಸ್ವರ, ಮಾತ್ರಾ, ಬಲ ಎಂಬ ಮೂರು ತತ್ತ್ವಗಳು ಮಾತ್ರ. ನಾವು ಉಚ್ಚರಿಸುವ ಪ್ರತಿಯೊಂದು ಅಕ್ಷರವೂ ಯಾವುದಾದರೊಂದು 'ಸ್ವರಸ್ಥಾನ'(ಶ್ರುತಿ, pitch)–ದಲ್ಲಿರುತ್ತದೆ. ಅದನ್ನೇ ಇಲ್ಲಿ "ಸ್ವರಃ" ಎಂದು ನಿರ್ದೇಶಿಸಿದ್ದಾಗಿದೆ. (ವೇದಪಠನದಲ್ಲಿ ಇವು ಮುಖ್ಯವಾಗಿ ಮೂರಾಗಿದ್ದು ಉದಾತ್ತ ಅನುದಾತ್ತ ಸ್ವರಿತ ಎಂದು ಪ್ರಸಿದ್ಧವಾಗಿವೆ. ಈ ಮೂರು ಸ್ವರಸ್ಥಾನಗಳೂ ಸಂಗೀತದ ಸಪ್ತಸ್ವರಗಳಲ್ಲಿ ಅಡಕವಾಗುತ್ತವೆಂದು 'ಪಾಣಿನೀಯ ಶಿಕ್ಷೆ'ಯಲ್ಲಿ ಪ್ರೋಕ್ತವಾಗಿದೆ.) "ಮಾತ್ರಾ" ಎಂದರೆ – ನಾವು ಈ ಮೊದಲೇ ತಿಳಿದಿರುವಂತೆ – ಅಕ್ಷರೋಚ್ಚಾರದ "ಕಾಲಪರಿಮಾಣ". "ಬಲಂ" ಎಂದರೆ, ಉಚ್ಚಾರಸ್ಫುಟತೆಯ ತಾರತಮ್ಯಕ್ಕೆ ಕಾರಣವಾಗಿರುವ "ಉಚ್ಚಾರಪ್ರಯತ್ನದ ಬಲ." ಈ "ಬಲ" ಎಂಬುದನ್ನು 'ಒತ್ತುವಿಕೆ' (=stress) ಎಂದು ಭ್ರಮಿಸಬಾರದು. ಒತ್ತುವ ಕ್ರಿಯೆಯಾಗುವಲ್ಲೆಲ್ಲ ಉಚ್ಚಾರದ ಕಾಲಪರಿ–ಮಾಣವು ಅಧಿಕವಾಗಿರುವುದಿಲ್ಲ. ಇಲ್ಲಿ ಹೇಳಲಾದ 'ಬಲ' ಎಂಬುದು, ಅಕ್ಷರದ 'ಕಾಲ–ಪರಿಮಾಣ'ವನ್ನು ಎಂದರೆ 'ಮಾತ್ರಾಕಾಲ'ವನ್ನು ಸ್ವಲ್ಪವಾದರೂ ಅಧಿಕಗೊಳಿಸದ ಕೇವಲ ಸ್ಫುಟೀಕರಣತತ್ತ್ವವಾದುದರಿಂದಲೇ, ಆ ಉಪನಿಷದ್ವಾಕ್ಯದಲ್ಲಿ ಮಾತ್ರಾತತ್ತ್ವವನ್ನೂ ಬಲತತ್ತ್ವ–ವನ್ನೂ ಬೇರೆಬೇರಾಗಿ ಪರಿಗಣಿಸಿದ್ದಾಗಿದೆ. ನಾನು ಪ್ರಸ್ತಾವಿಸಿರುವ 'ಪದಾದ್ಯಕ್ಷರದ ಸ್ಫುಟೀಕರಣ'ವೆಂಬುದೂ (ಶಿಕ್ಷಾಶಾಸ್ತ್ರೋಕ್ತವಾದ) ಆ ಉಚ್ಚಾರಬಲವನ್ನವಲಂಬಿಸಿದ ಸ್ಫುಟತ್ವ–ವಾಗಿದೆ. ವೈದಿಕಸಂಸ್ಕೃತದಂತೆ ಉದಾತ್ತಾನುದಾತ್ತಸ್ವರನಿಯಮವಿಲ್ಲದ (ಇಂಗ್ಲಿಷ್ ಭಾಷೆ–ಯಂತೆ accent ನಿಯಮವೂ ಇಲ್ಲದ) ಲೌಕಿಕ ಸಂಸ್ಕೃತ ಭಾಷೆಯಲ್ಲಿ ಹಾಗೂ ಕನ್ನಡ ಮೊದಲಾದ ದ್ರಾವಿಡ ಭಾಷೆಗಳಲ್ಲಿ ಪದಾದಿಯನ್ನು ಸ್ಫುಟತರವಾಗಿ ಉಚ್ಚರಿಸದಿದ್ದರೆ, ಎಷ್ಟೋ ವೇಳೆ ವಿವಕ್ಷಿತಾರ್ಥವು ಯಥಾವತ್ತಾಗಿ ವ್ಯಕ್ತವಾಗುವುದಿಲ್ಲ. ಪದಗಳು (ಸಮಾಸಾದಿಗಳಿಂದ) ಸಂಯುಕ್ತವಾಗಿರುವ ಸಂದರ್ಭಗಳಲ್ಲಿ, ಆ ಸಂಯೋಗದ ಪೂರ್ವಪದಾದಿಯನ್ನು ಮಾತ್ರವಲ್ಲ, ಉತ್ತರಪದಾದಿಯನ್ನೂ ಸ್ಫುಟೀಕರಿಸಬೇಕಾಗುತ್ತದೆ. ಉದಾ: "ರಾಮನಮನ" – ಈ ಪದ–ಸಂಯೋಗವು 'ರಾಮ+ನಮನ' ಎಂದೂ, 'ರಾಮನ+ಮನ' ಎಂದೂ ಎರಡು ಬಗೆಯಾಗಿ ವಿಭಕ್ತವಾಗಬಲ್ಲುದಾಗಿದೆ. ಇಲ್ಲಿ ರಾಮ+ನಮನ ಎಂಬುದು ವಿವಕ್ಷಿತವೆಂದಾದರೆ, ಉತ್ತರ–ಪದಾದಿಯ 'ನ'ಕಾರವನ್ನು ಸ್ಫುಟೀಕರಿಸಬೇಕಾಗುತ್ತದೆ; ರಾಮನ+ಮನ ಎಂಬುದು ನಮ್ಮ ವಿವಕ್ಷೆಯೆಂದಾದರೆ, ಉತ್ತರಪದದ 'ಮ'ಕಾರವನ್ನು ಸ್ಫುಟೀಕರಿಸಬೇಕಾಗುತ್ತದೆ. ಹೀಗೆ ಮಾಡದೆ ಆ ಪದಸಂಯೋಗದ ಎಲ್ಲಾ ಅಕ್ಷರಗಳನ್ನು ಸಮಾನ 'ಬಲ'ದಲ್ಲಿ ಉಚ್ಚರಿಸಿದರೆ ವಿವಕ್ಷಿತಾರ್ಥವು ಸಂದಿಗ್ಧವಾಗುತ್ತದೆ. ಪರೀಕ್ಷಿಸಿದರೆ ಈ ತಥ್ಯವು ಯಾರಿಗಾದರೂ ಮನವರಿಕೆಯಾಗುತ್ತದೆ.]

ಲಯಾನ್ವಿತವಾದುದರಲ್ಲಿ, ಕ್ವಚಿತ್ ಲಯರಹಿತವಾದುದರಲ್ಲಿಯೂ) "ಛಂದಃ-ಪದ"ಗಳ ಗತಿ (ಎಂದರೆ, ಛಂದಸ್ಸಿನ ಹಜ್ಜೆ= "metrical foot"ಗಳ ಗತಿ) ಮತ್ತು "ಭಾಷಾಪದ"(word)ಗಳ ಗತಿ (=ಭಾಷೆಯ ಹಜ್ಜೆಗಳ ಗತಿ) ಎಂಬೀ ದ್ವಿವಿಧ-ಗತಿಗಳು ಸಮಾವಿಷ್ಟವಾಗಿರುತ್ತವೆ.[66] ಈ ಎರಡು ಗತಿಗಳೊಳಗೆ ಒಂದು ಬಗೆಯ 'ಮೇಳ' (harmony) ಎಂದರೆ ಮೈತ್ರಿ ಇಲ್ಲದಿದ್ದರೆ "ಪದ್ಯಗತಿ" ಸುಗಮವಾಗಿ ಸಾಗುವುದಿಲ್ಲ. ಪದ್ಯದ "ಛಂದೋಗತಿ" ಎಂಬುದು ನಿಯಮಾಧೀನವಾಗಿರು-ವುದರಿಂದ, "ಛಂದಃಪದ"ಗಳ 'ನಡಿಗೆ'ಗೆ ಸ್ವಾತಂತ್ರ್ಯವಿಲ್ಲ. 'ಭಾಷಾಪದ'ಗಳಿಗೆ ಪರಿಮಾಣನಿಯಮವಿಲ್ಲವಾದುದರಿಂದ, ಅವುಗಳ 'ನಡಿಗೆ' ಛಂದಃಪದಗಳ ನಡಿಗೆಯ ಹಾಗೆ ಪರತಂತ್ರವಲ್ಲ; ಅದು ಸ್ವತಂತ್ರ. ಆದರೂ – "ಪದ್ಯಗತಿ" ಸುಗಮವಾಗಬೇಕಾದರೆ ಭಾಷಾಪದಗಳು ಛಂದಃಪದಗಳ ನಡಿಗೆಯನ್ನು – ಪೂರ್ಣವಾಗಿ ಅಲ್ಲದಿದ್ದರೂ – 'ಸರಿಸುಮಾರಾಗಿ' ಅನುಸರಿಸುವುದು ಅವಶ್ಯ-ವಾಗುತ್ತದೆ. (ಛಂದಃಪದಗಳ ನಡಿಗೆಗೂ ಭಾಷಾಪದಗಳ ನಡಿಗೆಗೂ ಏಕಕಾಲಿಕತೆ ಪೂರ್ಣವಾಗಿ ಇದ್ದರೆ ಪದ್ಯಗತಿಯಲ್ಲಿ ಈ ದ್ವೈವಿಧ್ಯವು ಗೋಚರಿಸುವುದಿಲ್ಲ.) ಆದರೆ ಛಂದೋಗತಿಯನ್ನು ರಕ್ಷಿಸುವ ಪ್ರಯತ್ನದಲ್ಲಿ ಪದಗತಿಯು ತನ್ನ ಸ್ವರೂ-ಪವನ್ನು ಕೆಡಿಸಿಕೊಳ್ಳಬಾರದು. ಪದಗತಿ ಕೆಟ್ಟುಹೋದರೆ ಛಂದೋಗತಿಗೆ ಹಾನಿ-ಬರುವುದಿಲ್ಲವಾದರೂ – ಛಂದೋಗತಿಯಂತೆಯೇ ಪದಗತಿಗೂ "ಪದ್ಯಗತಿ"ಯ ಅವಯವವಾಗಿರುವುದರಿಂದ – ಪದ್ಯಗತಿ ಅಲ್ಲಿ ಭಗ್ನವಾಗಿ ಹೋಗುತ್ತದೆ.[67]

---

66. {'ಪದ' ಶಬ್ದವಿಚಾರ} 'ಪದ' ಎಂಬ ಶಬ್ದದ ಮೂಲಾರ್ಥವು 'ಹಜ್ಜೆ' (foot or foot-step) ಎಂದಾಗಿದೆ. 'ಸಾರ್ಥಕ ಶಬ್ದ' (word) ಎಂಬರ್ಥವನ್ನು ಹೇಳುವುದಕ್ಕೂ 'ಪದ' ಎಂಬ ಶಬ್ದವು – ಸಾಮಾನ್ಯ ವ್ಯವಹಾರದಲ್ಲಿ ಮಾತ್ರವಲ್ಲ, ವ್ಯಾಕರಣದಲ್ಲಿಯೂ – ಪ್ರಚಲಿತವಾಗಿದೆ. ಹಜ್ಜೆ ಎಂಬರ್ಥದ ಶಬ್ದಕ್ಕೆ ಈ ಅರ್ಥವುಂಟಾಗಲು 'ಔಪಮ್ಯ'ವು (=ಹೋಲಿಕೆ) ಕಾರಣವಾಗಿರುತ್ತದೆ. ಅದರ ಸಂಪ್ರಾಪ್ತಿ ಹೀಗೆ : 'ಭಾಷೆ', ಎಂದರೆ ಮಾತು ಎಂಬುದು, ಸಾರ್ಥಕಶಬ್ದಗಳ ಸಮುದಾಯ. ಮಾತು ಗತಿಶೀಲವಾಗಿರುವುದರಿಂದ ಅದಕ್ಕೆ ವ್ಯಕ್ತಿತ್ವೋ-ಪಚಾರ (personification) ಮಾಡಿದಾಗ, ಮಾತಿನಲ್ಲಿ ಹೊಮ್ಮುತ್ತಾ ಹೋಗುವ ಒಂದೊಂದು ಶಬ್ದ(word)ವೂ ಅದರ ಒಂದೊಂದು 'ಹಜ್ಜೆ' ಎಂಬಂತಾಗುವುದರಿಂದ, ಮಾತಿನಲ್ಲಿ ಅರ್ಥಾತ್ ವಾಕ್ಯದಲ್ಲಿ ಪ್ರಯುಕ್ತವಾಗತಕ್ಕ ಶಬ್ದಗಳಿಗೆ 'ಪದ' ಎಂಬ ಹೆಸರು ಬರುವಂತಾಯಿತು. ಆದುದರಿಂದ ಈ 'ಪದ' ಎಂಬುದರ ನಿಜವಾದ ಅರ್ಥವು 'ಭಾಷಾಪದ' (=ಭಾಷೆಯ ಹಜ್ಜೆ) ಎಂದೇ ಆಗಿರುತ್ತದೆ. [ಯಾವುದೊಂದು 'ವ್ಯಕ್ತಿಯ ನಡಿಗೆ' ಎಂದರೂ, ಆ ವ್ಯಕ್ತಿಯ "ಹಜ್ಜೆಯ ನಡಿಗೆ" ಎಂದರೂ ಅರ್ಥ ಒಂದೇ ಆಗಿರುವ ಕಾರಣ, ಪ್ರಸ್ತುತವಾದ "ಪದಗತಿ" (=ಭಾಷಾಪದಗತಿ) ಎಂಬುದನ್ನು "ಭಾಷಾಗತಿ" ಎಂದೂ ಹೆಸರಿಸಬಹುದಾಗಿದೆ.]

67. "ಪದ್ಯಗತಿ"ಯಲ್ಲಿ 'ಛಂದಃಪದಗತಿ' (= ಛಂದೋಗತಿ) ಮತ್ತು 'ಭಾಷಾಪದಗತಿ' (=ಭಾಷಾಗತಿ) ಎಂಬ ಎರಡು ಬೇರೆ ಬೇರೆ "ಗತಿ"ಗಳು ಸಮಾವಿಷ್ಟವಾಗಿರುತ್ತವೆಂಬ ಈ ಪ್ರತಿಪಾದನೆ ಇದಂಪ್ರಥಮವಾಗಿ ಮಾಡಲ್ಪಟ್ಟುದಾಗಿದೆ. (ಪೂರ್ವಶಾಸ್ತ್ರಗಳಲ್ಲೆಲ್ಲಿಯೂ ಇದು

ಈ ಮೇಲೆ ಪ್ರಸ್ತಾವಿಸಿದ ತಥ್ಯಗಳು ಈ ಮುಂದಿನ ಉದಾಹರಣಗಳಿಂದ ವಿಶದವಾಗಬಲ್ಲವು:

I (a) ನಾಗರ । ಹಾವೇ । ಹಾವೊಳು । ಹೂವೇ ।
ಬಾಗಿಲ । ಬಿಲದಲಿ । ನಿನ್ನಯ । ತಾವೇ ॥
(ಇದು ಮಧ್ಯಾವರ್ತಗತಿಯ ಮಾತ್ರಾಬಂಧ)

(b) ಖಂಡ + ವಿದಕೋ । ಮಾಂಸ + ವಿದಕೋ ।
ಗುಂಡಿ + ಗೆಯ ಬಿಸಿ । ರಕ್ತ + ವಿದಕೋ ।
ಚಂಡ + ವ್ಯಾಘ್ರನೆ । ನೀನಿ + ದೆಲ್ಲವ ।
ನುಂಡು + ಸಂತಸ । ದಿಂದಿರು– ॥
(ಇದು ಮಾತ್ರಾನಿಯತವಾದ ದ್ರುತಮಧ್ಯಾವರ್ತಗತಿಯ ರಚನೆ.)

ಈ ಮೇಲಿನ ಉದಾಹರಣಗಳೊಳಗೆ (a)ಯಲ್ಲಿ ಛಂದಃಪದಗಳ ನಡಿಗೆಗೂ ಭಾಷಾಪದಗಳ ನಡಿಗೆಗೂ ಸಂಪೂರ್ಣವಾಗಿ ಏಕಕಾಲಿಕತೆ ಇರುವು–ದರಿಂದ, ಅಲ್ಲಿ ಶ್ರವಣಗೋಚರವಾಗುವ "ಪದ್ಯಗತಿ"ಯಲ್ಲಿ 'ಛಂದೋಗತಿ' 'ಭಾಷಾಗತಿ' ಎಂಬ ದ್ವೈವಿಧ್ಯವು ಭಾಸವಾಗುವುದಿಲ್ಲ. (b)ಯಲ್ಲಿಯೂ – 'ಗುಂಡಿಗೆಯ ಬಿಸಿ' ಎಂಬಲ್ಲಿ ಹೊರತು ಅವುಗಳಿಗೆ ಏಕಕಾಲಿಕತೆ ಇರುವುದರಿಂದ, ದ್ವೈವಿಧ್ಯವು ಅಷ್ಟೇನೂ ಗೋಚರಿಸುವುದಿಲ್ಲ. (ಗುಂಡಿ + ಗೆಯ ಬಿಸಿ – ಛಂದೋಗತಿ; ಗುಂಡಿಗೆಯ + ಬಿಸಿ – ಭಾಷಾಗತಿ)

II (a) ತ್ವದೀಯ ಪಾದಪಂಕಜಂ ನಮಾಮಿ ದೇವಿ ನರ್ಮದೇ ॥
(ಇದು ದ್ರುತಾವರ್ತಗತಿಯ 'ಪಂಚಚಾಮರ'ವೆಂಬ ಸಮವೃತ್ತದ ಒಂದು ಪಾದ.) ಈ ವೃತ್ತದ ಛಂದಃಪದಗಳ ನಡಿಗೆ ಹೀಗೆ:

ತ್ವದೀ । ಯ ಪಾ । ದಪಂ । ಕಜಂ । ನಮಾ । ಮಿ ದೇ । ವಿ ನ । ರ್ಮದೇ ॥

ಈ ಪಾದದಲ್ಲಿ ಬಂದಿರುವ ಭಾಷಾಪದಗಳ ನಡಿಗೆ ಇಂತಿದೆ:
ತ್ವದೀಯ । ಪಾದ । ಪಂಕಜಂ । ನಮಾಮಿ । ದೇವಿ । ನರ್ಮದೇ ॥

(b) ವಿದ್ವತ್ಸಭಾವಲಯಮರಿಯೆ ವಿರಚಿಸಿದಂ ಭ ।
ರದ್ವಾಜಗೋತ್ರಭವನಣ್ಣಮಾಂಕನ ಸುತಂ ।
ಸದ್ವಿನುತ ಕರ್ಣಾಟಕವಿಚ್ಛೈತ್ರವನಚೂತ ಲಕ್ಷ್ಮೀಶನೆಂಬೊರ್ವನು ॥

---

ಪ್ರತಿಪಾದಿತವಾಗಿಲ್ಲ.) 'ಪದ್ಯಗತಿ'ಯನ್ನು ಈ ಬಗೆಯಾಗಿ ವಿಶ್ಲೇಷಿಕೊಂಡಾಗ, ಲಯಾನ್ವಿತ–ಬಂಧಗಳ ಯತಿತತ್ತ್ವದ ಹಾಗೂ ಯತಿಭಂಗದ ವಿಷಯದಲ್ಲಿ ಛಂದೋಮೀಮಾಂಸಕರನ್ನು ಗೊಂದಲಕ್ಕೀಡಾಗಿಸಿರುವ ಸಮಸ್ಯೆಗಳೆಲ್ಲ ಪರಿಹೃತವಾಗುತ್ತವೆ.

(ಇದು ವಿಲಂಬಿತಾವರ್ತಗತಿಯ 'ವಾರ್ಧಕಷಟ್ಪದಿ' ಎಂಬ ಅರ್ಧಸಮ-ಮಾತ್ರಾಬಂಧದ ಪೂರ್ವಾರ್ಧ.) ಇದರ ಛಂದಃಪದಗತಿಸ್ವರೂಪ ಹೀಗೆ :

ವಿದ್ವತ್ಸ । ಭಾವಲಯ । ಮರಿಯೆ ವಿರ । ಚಿಸಿದಂ ಭ ।
ರದ್ವಾಜ । ಗೋತ್ರಭವ । ನಣ್ಣಮಾಂ । ಕನ ಸುತಂ ।
ಸದ್ವಿನುತ । ಕರ್ಣಾಟ । ಕವಿಚೈತ್ರ । ವನಚೂತ । ಲಕ್ಷ್ಮೀಶ ।
ನೆಂಬೊರ್ವನು ॥

ಈ ಭಾಗದ ಭಾಷಾಪದಗತಿ ಸ್ವರೂಪ ಹೀಗಿದೆ:

ವಿದ್ವತ್ । ಸಭಾ । ವಲಯ । ಮರಿಯೆ । ವಿರಚಿಸಿದಂ । ಭ-
ರದ್ವಾಜ । ಗೋತ್ರ । ಭವ । ನಣ್ಣಮಾಂಕನ । ಸುತಂ ।
ಸದ್ವಿನುತ । ಕರ್ಣಾಟ । ಕವಿ । ಚೈತ್ರ । ವನ । ಚೂತ । ಲಕ್ಷ್ಮೀಶ ।
ನೆಂಬೊರ್ವನು ॥

ಇವೆರಡು ಉದಾಹರಣಗಳಲ್ಲಿ ಛಂದಃಪದಗಳಿಗೂ ಭಾಷಾಪದಗಳಿಗೂ ಏಕಕಾಲಿಕತೆ ಸರ್ವತ್ರವಾಗಿ ಇಲ್ಲವಾದರೂ, ಅವುಗಳೊಳಗೆ ಒಂದು ಮತ್ತೊಂದನ್ನು ಕೆಡಿಸದೆ ಪರಸ್ಪರ 'ಮೈತ್ರಿ'ಯಿಂದ ಗಮಿಸುವ ಕಾರಣ, "ಪದ್ಯಗತಿ" ಸುಗಮವಾಗಿ ಸಾಗುವುದಕ್ಕೆ ತಡೆಯೇನೂ ಉಂಟಾಗಿಲ್ಲ.[68]

III. ಛಂದಃಪದಗಳ ಗತಿಗೂ ಭಾಷಾಪದಗಳ ಗತಿಗೂ ಮೈತ್ರಿ ಇಲ್ಲದಿರು-ವಲ್ಲಿ 'ಪದ್ಯಗತಿ'ಯು ಭಗ್ನವಾಗುವುದನ್ನು ಈ ಕೆಳಗಿನ ನಿರೂಪಣವು ಸ್ಪಷ್ಟವಾಗಿ ತೋರಿಸಿ ಕೊಡುತ್ತದೆ:

"ಆರಾರೇರರ್ ಶಾಸ್ತ್ರ ।
ಶ್ರೀರೋಹಣಗಿರಿಯನಲ್ಲಿ ನವಕವಿತಾಚಿಂ ॥
ತಾರತ್ನಂ ದೊರೆಗುಮೆ ಮಾ ।
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ ॥ . ॥

ಷಡಕ್ಷರಕವಿಯ ರಚನೆಯಾಗಿರುವ ಈ ಕಂದಪದ್ಯವು, ಕಿಟ್ಟೆಲ್ ಸಾಹೇಬರು ಸಂಪಾದಿಸಿದ 'ಛಂದೋಂಬುಧಿ'ಯಲ್ಲಿಯೂ ಸೇರಿಕೊಂಡಿದೆ. ಈ ಪದ್ಯದ 'ಮಾರಾರಿಯ ಕೃಪೆ' (ಮಾರಾರಿ = ಶಿವ) ಎಂಬ ಮಾತು ಆ ಕ್ರೈಸ್ತಮಿಶನರಿ ಸಾಹೇಬರಿಗೆ ಅಸಹನೀಯವಾಗಿ ಕಂಡಬಂದು, ಅದನ್ನವರು ಈ ಕೆಳಗಿನಂತೆ 'ತಿದ್ದಿ' ಪ್ರಕಾಶಪಡಿಸಿರುತ್ತಾರೆ:

ಆರಾರೇರರ್ ಶಾಸ್ತ್ರ ।
ಶ್ರೀರೋಹಣಗಿರಿಯನಲ್ಲಿ ನವಕವಿತಾಚಿಂ ॥
ತಾರತ್ನಂ ದೊರೆಗುಮೆ ತೇ ।

---

68. ಯಾವುದೊಂದು ಪದ್ಯದಲ್ಲಿ ಈ ಮೈತ್ರಿ ಪರ್ಯಾಪ್ತವೋ ಅಲ್ಲವೋ ಎಂಬುದಕ್ಕೆ, ಪಠನ ಸಂಪ್ರದಾಯಪ್ರಭಾವಿತವೂ ಪರಿಷ್ಕೃತವೂ ಆ ಗತಿಪ್ರಜ್ಞೆಯೇ ಪರಮಪ್ರಮಾಣ.

ಜೋರೂಪಕೃಪೆಯಿರದಂಗೆ ಧರಣೀತಳದೊಳ್ ‖ . ‖

ಹೀಗೆ "ಪರಿಷ್ಕೃತ"ವಾದ ಈ ಪದ್ಯದಲ್ಲಿ – ಕಂದಪದ್ಯಕ್ಕೆ ಇರಬೇಕಾದ ಮಾತ್ರಾಸಂಖ್ಯೆ, ಗಣಸಂಖ್ಯೆ, ಗಣಸ್ವರೂಪ – ಇವೆಲ್ಲವೂ ಛಂದಃಶಾಸ್ತ್ರೋಕ್ತ-ವಾಗಿರುವಂತೆಯೇ ಇರುವವಾದರೂ, ಈ ಪದ್ಯದ ಚತುರ್ಥಪಾದವನ್ನು ಕ್ರಮ-ದಂತೆ ಪಠಿಸುವುದಕ್ಕಾಗುವುದಿಲ್ಲ; ಅದನ್ನು ಛಂದೋಗತಿಗೆ ಅನುಗುಣವಾಗಿ ಪಠಿಸುವಾಗ ಅರ್ಥ ಹೊಳೆಯುವುದಿಲ್ಲ; ಅರ್ಥವಾಗುವಂತೆ ಪದೋಚ್ಚಾರಮಾಡಿ, ಎಂದರೆ ಪದಾನುಗುಣವಾಗಿ, ಪಠಿಸುವಾಗ ಅದು ಕಂದಪದ್ಯದ ಭಾಗವಾಗಿ ಶ್ರುತಿ ಗೋಚರವಾಗುವುದಿಲ್ಲ. ಅರ್ಥಾತ್ ಅಲ್ಲಿ ಛಂದಃಪದಗಳ ಗತಿಗೂ ಭಾಷಾ-ಪದಗಳ ಗತಿಗೂ ಮೈತ್ರಿ ಸುತರಾಂ ಇಲ್ಲ.

ಯಾವುದೊಂದು ಪದ್ಯದ ಪದರಚನೆ ನಿರ್ದುಷ್ಟವಾಗಿರುವಲ್ಲಿಯೂ – ಆ ಪದ್ಯವನ್ನು ಅದರ ಛಂದೋಗತಿಗನುಗುಣವಾಗಿ ಪಠಿಸುವಾಗ ತದ್ಗತಪದ-ಸ್ವರೂಪವು ಹೊಳೆಯದಂತಿದ್ದರೆ, ಆ ರಚನಾದೋಷವು 'ಯತಿಭಂಗ'-ವೆನಿಸಿಕೊಳ್ಳುತ್ತದೆ. ಯತಿಭಂಗವೆಂದರೆ ವಸ್ತುತಃ "ಪದಗತಿಭಂಗ"ವೇ ಆಗಿದೆ. 'ಪದಗತಿ'ಗೆ ಭಂಗವುಂಟಾದರೆ 'ಪದ್ಯಗತಿ' ಭಗ್ನವಾಗಿಹೋಗುತ್ತದೆಂಬುದನ್ನು ಈ ಮೊದಲೇ ಹೇಳಲಾಗಿದೆಯಷ್ಟೆ. ಪ್ರಸ್ತುತವಾದ ಪದ್ಯಭಾಗವನ್ನು ಕಂದಪದ್ಯದ ಛಂದೋಗತಿಗೆ ಅನುಗುಣವಾಗಿ ಪಠಿಸುವಾಗ ಅರ್ಥವು ಸ್ಫುರಿಸದಿರುವುದಕ್ಕೆ, ಅಲ್ಲಿ ಉಂಟಾಗಿರುವ ಯತಿಭಂಗವು ಕಾರಣವಾಗಿರುತ್ತದೆ. ಕಂದಪದ್ಯದ ಛಂದೋ ನಿಯಮಾನುಸಾರವಾಗಿ –ಪದ್ಯಾರ್ಧದ ಆರನೆಯ ಗಣವು ಸರ್ವಲಘು (υυυυ) ಅಥವಾ ಜಗಣರೂಪ(υ–υ)ವಾಗಿರಬೇಕಾಗುತ್ತದೆ. ಅದು ಸರ್ವಲಘುವಾಗಿದ್ದರೆ ಆ ಪಾದದ ಒಂಬತ್ತನೆಯ ಮಾತ್ರೆ ಯತಿಸ್ಥಾನವಾಗುತ್ತದೆ; ಅದು ಜಗಣರೂಪ-ವಾಗಿದ್ದರೆ ಒಂಬತ್ತನೆಯ ಅಥವಾ ಎಂಟನೆಯ ಮಾತ್ರೆ 'ಯತಿಸ್ಥಾನ'ವಾಗುತ್ತದೆ. ಎಂಟನೆಯದು ಯತಿಸ್ಥಾನವಾದಾಗ, ಪಠನಕಾಲದಲ್ಲಿ ಆ ಪಾದದ ಛಂದೋ-ಗತಿಯ ಮೊದಲ ಮೂರು ಹಜ್ಜೆಗಳು ೪+೪+೪ ಮಾತ್ರೆಗಳವಾಗಿಯೇ ರೂಪುಗೊಳ್ಳುತ್ತವೆಯಾದರೂ – ಒಂಬತ್ತನೆಯದು ಯತಿಸ್ಥಾನವಾದಾಗ, ಅವು ೬+೩+೩ ಎಂಬ ರೂಪವನ್ನು ಪಡೆಯುತ್ತವೆ. (ಟಿಪ್ಪಣಿ 63 ನೋಡಿರಿ) ಪ್ರಸ್ತುತ ಸಂದರ್ಭದಲ್ಲಿ ಜಗಣರೂಪವಿರುವುದರಿಂದ ಯತಿಸ್ಥಾನವು (ವೈಕಲ್ಪಿಕವಾಗಿ) ಎಂಟನೆಯದೋ ಅಥವಾ ಒಂಬತ್ತನೆಯದೋ ಆಗುತ್ತದೆ. ಎಂಟನೆಯದು ಇಲ್ಲಿ ಯತಿಸ್ಥಾನವೆಂದಿಟ್ಟುಕೊಂಡು ಪಠಿಸಿದಾಗ, ಪ್ರಸ್ತುತ ಪದ್ಯಭಾಗದಲ್ಲಿ ಕಿವಿಗೆ ಬೀಳುವ ಪದಸ್ವರೂಪಗಳು ಹೀಗಿರುತ್ತವೆ:

(೪) (೪) (೪)

(ತೇ) । ಜೋರೂ, ಪ ಕೃಪೆಯಿ, : ರ ದಂಗೆ,

ಒಂಬತ್ತನೆಯದು ಇಲ್ಲಿ ಯತಿಸ್ಥಾನವೆಂದಿಟ್ಟುಕೊಂಡು ಪಠಿಸಿದಾಗ, ಆ ಭಾಗದ ಪದಸ್ವರೂಪಗಳು ಹೀಗೆ ಕಿವಿಗೆ ಬೀಳುತ್ತವೆ:

(೬) (೩) (೩)
(ತೇ) । ಜೋರೂಪ ಕೃ, ಪೆಯಿರ, : ದಂಗೆ,

ಪ್ರಸ್ತುತ ಸಂದರ್ಭದಲ್ಲಿ ಸಂಭಾವ್ಯವಾದ ಈ ಎರಡು ರೀತಿಯ ಪಠನಕ್ರಮಗಳಲ್ಲಿ ಯಾವುದನ್ನು ಅನುಸರಿಸಿದರೂ, ಇಲ್ಲಿ ಪ್ರಯೋಗಿಸಲ್ಪಟ್ಟಿರುವ ಭಾಷಾಪದಗಳ ಸ್ವರೂಪಗಳು (ಪಠನಕಾಲದಲ್ಲಿ) ಹೊಳೆಯುವಂತಿಲ್ಲವೆಂಬುದು ಈ ಮೇಲಿನ ವಿವೃತಿಯಿಂದ ಪ್ರತ್ಯಕ್ಷವಾಗದಿರದು.

[{**ಯತಿನಿಯಮವು ಮಾತ್ರಾಬಂಧಗಳಿಗೂ ಅನ್ವಯಿಸುತ್ತದೆ.**} 'ಕಂದ-ಪದ್ಯ'ವೆಂದು ಕನ್ನಡದಲ್ಲಿ ಪ್ರಸಿದ್ಧವಾಗಿರುವ ಛಂದೋಬಂಧವು 'ಆರ್ಯಾ' ವರ್ಗಕ್ಕೆ ಸೇರಿದ ಮಾತ್ರಾಬಂಧವಾಗಿದ್ದು, ಪಿಂಗಳಸೂತ್ರಾನುಸಾರವಾಗಿ ಇದರ ಹೆಸರು "ಆರ್ಯಾಗೀತಿ" ಎಂದಾಗಿದೆ. ಆರ್ಯಾವರ್ಗದ ಎಲ್ಲಾ ಬಂಧಗಳಲ್ಲಿ (ಆತಏವ ಕಂದಪದ್ಯದಲ್ಲಿಯೂ) ಈ ಮೇಲೆ ವಿವೃತವಾದ ಯತಿನಿಯಮಗಳಲ್ಲದೆ - ವಿಶಿಷ್ಟಗುರುಲಘುವಿನ್ಯಾಸಗಳಿರುವ ಬೇರೆ ಕೆಲವು ಸಂನಿವೇಶಗಳಲ್ಲಿಯೂ ಯತಿಯ ಅವಶ್ಯಕತೆ ಅಲ್ಲಲ್ಲಿ ಬರುತ್ತದೆ. ಪಿಂಗಲಾಚಾರ್ಯನು ತನ್ನ ಗ್ರಂಥದ "ಆರ್ಯಾಧಿ-ಕಾರ"ದಲ್ಲಿ (ಅಧ್ಯಾಯ IV ಸೂತ್ರ ೧೪-೩೧) ಇದನ್ನೆಲ್ಲ ಸಮಗ್ರವಾಗಿ ತಿಳಿಸಿದ್ದಾನೆ. ಆದರೆ ಅಲ್ಲಿ ಅವನು 'ಯತಿ' ಎಂಬ ಸಂಜ್ಞೆಯನ್ನು ಪ್ರಯೋಗಿಸದೆ, ಗಣದ ವಿನ್ಯಾಸ ಹೇಗಿದ್ದರೆ ಪದಾರಂಭ ಎಲ್ಲಿ ಆಗಬೇಕೆಂಬುದನ್ನು ಸೂಚಿಸುವ ಮೂಲಕ, 'ಯತಿ'ಯನ್ನೇ ಪ್ರಕಾರಾಂತರದಿಂದ ನಿರೂಪಿಸಿದ್ದಾನೆ. "ಯತಿರ್ವಿಚ್ಛೇದಃ" ಎಂಬ ಅವನ ಸುಪ್ರಸಿದ್ಧವಾದ ಯತಿಲಕ್ಷಣಸೂತ್ರವು "ಸಮವೃತ್ತಾಧಿಕಾರ"ದ ಪ್ರಥಮ-ಸೂತ್ರ(IV-೧)ವಾಗಿದ್ದು, ತದನಂತರವೇ ಅವನು 'ಯತಿ' ಎಂಬ ಸಂಜ್ಞೆಯನ್ನು ತನ್ನ ಗ್ರಂಥದಲ್ಲಿ ಬಳಸಿರುವನೆಂಬ ಒಂದೇ ಕಾರಣದಿಂದ - ಅವನ ಅನು-ಯಾಯಿಗಳಾದ ತದುತ್ತರಕಾಲೀನ ಸಂಸ್ಕೃತಛಂದೋಗ್ರಂಥಕಾರರು ತಮ್ಮ ಗ್ರಂಥಗಳಲ್ಲಿಯೂ ಅದೇ ಪರಿಪಾಟಿಯಲ್ಲಿ ಯತಿಸಂಜ್ಞೆಯನ್ನು ಬಳಸಿರುವ ಹಾಗೆ ಕಾಣುತ್ತದೆ. ಆದರೆ "ಯತಿರ್ವಿಚ್ಛೇದಃ"ಎಂಬ ಆ ಸೂತ್ರದ ಅರ್ಥವ್ಯಾಪ್ತಿಯನ್ನು ಪರಿಭಾವಿಸಿದರೆ, ಆರ್ಯಾದಿ ಮಾತ್ರಾಬಂಧಗಳ ಲಕ್ಷಣನಿರೂಪಣದಲ್ಲಿಯೂ ಆ ಸಂಜ್ಞೆಯನ್ನು - ಪಾದಾಂತ್ಯವಿಷಯದಲ್ಲಿ ಮಾತ್ರವಲ್ಲ, ಪಾದಮಧ್ಯಸ್ಥವಿಷಯದಲ್ಲಿ ಸಹ, ಕವಿರಾಜಮಾರ್ಗಕಾರನು ಬಳಸಿರುವಂತೆ (I - ೭೭), ಅವರೂ ನಿರಾಂತಕವಾಗಿ ಬಳಸಬಹುದಾಗಿತ್ತೆಂದು ಕಂಡುಬಾರದಿರದು.][69]

---

69. {**ಯತಿಸಂಜ್ಞೆಯ ಅರ್ಥವ್ಯಾಪ್ತಿ**} 'ಯತಿ' ಎಂಬ ಸಂಜ್ಞೆಯ ಅರ್ಥವ್ಯಾಪ್ತಿಯ ಕುರಿತು ಎರಡು ಮಾತು ಹೇಳುವುದು ಇಲ್ಲಿ ಅವಶ್ಯವಾಗಿ ಕಾಣುತ್ತದೆ: ಯತಿ ಎಂಬ ಶಬ್ದವು 'ಯಮ್' ಧಾತುವಿನಿಂದ ನಿಷ್ಪನ್ನವಾಗಿದ್ದು, ಅದರ ಮೂಲಾರ್ಥವು 'ತಡೆ' (=ತಡೆಯುವಿಕೆ, check) ಎಂಬುದಾಗಿದೆ. ಛಂದೋಗತಿಯು ಯಂತ್ರವಾಹನದ ಗತಿಯಂತೆ ಅಖಂಡ ಗತಿಯಾಗಿರದೆ, ಅಲ್ಲಲ್ಲಿ ನಿಂತು ನಡೆಯುವ ಗತಿಯಾಗಿರುವುದರಿಂದ - ಗತಿಗೆ ಅಲ್ಲಲ್ಲಿ

'ಪದ್ಯಗತಿ'ಯ ಕುರಿತು ಈ ಪರಿಚ್ಛೇದದಲ್ಲಿ ಇದುವರೆಗೆ ಮಾಡಿದ ವಿಚಾರವನ್ನು ಹೀಗೆ ಸಂಗ್ರಹಿಸಬಹುದು: ಪದ್ಯದ (ವಿಶೇಷತಃ ಲಯಾನ್ವಿತ ಪದ್ಯದ) 'ಗತಿ' ಎಂಬುದರಲ್ಲಿ ಆ ಪದ್ಯದ 'ಛಂದಃಪದ'ಗಳ ನಡಿಗೆ, ಮತ್ತು ಆ ಪದ್ಯದಲ್ಲಿ ಅಡಕವಾಗಿರುವ 'ಭಾಷಾಪದ'ಗಳ ನಡಿಗೆ ಎಂಬ ಎರಡು 'ನಡಿಗೆ'(=ಗತಿ)ಗಳು ಸಮಾವಿಷ್ಟವಾಗಿವೆ. ಅವೆರಡರೊಳಗೆ ಒಂದು ಬಗೆಯ 'ಮೇಳ' ಅಥವಾ 'ಮೈತ್ರಿ' ಇದ್ದಲ್ಲಿ ಮಾತ್ರ ಪದ್ಯಗತಿ ಸುಗಮವಾಗಿ ಸಾಗುತ್ತದೆ.

---

ಪ್ರಾಪ್ತವಾಗುವ 'ತಡೆ' ಅರ್ಥಾತ್ 'ನಿಲುಗಡೆ' ಎಂಬರ್ಥದಲ್ಲಿ ಪ್ರಯುಕ್ತವಾದ "ಯತಿ" ಎಂಬುದು ಆದಿಕಾಲದಲ್ಲಿ ಒಂದು ಅನ್ವರ್ಥಸಂಜ್ಞೆಯಾಗಿಯೇ ಇತ್ತು. ಆದರೆ ಛಂದೋಗತಿಗೆ ನಿಲುಗಡೆ ಇರುವಲ್ಲಿ 'ಭಾಷೆ'ಗೂ ಒಂದು ನಿಲುಗಡೆ ಇಲ್ಲದಿದ್ದರೆ, ಛಂದೋಗತಿಗನುಗುಣವಾಗಿ ಪದ್ಯಪಠನಮಾಡುವಾಗ ಅರ್ಥವ್ಯಕ್ತಿಗೆ ಆಘಾತವಾಗುವುದರಿಂದ, ಆ 'ಯತಿಸ್ಥಾನ'ಗಳಲ್ಲಿ 'ಭಾಷೆ'ಗೆ ಅರ್ಥಾತ್ ಪದಕ್ಕೆ ಪ್ರಾಪ್ಯವಾಗಬೇಕಾದ ನಿಲುಗಡೆಗೂ ಅದೇ ಸಂಜ್ಞೆ ಸಂಕ್ರಮಿಸಿ ರೂಢವಾದ ಕಾಲಘಟ್ಟದಲ್ಲಿ 'ಯತಿರ್ವಿಚ್ಛೇದಃ' (ಪಿಂಗಲ IV-೧) ಎಂಬ ಯತಿಲಕ್ಷಣ-ಸೂತ್ರವು (ಯತಿ ಶಬ್ದದ ನಿಷ್ಪನ್ನಾರ್ಥನಿರಪೇಕ್ಷವಾಗಿ) ಹುಟ್ಟಿ ಮಾನ್ಯವಾಗಿದ್ದಿರಬೇಕು. ಆ ಸೂತ್ರದಲ್ಲಿ ಪ್ರೋಕ್ತವಾದ 'ವಿಚ್ಛೇದ'ವು ಪದವಿಷಯಕವಾದುದು ಎಂಬುದರಲ್ಲಿ ಛಂದಃ-ಶಾಸ್ತ್ರಜ್ಞರೊಳಗೆ ಮತಭೇದವಿಲ್ಲ. ಪಿಂಗಲವ್ಯಾಖ್ಯಾನದಲ್ಲಿ ಹಲಾಯುಧನೂ ಆ ವಿಚ್ಛೇದವು ಪದವಿಷಯಕವೆನ್ನುವನಾದರೂ, ಯತಿಸಂಜ್ಞೆಗೆ ಪರಂಪರಾಗತವಾಗಿ ಬಂದಿದ್ದ ಅರ್ಥವು ಆ ಸೂತ್ರದಲ್ಲಿ ಗರ್ಭಿತವಾಗಿದೆಯೆಂದು ತೋರಿಸುವುದಕ್ಕೆ ಬಹಳ ಪ್ರಯಾಸಪಟ್ಟಿರುತ್ತಾನೆ. ಆದರೆ – ಆ ಸೂತ್ರದ ಅಕ್ಷರಾರ್ಥವು (literal meaning) 'ಯತಿ ಎಂದರೆ (ಪದ) ಬೇರಾಗುವಿಕೆ' ಎಂದಿಷ್ಟೇ ಆಗಿರುವುದರಿಂದಾಗಿ, ಮತ್ತು ಪಿಂಗಲೋತ್ತರಕಾಲದ ಛಂದಃಶಾಸ್ತ್ರಕಾರರು (ಆ ಸೂತ್ರವನ್ನೇ ಆಧರಿಸಿ) "ವಿರಾಮೋ ಯತಿಃ" (ಜಯದೇವ), "ವಾಗ್ವಿರಾಮೋ ಯತಿಃ" (ಜಯಕೀರ್ತಿ), "ಶ್ರವ್ಯೋ ವಿರಾಮೋ ಯತಿಃ" (ಹೇಮಚಂದ್ರ) ಇತ್ಯಾದಿಯಾಗಿ ಯತಿಲಕ್ಷಣನಿರೂಪಣಮಾಡಿದುದರ ಪರಿಣಾಮವಾಗಿ – "ಯತಿ ಎಂದರೆ ಪದದ ನಿಲುಗಡೆ" ಎಂಬೀ ಅಭಿಪ್ರಾಯವು ನೆಲೆಗೊಂಡಿತು. ಕಾಲಕಾಲಕ್ಕೆ ಹೀಗೆ ಯತಿಸಂಜ್ಞೆಯ ಅರ್ಥದಲ್ಲಿ ಅಷ್ಟಿಷ್ಟು ಬೆಳವಣಿಗೆಯಾಗುತ್ತಹೋದುದರಿಂದ, ಇಂದು 'ಯತಿ' ಎಂಬುದು ಖಚಿತವಾದ ಒಂದೇ ಅರ್ಥವುಳ್ಳ ಸಂಜ್ಞೆಯಾಗಿ ಉಳಿದಿಲ್ಲ. ಈಗ ಅದು ಈ ಕೆಳಗಿನ ಅರ್ಥಗಳಲ್ಲಿ ಪ್ರಯುಕ್ತವಾಗುವುದು ಕಂಡುಬರುತ್ತದೆ:

೧. ಪದವಿಚ್ಛೇದ; ಎಂದರೆ ಪದದ ನಿಲುಗಡೆ, ಅರ್ಥಾತ್ (ಒಂದು) ಪದ ಕೊನೆಗೊಳ್ಳುವಿಕೆ.

೨. 'ಛಂದೋಬಂಧ'ದ ಗತಿಯಲ್ಲಿ ನಿಶ್ಚಿತವಾಗಿರುವ ನಿಲುಗಡೆ; ಎಂದರೆ ಛಂದೋಗತಿಯ ಹಜ್ಜೆಯ ನಿಲುಗಡೆ, ಹಾಗೂ ಆ ಸ್ಥಾನ (=ಯತಿಸ್ಥಾನ).

೩. ಯತಿನಿಯಮ ಹಾಗೂ ಯತಿತತ್ತ್ವ

[ಛಂದೋವಿಚಾರಪ್ರಸಂಗಗಳಲ್ಲಿ 'ಯತಿ' ಶಬ್ದವು ಕಾಣಿಸಿಕೊಂಡಾಗ, ಈ ಮೇಲೆ ಹೇಳಲಾದ ಅರ್ಥಗಳೊಳಗೆ ಯಾವುದು ವಿವಕ್ಷಿತವೆಂಬುದನ್ನು, ಸಂದರ್ಭದಿಂದ ಊಹಿಸಿ-ಕೊಳ್ಳಬೇಕಾಗುತ್ತದೆ. ವಸ್ತುಸ್ಥಿತಿ ಹೀಗಿರುವುದಾದರೂ, ವಿವಕ್ಷಿತಾರ್ಥದಲ್ಲಿ ಸಂದೇಹವುಂಟಾಗ-ದಿರಲೆಂದು, ಈ ನಿಬಂಧದಲ್ಲಿ, ಅವಶ್ಯವೆಂದು ಕಂಡ ಎಡೆಗಳಲ್ಲೆಲ್ಲ, 'ಯತಿ' ಎಂದಿಷ್ಟೆ ಹೇಳದೆ – ಛಂದೋಯತಿ, ಪದಯತಿ ಇತ್ಯಾದಿಯಾಗಿ ಸ್ಪಷ್ಟೀಕರಿಸಿ ಹೇಳಲಾಗಿದೆ.]

ಪದ್ಯದಲ್ಲಿ ಅಂತಹ 'ಮೇಳ'ವಿರಬೇಕಾದರೆ, ಭಾಷಾಪದಗಳ ನಡಿಗೆ(=ಪದಗತಿ ಅಥವಾ ಭಾಷಾಗತಿ)ಯು ಛಂದಃಪದಗಳ ನಡಿಗೆ(=ಛಂದೋಗತಿ)ಯನ್ನು – ಪೂರ್ಣವಾಗಿ ಅಲ್ಲದಿದ್ದರೂ, ತಕ್ಕಮಟ್ಟಿಗೆ – ಅನುಸರಿಸಬೇಕಾಗುತ್ತದೆ; ಹಾಗೆ ಅನುಸರಿಸದಿದ್ದರೆ (ಛಂದೋಗತಿ' ಕೆಡುವುದಿಲ್ಲವಾದರೂ) "ಪದ್ಯಗತಿ" ಕೆಟ್ಟು ಹೋಗುತ್ತದೆ. ಹೀಗೆ "ಪದ್ಯಗತಿ" ಕೆಟ್ಟುಹೋಗುವುದನ್ನು ತಡೆಯುವ ಉದ್ದೇಶ-ದಿಂದಲೇ ಯತಿನಿಯಮಗಳು ಹುಟ್ಟಿರುವುದಾಗಿದೆ.[70]

[ವಿ.ಸೂ. : ಈ ನಿಬಂಧದಲ್ಲಿ – "ಗತಿ" ಎಂಬ ಪದವು, ಪೂರ್ವ-ಪದರಹಿತವಾಗಿರುವಲ್ಲಿ (ಉದಾ: ಗತಿ, ಗತಿಸಂಪನ್ನ – ಇತ್ಯಾದಿಗಳಲ್ಲಿ) ಬಹುಧಾ ಪಾರಿಭಾಷಿಕವಾದ ಅರ್ಥದಲ್ಲಿ – ಎಂದರೆ "ಆಕರ್ಷಕವಾದ ನಡಿಗೆ" ಎಂಬರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಬೇರೆಡೆಗಳಲ್ಲೆಲ್ಲ (ಉದಾ: ದ್ರುತಗತಿ, ಭಾಷಾಗತಿ, ಪದಗತಿ, ಆವರ್ತಗತಿ – ಇತ್ಯಾದಿಗಳಲ್ಲಿ) ಅದು 'ಗತಿ' ಎಂಬುದರ ಸಾಧಾರಣವಾದ ಅರ್ಥದಲ್ಲಿ – ಎಂದರೆ "ನಡಿಗೆ" ಎಂಬಿಷ್ಟೇ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆಂದು ತಿಳಿದುಕೊಳ್ಳಬೇಕು.]



70. ಆದರೆ ಲಯಾನ್ವಿತಬಂಧಗಳ, ಮುಖ್ಯವಾಗಿ ಮಾತ್ರಾಬಂಧಗಳ ಯತಿನಿಯಮ-ವಿಶೇಷಗಳು ಛಂದಃಶಾಸ್ತ್ರಗ್ರಂಥಗಳಿಂದ ಹೆಚ್ಚೇನೂ ನಮಗೆ ದೊರಕುವುದಿಲ್ಲ. (ಆರ್ಯಾ-ವರ್ಗವೊಂದು ಮಾತ್ರ ಈ ಮಾತಿಗೆ ಅಪವಾದವಾಗಿದೆ.) ವಾಸ್ತವವಾಗಿ – ಅವುಗಳ ಯತಿವ್ಯವಸ್ಥೆ ಅತಿಸೂಕ್ಷ್ಮವೂ ಜಟಿಲವೂ ಆಗಿದ್ದು, 'ಲಯರೇಖೆ'ಯ ಪೂರ್ವೋತ್ತರಪದ-ಸ್ವರೂಪವಿಶೇಷಗಳನ್ನು ಅದು ಅವಲಂಬಿಸಿರುವ ಕಾರಣ, ಆ ಯತಿನಿಯಮಗಳ ಕ್ರೋಡೀಕರಣವು ದುಃಸಾಧ್ಯವೆಂಬುದರಲ್ಲಿ ಸಂದೇಹವಿಲ್ಲ. ಹೀಗಿದ್ದರೂ – ಈ ಪರಿಚ್ಛೇದದಲ್ಲಿ ಪ್ರತಿಪಾದಿಸಿದ "ಪದ್ಯಗತಿ" ತತ್ತ್ವವನ್ನು – ಎಂದರೆ, "ಪದ್ಯಗತಿ ಎಂಬುದು ಛಂದೋಗತಿ ಮತ್ತು ಭಾಷಾಗತಿ ಎಂಬ ಗತಿದ್ವಂದ್ವದ ಹೆಣಿಗೆ" ಎಂಬ ತಥ್ಯವನ್ನು ಅವಲಂಬಿಸಿ ನೋಡಿದಾಗ – ಆ ಎಲ್ಲಾ ಛಂದೋಬಂಧಗಳಲ್ಲಿ – ಎಲ್ಲಿ ಯತಿಭಂಗವುಂಟಾಗಿದೆ, ಎಲ್ಲಿ ಆಗಿಲ್ಲ ಎಂಬುದರ ನಿರ್ಧಾರವು ತಾನಾಗಿ ಆಗಿಬಿಡುತ್ತದೆ.

# ಪರಿಚ್ಛೇದ ಎಂಟು

## ವಿಷಮಗತಿಬಂಧಗಳ ದ್ವೈವಿಧ್ಯ – ವಿಷಮಗತಿವೃತ್ತಗಳು

{'ಯತಿ'ಗಳೇ ವಿಷಮಗತಿಯ ನಿಯಂತೃಗಳು}

ಇನ್ನು ವಿಷಮಗತಿಯ ವಿಚಾರವನ್ನೆತ್ತಿಕೊಳ್ಳೋಣ: ಹಿಂದೆಯೇ ನಿವೇದಿ-ಸಿರುವಂತೆ, – ಒಂದು ಛಂದೋಬಂಧವು 'ಸಮಗತಿ'ಯದೆನಿಸಿಕೊಳ್ಳಬೇಕಾದರೆ ಅದರ ಗತಿಯಲ್ಲಿ 'ಆವರ್ತ'ಗಳಿದ್ದೇ ಇರಬೇಕಾಗುತ್ತದೆ. ವಸ್ತುತಃ ಆ ಆವರ್ತಗಳೇ ಅದರ ಗತಿಯನ್ನು ನಿಯಂತ್ರಿಸುವವುಗಳಾಗಿವೆ. ಒಂದು ಛಂದೋಬಂಧದ ಗತಿ-ಯಲ್ಲಿ ಅಂತಹ ಆವರ್ತಗಳಿಲ್ಲವಾದರೆ, ಆ ಛಂದೋಬಂಧವು 'ವಿಷಮಗತಿ'-ಯದೆನಿಸಿಕೊಳ್ಳುತ್ತದೆ. ಆದುದರಿಂದ ವಿಷಮಗತಿಯನ್ನು 'ನಿರಾವರ್ತಗತಿ' ಎಂದೂ ಹೆಸರಿಸಬಹುದಾಗಿದೆ. ಆದರೆ ಛಂದೋಗತಿ ಸಾವರ್ತವಾಗಿರಲಿ, ಅಥವಾ ನಿರಾವರ್ತವಾಗಿರಲಿ – ಅದು ಏಕಾಕಾರವಾದ ಅಖಂಡಗತಿಯಲ್ಲ-ವಾದುದರಿಂದ, ಅದರಲ್ಲಿ ಅಲ್ಲಲ್ಲಿ ನಿಲುಗಡೆಗಳು ಇದ್ದೇ ಇರುತ್ತವೆ. ಸಮಗತಿ ಎಂಬುದು ಆವರ್ತಪರಂಪರೆಯೇ ಆಗಿರುವ ಕಾರಣ, ಅದರ ಹಜ್ಜೆಗಳ ನಿಲುಗಡೆಗಳೆಂದರೆ ಆವರ್ತಗಳ ಕೊನೆ(ಅಥವಾ ಆವರ್ತಗಳೆರಡರ ಸಂಧಿ)ಗಳೇ ಆಗಿರುತ್ತವೆ. ವಿಷಮಗತಿಯ ಹಜ್ಜೆಗಳಿಗೆ ಪರಿಮಾಣಸಮತೆ ಇಲ್ಲದಿರುವುದರಿಂದ, ಅವುಗಳ ನಿಲುಗಡೆಗಳು ಸಮಾನಕಾಲಖಂಡಗಳಲ್ಲಿ ಇರದೆ ಬೇರೆಲ್ಲಿಯೋ ಇರು-ತ್ತವೆ. ಒಂದು ಛಂದೋಬಂಧದಲ್ಲಿ ಅವು ಎಲ್ಲೆಲ್ಲಿ ಇರುತ್ತವೆಂಬುದನ್ನು ಮೊದಲಾಗಿ ಗೊತ್ತುಮಾಡಿಕೊಳ್ಳುವುದು ಆ ಛಂದೋಬಂಧದ ಗತಿಯ ಪರಿಜ್ಞಾನಕ್ಕೆ ಸಹಕಾರಿ-ಯಾಗುವ ಕಾರಣ, ಆ ಸ್ಥಾನಗಳನ್ನು ಸೂಚಿಸುವುದಕ್ಕಾಗಿ ಆದಿಕಾಲದ ನಮ್ಮ ಛಂದೋವಿದರು 'ಯತಿ' ಎಂಬೊಂದು ಅನ್ವರ್ಥವೇ ಆದ ಸಂಜ್ಞೆಯನ್ನು ನಿರ್ಮಿಸಿದರು. (ಯತಿ = 'ತಡೆ', check ; ಛಂದೋಗತಿಗೆ ಬರುವ ತಡೆ = ಛಂದೋಗತಿಯ ನಿಲುಗಡೆ.)[71] ಛಂದೋಗತಿಯಲ್ಲಿ ನಿಶ್ಚಿತವಾಗಿರುವ ಈ "ಯತಿ"ಗಳೇ 'ನಿರಾವರ್ತಗತಿ'(= ವಿಷಮಗತಿ)ಯ ನಿಯಂತೃಗಳಾಗಿವೆ.[72]

---

71. ಹಿಂದೆ 69ನೆಯ ಟಿಪ್ಪಣಿಯಲ್ಲಿ ಸೂಚಿಸಿರುವಂತೆ – 'ಗತಿ'ಗೆ ನಿಲುಗಡೆ ಇರುವಲ್ಲಿ ಪದಕ್ಕೂ ನಿಲುಗಡೆ ಇರುವುದು ಅಪೇಕ್ಷಣೀಯವಾದುದರಿಂದ – 'ಯತಿ' ಎಂಬ ಸಂಜ್ಞೆಗೆ ಕಾಲಕ್ರಮದಲ್ಲಿ "ಯತಿಸ್ಥಾನದಲ್ಲಿರತಕ್ಕ ಪದವಿಚ್ಛೇದ" ಎಂಬರ್ಥವು ಪ್ರಾಪ್ತವಾಯಿತು. ಹೀಗೆ, ಆದಿಯಲ್ಲಿ 'ಗತಿ'ವಿಷಯಕವಾಗಿದ್ದ 'ಯತಿ'ಯು ಪದವಿಷಯಕವೂ ಆಗಿ ಪರಿಣಮಿಸಿದುದರ ಫಲವಾಗಿ, ಮತ್ತೆ ಅದಕ್ಕೆ – ಕೇವಲ 'ಪದವಿಚ್ಛೇದ'ವೆಂಬರ್ಥವೂ ಬರುವಂತಾಯಿತು.

72. {ತ್ರಿಕವಿಧಾನದ ಛಂದಸ್ತತ್ತ್ವ} 'ವೃತ್ತ'ಗಳ ಲಕ್ಷಣಗಳನ್ನು ಪಿಂಗಳಾಚಾರ್ಯನೂ ಅವನ ಅನುಯಾಯಿಗಳೂ "ಮಯರಸತಜಭನ" ಎಂಬ ಅಕ್ಷರಗಣವಿಧಾನದಿಂದ ನಿರೂಪಿಸಿರುವ

ಕಾರಣ ಮಾತ್ರಾಬಂಧಗಳ 'ಗತಿ'ಯ ಹಜ್ಜೆಗಳು ಹೇಗೆ ಆ ಮಾತ್ರಾಗಣಗಳಿಗೆ ಅನುಗುಣ-ವಾಗಿಯೇ ಇರುತ್ತವೋ ಹಾಗೆ – ವೃತ್ತಗಳ ಗತಿಯ ಹಜ್ಜೆಗಳು ಅಕ್ಷರಗಣಗಳಿಗನುಗುಣ-ವಾಗಿಯೇ ಇರುತ್ತವೆಂದು ಭ್ರಮಿಸಬಾರದು. ಈ ಅಕ್ಷರಗಣವ್ಯವಸ್ಥೆಯಾದರೋ ಗುರುಲಘು ಸ್ಥಿರವಾದ ಛಂದೋಬಂಧಗಳ ಲಕ್ಷಣಗಳನ್ನು ಸಂಕ್ಷಿಪ್ತವಾಗಿಯೂ ನಿಷ್ಕೃಷ್ಟವಾಗಿಯೂ ತಿಳಿಸುವುದಕ್ಕಾಗಿ ಪಿಂಗಳಾಚಾರ್ಯನು ವಿರಚಿಸಿದ ಒಂದು 'ವಿಧಾನ'(formula)ವಾಗಿದೆಯೇ ಹೊರತು, ಆಯಾ ವೃತ್ತದ 'ಗತಿ'ಗೂ ಈ ಗಣವ್ಯವಸ್ಥೆಗೂ (ದಂಡಕಗತಿಯೊಂದನ್ನು ಬಿಟ್ಟು) ಸಂಬಂಧವಿರುವುದಿಲ್ಲ. ಹಾಗಾದರೆ – ಆ ಗಣಗಳನ್ನು ಮೂರಕ್ಷರದವುಗಳಾಗಿಯೇ ಪಿಂಗಳಾಚಾರ್ಯನು ಕಲ್ಪಿಸಿದ್ದೇಕೆ? ಎರಡೋ ನಾಲ್ಕೋ ಅಕ್ಷರದವುಗಳಾಗಿ ಏಕೆ ಕಲ್ಪಿಸಲಿಲ್ಲ? – ಎಂಬ ಸಮಸ್ಯೆ ಇಲ್ಲಿ ತಲೆಯೆತ್ತುವುದು ಸಹಜವೇ ಆಗಿದೆ. ('ಜನಾಶ್ರಯ'ನೆಂಬ ಛಂದಃಶಾಸ್ತ್ರಕಾರನು ಪಿಂಗಳನ "ತ್ರಿಕ" ವಿಧಾನವನ್ನನುಸರಿಸದೆ, ನಾಲ್ಕಕ್ಷರದ ಗಣಗಳ ಮೂಲಕ ವೃತ್ತಲಕ್ಷಣನಿರೂಪಣ ಮಾಡಿಯೂ ಇದ್ದಾನೆ. ಆದರೆ ಅವನನ್ನು ಯಾರೂ ಅನುಸರಿಸಿ-ದಂತಿಲ್ಲ. ಅವನು ಇತ್ತೀಚೆಯ ಗ್ರಂಥಕಾರನೇನೂ ಅಲ್ಲ; ಅವನ ಗ್ರಂಥವನ್ನು ತಾನು ಓದಿದ್ದೇನೆಂದು ಜಯಕೀರ್ತಿ ಹೇಳಿರುತ್ತಾನೆ. VIII–೧೯). ಈ ಸಮಸ್ಯೆಗೆ ಸಾಮಾನ್ಯವಾಗಿ ಛಂದೋಮೀಮಾಂಸಕರೆಲ್ಲ ಹೇಳುವ ಸಮಾಧಾನ ಹೀಗೆ: ಎರಡಕ್ಷರದ ಗಣವ್ಯವಸ್ಥೆಯನ್ನು ಬಳಸಿದರೆ ಗಣಸಂಖ್ಯೆ ನಾಲ್ಕೇ ಆಗುವ ಸೌಲಭ್ಯವಿರುವುದಾದರೂ, ವೃತ್ತಲಕ್ಷಣಸೂತ್ರಗಳು ಸಾಕಷ್ಟು ಸಂಕ್ಷಿಪ್ತವಾಗುವಂತಿಲ್ಲ. ನಾಲ್ಕಕ್ಷರದ ಗಣವ್ಯವಸ್ಥೆಯಲ್ಲಿ ಗಣಸಂಖ್ಯೆ ಹದಿನಾರಾಗುವು-ದರಿಂದ, ನೆನಪಿನಲ್ಲಿಟ್ಟುಕೊಳ್ಳುವುದು ಕಷ್ಟವಾಗುವುದು ಮಾತ್ರವಲ್ಲ, ಗಣಶೇಷಾಕ್ಷರಸಂಖ್ಯೆ ಕೆಲವು ವೃತ್ತಗಳಲ್ಲಿ ಮೂರರವರೆಗೆ ಬೆಳೆದು ಸಂಕ್ಷಿಪ್ತತೆ ಅಲ್ಲಿ ಉಳಿಯುವುದಿಲ್ಲ. ಆದುದರಿಂದ ಪಿಂಗಳಾಚಾರ್ಯನು ಮಧ್ಯಮಮಾರ್ಗವನ್ನವಲಂಬಿಸಿ, ಮೂರಕ್ಷರದ (ಎಂಟು) ಗಣಗಳನ್ನು ನಿರ್ಮಿಸಿದ್ದಾಗಿದೆ. – ಈ ಮಾತಿನಲ್ಲಿ ಸತ್ಯಾಂಶವಿಲ್ಲದಿಲ್ಲ. ಆದರೆ – ಅಸ್ತಮಿತಪ್ರಾಯವಾಗಿದ್ದ ಜಯಕೀರ್ತಿಯ ಛಂದೋನುಶಾಸನವನ್ನು ಬೆಳಕಿಗೆ ತಂದು, ಇನ್ನೂ ಎಷ್ಟೋ ಛಂದೋಗ್ರಂಥಗಳನ್ನು ಸಂಪಾದಿಸಿ, ವ್ಯಾಖ್ಯಾನಿಸಿ, ಪ್ರಕಟಪಡಿಸಿ – ಛಂದಃಶಾಸ್ತ್ರಾಸಕ್ತರಿಗೆ ಪರಮೋಪಕಾರಮಾಡಿ ಖ್ಯಾತನಾಮರಾಗಿರುವ ವಿದುಷಾಂವರ ಶ್ರೀ ವೇಲಣಕರರು ಈ ಮೇಲಿನ ಆಶಯದಲ್ಲಿ ಸಹಮತವುಳ್ಳವರೇ ಆದರೂ, ಅಷ್ಟರಿಂದ ತೃಪ್ತರಾಗದೆ – "ಮೂರು" ಎಂಬ ಸಂಖ್ಯೆಗೆ ಭಾರತೀಯ ತತ್ತ್ವಜ್ಞಾನಾದಿಗಳಲ್ಲಿ (ಉದಾ: ತ್ರಿಗುಣ, ತ್ರಿಮೂರ್ತಿ, ತ್ರಿಕಾಲ, ತ್ರಿಲೋಕ, ತ್ರಿದೋಷ, ತ್ರಿಸಂಧ್ಯಾ – ಇತ್ಯಾದಿ) ಇರುವ ಅಸಾಧಾರಣವಾದ ಸ್ಥಾನವೂ ಪಿಂಗಳನ "ತ್ರಿಕವ್ಯವಸ್ಥೆ"ಗೆ ಹೇತುವಾಗಿದ್ದಿತೆನ್ನುತ್ತಾರೆ (*Jayadaman - Introduction - Page 17-18*). ಆದರೆ ಅವರ ಈ ಪ್ರತಿಪಾದನೆಯಿಂದ ತ್ರಿಕವ್ಯವಸ್ಥೆಯನ್ನು ಸಮರ್ಥಿಸುವ ಛಂದಸ್ತತ್ತ್ವವಾವುದೂ ಪ್ರಕಾಶಿತವಾಗಿಲ್ಲ; ಬದಲಾಗಿ, ಪಿಂಗಳನೊಬ್ಬ ಭಾವುಕನಾಗಿದ್ದನೆಂಬರ್ಥ ಮಾತ್ರ ವ್ಯಕ್ತವಾದಂತಾಗಿದೆ! ಆದರೆ – ಛಂದಸ್ತತ್ತ್ವಕ್ಕೆ ಸಂಬಂಧಿಸಿದ್ದೇ ಆದ ಒಂದು ತಥ್ಯವು ಪಿಂಗಳಾಚಾರ್ಯನ ತ್ರಿಕವ್ಯವಸ್ಥೆಗೆ ಮುಖ್ಯ ಕಾರಣವಾಗಿತ್ತೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಅದನ್ನಿಲ್ಲಿ ನಿವೇದಿಸುವ ಪ್ರಯತ್ನಮಾಡುತ್ತೇನೆ.

ಈ ನಿಬಂಧದಲ್ಲಿ ಹಿಂದೆ (ಪರಿಚ್ಛೇದ IV) ವಿವೃತವಾಗಿರುವಂತೆ – ಒಂದಕ್ಕಿಂತ ಹೆಚ್ಚು ಅಕ್ಷರಗಳಿರುವ ಒಂದು ಉಚ್ಚಾರದಲ್ಲಿ, ಅರ್ಥಾತ್ ಒಂದು ಅಕ್ಷರಪುಂಜದಲ್ಲಿ, ಒಂದು ಛಂದೋವಿನ್ಯಾಸವು ರೂಪುಗೊಳ್ಳುತ್ತದೆ. "ಅಕ್ಷರಪುಂಜ"ಗಳು ಮೂಲತಃ ಎರಡೇ ವಿಧ; ಎರಡಕ್ಷರಗಳ ಪುಂಜ ಮತ್ತು ಮೂರಕ್ಷರಗಳ ಪುಂಜ. ಅಕ್ಷರಪುಂಜವೂ ಛಂದೋವಿನ್ಯಾಸವೂ

{ಛಂದೋಯತಿ ಮತ್ತು ಪದಯತಿ}

ಹಿಂದೆ 69ನೆಯ ಟಿಪ್ಪಣಿಯಲ್ಲಿ ನಿವೇದಿಸಿರುವಂತೆ – ಯತಿ ಎಂಬ ಸಂಜ್ಞೆಯ ಅರ್ಥಸ್ವರೂಪವು ಸಂದರ್ಭಾನುಸಾರವಾಗಿ ಅಷ್ಟಿಷ್ಟು ಭಿನ್ನವಾಗಿ ಪರಿಣಮಿಸಿರುವುದರಿಂದ, ಪ್ರಸ್ತುತ ಸಂದರ್ಭದ ಅದರ ಅರ್ಥವಾದ "ಛಂದೋ-ಗತಿಯ ನಿಲುಗಡೆ" ಎಂಬುದು ನಿಸ್ಸಂದಿಗ್ಧವಾಗುವುದಕ್ಕಾಗಿ ಅದನ್ನಿಲ್ಲಿ "ಛಂದೋ-ಯತಿ" ಎಂದು ಕರೆಯೋಣ. (ಮತ್ತು 'ಪದವಿಚ್ಛೇದ' ಎಂಬರ್ಥವು ವಿವಕ್ಷಿತವಾಗುವಲ್ಲಿ, ಮುಂದೆ, "ಪದಯತಿ" ಎನ್ನೋಣ.)

{ವಿಷಮಗತಿಬಂಧಗಳಲ್ಲಿ ಯತಿಸ್ಥಾನಗಳನ್ನು ತಿಳಿಯುವ ವಿಧಾನ}

ಒಂದು ಸಮಗತಿಬಂಧದ ಛಂದಃಪದಪರಿಮಾಣವು ಆ ಬಂಧದ ಛಂದೋಗತಿಯಲ್ಲಿ ನಿಶ್ಚಿತವಾಗಿರುವ ಆವರ್ತಾನುಗುಣವಾಗಿರುತ್ತದೆ. (ನಿರಾವರ್ತ-ವಾದ) ವಿಷಮಗತಿಬಂಧಗಳ ಛಂದಃಪದಪರಿಮಾಣಗಳು ಆಯಾ ಛಂದೋ-ಬಂಧದ ಗತಿಯಲ್ಲಿ ನಿಶ್ಚಿತವಾಗಿರುವ 'ಛಂದೋಯತಿ'ಗಳಿಂದ ಮರ್ಯಾದಿತ-ವಾಗಿರುತ್ತವೆ. ಆದರೆ ಅವುಗಳನ್ನು ತಿಳಿದುಕೊಳ್ಳುವುದು, ಸಮಗತಿಬಂಧಗಳ

---

ಪರಸ್ಪರ ಅವಿನಾಭಾವಿಗಳಾಗಿದ್ದು ಅವಿಭಾಜ್ಯಗಳಾಗಿರುವುದರಿಂದ, ಛಂದೋವಿನ್ಯಾಸಗಳೂ ಮೂಲತಃ ಎರಡೇ – ಎರಡಕ್ಷರದವು ಮತ್ತು ಮೂರಕ್ಷರದವು – ಆಗಿರುತ್ತವೆ. (ಮೂರಕ್ಕಿಂತ ಅಧಿಕ ಸಂಖ್ಯೆಯ 'ಪುಂಜ'ಗಳೆಲ್ಲವೂ ಈ ಎರಡು "ಮೂಲಪುಂಜ"ಗಳ ಸಂಕಲನರೂಪ-ಗಳೆಂಬುದನ್ನು ವಿವರಿಸುವ ಅವಶ್ಯಕತೆಯಿಲ್ಲ.) ಆದುದರಿಂದ ಈ ಎರಡು 'ಮೂಲವಿನ್ಯಾಸ'-ಗಳೊಳಗೆ ಯಾವುದೊಂದನ್ನು "ಅಕ್ಷರಚ್ಛಂದ"ದ ಗಣವಾಗಿ ಸ್ವೀಕರಿಸುವುದೇ ನ್ಯಾಯ್ಯವಾಗಿದೆ ಹೊರತು, ಮೂರಕ್ಕಿಂತ ಅಧಿಕಾಕ್ಷರಗಳ ಛಂದೋವಿನ್ಯಾಸವನ್ನು "ಅಕ್ಷರಗಣ"ವಾಗಿ – ಎಂದರೆ ಅಕ್ಷರಚ್ಛಂದದ 'ಮೂಲಮಾನ'ವಾಗಿ – ಮಾಡಿಕೊಳ್ಳುವುದು 'ಶಾಸ್ತ್ರೀಯ'-(=ವೈಜ್ಞಾನಿಕ)ವೆನಿಸಲಾರದು. ಈ ಎರಡು ಮೂಲವಿನ್ಯಾಸಗಳೊಳಗೆ ಕಿರಿಯದನ್ನು (ಎರಡ-ಕ್ಷರದ್ದನ್ನು) 'ಗಣ'ವಾಗಿ ಸ್ವೀಕರಿಸುವುದು – ಹಿಂದೆ ವಿವೃತವಾದಂತೆ –ವ್ಯಾವಹಾರಿಕವಾಗಿ ಲಾಭಕರವಲ್ಲವಾದುದರಿಂದ, ಪಿಂಗಲಾಚಾರ್ಯನು ಮೂರಕ್ಷರದ ವಿನ್ಯಾಸವನ್ನೇ "ಅಕ್ಷರ-ಚ್ಛಂದೋಗಣ"ವಾಗಿ ಸ್ವೀಕರಿಸಿದ್ದಾಗಿದೆ. ಹೀಗೆ – ಸೂಕ್ಷ್ಮವಾದೊಂದು ಶಾಸ್ತ್ರೀಯವಾದ ತಳಹದಿಯಲ್ಲಿ "ತ್ರಿಕ"ಗಳನ್ನು ಸೃಜಿಸಿ ಬಳಸಿದ ಪಿಂಗಲಾಚಾರ್ಯನು 'ತ್ರಿಕ'ಗಳನ್ನು ಮಾತ್ರವಲ್ಲ, ಅವುಗಳೊಂದಿಗೆ (ಶಾಸ್ತ್ರೀಯವೇ ಆಗಿರುವ) "ದ್ವಿಕ"ಗಳನ್ನೂ ಬಳಸುತ್ತಿದ್ದರೆ, ತ್ರಿಕಶೇಷವಾಗಿ "ಲಗ"ಸಂಜ್ಞೆಗಳನ್ನು ಬಳಸುವ ಅವಶ್ಯಕತೆ ಬರುತ್ತಿರಲಿಲ್ಲವಾದರೂ – ಹಾಗೆ ಮಾಡಿದ್ದರೆ (ಎಂಟು ತ್ರಿಕಗಳು ಮತ್ತು ನಾಲ್ಕು ದ್ವಿಕಗಳು ಕೂಡಿ) ಹನ್ನೆರಡು ಸಂಕೇತಾಕ್ಷರಗಳನ್ನು ಅವನು ಬಳಸಬೇಕಾಗುತ್ತಿತ್ತು. ಆದುದರಿಂದ ಹಾಗೆ ಮಾಡದೆ – ಶಾಸ್ತ್ರೀಯತೆಯನ್ನು ಮಾತ್ರವಲ್ಲ. ಲಕ್ಷಣಸೂತ್ರಗಳಿಗೆ ಪರಮಾವಧಿಯ ಸಂಕ್ಷಿಪ್ತತೆಯನ್ನು ಒದಗಿಸುವ ವ್ಯಾವಹಾರಿಕ ದೃಷ್ಟಿ-ಯನ್ನೂ ಅವನು ಅವಲಂಬಿಸಿ –"ಮಯರಸತಜಭನಲಗ"ಎಂಬ ಹತ್ತೇ ಸಂಕೇತಾಕ್ಷರಗಳ ಬಳಕೆಯಿಂದ ಕಾರ್ಯವನ್ನು ಸಾಧಿಸಿದ್ದಾನೆ. "ಮಾತ್ರಾಲಾಘವಂ ಪುತ್ರೋತ್ಸವಂ ಮನ್ಯಂತೇ ವೈಯಾಕರಣಾಃ" ಎಂಬ ಸುಪ್ರಸಿದ್ಧವಾದ ಮಾತು, ವ್ಯಾಕರಣಸೂತ್ರಕಾರರಿಗೆ ಮಾತ್ರವಲ್ಲ, ಸೂತ್ರರೂಪದಲ್ಲಿ ಶಾಸ್ತ್ರರಚನೆ ಮಾಡುವವರಿಗೆಲ್ಲರಿಗೂ ಅನ್ವಯಿಸತಕ್ಕುದೇ ಆಗಿದೆ.

ಛಂದಃಪದಪರಿಮಾಣಗಳನ್ನು ತಿಳಿದುಕೊಳ್ಳುವಷ್ಟು ಸುಲಭವಲ್ಲ. ಕಾರಣವೇನೆಂದರೆ – ಸಮಗತಿಬಂಧಗಳ ಛಂದಃಪದಪರಿಮಾಣಗಳು ಆವರ್ತಾಧೀನವಾಗಿದ್ದು, ಪರಸ್ಪರ ಸಮಾನಕಾಲಿಕವಾಗಿರುವುದರಿಂದ ಆಪಾತತಃ (ಸರ್ವರಿಗೂ) ಸುಬೋಧ-ವಾಗುತ್ತವೆ. ವಿಷಮಗತಿಬಂಧಗಳ ಛಂದಃಪದಪರಿಮಾಣಗಳು ಅವಗತವಾಗ-ಬೇಕಾದರೆ, ಆಯಾ ಬಂಧವರ್ಗದ ಛಂದೋಗತಿಯಲ್ಲಿ ನಿಶ್ಚಿತವಾಗಿರುವ ಯತಿಸ್ಥಾನಗಳು ನಮಗೆ ಗೊತ್ತಿರಬೇಕಾಗುತ್ತವೆ. ಛಂದೋಗ್ರಂಥಗಳಲ್ಲಿ ಸಾಮಾನ್ಯ-ವಾಗಿ ಅವು ಸೂಚಿಸಲ್ಪಟ್ಟಿರುವವಾದರೂ, ಪಾದಮಧ್ಯ ಯತಿವಿಷಯದಲ್ಲಿ, ಬೇರೆ ಬೇರೆ ಗ್ರಂಥಗಳಲ್ಲಿ ಅವು ಬೇರೆಬೇರಾಗಿರುವುದೂ ಉಂಟು. (ಉದಾ: ಶಾಲಿನೀ ವೃತ್ತದ ಪಾದಮಧ್ಯಯತಿ ನಾಲ್ಕನೆಯ ಅಕ್ಷರದಲ್ಲಿರುವುದೆಂದು ಪಿಂಗಳಸೂತ್ರವು ಹೇಳುವುದಾದರೂ, ಛಂದೋಂಬುಧಿಯಲ್ಲಿ ಅದು ಏಳನೆಯ ಅಕ್ಷರದಲ್ಲೆಂದು ಹೇಳಲ್ಪಟ್ಟಿದೆ.) ಆದುದರಿಂದ ವಿಷಮಗತಿಬಂಧಗಳ ಪಾದಮಧ್ಯ ಯತಿಸ್ಥಾನಗಳನ್ನು ಖಚಿತವಾಗಿ ತಿಳಿದುಕೊಳ್ಳುವುದಕ್ಕೆ ಸ್ವತಂತ್ರ ಪ್ರಯತ್ನವೂ ಬೇಕಾಗುತ್ತದೆ. ಹಾಗೆ ತಿಳಿದುಕೊಳ್ಳುವ ವಿಧಾನದ ಪರಿಚಯವು ಜಿಜ್ಞಾಸುಗಳಿಗೆ ಉಪಯುಕ್ತವಾಗಬಹು-ದೆಂಬುದರಿಂದ, ಅದನ್ನಿಲ್ಲಿ ಒಂದಿಷ್ಟು ವಿವರಿಸುವ ಪ್ರಯತ್ನ ಮಾಡುತ್ತೇನೆ. ಆದರೆ ಅದಕ್ಕೆ ಮೊದಲು, ವಿಷಮಗತಿಬಂಧಗಳ ಕುರಿತು ಇನ್ನೂ ನಾಲ್ಕು ಮಾತು ಹೇಳುವುದು ಅವಶ್ಯವಾಗಿದೆ.

ವಿಷಮಗತಿಬಂಧಗಳು, ಎಂದರೆ ಲಯರಹಿತವಾದ ಛಂದೋಬಂಧಗಳು ಹುಟ್ಟಿಬಂದುದು ಸಂಸ್ಕೃತವಾಙ್ಮಯದಲ್ಲಿ ಮಾತ್ರ. ನಮ್ಮ ದೇಶದ ಬೇರೆ ಯಾವ ಭಾಷೆಯಲ್ಲಿಯೂ ಅವು ಹುಟ್ಟಿ ಬರಲಿಲ್ಲ.[73] (ಇತರ ದೇಶಗಳ ವಾಙ್ಮಯ-

---

73. {ತಮಿಳಿನ 'ವಿರುತ್ತ'ಗಳು ವಿಷಮಗತಿಬಂಧಗಳಲ್ಲ} ನಮ್ಮ ದೇಶದ ಸಂಸ್ಕೃತೇತರ ಭಾಷೆಗಳ ಗ್ರಂಥಗಳಲ್ಲಿ ಕಂಡುಬರುವ ವಿಷಮಗತಿಬಂಧಗಳೆಲ್ಲವೂ (ಉದಾ: ಖ್ಯಾತ ಕರ್ಣಾ-ಟಕವೃತ್ತಗಳು) ಸಂಸ್ಕೃತದಿಂದಲೇ ತೆಗೆದುಕೊಂಡ ಛಂದೋಬಂಧಗಳು. ಹಳೆಯ ತಮಿಳು ಕಾವ್ಯಗಳಲ್ಲಿ ಪ್ರಸಿದ್ಧವಾಗಿರುವ "ವಿರುತ್ತ"(ವೃತ್ತ)ಗಳೆಂಬ ಛಂದೋಬಂಧಗಳು, ಸಂಸ್ಕೃತದಿಂದ ಬಂದವುಗಳಾಗಿರದೆ, ಸ್ವತಂತ್ರವಾಗಿ ಹುಟ್ಟಿದವುಗಳಾದರೂ – ಅವು ವಿಷಮಗತಿಬಂಧಗಳಲ್ಲ. ಅವುಗಳನ್ನು ಇಂದು ತಮಿಳರು ಲಯರಹಿತ(=ವಿತಾಲ)ವಾಗಿಯೇ ಪಠಿಸುವರಾದರೂ, ಅವು ವಸ್ತುತಃ ಲಯಾನ್ವಿತಬಂಧಗಳೇ ಆಗಿರುತ್ತವೆ. ಅವೆಲ್ಲವೂ ತಮಿಳಿನ "ಚೀರ್"(=ಗಣ) ನಿಯಮಕ್ಕೆ ಬದ್ಧವಾಗಿರುವಂಥವುಗಳು. ಚೀರುಗಳೆಲ್ಲವೂ "ವಾಯ್‌ಪಾಟ್" (ಬಾಯಿಪಾಟ) ಎಂಬ ಹೆಸರಿನ ತೇಮಾ, ಪುಳಿಮಾ ಇತ್ಯಾದಿ "ಗಣವಾಚಕ"ಗಳಿಗುಣವಾಗಿ ಪಠಿಸತಕ್ಕವು-ಗಳೆಂಬುದು ತಮಿಳಿನ "ಯಾಪ್ಪರುಂಗಲ್" ಮೊದಲಾದ ಛಂದೋಗ್ರಂಥಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ತಮಿಳಿನ "ಚೀರು"ಗಳಿಗೂ ಕನ್ನಡದ ತ್ರಿಮೂರ್ತಿಗಣಗಳಿಗೂ ಅಷ್ಟಿಷ್ಟು ಹೋಲಿಕೆ ಇರುವುದಾದರೂ, ಅವು ಒಂದಕ್ಕೊಂದು ಸಮ ಎನ್ನುವಂತಿಲ್ಲ. ಕನ್ನಡದ ತ್ರಿಮೂರ್ತಿಗಣಗಳಲ್ಲಿ ಲಘುಗಳು ನಿಯತಸ್ಥಾನಗಳಲ್ಲಿ ಕರ್ಷಣವನ್ನು ಪಡೆಯುವವಾದರೂ, ಒತ್ತಕ್ಷರಗಳನ್ನು ತೇಲಿಸಿ ಅಥವಾ ದೀರ್ಘಾಕ್ಷರಗಳನ್ನು ಹ್ರಸ್ವೀಕರಿಸಿ ಗಣಗಳಿಗೆ ಕಾಲಸಾಮ್ಯವನ್ನು ತರುವುದಕ್ಕಾಗುವುದಿಲ್ಲ. ತಮಿಳಿನ ಚೀರುಗಳಲ್ಲಾದರೆ ಹಾಗಲ್ಲ; ಅಲ್ಲಿ ಕರ್ಷಣವಿರುವುದು

ಗಳಲ್ಲಿಯೂ ಪ್ರಾಯಶಃ ಅವು ಹುಟ್ಟಿಲ್ಲ.) ಸಂಸ್ಕೃತದಲ್ಲಾದರೂ – ತುಲನಾತ್ಮಕವಾಗಿ ಹೇಳುವುದಾದರೆ – ಅವುಗಳ ಸಂಖ್ಯೆ ಲಯಾನ್ವಿತಬಂಧಗಳ ಸಂಖ್ಯೆಗಿಂತ ಎಷ್ಟೋ ಕಡಮೆ. ಹೀಗಿದ್ದರೂ ವಿಶಾಲವಾದ ಸಂಸ್ಕೃತಪದ್ಯವಾಙ್ಮಯದ ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚಿನ ಭಾಗವು ವಿಷಮಗತಿಬಂಧಗಳಿಂದಲೇ ತುಂಬಿದೆ. ಈ ವಿಷಮಗತಿಬಂಧಗಳೊಳಗೆ (ಮುಖ್ಯವಾಗಿ) ಎರಡು ವರ್ಗಗಳಿವೆ: (೧) ಗುರುಲಘುಸ್ಥಿರವಾದ ಅಕ್ಷರಸಂಖ್ಯಾನಿಯಮವುಳ್ಳ "ವೃತ್ತ"ಗಳದು ಒಂದು ವರ್ಗ.

---

ಮಾತ್ರವಲ್ಲ, ಯಥೇಚ್ಛವಾಗಿ ಶಿಥಿಲೀಕರಣ(ಎಂದರೆ ಒತ್ತಕ್ಷರಗಳನ್ನು ತೇಲಿಸುವಿಕೆ)ವೂ ದೀರ್ಘಾಕ್ಷರಗಳಿಗೆ ಹ್ರಸ್ವೀಕರಣವೂ ಇರಬಹುದಾಗುತ್ತದೆ. ತಮಿಳಿನ ಚೀರುಗಳ ಘಟಕಗಳಾದ "'ಅಶೈ"(= ಛಂದೋಂಶ)ಗಳಿಗೆ ಗುರುಲಘೂಚ್ಚಾರಕಾಲನಿಯಮವನ್ನು ಪೂರ್ಣತಯಾ ಅನ್ವಯಿಸುವುದಕ್ಕಾಗುವುದಿಲ್ಲವಾದುದರಿಂದ, ಯಾವುದೊಂದು ಪದ್ಯದ ಘಟಕಗಳಾದ ಚೀರುಗಳಿಗೆ ಕಾಲಸಮತ್ವವನ್ನು ತರಬೇಕಾದರೆ ಕರ್ಷಣವನ್ನು ಮಾತ್ರವಲ್ಲ, ಶಿಥಿಲೀಕರಣ–ವನ್ನೂ ಹ್ರಸ್ವೀಕರಣವನ್ನೂ ಅವಲಂಬಿಸಬೇಕಾಗುತ್ತದೆ. ಈ ವಿಧಾನವನ್ನು ತಿಳಿಸುವುದಕ್ಕಾಗಿಯೇ "ತೇಮಾ, ಪುಳಿಮಾ" ಇತ್ಯಾದಿ ಗಣವಾಚಕಗಳು ತಮಿಳು ಛಂದೋವಿದರಿಂದ ನಿರ್ಮಿತ–ವಾಗಿರುತ್ತವೆ. ಆ ಗಣವಾಚಕಗಳಿಗನುಗುಣವಾಗಿ ಪಠಿಸಿದಾಗ ಆ ಚೀರುಗಳು ಸಮಾನ–ಕಾಲಿಕವಾದ ಛಂದಃಪದಗಳಾಗುವುದರಿಂದ, ಅವುಗಳಿಂದ ಘಟಿತವಾದ ಪದ್ಯಗಳೆಲ್ಲವೂ ಲಯಾನ್ವಿತಗಳಾಗುತ್ತವೆ. "ಕಂಬ (ಕಂಪ?) ರಾಮಾಯಣ" ಮೊದಲಾದ ತಮಿಳು ಕಾವ್ಯ–ಗಳಲ್ಲಿ ಪ್ರಯುಕ್ತವಾಗಿರುವ "ವಿರುತ್ತ"ಗಳೆಲ್ಲವೂ ಅಂತಹ ಚೀರುಗಳಿಂದಲೇ ಘಟಿತವಾಗಿರು–ವುದರಿಂದ ಅವೆಲ್ಲವೂ – ಕನ್ನಡದ 'ಪಿರಿಯಕ್ಕರ' ಮೊದಲಾದವುಗಳು ಹೇಗೋ ಹಾಗೆ – ಲಯಾನ್ವಿತಬಂಧಗಳೇ ಹೊರತು ವಿಷಮಗತಿಬಂಧಗಳಲ್ಲ. "ವಾಯ್‌ಪಾಟ್" (=ಗಣವಾಚಕ) ನಿಯಮವನ್ನು ಬಿಟ್ಟು ಯಥಾಕ್ಷರ ಗುರುಲಘುವಾಗಿ ಅವನ್ನು ಪಠಿಸಿದರೆ, ಅವು ವಿಷಮಗತಿ ಬಂಧಗಳೆಂಬ ಭ್ರಾಂತಿಯನ್ನು ಹುಟ್ಟಿಸುತ್ತವೆ. ಇಷ್ಟರಿಂದಾಗಿ – ಹಲವರು ಭಾವಿಸಿರುವಂತೆ – ಆ 'ವಿರುತ್ತ'ಗಳು ವಿಷಮಗತಿಬಂಧಗಳೆಂದಾಗಲಾರವು. ಮತ್ತು, ಪ್ರಾಯಶಃ ಆ ತಮಿಳು 'ವಿರುತ್ತ'ಗಳ ಹಾಗೂ ಸಂಸ್ಕೃತದ 'ಮಾಲಿನೀವೃತ್ತ'ದ (ನಿಯಮಬಾಹಿರವಾದ) ಅನುಕರಣೆ–ಯಾಗಿ ಮಲಯಾಳದ "ಕಥಕ್ಕಳಿ" ರಚನೆಗಳಲ್ಲಿ ಮೂಡಿದ "ಕೇಕಯವೃತ್ತ"ವೂ, ಅದರ ಅನುಕರಣೆಯಾಗಿ ಪಾರ್ತಿಸುಬ್ಬನು ತನ್ನ ಯಕ್ಷಗಾನದಲ್ಲಿ ಪ್ರಯೋಗಿಸಿರುವ ಅದೊಂದು ಬಂಧವಿಶೇಷವೂ ಲಯರಹಿತವಾದವುಗಳಾದರೂ – ಅವುಗಳಿಗೆ ಅಕ್ಷರಸಂಖ್ಯಾನಿಯಮ–ವಿಲ್ಲದಿರುವುದರಿಂದ, ಪ್ರಸ್ತುತವಾದ ವಿಷಮಗತಿಬಂಧಗಳಲ್ಲಿ ಅವು ಸೇರುವಂತಿಲ್ಲ. ವಸ್ತುತಃ ಅವು "ವೃತ್ತವಿಕೃತಿ"ಗಳು ಹೊರತು "ವೃತ್ತ"ಗಳಲ್ಲ; ಅಥವಾ (ಅನುಷ್ಟುಪ್ ಶ್ಲೋಕದ ಹಾಗೆ) "ಅಕ್ಷರಜಾತಿ"ಗಳೂ ಅಲ್ಲ. ಕಥಕ್ಕಳಿರಚನೆಗಳಲ್ಲಿಯೂ ಪಾರ್ತಿಸುಬ್ಬ ಮೊದಲಾದವರ ಯಕ್ಷಗಾನದಲ್ಲಿಯೂ "ಶಾರ್ದೂಲವಿಕ್ರೀಡಿತ"ವೆಂಬ ಹೆಸರು ಕೊಟ್ಟು ನಿಯಮೋಲ್ಲಂಘನ ಮಾಡಿ ರಚಿಸಿದ ಬಂಧವಿಶೇಷಗಳೂ ಕೆಲವು ಇವೆ. ಅಂಥವುಗಳನ್ನು 'ವೃತ್ತಾಭಾಸ" ಅಥವಾ ವೃತ್ತಿವಿಕೃತಿಗಳೆನ್ನಬಹುದೇ ವಿನಾ, ವಿಷಮಗತಿ ವೃತ್ತಗಳೆನ್ನಲಾಗುವುದಿಲ್ಲ. (ಅವು ಲಯಾನ್ವಿತ–ವಲ್ಲವಾದುದರಿಂದ, ಸಮಗತಿಬಂಧಗಳೊಳಗೂ ಅವು ಸೇರುವ ಹಾಗಿಲ್ಲ.) ಪದ್ಯಗಂಧಿಗದ್ಯ–ಗಳಿಗೆ ಹೇಗೋ ಹಾಗೆ, ಅವುಗಳಿಗೂ ನಿಶ್ಚಿತವಾದ ಛಂದೋಲಕ್ಷಣವಾಗಲಿ ವ್ಯವಸ್ಥಿತವಾದ ಗತಿಸ್ವರೂಪವಾಗಲಿ ಇಲ್ಲದಿರುವುದರಿಂದ, ಅವು ಪ್ರಸ್ತುತ ವಿಚಾರದ ವ್ಯಾಪ್ತಿಗೆ ಬಹಿರ್ಭೂತ–ವಾದವುಗಳಾಗಿವೆ.

[ಪ್ರಸ್ತುತವಾದ ಈ ವರ್ಗಕ್ಕೆ ಎಲ್ಲಾ "ವೃತ್ತ'ಗಳು ಸೇರುವವುಗಳಲ್ಲವೆಂಬುದನ್ನು ಮರೆಯಬಾರದು. ಪಿಂಗಲೋಕ್ತವಾದ ತ್ರಿವಿಧ ವೃತ್ತಗಳೊಳಗೆ ಉದ್ಗತಾದಿ ವಿಷಮಪಾದವೃತ್ತಗಳೂ, (ಒಂದೆರಡು ಹೊರತಾಗಿ?) ಉಪಚಿತ್ರಕಾದಿ ಅರ್ಧ-ಸಮವೃತ್ತಗಳೂ ಲಯಾನ್ವಿತವಾದ ಎಂದರೆ ಸಮಗತಿಯ ಛಂದೋಬಂಧಗಳೇ ಆಗಿರುತ್ತವೆ. ಅಷ್ಟು ಮಾತ್ರವಲ್ಲ, ಸಮಪಾದವೃತ್ತಗಳೊಳಗೂ ಲಯಾನ್ವಿತ-ವಾದವುಗಳೇ ಅಧಿಕಸಂಖ್ಯೆಯವು; ಲಯರಹಿತವಾದವುಗಳು ಅಲ್ಪಸಂಖ್ಯೆಯವು. ಆದುದರಿಂದ, ಈ ವರ್ಗಕ್ಕೆ ಒಳಪಡುವ 'ವೃತ್ತ'ಗಳೆಂದರೆ ಆ ಅಲ್ಪಸಂಖ್ಯಕವಾದ (ಲಯರಹಿತ) ಸಮಪಾದವೃತ್ತಗಳು ಮಾತ್ರ.] (೨) ಅಕ್ಷರಸಂಖ್ಯಾನಿಯಮ-ವುಳ್ಳವಾದರೂ, ಗುರುಲಘುಸ್ಥಿರತೆ (ಪರಿಪೂರ್ಣವಾಗಿ) ಇಲ್ಲದ "ಅಕ್ಷರಜಾತಿ"-ಗಳದು ಇನ್ನೊಂದು ವರ್ಗ. (ಈ ನಿಬಂಧದ 20ನೆಯ ಟಿಪ್ಪಣಿಯನ್ನು ಅವಲೋಕಿಸಿರಿ.) ಈ ಎರಡು ವರ್ಗಗಳೊಳಗೆ ಎರಡನೆಯದಾದ 'ಅಕ್ಷರಜಾತಿ'-ಗಳಲ್ಲಿ ಪಾದಾಂತವು ಮಾತ್ರ ಯತಿಸ್ಥಾನ; ಪಾದಮಧ್ಯದಲ್ಲಿ 'ಯತಿ ಸ್ಥಾನ'ವೆಂಬುದೇನೂ ಇವುಗಳಿಗೆ ಇರುವುದಿಲ್ಲ. ಆದುದರಿಂದ, ಇವುಗಳ ಒಂದೊಂದು ಪಾದವೇ ಒಂದೊಂದು "ಛಂದಃಪದ"; ಅರ್ಥಾತ್ ಪಾದಪರಿ-ಮಾಣವೇ ಇವುಗಳ ಛಂದಃಪದಪರಿಮಾಣ. [ಮತ್ತು ಈ ಮೇಲೆ ಒಂದನೆಯ ವರ್ಗವಾಗಿ ನಿರ್ದೇಶಿಸಿದ "ವೃತ್ತ"ಗಳೊಳಗೂ ಅಲ್ಪಾಕ್ಷರಪಾದದ ಬಂಧಗಳಲ್ಲಿ ಪಾದಪರಿಮಾಣವೇ ಛಂದಃಪದಪರಿಮಾಣವಾಗಿರುತ್ತದೆ. (ಉದಾ: ಛಂದೋಂ-ಬುಧಿಯಲ್ಲಿ ಪ್ರೋಕ್ತವಾದ 'ವಿನಿಮ್ನ' 'ಸರಲ' ಇತ್ಯಾದಿ ವೃತ್ತಗಳು.) ಇಂಥವು-ಗಳಲ್ಲಿ ಮಾತ್ರವಲ್ಲ, ವೈದಿಕಬಂಧಗಳ ಗುರುಲಘುಸ್ಥಿರೀಕರಣದಿಂದ ಉತ್ಪನ್ನ-ವಾಗಿರುವ ಅನಲ್ಪಾಕ್ಷರಪಾದದ ಇಂದ್ರವಜ್ರ, ವಂಶಸ್ಥ ಮೊದಲಾದ ಕೆಲವು ವೃತ್ತಗಳಲ್ಲಿಯೂ ಪಾದಮಧ್ಯದಲ್ಲಿ ಖಚಿತವಾದ ಯತಿಸ್ಥಾನವಿರುವುದಿಲ್ಲ-ವಾದುದರಿಂದ, ಅವುಗಳ ಪಾದಪರಿಮಾಣವನ್ನೇ ಆ ಬಂಧಗಳ ಛಂದಃಪದ-ಪರಿಮಾಣವಾಗಿ ಗ್ರಹಿಸಬೇಕಾಗುತ್ತದೆ.] ಈ ಕಾರಣಗಳಿಂದ, ಪ್ರಸ್ತುತವಾದ ಪಾದ ಮಧ್ಯಯತಿಸ್ಥಾನವಿಚಾರಕ್ಕೆ ವಿಷಯವಾಗುವ ವೃತ್ತಗಳ ಸಂಖ್ಯೆ ಬಹಳ ದೊಡ್ಡ-ದೇನೂ ಅಲ್ಲ.

ಹಿಂದೆಯೇ ನಿವೇದಿಸಿರುವಂತೆ – 'ಯತಿಸ್ಥಾನ'ವೆಂಬುದು ಛಂದೋ-ಗತಿಯ ನಿಲುಗಡೆ. ಆದುದರಿಂದ ಅದು ಛಂದೋಗತಿಯ ಒಂದು ಅಂಶ, ಅಥವಾ ಅದರ ಒಂದು 'ಗುಣ'ವಾಗಿರುತ್ತದೆ; ಎಂದರೆ, ಛಂದೋಗತಿಯ ಹೊರತಾಗಿ ಅದಕ್ಕೆ ಅಸ್ತಿತ್ವವೇ ಇಲ್ಲ. ಆದಕಾರಣ, ಒಂದು ಬಂಧದ ಛಂದೋ-ಗತಿಸ್ವರೂಪವು ನಮ್ಮ ಅಂತರಂಗದಲ್ಲಿ ಅಚ್ಚೊತ್ತಿದಾಗ, ಅದರ ಯತಿ ಸ್ಥಾನಗಳಾವುವೆಂಬುದೂ ತಾನಾಗಿ ನಮಗೆ ಬುದ್ಧಿಗೋಚರವಾಗುತ್ತದೆ. ಆದರೆ ನಾವು ಕಾಣುವ "ಛಂದೋಬಂಧ"ಗಳೆಲ್ಲ "ಪದ್ಯರೂಪ"ವನ್ನು ತಳೆದವು-ಗಳಾಗಿದ್ದು – ಹಿಂದಿನ ಪರಿಚ್ಛೇದದಲ್ಲಿ ತೋರಿಸಿರುವಂತೆ – "ಪದ್ಯಗತಿ"ಯಲ್ಲಿ

ಛಂದೋಗತಿಯೂ ಪದಗತಿಯೂ ಹೆಣೆದುಕೊಂಡಿರುವುದರಿಂದ, ಒಂದು ಪದ್ಯದ ಗತಿ ಹೃದ್ಗತವಾದಮಾತ್ರದಿಂದ ಆ ಪದ್ಯದ ಛಂದೋಗತಿಯ ನಿಜ ಸ್ವರೂಪವು – ವಿಶೇಷತಃ ಅದರ ಯತಿಸ್ಥಾನಗಳು – ಎಷ್ಟೋ ವೇಳೆ ಖಚಿತ–ವಾಗಿ ಮನವರಿಕೆಯಾಗದೆಹೋಗುತ್ತವೆ. ಈ ಪರಿಸ್ಥಿತಿ (ಕಂದಪದ್ಯ ಮೊದಲಾದ) ಸಮಗತಿಬಂಧಗಳಲ್ಲಿ ಉಂಟಾಗುವುದಕ್ಕಿಂತ ಅಧಿಕವಾಗಿ ವಿಷಮಗತಿಬಂಧಗಳಲ್ಲಿ ಉಂಟಾಗುತ್ತದೆ. ಕಾರಣವೇನೆಂದರೆ, ಸ್ವಭಾವತಃ ಪರಿಮಾಣನಿಯಮವಿಲ್ಲದಿರುವ 'ಪದಗತಿ'ಯ ಹಜ್ಜೆಗಳಿಗೆ –ಸಮಪರಿಮಾಣದ ಛಂದಃಪದಗಳ ಬಿಗಿಯಾದ ಬಂಧನವಿರುವ ಲಯಾನ್ವಿತಬಂಧಗಳಲ್ಲಿ ಇರುವ ಪ್ರಭಾವಕ್ಕಿಂತ – ಅಸಮ ಪರಿಮಾಣದ ಮತ್ತು ಬೃಹತ್ತರವಾದ ಛಂದಃಪದಗಳಿಂದ ಘಟಿತವಾಗಿರುವ ಲಯರಹಿತಬಂಧಗಳಲ್ಲಿ ಹೆಚ್ಚಿನ ಪ್ರಭಾವವಿರುವುದಾಗಿದೆ. ಇದರಿಂದಾಗಿ ಎಷ್ಟೋ ಸಂದರ್ಭಗಳಲ್ಲಿ ವಿಷಮಗತಿಪದ್ಯಗಳ ಪದಗತಿಯು ತದ್ಗತವಾದ ಪಾದಮಧ್ಯ ಯತಿಸ್ಥಾನಗಳನ್ನು ಕಣ್ಮರೆಮಾಡುವುದಕ್ಕೆ ಸಮರ್ಥವಾಗುತ್ತದೆ.[74] ಆದುದರಿಂದ

---

74. {ಪದ್ಯಗತಿಗೆ–ಆಘಾತವಾಗದಂತಹ–'ಯತಿಭಂಗ'} ಈ ತಥ್ಯವು ಈ ಕೆಳಗಿನ ಉದಾಹರಣ–ದಿಂದ ವಿಶದವಾಗಬಹುದು:

(೧೩)

(A) ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ ಭೂಷಣಂ ॥ . ॥

* * * * * (ಸೋಮೇಶ್ವರಶತಕ)

ಇದು 'ಮತ್ತೇಭವಿಕ್ರೀಡಿತ'ವೆಂಬ ಸುಪ್ರಸಿದ್ಧವಾದ ಸಮವೃತ್ತದ ಒಂದು ಪಾದ. ಈ ವೃತ್ತದ ಪಾದಮಧ್ಯಯತಿಸ್ಥಾನವು ಹದಿಮೂರನೆಯ ಅಕ್ಷರವೆಂದು ಛಂದಃಶಾಸ್ತ್ರವು ಹೇಳುತ್ತದೆ. ಆದರೆ ಉದಾಹೃತವಾದ ಪಾದವನ್ನು, ಎಡೆಯಲ್ಲಿ ಎಲ್ಲಿಯೂ ನಿಲ್ಲಿಸದೆ, ಪದಸ್ವರೂಪಗಳು ಕೆಡದಂತೆ ಪಠಿಸುವಾಗ – ಪಾದಮಧ್ಯಯತಿಸ್ಥಾನದ ಅರಿವಾಗುವುದಿಲ್ಲ. ಹೀಗಾಗಲು ಕಾರಣವೇನೆಂದರೆ – 'ಪಾತಿವ್ರತ್ಯ' ಎಂಬ ಪದವು ಯತಿಸ್ಥಾನವನ್ನು ಮರೆಮಾಡಿರುವುದಾಗಿದೆ. (ಶಾಸ್ತ್ರಾನು–ಸಾರವಾಗಿ ಇಲ್ಲಿ ಯತಿಭಂಗವಿರುವುದಾದರೂ ಇದನ್ನು ಪಠಿಸುವಾಗ 'ಪದ್ಯಗತಿ'ಗೆ ಅಷ್ಟೇನೂ ಆಘಾತವಾದಂತೆ ಭಾಸವಾಗುವುದಿಲ್ಲ. ಇದರಿಂದ – ವಿಷಮಗತಿಬಂಧಗಳಲ್ಲಿ ''ಪದಗತಿ''ಗೆ ಇರುವ ಪ್ರಭಾವವಿಶೇಷವು ಸ್ಪಷ್ಟವಾಗುತ್ತದೆ.) ಆದರೆ ಛಂದೋಗತಿಯನ್ನು ಪದಗತಿಯು ಅಣಗಿಸದಿರುವಾಗ – ಎಂದರೆ ಛಂದೋಯತಿಸ್ಥಾನದಲ್ಲಿ 'ಪದಯತಿ'ಯೂ ಇರುವಾಗ – ಪಾದಮಧ್ಯಯತಿಸ್ಥಾನವು ಸುಸಂವೇದ್ಯವೆಂಬುದು ಇದೇ ವೃತ್ತದ ಬೇರೆ ಉದಾಹರಣೆಗಳಿಂದಲೇ ವಿಶದವಾಗುತ್ತದೆ:

(B) ಕೆಲವಂ ಬಲ್ಲವರಿಂದ ಕಲ್ತು ಕೆಲವಂ : ಗ್ರಂಥಂಗಳಿಂದೋದುತಂ ।
ಕೆಲವಂ ಮಾಳ್ಪವರಿಂದ ಕಂಡು ಕೆಲವಂ : ಸ್ವಜ್ಞಾನದಿಂ ನೋಡುತಂ ॥
ಕೆಲವಂ ಸಜ್ಜನಸಂಗದಿಂದಲಱಿತುಂ : ಸರ್ವಜ್ಞನಪ್ಪಂ ನರಂ ।
ಪಲವುಂ ಪಳ್ಳ ಸಮುದ್ರವೈ ಹರಹರಾ : ಶ್ರೀಚೆನ್ನಸೋಮೇಶ್ವರಾ ॥ . ॥

(ಸೋಮೇಶ್ವರಶತಕ)

ಈ ಪದ್ಯದ ಪ್ರತಿಯೊಂದು ಪಾದದಲ್ಲಿಯೂ ಪಾದಮಧ್ಯಯತಿಯನ್ನು (ಮಾತ್ರವಲ್ಲ, ಪಾದಾಂತ್ಯಯತಿಯನ್ನೂ) ಸ್ಪಷ್ಟವಾಗಿ ಕಾಣಬಹುದಾಗಿದೆ. ಈ ಯತಿಸಂಪನ್ನತೆಯಿಂದಾಗಿ, ಇಲ್ಲಿ ಛಂದೋಗತಿಗೂ ಪದಗತಿಗೂ ಸಂಪೂರ್ಣವಾದ 'ಮೈತ್ರಿ' ಸಿದ್ಧಿಸಿರುತ್ತದೆ.
{ಯತಿಯೆಂಬುದು ಎಲ್ಲ ಕಡೆಗಳಲ್ಲಿ ಉಸಿರ್ದಾಣವಲ್ಲ} ಈಗ ಬೇರೊಂದು ವೃತ್ತದ ಯತಿಸ್ವರೂಪವನ್ನು ನೋಡೋಣ :

(C) ವೇದಾಂತೇಷು ಯಮಾಹುರೇಕಪುರುಷಂ : ವ್ಯಾಪ್ಯ ಸ್ಥಿತಂ ರೋದಸೀ ।
ಯಸ್ಮಿನ್ ಈಶ್ವರ ಇತ್ಯನನ್ಯವಿಷಯಃ : ಶಬ್ದೋ ಯಥಾರ್ಥಾಕ್ಷರಃ ॥
ಅಂತರ್ ಯಶ್ಚ ಮುಮುಕ್ಷುಭಿರ್ನಿಯಮಿತ : ಪ್ರಾಣಾದಿಭಿರ್ಮೃಗ್ಯತೇ ।
ಸಃ ಸ್ಥಾಣುಃ ಸ್ಥಿರಭಕ್ತಿಯೋಗಸುಲಭೋ : ನಿಃಶ್ರೇಯಸಾಯಾಸ್ತು ವಃ ॥ . ॥

(ಕಾಲಿದಾಸ-ವಿಕ್ರಮೋರ್ವಶೀಯ. I-೧)

ಇದು 'ಶಾರ್ದೂಲವಿಕ್ರೀಡಿತ'ವೆಂಬ ಸುಪ್ರಸಿದ್ಧವಾದ ವಿಷಮಗತಿಯ ಸಮಪಾದವೃತ್ತ. ಇದರ ಪಾದಮಧ್ಯಯತಿಸ್ಥಾನವು ಹನ್ನೆರಡನೆಯ ಅಕ್ಷರದಲ್ಲಿರುತ್ತದೆ. ಈ ಉದಾಹರಣದ ಪಾದ-ಮಧ್ಯಯತಿಸ್ಥಾನಗಳೆಲ್ಲೆಲ್ಲ 'ಪದಯತಿ' ಇರುವುದರಿಂದ, ಪಠನಕಾಲದಲ್ಲಿ ಆ ಯತಿಸ್ಥಾನಗಳ ಅರಿವಾಗುವುದಕ್ಕೆ ಕಷ್ಟವೇನೂ ಇಲ್ಲ. ಆದರೆ ಈ ಪದದ ಮೂರನೆಯ ಪಾದದಲ್ಲಿ ಯತಿಸ್ಥಾನದ ಇಕ್ಕಡೆಗಳನ್ನೂ ಒಂದು ಸಮಾಸಪದವು ಆಕ್ರಮಿಸಿ ಕುಳಿತಿರುವುದರಿಂದ – "ಯತಿಯೆಂಬುದುಸಿರ್ವ ತಾಣಂ" (ಕವಿರಾಜಮಾರ್ಗ) "ಯತಿಯೆಂಬುದು...ಉಸಿರ್ದಾಣಂ" (ಛಂದೋಂಬುಧಿ) ಎಂದು ಪ್ರೋಕ್ತವಾಗಿರುವ ಅದೊಂದು ಯತಿಲಕ್ಷಣವಿಶೇಷವು, "ನಿಯ-ಮಿತ : ಪ್ರಾಣಾದಿಭಿಃ" ಎಂಬೀ ಪ್ರಸ್ತುತಸಂದರ್ಭಕ್ಕೆ ಅನ್ವಯಿಸುವಂತಿಲ್ಲ. ಏಕೆಂದರೆ, ಈ ಯತಿಸ್ಥಾನದಲ್ಲಿ ಉಸಿರೆಳೆದುಕೊಳ್ಳುವುದಕ್ಕೆ, ಅರ್ಥಾತ್ ಒಂದಿಷ್ಟು ಕಾಲ ವಿರಮಿಸುವುದಕ್ಕೆ, ಅವಕಾಶವಿಲ್ಲ; ಹಾಗೆ ವಿರಮಿಸಿದರೆ ಅರ್ಥಹಾನಿಯಾಗದಿರುವುದಿಲ್ಲ. {'ಉಸಿರ್ವತಾಣಂ' ಮತ್ತು 'ಉಸಿರ್ದಾಣಂ' – ಎಂಬಿವುಗಳು ಸಮಾನಾರ್ಥಕಗಳೆಂಬಂತೆ ಇಲ್ಲಿ ನಿರೂಪಿತವಾಗಿದೆ. ಆದರೆ ಸೇಡಿಯಾಪು ಅವರು ಅನಂತರ ವಿಚಾರ ಮಾಡಿದಂತೆ ಇವುಗಳ ಅರ್ಥ ಒಂದೇ ಅಲ್ಲ. 'ಕನ್ನಡ ಛಂದಸ್ಸು' ನಿಬಂಧದ 32ನೆಯ ಟಿಪ್ಪಣಿಯಲ್ಲಿ ಯತಿವಿಷಯದಲ್ಲಿ ಇನ್ನಷ್ಟು ವಿಷಯಗಳನ್ನು ಹೇಳಿರುತ್ತಾರೆ. ಅಲ್ಲಿ ಯತಿವಿಚಾರವಾಗಿ ದೀರ್ಘವಿವರಣೆಯಿದೆ. – ಸಂ.} ಈ ಪದ್ಯದ ಇತರ ಯತಿಸ್ಥಾನಗಳಲ್ಲೆಲ್ಲ ಇರುವ 'ಪದಪೂರ್ತಿ'ಯ ಫಲವಾಗಿ ಅಲ್ಲೆಲ್ಲ ಉಸಿರೆಳೆದುಕೊಳ್ಳುವ ಅವಕಾಶವಿರುತ್ತದೆ. ಅಂಥವುಗಳು ಮಾತ್ರ "ಉಸಿರ್ದಾಣ"ವೆಂಬ ಯತಿಲಕ್ಷಣವಿಶೇಷಕ್ಕೆ ಲಕ್ಷ್ಯಗಳಾಗಬಲ್ಲವು. ಉದಾಹೃತಪದ್ಯದ ತೃತೀಯಪಾದದಲ್ಲಿ ಹೇಗೋ ಹಾಗೆ ಸಮಾಸಾಂತರ್ಗತವಾದವುಗಳೂ, "ಕಾಂತಾಸಂಮಿಶ್ರದೇಹೋ : ಪ್ಯವಿಷಯಮನಸಾಂ" (ಕಾಳಿದಾಸನ 'ಮಾಲವಿಕಾಗ್ನಿಮಿತ್ರ' ನಾಂದೀಪದ್ಯ – ಸ್ರಗ್ಧರಾವೃತ್ತ) ಎಂಬುದರಲ್ಲಿಯಂತೆ ಸಂಧ್ಯಂತರ್ಗತವಾದವುಗಳೂ "ಯತಿರ್ವಿಚ್ಛೇದಃ" ಎಂಬ ಲಕ್ಷಣಕ್ಕೆ ಮಾತ್ರ ಲಕ್ಷ್ಯವಾಗತಕ್ಕವು ಹೊರತು. "ಯತಿಯೆಂಬುದುಸಿರ್ವ ತಾಣಂ" ಎಂಬುದಕ್ಕೆ ಲಕ್ಷ್ಯವಾಗಲಾರವು.

ಈ ಮೇಲೆ ಮಾಡಿದ ವಿವೃತಿಯಿಂದ ನಿಷ್ಪನ್ನವಾಗುವ ತಥ್ಯಗಳಾವುವೆಂದರೆ: (೧) ಯತಿಸ್ಥಾನಗಳಲ್ಲಿ ಪದಯತಿ ಇದ್ದಾಗ ಮಾತ್ರ ವಿಷಮಗತಿಬಂಧಗಳ ಛಂದಃಪದ ಪರಿಮಾಣಗಳು ಅಪ್ರಯತ್ನವಾಗಿ ಗೊತ್ತಾಗಬಲ್ಲವು. (೨) ವಿಷಮಗತಿಬಂಧಗಳ ಯತಿಸ್ಥಾನ-ಗಳಲ್ಲಿ ಪದವಿಚ್ಛೇದವಿದ್ದಮಾತ್ರಕ್ಕೆ ಅವು "ಉಸಿರ್ದಾಣ"ಗಳೆನಿಸಿಕೊಳ್ಳುವುದಿಲ್ಲ; ಹಾಗೆನಿಸಿ-ಕೊಳ್ಳಬೇಕಾದರೆ, ಅಲ್ಲಿ "ಪದಪೂರ್ತಿ" ಇರಬೇಕು; ಮಾತ್ರವಲ್ಲ, ಅದು ಸಂಧ್ಯಂತರ್ಗತ-

ವಾದುದಾಗಿರಲೂಬಾರದು. ಮತ್ತು ಈ ತಥ್ಯವಿಶೇಷದಿಂದ ತಿಳಿದುಬರುವ ಇನ್ನೊಂದು ಯತಿತತ್ತ್ವವೇನೆಂದರೆ – (೩) ವಿಷಮಗತಿಬಂಧಗಳ ಯತಿಸ್ಥಾನಗಳಲ್ಲಿ ಕಾಣಿಸಿಕೊಳ್ಳುವ ಪದಯತಿಗಳು ಕಾಲವಿರಾಮಸಹಿಷ್ಣುಗಳಾಗಿರಲೂಬಹುದು, ಅಸಹಿಷ್ಣುಗಳಾಗಿರಲೂಬಹುದು ಎಂಬುದಾಗಿದೆ. [{ಯತಿ ಮತ್ತು ಆವರ್ತಪೂರ್ತಿಗಾಗಿ ವಿರಾಮ ಅಥವಾ ಕರ್ಷಣ} ಆನುಷಂಗಿಕವಾಗಿ ಇನ್ನೂ ಒಂದು ವಿಚಾರ: ಪದ್ಯವು ಲಯಾನ್ವಿತ ಬಂಧವಾಗಿದ್ದರೆ, ಅದರ ಪಾದಮಧ್ಯಯತಿ ಯಾವಾಗಲೂ (ಪಠನದಲ್ಲಿ) ಕಾಲಾತಿಪಾತವಿರದ ನಿಲುಗಡೆಯಾಗಿಯೇ ಇರುತ್ತದೆ. ಏಕೆಂದರೆ, ಅಲ್ಲಿ ಕಾಲಕಳೆದರೆ ಲಯಕ್ಕೆ ಹಾನಿಯೊದಗುತ್ತದೆ. ಮತ್ತು, ಪಾದಾಂತ್ಯದಲ್ಲಿ (ಅಥವಾ ಪದ್ಯಾರ್ಧದಲ್ಲಿ) 'ಊನಮಾತ್ರೆಯ ಗಣ'ವಿರುವ ಲಯಾನ್ವಿತ ಬಂಧಗಳ ಪಾದಾಂತ್ಯ (ಅಥವಾ ಪದ್ಯಾರ್ಧ) ಯತಿಸ್ಥಾನಗಳಲ್ಲಿ – ಅವು ಅಕ್ಷರಬಂಧ-ಗಳಾಗಿರಲಿ, ಇಲ್ಲವೆ ಮಾತ್ರಾಬಂಧಗಳಾಗಿರಲಿ – ಕಾಲವಿರಾಮಸಹಿಷ್ಣುವಾದ ಪದಯತಿಯೇ ಇರಬೇಕಾಗುತ್ತದೆ. ಮಾತ್ರವಲ್ಲ, 'ಆವರ್ತಪೂರ್ತಿ'ಯಾಗುವಷ್ಟು ಕಾಲದವರೆಗಿನ ಅಂತ್ಯಾಕ್ಷರ-ಕರ್ಷಣ(ಅಥವಾ ಅಷ್ಟುಕಾಲದ ನಿಃಶಬ್ದವಿರಾಮ)ವೂ ಅಲ್ಲಿ (ಪಠನದಲ್ಲಿ) ಅವಶ್ಯವಾಗುತ್ತದೆ. ಉದಾ:

ಮಲ್ಲಿಕಾಮಾಲಾವೃತ್ತ. (ಈ ಅಕ್ಷರಬಂಧದ ಛಂದೋಲಕ್ಷಣ : ರಸಜಜಭರ)

(೭) (೭) (೭) (೫+೨)
ವಿಶ್ವಸೃಷ್ಟಿ ವಿ । ಧಾಯಿನಂ ಪುನ । ರೇವ ಪಾಲನ । ತತ್ಪರಂ– ॥
(೫+೨)
ಸಂಹರಂತಮ । ಪಿ ಪ್ರಪಂಚಮ । ಶೇಷಲೋಕನಿ । ವಾಸಿನಂ– ॥
(೫+೨)
ಕ್ರೀಡಯಂತಮ । ಹರ್ನಿಶಂ ಗಣ । ನಾಥಯೂಥಸ । ಮನ್ವಿತಂ– ।
(೫+೨)
ಚಂದ್ರಶೇಖರ । ಮಾಶ್ರಯೇ ಮಮ । ಕಿಂ ಕರಿಷ್ಯತಿ । ವೈ ಯಮಃ– ॥ . ॥

(ಚಂದ್ರಶೇಖರಾಷ್ಟಕ)

ಲಯಾನ್ವಿತವಾದ ಈ "ವೃತ್ತ"ದ ಆವರ್ತಗಳು (ಅರ್ಥಾತ್ ಛಂದಃಪದಗಳು) ಏಳು ಮಾತ್ರೆಯವು; ಆದರೆ ಪಾದದ ಕೊನೆಯ ಆವರ್ತದಲ್ಲಿ ಯಥಾಕ್ಷರವಾಗಿ ಐದೇ ಮಾತ್ರೆಗಳಿರುವುದರಿಂದ, ಪಠನಕಾಲದಲ್ಲಿ (ಆವರ್ತಪೂರ್ತಿಗಾಗಿ) ಅಂತ್ಯಾಕ್ಷರಕ್ಕೆ ಎರಡು ಮಾತ್ರಾಕಾಲದಷ್ಟು ಕರ್ಷಣ ಬರುತ್ತದೆ; ಅಥವಾ ಅಷ್ಟು ಕಾಲ ಅಲ್ಲಿ ನಿಃಶಬ್ದವಿರಾಮವಿರಬೇಕಾಗುತ್ತದೆ.

ಇನ್ನೊಂದು ಉದಾಹರಣೆ:

೫ ೫
ಹಜ್ಜೆಯಿ । ಟ್ಟಳು ಮುದದಿ ।
೫ ೫
ಹರಿಣಲೋ । ಚನೆ ಕೊಡವ ।
೫ ೫ ೫ (೨+೩)
ನಡುವಿನೊಳ । ಗಾಂತು ನಳಿ । ದೋಳೊಳ । ಪ್ಪಿ– ॥
ಮುದ್ದುಮಗು । ವಿನ ಬಾಯ ।
ಜೊಲ್ಲ ಕಂ । ಪಿನ ಸೆರಗ ।

ವಿಷಮಗತಿಪದ್ಯಗಳ ಛಂದೋಗತಿಯ ನಿಜರೂಪದ ಅರಿವು ನಮಗೆ ಆಗಬೇಕಾದರೆ, ಪದ್ಯದ ಪದಗತಿಯ 'ಜಾಲ'ದಿಂದ ಅದರ ಛಂದೋಗತಿಯನ್ನು ನಾವು ಬಿಡಿಸಿಕೊಳ್ಳಬೇಕು. ಹಾಗೆ ಬಿಡಿಸಿಕೊಳ್ಳುವ ಉಪಾಯವೇನೆಂದರೆ – ಅರ್ಥಹೀನವಾದ ಅಕ್ಷರೋಚ್ಚಾರಗಳ ಮೂಲಕ, ಉದ್ದಿಷ್ಟವಾದ ಪದ್ಯದ ಛಂದೋರೂಪವನ್ನು ಉನ್ಮೀಲನಗೊಳಿಸುವುದಾಗಿದೆ. ಹೀಗೆ ಮಾಡಿದಾಗ ಆ ಬಂಧದ ಯತಿಸ್ಥಾನಗಳಾವುವೆಂಬುದು ನಿಸ್ಸಂದಿಗ್ಧವಾಗಿ ತಿಳಿದುಬರುತ್ತದೆ. ಈ ವಿಧಾನದ ಸಮ್ಯಕ್‌ಪರಿಚಯಕ್ಕಾಗಿ – ಯತಿಸ್ಥಾನವಿಷಯದಲ್ಲಿ ಛಂದಃಶಾಸ್ತ್ರಕಾರರೊಳಗೆ ಮತಭೇದವಿರುವ ಒಂದು ವಿಷಮಗತಿವೃತ್ತವನ್ನು –ಉದಾ: ಹಿಂದೆ ಪ್ರಸ್ತಾವಿಸಿದ 'ಶಾಲಿನೀ'ವೃತ್ತವನ್ನು – ಅರ್ಥಹೀನವಾದ ಅಕ್ಷರಸಮುದಾಯವಾಗಿ ಪಠಿಸೋಣ:

'ಶಾಲಿನೀ' ಎಂಬುದು ಹನ್ನೊಂದಕ್ಷರಗಳ ಪಾದದ ಒಂದು ಸಮವೃತ್ತ. ಇದರ ಪಾದಗಳ ಛಂದಃಸ್ವರೂಪವು "ಮತತಗಗಂ" ಎಂದಾಗಿದ್ದು, ಇದನ್ನು ಅರ್ಥಹೀನವಾಗಿ (ಒಂದೇ ವ್ಯಂಜವನ್ನು ಬಳಸಿ) ರಚಿಸಿದಾಗ ಉಂಟಾಗುವ ರೂಪ ಈ ಮುಂದಿನದರಂತೆ :

– – – – – U – – U – –
ನಾನಾನಾನಾನಾನನಾನಾನನಾನಾ ॥

ಈ ಅಕ್ಷರಸಮುದಾಯವನ್ನು, ಎಡೆಯಲ್ಲಿ ಎಲ್ಲಿಯೂ ನಿಲ್ಲಿಸದೆ, ನಾಲ್ಕಾರು ಬಾರಿ ಉರುಹೊಡೆಯಬೇಕು. (ಉತ್ತಮಗತಿಪ್ರಜ್ಞೆಯಿರುವುದಾದರೆ ಒಂದೋ ಎರಡೋ ಬಾರಿ ಪಠಿಸಿದರೂ ಸಾಕಾಗುವುದು.) ಆಗ ಇದರ ಛಂದೋಗತಿಸ್ವರೂಪವು ಅಂತರಂಗದಲ್ಲಿ ಬಿಂಬಿಸುತ್ತದೆ. ಅದು ಖಚಿತವಾಗಿ ಬಿಂಬಿಸಿದಾಗ ಅದರ ಯತಿಸ್ಥಾನಗಳು ನಮ್ಮ ಪ್ರಜ್ಞೆಯಲ್ಲಿ ಹೀಗೆ ಮೂಡಿಬರುತ್ತದೆ;

ನಾನಾನಾನಾ : ನಾನನಾನಾನನಾನಾ :

---

(೨+೩)
ತಿದ್ದಿ ಸೆಳೆ । ದುಡಿಗೊತ್ತಿ । ದಳು ನಡೆದ । ಳು– ॥ . ॥

ಇದು 'ಕುಸುಮಷಟ್ಪದಿ' ಎಂಬ ಮಾತ್ರಾಬಂಧ. (ಮಾತ್ರಾಬಂಧಗಳೆಲ್ಲವೂ ನಿರಪವಾದವಾಗಿ ಲಯಾನ್ವಿತಗಳೆಂಬುದನ್ನು ಹಿಂದೆಯೇ ಹೇಳಲಾಗಿದೆ.) ಇದರ ಆವರ್ತಗಳು ಅರ್ಥಾತ್ ಛಂದಃಪದಗಳು, ಐದು ಮಾತ್ರೆಯವು; ಆದರ ಪದ್ಯಾರ್ಧಗಳ ಕೊನೆಯ ಛಂದಃಪದಗಳು ಊನಮಾತ್ರೆಯವಾದುದರಿಂದ, ಪಠನದಲ್ಲಿ ಆ ಛಂದಃಖಂಡಗಳ ಅಂತ್ಯಾಕ್ಷರಗಳು (ಇವು ಇಲ್ಲಿ ಯಥಾಕ್ಷರವಾಗಿ ಲಘುಗಳೇ ಆದರೂ, ಛಂದೋಗತಿಯ ವಿಶ್ರಾಂತಿಸ್ಥಾನಗಳಲ್ಲಿರುವ ಕಾರಣ, ಗುರೂಚ್ಚಾರವನ್ನು ಪಡೆಯುವಂಥವುಗಳು) ಆವರ್ತಪೂರ್ತಿಗಾಗಿ ಮೂರುಮೂರು ಮಾತ್ರಾಕಾಲಗಳಷ್ಟು ಕರ್ಷಣವನ್ನು ಪಡೆಯುತ್ತವೆ; ಅಥವಾ ಅಷ್ಟುಕಾಲ ಅಲ್ಲಿ ನಿಃಶಬ್ದವಿರಾಮವೊದಗುತ್ತದೆ.]

ಇದರಿಂದ ಶಾಲಿನೀವೃತ್ತದ ಪಾದಮಧ್ಯಯತಿಸ್ಥಾನವು ನಾಲ್ಕನೆಯ ಅಕ್ಷರದಲ್ಲಿರುತ್ತದೆಂಬುದರ ಅರಿವು ನಮಗಾಗುತ್ತದೆ. (ಇದು ಕೇವಲ ಅನುಭವ ವೇದ್ಯ; ನಮ್ಮ ಗತಿಪ್ರಜ್ಞೆ ಮಾತ್ರ ಇದಕ್ಕೆ ಸಾಕ್ಷಿ.) ಪಾದಾಂತ್ಯವು ಹೇಗೂ ಎಲ್ಲಾ ಸಮವೃತ್ತಗಳಲ್ಲಿ ಯತಿಸ್ಥಾನವಾಗಿರುತ್ತದೆ; ಈ ವಿಷಯದಲ್ಲಿ ಮತಭೇದವಿಲ್ಲ. ಹಾಗಾದರೆ, ಶಾಲಿನೀವೃತ್ತದ ಛಂದಃಪದಗಳು ಅನುಕ್ರಮವಾಗಿ ನಾಲ್ಕು ಮತ್ತು ಏಳು ಅಕ್ಷರದವುಗಳೆಂದು ನಿಶ್ಚಿತವಾದಂತಾಯಿತು.

ಈ ವೃತ್ತದ ಪ್ರತಿಯೊಂದು ಪಾದದ ಛಂದಃಪದಗಳೊಳಗೆ, ಎರಡನೆ-ಯದು ಏಳು ಅಕ್ಷರಗಳುಳ್ಳ ಹಾಗೂ ಹನ್ನೆರಡು ಮಾತ್ರೆಗಳ ಒಂದು ಬೃಹತ್ತಾದ ಛಂದಃಖಂಡ. ಈ ಖಂಡವನ್ನು ಅರ್ಥಹೀನವಾದ ಅಕ್ಷರಸಮುದಾಯವಾಗಿ ಪಠಿಸುವಾಗಲೂ, ಅದು ಏಕಾಕಾರವಾಗಿ ಭಾಸವಾಗದೆ, ಸಣ್ಣಸಣ್ಣ ಪುಂಜಗಳ ಕೂಟವೆಂಬಂತೆ ಭಾಸವಾಗುತ್ತದೆ. ಕಾರಣವೇನೆಂದರೆ – ನಮ್ಮ ಉಚ್ಚಾರಪ್ರಕ್ರಿಯೆ, ನಮಗೆ ಅಭ್ಯಾಸವಾಗಿರುವ ನಮ್ಮ 'ಭಾಷಾಪದ'ಗಳ ಉಚ್ಚಾರಪರಿಮಿತಿಗೆ ಅನುಗುಣವಾಗಿ ರೂಪುಗೊಂಡಿರುವುದಾಗಿದೆ. ನಮ್ಮ ಭಾಷಾಪದಗಳು ಅಸಂಯುಕ್ತ-ವಾಗಿರುವಾಗ, ಹೆಚ್ಚೆಂದರೆ ನಾಲ್ಕು, ಅತಿಹೆಚ್ಚೆಂದರೆ ಐದು ಅಕ್ಷರ(syllable)ಗಳ ಪರಿಮಿತಿಯನ್ನು ಮೀರಿರುವುದಿಲ್ಲ. ಈ ಕಾರಣದಿಂದ, ಅರ್ಥಹೀನವಾದ ಅಕ್ಷರಪುಂಜಗಳಾದರೂ – ನಾವು ಉಚ್ಚರಿಸುವಾಗ, ನಮಗೆ ಅಭ್ಯಾಸವಾಗಿರುವ ಪದೋಚ್ಚಾಪರಿಮಿತಿಗನುಗುಣವಾಗಿಯೇ ಉನ್ಮೀಲಿಸುತ್ತವೆ. (ಸಂಗೀತಾಭ್ಯಾಸ, ವೇದಪಾಠ ಇತ್ಯಾದಿಗಳಿಂದ ಪ್ರಭಾವಿತವಾದ ಉಚ್ಚಾರಪ್ರಯತ್ನಕ್ಕೆ ಈ ಮಾತು ಅನ್ವಯಿಸುವಂತಹದಲ್ಲ. ಛಂದೋಗತಿವಿಚಾರವು ಪದ್ಯವಾಙ್ಮಯದ ಪರಿಚಯವುಳ್ಳ 'ಸಾಮಾನ್ಯಪ್ರಜ್ಞೆ'ಯ ಕ್ಷೇತ್ರದೊಳಗಿನದೆಂಬುದನ್ನು ಈ ಮೊದಲೇ ನಿವೇದಿಸ-ಲಾಗಿದೆಯಷ್ಟೆ. ಟಿಪ್ಪಣಿ 51 ನೋಡಿರಿ.) ಪ್ರಸ್ತುತವಾದ 'ನಾನನಾನಾನನಾನಾ' ಎಂಬೀ ಅರ್ಥಹೀನ ಛಂದಃಖಂಡದ ಪಠನವನ್ನು ಈ ದೃಷ್ಟಿಯಿಂದ ಪರೀಕ್ಷಿಸಿದರೆ, ಅದರ 'ಗತಿ' ನಾನನಾ ನಾನ ನಾನಾ । ಎಂದೋ, ನಾನ ನಾನಾ ನನಾನಾ । ಎಂದೋ, ಅಥವಾ ಇನ್ನೂ ಬೇರೆ ವಿಧವಾಗಿಯೋ ವಿಭಕ್ತವಾಗು-ವುದು ನಮ್ಮ ಅನುಭಕ್ಕೆ ಬರುತ್ತದೆ. ಈ ವಿಭಾಗಸ್ಥಾನಗಳು ಯತಿಸ್ಥಾನಗಳೆಂದು ಭಾಸವಾಗುವಂತಿರುವವಾದರೂ, ಆ ಹೆಸರನ್ನು ಇವುಗಳಿಗೆ ಕೊಡುವಂತಿಲ್ಲ; ಏಕೆಂದರೆ, ಇವು ವೈಕಲ್ಪಿಕವಾಗಿ ಬೇರೆಬೇರೆಡೆಗಳಲ್ಲಿ ಕಾಣಿಸಿಕೊಳ್ಳಬಲ್ಲ ಅಸ್ಥಿರ ವಿಭಾಗಗಳಾಗಿವೆ. ಯಾವುದೊಂದು ವಿಭಾಗಸ್ಥಾನವನ್ನು "ಯತಿಸ್ಥಾನ"ವೆನ್ನ-ಬೇಕಾದರೆ, ಆ ಸ್ಥಾನದಲ್ಲಿ ಆ ಪದ್ಯವರ್ಗದ ಛಂದೋಗತಿಗೆ ಸ್ಥಿರವಾದ ಒಂದು ನಿಲುಗಡೆ ಇರಬೇಕು. 'ವಿಚ್ಛೇದ' ಇದ್ದಮಾತ್ರಕ್ಕೆ ಯಾವುದೊಂದು ವಿಭಾಗಸ್ಥಾನವು 'ಯತಿಸ್ಥಾನ'ವೆನಿಸಲಾರದು. ವಿಚ್ಛೇದವು (=ಪದಯತಿ) ಪ್ರತಿಯೊಂದು ಪದಾಂತದಲ್ಲಿಯೂ ಇದ್ದೇ ಇರುವ ವಸ್ತು. ನಾವೀಗ ಪಠಿಸಿ ಪರೀಕ್ಷಿಸಿದ ಅರ್ಥಹೀನ ಛಂದಃಖಂಡದಲ್ಲಿ ನಮ್ಮ ಅನುಭವಕ್ಕೆ ಗೋಚರಿಸಿದ ವಿಭಾಗಗಳು –

ವಸ್ತುತಃ ಅಂತಹ ಸಾರ್ಥಕ ಛಂದಃಖಂಡದ 'ಪದಗತಿ'ಯ ಹಜ್ಜೆಗಳ ಪ್ರತಿಬಿಂಬಗಳೆಂಬುದು, ಅದೇ ಛಂದೋಬಂಧದ ಆ ಛಂದಃಖಂಡದ ಈ ಕೆಲವು ಸಾರ್ಥಕರೂಪಗಳನ್ನು ಅವಲೋಕಿಸಿದಾಗ ಮನವರಿಕೆಯಾಗದಿರದು.

ಮಾರ್ಗೇ ಮಾರ್ಗೇ : ನೂತನಂ, ಚೂತ, ಖಂಡಂ ।
ಖಂಡೇ ಖಂಡೇ : ಕೋಕಿಲಾನಾಂ, ವಿರಾವಃ ॥
ರಾವೇ ರಾವೇ : ಮಾನಿನೀ, ಮಾನ, ಭಂಗಃ ।
ಭಂಗೇ ಭಂಗೇ : ಮನ್ಮಥಃ, ಪಂಚ, ಬಾಣಃ ॥ . ॥

ಮಾರ್ಗೇ ಮಾರ್ಗೇ : ಜಾಯತೇ , ಸಾಧು, ಸಂಗಃ ।
ಸಂಗೇ ಸಂಗೇ : ಶ್ರೂಯತೇ , ಕೃಷ್ಣ , ಕೀರ್ತಿಃ ॥
ಕೀರ್ತೌ ಕೀರ್ತೌ : ನಸ್ತದಾಕಾರ, ವೃತ್ತಿಃ ।
ವೃತ್ತೌ ವೃತ್ತೌ : ಸಚ್ಚಿದಾನಂದ , ಭಾಸಃ ॥ . ॥

(ರಂಭಾಶುಕಸಂವಾದ)

ಮಧ್ಯೇ ಕ್ಷಾಮಾ : ಪೀವರೋರು, ಸ್ತನೀ, ಯಾ ।
ಶ್ಲಾಘ್ಯಾ ಭರ್ತುಃ : ಶಾಲಿನೀ, ಕಾಮಿನೀ, ಸ್ಯಾತ್ ॥ . ॥

(ಹಲಾಯುಧಕೃತ ಪಿಂಗಲವ್ಯಾಖ್ಯಾನದಲ್ಲಿ ಉದಾಹೃತವಾದುದರ ಉತ್ತರಾರ್ಧ)[75]

---

75. {ಛಂದೋಯತಿಯು ಪದ್ಯದ ಸ್ಥಿರಲಕ್ಷಣ} 'ಪದಯತಿ' ಎಂಬುದು "ಪದಗತಿ"ಯ ಹಜ್ಜೆಯ (ಎಂದರೆ ಭಾಷಾಪದದ) ನಿಲುಗಡೆ; 'ಛಂದೋಯತಿ' (=ಯತಿಸ್ಥಾನ) ಎಂಬುದು "ಛಂದೋಗತಿ"ಯ ಹಜ್ಜೆಯ (ಎಂದರೆ ಛಂದಃಪದದ) ನಿಲುಗಡೆ. ಯತಿಯ ಈ ದ್ವೈವಿಧ್ಯವನ್ನು ಹಿಂದೆಯೇ ನಿವೇದಿಸಲಾಗಿದೆ. (ಟಿಪ್ಪಣಿ 69 ನೋಡಿರಿ) "ಭಾಷಾಪದ"ಗಳಿಗೆ ನಿಶ್ಚಿತಪರಿಮಾಣವಿಲ್ಲವಾದರೂ, ಅಸಂಯುಕ್ತವಾಗಿದ್ದಾಗ ಅವು ಅತಿ ಹೆಚ್ಚೆಂದರೆ ಐದು ಅಕ್ಷರ (syallable)ಗಳ (ಹಾಗೂ ಅತ್ಯಧಿಕವೆಂದರೆ ಎಂಟು ಮಾತ್ರೆಗಳ) ಪರಿಮಿತಿಯನ್ನು ಮೀರಿರುವುದಿಲ್ಲ. ಭಾಷಾಪದವು ಕೊನೆಗೊಳ್ಳುವಲ್ಲಿ ನಮ್ಮ 'ಉಚ್ಚಾರಬಲ'ವು (ಅವಧಾರಣೆ, ವಿಶಂಕೆ ಇತ್ಯಾದಿಗಳಿಲ್ಲದಿರುವಲ್ಲೆಲ್ಲ) ಒಂದಿಷ್ಟು ಕುಗ್ಗುವುದೂ, ಭಾಷಾಪದದ ಆರಂಭದಲ್ಲಿ ಉಚ್ಚಾರಬಲವು ಒಂದಿಷ್ಟು ಏರುವುದೂ (ಅನುಭವವೇದ್ಯವಾದ) ಸ್ವಾಭಾವಿಕವಾದೊಂದು ಉಚ್ಚಾರಪ್ರಕ್ರಿಯೆ. ಪಠನಾದಿಗಳಲ್ಲಿ, ಪೂರ್ವೋತ್ತರಪದಗಳ ನಡುವೆ ವಿರಮಿಸದಿದ್ದರೂ, ಭಿನ್ನ-ಪದಪ್ರತೀತಿ ನಮಗಾಗುವುದಕ್ಕೆ ಈ ಏರಿಳಿತಗಳೇ ಕಾರಣವಾಗಿರುತ್ತವೆ. (ಇತರರು ಮಾತಾಡುವಾಗ ಅಥವಾ ಒಂದು ಗದ್ಯಭಾಗವನ್ನು ಓದುವಾಗ – ಪ್ರಶ್ನಾರ್ಥಕ ಇತ್ಯಾದಿ-ಯಲ್ಲದ – ವಾಕ್ಯವೊಂದು ಅಲ್ಲಿ ಕೊನೆಗೊಂಡಿತೆಂಬುದರ ಅರಿವು ನಮಗಾಗುವುದು ಸಹ, ಆ ವಾಕ್ಯದ ಕೊನೆಯ ಪದದ ಅಂತ್ಯಭಾಗದ ಉಚ್ಚಾರಬಲವು ಕುಗ್ಗುವುದರಿಂದಾಗಿಯೇ

ಆಗಿರುತ್ತದೆ. ಆದರೆ ಇದು "ಛಂದೋಗತಿ"ಗೆ ಸಂಬಂಧಿಸಿದ ವಿಷಯವಲ್ಲ. (ಇದೆಲ್ಲ ಪದಗತಿಗೆ ಸಂಬಂಧಿಸಿದ ವಿಷಯ.) "ಛಂದೋಗತಿ" ಎಂಬುದು ತತ್ತ್ವತಃ ಉಚ್ಚಾರದ ಬಲವನ್ನವಲಂಬಿಸಿದ ವಸ್ತುವಲ್ಲ; ಪರಮಾರ್ಥತಃ ಅದು ಅಕ್ಷರೋಚ್ಚಾರದ ಕಾಲವನ್ನವ-ಲಂಬಿಸಿದ ವಸ್ತು. ಛಂದೋಗತಿಯ ಅಂಗವೇ ಆಗಿರುವ "ಛಂದೋಯತಿ" (=ಯತಿಸ್ಥಾನ) ಎಂಬುದು, ಯಾವುದೊಂದು ಪದ್ಯವರ್ಗದ ಸ್ಥಾನವಿಶೇಷಗಳಲ್ಲಿ – ಅಲ್ಲಿ 'ಪದವಿಚ್ಛೇದ'-ವಿರಲಿ, ಅಥವಾ ಇಲ್ಲದಿರಲಿ – ಇದ್ದೇ ಇರುವ ಒಂದು ಸ್ಥಿರಲಕ್ಷಣ. ಪದ್ಯವು ಗಣ-ನಿಯಮಗಳನ್ನು ಮೀರದೆ ರಚಿತವಾದರೆ ಸರಿ, ಛಂದೋಯತಿ ಅಲ್ಲಿ ತಾನಾಗಿ ಉಪಸ್ಥಿತ-ವಾಗುತ್ತದೆ. [ಜಯಕೀರ್ತಿ ತಿಳಿಸಿರುವಂತೆ (I–೧೩) ಭರತ, ಸೈತವ, ಮಾಂಡವ್ಯ, ಕೋಹಲಾದಿಗಳು – ಛಂದಃಶಾಸ್ತ್ರದಲ್ಲಿ ಯತಿನಿರ್ದೇಶವು ಅನವಶ್ಯವೆಂದು ಭಾವಿಸಿದುದಕ್ಕೆ ಇದುವೇ ಕಾರಣವಾಗಿದ್ದಿರಬೇಕೆಂದು ನನಗೆ ತೋರುತ್ತದೆ. ಇವರೊಳಗೆ ಮಾಂಡವ್ಯಸೈತವರು ಪಿಂಗಲಾಚಾರ್ಯನಿಗಿಂತ ಹಿಂದಿನವರೆಂಬುದು ಪಿಂಗಲಸೂತ್ರಗಳಿಂದ ಗೊತ್ತಾಗುತ್ತದೆ.] ಅಲ್ಲಿ ಪದವಿಚ್ಛೇದ (=ಪದಯತಿ) ಇದ್ದರೆ – ಪದ್ಯಪಠನವು ಸುಗಮವಾಗುತ್ತದೆ; ಮಾತ್ರವಲ್ಲ, (ಪರಿಮಾಣಸಮತೆಯಿಲ್ಲದ ಛಂದಃಪದಗಳಿಂದ ಘಟಿತವಾಗಿರುವ) ವಿಷಮಗತಿಬಂಧಗಳ 'ಯತಿಸ್ಥಾನ'ಗಳು ಪ್ರಸ್ಫುಟವೂ ಆಗುತ್ತವೆ. [{ಸಂಸ್ಕೃತಕವಿಗಳ ವಿಷಮಗತಿಪಕ್ಷಪಾತವು ಔಚಿತ್ಯ-ಪ್ರಜ್ಞೆಯಿಂದ ಜನಿತ} ಪ್ರಾಸಂಗಿಕವಾಗಿ ಇಲ್ಲಿ ಎರಡು ಮಾತು ಹೇಳುವುದು ಅವಶ್ಯವೆನಿಸುತ್ತದೆ: ವಾಸ್ತವಿಕವಾಗಿ ನೋಡಿದರೆ, ಲಯಾನ್ವಿತವಾದ ಛಂದೋಬಂಧಗಳ ("ರಚನಾಸಹಜ"ವಾದ) ಪಾದಮಧ್ಯಯತಿಸ್ಥಾನಗಳು ಆವರ್ತಗಳ ಕೊನೆಗಳೇ ಆಗಿರುತ್ತವೆ. (ಆದರೆ ಅವೆಲ್ಲವೂ ಕಡ್ಡಾಯವಾಗಿ ಕಾಲಾತಿಪಾತವಿಲ್ಲದ ಯತಿಸ್ಥಾನಗಳಾಗಿರುವುದರಿಂದ, ಅಲ್ಲಿ ಪ್ರಸ್ಫುಟವಾದ ಪದಯತಿ ಇಲ್ಲದಿದ್ದರೂ 'ಪದ್ಯಗತಿ' ಕೆಡುವುದಿಲ್ಲ. ಪಠನಕಾಲದಲ್ಲಿ ಪದಸ್ವರೂಪವು ವಿಕೃತ-ವಾಗದಿರುವಷ್ಟರಮಟ್ಟಿನ – ಎಂದರೆ, 'ಪದಗತಿ'ಗೆ ಪ್ರಬಲವಾದ ಆಘಾತವಾಗದಿರುವಷ್ಟರ ಮಟ್ಟಿನ – 'ಮೈತ್ರಿ'ಯು ಛಂದೋಗತಿಗೂ ಪದಗತಿಗೂ ಅಲ್ಲಿ ಇದ್ದರೆ ಸಾಕಾಗುತ್ತದೆ.) ವಸ್ತು ಸ್ಥಿತಿ ಹೀಗಿರುವುದಾದರೂ – ಲಯಾನ್ವಿತವಾದ ಹಲವು ಸಮವೃತ್ತಗಳ ಪಾದಮಧ್ಯಯತಿ ಸ್ಥಾನಗಳು ಆವರ್ತಮಧ್ಯದಲ್ಲಿ ಪ್ರೋಕ್ತವಾಗಿರುವುದು ಛಂದಃಶಾಸ್ತ್ರಗ್ರಂಥಗಳಲ್ಲಿ ಕಂಡು ಬರುತ್ತದೆ. ಉದಾ: 'ಮಲ್ಲಿಕಾಮಾಲಾವೃತ್ತ'. ಇದರ ಸ್ವರೂಪವು ಲಕ್ಷ್ಯಲಕ್ಷಣಸಮವಾಯವಾಗಿ ಜಯಕೀರ್ತಿಯಿಂದ ಹೀಗೆ ಪ್ರೋಕ್ತವಾಗಿದೆ:

ಮಾಲಿಕೋತ್ತರಮಲ್ಲಿಕಾ : ರಸಜಾಜ್ಝರೈಶ್ಚ ಗತಾಗತಾ ॥

('ಮಾಲಿಕೋತ್ತರಮಲ್ಲಿಕಾ' ಎಂದರೆ, "ಮಾಲಿಕಾ ಎಂಬುದು ಉತ್ತರಪದವಾಗಿರುವ ಮಲ್ಲಿಕಾ", ಎಂದರೆ "ಮಲ್ಲಿಕಾಮಾಲಿಕಾ".)

ಇದರ ಆವರ್ತಾನುಗುಣವಾದ ವಿಭಾಗಗಳು ಇವು:

ಮಾಲಿಕೋತ್ತರ । ಮಲ್ಲಿಕಾರಸ । ಜಾಜ್ಝರೈಶ್ಚ ಗ । ತಾಗತಾ_ ॥

ಆದರೆ ಛಂದಃಶಾಸ್ತ್ರಗ್ರಂಥಗಳಲ್ಲೆಲ್ಲ ಇದರ ಪಾದಮಧ್ಯಯತಿ ಎಂಟನೆಯ ಅಕ್ಷರದಲ್ಲೆಂದು ಪ್ರೋಕ್ತವಾಗಿರುತ್ತದೆ. (ಜಯಕೀರ್ತಿ ಇದನ್ನು ಸೂಚಿಸಿರದಿದ್ದರೂ, ಅವನಿಗೂ ಅದುವೇ ಸಮ್ಮತವೆಂಬುದು ಅವನು ಮಾಡಿದ ಆ ವೃತ್ತಪಾದದ ಪದರಚನೆಯಿಂದ ವ್ಯಕ್ತವಾಗುತ್ತದೆ; ಅದರ ಎಂಟನೆಯ ಅಕ್ಷರದಲ್ಲಿ ಸ್ಫುಟತರವಾದ ಪದಯತಿ ಇರುವುದನ್ನು ಈ ಮೇಲೆ ಗುರುತಿಸಲಾಗಿದೆ.) ಶಾಸ್ತ್ರಕಾರರು ಹೀಗೇಕೆ ಮಾಡಿರಬಹುದು? – ಇದನ್ನು ಚಿಂತಿಸಿದರೆ, ಅದು ಗತಿಚಮತ್ಕೃತಿಗಾಗಿ ಎಂಬುದು ಹೊಳೆಯುತ್ತದೆ. ಆವರ್ತಗಳ ಕೊನೆಗಳಲ್ಲಿಯೇ ಪದಯತಿಯನ್ನಿರಿಸಿದರೆ – ಈ ವೃತ್ತದ ಛಂದಃಖಂಡಗಳು ಸತಾನವೃತ್ತಗಳಂತೆ 'ಗತಾಗತ'

(= ಮುಂದಿನ ಭಾಗ ಹಿಂದಿನದರಂತೆಯೇ ಇರುವುದು) ರೂಪದಲ್ಲಿರುವುದರಿಂದ – ಪಠಿಸುವಾಗ ಪದ್ಯದ ಗತಿಗೆ 'ಏಕರೂಪತೆ' (monotony) ಬಂದುಬಿಡುತ್ತದೆ. ಉದಾ:

ಕ್ರೂರದೈತ್ಯರ : ನಿಕ್ಕಲಾಗಿಯೆ : ಪುಟ್ಟಿದಂ ಹರಿ : ಯೆಂದು ಕೈ– ॥

(ರುದ್ರಭಟ್ಟ – ಜಗನ್ನಾಥವಿಜಯ)

ಇಂತಹದನ್ನು ತಡೆಯುವ ಉದ್ದೇಶದಿಂದ ಪುರಾತನರು ಈ ವೃತ್ತದ ಪಾದಮಧ್ಯಯತಿ–ಸ್ಥಾನವು ಎಂಟನೆಯ ಅಕ್ಷರದಲ್ಲೆಂದು ವಿಧಿಸಿದ್ದಾಗಿದೆ. (ಪಾದಮಧ್ಯಯತಿಯ ಪ್ರಭಾವದಿಂದ ವಸ್ತುತಃ ಲಯಾನ್ವಿತವಾದ ವೃತ್ತವೊಂದು ವಿಷಮಗತಿಯ ಬಂಧವೆಂದೇ ಕಾಣಿಸಿಕೊಳ್ಳಲೂ–ಬಹುದೆಂಬುದಕ್ಕೆ 'ಪೃಥ್ವೀವೃತ್ತ'ವು ಒಳ್ಳೆಯ ನಿದರ್ಶನವಾಗಿರುತ್ತದೆ. ಈ ವೃತ್ತದ ಪಾದಗಳು ಎಂಟು ಮಾತ್ರೆಯ ಆವರ್ತಗಳಾಗಿ ವಿಭಕ್ತವಾಗುವವಾದರೂ, ಇದನ್ನು ಪಠಿಸುವಾಗ ಅ ಆವರ್ತಗಳ ಬೋಧವು ಸುತರಾಂ ಆಗುವುದಿಲ್ಲ. ಹದಿನೇಳು ಅಕ್ಷರಗಳ ಪಾದದ ಈ ವೃತ್ತದ ಪಾದಮಧ್ಯಯತಿಸ್ಥಾನವು ಎಂಟನೆಯ ಅಕ್ಷರದಲ್ಲಿರುತ್ತದೆ. ಉದಾ:

(೧೧ ಮಾತ್ರೆ) (೧೩ ಮಾತ್ರೆ)
ಕುಚಾಂಚಿತವಿಪಂಚಿಕಾಂ : ಕುಟಿಲಕುಂತಲಾಲಂಕೃತಾಂ ।
(೧೧) (೧೩)
ಕುಶೇಶಯನಿವೇಶಿನೀಂ : ಕುಟಿಲಚಿತ್ತವಿದ್ವೇಷಿಣೀಂ ॥
(೧೧) (೧೩)
ಮದಾಲಸಗತಿಪ್ರಿಯಾಂ : ಮನಸಿಜಾರಿರಾಜ್ಯಶ್ರಿಯಂ ।
(೧೧) (೧೩)
ಮತಂಗಕುಲಕನ್ಯಕಾಂ : ಮಧುರಭಾಷಿಣೀಮಾಶ್ರಯೇ ॥ . ॥

(ಶ್ಯಾಮಲಾಸ್ತವ)

ಲಯಾನ್ವಿತದೃಷ್ಟಿಗನುಗುಣವಾಗಿ ಇದರ ಆವರ್ತಗಳು ಈ ಕೆಳಗಿನಂತೆ:

(೮) (೮) (೮)
ಕುಚಾಂಚಿತವಿಪಂ । ಚಿಕಾಂ ಕುಟಿಲಕುಂ । ತಲಾಲಂಕೃತಾಂ ॥ ಇತ್ಯಾದಿ.)

ಹಿಂದಿನ ಪರಿಚ್ಛೇದದಲ್ಲಿ ತೋರಿಸಿರುವಂತೆ – ಕಂದಪದ್ಯದ ಯುಕ್ಪಾದಮಧ್ಯಯತಿಯನ್ನು (ವಿಶಿಷ್ಟ ಸಂನಿವೇಶದಲ್ಲಿ) ಒಂಬತ್ತನೆಯ ಮಾತ್ರೆಯಲ್ಲಿ, ಅರ್ಥಾತ್ ಆವರ್ತದ ಅಂತರ್ಭಾಗ–ದಲ್ಲಿ ವ್ಯವಸ್ಥೆಗೊಳಿಸಿದುದರ ಉದ್ದೇಶವೂ ಇದೇ ಆಗಿರುತ್ತದೆ. ಇಂತಹ ಯತಿವ್ಯವಸ್ಥೆಗಳು ನಮಗೆ ಕಂಡುಬರುವುದು ಸಂಸ್ಕೃತಸಂಪ್ರದಾಯದ ಲಯಾನ್ವಿತಛಂದೋಬಂಧಗಳಲ್ಲಿ ಹೊರತು, ಕನ್ನಡದಲ್ಲಿಯೇ ಹುಟ್ಟಿಬಂದವುಗಳಲ್ಲಿ ಅಲ್ಲ. ಕನ್ನಡಮೂಲದವುಗಳಲ್ಲೆಲ್ಲ (ಉದಾ: ನಡುಗನ್ನಡದ ಷಟ್ಪದಿಗಳು) ಆವರ್ತಗಳ ಕೊನೆಯೇ ಪಾದಮಧ್ಯಯತಿಸ್ಥಾನವೂ ಆಗಿರುತ್ತದೆ. ಸಂಸ್ಕೃತಛಂದಃಸಂಪ್ರದಾಯಕ್ಕೆ ಲಯರಹಿತಬಂಧಗಳ ಕಡೆಗೇ ಹೆಚ್ಚಿನ ಒಲವು. ಕಾಳಿದಾಸಾದಿ ಮಹಾಕವಿಗಳ ರಚನೆಗಳನ್ನು ಈ ದೃಷ್ಟಿಯಿಂದ ನೋಡಿದರೆ, ನನ್ನೀ ಮಾತಿನ ಯಥಾರ್ಥತೆ ಅವಗತವಾಗದಿರದು. ಉದಾ: ರಘುವಂಶಮಹಾಕಾವ್ಯದ ಹತ್ತೊಂಬತ್ತು ಸರ್ಗಗಳೊಳಗೆ ಮೂರನ್ನು ಬಿಟ್ಟು ಉಳಿದೆಲ್ಲವುಗಳ 'ಸರ್ಗಚ್ಛಂದ'ಗಳು ಲಯರಹಿತ ಬಂಧಗಳೇ ಆಗಿವೆ. (ಸಂಸ್ಕೃತಕವಿಗಳು ಲಯಾನ್ವಿತಬಂಧಗಳನ್ನು ಬಳಸಿದಾಗಲೂ – ಅನುಪ್ರಾಸಾದಿಗಳನ್ನು ಲಯಸ್ಥಾನಗಳಲ್ಲಿಡದಿರುವ ಮೂಲಕ, ಅದೊಂದು ವಿಷಮಗತಿಬಂಧವೆಂಬ ಭ್ರಾಂತಿಯನ್ನು ಹುಟ್ಟಿಸುವ ಪ್ರಯತ್ನವನ್ನೂ ಮಾಡುವುದುಂಟು. ಉದಾ:

ಆದಾಯ ಬಕುಲಗಂಧಾ ।
ನಂಧೀಕುರ್ವನ್ ಪದೇಪದೇ ಭ್ರಮರಾನ್ ॥
ಅಯಮೇತಿ ಮಂದಮಂದಂ ।
ಕಾವೇರೀವಾರಿಪಾವನಃ ಪವನಃ ॥ . ॥

– ಇದು ಆರ್ಯಾವರ್ಗದ 'ಗೀತಿಕೆ' ಎಂಬ ಮಧ್ಯಾವರ್ತಗತಿಯ ಮಾತ್ರಾಬಂಧ ; ವಿಶ್ವನಾಥನ "ಸಾಹಿತ್ಯದರ್ಪಣ"ದಲ್ಲಿ ಛೇಕಾನುಪ್ರಾಸಕ್ಕೆ ಕೊಟ್ಟಿರುವ ಉದಾಹರಣೆ – ಆವರ್ತಗಳ ಆದಿಗಳಲ್ಲಿ ಅನುಪ್ರಾಸವಿಟ್ಟರೆ, ಪದ್ಯದ ಲಯಾನ್ವಿತತ್ವವು ಪಠನಕಾಲದಲ್ಲಿ ಸ್ಫುಟತರತ್ವವನ್ನು ಪಡೆಯುತ್ತದೆ. ಉದಾ:

ಕಂದಂ ಕವಿಕೋಕಿಲಮಾ ।
ಕಂದಂ ಕೋಮಲವಿಕಾಸಿಕೃತಿಕಲ್ಪಲತಾ ॥
ಕಂದಂ ವಿಸ್ಮಮರ ರಸದು ।
ಕ್ಕಂದಂ ಚಿಕದೇವರಾಯಚಂದನ ಚಂದಂ ॥.॥

ಇದೂ ಆರ್ಯಾವರ್ಗದ ಮಧ್ಯಾವರ್ತಗತಿಯ ಮಾತ್ರಾಬಂಧ; ತಿರುಮಲಾರ್ಯನ "ಅಪ್ರತಿಮವೀರಚರಿತ"ದಲ್ಲಿ ಉದಾಹೃತವಾದ ಕಂದಪದ್ಯ. ಗೀತಪ್ರಬಂಧಗಳಲ್ಲಾದರೆ, ಸಂಸ್ಕೃತಕವಿಗಳೂ ಆವರ್ತಗಳ ಆದಿಯಲ್ಲಿ ಅನುಪ್ರಾಸವನ್ನು ಪ್ರಯೋಗಿಸಿರುತ್ತಾರೆ. ಉದಾ: ಭಾಗವತಪುರಾಣಾಂತರ್ಗತವಾದ "ಗೋಪಿಕಾಗೀತ". ಗೀತಪ್ರಬಂಧಗಳಲ್ಲಿ ಲಯವು ಅತಿಮುಖ್ಯವಾಗಿರುವುದರಿಂದ, ಲಯಕ್ಕೆ ಅಲ್ಲಿ ಪರಿಸ್ಫುಟತೆಯನ್ನುಂಟುಮಾಡುವುದು ಗೀತಕ್ಕೆ ಶೋಭಾತಿಶಯವನ್ನೊದಗಿಸುತ್ತದೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.) ಸಂಸ್ಕೃತಮಹಾ–ಕವಿಗಳ ವಿಷಮಗತಿಪಕ್ಷಪಾತಕ್ಕೆ ಮುಖ್ಯವಾದೊಂದು ಕಾರಣವಿದೆ. ಅದೇನೆಂದರೆ – ಬಂಧವು ಲಯಾನ್ವಿತವಾಗಿದ್ದರೆ, ಪಠನಮಾಡುವಾಗ ಪದ್ಯದಲ್ಲಿ 'ನೃತ್ಯಗುಣ'ವೂ ಮೂಡಿಬರುತ್ತದೆ; ಇದರಿಂದಾಗಿ ಅಲ್ಲಿ "ಗತಿ"ಗೆ ಆಕರ್ಷಕತ್ವವು ಅಧಿಕವಾಗುತ್ತದೆ; ಇದರ ಪರಿಣಾಮವಾಗಿ ಅಲ್ಲಿ ಕಾವ್ಯದ ಮುಖ್ಯಪ್ರಯೋಜನವಾದ ಅರ್ಥದ ಕಡೆಗೆ ಶ್ರಾವಕನ ಲಕ್ಷ್ಯವು ಹಿನ್ನೆಲೆಗೆ ಸರಿದು ಬಿಡುತ್ತದೆ. ಬಂಧವು ಲಯರಹಿತವಾಗಿದ್ದರೆ, ಗತಿಗೆ ಆಕರ್ಷಕತ್ವವು ಕಡಮೆಯಾಗುವುದರಿಂದ, ಅರ್ಥದ ಕಡೆಗೇ ಹೆಚ್ಚಿನ ಲಕ್ಷ್ಯವು ಬೀಳುವಂತಾಗುತ್ತದೆ. ಸತಾನವೃತ್ತಗಳಲ್ಲಂತೂ ಲಯ–ಜನಿತವಾದ ಆಕರ್ಷಕತ್ವವು ಅತ್ಯಧಿಕವಾಗಿರುವುದರಿಂದ, ಸಂಸ್ಕೃತಕವಿಗಳು ಮಹಾಕಾವ್ಯಗಳ 'ಸರ್ಗಚ್ಛಂದ'ಗಳಾಗಿ ಅವುಗಳನ್ನು ಬಳಸಿದ್ದೇ ಇಲ್ಲ. ಯಾರೋ ಒಬ್ಬ ಕವಿ ತನ್ನ ಕಾವ್ಯ–ವೊಂದರಲ್ಲಿ 'ತೋಟಕವೃತ್ತ'ವನ್ನು – ಇದು 'ಸಗಣಗತಿ'ಯ ಸತಾನವೃತ್ತ – ಬಳಸಿದ್ದುದನ್ನು ಅಲಂಕಾರಶಾಸ್ತ್ರಕಾರರು ಕಟುವಾಗಿ ಖಂಡಿಸಿದ್ದಾರೆ. ಆದರೆ ಸಂಸ್ಕೃತಕವಿಗಳು ಸ್ತೋತ್ರಗಳಲ್ಲಿ ಸತಾನವೃತ್ತಗಳನ್ನು ಧಾರಾಳವಾಗಿ ಬಳಸಿರುತ್ತಾರೆ. ಅಂಥವುಗಳಲ್ಲಿ ಭಕ್ತಿಭಾವವೂ ತತ್ಪೋಷಕ–ವಾದ ನಾದವಿಲಾಸವೂ ಮುಖ್ಯವಾಗಿದ್ದು, ಅರ್ಥಗೌರವವು ಅಪ್ರಧಾನವಾಗಿರುತ್ತದೆ; ಮಾತ್ರವಲ್ಲ, (ಸೈನಿಕರ ಕವಾಯತಿನಂತೆ) ಏಕಪ್ರಕಾರವಾಗಿ ಸಾಗುವ ಅವುಗಳ ಹಜ್ಜೆಗಳು ಮನಸ್ಸಿನ ಏಕನಿಷ್ಠೆಗೆ ಆಲಂಬನವಾಗಿಯೂ ಇರುತ್ತವೆ. ಕಥನಕಾವ್ಯಗಳಲ್ಲಿ ಸತಾನವೃತ್ತಗಳನ್ನು ಸರ್ವಥಾ ಬಳಸದ ಸಂಸ್ಕೃತಕವಿಗಳು, ಸ್ತೋತ್ರಗಳಲ್ಲಿ ಅವುಗಳನ್ನು ಅಧಿಕವಾಗಿ ಬಳಸಿರುವುದಕ್ಕೆ ಇದುವೇ ಕಾರಣವೆಂಬುದರ ಅರಿವು ನಮಗಾದಾಗ, ಛಂದೋಗತಿವಿಷಯಕವಾದ ಅವರ ಔಚಿತ್ಯಪ್ರಜ್ಞೆಗೆ ನಾವು ತಲೆದೂಗಲೇ ಬೇಕಾಗುತ್ತದೆ. ಸ್ತೋತ್ರವು ಅರ್ಥಪ್ರಧಾನವಾಗಿಯೂ ಇರುವ ಸಂದರ್ಭಗಳಲ್ಲಿ ಅವರು ಸತಾನವೃತ್ತಗಳನ್ನಾಶ್ರಯಿಸದೆ – ವಿಶಿಷ್ಟವಾದ ಗತಿಸೌಂದರ್ಯವುಳ್ಳ 'ಶಿಖರಿಣೀ' ಇತ್ಯಾದಿ ವಿಷಮಗತಿವೃತ್ತಗಳನ್ನು ಬಳಸಿರುವುದೂ (ಉದಾ: ಪಂಡಿತರಾಜ

[ಈ ಮೇಲಿನ ಉದಾಹರಣಗಳ ಪ್ರತಿಯೊಂದು ಪಾದದ ಪ್ರಥಮ ಛಂದಃಖಂಡದಲ್ಲಿಯೂ ಎರಡು ಅಕ್ಷರಗಳಾದೊಡನೆ ಸ್ಪಷ್ಟವಾದ 'ವಿಚ್ಛೇದ'ವಿದೆ; ತತ್ಪರಿಣಾಮವಾಗಿ, ಶಾಲಿನೀವೃತ್ತದಲ್ಲಿ ಅದೂ ಒಂದು 'ಯತಿಸ್ಥಾನ'ವೆಂಬ ಕಲ್ಪನೆ ಹುಟ್ಟುವುದಕ್ಕೆ ಎಡೆಯಿರುವ ಹಾಗಿದೆ. ಆದರೆ ಇದು ಉದಾಹೃತವಾದ ಆ ಎಲ್ಲಾ ಭಾಗಗಳಲ್ಲಿ ತಪ್ಪದೆ ಬಂದಿರುವ 'ಪದಯತಿ'ಯಿಂದಾಗಿ ಹುಟ್ಟುವ ಭ್ರಾಂತಿ ಎಂಬುದು ಈ ವೃತ್ತದ ಬೇರೆ ಉದಾಹರಣಗಳನ್ನು ನೋಡಿದಾಗ ಗೊತ್ತಾಗುತ್ತದೆ. ಉದಾ: ವಿಶ್ರಾಮೋಬ್ಧೌ : ಶಾಲಿನೀ ಮೇನತೌಗೌ ॥ (ಜಯಕೀರ್ತಿ ॥-೧೦೦). ಇಷ್ಟು ಮಾತ್ರವಲ್ಲ, ವಿಷಮಗತಿಬಂಧಗಳ ಛಂದಃಪದಗಳು ಅಷ್ಟು ಕಿರಿಯ ಪರಿಮಾಣದವಾಗಿ ಇರುವುದೂ ಇಲ್ಲ.]

ವಿಷಮಗತಿವೃತ್ತಗಳ ಪಾದಮಧ್ಯಯತಿಸ್ಥಾನಗಳನ್ನು ಕಂಡುಕೊಳ್ಳುವ ವಿಧಾನವನ್ನು ಸೂಚಿಸಿದ್ದಾಯಿತು. ಈ ವಿಧಾನವನ್ನವಲಂಬಿಸಿ, ಪದಗತಿಯ ಜಾಲದಿಂದ ಛಂದೋಗತಿಯನ್ನು ಬಿಡಿಸಿಕೊಂಡಾಗ – ಉದಾಹೃತವಾದ ಶಾಲಿನೀ ವೃತ್ತದಲ್ಲಿ ಹೇಗೋ ಹಾಗೆ – ಕೆಲವು ವೃತ್ತಗಳ ಪಾದಮಧ್ಯಯತಿಸ್ಥಾನಗಳು ಶೀಘ್ರವಾಗಿ ಮೆಯ್ದೋರುತ್ತವಾದರೂ, ಇನ್ನು ಕೆಲವು ವೃತ್ತಗಳವು ಮೆಯ್ದೋರ-ಬೇಕಾದರೆ ಆ ವೃತ್ತಗಳ ನಿರರ್ಥಕರೂಪಗಳನ್ನು ಹಲವು ಬಾರಿ ತಾಳ್ಮೆಯಿಂದ ಉರುಹೊಡೆಯಬೇಕಾಗುತ್ತದೆ. ವಿಷಮಗತಿವೃತ್ತಗಳಲ್ಲಿ ಯತಿಸ್ವಭಾವವಿಷಯಕ-ವಾದ ಈ ಭೇದಗಳು ಕಾಣಿಸಿಕೊಳ್ಳುವುದರ ರಹಸ್ಯವೇನೆಂದರೆ: ಪಾದಮಧ್ಯ-ಯತಿಸ್ಥಾನದ ಹಿಂದಿನ ಮತ್ತು ಮುಂದಿನ ಛಂದಃಪದಗಳ ಅಕ್ಷರಗತಿಗಳಲ್ಲಿ ಸುಸ್ಪಷ್ಟವಾದ ಭೇದವಿರುವುದಾದರೆ ಆ ಯತಿಸ್ಥಾನವು ಅಲ್ಪಪ್ರಯತ್ನದಿಂದಲೇ ಅವಗತವಾಗುತ್ತದೆ; (ಉದಾ: ಮಂದಾಕ್ರಾಂತಾ, ಶಿಖರಿಣೀ, ಸ್ರಗ್ಧರಾ, ಮಾಲಿನೀ ಇತ್ಯಾದಿ.) ಹಾಗಿಲ್ಲದಿರುವ ವೃತ್ತದ ಪಾದಮಧ್ಯಯತಿಸ್ಥಾನವು ಬುದ್ಧಿಗೋಚರ-ವಾಗಬೇಕಾದರೆ ಸಾಕಷ್ಟು ಶ್ರಮಿಸಬೇಕಾಗುತ್ತದೆ. (ಉದಾ: ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲಾ, ಚಂಪಕಮಾಲಾ ಇತ್ಯಾದಿ.) ಇವುಗಳೊಳಗೆ ಮೊದಲನೆಯ ಬಗೆಯದರ ಪಾದಮಧ್ಯಯತಿಸ್ಥಾನದಲ್ಲಿ ಪದಯತಿ ಇಲ್ಲದಿದ್ದರೆ (ಎಂದರೆ ಅಲ್ಲಿ 'ಯತಿಭಂಗ'ವಾಗಿದ್ದರೆ) ಆ ಪದ್ಯದ ಗತಿಗೆ ಆದ ಆಘಾತವು ಪಠನಕಾಲದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಆದರೆ ಎರಡನೆಯ ಬಗೆಯದರ ಪಾದಮಧ್ಯಯತಿಸ್ಥಾನದಲ್ಲಿ ಯತಿಭಂಗವಾಗಿದ್ದರೆ, ಆ ಪದ್ಯದ ಗತಿಗೆ ಅಷ್ಟೊಂದು ಆಘಾತವಾದಂತೆನಿಸುವುದಿಲ್ಲ. ಈ ತಥ್ಯದ ಮನವರಿಕೆಗಾಗಿ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ:

---

ಜಗನ್ನಾಥನ "ಗಂಗಾಲಹರಿ"; ಶ್ರೀಶಂಕರಾಚಾರ್ಯರ ಕೃತಿಯೆಂದು ಪ್ರಸಿದ್ಧವಾಗಿರುವ "ಸೌಂದರ್ಯಲಹರಿ") ಸಂಸ್ಕೃತಕವಿಗಳ ಶ್ಲಾಘ್ಯವೂ ಸೂಕ್ಷ್ಮವೂ ಆದ ಈ ಔಚಿತ್ಯಪ್ರಜ್ಞೆಯನ್ನೇ ಪ್ರಕಾಶಪಡಿಸುವಂತಹದಾಗಿದೆ.]

I (a) ಶ್ರೀಶೈಲಾದಿಪ್ರಸಿದ್ಧಂ : ಸುರುಚಿರವಿಜಯ : ಸ್ತುತ್ಯನುದ್ರಿಕ್ತಸತ್ತ್ವಾ[76]
ವೇಶಂ ಕಲ್ಯಾಣಭೂಭೃತ್ : ಸದನ ಧನದಮಿ : ತ್ರಂ ಧರಾಧಾರಧರ್ಮಂ ॥
ವೈಶದ್ಯದ್ಯೋತಿ ಚಂದ್ರೋ: ಪಲಸಿತಭಸಿತಾ: ನಂತ ಕಾಂತೋತ್ತಮಾಂಗಂ ।
ಶ್ರೀಶೈವಶ್ರೇಯಮಂ ಮಾ: ಟ್ಕೆಮಗನವರತಂ: ನಂದಿಕೇಶಂ ಮಹೇಶಂ ॥ . ॥

(ರಾಜಶೇಖರವಿಲಾಸ, ೧-೧)

(b) ಅಮರಗಣಯುಗಂಗಳ್ : ಮುಂತೆ ಭೂತೋಯ ಯುಗ್ಮಂ ।
ಕ್ರಮದೆ ನಿಲೆ ಬೆಡಂಗಂ : ತಾಳ್ದು ಬಂದಾ ವಿರಾಮಂ ॥
ವಿಮಲವೆಣಿಪುದೆಂಟೆಂ : ಬಲ್ಲಿ ನಿಲ್ತಂದೊಡಕ್ಕುಂ ।
ಸಮದಗಜಗತೀ ಕೇಳ್ : ಮಾಲಿನೀನಾಮವೃತ್ತಂ ॥ . ॥

(ನಾಗವರ್ಮ-ಛಂದೋಂಬುಧಿ)[77]

II (a) ನಡೆದೆಂ ಚಿತ್ತಕೆ ಬಂದವೊಲ್ ನುಡಿದೆನಾಂ : ಬಾಯ್ಗಿಚ್ಚೆ ಬಂದಂತೆ ಸೈ ।
ಗೆಡೆದೆಂ ದುಃಖಸಮುದ್ರದೊಳ್ ಪಡೆದೆನಂ : ಧಂ ಕಣ್ಗಳಂ ಪೆತ್ತವೊಲ್ ॥
ಬಿಡೆ ನಿಮ್ಮಂಘ್ರಿಗಳಂ ಬಿಡೆಂ ಬಿಡೆನುದಾ : ರಂ ನೀನಹೋ ಬಲ್ಲೆ ಎ- ।
ನ್ನೊಡೆಯಾ ರಕ್ಷಿಸು ರಕ್ಷಿಸಾ ತಳುವಿದೇಂ : ರತ್ನಾಕರಾಧೀಶ್ವರಾ ॥ . ॥

(ರತ್ನಾಕರಾಧೀಶ್ವರಶತಕ)

---

76. ಕನ್ನಡಕವಿಗಳು ಪಾದಾಂತಯತಿಯನ್ನು (ಲಯರಹಿತ ಮತ್ತು ಲಯಾನ್ವಿತ ಎಂಬ ದ್ವಿವಿಧ ವೃತ್ತಗಳಲ್ಲಿಯೂ) ಮನ್ನಿಸಿರುವುದಿಲ್ಲ. ಪಾದಾಂತದಲ್ಲಿ ವಿರಮಿಸದಿರುವುದು ಕನ್ನಡಕ್ಕೆ ಶೋಭಾ-ವಹವೆಂದು ಅವರು ಬಗೆದಿದ್ದರು. (ಈ ನಿಬಂಧದಲ್ಲಿ ಮುಂದೆ ಈ ವಿಚಾರವು ಬರಲಿದೆ.)

77. {**ಯತಿವಿಷಯದಲ್ಲಿ ಪಿಂಗಳನ ಅಭಿಪ್ರಾಯ ನಾಗವರ್ಮನಿಗೆ ಸಂಮತ**} ಲಕ್ಷ್ಯಲಕ್ಷಣ ಸಮವಾಯರೂಪವಾಗಿ ರಚಿತವಾಗಿರುವ 'ಛಂದೋಂಬುಧಿ'ಯ ವೃತ್ತಗಳಲ್ಲಿ ಪಾದಮಧ್ಯ ಯತಿಸ್ಥಾನಗಳ ನಿರ್ದೇಶವೇನೋ ಇರುವುದಾದರೂ, ಅಲ್ಲಲ್ಲ (ಪಿಂಗಳಮತಾನುಸಾರವಾಗಿ) ಅವಶ್ಯವಾಗಿರುವ 'ಪದಯತಿ' (=ಪದವಿಚ್ಛೇದ) ನಿಯಮವನ್ನು ಪಾಲಿಸುವುದಕ್ಕಿಂತ ಉಲ್ಲಂಘಿಸಿರುವುದೇ ಅಧಿಕವಾಗಿದೆ ! ಇದರಿಂದ ನಾಗವರ್ಮನು ಯತಿವಿಷಯದಲ್ಲಿ ಭರತ ಕೋಹಲಾದಿಗಳ ಅನುಯಾಯಿಯಾಗಿದ್ದನೆಂದು ತೋರಬಹುದಾದರೂ, ಹಾಗೆ ಹೇಳುವಂತಿಲ್ಲ; ಏಕೆಂದರೆ – (ಜಯಕೀರ್ತಿ ಸೂಚಿಸಿರುವ) ಭರತಾದಿಗಳ ಅಭಿಪ್ರಾಯದಲ್ಲಿ ಯತಿಸ್ಥಾನ ನಿರ್ದೇಶವೇ ಅನಪೇಕ್ಷಿತ. ಅಷ್ಟು ಮಾತ್ರವಲ್ಲ, ಛಂದೋಂಬುಧಿಯ ಪ್ರಥಮಾಧಿಕಾರ-ದಲ್ಲಿರುವ ಯತಿವಿಷಯಕವಾದ ಎರಡು ಕಂದಪದ್ಯಗಳ ಆಶಯವನ್ನು ಪರಿಭಾವಿಸಿದರೆ, ಪಿಂಗಳಾದಿಗಳ ಅಭಿಪ್ರಾಯವೇ ನಾಗವರ್ಮನಿಗೆ ಸಂಮತವೆಂಬಂತೆ ತೋರುತ್ತದೆ!

(b) ಕಲಿಯನೆ ಪಂದೆ ಮಾಟ್ಪಿ ಕಡುವಂ : ದೆಯನೊಳ್ಗಲಿ ಮಾಟ್ಪಿ ತಕ್ಕನಂ ।
ಪೊಲೆಯನೆ ಮಾಟ್ಪಿ ಮುಂ ಪೊಲೆಯನಂ: ನೆಱೆ ತಕ್ಕನೆ ಮಾಟ್ಪಿ ತಮ್ಮೊಳ- ॥
ಗ್ಗಲಿಸಿ ಪೊದಟ್ಬು ಪರ್ವಿದವಿವೇ : ಕತೆಯಿಂ ನೃಪಚಿತ್ತವೃತ್ತಿ ಸಂ – ।
ಚಲಮದಱಿಂದವೋಲಗಿಸಿ ಬಾ : ೞ್ವುದು ಕಷ್ಟಮಿಳಾಧಿನಾಥರಂ ॥ . ॥[78]

(ಪಂಪಭಾರತ)

ಈ ಮೇಲೆ ಉದಾಹರಿಸಿದ ಪದ್ಯಗಳೊಳಗೆ । (a) ಎಂಬುದು ಸ್ರಗ್ಧರಾವೃತ್ತ. ಈ ವೃತ್ತದ ಪಾದದಲ್ಲಿ ಪಾದಮಧ್ಯಯತಿಸ್ಥಾನಗಳು ಎರಡಾಗಿದ್ದು, ಅಕ್ಷರಗತಿಸ್ವರೂಪವು ಭಿನ್ನಭಿನ್ನವಾಗಿರುವ ಮೂರು ಛಂದಃಪದಗಳಿರುತ್ತವೆ; ಅವು ಅನುಕ್ರಮವಾಗಿ ವಿಲಂಬಿತ ದ್ರುತ ಮಧ್ಯಗತಿಗಳ ಛಂದಃಪದಗಳಾಗಿರುತ್ತವೆ. ತತ್ಪರಿಣಾಮವಾಗಿ, ಈ ವೃತ್ತದಲ್ಲಿ ಯತಿಭಂಗವಾದರೆ ವೃತ್ತದ ಗತಿಗೆ ಆಗುವ ಹಾನಿ ಪಠನಕಾಲದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಉದಾಹೃತ ಪದ್ಯದಲ್ಲಿ ನಾಲ್ಕು ಕಡೆ ಯತಿಭಂಗವಾಗಿದ್ದು ಛಂದೋಗತಿಗೂ ಪದಗತಿಗೂ ಇರಬೇಕಾದ 'ಮೈತ್ರಿ' ಅಲ್ಲೆಲ್ಲ ಇಲ್ಲದೆ ಹೋಗಿ, 'ಪದ್ಯಗತಿ' ಶೋಭಾಹೀನವಾಗಿರುವುದು ಮಾತ್ರವಲ್ಲ, ಅಷ್ಟು ದೀರ್ಘವಾದ ಪಾದಗಳನ್ನು ನಿಲುಗಡೆಯಿಲ್ಲದೆ ಪಠಿಸಬೇಕಾಗುವ ಕ್ಲೇಶಕ್ಕೂ ಕಾರಣವಾಗಿದೆ. ಯತಿಸ್ಥಾನಗಳಲ್ಲೆಲ್ಲ ಪದಯತಿ ಇದ್ದಾಗ ಪ್ರಕಟವಾಗುವ ಈ ವೃತ್ತದ ಅಸಾಧಾರಣವಾದ ಗತಿಸೌಂದರ್ಯವನ್ನು ಈ ಕೆಳಗಿನ ವೃತ್ತಪಾದಗಳಲ್ಲಿ ಕಾಣಬಹುದು:

ಸಾಯಂಕಾಲೇ ವನಾಂತೇ : ಕುಸುಮಿತಸಮಯೇ : ಸೈಕತೇ ಚಂದ್ರಿಕಾಯಾಂ ॥

* * * * *

ಧಿಕ್‌ತಾನ್ ಧಿಕ್‌ತಾನ್ ಧಿಗೇತಾನ್ : ಕಥಯತಿ ಸತತಂ : ಕೀರ್ತನಸ್ಥೋ
ಮೃದಂಗಃ ॥[79]

---

78. ಇದು ಚಂಪಕಮಾಲಾವೃತ್ತ. ಇದರ ಪಾದಮಧ್ಯಯತಿಸ್ಥಾನವು ಹದಿಮೂರನೆಯ ಅಕ್ಷರ-ದಲ್ಲೆಂದು ನಾಗವರ್ಮನು ಹೇಳುತ್ತಾನೆ. ಆದರೆ ಈ ಹಿಂದೆ ಸೂಚಿಸಿದ ವಿಧಾನದಲ್ಲಿ ಯತಿ-ಸ್ಥಾನವನ್ನು ಹುಡುಕಿ ಹಿಡಿದಾಗ, ಅದು ಹನ್ನೊಂದನೆಯ ಅಕ್ಷರದಲ್ಲಿರುವುದು ನಮಗೆ ಗೋಚರವಾಗುತ್ತದೆ. ಹೀಗೆ ನಮಗೆ ಗೋಚರವಾಗುವ ಸ್ಥಾನವೇ ಈ ವೃತ್ತದ ಸಹಜವಾದ ಯತಿಸ್ಥಾನವೆಂಬುದನ್ನು ಹಲಾಯುಧನಿಂದ ವ್ಯಾಖ್ಯಾತವಾದ ಪಿಂಗಲನ ಗ್ರಂಥವೂ ಬೆಂಬಲಿ-ಸುತ್ತದೆ. ಈ ಗ್ರಂಥದಲ್ಲಿ ಈ ವೃತ್ತಕ್ಕೆ "ಶಶಿವದನಾ" ಎಂಬ ಹೆಸರಿದ್ದು, ಅದರ ಪಾದಮಧ್ಯ ಯತಿ ಹನ್ನೊಂದನೆಯ ಅಕ್ಷರದಲ್ಲಿರುತ್ತದೆಂದು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. (ಪಿಂಗಲ, VIII-೧೯)

79. ಸ್ರಗ್ಧರಾವೃತ್ತದಂತಹ ಪದ್ಯಗಳನ್ನು 'ಪಠಿಸು'ವುದೇ (recite) ಉಚಿತವಾಗಿದೆಯೆಂದೂ, ಅಂಥವುಗಳನ್ನು (ಗೇಯರೂಪದಲ್ಲಿ) ಹಾಡಿದರೆ ಅವುಗಳ ಗತಿಸೌಂದರ್ಯವು

I (b) ಎಂದು ಗುರುತಿಸಿ ಉದಾಹೃತವಾದ ಮಾಲಿನೀವೃತ್ತದ ಪಾದಗಳಲ್ಲಿ ಎರಡೆರಡು ಛಂದಃಪದಗಳಿದ್ದು, ಮೊದಲಿನದು ದ್ರುತಾಕ್ಷರಗತಿಯದಾಗಿಯೂ ಎರಡನೆಯದು ಮಧ್ಯಾಕ್ಷರಗತಿಯದಾಗಿಯೂ ಇರುತ್ತದೆ. ಈ ಎರಡು ಛಂದಃ ಪದಗಳಲ್ಲಿ ಪ್ರಸ್ಫುಟವಾಗಿ ಗೋಚರಿಸುವ ಅಕ್ಷರಗತಿಸ್ವಭಾವಭಿನ್ನತೆಯ ಕಾರಣ- ದಿಂದ, ಈ ವೃತ್ತದ ಗತಿಯು ಪಾದಮಧ್ಯಯತಿಭಂಗವನ್ನು ಸರ್ವಥಾ ಸಹಿಸು- ವುದಿಲ್ಲ; ಮಾತ್ರವಲ್ಲ, ಈ ವೃತ್ತವನ್ನು ಸಂಪ್ರದಾಯದಂತೆ ಪಠಿಸಬೇಕಾದರೆ ಇದರ ಪಾದಮಧ್ಯಯತಿಯು ಈಷತ್‌ಕಾಲವಿರಾಮಸಹಿಷ್ಣುವಾಗಿಯೂ ಇರಬೇಕಾಗುತ್ತದೆ; ಹಾಗಿಲ್ಲದಿದ್ದಾಗ ಈ ವೃತ್ತದ ಗತಿ ತನ್ನ ಶೋಭೆಯನ್ನು ಪೂರ್ಣವಾಗಿ ಪ್ರಕಟಿಸುವುದಿಲ್ಲ. ಉದಾಹೃತ ಪದ್ಯದ ಮೂರನೆಯ ಪಾದಮಧ್ಯದಲ್ಲಿ ಆಗಿರುವ ಯತಿಭಂಗದಿಂದಾಗಿ, ಪದ್ಯಗತಿಗೆ ಆಘಾತವಾಗಿರುವುದು ಸುಸ್ಪಷ್ಟ.

II (a) ಮತ್ತು (b) ಎಂದು ಗುರುತಿಸಿ ಉದಾಹರಿಸಿದ ಪದ್ಯಗಳು ಕನ್ನಡದಲ್ಲಿ ಸುಪ್ರಸಿದ್ಧವಾದ ಮತ್ತೇಭವಿಕ್ರೀಡಿತ ಮತ್ತು ಚಂಪಕಮಾಲಾ ಎಂಬ ವೃತ್ತಗಳು. ಈ ಪದ್ಯಗಳೊಳಗೆ (a)ಯ ಎರಡನೆಯ ಹಾಗೂ ಮೂರನೆಯ ಪಾದಮಧ್ಯಯತಿಸ್ಥಾನಗಳಲ್ಲಿಯೂ, (b)ಯ ೧, ೩, ೪ನೆಯ ಪಾದಮಧ್ಯಯತಿ- ಸ್ಥಾನಗಳಲ್ಲಿಯೂ ಯತಿಭಂಗವಿದೆಯಾದರೂ, ಇವುಗಳನ್ನು ಪಠಿಸುವಾಗ ಪದ್ಯ- ಗತಿಗೆ ಬರುವ ತೊಡಕು – I (a) ಮತ್ತು (b) ಎಂದು ಗುರುತಿಸಿದವುಗಳ ಪಠನದಲ್ಲಿ ಬಂದೊದಗುವ ತೊಡಕಿನಂತೆ ತೀವ್ರರೂಪದ್ದಾಗಿರದೆ, ಲಘುವಾಗಿ ಭಾಸವಾಗುತ್ತದೆ. ಹೀಗೆ ಯತಿಸ್ಥಾನದ ಹಿಂದಿನ ಮತ್ತು ಮುಂದಿನ ಛಂದಃ- ಪದಗಳ ಅಕ್ಷರಗತಿಯ ದ್ರುತತ್ವಾದಿಭೇದಗಳ ಕಾರಣದಿಂದ, ವಿಷಮಗತಿವೃತ್ತಗಳಲ್ಲಿ – ಯತಿಭಂಗವನ್ನು ಸರ್ವಥಾ ಸಹಿಸದ "ಪ್ರಬಲಯತಿಸ್ಥಾನಿ"ವೃತ್ತಗಳೆಂದೂ, ಯತಿಭಂಗವನ್ನು ಅಷ್ಟಿಷ್ಟು ಸಹಿಸಿಕೊಳ್ಳಬಲ್ಲ "ದುರ್ಬಲಯತಿಸ್ಥಾನಿ" ವೃತ್ತಗ- ಳೆಂದೂ ಎರಡು ವರ್ಗಗಳಾಗುತ್ತವೆ.[30] (ಉದಾಹೃತ ಪದ್ಯಗಳೊಳಗೆ I (a)

---

ಕ್ಷೀಣಿಸುವುದೆಂದೂ ಅಭಿನವಗುಪ್ತನು ಹೇಳಿರುತ್ತಾನೆಂದು ಆಪ್ತರೊಬ್ಬರು ತಿಳಿಸುತ್ತಾರೆ. ಇದರಿಂದ, ಈ ವೃತ್ತದ ಗತಿಸೌಂದರ್ಯವು ಆ ರಸಜ್ಞಶಿರೋಮಣಿಯನ್ನು ಎಷ್ಟರಮಟ್ಟಿಗೆ ಆಕರ್ಷಿಸಿತ್ತೆಂಬುದನ್ನು ನಾವು ಊಹಿಸಿಕೊಳ್ಳಬಹುದು.

30. ಪಾದಮಧ್ಯಯತಿಮೀಮಾಂಸೆಗಾಗಿ ಸಂಸ್ಕೃತಛಂದಃಶಾಸ್ತ್ರವ್ಯಾಖ್ಯಾನಕಾರರು ಆಯ್ದು- ಕೊಂಡಿರುವ ಪದ್ಯಗಳು ಮುಖ್ಯವಾಗಿ ಸ್ರಗ್ಧರಾ, ಮಂದಾಕ್ರಾಂತಾ, ಮಾಲಿನೀವೃತ್ತಗಳೇ ಆಗಿವೆ; (ಉದಾ: ಪಿಂಗಳ IV–೧. ಹಲಾಯುಧನ ವ್ಯಾಖ್ಯಾನವನ್ನು ಅವಲೋಕಿಸಿರಿ.) ಹೊರತು – ಸಂಸ್ಕೃತದಲ್ಲಿ ಅವುಗಳಿಗಿಂತಲೂ ಹೆಚ್ಚು ಪ್ರಸಿದ್ಧವಾದ 'ಶಾರ್ದೂಲವಿಕ್ರೀಡಿತ'ವಲ್ಲವೆಂಬುದು ಇಲ್ಲಿ ಅವಶ್ಯವಾಗಿ ಲಕ್ಷಿಸತಕ್ಕ ತಥ್ಯವಾಗಿದೆ. ಹೀಗೆ ಮಾಡಿರುವುದಕ್ಕೆ ಅವರ ಸಮರ್ಥನೆ- ಯೇನೂ ದೊರೆಯುವುದಿಲ್ಲವಾದರೂ – ಪಾದಮಧ್ಯಯತಿಸ್ಥಾನವು (ಮತ್ತು ಅಲ್ಲಿಯ ಯತಿಭಂಗವು) ಸ್ರಗ್ಧರಾದಿಗಳಲ್ಲಿ ಕಂಡುಬರುವಷ್ಟು ಸ್ಫುಟವಾಗಿ ಶಾರ್ದೂಲಾದಿಗಳಲ್ಲಿ ಗೋಚರಿಸದಿರುವುದೇ ಅವರ ಆಯ್ಕೆಗೆ ಕಾರಣವೆಂಬುದರಲ್ಲಿ ಸಂದೇಹವಿಲ್ಲ. ವಿಷಮ-

ಎಂಬುದರ ಮೊದಲನೆಯ ಯತಿಸ್ಥಾನವು ವಿಲಂಬಿತ ಮತ್ತು ದ್ರುತಗತಿಗಳ ಸಂಗಮಸ್ಥಾನ; ಎರಡನೆಯ ಯತಿಸ್ಥಾನವು ದ್ರುತ ಹಾಗೂ ಮಧ್ಯಗತಿಗಳ ಸಂಗಮಸ್ಥಾನ; I (b)ಯ ಯತಿಸ್ಥಾನವು ದ್ರುತಗತಿಯ ಹಾಗೂ ಮಧ್ಯಗತಿಗಳ ಛಂದಃಪದಗಳ ಸಂಧಿ. ಆದರೆ II (a) ಹಾಗೂ (b) ಎಂಬವುಗಳು ಪಾದಮಧ್ಯಯತಿಸ್ಥಾನಗಳ ಇಕ್ಕಡೆಗಳ ಗತಿಸ್ವರೂಪಗಳೂ ಬೇರೆಬೇರಾಗಿರದೆ, ಮಧ್ಯಾಕ್ಷರಗತಿಯವುಗಳಾಗಿರುತ್ತವೆ. ಈ ತಥ್ಯಗಳು ಇಲ್ಲಿ ಲಕ್ಷಿಸತಕ್ಕವುಗಳಾಗಿವೆ.)

ಭಾಷಾಪದಪರಿಮಾಣಗಳಿಂದ ಪ್ರಭಾವಿತವಾಗಿರುವ ನಮ್ಮ ಉಚ್ಚಾರ ಪ್ರಕ್ರಿಯೆಯ ಪರಿಣಾಮವಾಗಿ – (ಸಣ್ಣದಲ್ಲದೊಂದು) ನಿರರ್ಥಕಾಕ್ಷರಸಮುದಾಯವನ್ನಾದರೂ ನಾವು ಪಠಿಸುವಾಗ ಅದು ಏಕಾಕಾರವಾಗಿರದೆ ಅಲ್ಲಲ್ಲಿ ವಿಭಕ್ತವಾಗುತ್ತದೆಂಬುದನ್ನು ಈ ಹಿಂದೆ ಕಂಡುಕೊಂಡಿದ್ದೇವೆ; ಮತ್ತು, ಹಾಗೆ ವಿಭಕ್ತವಾಗುವ (ಅರ್ಥರಹಿತ) ಅಕ್ಷರಪುಂಜಗಳು ಭಾಷಾಪದಗಳ ಪ್ರತಿಚ್ಛಾಯೆಗಳೆಂಬುದನ್ನೂ ತಿಳಿದಿದ್ದೇವೆ. ಅಲ್ಲದೆ, ಅಸಂಯುಕ್ತವಾದ ಭಾಷಾಪದಪರಿಮಾಣವೆಂಬುದು ಅತಿ ಹೆಚ್ಚೆಂದರೆ ಐದು ಅಕ್ಷರಗಳನ್ನು (ಹಾಗೂ ಎಂಟು ಮಾತ್ರಾಕಾಲಗಳನ್ನು) ಮೀರುವುದಿಲ್ಲವೆಂದೂ ಅರಿತಿದ್ದೇವೆ. ತಥ್ಯವು ಹೀಗಿರುವುದರಿಂದ – ವಿಷಮಗತಿವೃತ್ತಗಳ ಬೃಹತ್ ಛಂದಃಪದಗಳು ಪಠನಕಾಲದಲ್ಲಿ ಏಕಾಕಾರವಾಗಿರದೆ, ಅಲ್ಲಲ್ಲಿ ವಿಭಕ್ತವಾಗುವುದು ಸಹಜವೇ ಆಗಿದೆ. ಆದರೆ ಈ ಛಂದಃಪದಗಳ ಅಂತರ್ವಿಭಾಗಗಳಿಗೆ (ಲಯಾನ್ವಿತ ಬಂಧಗಳ ಛಂದಃಪದಗಳು ಸಂಯುಕ್ತ ಅಥವಾ ಮಿಶ್ರಾವರ್ತಗಳಾಗಿರುವಾಗ, ಆ ಆವರ್ತಗಳ ಅಂತರ್ವಿಭಾಗಗಳಿಗೆ ಇರುವಂತೆ) ನಿಶ್ಚಿತ ಪರಿಮಾಣವೇನೂ ಇರದೆ, ಅವೆಲ್ಲ ಯಥಾಪದಪರಿಮಾಣವಾಗಿರುತ್ತವೆ. ಅರ್ಥಾತ್ ವಿಷಮಗತಿಬಂಧಗಳಲ್ಲಿ, ಛಂದಃಪದಾಶ್ರಿತವಾಗಿರುವ ಭಾಷಾಪದಗಳೇ ಆ ಅಂತರ್ವಿಭಾಗಗಳ ಪರಿಮಾಣವನ್ನು ನಿರ್ಧರಿಸುತ್ತವೆ. ಇದರಿಂದಾಗಿ, ವಿಷಮಗತಿಬಂಧಗಳ ಗತಿಯಲ್ಲಿ ಭಾಷಾಪದಗಳಿಗೆ (ಲಯಾನ್ವಿತಬಂಧಗಳ ಗತಿಯಲ್ಲಿರುವುದಕ್ಕಿಂತ) ಎಷ್ಟೋ ಹೆಚ್ಚಿನ ಪ್ರಭಾವವು ಲಭ್ಯವಾಗಿ, ಛಂದಃಪದದೊಳಗಿನ ಪದಗತಿಯೇ ಆ ಭಾಗದ ಛಂದೋಗತಿಯೂ ಆಗಿ ಪರಿಣಮಿಸುತ್ತದೆ; ಹಾಗೂ ತತ್ಫಲವಾಗಿ ಆ ದ್ವಿವಿಧಗತಿಗಳೊಳಗೆ ಪರಿಪೂರ್ಣವಾದ 'ಮೇಳ'(harmony)ವುಂಟಾಗುತ್ತದೆ. (ಯತಿಸ್ಥಾನಗಳಲ್ಲಿ 'ಪದಯತಿ' ಇಲ್ಲದಿದ್ದಾಗ, ಎಂದರೆ ಯತಿಭಂಗವಿದ್ದಾಗ ಮಾತ್ರ, ವಿಷಮಗತಿಬಂಧದಲ್ಲಿ ಛಂದೋಗತಿ ಮತ್ತು ಪದಗತಿ ಎಂಬ ಗತಿದ್ವೈವಿಧ್ಯವು ಗೋಚರಿಸುವುದು

---

ಗತಿವೃತ್ತಗಳ ಯತಿಸ್ವಭಾವಭೇದನಿಮಿತ್ತವಾದ ಈ ದ್ವೈವಿಧ್ಯವನ್ನಾಗಲಿ, ಅದರ ಕಾರಣವನ್ನಾಗಲಿ, ಪುರಾತನರು ಹೇಳಿಲ್ಲವಾದರೂ – ಆ ಭೇದದ ಅಸ್ತಿತ್ವವು ಅವರಿಗೂ ಭಾಸವಾಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. (ಈ ದ್ವೈವಿಧ್ಯವನ್ನು ಸ್ಪಷ್ಟವಾಗಿ ಗುರುತಿಸಿ ಸಕಾರಣವಾಗಿ ನಿರೂಪಿಸುವ ಪ್ರಯತ್ನವನ್ನು ಇದುವರೆಗೆ ಪ್ರಾಯಶಃ ಯಾರೂ ಮಾಡಿಲ್ಲ.)

ಹೊರತು, ಯತಿಭಂಗವು – ಪಾದಮಧ್ಯದಲ್ಲಿ ಮಾತ್ರವಲ್ಲ, ಪಾದಾಂತದಲ್ಲಿಯೂ – ಇಲ್ಲದಿದ್ದಾಗ ಆ ದ್ವೈವಿಧ್ಯವು ಅದರಲ್ಲಿ ಸುತರಾಂ ಗೋಚರಿಸುವುದಿಲ್ಲ; ಆ ಎರಡು ಗತಿಗಳಿಗೂ ಅಲ್ಲಿ ಐಕ್ಯವಿರುತ್ತದೆ.)

ಈ ತಥ್ಯಗಳನ್ನು ವಿಶದೀಕರಿಸಿಕೊಳ್ಳುವುದಕ್ಕಾಗಿ ಒಂದು ಪದ್ಯವನ್ನು ಪರಾಮರ್ಶಿಸೋಣ:

*  *  *  *

ಸರಸಿಜಮನುವಿದ್ಧಂ : ಶೈವಲೇನಾಪಿ ರಮ್ಯಂ ।

*  *  *  *  *

ಮಲಿನಮಪಿ ಹಿಮಾಂಶೋಃ : ಲಕ್ಷ್ಮ ಲಕ್ಷ್ಮೀಂ ತನೋತಿ ॥

*  *  *  *

ಇಯಮಧಿಕಮನೋಜ್ಞಾ : ವಲ್ಕಲೇನಾಪಿ ತನ್ವೀ ।

*  *  *  *

ಕಿಮಿವ ಹಿ ಮಧುರಾಣಾಂ : ಮಂಡನಂ ನಾಕೃತೀನಾಂ ॥ . ॥

(ಮಾಲಿನೀವೃತ್ತ – ಅಭಿಜ್ಞಾನಶಾಕುಂತಲ)

ಈ ಪದ್ಯದ ಪಾದಮಧ್ಯಗಳಲ್ಲಾಗಲಿ ಪಾದಾಂತಗಳಲ್ಲಾಗಲಿ ಎಲ್ಲಿಯೂ ಯತಿಭಂಗವಿಲ್ಲದಿರುವುದರಿಂದ – ಛಂದೋಗತಿಯಲ್ಲಿ ಪದಗತಿ ಲೀನವಾಗಿರು-ವುದೂ, ಛಂದಃಪದಾಶ್ರಿತವಾದ ಭಾಷಾಪದಗಳ ಪರಿಮಾಣಗಳೇ ಛಂದಃಪದಗಳ ಅಂತರ್ವಿಭಾಗಗಳ ಪರಿಮಾಣಗಳಾಗಿ ಪರಿಣಮಿಸಿರುವುದೂ (ಪದಾನುಗುಣವಾಗಿ ಪಠಿಸುವಾಗ) ಸುಸಂವೇದ್ಯವಾಗದಿರದು. (ಆದರೂ ಇಲ್ಲಿ ವಿಶದತೆಗಾಗಿ – ಛಂದಃಪದಗಳ ಅಂತರ್ವಿಭಾಗಗಳ ಆರಂಭಗಳನ್ನು ನಕ್ಷತ್ರಚಿಹ್ನೆಗಳಿಂದ ತೋರಿಸ-ಲಾಗಿದೆ. ಆ ವಿಭಾಗಗಳು ಪದಾನುಗುಣವಾಗಿರುವುದರಿಂದ ಎಲ್ಲಾ ಪಾದಗಳಲ್ಲಿ ಒಂದೇ ವಿಧವಾಗಿರದೆ, ಬೇರೆ ಬೇರೆ ವಿಧವಾಗಿರುವುದು ಇಲ್ಲಿ ಮುಖ್ಯವಾಗಿ ಲಕ್ಷಿಸತಕ್ಕ ವಿಷಯ. ಹಿಂದೆ ಶಾಲಿನೀವೃತ್ತವಿಚಾರದ ಸಂದರ್ಭದಲ್ಲಿ ಸೂಚಿಸಿರು-ವಂತೆ, ವೃತ್ತವಿದನ್ನು ನಿರರ್ಥಕಾಕ್ಷರಸಮುದಾಯವಾಗಿ ಉರುಹೊಡೆಯುತ್ತಾ ಹೋದರೆ, ಇದರ ಛಂದಃಪದಗಳ ಅಂತರ್ವಿಭಾಗಗಳು ಇನ್ನೂ ಹಲವು ರೂಪಗಳಲ್ಲಿ ಉನ್ಮೀಲಿಸುವುದನ್ನು ಕಾಣಬಹುದು.)

ವಿಷಮಗತಿವೃತ್ತಗಳ ಛಂದಃಪದಗಳನ್ನು ಕಂಡುಕೊಳ್ಳುವ ಪ್ರಯತ್ನವಾಗಿ ನಾವು ಈವರೆಗೆ ಮಾಡಿದ ವಿಚಾರದ ಫಲಿತಾಂಶವೇನೆಂದರೆ: ಆ ಛಂದಃಪದಗಳ ಪರಿಮಾಣವನ್ನು ನಿರ್ಧರಿಸುವವುಗಳು (ಪಾದಮಧ್ಯ ಹಾಗೂ ಪಾದಾಂತ) ಯತಿಸ್ಥಾನಗಳು. ಆ ಸ್ಥಾನಗಳಲ್ಲಿ ಪದಯತಿಯೂ ಇರುವುದಾದರೆ ಛಂದೋಯತಿ ಪ್ರಸ್ಫುಟವಾಗುವುದು ಮಾತ್ರವಲ್ಲ, ಪದ್ಯಪಠನವು ಸುಕರವೂ ಆಗುತ್ತದೆ; ಅಲ್ಲದೆ ಛಂದೋಗತಿಗೂ ಪದಗತಿಗೂ ಪರಿಪೂರ್ಣವಾದ ಮೈತ್ರಿ ಅಲ್ಲಿ ಏರ್ಪಟ್ಟು,

ಪದ್ಯಗತಿ ಸುಕುಮಾರಸುಂದರವಾಗುತ್ತದೆ. ಯತಿಸ್ಥಾನದ ಪೂರ್ವಾಪರಛಂದಃ-ಪದಗಳ ಅಕ್ಷರಗತಿಗಳೊಳಗೆ ಸ್ಫುಟಭೇದವು ಗೋಚರಿಸದಿರುವ ವೃತ್ತಗಳು ಯತಿಭಂಗವನ್ನು ಅಷ್ಟಿಷ್ಟು ಸಹಿಸಿಕೊಳ್ಳುವವಾದರೂ – ಹಾಗಿಲ್ಲದಿರುವ, ಎಂದರೆ ಯತಿಸ್ಥಾನದ ಉಭಯಪಾರ್ಶ್ವಗಳ 'ಅಕ್ಷರಗತಿ'ಗಳೊಳಗೆ ಪರಿಸ್ಫುಟವಾದ ಭೇದವು ಗೋಚರಿಸುವ ವೃತ್ತಗಳು ಯತಿಭಂಗವನ್ನು ಅಷ್ಟಾಗಿ ಸಹಿಸಿಕೊಳ್ಳುವುದಿಲ್ಲ. ಮತ್ತು – ವಿಷಮಗತಿಬಂಧಗಳ ಛಂದಃಪದಗಳ ಅಂತರ್ವಿಭಾಗಗಳ ಪರಿಮಾಣಗಳನ್ನು ತದ್ಗತವಾದ ಭಾಷಾಪದಪರಿಮಾಣಗಳೇ ನಿರ್ಧರಿಸುತ್ತವೆ; ಅರ್ಥಾತ್ ಭಾಷಾ ಪದಪರಿಮಾಣಗಳೇ ಆ ಅಂತರ್ವಿಭಾಗಪರಿಮಾಣಗಳೂ ಆಗಿ ಪರಿಣಮಿಸುತ್ತವೆ.

ಸೋದಾಹರಣವಾಗಿ ಈವರೆಗೆ ನಿರೂಪಿಸಿದಂತೆ – ವಿಷಮಗತಿವೃತ್ತಗಳ ಗತಿಯನ್ನು ಯತಿಸ್ಥಾನಗಳು ಅಷ್ಟಿಷ್ಟು ನಿಯಂತ್ರಿಸುವವಾದರೂ, ಅವು ಗುರು ಲಘುಸ್ಥಿರವಾದ ಬಂಧಗಳಾಗಿರುವುದರಿಂದ, ಅವುಗಳ 'ಛಂದೋಗತಿ'ಯ ಅನು-ಲ್ಲಂಘನೀಯವಾದ ನಿಯಂತ್ರಣವಿರುವುದು ಪರಮಾರ್ಥತಃ ಆಯಾ ವೃತ್ತದ ಅಕ್ಷರವಿನ್ಯಾಸದಲ್ಲಿ. ಇದರಿಂದ, ಹಾಗೂ ಭಾಷಾಪದಗಳಿಗೆ ವಿಷಮಗತಿವೃತ್ತ-ಗಳಲ್ಲಿರುವ ಪ್ರಭಾವವಿಶೇಷದ ಕಾರಣದಿಂದ – ಅವುಗಳ ಯತಿಸ್ಥಾನಗಳಲ್ಲಿ ಪದಯತಿ ಇಲ್ಲದಿರುವ ಸಂದರ್ಭಗಳಲ್ಲಿ (ಪಾದಮಧ್ಯಯತಿಸ್ಥಾನಗಳಲ್ಲಿ ಮಾತ್ರ-ವಲ್ಲ, ಪಾದಾಂತಗಳಲ್ಲಿಯೂ) ಈಷನ್ಮಾತ್ರವೂ ವಿರಮಿಸದೆ (ಪದಾನುಗುಣವಾಗಿ) ಪಠಿಸಿದರೆ, ವೃತ್ತದ ಗತಿಯೇ ಭ್ರಂಶವಾಗಿಹೋದಂತೆ ಭಾಸವಾಗುವುದಿಲ್ಲ. ವಿಷಮಗತಿವೃತ್ತಗಳಲ್ಲಿ ಈಯೊಂದು ಸೌಲಭ್ಯವಿರುವುದರಿಂದಲೇ, ಅನೇಕರು – ಮುಖ್ಯವಾಗಿ ಕನ್ನಡಕವಿಗಳು – 'ಯತಿ' ಎಂಬುದರ ಗೊಡವೆಯೇ ಇಲ್ಲದೆ (ವಿಷಮಗತಿ) ವೃತ್ತಗಳನ್ನು ರಚಿಸುವ ಸಾಹಸವನ್ನು ಮಾಡಿರುವುದಾಗಿದೆ. ಉದಾ:

ಶ್ರೀರಾಮಾನಟಿಕೌಸ್ತುಭದ್ಯುತಿಕಿರತ್ : ಪುಷ್ಪಾಂಜಲಿಕ್ಷೇಪವ– ।
ಕ್ಷೋರಂಗಸ್ಥಿತೆಯಾದ ಪಾದನಖರೋ : ಚಿರ್ಗಂಗೆ ಪೃಥ್ವೀಶಕೋ– ॥
ಟೀರವ್ಯಾಪ್ತಿಗೆ ಸಂದ ಚಕ್ರರವಿ ದೈ : ತ್ಯಧ್ವಾಂತಮಂ ಗೆಲ್ದ ಭೂ– ।
ಭಾರವಿಚ್ಛೇದವಿನೋದಿ ಕೃಷ್ಣನೆಮಗೀ : ಗಾನಂದಸಂದೋಹಮಂ ॥ . ॥

(ಶಾರ್ದೂಲವಿಕ್ರೀಡಿತ – ರುದ್ರಭಟ್ಟ, ಜಗನ್ನಾಥವಿಜಯ. । – ೧)

ಈ ಪದ್ಯದ ಪ್ರಥಮಪಾದದ ಪಾದಮಧ್ಯಯತಿಸ್ಥಾನದಲ್ಲಿ, ಮತ್ತು ಚತುರ್ಥಪಾದದ ಪಾದಾಂತಯತಿಸ್ಥಾನದಲ್ಲಿ (ಎಂದರೆ ಪದ್ಯದ ಕೊನೆಯಲ್ಲಿ) ಹೊರತು, ಬೇರೆ ಯಾವ ಯತಿಸ್ಥಾನದಲ್ಲಿಯೂ ಪದಯತಿಯ ಸುಳಿವೇ ಇಲ್ಲ! (ಹಿಂದೆ ಇದೇ ಪರಿಚ್ಛೇದದಲ್ಲಿ । (a) ಮತ್ತು (b) ಹಾಗೂ ॥ (a) ಮತ್ತು (b)

ಎಂದು ಗುರುತಿಸಿ ನಿದರ್ಶಿಸಿದ ಪದ್ಯಗಳೂ ಪ್ರಸ್ತುತಕ್ಕೆ ಉದಾಹರಣ-ಗಳಾಗಬಲ್ಲವುಗಳೇ ಆಗಿವೆ.)[81]

---

81. {ಖಂಡಪ್ರಾಸ ವಿಚಾರ} ಪಠನಸೌಕರ್ಯದ ಹಾಗೂ ಗತಿಸೌಂದರ್ಯದ ದೃಷ್ಟಿಯಿಂದ ಹೇಳುವುದಾದರೆ – ವೃತ್ತಗಳಲ್ಲಿ ಪಾದಮಧ್ಯಯತಿಗಿಂತಲೂ ಪಾದಾಂತಯತಿಯೇ ಮುಖ್ಯ-ತರವೆನ್ನಬೇಕಾಗುತ್ತದೆ. "ಯತಿಃ ಸರ್ವತ್ರ ಪಾದಾಂತೇ" ಎಂಬ ಪುರಾತನೋಕ್ತಿಯಂತೆ, (ವೃತ್ತಗಳಲ್ಲಿ) ಅದು ನಿರಪವಾದವಾಗಿ ಇರಬೇಕಾದ ಲಕ್ಷಣವಾಗಿರುತ್ತದೆ. ಹೀಗಿದ್ದರೂ ಕನ್ನಡ-ದಲ್ಲಿ ಅದನ್ನು ಅನುಸರಿಸಿದ ಸಂದರ್ಭಗಳಿಗಿಂತ ಉಲ್ಲಂಘಿಸಿದ ಸಂದರ್ಭಗಳೇ ಎಷ್ಟೆಷ್ಟೋ ಪಾಲು ಹೆಚ್ಚು. ಕಂದಪದ್ಯದಲ್ಲಿ ಪಾದಮಧ್ಯಯತಿಯನ್ನು ಎಚ್ಚರದಿಂದ ಕಾಪಾಡಿಕೊಂಡು ಬಂದಿರುವ ಕನ್ನಡಕವಿಗಳು – ಅರ್ಧಸಮಬಂಧವಾದ ಕಂದದಲ್ಲಿ ಪದ್ಯಾರ್ಧದಲ್ಲಿರಲೇ ಬೇಕಾಗಿದ್ದ ಪಾದಾಂತಯತಿಯನ್ನೂ ತಪ್ಪದೆ ಪಾಲಿಸಿರುವುದಿಲ್ಲ. ಇದಕ್ಕೆ ಕಾರಣವೇನೆಂಬು-ದನ್ನು 'ಕವಿರಾಜಮಾರ್ಗ'ಕಾರನು ಹೀಗೆ ವಿವರಿಸಿದ್ದಾನೆ:

ದೋಸಮನೆ ಗುಣದವೋಲು- ।
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್ ॥
ದೇಸಿಯನೆ ನಿಱಿಸಿ ಖಂಡ – ।
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ ॥ . ॥

(೧ – ೭೫)

ಅನ್ವಯ : ಪೂರ್ವಾಚಾರ್ಯರ್ ಕನ್ನಡದೊಳ್ ದೇಸಿಯನೆ ಒಲ್ದು, ದೋಸಮನೆ ಗುಣದವೋಲ್ ಉದ್ಭಾಸಿಸಿ, ಖಂಡಪ್ರಾಸಮಂ ನಿಱಿಸಿ, "ಇದು ಅತಿಶಯಂ" ಎಂದು ಯತಿಯಂ ಮಿಕ್ಕರ್.

[ದೇಸಿ=ಭಾಷೆ, ಕಲೆ ಇತ್ಯಾದಿಗಳಲ್ಲಿ ನೆಲೆಗೊಂಡ ಪ್ರಾದೇಶಿಕವಾದ ವಿಶಿಷ್ಟಲಕ್ಷಣ. ಉದ್ಭಾಸಿಸು= ಬೆಳಗುವಂತೆ ಮಾಡು. (ಉದ್ಭಾಸ್ – caus = illuminate; elevate - Apte) ನಿಱಿಸು – put down, adjust - Kittel. ಅತಿಶಯ = excellence, wonderful - Kittel; perfection of art - Apte.]

ಅನುವಾದ : ಈ ಮೊದಲಿನ (ಕನ್ನಡಕಾವ್ಯಗಳನ್ನು ರಚಿಸಿದ) ಆಚಾರ್ಯ ಪುರುಷರು ಕನ್ನಡದಲ್ಲಿ ನೆಲೆಗೊಂಡಿದ್ದ ಅದೊಂದು 'ದೇಸಿ'ಗೆ ಮನಸೋತು, (ಯತಿಭಂಗ ರೂಪವಾದ) ದೋಷವನ್ನೇ ಗುಣವಿಶೇಷವಾಗಿ ಹೊಳೆಯಿಸಿ (ತಮ್ಮ ರಚನೆಗಳಲ್ಲಿ) ಖಂಡಪ್ರಾಸಗಳನ್ನಿರಿಸಿ, "ಇದು ಚೇತೋಹಾರಿಯಾದ ಕಲಾಗುಣ"ವೆಂದು (ಪಾದಾಂತ) ಯತಿವಿಲಂಘನ ಮಾಡಿದರು ["....ಯತಿವಿಲಂಘನದಿಂದರಿದಲ್ತೆ ಕನ್ನಡಂ" – ಎಂಬ ಕೇಶಿರಾಜನ ಉಕ್ತಿಯನ್ನು ಈ ಸಂದರ್ಭದಲ್ಲಿ ಸ್ಮರಿಸುವುದು ವಿಹಿತವಾಗಿದೆ. ಅವನ ಅಭಿ-ಪ್ರಾಯದಲ್ಲಿಯೂ, ಯತಿವಿಲಂಘನವು ಕನ್ನಡದ ಒಂದು ವೈಶಿಷ್ಟ್ಯ, ಅರ್ಥಾತ್ "ದೇಸಿ".]

ಕವಿರಾಜಮಾರ್ಗಕಾರನಿಂದ ಈ ಸಂದರ್ಭದಲ್ಲಿ (ಮಾತ್ರ) ಉಕ್ತವಾಗಿರುವ "ಖಂಡಪ್ರಾಸ"ವೆಂದರೆ – ಅನಾದಿಕಾಲದಿಂದ ಮೊದಲ್ಗೊಂಡು ಈ ಶತಮಾನದ ಆದಿಯ ವರೆಗೂ ಕನ್ನಡ ಪದ್ಯದ ಅಪರಿಹಾರ್ಯಲಕ್ಷಣವಾಗಿದ್ದ ಪಾದದ್ವಿತೀಯಾಕ್ಷರಪ್ರಾಸವೆಂದು (ಸರ್ವಸಾಧಾರಣವಾಗಿ) ಈ ಶತಮಾನದ ವಿದ್ವಾಂಸರೆಲ್ಲ ಹೇಳುತ್ತಬಂದಿದ್ದಾರೆ. ಆದರೆ ಈ ಪದ್ಯವನ್ನು ಸಾವಧಾನವಾಗಿ ಪರಾಮರ್ಶಿಸಿ ನೋಡಿದರೆ –ಕೇವಲ ದ್ವಿತೀಯಾಕ್ಷರಪ್ರಾಸವನ್ನು ಕವಿರಾಜಮಾರ್ಗಕಾರನು "ಖಂಡಪ್ರಾಸ"ವೆಂದು ಹೆಸರಿಸಿದಹಾಗೆ ಕಾಣಲಾರದು. ವಸ್ತುತಃ,

ದ್ವಿತೀಯಾಕ್ಷರಪ್ರಾಸವೂ ಪಾದಾಂತಯತಿಭಂಗವೂ ಪರಸ್ಪರ ಅವಿನಾಭಾವಿಗಳೇನೂ ಅಲ್ಲ. ಮತ್ತು, ಕೇವಲ ಪ್ರಾಸರಚನಾಸೌಲಭ್ಯಕ್ಕಾಗಿ ಯತಿಭಂಗಮಾಡುವುದನ್ನು "ಇದು ಅತಿಶಯಂ" ಎಂದು ಮೆಚ್ಚಿ ಕೊಂಡಾಡುವುದೆಂದರೆ, ಕವಿಯ ದೌರ್ಬಲ್ಯವನ್ನೇ ಗುಣವಿಶೇಷವೆಂದು ಗೌರವಿಸುವುದೆಂದರೆ, ಹಾಗೆ ಗೌರವಿಸಿ ಅನುಕರಿಸಿದವರನ್ನು "ಆಚಾರ್ಯರು" ಎನ್ನುವು-ದೆಂದರೆ – ಅದೆಲ್ಲ ಹಾಸ್ಯಾಸ್ಪದವೆಂದು ಬೇರೆ ಹೇಳಬೇಕಾಗಿಲ್ಲ. ಮಹಾಕವಿಗಳ ಅಥವಾ "ಆಚಾರ್ಯಪುರುಷ"ರ ಮಾತು ಹಾಗಿರಲಿ, ಸಾಮಾನ್ಯರಾದ ಕವಿಗಳು ಸಹ ಪಾದಾಂತಯತಿಭಂಗಮಾಡದೆಯೇ ದ್ವಿತೀಯಾಕ್ಷರಪ್ರಾಸವನ್ನು ಅಂದವಾಗಿ ಇರಿಸಿದ ನಿದರ್ಶನಗಳು ಧಾರಾಳ ಇವೆ. ಉದಾ:

ಪ್ರಜೆಯಂ ಪಾಲಿಸಬಲ್ಲೊಡಾತನರಸಂ ಕೈಯಾಸೆಯಂ ಮಾಡದಂ ।<br>
ನಿಜಮಂತ್ರೀಶ್ವರ ತಂದೆತಾಯ ಸಲಹಲ್ ಬಲ್ಲಾತನೇ ಧಾರ್ಮಿಕಂ ॥<br>
ಭಜಕಂ ದೈವದೆ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ ।<br>
ದ್ವಿಜನಾಚಾರವನುಳ್ಳವಂ ಹರಹರಾ ಶ್ರೀ ಚೆನ್ನಸೋಮೇಶ್ವರಾ ॥ . ॥

(ಮತ್ತೇಭವಿಕ್ರೀಡಿತವೃತ್ತ – ಸೋಮೇಶ್ವರಶತಕ)

ಮತ್ತು – "ಪಾದದ್ವಿತೀಯಾಕ್ಷರಪ್ರಾಸ" ಎಂಬಿಷ್ಟೇ ಅರ್ಥವು ವಿವಕ್ಷಿತವಾಗಿರುವಲ್ಲಿ ಕವಿರಾಜಮಾರ್ಗಕಾರನು ಮಾಡಿರುವ ಪದಪ್ರಯೋಗವು – ಕೇವಲವಾಗಿ "ಪ್ರಾಸ"ವೆಂದು; ಉದಾ: "ಪ್ರಾಸಾನುಪ್ರಾಸಾಂತಪ್ರಾಸಂಗಳ್ ಮೂಱುಮತಿಶಯಂಗಳ್" (II – ೪೫) "ಅತಿ-ಶಯಮದು ಕನ್ನಡಕ್ಕೆ ಸತತಂ ಪ್ರಾಸಂ" (II – ೩೦); ಅಥವಾ "ಉರುಪ್ರಾಸ" (II –೩೨) ಎಂದಾಗಿದೆ ಹೊರತು, 'ಖಂಡಪ್ರಾಸ'ವೆಂಬ ಪದಪ್ರಯೋಗ ಅಲ್ಲೆಲ್ಲಿಯೂ ಇಲ್ಲವೇ ಇಲ್ಲ-ವೆಂಬುದೂ – ಖಂಡಪ್ರಾಸವೆಂದರೆ ದ್ವಿತೀಯಾಕ್ಷರಪ್ರಾಸ ಮಾತ್ರವಲ್ಲವೆಂಬುದನ್ನು ದೃಢ-ಪಡಿಸುತ್ತದೆ.

'ಖಂಡಪ್ರಾಸ' ಎಂಬ ಪದವು 'ದ್ವಿತೀಯಾಕ್ಷರಪ್ರಾಸ' ಎಂಬ ಪದದ ಪರ್ಯಾಯ-ವೆಂದು ಸಾಮಾನ್ಯವಾಗಿ ಈಗ ರೂಢವಾಗಿರುವ ತಪ್ಪು ಕಲ್ಪನೆಯನ್ನು ಮನಸ್ಸಿನಿಂದ ತೊಲಗಿಸಿಕೊಂಡು, ಕವಿರಾಜಮಾರ್ಗದ ಆ ಪದ್ಯವನ್ನು ಯಥಾನ್ವಯವಾಗಿ ಪರಾಮರ್ಶಿಸಿ-ದರೆ – (ಪೂರ್ವಪಾದಾಂತ) ಯತಿಭಂಗಸಹಿತವಾದ (ಉತ್ತರಪಾದದ) ದ್ವಿತೀಯಾಕ್ಷರ ಪ್ರಾಸವನ್ನು ಮಾತ್ರ 'ಖಂಡಪ್ರಾಸ'ವೆಂದು ಗ್ರಂಥಕಾರನು ಹೆಸರಿಸಿದ್ದೆಂಬುದು ನಿಸ್ಸಂದಿಗ್ಧವಾಗಿ ಗೊತ್ತಾಗುತ್ತದೆ. ಮತ್ತು, ಆ ಯತಿಭಂಗದ ಪರಿಣಾಮವಾಗಿ (ಪೂರ್ವ)ಪಾದಾಂತದ ಪದವು (word) ಎರಡು 'ಖಂಡ'ಗಳಾಗಿ ಒಡೆದು ಬೇರೆ ಬೇರೆ ಪಾದಗಳಲ್ಲಿ ಆಶ್ರಯವನ್ನು ಪಡೆಯುವ ಮೂಲಕ ಸಂಪನ್ನವಾಗುವ (ಉತ್ತರಪಾದದ) ದ್ವಿತೀಯಾಕ್ಷರಪ್ರಾಸಕ್ಕೆ 'ಖಂಡಪ್ರಾಸ'ವೆಂಬ ಹೆಸರು ಅನ್ವರ್ಥವೆಂಬುದೂ ಗೊತ್ತಾಗುತ್ತದೆ. ಮತ್ತು, ಹೆಚ್ಚಿನ ವಿವೃತಿಯನ್ನೇನೂ ಮಾಡದೆ ಗ್ರಂಥಕಾರನು ಆ ಹೆಸರನ್ನು ಹೇಳಿರುವ ಕಾರಣ, ಆ ಕಾಲದಲ್ಲಿ 'ಖಂಡಪ್ರಾಸ'ವೆಂಬ ಸಂಜ್ಞೆ ಸುಪ್ರಸಿದ್ಧವಾಗಿ ಇತ್ತೆಂದೂ ಭಾವಿಸಬೇಕಾಗುತ್ತದೆ.

ಈಗ – 'ಖಂಡಪ್ರಾಸ'ವೆಂಬ ಪದದಿಂದ ಲಕ್ಷಿತವಾಗಿರುವ, ಮತ್ತು – ಪೂರ್ವಾಚಾರ್ಯರು "ಇದು ಅತಿಶಯಂ" ಎಂದು ಕೊಂಡಾಡಿ, (ಯತಿಭಂಗರೂಪವಾದ) ಅದೊಂದು ದೋಷವನ್ನೇ ಗುಣವಾಗಿ ಹೊಳೆಯಿಸಿ, ತಮ್ಮ ರಚನೆಗಳಲ್ಲಿ ನೆಲೆಗೊಳಿಸಿದ ಆ 'ದೇಸಿ'ಯಿಂದ ಪದ್ಯದ ಗತಿಯ ಮೇಲೆ ಆಗುವ ಪರಿಣಾಮ ಹಾಗೂ ಅದರಿಂದ ಒದಗುವ 'ಶೋಭೆ' ಏನೆಂಬುದನ್ನು ತಿಳಿಯುವ ಪ್ರಯತ್ನಮಾಡೋಣ.

ಯತಿಸ್ಥಾನದಲ್ಲಿ ಪದಯತಿ ಇಲ್ಲದಿದ್ದರೆ ಅದು 'ಯತಿಭಂಗ'; ಯತಿಭಂಗದಿಂದ ಪದ್ಯದ ಗತಿ ವಿಕೃತವಾಗುತ್ತದೆ; ಯತಿನಿಯಮವನ್ನು ಪಾಲಿಸಿದರೆ 'ಪದ್ಯಗತಿ' ಸುಂದರ-ವಾಗುತ್ತದೆ. – ಇದು ಛಂದೋವಿದರೆಲ್ಲರಿಗೂ ಮಾನ್ಯವಾದ ಮಾತು. ಹೀಗಿರುವಲ್ಲಿ-ಯತಿ-ಯನ್ನು ಭಂಗಿಸುವುದರಿಂದ ಗತಿಗೆ 'ಅತಿಶಯ' ಬರುವುದು ಹೇಗೆ? – ಈ ಶಂಕೆ ಇಲ್ಲಿ ತಲೆಯೆತ್ತುವುದು ಸಹಜವೇ ಸೈ. ಆದರೆ ಕನ್ನಡದ ಪೂರ್ವಾಚಾರ್ಯರ ಮತದಂತೆ – ಖಂಡಪ್ರಾಸಕಾರಕವಾದ ಯತಿಭಂಗವು ದೋಷವಲ್ಲದಿರುವುದು ಮಾತ್ರವಲ್ಲ, ಅದು ಗುಣ-ಪ್ರಕರ್ಷಕ! – ಈ ಸಮಸ್ಯೆ ಬಗೆಹರಿಯಬೇಕಾದರೆ, ಸೌಂದರ್ಯಾನುಭೂತಿಗೆ ಸಂಬಂಧಿಸಿದ ಒಂದು ತಥ್ಯದ ಕುರಿತು ಸಾವಧಾನವಾಗಿ ಚಿಂತನ ಮಾಡುವುದು ಅವಶ್ಯವಾಗುತ್ತದೆ.

ಯಾವುದೊಂದು ವಸ್ತು ಅಥವಾ ವಸ್ತುವಿನ ಯಾವುದೊಂದು ಲಕ್ಷಣವು ಸುಂದರವೋ ಅಲ್ಲವೋ ಎಂಬುದಕ್ಕೆ ಪ್ರಮಾಣ ಯಾವುದು? – ಇದನ್ನು ಚಿಂತಿಸುತ್ತಾ ಹೋದರೆ, ಆ ವಸ್ತುವನ್ನು ಅಥವಾ ಆ ಲಕ್ಷಣವಿಶೇಷವನ್ನು ನೋಡುವ ವ್ಯಕ್ತಿಯ 'ದೃಷ್ಟಿ'ಯೇ ಅದಕ್ಕೆ ಪರಮಪ್ರಮಾಣವೆಂಬ ತಥ್ಯವು ನಮಗೆ ಗೋಚರವಾಗುತ್ತದೆ. ವ್ಯಕ್ತಿಯ ದೃಷ್ಟಿ ವಿಶೇಷವನ್ನು ರೂಪಿಸುವುದು ಆ ವ್ಯಕ್ತಿಯ ಪೂರ್ವಸಂಸ್ಕಾರ – ಎಂದರೆ, ಆ ಮೊದಲು ಆ ವ್ಯಕ್ತಿಯ ಮನಸ್ಸಿನ ಮೇಲೆ ಪರಿಸರಾದಿಗಳಿಂದ ಆಗಿರುವ ಪರಿಣಾಮ. ವ್ಯಕ್ತಿಯ ವಿಚಾರ-ಧಾರೆಯಾಗಲಿ, ಅಭಿಪ್ರಾಯವಾಗಲಿ, ಅಭಿರುಚಿಯಾಗಲಿ – ಅವೆಲ್ಲ (ಸಾಮಾನ್ಯವಾಗಿ) ಸಂಸ್ಕಾರಾನುರೂಪವಾಗಿಯೇ ಇರುತ್ತವೆ. ಸಮಾನಸಂಸ್ಕಾರಕ್ಕೆ ಗುರಿಯಾದ ಒಂದು ವ್ಯಕ್ತಿ-ಸಮೂಹದ ಅಭಿರುಚಿ ಹೆಚ್ಚುಕಡಮೆ ಸಮಾನವಾಗಿಯೇ ಇರುತ್ತದೆ. ಇದರಿಂದಾಗಿ ಆ ವ್ಯಕ್ತಿ-ಗಳಲ್ಲಿ ಸಮಾನವಾದೊಂದು ಸೌಂದರ್ಯದೃಷ್ಟಿ (=ಇದು ಸುಂದರವೆಂದು, ಇದೊಂದು ಅತಿಶಯವೆಂದು ಭಾವಿಸಿಕೊಳ್ಳುವ ಬುದ್ಧಿ) ಉತ್ಪನ್ನವಾಗುತ್ತದೆ. ಇದನ್ನವಲಂಬಿಸಿ ಆ ಜನ-ಸಮುದಾಯಕ್ಕೆ ಇಷ್ಟವಾದೊಂದು ಕಲಾಸಂಪ್ರದಾಯವು ನೆಲೆಗೊಳ್ಳುತ್ತದೆ. ಆ ಸಂಪ್ರದಾಯವು ವಿಶಾಲವಾದ ಭೂಭಾಗದಲ್ಲಿ ವ್ಯಾಪಿಸದೆ, ಸೀಮಿತವಾದ ಪ್ರದೇಶದಲ್ಲಿಯೇ ಚಿರಕಾಲ ಉಳಿ-ದರೆ, ಅದು ಆ ಪ್ರದೇಶದ "ದೇಸಿ" ಎನಿಸಿಕೊಳ್ಳುತ್ತದೆ. ಕನ್ನಡನಾಡಿನ ಅಂತಹದೊಂದು 'ದೇಸಿ'ಯನ್ನು ಕನ್ನಡದ ಪೂರ್ವಾಚಾರ್ಯರು ಮೆಚ್ಚಿದುದು ಸ್ವಾಭಾವಿಕವೇ ಸೈ. ಆ ದೇಸಿಯಲ್ಲಿ ಅವರು ಕಾಣುತ್ತಿದ್ದ 'ಅತಿಶಯ'ವೇನೆಂಬುದರ ಅರಿವು ನಮಗಾಗಬೇಕಾದರೆ, ಆ ದೇಸಿಯ ಪರಿಣಾಮಸ್ವರೂಪವನ್ನು ಪ್ರತ್ಯಕ್ಷೀಕರಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಒಂದು ಉದಾಹರಣೆ:

> ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾ-।
> ಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿನೋಡಿ ಬ- ॥
> ಳ್ಕುತ್ತಿರೆಯೇವಮಿಲ್ಲದಿವನಾವುದೊ ತಪ್ಪದೆ ಪೇೞಿಮೆಂಬ ಭೂ- ।
> ಪೋತ್ತಮನಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ ॥ . ॥
>
> (ಉತ್ಪಲಮಾಲಾವೃತ್ತ – ಪಂಪಭಾರತ. ೯-೬೯)

ಈ ಪದ್ಯದ ಕೊನೆಯ ಪಾದವೊಂದನ್ನು ಬಿಟ್ಟು ಉಳಿದ ಪ್ರತಿಯೊಂದರಲ್ಲಿಯೂ ಪಾದಾಂತ-ಯತಿಭಂಗವಿದೆ. (ಈ ಯತಿಭಂಗಗಳ ಪರಿಣಾಮವಾಗಿ ಇದರ ೨, ೩, ೪ನೇ ಪಾದಗಳ ದ್ವಿತೀಯಾಕ್ಷರಪ್ರಾಸಗಳು 'ಖಂಡಪ್ರಾಸ'ಗಳೆನಿಸಿವೆ.) ಇದರಿಂದಾಗಿ, ಈ ಪದ್ಯವನ್ನು ಪಠಿಸುವಾಗ ಛಂದೋಗತಿ ಮತ್ತು ಪದಗತಿ ಎಂಬೆರಡರೊಳಗೆ ಯಾವುದಕ್ಕೂ ಬಾಧೆಯಾಗದಂತಿರ-ಬೇಕಾದರೆ, ಚತುರ್ಥಪಾದಾಂತದಲ್ಲಿ – ಎಂದರೆ ಪದ್ಯದ ಕೊನೆಯಲ್ಲಿ – ಹೊರತು, ಬೇರೆ ಯಾವ ಪಾದಾಂತದಲ್ಲಿಯೂ ವಿರಮಿಸದಿರಬೇಕಾಗುತ್ತದೆ.

ಈಗ ಆ 'ದೇಸಿ'ಯಿಂದ ಪದ್ಯದ ಗತಿಯ ಮೇಲೆ ಆಗುವ ಪರಿಣಾಮವೇನೆಂಬುದು ವಿಶದವಾಯಿತು; ಪದ್ಯದ ಕೊನೆಯಲ್ಲಿ ಹೊರತು, ಇತರ ಪಾದಗಳ ಕೊನೆಗಳಲ್ಲಿ ಈಷ-ನ್ಮಾತ್ರವೂ ವಿರಮಿಸದೆ ("ದಂಡಾಕಾರ"ವಾಗಿ) ಪದ್ಯಪಠನಮಾಡುವುದೇ ಅಂದು ಕನ್ನಡದಲ್ಲಿ ನೆಲೆಗೊಂಡಿದ್ದ ಜನಪ್ರಿಯವಾದ ಸಂಪ್ರದಾಯವೆಂಬುದೂ ಗೊತ್ತಾಯಿತು. ಹಳಗನ್ನಡ ಕಾವ್ಯಗಳಲ್ಲಿ ಕಂಡುಬರುವ ಇನ್ನೊಂದು ಛಂದೋವೈಶಿಷ್ಟ್ಯವೂ ಈ ಸಂಪ್ರದಾಯವನ್ನು ನಮಗೆ ತಿಳಿಸುತ್ತದೆ. ಅದೇನೆಂದರೆ – ಪಾದಾಂತಗುರುಸ್ಥಾನದಲ್ಲಿ ಲಘ್ವಕ್ಷರವಿದ್ದರೂ ಅದು ಗುರುವೆಂದೇ ಗಣಿಸಲ್ಪಡುವುದು (ಮತ್ತು ಕರ್ಷಿತವಾಗಿ ಹಾಗೆ ಪಠಿಸಲ್ಪಡುವುದು) ಸಂಸ್ಕೃತ ಛಂದಃಶಾಸ್ತ್ರದ ಒಂದು ನಿಯಮ. ಆದರೆ ನಮ್ಮ ಹಳಗನ್ನಡ ಕವಿಗಳು ತಮ್ಮ ಚಂಪೂ ಪ್ರಬಂಧಗಳಲ್ಲಿ ಧಾರಾಳವಾಗಿ ಬಳಸಿಕೊಂಡ (ಸಂಸ್ಕೃತಛಂದೋಬಂಧಗಳಾದ) "ವೃತ್ತ"ಗಳ ಪಾದಾಂತಗಳಲ್ಲಾಗಲಿ (ಸಂಸ್ಕೃತದ ಆರ್ಯಾವರ್ಗದೊಳಗಿನ) ಕಂದಪದ್ಯದ ಯುಕ್ಪಾದಾಂತ-ಗಳಲ್ಲಾಗಲಿ ಆ ಸೌಲಭ್ಯವನ್ನು ಸರ್ವಥಾ ಪಡೆದುಕೊಳ್ಳದೆ, ಆ ಪಾದಾಂತಗಳಲ್ಲೆಲ್ಲ ಗುರ್ವಕ್ಷರಗಳನ್ನೇ ತಪ್ಪದೆ ಇರಿಸಿದ್ದಾರೆ. ಹೀಗೆ ಅವರು ಮಾಡಲು ಕಾರಣವೇನೆಂಬುದನ್ನು ಈವರೆಗೆ ಯಾರೂ ಚಿಂತಿಸಿದಂತಿಲ್ಲ. ಆದರೆ, ಕವಿರಾಜಮಾರ್ಗದಲ್ಲಿ ಸೂಚಿಸಿರುವ ಆ ಹಳೆಯ ದೇಸಿಯ ಬೆಳಕಿನಲ್ಲಿ ಇದನ್ನು ನೋಡಿದಾಗ, ಕನ್ನಡ ಕವಿಗಳು ಹಾಗೇಕೆ ಮಾಡಿರುವರೆಂಬುದು ನಮಗೆ ವಿಶದವಾಗುತ್ತದೆ: ಪಾದಾಂತದ ಗುರುಸ್ಥಾನದಲ್ಲಿ ಲಘುವನ್ನಿಟ್ಟು ಕರ್ಷಣ ಮಾಡಿ ಅದನ್ನು ಗುರುವಾಗಿಸಿ ಪಠಿಸುವುದಾದರೆ, ಅಲ್ಲಿ ವಿರಮಿಸಲೇಬೇಕಾಗುತ್ತದೆ. (ಅಲ್ಲಿದ್ದ ಹ್ರಸ್ವಸ್ವರವನ್ನು ದೀರ್ಘೀಕರಿಸಿದ ಮೇಲೆ) ಅಲ್ಲಿ ವಿರಮಿಸದೆ ಮುಂದಿನ ಪಾದವನ್ನೆತ್ತಿಕೊಂಡರೆ – ಅಲ್ಲಿ ಪದಯತಿ ಇದ್ದರೂ, ಇಲ್ಲದಿದ್ದರೂ – ಅಪಶಬ್ದವು ತಲೆ-ದೋರಿ ಅರ್ಥ ಕೆಟ್ಟು ಹೋಗುತ್ತದೆ. ಆದುದರಿಂದ, ಪಾದಾಂತಗಳಲ್ಲಿ ನಿಲ್ಲಿಸದೆ ಪಠಿಸುವ ಸೌಕರ್ಯವನ್ನೊದಗಿಸುವುದಕ್ಕಾಗಿಯೇ ನಮ್ಮ ಹಳಗನ್ನಡ ಮಹಾಕವಿಗಳೆಲ್ಲ ತಮ್ಮ ವೃತ್ತ ರಚನೆಗಳ ಪಾದಾಂತಗಳಲ್ಲಿ ಹಾಗೂ ಕಂದಪದ್ಯದ ಅರ್ಧಗಳ ಕೊನೆಗಳಲ್ಲಿ (ಅಲ್ಲಿ ಪದಯತಿ ಇರಲಿ, ಇಲ್ಲದಿರಲಿ) ಲಘುವನ್ನು ಗುರುವಾಗಿ ಮಾಡಿಕೊಳ್ಳುವ ಸೌಲಭ್ಯವನ್ನು ತಿರಸ್ಕರಿಸಿ, ಆ ಸ್ಥಾನಗಳಲ್ಲೆಲ್ಲ ಸಹಜಗುರುಗಳನ್ನೇ ತಪ್ಪದೆ ಇರಿಸಿದ್ದೆಂಬ ತಥ್ಯವು ನಮಗಾಗ ಪ್ರತ್ಯಕ್ಷವಾಗುತ್ತದೆ. [ಆರ್ಯಾವರ್ಗದ ಛಂದೋಬಂಧಗಳೊಳಗೆ ಸಂಸ್ಕೃತಪ್ರಾಕೃತಗಳಲ್ಲಿ ಹೆಚ್ಚಾಗಿ ಬಳಕೆಯಾಗಿ-ರುವವುಗಳೆಂದರೆ 'ಆರ್ಯೆ' ಮತ್ತು 'ಗೀತಿಕೆ' ಎಂಬವುಗಳು. ಕಂದಪದ್ಯವು (ಪಿಂಗಳನ ಗ್ರಂಥದಲ್ಲಿ ಇದಕ್ಕೆ 'ಆರ್ಯಾಗೀತಿ' ಎಂದು ಹೆಸರು) ಆ ಭಾಷೆಗಳಲ್ಲಿ ಬಳಕೆಯಾಗಿರುವುದು ಅಪೂರ್ವ. (ಕನ್ನಡನಾಡಿನವನೆಂದೇ ತೋರುವ ಜಯಕೀರ್ತಿ ಮಾತ್ರ ತಾನು ಸಂಸ್ಕೃತದಲ್ಲಿ ರಚಿಸಿದ "ಛಂದೋನುಶಾಸನ"ದಲ್ಲಿ ಇದನ್ನು ಧಾರಾಳವಾಗಿ ಬಳಸಿದ್ದು ಕಂಡು ಬರುತ್ತದೆ.) ಪ್ರಾಕೃತಭಾಷೆಯ (ಜೈನ)ಧರ್ಮಗ್ರಂಥಗಳಿಂದಲೂ ಸಂಸ್ಕೃತದ ನಾನಾ ಕಾವ್ಯಗಳಿಂದಲೂ ನಿರ್ವಿವಾದವಾಗಿ ಅತ್ಯಂತ ಪ್ರಭಾವಿತರಾಗಿದ್ದ ನಮ್ಮ ಹಳಗನ್ನಡ ಮಹಾಕವಿಗಳು – ತಾವು ರಚಿಸಿದ "ಸಮಸಂಸ್ಕೃತಕಾವ್ಯ" (ಎಂದರೆ – "ಸಂಸ್ಕೃತಕಾವ್ಯಗಳಿಗೆ ಸಮಾನವಾದ ಕಾವ್ಯ."– ಕವಿರಾಜಮಾರ್ಗ, I – ೨೬, ೨೭)ಗಳಲ್ಲಿ, ಆ ಭಾಷೆಗಳಲ್ಲಿ ಸುಪ್ರಸಿದ್ಧವಾದ ಮಾತ್ರಾ ಬಂಧಗಳಾಗಿದ್ದ ಆರ್ಯೆಯನ್ನಾಗಲಿ ಗೀತಿಕೆಯನ್ನಾಗಲಿ ಬಳಸದೆ, ಅವುಗಳಲ್ಲಿ ಅಷ್ಟೇನೂ ಪ್ರಸಿದ್ಧವಾಗಿಲ್ಲದಿದ್ದ ಮಾತ್ರಾಬಂಧವಾಗಿದ್ದ ಕಂದಪದ್ಯವನ್ನು ತಮ್ಮ ಕಾವ್ಯಗಳ ಪ್ರಧಾನವಾದ ಛಂದೋಬಂಧವನ್ನಾಗಿ ಮಾಡಿಕೊಂಡುದಕ್ಕೆ ಕಾರಣವೇನಾಗಿದ್ದಿರಬಹುದೆಂದು ಚಿಂತಿಸಿದರೆ – ಆ ಹಳೆಯ 'ದೇಸಿ'ಯೇ ಕಾರಣವಾಗಿತ್ತೆಂಬುದರ ಅರಿವಾಗುತ್ತದೆ. ಅದು ಹೇಗೆಂದರೆ – ಲಯಾನ್ವಿತವಾದ ಅರ್ಧಸಮಚತುಷ್ಪದಬಂಧಗಳಲ್ಲೆಲ್ಲ ಸಾಮಾನ್ಯವಾಗಿ ಯುಕ್ಪಾದಗಳ ಕೊನೆ-

ಯಲ್ಲಿ ಊನಗಣ(ಎಂದರೆ, ಆವರ್ತಪರಿಮಾಣಕ್ಕಿಂತ ಕಡಮೆಯಾದ ಮಾತ್ರಾಸಂಖ್ಯೆಯ ಛಂದಃಖಂಡ)ವಿರುತ್ತದೆ. ಇದರಿಂದಾಗಿ ಅಲ್ಲಿ ಗತಿಗೆ ಕಡ್ಡಾಯವಾದ ವಿಶ್ರಾಂತಿ ಬಂದೊದಗುತ್ತದೆ. ಈ ಸಾಮಾನ್ಯ ನಿಯಮದಂತೆ ಆರ್ಯೆಗೀತಿಕೆಗಳಲ್ಲಿಯೂ ಯುಕ್ಪಾದಾಂತಗಳಲ್ಲಿ ಊನಗಣವಿರುವುದರಿಂದ, ಅಲ್ಲಿ ಸಾವಕಾಶವಾಗಿ (ಕೆಲವು ಮಾತ್ರಾಕಾಲಗಳಷ್ಟು) ವಿರಮಿಸದೆ ಮುಂದಿನ ಪಾದವನ್ನೆತ್ತಿಕೊಳ್ಳಲಾಗುವುದಿಲ್ಲ. ಹೀಗೆ ವಿರಮಿಸಿ ಪಠಿಸುವುದು 'ಕನ್ನಡದ ದೇಸಿ'ಗೆ ಅಂದು ಒಗ್ಗದಿದ್ದುದರಿಂದ, ಆ ಬಂಧಗಳು ಕನ್ನಡಕ್ಕೆ ಬೇಡದವಾದವು. ಆದರೆ ಕಂದಪದ್ಯವು ಅರ್ಧಸಮಬಂಧಗಳ ಈ ಸಾಮಾನ್ಯನಿಯಮಕ್ಕೆ ಅಪವಾದರೂಪವಾಗಿದ್ದು, ಯುಕ್ಪಾದಗಳ ಕೊನೆಯಲ್ಲಿಯೂ 'ಪೂರ್ಣಗಣ'ವಿರುವ ಬಂಧವಾಗಿರುವುದರಿಂದ, – ಆರ್ಯೆಗೀತಿಕೆಗಳಂತೆ ಇದಕ್ಕೆ ಪದ್ಯಾರ್ಧಗಳ ಕೊನೆಯಲ್ಲಿ ಸಾವಕಾಶವಾದ ವಿರಾಮವಿರುವುದಿಲ್ಲ. ಈ ಕಾರಣದಿಂದ – ಪದ್ಯಗಳನ್ನು "ದಂಡಾಕಾರ"ವಾಗಿ ಪಠಿಸುವ ಕನ್ನಡದ ದೇಸಿಗನುಗುಣವಾಗಿ – ಪದ್ಯಾರ್ಧದಲ್ಲಿ ಈಷತ್ಕಾಲವೂ ವಿರಮಿಸದೆ ಪಠಿಸುವ ಸೌಕರ್ಯವು ಕಂದಪದ್ಯದಲ್ಲಿರುತ್ತದೆ. ಆರ್ಯಾವರ್ಗದ ಛಂದೋಬಂಧಗಳೊಳಗೆ ಕಂದಪದ್ಯವೇ ಹಳಗನ್ನಡ ಕವಿಗಳಿಗೆ ಇಷ್ಟವೂ ಉಪಾದೇಯವೂ ಆಗಲು ಇದುವೇ ಕಾರಣ. ಮತ್ತು, "ಪ್ರಾಸಾನುಪ್ರಾಸಾಂತಪ್ರಾಸಂಗಳ್ ಮೂಱುಮತಿಶಯಂಗಳ್" ಎಂದು ಕವಿರಾಜಮಾರ್ಗದಲ್ಲಿ (II – ೪೫) ಕೀರ್ತಿಸಲ್ಪಟ್ಟಿರುವ (ಪಾದದ್ವಿತೀಯಾಕ್ಷರಪ್ರಾಸ, ಅನುಪ್ರಾಸ, ಪಾದಾಂತಪ್ರಾಸ ಎಂಬ) ಮೂರು ಶಬ್ದಾಲಂಕಾರಗಳೊಳಗೆ "ಅಂತಪ್ರಾಸ"ವೆಂಬುದು ನಮಗೆ ಲಬ್ಧವಾಗಿರುವ ಹಳಗನ್ನಡಕಾವ್ಯಗಳಲ್ಲಿ ಇಲ್ಲವೆಂದು ಹೇಳುವಷ್ಟು (ರಗಳೆಗಳಲ್ಲಿ ಹೊರತು) ವಿರಳವಾಗಿರುವುದಕ್ಕೂ, ಪಾದಾಂತಗಳಲ್ಲಿ ವಿರಮಿಸದೆ ಪಠಿಸುವ ಸಂಪ್ರದಾಯವೇ ಮೂಲಕಾರಣವೆಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ, ಪಾದಾಂತದಲ್ಲಿ ಕ್ಷಣಕಾಲವಾದರೂ ವಿರಮಿಸುವಂತಿಲ್ಲದಿದ್ದರೆ (ಅಲ್ಲಿ ಪದಯತಿಯೂ ಇಲ್ಲದಿದ್ದರೆ) ಅಂತಪ್ರಾಸಕ್ಕೆ ಶೋಭೆಯೇ ಇಲ್ಲವಾಗುತ್ತದೆಂಬುದು ಅನುಭವವೇದ್ಯ.]

"ಕನ್ನಡದಲ್ಲಿ ನೆಲೆಗೊಂಡಿದ್ದ (ಪಾದಾಂತದಲ್ಲಿ ವಿರಮಿಸದೆ ಪಠಿಸುವ) ಸಂಪ್ರದಾಯಕ್ಕೆ ಮನವೊಲಿದ ಪೂರ್ವಾಚಾರ್ಯರು, ತಮ್ಮ ಕಾವ್ಯಗಳಲ್ಲಿ "ಖಂಡಪ್ರಾಸ"ಗಳನ್ನಿರಿಸಿ, ದೋಷವೇ ಆಗಿರುವ (ಪಾದಾಂತ)ಯತಿಭಂಗವನ್ನು ಗುಣವಿಶೇಷವಾಗಿ ಹೊಳಯಿಸಿದರು." -- ಇದು ಕವಿರಾಜಮಾರ್ಗಕಾರನ ಮಾತಿನ ಸಾರ. ಆದರೆ ಪಾದಾಂತದಲ್ಲಿ ವಿರಮಿಸದೆ ಪಠಿಸುವುದಕ್ಕೆ ಯತಿಭಂಗದ ಅವಶ್ಯಕತೆ ಏನು? ಹಾಗೆ ಪಠಿಸಿದರಾಯಿತಲ್ಲವೇ? – ಎಂಬೊಂದು ಪ್ರಶ್ನೆ ಇಲ್ಲಿ ಹುಟ್ಟದಿರುವುದಿಲ್ಲ. ಅದಕ್ಕೆ ಉತ್ತರ ಹೀಗೆ: ಹೌದು, ಹಾಗೆ ಪಠಿಸಿದರೆ ಸಾಕೆಂಬುದು ನಿಜ. ಆದರೆ ಪಾದಾಂತದಲ್ಲಿ ಪದಯತಿ ಇದ್ದರೆ, ಅಲ್ಲಿ ವಿರಮಿಸುವುದು ಅಥವಾ ವಿರಮಿಸದೆ ಪಠಿಸುವುದು ಪಾಠಕನ ಇಷ್ಟವನ್ನವಲಂಬಿಸಿರುತ್ತದೆ. ಪಾದಾಂತದಲ್ಲಿ ಪದಯತಿ ಇಲ್ಲದಿದ್ದರೆ – ಹಿಂದೆ ಸೋದಾಹರಣವಾಗಿ ನಿರೂಪಿಸಿರುವಂತೆ – ಅಲ್ಲಿ ಈಷತ್ಕಾಲವೂ ವಿರಮಿಸದೆ ಪಠಿಸುವುದು ಅವಶ್ಯವಾಗುತ್ತದೆ. ಆದುದರಿಂದ – ಹಾಗೆ ಪಠಿಸುವ ಸಂಪ್ರದಾಯವನ್ನು ಅರ್ಥಾತ್ ಆ ಹಳೆಯ 'ದೇಸಿ'ಯನ್ನು ಊರ್ಜಿತವಾಗಿರಿಸುವುದಕ್ಕಾಗಿ (ಕನ್ನಡದಲ್ಲಿ ಘನವಾದ ಕಾವ್ಯಗಳನ್ನು ರಚಿಸತೊಡಗಿದ) ಪೂರ್ವಾಚಾರ್ಯರು ತಮ್ಮ ರಚನೆಗಳಲ್ಲಿ ಪಾದಾಂತಯತಿಭಂಗವನ್ನು ರೂಢಿಗೆ ತಂದರು. ಇದರ ಪರಿಣಾಮೇ ಖಂಡಪ್ರಾಸ.

ಪಾದದ್ವಿತೀಯಾಕ್ಷರಪ್ರಾಸವು (ಇದನ್ನು ಕೇವಲ "ಪ್ರಾಸ" ಎಂದಿಷ್ಟೇ ಹೇಳುವುದು ಅಜ್ಞಾತಕಾಲದಿಂದ ಬಂದು ನೆಲಸಿರುವ ರೂಢಿ. ಉದಾ: "ನುತಶಬ್ದಾಲಂಕಾರದೊ । ಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ." ಕವಿರಾಜಮಾರ್ಗ, II – ೩೦) ಕನ್ನಡ

ಪದ್ಯರಚನೆಯೊಡನೆಯೇ ಹುಟ್ಟಿಬಂದಿರುವ ಅದರದೊಂದು ಲಕ್ಷಣವಾಗಿ ಕಂಡುಬರುತ್ತದೆ. ನಮಗೆ ಈ ವರೆಗೆ ಲಬ್ಧವಾದ ಕನ್ನಡ ಪದ್ಯಗ್ರಂಥಗಳೊಳಗೆ ಅತಿಹಳೆಯದಾದ ಕವಿರಾಜ-ಮಾರ್ಗದಲ್ಲಿ ಮಾತ್ರವಲ್ಲ, ಅದಕ್ಕಿಂತ ಹಿಂದಿನ ಕಾಲದ ಶಾಸನಗಳಲ್ಲಿ ದೊರಕುವ (ಕನ್ನಡ) ಪದ್ಯಗಳಲ್ಲಿ ಸಹ "ಪ್ರಾಸ"ರಹಿತವಾದ ಪದ್ಯ ಒಂದೂ ಇಲ್ಲ. ಆದರೆ ಪಾದಾಂತಯತಿಭಂಗವು ಕನ್ನಡದ ಆದಿಕಾಲದ ರಚನೆಗಳ ವೈಶಿಷ್ಟ್ಯವಾಗಿದ್ದಿಲ್ಲವೆಂಬುದೂ ಶಾಸನಲಬ್ಧವಾದ ಆ ಪದ್ಯಗಳಿಂದ ಗೊತ್ತಾಗುತ್ತದೆ. ಹೀಗಿದ್ದರೂ – ಆ ಪದ್ಯಗಳ ಪಠನಕ್ರಮದಲ್ಲಿ ಪಾದಾಂತ-ವಿರಾಮವಿದ್ದಿಲ್ಲವೆಂಬುದಕ್ಕೆ ಆ ಛಂದೋಬಂಧಗಳೇ ಆಧಾರವನ್ನೊದಗಿಸುತ್ತವೆ. ಅದರ ನಿರೂಪಣವನ್ನಿಲ್ಲಿ ದಿಙ್ಮಾತ್ರವಾಗಿಯಾದರೂ ಮಾಡಲೇಬೇಕಾಗುತ್ತದೆ. (ಈ ತಥ್ಯದ ಅಷ್ಟಿಷ್ಟು ವಿವರಗಳನ್ನು "ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ" ಎಂಬ ನನ್ನ ನಿಬಂಧದ ೩೧, ೩೨, ೩೩ನೇ ಪುಟಗಳಲ್ಲಿ ನೋಡಬಹುದು.) { ಈ ಪ್ರಬಂಧವು ಈ ಸಂಪುಟದ ಎರಡನೆಯ ಭಾಗದಲ್ಲಿ ಸೇರಿದೆ. ಇಲ್ಲಿ ಹೇಳಿದ ಪುಟಸಂಖ್ಯೆ ಅದಕ್ಕೆ ಅನ್ವಯಿಸುವುದಿಲ್ಲ. –ಸಂ.}

ಸಂಸ್ಕೃತಛಂದಸ್ಸಿನ ಕಂದವೃತ್ತಗಳು ಕನ್ನಡವನ್ನು ಪ್ರವೇಶಿಸುವುದಕ್ಕಿಂತ ಮೊದಲು, ಕನ್ನಡದಲ್ಲಿ ಬಳಕೆಯಾಗುತ್ತಿದ್ದ ಛಂದೋಬಂಧಗಳೆಂದರೆ – "ಕರ್ಣಾಟಕವಿಷಯಜಾತಿ"-ಗಳೆಂಬ ತ್ರಿಮೂರ್ತಿಗಣಬಂಧಗಳು ಮಾತ್ರ ಎಂದರೆ ತಪ್ಪಾಗಲಾರದು. (ಕವಿರಾಜಮಾರ್ಗದ ಕಾಲಕ್ಕಿಂತ ಹಿಂದಿನ ಶಾಸನಗಳೂ ಈ ಮಾತನ್ನು ಸಮರ್ಥಿಸುತ್ತವೆ.) ನಾಗವರ್ಮನೂ ಜಯಕೀರ್ತಿಯೂ ಆ ಬಂಧಗಳ ಲಕ್ಷಣಗಳನ್ನು ನಿರೂಪಿಸಿದ್ದಾರೆ. ತದನುಸಾರವಾಗಿ – ಆ ಛಂದೋಬಂಧಗಳೊಳಗೆ ಮದನವತಿ, ಅಕ್ಕರಿಕೆ, ಉತ್ಸಾಹ ಎಂಬೀ ಮೂರು ಬಂಧಗಳು ವಿಶುದ್ಧ ತ್ರಿಮೂರ್ತಿಗಣಬಂಧಗಳಾಗಿರದೆ – ಹೆಚ್ಚುಕಡಮೆ ನಡುಗನ್ನಡದ ಷಟ್ಪದಿಗಳ ಹಾಗೆ – ತ್ರಿಮೂರ್ತಿಗಣಾಂತರ್ಗತ ಮಾತ್ರಾಗಣಬಂಧಗಳಾಗಿವೆ. ಅವು ಹೀಗೆ ಮಿಶ್ರಸ್ವಭಾವದ ಬಂಧಗಳಾದುದರಿಂದ, ಇತರ "ಕರ್ಣಾಟಕವಿಷಯಜಾತಿ"ಗಳಷ್ಟು ಪುರಾತನವಾದ ಬಂಧ-ಗಳಲ್ಲವೆಂಬುದು ಸ್ಪಷ್ಟ. ಇನ್ನುಳಿದ ಅಕ್ಕರ, ತ್ರಿಪದಿ, ಏಳೆ, ಚೌಪದಿಕೆ, ಷಟ್ಪದಿಕೆ, ಛಂದೋವತಂಸ, ಗೀತಿಕೆ ಎಂಬ ಏಳರೊಳಗೆ – ತ್ರಿಪದಿ, ಏಳೆ, ಗೀತಿಕೆ ಎಂಬವು ಅತಿ-ಪುರಾತನವಾದವುಗಳೆಂಬುದಕ್ಕೆ ಶಾಸನಾದಿಗಳ ಆಧಾರವಿದೆ. ಈ ಮೂರಲ್ಲದೆ, "ಚೌಪದಿಕೆ" ಎಂಬುದೂ ಅತಿಪುರಾತನವಾದ ಬಂಧವೆನ್ನಬೇಕಾಗುತ್ತದೆ. ಏಕೆಂದರೆ "ಚೂಡಾಮಣಿ" ಎಂಬ ಗ್ರಂಥದಲ್ಲಿ ಇದು ಪ್ರಯುಕ್ತವಾಗಿದೆಯೆಂದು ಜಯಕೀರ್ತಿ ಹೇಳುತ್ತಾನೆ; 'ಚೂಡಾಮಣಿ' ಎಂಬುದು ಏಳನೆಯ ಶತಮಾನದವನಾದ "ಶ್ರೀವರ್ಧದೇವ"ನಿಂದ ರಚಿತವಾದ ಮಹಾಕೃತಿ ಎಂಬ ಪ್ರಸಿದ್ಧಿ ಇದೆ. ಈ ನಾಲ್ಕು ಪುರಾತನತಮಬಂಧಗಳಲ್ಲಿ ಗತಿವಿಧಾಯಕವಾದ ಒಂದು ವಿಶಿಷ್ಟಲಕ್ಷಣ ಕಂಡುಬರುತ್ತದೆ. ಅದೇನೆಂದರೆ, ಲಯಾನ್ವಿತಬಂಧಗಳಲ್ಲಿ – ಅವು ಸಮಪಾದ-ಬಂಧಗಳಾಗಿದ್ದರೆ ಪಾದಾಂತದ ಆವರ್ತದಲ್ಲಿ, ಅರ್ಧಸಮಬಂಧಗಳಾಗಿದ್ದರೆ ಪದ್ಯಾರ್ಧದ ಕೊನೆಯ ಆವರ್ತದಲ್ಲಿ – ಆ ಛಂದೋಬಂಧದ ಆವರ್ತಪರಿಮಾಣಕ್ಕೆ ಅವಶ್ಯವಿರುವುದಕ್ಕಿಂತ ಕಡಮೆ ಅಕ್ಷರಗಳಿರುವುದು ಸಾಮಾನ್ಯ ನಿಯಮ. (ಈ ನಿಬಂಧದ ಹಿಂದಿನ ಅಧ್ಯಾಯಗಳಲ್ಲಿ ಉದಾಹೃತವಾದ ಲಯಾನ್ವಿತಬಂಧಗಳಲ್ಲಿ ಹೆಚ್ಚಿನವು ಈ ಸಾಮಾನ್ಯ ನಿಯಮಕ್ಕೆ ಒಳಪಡು-ವವುಗಳು.) ಇದರ ಪರಿಣಾಮವಾಗಿ ಅಲ್ಲಿ (ಕೊನೆಯ ಅಕ್ಷರಕ್ಕೆ) ಆವರ್ತಪೂರ್ತಿಯಾಗುವಷ್ಟು ಕಾಲದ ಕರ್ಷಣ ಬರುತ್ತದೆ. ಆದರೆ ಈ ಮೇಲೆ ಹೆಸರಿಸಿದ ಕನ್ನಡದ ನಾಲ್ಕು ಪುರಾತನತಮಛಂದೋಬಂಧಗಳ ಪಾದಾಂತಗಳಲ್ಲಿ ಅಂತಹ ಊನಾಕ್ಷರದ ಆವರ್ತವಿರದೆ, ಪಾದಮಧ್ಯಗಳಲ್ಲಿ ನಿಯತವಾಗಿ ಊನಾಕ್ಷರಾವರ್ತವಿರುತ್ತದೆ. ಈ ನಾಲ್ಕು ಛಂದೋಬಂಧ-ಗಳೊಳಗೆ – ವಿಷ್ಣುಗತಿಬಂಧವಾದ ತ್ರಿಪದಿಯ ನಡುವಣ ಮತ್ತು ಕೊನೆಯ ಪಾದಗಳ

ಮಧ್ಯದಲ್ಲಿ (ವಿಷ್ಣುಗಣಕ್ಕಿಂತ ಕಿರಿಯದಾದ) ಬ್ರಹ್ಮಗಣವು ನಿಯತವಾಗಿರುತ್ತದೆ; ತ್ರಿಪದಿ-ಯಂತೆಯೇ ವಿಷ್ಣುಗತಿಬಂಧವಾದ 'ಏಳೆ'ಯ ಕೊನೆಯ ಪಾದದ ಮಧ್ಯದಲ್ಲಿ ಬ್ರಹ್ಮಗಣವಿರು-ತ್ತದೆ; ರುದ್ರಗತಿಬಂಧವಾದ "ಗೀತಿಕೆ"ಯ (ಪ್ರಭುಸೇನಸಂಮತಲಕ್ಷಣಾನುಸಾರವಾಗಿ) ಪ್ರತಿ-ಯೊಂದು ಪಾದದ ಉಪಾಂತ್ಯಗಣವು (ರುದ್ರಗಣಕ್ಕಿಂತ ಬಹಳ ಕಿರಿಯದಾದ) ಬ್ರಹ್ಮಗಣ-ವಾಗಿರಬೇಕಾಗುತ್ತದೆ; "ಚೌಪದಿಕೆ"ಯ ಪಾದಗಳಲ್ಲಿ ಎರಡೆರಡೇ ಗಣಗಳಿದ್ದು - ಮೊದಲನೆಯದು ವಿಷ್ಣುಗಣವಾಗಿಯೂ ಎರಡನೆಯದು ರುದ್ರಗಣವಾಗಿಯೂ ಇರುತ್ತದೆ; ಎಂದರೆ ಪಾದಮಧ್ಯದಲ್ಲಿ ಕೊನೆಗೊಳ್ಳುವ (ವಿಷ್ಣು)ಗಣವು ಪಾದಾಂತ್ಯ (ರುದ್ರ)ಗಣಕ್ಕಿಂತ ಕಿರಿದಾಗಿರುತ್ತದೆ. (ನನ್ನ ಇತ್ತೀಚೆಯ ವಿಚಾರದಂತೆ, ಚೌಪದಿಕೆಯು ರುದ್ರಗತಿಯ ಬಂಧ.) ಹೀಗೆ ಈ ನಾಲ್ಕು (ಲಯಾನ್ವಿತವೇ ಆದ) ಪುರಾತನತಮಬಂಧಗಳಲ್ಲಿಯೂ ಊನಾಕ್ಷರಾ-ವರ್ತಗಳು ಪಾದಾಂತ್ಯಗಳಲ್ಲಿ ಸರ್ವಥಾ ಇರದೆ, ಪಾದಮಧ್ಯಗಳಲ್ಲೇ ಇರುವುದಕ್ಕೆ ಕಾರಣ-ವೇನೆಂಬುದನ್ನು ಚಿಂತಿಸಿದರೆ, ಆ ಬಂಧಗಳ ಪಠನಗಾಯನ ವಿಧಾನಗಳಲ್ಲಿ - ಪಾದಾಂತ-ಗಳಲ್ಲಿ ಕರ್ಷಣಕಾಲವಿದ್ದಿಲ್ಲವೆಂದೂ, ಪಾದಮಧ್ಯಗಳಲ್ಲಿ ಆವರ್ತಪೂರ್ತಿಗಾಗಿ ಕರ್ಷಣವಿದ್ದೇ ಇರುತ್ತಿತ್ತೆಂದೂ ಅರಿವಾಗುತ್ತದೆ. (ಶಾರ್ಙ್ಗದೇವನು ನಿರೂಪಿಸಿರುವ 'ತ್ರಿಪದಿ'ಯ ಹಾಡು-ಗಾರಿಕೆಯ ವಿಧಾನವೂ ಇದನ್ನು ಸಮರ್ಥಿಸುತ್ತದೆ. ಸಂಗೀತರತ್ನಾಕರ, IV-೨೬೯, ೨೭೦) ತಾತ್ಪರ್ಯ: ಆದಿಕಾಲದ ಕನ್ನಡಛಂದೋಂಬಂಧಗಳೆಲ್ಲವೂ ವಿಶುದ್ಧತ್ರಿಮೂರ್ತಿಗಣಘಟಿತ-ವಾಗಿದ್ದು, ಆ ಗಣಗಳೆಲ್ಲವುಗಳ ಕೊನೆಯ ಅಕ್ಷರವು (ಅದು ಸಹಜವಾಗಿ ಗುರುವಾಗಿರಲಿ ಅಥವಾ ಲಘುವಾಗಿರಲಿ) ಗುರೂಚ್ಚಾರವನ್ನೇ ನಿಯತವಾಗಿ ಪಡೆಯುವ ಕಾರಣ, ಪ್ರತಿ-ಯೊಂದು ಗಣದ ಕೊನೆಯಲ್ಲೆಂಬಂತೆ ಪದಯತಿ ಇಷ್ಟವಾಗುವುದರಿಂದ (ಇಲ್ಲದಿದ್ದರೆ ಪಠನ-ಕಾಲದಲ್ಲಿ ಅರ್ಥವ್ಯಕ್ತಿಗೆ ಒಂದಿಷ್ಟು ತಡೆಯಾಗುವುದರಿಂದ) ತದನುಗುಣವಾಗಿ ಆ ಪದ್ಯಗಳ ಪಾದಾಂತಗಳಲ್ಲಿ ಸಾಮಾನ್ಯವಾಗಿ (ಕಡ್ಡಾಯವಾಗಿ ಅಲ್ಲ) ಪದಯತಿ ಇರುತ್ತಿದ್ದರೂ - ಪಾದಾಂತಗಳಲ್ಲಿ ಕರ್ಷಣಮಾಡದೆ ಪಠಿಸುವುದೂ ಹಾಡುವುದೂ ಆ ಛಂದೋಬಂಧಗಳ ಗತಿಯ ವೈಶಿಷ್ಟ್ಯವಾಗಿತ್ತು; ಮತ್ತು ಈ ವಿಶಿಷ್ಟತೆಯು, ನಮಗೆ ಗೊತ್ತಾಗಿರುವ ಕನ್ನಡ ಪದ್ಯ-ಬಂಧಗಳೊಳಗೆ ಅತಿಪುರಾತನವಾದ ಆ ನಾಲ್ಕೂ ಛಂದೋಬಂಧಗಳ ಗತಿಯ ಸಾಮಾನ್ಯ ಲಕ್ಷಣವಾಗಿರುವುದರಿಂದ, ಅದು - ಎಂದರೆ ಪಾದಾಂತಗಳಲ್ಲಿ ಕರ್ಷಣಮಾಡದೆ ಪದ್ಯಗಳನ್ನು ಪಠಿಸುವುದೂ ಹಾಡುವುದೂ - ಕನ್ನಡದ ಆದಿಕಾಲದ ಸಂಪ್ರದಾಯ ಅರ್ಥಾತ್ "ದೇಸಿ"ಯಾಗಿತ್ತು ಎಂದು ಸಿದ್ಧವಾಗುತ್ತದೆ.

ಆದರೆ, ಸಂಸ್ಕೃತ (ಹಾಗೂ ಪ್ರಾಕೃತ) ಛಂದೋಬಂಧಗಳ ಪಠನಸಂಪ್ರದಾಯವು, ಈ ಮೇಲೆ ನಿದರ್ಶಿಸಿರುವ ಕನ್ನಡ ಸಂಪ್ರದಾಯಕ್ಕೆ ವಿರುದ್ಧವಾಗಿ, ಪಾದಾಂತಗಳಲ್ಲಿ ವಿರಮಿ-ಸುವಂತಹದಾಗಿತ್ತು; ಮತ್ತು ಆ ಕಾರಣದಿಂದಲೇ ಆ ಸ್ಥಾನಗಳಲ್ಲಿ ಪದಯತಿ ಕಡ್ಡಾಯವಾಗಿ ಇರುತ್ತಿತ್ತು. ಕನ್ನಡದ ಆದಿಕಾಲದಲ್ಲಿಯೇ, ಸಂಸ್ಕೃತಪ್ರಾಕೃತಗಳೂ ಆ ಪಠನಸಂಪ್ರದಾಯವೂ ಭಾರತವನ್ನೆಲ್ಲವೆಂಬಂತೆ ವ್ಯಾಪಿಸಿದ್ದುದರಿಂದ, ಆ ಸಂಪ್ರದಾಯವು ಸರ್ವಸಮ್ಮತವಾದ "ಮಾರ್ಗ"ವೆನ್ನಿಸಿಕೊಂಡುದೂ, - ಮತ್ತು ಆ ಸಂಪ್ರದಾಯವು ವ್ಯಾಪಿಸಿದ್ದ ಕ್ಷೇತ್ರಕ್ಕಿಂತ ಎಷ್ಟೋ ಸಣ್ಣ ಕ್ಷೇತ್ರದಲ್ಲಿ ರೂಢವಾಗಿದ್ದ ಕನ್ನಡ ಸಂಪ್ರದಾಯವು "ದೇಸಿ" ಎನಿಸಿಕೊಂಡುದೂ ಸ್ವಾಭಾವಿಕವೇ ಸೈ. ಮತ್ತೆ - ಸಂಸ್ಕೃತ ಛಂದೋಬಂಧಗಳು ಒಂದೊಂದಾಗಿ ಕನ್ನಡ ಕಾವ್ಯಗಳಲ್ಲಿ ಆಸರೆಪಡೆಯತೊಡಗಿದ ಕಾಲದಲ್ಲಿ, (ಇದು "ಬೆದಂಡೆ, ಚತ್ತಾಣ"ಗಳೆಂಬ ಪದ್ಯಕಾವ್ಯಗಳು ರಚಿತವಾಗುತ್ತಿದ್ದ ಕಾಲವೆಂಬುದು, ಕವಿರಾಜಮಾರ್ಗದಲ್ಲಿ ಪ್ರೋಕ್ತವಾದ ಆ ಕಾವ್ಯರೂಪಗಳ ಛಂದೋವೈಶಿಷ್ಟ್ಯಗಳನ್ನು ಪರಿಭಾವಿಸಿದರೆ ಸ್ಪಷ್ಟವಾಗುತ್ತದೆ: ಅವುಗಳಲ್ಲಿ

"ಕರ್ಣಾಟಕವಿಷಯಜಾತಿ"ಗಳು ಅರ್ಥಾತ್ ತ್ರಿಮೂರ್ತಿಗಣಬಂಧಗಳೇ ಪ್ರಧಾನವಾಗಿದ್ದರೂ, ಕಂದಗಳೂ ಎಡೆಯೆಡೆಯಲ್ಲಿ ಒಂದೊಂದು ವೃತ್ತಗಳೂ ಸೇರಿರುತ್ತಿದ್ದವು. – ಕವಿರಾಜಮಾರ್ಗ, I – ೩೪, ೩೫) ಅವುಗಳ ಪಠನವೂ 'ದೇಶೀ' ಪದ್ಧತಿಯಲ್ಲಿಯೇ ಸಾಗುವುದು ಇಷ್ಟವೂ ಪ್ರಾಯಶಃ ಅನಿವಾರ್ಯವೂ ಆಗಿದ್ದುದರಿಂದ, ಆ ಕಾಲದ ಕನ್ನಡಕವಿಗಳು – ಕಂದಪದ್ಯದ ಅರ್ಧಗಳ ಕೊನೆಗಳಲ್ಲಿ ಹಾಗೂ ವೃತ್ತಗಳ ಪಾದಾಂತಗಳಲ್ಲಿ ಲಘ್ವಕ್ಷರವನ್ನು ಪ್ರಯೋಗಿಸಿ ಗುರೂಚ್ಚಾರಮಾಡುವ ಸಂಸ್ಕೃತಸಂಪ್ರದಾಯದ ಸೌಲಭ್ಯವನ್ನು ಬಿಟ್ಟುಕೊಟ್ಟು, ಆ ಸ್ಥಾನಗಳಲ್ಲಿ ನಿಜಗುರುಗಳನ್ನೇ ತಪ್ಪದೆ ಪ್ರಯೋಗಿಸುವ ಮೂಲಕ ದೇಶೀಪದ್ಧತಿಯ ಪಠನಕ್ಕೆ ಅನುಕೂಲತೆಯನ್ನೊದಗಿಸಿದರೆಂಬುದು (ಪಠನಶೈಲಿಯ ದೃಷ್ಟಿಯಿಂದ ನೋಡಿದಾಗ) ಸುಸ್ಪಷ್ಟವಾಗುತ್ತದೆ. ಹೀಗಿದ್ದರೂ, ಆ ಸ್ಥಾನಗಳಲ್ಲಿ ಪದಯತಿ ಇದ್ದರೆ – ಹಿಂದೊಮ್ಮೆ ಸೂಚಿಸಿರುವಂತೆ – ವಿರಮಿಸದೆ ಪಠಿಸುವುದು ಐಚ್ಛಿಕವಾಗುತ್ತದೆ; ಆ ಸ್ಥಾನಗಳಲ್ಲಿ ಪದಯತಿ ಇಲ್ಲದಿದ್ದ ಪಕ್ಷದಲ್ಲಿ, ದೇಶೀಪದ್ಧತಿಯಂತೆ ಪಠಿಸುವುದು ಅನಿವಾರ್ಯವಾಗುತ್ತದೆ. ದೇಶೀಪದ್ಧತಿಯ ಪಠನದಲ್ಲಿ 'ಅತಿಶಯ'ವನ್ನು ಕಂಡ ಕನ್ನಡದ 'ಪೂರ್ವಾಚಾರ್ಯರು', ಅದನ್ನೇ ಕನ್ನಡದಲ್ಲಿ ನೆಲೆಗೊಳಿಸುವುದಕ್ಕಾಗಿ ಕಂದವೃತ್ತಗಳ ಪಾದಾಂತಯತಿಸ್ಥಾನಗಳಲ್ಲಿ ಯತಿವಿಲಂಘನವನ್ನು ರೂಢಿಗೆ ತಂದಾಗ, "ಖಂಡಪ್ರಾಸ"ವು ಅಲ್ಲಿ ತಾನಾಗಿ ಆವಿರ್ಭವಿಸಿತು. ದ್ವಿತೀಯಾಕ್ಷರಪ್ರಾಸವು ಕನ್ನಡದಲ್ಲಿ ಅನಾದಿಕಾಲದಿಂದಲೇ ಇದ್ದ ಒಂದು ಪದ್ಯಲಕ್ಷಣ; ಕವಿರಾಜಮಾರ್ಗದಲ್ಲಿ ಕೀರ್ತಿಸಲ್ಪಟ್ಟ "ಪೂರ್ವಾಚಾರ್ಯರು" ಅದನ್ನು ನಿರ್ಮಿಸಿದ್ದಲ್ಲ; ಕವಿರಾಜಮಾರ್ಗಕಾರನು ಹಾಗೆ ಹೇಳಿಯೂ ಇಲ್ಲ. ಅದು ಪಾದಾಂತಯತಿಭಂಗಪೂರ್ವಕವಾದೊಡನೆ 'ಖಂಡಪ್ರಾಸ'ವೆಂದಾಗುತ್ತದೆ. ಮತ್ತು ಖಂಡಪ್ರಾಸಕ್ಕಾಗಿ "ಪೂರ್ವಾಚಾರ್ಯರು" ಪಾದಾಂತಗಳಲ್ಲಿ ಯತಿಭಂಗ ಮಾಡಿದ್ದೂ ಅಲ್ಲ. ದೇಶೀಪದ್ಧತಿಯ ಪಠನಕ್ಕೆ ಸ್ಥಿರತೆಯನ್ನು ಒದಗಿಸುವುದಕ್ಕಾಗಿ ಅವರು (ಕಂದವೃತ್ತಗಳಲ್ಲಿ) ಪಾದಾಂತಯತಿಭಂಗವನ್ನು ರೂಢಿಗೆ ತಂದರು; ತತ್ಫಲವಾಗಿ, ಅಂತಹ ಸ್ಥಾನಗಳ ದ್ವಿತೀಯಾಕ್ಷರಪ್ರಾಸವು 'ಖಂಡಪ್ರಾಸ'ವೆಂಬ ಹೆಸರನ್ನು ಪಡೆಯಿತು; ಆದದ್ದು ಇಷ್ಟೇ.

[ಆದರೆ, ದ್ವಿತೀಯಾಕ್ಷರಪ್ರಾಸವು ಅನುಲ್ಲಂಘನೀಯವಾದ ನಿಯಮವಾಗಿರುವಲ್ಲಿ ಪಾದಾಂತಯತಿಭಂಗವೂ ಖಂಡಪ್ರಾಸವೂ ಪರಸ್ಪರ ಅವಿನಾಭಾವಿಗಳಾಗುವುದರಿಂದ, ಆಗ 'ಖಂಡಪ್ರಾಸ'ವೆಂದರೂ ಪಾದಾಂತಯತಿಭಂಗವೆಂದರೂ, ವ್ಯಾವಹಾರಿಕವಾಗಿ (ತಾತ್ತ್ವಿಕವಾಗಿ ಅಲ್ಲ) ಒಂದೇ ಅರ್ಥವನ್ನು ಪ್ರಕಟಿಸುವ ಪದಗಳಾಗಿ ಪರಿಣಮಿಸುತ್ತವೆಂಬುದನ್ನೂ ಇಲ್ಲಿ ಮನಗಾಣಬಹುದಾಗಿದೆ.]

ಪಾದಾಂತಗಳಲ್ಲಿ ವಿರಮಿಸದೆ ಪಠಿಸುವುದರಲ್ಲಿ (ಹಾಗೂ ಆ ಉದ್ದೇಶದಿಂದ ಪಾದಾಂತಯತಿಭಂಗವನ್ನೆಸಗುವುದರಲ್ಲಿ) ಕಾಣಬಹುದಾದ 'ಅತಿಶಯ'ವೇನೆಂಬುದನ್ನು ಕವಿರಾಜಮಾರ್ಗಕಾರನು ಸೂಕ್ಷ್ಮವಾಗಿ, ಆದರೂ ಸೋದಾಹರಣವಾಗಿ, ತಿಳಿಸಿದ್ದಾನೆ. ಅದು ಹೀಗಿದೆ: (ಕವಿರಾಜಮಾರ್ಗ I–೭೬)

ನಿರತಿಶಯಮಕ್ಕುಮದು ಬಂ – ।
ಧುರಕವಿಜನತಾಪ್ರಯೋಗಸಂಬಂಧನದಿಂ ॥
ಗುರುಜಘನಸ್ತನಭರಮಂ– ।
ಥರಲೀಲಾಲಸವಿಲಾಸಿನೀಚಳಿತಂಬೋಲ್ ॥..॥

[ಈ ಪದ್ಯದ ಪೂರ್ವಾರ್ಧದಲ್ಲಿ ಪ್ರಯುಕ್ತವಾಗಿರುವ 'ಬಂಧುರ' ಶಬ್ದಕ್ಕೆ ಸುಂದರ, ಮನೋಹರ ಎಂದಿಷ್ಟೇ ಅರ್ಥಮಾಡಿದರೆ, ಕವಿಯ ಆಶಯ ಗೊತ್ತಾಗುವಂತಿಲ್ಲ. ಈ ಪದಕ್ಕೆ

ಇಲ್ಲಿ (undulating, wavy - Apte. ಉದಾ: 'ಕುಮಾರಸಂಭವ' ಸರ್ಗ I, ಪದ್ಯ ೪೨. "ಪತನ ಅಭ್ಯುದಯ ಬಂಧುರಪಂಥಾ" – ರವೀಂದ್ರನಾಥ ಠಾಕೂರ್ – 'ಭಾರತಭಾಗ್ಯವಿಧಾತಾ' ಗೀತದ ಮೂರನೇ ಸೂಲು = ಚರಣ stanza.) "ಅಲೆಗಳಂತೆ (ನತೋನ್ನತವಾಗಿ) ಮೃದು-ವಾಗಿ ಚಲಿಸುವ" ಎಂಬುದೇ ಉದ್ದಿಷ್ಟವಾದ ಅರ್ಥವೆಂಬುದು, ಪ್ರಸ್ತುತಕ್ಕೆ ಲಕ್ಷ್ಯವಾಗಿರುವ ಉತ್ತರಾರ್ಧದ ಪದಬಂಧಸ್ವರೂಪದಿಂದಲೂ ಅಲ್ಲಿ ಚಿತ್ರಿತವಾದ ಉಪಮಾನದಿಂದಲೂ ವಿಶದವಾಗುತ್ತದೆ.]

ಕವಿರಾಜಮಾರ್ಗಕಾರನು (ಕಂದವೃತ್ತಗಳಲ್ಲಿ) ಪಾದಾಂತಯತಿಪಕ್ಷಪಾತಿಯೇ ಹೊರತು (ಪಾದಾಂತ)ಯತಿಭಂಗಪಕ್ಷಪಾತಿಯಲ್ಲವೆಂಬುದು – ಉದಾಹೃತ ಪದ್ಯದ ಮುಂದಿನದೇ ಆದ ೭೭ನೆಯ ಪದ್ಯದಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಹೀಗಿದ್ದರೂ – ಅವನು ದೇಶೀ ಪದ್ಧತಿಯನ್ನು ಖಂಡಿಸುವ ಸಾಹಸಕ್ಕೆ ಹೋಗದೆ, ಅದು ಶ್ಲಾಘ್ಯವೆನಿಸಿಕೊಳ್ಳಬೇಕಾದರೆ ಪದ್ಯದ ಪದಬಂಧ ಹೇಗಿರಬೇಕೆಂಬುದನ್ನು ಈ ಮೇಲೆ ಎತ್ತಿ ಬರೆದ ೭೬ನೆಯ ಪದ್ಯದಲ್ಲಿ ನಯವಾಗಿ ಸೂಚಿಸಿ, ಪದ್ಯದ ಉತ್ತರಾರ್ಧವನ್ನು ಅಂತಹ ಪದಬಂಧದ ಉದಾಹರಣವಾಗಿ ರೂಪಿಸಿ-ದ್ದಾನೆ. ಪದಬಂಧವು ಅಲ್ಲಲ್ಲಿ ವಿಚ್ಛಿದ್ರವಾಗುವಂತಿರದೆ – ತರಂಗಪರಂಪರೆಯಂತೆ, ಒಂದಿಷ್ಟು ಒಲೆಯತ್ತಾ ಏಕಪ್ರಕಾರವಾಗಿ ಸಾಗುವ ಮಂದಗಾಮಿನಿಯ ನಡಿಗೆಯಂತೆ ಇದ್ದು – ಉಭಯ-ಪಾದಗಳೂ ಒಂದೇ ಉಸಿರಲ್ಲಿ ಪಠಿಸಲು ತಕ್ಕುದಾಗಿದ್ದಲ್ಲಿ ಮಾತ್ರ ಪಾದಾಂತಯತಿಭಂಗವು ಅತಿಶಯಕಾರಕವಾಗಬಲ್ಲುದೆಂಬ ತನ್ನ ಆಶಯವನ್ನು, ಆ ಪದ್ಯದಲ್ಲಿ ಮಾಡಲಾದ ಪ್ರತಿ-ಪಾದನೆಯಿಂದ ಮಾತ್ರವಲ್ಲ, ಉದಾಹರಣ ಭಾಗದ ಪದಬಂಧಸ್ವರೂಪದಿಂದಲೂ ತಿಳಿಸುವ ಪ್ರಯತ್ನವನ್ನು ಅವನು ಮಾಡಿರುತ್ತಾನೆ.

[ಆದರೆ, ಪೂರ್ವಾಚಾರ್ಯರಿಂದ ಪ್ರವರ್ತಿತವಾಗಿ ಕನ್ನಡದಲ್ಲಿ ರೂಢಮೂಲವಾಗಿದ್ದ (ಕಂದವೃತ್ತಗಳ) ಪಾದಾಂತಯತಿಭಂಗಸಂಪ್ರದಾಯವನ್ನು ಕಿಂಚಿತ್ತಾದರೂ ಸಡಿಲಿಸಲು ಕವಿರಾಜಮಾರ್ಗವು ಸಮರ್ಥವಾಗಲಿಲ್ಲ. ಅದು ಹಾಗೆಯೇ ಮುಂದುವರಿಯುತ್ತಾ ಹೋಯಿತು; ಮತ್ತು ಅದು ಕನ್ನಡಕ್ಕೆ ಅವಶ್ಯವಾದೊಂದು 'ಲಕ್ಷಣ'ವೆಂದೇ ಮಾನ್ಯವಾಗುವಂತಾಯಿತು. ಉಭಯಕವಿತಾವಿಶಾರದರಾಗಿದ್ದ ನಮ್ಮ ಮಹಾಕವಿಗಳ ರಚನೆಗಳು ಈ ಮಾತಿಗೆ ಸಾಕ್ಷ್ಯ-ಗಳಾಗಿವೆ. ಯಾವುದೊಂದು ವೃತ್ತಬಂಧದಲ್ಲಿ ಸಂಸ್ಕೃತರಚನೆಯನ್ನು ಕೈಕೊಂಡಾಗ, ಯತಿ-ನಿಯಮವನ್ನು ಚಾಚೂತಪ್ಪದೆ ಅವರು ಅನುಸರಿಸುತ್ತಿದ್ದರಾದರೂ – ಅದೇ ವೃತ್ತಬಂಧ-ದಲ್ಲೊಂದು ಕನ್ನಡ ರಚನೆಯನ್ನು ಮಾಡುವಾಗ ಪಾದಾಂತದಲ್ಲಿ ಯತಿಭಂಗವನ್ನು ಮಾಡಿಯೇ ಮಾಡುತ್ತಿದ್ದರು. ಉದಾ : ಪಂಪನ ಈ ಎರಡು 'ಪೃಥ್ವೀವೃತ್ತ'ಗಳನ್ನು ನೋಡಿರಿ:

(ಸಂಸ್ಕೃತ)

ಪ್ರಚಂಡಲಯತಾಂಡವ : ಕ್ಷುಭಿತಯಾಶು ಯಸ್ಯಾನಯಾ ।
ಸದಿಗ್ವಳಯಯಾ ಭುವಾ : ಸಗಿರಿಸಾಗರದ್ವೀಪಯಾ ॥
ಕುಲಾಲಕರನಿರ್ಭರ : ಭ್ರಮಿತಚಕ್ರಲೀಲಾಯಿತಂ ।
ಸ ಸರ್ವಜಗತಾಂ ಗುರು : ಗಿರಿಸುತಾಪತಿಃ ಪಾತು ನಃ ॥ . ॥

(ಪಂಪಭಾರತ, IV–೨೭)

(ಕನ್ನಡ)

ಭವಂ ಭವನಗೋತ್ರದಿಂ : ದಜನಜಾಂಡದಿಂ ಭಾನು ಭಾ– ।
ನುವೀಥಿಯಿನಿಳಾತಳಂ : ತಳದಿನೆಯ್ದೆ ಕಿಟ್ಟೆಟ್ಟು ತೂ – ॥

{ಲಯರಹಿತ, ಸೌಂದರ್ಯಾವಹ 'ಗತಿ'ಯ ನಿರ್ಮಾಣ ಸುಲಭವಲ್ಲ}

ಹೀಗೆ, ಯತಿಯ ಗೊಡವೆಯೇ ಇಲ್ಲದೆ, ಕೇವಲ ಗುರುಲಘುಸ್ಥಿರತೆ-ಯುಳ್ಳ ಅಕ್ಷರಸಂಖ್ಯಾನಿಯಮವನ್ನು ಮಾತ್ರ ಆಧರಿಸಿ ವಿಷಮಗತಿಯ ಸಮಪಾದ ವೃತ್ತಗಳನ್ನು ರಚಿಸಬಹುದಾಗಿರುವಾಗ – ಇಂತಹ ಹೊಸ ಹೊಸ ವೃತ್ತಗಳ ನಿರ್ಮಾಣವು ಅತಿಸುಲಭವಾಗಿ ಕೈಗೂಡುವಂತಹದೆಂದು ತೋರಬಹುದು; ಮತ್ತು ಒಂದು ನಿಶ್ಚಿತ ಸಂಖ್ಯೆಯ ಅಕ್ಷರಗಳ ಗದ್ಯಭಾಗವೊಂದನ್ನು ವೃತ್ತದ ಪಾದವಾಗಿ ಸ್ವೀಕರಿಸಿ, ಅದೇ ಗುರುಲಘುವಿನ್ಯಾಸದ ಇತರ ಮೂರು ಪಾದಗಳನ್ನು ಅನುಗೊಳಿಸಿದರೆ ಅದೊಂದು ಸಮವೃತ್ತವಾಗಿ ಬಿಡುತ್ತದೆಂದೂ ತೋರಬಹುದು. ಪೈಂಗಲಸಿದ್ಧಾಂತದಂತೆ ಅದೂ ಒಂದು 'ವೃತ್ತ'ವೆನಿಸಬಹುದಾದರೂ – "ವೃತ್ತ" ಎಂಬುದು ಒಂದು "ಪದ್ಯ"ವೇ ಆಗಬೇಕಾಗಿರುವುದರಿಂದ – ಹಿಂದೆಯೇ ತಿಳಿಸಿರುವಂತೆ, "ಗತಿ" (= ಆಕರ್ಷಕವಾದ ನಡಿಗೆ) ಎಂಬುದು ಇಲ್ಲದಿರುವ ಛಂದೋರಚನೆ "ಪದ್ಯ"ವೆನಿಸಿಕೊಳ್ಳುವುದಿಲ್ಲವಾದುದರಿಂದ – ವ್ಯಾವಹಾರಿಕವಾಗಿ ಆ ರಚನೆ ಒಂದು "ವೃತ್ತ"ವೆನಿಸಿಕೊಳ್ಳಲಾರದು. ವಾಸ್ತವಿಕವಾಗಿ ಹೇಳುವುದಾದರೆ

---

ಳ್ವವಾರ್ಯಭುಜವೀರ್ಯಮಂ : ನೆಱೆಯೆ ತೋರ್ಪಿನಂ ಕುಂಭಸಂ- ।
ಭವಂ ಮರಲೆ ತಾಗಿದಂ : ರಿಪುಕುರಂಗಕಂಠೀರವಂ ॥ . ॥

(ಪಂಪಭಾರತ, XI–೧೩೩)

{ಪದಗರ್ಭ}ಹೀಗೆ ಕನ್ನಡಕಾವ್ಯಗಳಲ್ಲಿ ಗೌರವಿಸಲ್ಪಟ್ಟು ನೆಲೆಗೊಂಡ ಪಾದಾಂತಯತಿಭಂಗ ಸಂಪ್ರದಾಯವು ಪದ್ಯರಚನೆಗಳಿಗೆ ಮಾತ್ರ ಸೀಮಿತವಾಗಿ ಉಳಿಯದೆ, "ಕರ್ಣಾಟಕ ಸಂಗೀತ"ದಲ್ಲಿಯೂ ತನ್ನ ಪ್ರಭಾವವನ್ನು ಬೀರಿರುವುದು ಕಂಡುಬರುತ್ತದೆ. ದಕ್ಷಿಣಭಾರತ-ವನ್ನೆಲ್ಲ ವ್ಯಾಪಿಸಿರುವ ನಮ್ಮ ಸಂಗೀತಸಂಪ್ರದಾಯದಲ್ಲಿ "ಪದಗರ್ಭ" ಎಂಬ ಹೆಸರಲ್ಲಿ ಇಂದೂ ಅದು ರೂಢವಾಗಿಯೇ ಇದೆ. ಕರ್ಣಾಟಕ ಸಂಗೀತದ "ಕೃತಿ"ಗಳಲ್ಲಿ 'ಪದಗರ್ಭ'ವು ಶೋಭಾವಹವಾದ ಒಂದು ಲಕ್ಷಣವಾಗಿ ತಿಳಿಯಲ್ಪಟ್ಟಿರುತ್ತದೆ. ಪದಗರ್ಭವಿಲ್ಲದ ಗೀತರಚನೆ ಪ್ರೌಢವಾದ ಕೃತಿ ಎನಿಸಿಕೊಳ್ಳುವುದಿಲ್ಲ. ತ್ಯಾಗರಾಜಾದಿ ಮಹಾಕೃತಿಕಾರರ ರಚನೆಗಳಲ್ಲಿ ಅಲ್ಲಲ್ಲಿ ಅದನ್ನು ಕಾಣಬಹುದು. ಉದಾ: (ತ್ಯಾಗರಾಜಕೃತಿ, ರಾಗ – ಸಾರಂಗ, ತಾಳ – ಝುಂಪೆ.)

ದೇವಾಧಿದೇವ ಭೂ । ದೇವವರಪಕ್ಷ ರಾ – ।
ಜೀವಾಕ್ಷ ಸಾಧುಜನ । ಜೀವನ ಸನಾತನಾ ॥ . ॥

ಇಲ್ಲಿ 'ರಾಜೀವಾಕ್ಷ' ಎಂಬ ಪದದ "ಗರ್ಭ"(= ಅಂತರಾಳ)ದಲ್ಲಿ ತಾಳದ ಆವರ್ತಗಳು ಸಂಧಿಸಿವೆ. ಆವರ್ತಗಳ 'ಸಂಧಿ'ಯು ಪದದ ಕೊನೆಯಲ್ಲಿರದೆ, ಪದದೊಳಗಿದ್ದರೆ ಅದು "ಪದಗರ್ಭ"ವೆನಿಸಿಕೊಳ್ಳುತ್ತದೆ. 'ಪದಗರ್ಭ'ವೆಂದರೆ – ಛಂದಃಶಾಸ್ತ್ರಪರಿಭಾಷೆಯಲ್ಲಿ ಹೇಳು-ವುದಾದರೆ – ಪಾದಾಂತಯತಿಭಂಗ; ಬೇರೇನೂ ಅಲ್ಲ. ಇದು ಈ ಮೇಲಿನ ವಿವೃತಿಯಿಂದ ಮನವರಿಕೆಯಾಗದಿರದು; ಮತ್ತು ಪದಗರ್ಭಕ್ಕೆ – ಈ ಮೇಲೆ ಕೊಟ್ಟಿರುವ ಉದಾಹರಣದಲ್ಲಿ ಹೇಗೋ ಹಾಗೆ – ದ್ವಿತೀಯಾಕ್ಷರಪ್ರಾಸವು ಅಂಟಿರುವಲ್ಲಿ ಅದು 'ಖಂಡಪ್ರಾಸ'ವೇ ಎಂಬುದೂ ವಿದಿತವಾಗದಿರದು. ಕನ್ನಡದ ಆ ಹಳೆಯ 'ದೇಸಿ'ಯಲ್ಲಿ 'ಪೂರ್ವಾಚಾರ್ಯ'ರಿಗೆ ಕಂಡು ಬಂದ "ಅತಿಶಯ"ವು ದಾಕ್ಷಿಣಾತ್ಯಜನಮನೋಹಾರಿಯಾಗಿದ್ದ ಒಂದು ಛಂದೋಗತಿಲಕ್ಷಣ-ವಾಗಿತ್ತೆಂಬುದಕ್ಕೆ 'ಪದಗರ್ಭ'ವು ಸಾಕ್ಷಿಯಾಗಿ ನಿಂತಿದೆ.]

– ಹೊಸತೊಂದು ವಿಷಮಗತಿವೃತ್ತವನ್ನು ನಿರ್ಮಿಸುವುದಕ್ಕಿಂತ, ಸಮಗತಿಯ (ಎಂದರೆ ಲಯಾನ್ವಿತವಾದ) ವೃತ್ತವೊಂದನ್ನು ಹೊಸತಾಗಿ ನಿರ್ಮಿಸುವುದು ಎಷ್ಟೋ ಸುಲಭ. ಪಿಂಗಲೋತ್ತರಕಾಲದ ಛಂದೋಗ್ರಂಥಗಳ ಅವಲೋಕನದಿಂದ ಗೊತ್ತಾಗುವಂತೆ – ಸಮವೃತ್ತಗಳ ಸಂಖ್ಯೆ ಪಿಂಗಲಸೂತ್ರದಲ್ಲಿ ಉಕ್ತವಾಗಿರುವುದ–ಕ್ಕಿಂತ ಇಮ್ಮಡಿಯೋ ಮುಮ್ಮಡಿಯೋ ಆಗಿ ಬೆಳೆದಿರುವುದಾದರೂ, ಹೊಸತಾಗಿ ತಲೆದೋರಿದ ವಿಷಮಗತಿವೃತ್ತಗಳು ಅವುಗಳೊಳಗೆ ಬೆರಳೆಣಿಕೆಯವೇ ಆಗಿವೆ. (ವಿಷಮಗತಿಯ) ಆ ಹೊಸ ವೃತ್ತಗಳೆನಿಸಿಕೊಂಡವುಗಳಲ್ಲಿಯೂ ಹೆಚ್ಚಿನವು – ಶಾರ್ದೂಲವನ್ನು ಮತ್ತೇಭವಾಗಿ, 'ಸ್ರಗ್ಧರೆ'ಯನ್ನು 'ಮಹಾಸ್ರಗ್ಧರೆ'ಯಾಗಿ, 'ಚಂಪಕ–ಮಾಲೆ'ಯನ್ನು 'ಉತ್ಪಲಮಾಲೆ'ಯಾಗಿ ಮಾರ್ಪಡಿಸಿದ ವಿಧಾನದಿಂದಲೇ – ಎಂದರೆ, "ಧಾಟಿ"ಯಲ್ಲಿ[82] ಸ್ಫುಟವಾಗಿ ವ್ಯಕ್ತವಾಗುವಂತಹ ಭೇದವಿಲ್ಲದೆ, ಒಂದೆ–ರಡು ಅಕ್ಷರಸಂಖ್ಯೆಯ (ಮತ್ತು ಆ ಅಕ್ಷರಗಳ ಗುರುತ್ವ ಲಘುತ್ವಗಳ) ಬದಲಾ–ವಣೆಯಿಂದಲೇ – ಹುಟ್ಟಿಬಂದವುಗಳಾಗಿವೆ. "ಲಯ" ಎಂಬುದು ಸ್ವಾಭಾವಿಕ–ವಾಗಿ, ಅರ್ಥಾತ್ ಇತರ ಪ್ರಯತ್ನ ನಿರಪೇಕ್ಷವಾಗಿ, ಗತಿಸೌಂದರ್ಯವನ್ನೊದ–ಗಿಸಬಲ್ಲ ಸಾಧನ. ಅಕ್ಷರಗತಿಸ್ವರೂಪ ಹೇಗೇ ಇರಲಿ, 'ಲಯ'ವೆಂಬುದೊಂದಿದ್ದರೆ ಗತಿಸೌಂದರ್ಯವು ತಾನಾಗಿ ಅಲ್ಲಿ ತಲೆದೋರುತ್ತದೆ. ಲಯರಹಿತವಾಗಿದ್ದೂ ಸೌಂದರ್ಯಾವಹವಾಗಿರುವ 'ಗತಿ'ಯ ನಿರ್ಮಾಣವು ಅಷ್ಟೇನೂ ಸುಲಭವಲ್ಲ. ಆದುದರಿಂದಲೇ – ಲಯಾನ್ವಿತ 'ವೃತ್ತ'ಗಳ ಸಂಖ್ಯೆ ಬಹಳವಾಗಿ ಬೆಳೆದಿರುವು–ದಾದರೂ – ಲಯರಹಿತವಾದ ಎಂದರೆ ವಿಷಮಗತಿಯ ವೃತ್ತಗಳ ಸಂಖ್ಯೆ (ಪಿಂಗಲೋತ್ತರಕಾಲದಲ್ಲಿ) ಅಷ್ಟೇನೂ ವೃದ್ಧಿಹೊಂದಿಲ್ಲವೆಂಬುದು ಆ ಎಲ್ಲಾ ವೃತ್ತ–ಗಳ ಗತಿಸ್ವರೂಪಗಳನ್ನು ಪರೀಕ್ಷಿಸಿದರೆ ಗೊತ್ತಾಗುತ್ತದೆ. ಪಿಂಗಲಸೂತ್ರಾನುಸಾರ–ವಾಗಿಯೂ, ವಿಷಮಗತಿವೃತ್ತಗಳ ಸಂಖ್ಯೆಯು ಅಲ್ಲಿ ಪ್ರೋಕ್ತವಾಗಿರುವ ಲಯಾನ್ವಿತ ವೃತ್ತಗಳ ಸಂಖ್ಯೆಗಿಂತ ಎಷ್ಟೋ ಕಡಮೆಯಾಗಿರುವುದಕ್ಕೆ, ಎಂದರೆ ಸುಮಾರು ಅವು–ಗಳ ಅರ್ಧದಷ್ಟೂ ಆಗಿಲ್ಲದಿರುವುದಕ್ಕೆ, ಕಾರಣವು ಈ ಮೇಲೆ ಸೂಚಿಸಿದ್ದೇ ಆಗಿದೆ.

{ಲಯರಹಿತ ವೃತ್ತಗಳ ಗತಿಸೌಂದರ್ಯವಿವೇಚನೆ}

ಲಯರಹಿತವಾದ ವೃತ್ತಗಳ ಗತಿಸೌಂದರ್ಯವು ಗುರುಲಘುಸ್ಥಿರವಾದ ಅಕ್ಷರಸಂಖ್ಯಾನಿಯಮಮಾತ್ರದಿಂದ ಉತ್ಪನ್ನವಾಗುವಂತಹದಲ್ಲವೆಂದಾದರೆ, ಆ

---

82. {'ಧಾಟಿ' ಮತ್ತು 'ಛಂದೋಗತಿ'} 'ಧಾಟಿ' ಎಂದರೂ 'ಛಂದೋಗತಿ' ಎಂದರೂ ತಾತ್ತ್ವಿಕವಾಗಿ ಒಂದೇ ಆದರೂ, ಧಾಟಿ ಎಂಬುದು ಛಂದೋಗತಿಯ ಸ್ಥೂಲರೂಪವನ್ನು ಹೇಳುವಾಗ ಮಾತ್ರ ಬಳಕೆಯಲ್ಲಿರುವ ಸಂಜ್ಞೆಯಾಗಿದೆ; ಮತ್ತು ಈ ರೂಢಿ ಉಪಯುಕ್ತವೂ ಆಗಿದೆ. 'ಛಂದೋಗತಿ' ಎಂಬ ಸಂಜ್ಞೆ ಸಂದರ್ಭಾನುಸಾರವಾಗಿ, ಸ್ಥೂಲ ಮತ್ತು ಸೂಕ್ಷ್ಮ (=ಪ್ರತ್ಯವಯವ) ರೂಪಗಳೊಳಗೆ ಯಾವುದೊಂದನ್ನು, ಮತ್ತು ಸಮಗ್ರರೂಪವನ್ನೂ ಹೇಳತಕ್ಕ ಶಬ್ದವಾಗಿದೆ.

ಸೌಂದರ್ಯಕ್ಕೆ ವ್ಯವಸ್ಥಿತವಾದ ಯಾವುದಾದರೊಂದು ಬೇರೆ ಆಧಾರವಿದೆಯೋ? ಅಥವಾ ಅದು – ಯಾವುದೊಂದು ಹೂವಿನ ಇಲ್ಲವೆ ಎಲೆಯ ಆಕೃತಿಯ ಸೌಂದರ್ಯದಂತೆ ಯಾದೃಚ್ಛಿಕವೋ? – ಇದು ಮನನೀಯವಾದ ವಿಷಯವಾಗಿ-ರುವುದಾದರೂ, ಇದನ್ನು ಯಾರೂ ಈವರೆಗೆ ಚಿಂತಿಸಿದ ಹಾಗಿಲ್ಲ. (ಚಿಂತಿಸಿ-ರುವರೆಂದಾದರೆ, ಅದು ನನ್ನ ಅರಿವಿಗೆ ಬಂದಿಲ್ಲ.) ಇದನ್ನು ಕುರಿತು ನಾನು ಮಾಡಿದ ಅಷ್ಟಿಷ್ಟು ವಿಚಾರದ ಫಲವಾಗಿ ನನ್ನ ಅಲ್ಪಮತಿಗೆ ಹೊಳೆದುದನ್ನು ಛಂದೋಭಿಜ್ಞರ ಮುಂದೆ ನಿವೇದಿಸುವ ಪ್ರಯತ್ನವನ್ನಿಲ್ಲಿ ಮಾಡುತ್ತಿದ್ದೇನೆ. ಅದಕ್ಕೆ ಪೂರ್ವಭಾವಿಯಾಗಿ ಒಂದು ನಿವೇದನೆ ಅವಶ್ಯವೆನಿಸುತ್ತದೆ:

ವಿಷಮಗತಿವೃತ್ತಗಳಲ್ಲಿ ಒಂದೊಂದರ ಗತಿಯೂ ಒಂದೊಂದು ವಿಧ-ವಾಗಿರುವುದರಿಂದ, ಅವೆಲ್ಲವುಗಳ ಗತಿಸ್ವರೂಪಪರಾಮರ್ಶವು ಅಲ್ಪಾವಕಾಶದಲ್ಲಿ ಕೈಗೂಡುವಂತಹದಲ್ಲ; ಅಲ್ಪಶ್ರಮದಿಂದ ಸಿದ್ಧಿಸುವಂತಹದೂ ಅಲ್ಲ. ಇಲ್ಲಿ ನಾನು ಯಥಾಶಕ್ತಿಯಾಗಿ ಹಾಗೂ ಯಥಾವಕಾಶವಾಗಿ ಮಾಡುತ್ತಿರುವ ಪ್ರಯತ್ನವು ಕೆಲವೇ ವೃತ್ತಗಳಿಗೆ ಸೀಮಿತವಾಗಿದ್ದು, ಕೇವಲ ದಿಗ್ದರ್ಶನರೂಪವಾಗಿರುತ್ತದೆಂದು ತಿಳಿದುಕೊಳ್ಳಬೇಕಾಗಿ ಅರಿಕೆ.

ಗುರುಲಘುಸ್ಥಿರವಾದ ಎಲ್ಲಾ ಛಂದೋಬಂಧಗಳ ಎಂದರೆ "ವೃತ್ತ"ಗಳ ಗತಿಸೌಂದರ್ಯದ ಮೂಲಾಧಾರವು "ಅಕ್ಷರಗತಿಸ್ವರೂಪ"ವಾಗಿರುವುದಾದರೂ – "ವೃತ್ತ"ಗಳು ಲಯಾನ್ವಿತವಾಗಿರುವಲ್ಲಿ, ಆಪಾತಮನೋಹರವೂ ಆಬಾಲ-ಗೋಪಾಲಸಂವೇದ್ಯವೂ ಆದ 'ಲಯ'ದ ಪ್ರಭುತ್ವಕ್ಕೆ ಅದು ಅಧೀನವಾಗುವು-ದರಿಂದ, (ಹಿಂದೆ ಈ ನಿಬಂಧದಲ್ಲಿ ಸೂಚಿಸಿರುವ ವಿಶಿಷ್ಟಸಂನಿವೇಶಗಳಲ್ಲಿ ಹೊರತು) ಅದರ ಕಾಂತಿ ಮಂದೀಭೂತವಾಗುತ್ತದೆ. (ಅಂತಹ ಸಂದರ್ಭಗಳಲ್ಲಿ ಆ ವೃತ್ತಗಳೂ ಅದೇ 'ಧಾಟಿ'ಯ ಮಾತ್ರಾಬಂಧಗಳೂ ಸಾಮಾನ್ಯಜನಕ್ಕೆ, ಎಂದರೆ ಛಂದೋಭಿಜ್ಞರಲ್ಲದವರಿಗೆ, ಅಭಿನ್ನವೆಂಬಂತೆ ಭಾಸವಾಗುತ್ತವೆ. ಉದಾ: ಮಂದಾ-ನಿಲವೃತ್ತ ಮತ್ತು ಮಂದಾನಿಲರಗಳೆ.) ವೃತ್ತವು ಲಯರಹಿತವಾಗಿರುವಲ್ಲಾದರೆ, ಅಕ್ಷರಗತಿಸ್ವರೂಪವು ನೇರವಾಗಿ ನಮ್ಮನ್ನು ಆಕರ್ಷಿಸುವುದಕ್ಕೆ ಸಮರ್ಥವಾಗುವು-ದರಿಂದ, ಅದು ವಿಷಮಗತಿವೃತ್ತಗಳ ಗತಿಸೌಂದರ್ಯಕ್ಕೆ ಪ್ರಧಾನವಾದ ಹೇತು-ವಾಗುತ್ತದೆ. ಆದರೆ, ಕೇವಲ ಅಕ್ಷರಗತಿಸ್ವರೂಪದಿಂದಲೇ ವಿಷಮಗತಿವೃತ್ತಗಳ ಗತಿಸೌಂದರ್ಯವು ನಿಷ್ಪನ್ನವಾಗುವುದಾಗಿರದೆ, ಆಯಾವೃತ್ತದ ವಿಭಿನ್ನ ಪರಿ-ಮಾಣದ ಛಂದಃಪದಗಳ ನಿವೇಶನಪ್ರಕಾರಗಳೂ ಅವುಗಳ ಅನ್ಯೋನ್ಯ-ಪರಿಮಾಣಗಳೂ ಆ ಸೌಂದರ್ಯದ ಆವಿರ್ಭಾವಕ್ಕೆ ಕಾರಣಗಳಾಗಿರುತ್ತವೆ.

ಗತಿಸೌಂದರ್ಯವನ್ನೊದಗಿಸಬಲ್ಲ ಅಕ್ಷರಗತಿರೂಪಗಳು, ಸ್ಥೂಲವಾಗಿ ಹೇಳುವುದಾದರೆ – ಈ ಮೂರೆನ್ನಬಹುದು; (೧) ಗುರುಬಹುಲವಾದ ವಿಲಂ-ಬಿತಾಕ್ಷರಗತಿ. (೨) ಲಘುಬಹುಲವಾದ ದ್ರುತಾಕ್ಷರಗತಿ, (೩) ಗುರುಲಘುಗಳ (ನಾನಾ ಪ್ರಕಾರದ) ಸಂಮಿಶ್ರಣದಿಂದ ನಿಷ್ಪನ್ನವಾಗುವ ಮಧ್ಯಾಕ್ಷರಗತಿ. (ಶಾರ್ಙ್ಗ-

ದೇವಪ್ರೋಕ್ತವಾದ ಉಳಿದ ಮೂರು ಗತಿಭೇದಗಳು, ಈ ಮೂರು ಗತಿರೂಪಗಳ ಸಂಯೋಗಪ್ರಕಾರಗಳಿಂದಲೇ ನಿಷ್ಪನ್ನವಾಗುವ ಕಾರಣ, ಅವು ಈ ಮೂರಲ್ಲಿಯೇ ಅಂತರ್ಭೂತವಾಗುತ್ತವೆ.) ಇವುಗಳೊಳಗೆ – ಕೇವಲ ವಿಲಂಬಿತಾಕ್ಷರಗತಿಯ ಅಥವಾ ಕೇವಲ ದ್ರುತಾಕ್ಷರಗತಿಯ ವಿಷಮಗತಿವೃತ್ತವಾವುದೂ ನಿರ್ಮಿತವಾಗಿಲ್ಲ. (ಹಾಗೆ ನಿರ್ಮಿತವಾಗುವ ಸಾಧ್ಯತೆಯೂ ಇಲ್ಲ. ಏಕೆಂದರೆ, ಹಾಗೆ ಸಂಯೋ–ಜಿಸಿದಲ್ಲಿ ಲಯೋತ್ಪತ್ತಿಯಾಗದಿರುವುದು ಅಸಂಭವ. ಆದರೆ ಕೇವಲ ಮಧ್ಯಾಕ್ಷರ–ಗತಿಯಿಂದ ವಿಷಮಗತಿವೃತ್ತಗಳು ನಿರ್ಮಿತವಾಗುವುದಕ್ಕೆ ಅಡ್ಡಿಯೇನೂ ಇಲ್ಲ; ಅಂತಹ ವೃತ್ತಗಳು ನಿರ್ಮಿತವಾಗಿಯೂ ಇವೆ.)

ಯಾವ ವಿಷಮಗತಿವೃತ್ತಗಳಲ್ಲಿ ಗತಿಯ ಆಕರ್ಷಕತ್ವವು ಅಧಿಕವಾಗಿ–ರುತ್ತದೋ ಅಂಥವುಗಳಲ್ಲಿ ಅಕ್ಷರಗತಿಯ ಒಂದೇ ರೂಪವಿರುವುದಿಲ್ಲ; ಅವುಗಳ ಛಂದಃಪದಗಳು ಬೇರೆ ಬೇರೆ ಅಕ್ಷರಗತಿಯವುಗಳಾಗಿರುತ್ತವೆ. ಈ ತಥ್ಯದ ಮನವರಿಕೆಗಾಗಿ ಅಂತಹ ಒಂದೆರಡು ವೃತ್ತಗಳನ್ನು ಪರೀಕ್ಷಿಸೋಣ:

(೧) ಮಂದಾಕ್ರಾಂತಾವೃತ್ತ

– – – – U U U U U – – U – – U – –
ವಿದ್ಯುತ್ವಂತಂ : ಚಪಲವನಿತಾಃ : ಸೇಂದ್ರಚಾಪಂ ಸಚಿತ್ರಾಃ ।
ಸಂಗೀತಾಯ : ಪ್ರಹತಮುರಜಾಃ : ಸ್ನಿಗ್ಧಗಂಭೀರಘೋಷಂ ॥
ಅಂತಸ್ತೋಯಂ : ಮಣಿಮಯಭುವ : ಸ್ತುಂಗಮಭ್ರಂಲಿಹಾಗ್ರಾಃ ।
ಪ್ರಾಸಾದಾಸ್ತ್ವಾಂ : ತುಲಯಿತುಮಲಂ : ಯತ್ರ ತೈಸ್ತೈರ್ವಿಶೇಷೈಃ ॥ . ॥

(ಕಾಲಿದಾಸ, ಮೇಘದೂತ, ೨-೧)

(೨) 'ಹರಿಣೀಪ್ಲುತ' ಅಥವಾ 'ಹರಿಣೀವೃತ್ತ'

U U U U U – – – – – U – U U – U –
ಅಭಿಜನವತೋ : ಭರ್ತುಃ ಶ್ಲಾಘ್ಯೇ : ಸ್ಥಿತಾ ಗೃಹಿಣೀಪದೇ ।
ವಿಭವಗುರುಭಿಃ : ಕೃತ್ಯೈಸ್ತಸ್ಯ : ಪ್ರತಿಕ್ಷಣಮಾಕುಲಾ ॥
ತನಯಮಚಿರಾತ್ : ಪ್ರಾಚೀವಾರ್ಕಂ : ಪ್ರಸೂಯ ಚ ಪಾವನಂ ।
ಮಮ ವಿರಹಜಾಂ : ನ ತ್ವಂ ವತ್ಸೇ : ಶುಚಂ ಗಣಯಿಷ್ಯಸಿ ॥ . ॥

(ಕಾಲಿದಾಸ, ಶಾಕುಂತಲ, ಅಂಕ IV)

ಇಲ್ಲಿ ಉದಾಹೃತವಾಗಿರುವ ವೃತ್ತಗಳ ಗತಿಯ ಆಕರ್ಷಕತ್ವಕ್ಕೆ ಸಮ–ರ್ಥನೆಯೇನೂ ಬೇಡ; ಅದು ಸರ್ವಸಂವೇದ್ಯ. ಇವುಗಳೊಳಗೆ ಮೊದಲನೆಯ–ದಾದ 'ಮಂದಾಕ್ರಾಂತಾ' ವೃತ್ತದ ಪಾದಗಳಲ್ಲಿ ಛಂದಃಪದಗಳು ಮೂರು ಮೂರಾಗಿದ್ದು, ಅನುಕ್ರಮವಾಗಿ ಅವು ವಿಲಂಬಿತ, ದ್ರುತ, ಮಧ್ಯ ಎಂಬ ಅಕ್ಷರ ಗತಿಯವುಗಳಾಗಿರುವುದನ್ನು ಕಾಣಬಹುದು. ಎರಡನೆಯದು 'ಹರಿಣೀಪ್ಲುತ' ವೃತ್ತದ ಪಾದಗಳಲ್ಲಿಯೂ ಮೂರು ಮೂರು ಛಂದಃಪದಗಳಿದ್ದು, ಅವು ಅನುಕ್ರಮವಾಗಿ ದ್ರುತ, ವಿಲಂಬಿತ, ಮಧ್ಯ ಎಂಬೀ ಅಕ್ಷರಗತಿಯವುಗಳಾಗಿರು–ವುದನ್ನು ನೋಡಬಹುದು. ಇದುವೇ – ಎಂದರೆ, ದ್ರುತ ಮಧ್ಯ ವಿಲಂಬಿತವೆಂಬ

ಮೂರೂ ಗತಿಭೇದಗಳು ಈ ವೃತ್ತಗಳಲ್ಲಿ ಸಮಾವಿಷ್ಟವಾಗಿರುವುದೇ – ಇವುಗಳಲ್ಲಿ ಕಂಡುಬರುವ ಅಸಾಧಾರಣವಾದ ಗತಿಸೌಂದರ್ಯಕ್ಕೆ ಮುಖ್ಯಕಾರಣವೆಂಬು-ದೀಗ ಸುವ್ಯಕ್ತ. [ಅಭಿನವಗುಪ್ತನನ್ನು ವಿಶೇಷವಾಗಿ ಆಕರ್ಷಿಸಿದ ವೃತ್ತವೆಂದು ಹೇಳಲಾದ 'ಸ್ರಗ್ಧರೆ'ಯಲ್ಲಿಯೂ – ಈ ಮೇಲೆ ಉದಾಹೃತವಾದ ವೃತ್ತಗಳಲ್ಲಿ ಹೇಗೋ ಹಾಗೆ – ತ್ರಿವಿಧಗತಿಗಳು ಸಮಾವಿಷ್ಟವಾಗಿರುವುದೂ, ಅತಿಮನೋ-ಹರವಾದ ವಿಷಮಗತಿವೃತ್ತಗಳೊಳಗೆ ಒಂದಾಗಿದ್ದು ಸೌಂದರ್ಯಲಹರಿ, ಗಂಗಾ ಲಹರಿ ಮುಂತಾದ ಸ್ತೋತ್ರಕಾವ್ಯರತ್ನಗಳಲ್ಲಿ ಪ್ರಯುಕ್ತವಾಗಿ 'ಲಹರಿ' ಎಂಬ ನಾಮಾಂತರವನ್ನೂ (ಕೆಲವರಿಂದ) ಪಡೆದಿರುವ 'ಶಿಖರಿಣೀ' ವೃತ್ತದಲ್ಲಿ ತ್ರಿವಿಧ-ಗತಿಗಳ ಕೂಟವಿರುವುದೂ ಈ ಮೇಲೆ ಹೇಳಿರುವ ಮಾತನ್ನೇ ಸಮರ್ಥಿಸುತ್ತವೆ.]

ಇಲ್ಲಿ ಉದಾಹರಿಸಲ್ಪಟ್ಟಿರುವ ಎರಡೂ ವೃತ್ತಗಳ ಅಕ್ಷರಸಂಖ್ಯೆಗಳಲ್ಲಿ ಮಾತ್ರವಲ್ಲ, ಪಾದದ ಮೊದಲಿನ ಎರಡು ಛಂದಃಪದಗಳಲ್ಲಿಯೂ ಪೂರ್ಣ ಸಾಮ್ಯವಿದೆ; ಮತ್ತು ಮೂರನೆಯ ಛಂದಃಪದವು ಎರಡೂ ವೃತ್ತಗಳಲ್ಲಿ ಸಮಾನ-ವಾದ ಅಕ್ಷರಗತಿ (ಮಧ್ಯಾಕ್ಷರಗತಿ)ಯದಾಗಿದೆ. ಹೀಗಿದ್ದರೂ ಈ ಎರಡು ವೃತ್ತಗಳ 'ಧಾಟಿ'ಗಳಲ್ಲಿ ಸಾಮ್ಯದ ಲೇಶವೂ ಕಾಣುವುದಿಲ್ಲ. ಇದರ ಕಾರಣವನ್ನು ಹುಡುಕ-ತೊಡಗಿದಾಗ, ಛಂದಃಪದಗಳ ನಿವೇಶನಪ್ರಕಾರಕ್ಕೆ (ವಿಷಮಗತಿ) ವೃತ್ತಗಳ ಗತಿಯ ಮೇಲಿರುವ ಪ್ರಭಾವವು ವ್ಯಕ್ತವಾಗುತ್ತದೆ. ಮೊದಲಿನದಾದ ಮಂದಾ-ಕ್ರಾಂತಾ ವೃತ್ತದ ಆದಿಯ ಎರಡು ಛಂದಃಪದಗಳು ಅನುಕ್ರಮವಾಗಿ ವಿಲಂಬಿತ, ದ್ರುತ – ಹೀಗಿವೆ; ಹರಿಣೀಪ್ಲುತದವಾದರೆ ದ್ರುತ, ವಿಲಂಬಿತ – ಇಂತಿವೆ. ಮತ್ತು ಎರಡೂ ವೃತ್ತಗಳಲ್ಲಿ ಪಾದದ ಮೂರನೆಯ ಛಂದಃಪದವು ಮಧ್ಯಾಕ್ಷರಗತಿಯದೇ ಆಗಿದ್ದರೂ, ಆ ಛಂದಃಪದಗಳ ಅಕ್ಷರಸಂಖ್ಯೆಯೂ ಸಮಾನವೇ ಆಗಿದ್ದರೂ, ಅವುಗಳ ಛಂದೋವಿನ್ಯಾಸರೂಪವೂ ಪರಿಮಾಣವೂ (= ಉಚ್ಚಾರಕಾಲ = ಮಾತ್ರಾಸಂಖ್ಯೆ) ಭಿನ್ನವಾಗಿವೆ. ಈ ಅಷ್ಟಿಷ್ಟು ವ್ಯತ್ಯಾಸಗಳ ಪರಿಣಾಮವಾಗಿಯೇ – ಮೊದಲನೆಯದಾದ ಮಂದಾಕ್ರಾಂತಾವೃತ್ತವು ಮಂದಗತಿಯಲ್ಲಿ ಕಲಕಲನೆ ಹರಿಯುತ್ತಿರುವ ತೊರೆಯಂತೆಯೂ, ಎರಡನೆಯದಾದ ಹರಿಣೀಪ್ಲುತವು ನೆಗೆನೆಗೆದು ಬಿದ್ದೋಡುವ ಗಿರಿನಿರ್ಝರದಂತೆಯೂ ಭಾಸವಾಗುತ್ತದೆ. ಇದನ್ನು ಪರಿಭಾವಿಸಿದಾಗ ವಿಷಮಗತಿವೃತ್ತಗಳ ಗತಿಸೌಂದರ್ಯನಿಷ್ಪತ್ತಿಯಲ್ಲಿ – ಛಂದಃ ಪದಗಳ ನಿವೇಶನಪ್ರಕಾರಗಳಿಗೆ ಮಾತ್ರವಲ್ಲ, ಪರಸ್ಪರ ಸಂನಿಕೃಷ್ಟ ಛಂದಃಪದಗಳ ಸ್ವಭಾವ ಹಾಗೂ ಅನ್ಯೋನ್ಯ ಪರಿಮಾಣಗಳಿಗೆ ಸಹ ಇರುವ ಮಹತ್ತ್ವವು ಮನವರಿಕೆಯಾಗುತ್ತದೆ.[83]

---

83. {ಛಂದಃಪದಗಳ ಸ್ವಭಾವಭಿನ್ನತೆಯಿಂದ ವೃತ್ತಗಳ ಗತಿಯ ಮೇಲೆ ಪರಿಣಾಮ} ದ್ರುತ ಮತ್ತು ವಿಲಂಬಿತ ಗತಿಯ ಛಂದಃಪದಗಳ ಆನುಪೂರ್ವಿಯ ವ್ಯತ್ಯಾಸದಿಂದಲೂ, ಮಧ್ಯಾ-ಕ್ಷರಗತಿಯ ಛಂದಃಪದಗಳ ಸ್ವಭಾವ ಹಾಗೂ ಪರಿಮಾಣಗಳ ಭಿನ್ನತೆಯಿಂದಲೂ ಈಯೆರಡು

ಆದರೆ ಮನೋಹರವಾದ ವಿಷಮಗತಿವೃತ್ತಗಳು ನಿರ್ಮಿತವಾಗುವುದಕ್ಕೆ ವಿಭಿನ್ನ ಅಕ್ಷರಗತಿಯ ಛಂದಃಪದಗಳ ಅನ್ಯೋನ್ಯಪರಿಮಾಣಗಳು ಎಷ್ಟೆಷ್ಟು ಇರಬೇಕು, ಅವುಗಳ ನಿವೇಶನಪ್ರಕಾರಗಳು ಹೇಗೆ ಹೇಗೆ ಇರಬೇಕು, ಅವುಗಳ ಗುರುಲಘುವಿನ್ಯಾಸ ಹೇಗೆ ಹೇಗೆ ಇದ್ದರೆ ಮಾತ್ರ ಅವುಗಳೊಳಗೆ ಮೈತ್ರಿ (harmony)ಯುಂಟಾಗಿ ಗತಿಸೌಂದರ್ಯವು ಸಿದ್ಧಿಸಬಲ್ಲುದು ಎಂಬುದೆಲ್ಲ ವಿಧಿವಿಧಾನಗಳಿಗೆ ಸಿಲುಕುವಂತಹ ವಿಷಯಗಳಲ್ಲ, ಅವೆಲ್ಲ ಪ್ರಬುದ್ಧವಾದ ಛಂದಃಪ್ರತಿಭೆಗೆ ಮಾತ್ರ ಮೆಯ್ದೋರಬಲ್ಲ ಛಂದಃಕಲಾತಥ್ಯಗಳು.

{ಮಧ್ಯಾಕ್ಷರಗತಿಯ ವಿಷಮಗತಿವೃತ್ತಗಳ ಗತಿಸೌಂದರ್ಯ}

ಬೇರೆಬೇರೆ ಅಕ್ಷರಗತಿಯ ಛಂದಃಪದಗಳಿಂದ ಒಡಗೂಡಿರುವ ಒಂದೆ-ರಡು ವಿಷಮಗತಿವೃತ್ತಗಳ ರೂಪಪರಾಮರ್ಶವನ್ನು ಅಷ್ಟಿಷ್ಟು ಮಾಡಿದೆವು. ಇನ್ನು ಕೇವಲ ಒಂದೇ ಬಗೆಯ ಅಕ್ಷರಗತಿಯ ಛಂದಃಪದಗಳುಳ್ಳ ವಿಷಮಗತಿ-ವೃತ್ತಗಳನ್ನು ಅವಲೋಕಿಸೋಣ.

ಹಿಂದೆಯೇ ಸೂಚಿಸಿರುವಂತೆ – ಕೇವಲ ದ್ರುತಾಕ್ಷರಗತಿಯ ಅಥವಾ ಕೇವಲ ವಿಲಂಬಿತಾಕ್ಷರಗತಿಯ ವಿಷಮಗತಿವೃತ್ತಗಳು ಇರುವಂತಿಲ್ಲ. ಕೇವಲ ಮಧ್ಯಾಕ್ಷರಗತಿಯವಾದರೆ, ಇವೆ. ಉದಾ:

ಯಂ ಬ್ರಹ್ಮಾ ವರುಣೇಂದ್ರರುದ್ರಮರುತಃ : ಸ್ತುನ್ವಂತಿ ದಿವ್ಯೈಃ ಸ್ತವೈಃ ।

ವೇದೈಃ ಸಾಂಗಪದಕ್ರಮೋಪನಿಷದ್ಯೈಃ : ಗಾಯಂತಿ ಯಂ ಸಾಮಗಾಃ ॥

---

ವೃತ್ತಗಳ ಗತಿಯಲ್ಲಿ ಉಂಟಾಗಿರುವ ಪರಿಣಾಮವು ಮನನೀಯವಾಗಿದೆ. ಮಂದಾಕ್ರಾಂತಾ ವೃತ್ತವು ವಿಲಂಬಿತಗತಿಯಲ್ಲಿ ಆರಂಭಿಸಿ ಮತ್ತೆ ದ್ರುತಗತಿಯನ್ನು ಪಡೆಯುವುದರಿಂದ, ಅದರ ಗತಿ ಅವರೋಹಣರೂಪವಾಗಿ ಭಾಸವಾಗುತ್ತದೆ. ಮತ್ತು ಅದರ ಮೂರನೆಯ (ಮಧ್ಯಾಕ್ಷರ ಗತಿಯ) ಛಂದಃಪದವು ಲಘೂತ್ತರವಾದ ಗುರುವಿನಿಂದ (=ಗಾಲ) ಆರಂಭವಾಗುವುದರಿಂದ, ಅಲ್ಲಿಯೂ ಗತಿಗೆ ಅವರೋಹಿತ್ವವು ಪ್ರಾಪ್ತವಾಗುತ್ತದೆ. ಹರಿಣೀಪ್ಲುತವಾದರೆ – ದ್ರುತಗತಿಯಲ್ಲಿ ಆರಂಭವಾಗಿ ಮತ್ತೆ ವಿಲಂಬಿತಗತಿಯನ್ನವಲಂಬಿಸುವ ಕಾರಣ, ಅದರ ಗತಿ ರಭಸದ ಆರೋಹಣದಂತೆ ಭಾಸವಾಗುತ್ತದೆ. ಅಲ್ಲದೆ, ಅದರ ಮೂರನೆಯ (ಮಧ್ಯಾಕ್ಷರಗತಿಯ) ಛಂದಃಪದವು ಗುರೂತ್ತರವಾದ ಲಘುವಿನಿಂದ (= ಲಗಂ) ತೊಡಗುವುದರಿಂದಾಗಿ, ಗತಿಗೆ ಅಲ್ಲಿಯೂ ಆರೋಹಿತ್ವವು ಬರುತ್ತದೆ. ಈ ಎರಡು ವೃತ್ತಗಳ ಛಂದಃಪದಗಳಲ್ಲಿ ಸಾಕಷ್ಟು ಸಾಮ್ಯವಿರುವುದಾದರೂ – ಉಪರ್ಯುಕ್ತ ಕಾರಣಗಳಿಂದಾಗಿ ಇವೆರಡರ ಧಾಟಿಗಳು ಸಂಪೂರ್ಣ ಭಿನ್ನವಾಗಿವೆ; ಮತ್ತು ಈ ವೃತ್ತಗಳಿಂದ ಪೋಷ್ಯವಾಗಬಲ್ಲ ರಸಭಾವಗಳೂ ಬೇರೆಬೇರಾಗಿವೆ. (ಅವರೋಹಣಗತಿಯದಾದ ಮಂದಾಕ್ರಾಂತವೃತ್ತವೂ ಅನಿರ್ವಚನೀಯ-ವಾದೊಂದು ಖಿನ್ನತೆಯನ್ನು ವ್ಯಂಜಿಸುವಂತಿದ್ದು – ವಿಪ್ರಲಂಭಶೃಂಗಾರ, ಕರುಣ, ಹಾಗೂ ಶಾಂತರಸಗಳಿಗೆ ತಕ್ಕುದಾಗಿದೆ. ಸರಭಸಾರೋಹಣಗತಿಯ ಹರಿಣೀಪ್ಲುತವು ಉತ್ಸಾಹವ್ಯಂಜಕ-ವಾಗಿದ್ದು, ಹರ್ಷಸಂದರ್ಭಗಳಿಗೂ ವೀರಾದ್ಭುತರಸಗಳಿಗೂ ಉಚಿತವಾದ ವೃತ್ತವಾಗಿದೆ.)

ಧ್ಯಾನಾವಸ್ಥಿತತದ್ಗತೇನ ಮನಸಾ : ಪಶ್ಯಂತಿ ಯಂ ಯೋಗಿನಃ ।
ಯಸ್ಯಾಂತಂ ನ ವಿದುಃ ಸುರಾಸುರಗಣಾಃ : ದೇವಾಯ ತಸ್ಮೈ ನಮಃ ॥ . ॥
(ಶಾರ್ದೂಲವಿಕ್ರೀಡಿತವೃತ್ತ – ಗೀತಾಧ್ಯಾನ)

ಈ ವೃತ್ತದ ಪಾದಗಳಲ್ಲಿ ಎರಡೆರಡು ಛಂದಃಪದಗಳಿದ್ದು, ಅವೆರಡೂ ಮಧ್ಯಾಕ್ಷರಗತಿಯವಾಗಿವೆ. ಇದರ ಪರಿಣಾಮವಾಗಿ ಈ ವೃತ್ತವು 'ದುರ್ಬಲ-ಯತಿಸ್ಥಾನಿ'ಯಾಗಿರುತ್ತದೆ; ಮತ್ತು ಇದರ ಗತಿ – ಎದ್ದೋಡುವ ಹೆದ್ದೆರೆಗಳಿಲ್ಲದೆ, ಸಮಭೂಮಿಯಲ್ಲಿ ಹರಿಯುವ ವಿಶಾಲವಾದ ಹೊಳೆಯ ನಿರರ್ಗಳವೂ ಏಕ-ಪ್ರಕಾರವೂ ಆದ ಗಮನದಂತೆ ಭಾಸವಾಗುತ್ತದೆ. ಸ್ರಗ್ಧರಾ, ಮಂದಾಕ್ರಾಂತಾ, ಶಿಖರಿಣೀ ಇತ್ಯಾದಿಗಳಂತೆ ಸಕೃತ್ ಶ್ರವಣದಲ್ಲಿಯೇ ಆಕರ್ಷಕವೆನಿಸುವ ಗತಿ-ವಿಲಾಸವು ಇದರಲ್ಲಿಲ್ಲ. ಆದರೆ ಸಂಸ್ಕೃತಸಾಹಿತ್ಯದಲ್ಲಿ (ದೊಡ್ಡ ವೃತ್ತಗಳೊಳಗೆ) ಇದರಷ್ಟು ಹೆಚ್ಚಾಗಿ ಬಳಕೆಯಾಗಿರುವ ವೃತ್ತ ಬೇರಾವುದೂ ಇಲ್ಲ. ಸಂಸ್ಕೃತ-ವಾಙ್ಮಯದ ಹೆಚ್ಚಿನ ಭಾಗವನ್ನು ತನ್ನದಾಗಿಸಿಕೊಂಡಿರುವ ಅನುಷ್ಟುಪ್ ಶ್ಲೋಕ-ವನ್ನು ಬಿಟ್ಟರೆ – ಲೌಕಿಕ ಸಂಸ್ಕೃತ ಭಾಷೆಯ (ಅಕೃತಕವೂ ಸರಳವೂ ಆದ) ಪದಬಂಧದೊಡನೆ ನಿರಾಯಾಸವಾಗಿ ಹಜ್ಜೆಯಿಡುವುದರಲ್ಲಿ ಶಾರ್ದೂಲವಿಕ್ರೀಡಿತ-ವನ್ನು ಮೀರಿಸಬಲ್ಲ ಛಂದೋಬಂಧವು ಪ್ರಾಯಶಃ ಬೇರೊಂದಿಲ್ಲವೆನ್ನಬಹುದು.

ಭಾಷಾಸ್ವಭಾವವನ್ನನುಲಕ್ಷಿಸಿ ನೋಡಿದರೆ – ಮಧ್ಯಾಕ್ಷರಗತಿಯೇ ಸಂಸ್ಕೃತದ (ಹಾಗೂ ಕನ್ನಡದ) ಸಹಜವೂ ಸಾಮಾನ್ಯವೂ ಆದ ಅಕ್ಷರಗತಿಯಾಗಿ ಕಂಡುಬಾರದಿರದು. ಈ ದೃಷ್ಟಿಯಿಂದ ಹೇಳುವುದಾದರೆ – ಗುರುಮಯವಾದ ವಿಲಂಬಿತಾಕ್ಷರಗತಿಯ ಪದರಚನೆಯಲ್ಲಾಗಲಿ, ಲಘುಮಯವಾದ ದ್ರುತಾಕ್ಷರ ಗತಿಯ ಪದರಚನೆಯಲ್ಲಾಗಲಿ ಅಷ್ಟಿಷ್ಟು 'ಅಸಹಜತೆ' (ಅರ್ಥಾತ್ ಅಸಾಮಾನ್ಯತೆ) ಇದ್ದೇ ಇದೆ ಎನ್ನಬೇಕಾಗುತ್ತದೆ. ಗತಿಸ್ವಭಾವಜನಿತವಾದ ಈ 'ಅಸಾಮಾನ್ಯತೆ'-ಯಿಂದಾಗಿ ಆ ರಚನೆಗಳಲ್ಲಿ ಆಕರ್ಷಕತ್ವವು ಅಧಿಕವಾಗುವುದಾದರೂ, ಆ ಗತಿ-ಗಳು ಭಾಷೆಯ ಸಹಜವೂ ಸಾಧಾರಣವೂ ಆದ ಅಕ್ಷರಗತಿಗಳಲ್ಲವಾದುದರಿಂದ, ಅವುಗಳಿಗೆ ಅನಲ್ಪಾವಕಾಶವಿರುವ ಸ್ರಗ್ಧರೆಯಂತಹ ಬೃಹತ್ ವೃತ್ತಬಂಧಗಳಲ್ಲಿ – ಸಮಾಸನಿಬಿಡವಲ್ಲದ ಅಥವಾ ದೂರಾನ್ವಯವಿಲ್ಲದ ಸರಳವೂ ಲಲಿತವೂ ಆದ ರಚನೆಗಳು (ಅಸಾಧಾರಣವಾದ ವಚಃಸೌಭಾಗ್ಯಸಂಪನ್ನರ ಕೃತಿಗಳಲ್ಲಿ ಹೊರತು) ಕಂಡುಬರುವುದು ಕಡಮೆ. ಭಾಷೆಯ ಸಹಜವಾದ ಅಕ್ಷರಗತಿಯೂ ವೃತ್ತದ ಛಂದೋಗತಿಯೂ ಸಜಾತಿಯವಾದರೆ, ಛಂದೋಗತಿಗೂ ಪದಗತಿಗೂ ಹೃದಯಂಗಮವಾದೊಂದು 'ಸಾಮರಸ್ಯ'(harmony)ವನ್ನು ನಿರಾಯಾಸವಾಗಿ ಸಾಧಿಸಲು ರಚನಾಕಾರನು ಶಕ್ತನಾಗುತ್ತಾನೆ. ಹಾಗೆ ಸಾಧಿತವಾಗುವ ಗತಿಸಾಮ-ರಸ್ಯದ ಸೊಬಗನ್ನು ಶಾರ್ದೂಲವಿಕ್ರೀಡಿತದ ಈ ಕೆಳಗಿನ ಉದಾಹರಣಗಳಲ್ಲಿ ಕಣ್ದುಂಬಿ ನೋಡಬಹುದು:

(೧) ತಾಂ ಬಾಲಾಂ ತ್ರಿಪುರೀಂ ಶಿವೇನ ಸಹಿತಾಂ : ಧ್ಯಾಯಾಮಿ ಮೂಕಾಂಬಿಕಾಂ ॥ . ॥

(೨) ಆತ್ಮಾ ತ್ವಂ ಗಿರಿಜಾ ಮತಿಃ ಪರಿಕರಾಃ : ಪ್ರಾಣಾಃ ಶರೀರಂ ಗೃಹಂ ।
ಪೂಜಾ ತೇ ವಿಷಯೋಪಭೋಗರಚನಾ : ನಿದ್ರಾ ಸಮಾಧಿಸ್ಥಿತಿಃ ॥
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ : ಸ್ತೋತ್ರಾಣಿ ಸರ್ವಾ ಗಿರಃ ।
ಯದ್ಯತ್ ಕರ್ಮ ಕರೋಮಿ ತತ್ತದಖಿಲಂ : ಶಂಭೋ ತವಾರಾಧನಂ ॥ . ॥

(೩) ಕಸ್ತೂರೀತಿಲಕಂ ಲಲಾಟಫಲಕೇ : ವಕ್ಷಃಸ್ಥಲೇ ಕೌಸ್ತುಭಂ ।
ನಾಸಾಗ್ರೇ ನವಮೌಕ್ತಿಕಂ ಕರತಲೇ : ವೇಣುಂ ಕರೇ ಕಂಕಣಂ ॥
ಸರ್ವಾಂಗೇ ಹರಿಚಂದನಂ ಚ ಕಲಯನ್ : ಕಂಠೇ ಚ ಮುಕ್ತಾವಲಿಂ ।
ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ : ಗೋಪಾಲಚೂಡಾಮಣಿಃ ॥ . ॥

(೪) ನೀನಾರೆಂಬರಿವಾಗೆ ಸಾಕು ಸಿರಿಯೇಂ : ದಾರಿದ್ರ್ಯಮೇಂ ಗ್ರಾಮಮೇಂ ।
ಕಾನೇಂ ಪಾಲುಣಿಸೇಂ ಕದನ್ನದುಣಿಸೇಂ : ನಿರ್ಬಂಧಮೇಂ ರಾಜ್ಯಮೇಂ ।
ಈ ನಾನಾವಿಧಿಯೆಲ್ಲವುಂ ಕನಸಿವಂ : ಕೊಂಡೇನೊ ನಿನ್ನೆನ್ನ ಸಂ- ।
ಧಾನಂ ನಿತ್ಯಸುಖೈಕಮಿನ್ನುೞಿದುವೇಂ : ರತ್ನಾಕರಾಧೀಶ್ವರಾ ॥ . ॥

[ಉದಾಹೃತ ಪದ್ಯದೊಳಗೆ (೪)ನೆಯದರ ತೃತೀಯ ಪಾದದಲ್ಲಿ (ಕನ್ನಡ ಸಂಪ್ರದಾಯದ) ಪಾದಾಂತಯತಿಭಂಗವಿಲ್ಲದಿರುತ್ತಿದ್ದರೆ (ಮೊದಲಿನ ಮೂರರಲ್ಲಿ ಹೇಗೋ ಹಾಗೆ) ಗತಿಸಾಮರಸ್ಯವು ಈ ಪದ್ಯದಲ್ಲಿಯೂ ಪರಿಪೂರ್ಣವಾಗುತ್ತಿತ್ತು.]

{ಭಾಷೆಯ ಅಕ್ಷರಗತಿಸ್ವರೂಪ ಮತ್ತು ಛಂದೋಬಂಧಗಳ ಆಯ್ಕೆ}

ಅಕ್ಷರಗತಿಯಲ್ಲಿ ದ್ರುತ ಮಧ್ಯ ವಿಲಂಬಿತವೆಂಬ ಭೇದಗಳ ಕಲ್ಪನೆ ಸ್ಥೂಲ-ಮಾನದ್ದೇ ಆಗಿರುವುದಾದರೂ - ದ್ರುತ ಮತ್ತು ವಿಲಂಬಿತಗತಿಗಳ ಛಂದೋ-ವಿನ್ಯಾಸಕ್ಕೆ ಹೆಚ್ಚು ಕಡಮೆ ಅಷ್ಟಿಷ್ಟು ಸ್ಥಿರತೆ ಇರುತ್ತದೆ. ಆದರೆ ಮಧ್ಯಾಕ್ಷರಗತಿಯ ಛಂದೋವಿನ್ಯಾಸಕ್ಕೆ ಸ್ಥಿರರೂಪವೆಂಬುದೇನೂ ಇಲ್ಲ. ಒಂದು ಛಂದಃಖಂಡದ ಗುರುಲಘುವಿನ್ಯಾಸಪ್ರಕಾರವು ದ್ರುತಗತಿ ಎಂದು ಗುರುತಿಸಬಹುದಾದಷ್ಟು ಲಘು-ಬಹುಲವಾಗಿಯಾಗಲಿ, ವಿಲಂಬಿತಗತಿ ಎಂದು ಹೇಳಬಹುದಾದಷ್ಟು ಗುರು ಬಹುಲವಾಗಿಯಾಗಲಿ ಇಲ್ಲದಿರುವಲ್ಲೆಲ್ಲ ಅದು ಮಧ್ಯಾಕ್ಷರಗತಿ ಎನಿಸಿಕೊಳ್ಳುತ್ತದೆ. ಇದರಿಂದಾಗಿ ಅದರ ಗುರುಲಘುವಿನ್ಯಾಸವು ನಾನಾಪ್ರಕಾರವಾಗಿ ಇರುವುದು ಮಾತ್ರವಲ್ಲ, ಅದರ ಕೆಲವು ರೂಪಗಳಲ್ಲಿ ಗುರ್ವಕ್ಷರಾಧಿಕ್ಯವೂ ಇನ್ನು ಕೆಲವು ರೂಪಗಳಲ್ಲಿ ಲಘ್ವಕ್ಷರಾಧಿಕ್ಯವೂ ಇರುವಂತಾಗುತ್ತದೆ. ಈ ದೃಷ್ಟಿಯಿಂದ ನೋಡಿ-ದರೆ, ಪ್ರಸ್ತುತವಾದ ಶಾರ್ದೂಲವಿಕ್ರೀಡಿತವು ಗುರ್ವಕ್ಷರಪ್ರಾಬಲ್ಯವುಳ್ಳ ಮಧ್ಯಾಕ್ಷರ-ಗತಿಯದಾಗಿರುವುದು ವ್ಯಕ್ತವಾಗುತ್ತದೆ. ಇದರ ಪಾದದ ೧೯ ಅಕ್ಷರಗಳೊಳಗೆ ೧೧ ಗುರ್ವಕ್ಷರಗಳಿದ್ದು, ಲಘ್ವಕ್ಷರಗಳ ಸಂಖ್ಯೆ ಎಂಟೇ ಆಗಿರುತ್ತದೆ. ಅಷ್ಟು ಮಾತ್ರವಲ್ಲ, ಪಾದಾದಿಯಲ್ಲಿ ಮೂರು ಗುರುಗಳು ಅವ್ಯವಧಾನವಾಗಿ ಬರುತ್ತವೆ. ಸಂಸ್ಕೃತ

ಭಾಷೆಯ ಸಹಜಸ್ವರೂಪವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ, ಅದು ಗುರ್ವಕ್ಷರ ಪ್ರಾಬಲ್ಯವುಳ್ಳ ಮಧ್ಯಾಕ್ಷರಗತಿಯ ಭಾಷೆಯೆಂಬುದು ಗೊತ್ತಾಗುತ್ತದೆ. ಕನ್ನಡವಾದರೆ ಹಾಗಲ್ಲ. ಹೊಸಗನ್ನಡರೂಪಗಳಿಗಿಂತ ಹಳಗನ್ನಡರೂಪಗಳಲ್ಲಿ ಗುರ್ವಕ್ಷರಾಧಿಕ್ಯ-ವಿರುವುದಾದರೂ, ಹಳಗನ್ನಡವೂ ಅಷ್ಟಿಷ್ಟು ಲಘ್ವಕ್ಷರಪ್ರಾಬಲ್ಯವುಳ್ಳ ಭಾಷೆಯೇ ಆಗಿದೆ. ಈ ತಥ್ಯವು ಅವಗತವಾದಾಗ, 'ಖ್ಯಾತಕರ್ಣಾಟಕ'ಗಳೆಂಬ (ವಿಷಮ-ಗತಿಯ) ಆರು ವೃತ್ತಗಳೊಳಗೆ ಮಧ್ಯಾಕ್ಷರಗತಿಯವಾಗಿರುವ ಶಾರ್ದೂಲ, ಮತ್ತೇಭ, ಉತ್ಪಲ, ಚಂಪಕ ಎಂಬ ನಾಲ್ಕರಲ್ಲಿ ನಮ್ಮ ಚಂಪೂಕವಿಗಳಿಗೆ ಕ್ರಮಶಃ ಉತ್ತರೋತ್ತರವಾಗಿ ಅಧಿಕಾಧಿಕಪಕ್ಷಪಾತವಿದ್ದುದೇಕೆಂಬುದು ಗೊತ್ತಾಗುತ್ತದೆ. ಈ ನಾಲ್ಕು ವೃತ್ತಗಳ ಪಾದಗಳಲ್ಲಿ ಗುರುಲಘುಗಳ ಸಂಖ್ಯೆ ಹೀಗಿರುತ್ತದೆ:

| ವೃತ್ತ | ಪಾದಾಕ್ಷರ ಸಂಖ್ಯೆ | | ಗುರು | | ಲಘು |
|---|---|---|---|---|---|
| ಶಾರ್ದೂಲವಿಕ್ರೀಡಿತ | ೧೯ | = | ೧೧ | + | ೮ |
| ಮತ್ತೇಭವಿಕ್ರೀಡಿತ | ೨೦ | = | ೧೦ | + | ೧೦ |
| ಉತ್ಪಲಮಾಲೆ | ೨೦ | = | ೮ | + | ೧೨ |
| ಚಂಪಕಮಾಲೆ | ೨೧ | = | ೭ | + | ೧೪ |

ಸಂಸ್ಕೃತಕವಿಗಳ ಅಚ್ಚುಮೆಚ್ಚಿನ ವೃತ್ತವಾದ ಶಾರ್ದೂಲವಿಕ್ರೀಡಿತವು, ಸಂಸ್ಕೃತ ಮಾರ್ಗಾನುಯಾಯಿಗಳೇ ಆಗಿದ್ದ ನಮ್ಮ ಹಳೆಯ ಕನ್ನಡಕವಿಗಳಿಗೆ ಪ್ರಿಯತಮವೆನಿಸದೆ, ಛಂದೋಗ್ರಂಥಗಳಲ್ಲಿ ಹೊರತು ಇತರತ್ರ ಸಂಸ್ಕೃತದಲ್ಲಿ ದೃಷ್ಟಿಗೆ ಬೀಳುವುದೇ ದುರ್ಲಭವಾಗಿರುವ ಮತ್ತೇಭ, ಉತ್ಪಲ, ಚಂಪಕಗಳಲ್ಲಿ (ಅನುಕ್ರಮವಾಗಿ) ಅಧಿಕವಾದ ಆಸಕ್ತಿಯುಂಟಾದುದಕ್ಕೆ – ಕನ್ನಡದ ಭಾಷಾ-ಕ್ಷರಗತಿ ಸಂಸ್ಕೃತದ ಭಾಷಾಕ್ಷರಗತಿಯಂತೆ ಗುರುಪ್ರಧಾನವಾದ ಮಧ್ಯಾಕ್ಷರ-ಗತಿಯಾಗಿರದೆ, ಲಘುಪ್ರಧಾನವಾದ ಮಧ್ಯಾಕ್ಷರಗತಿಯಾಗಿರುವುದೇ ಕಾರಣ-ವಾಗಿತ್ತೆಂಬುದು ಈ ಮೇಲಿನ ವಿವೃತಿಯಿಂದ ಸುವ್ಯಕ್ತವಾಗದಿರದು.

['ಖ್ಯಾತಕರ್ಣಾಟಕ' ಎಂಬ ಪ್ರಸಿದ್ಧಿಗೆ ಭಾಗಿಗಳಾಗಿದ್ದರೂ – ಸ್ರಗ್ಧರೆ ಮಹಾಸ್ರಗ್ಧರೆಗಳು ಕನ್ನಡದಲ್ಲಿ ಕಂಡುಬರುವುದು ಉಳಿದ ನಾಲ್ಕು ಖ್ಯಾತಕರ್ಣಾ-ಟಕಗಳಿಗಿಂತ ಎಷ್ಟೋ ಕಡಮೆ. ಇದಕ್ಕೆ ಕಾರಣವೇನೆಂದರೆ – ಇವು ತ್ರಿವಿಧಾಕ್ಷರ ಗತಿಸಂಪನ್ನವಾದ ಪ್ರಬಲಯತಿಸ್ಥಾನಿವೃತ್ತಗಳಾಗಿರುವುದರಿಂದ, ಇವುಗಳಲ್ಲಿ ಯತಿ ಭಂಗವಾದರೆ ಪದ್ಯಗತಿ ತನ್ನ ಶೋಭೆಯನ್ನು ಕಳೆದುಕೊಳ್ಳದಿರುವುದಿಲ್ಲ. ಇದ-ರಿಂದಾಗಿ ಯತಿವಿಲಂಘನಪರವಾದ ಕನ್ನಡಸಂಪ್ರದಾಯಕ್ಕೆ ಇವು ಉಳಿದ ನಾಲ್ಕರಷ್ಟು ಪ್ರಿಯವಾಗಲಿಲ್ಲ. ಶಾರ್ದೂಲ ಮತ್ತೇಭ ಉತ್ಪಲ ಚಂಪಕಗಳಾದರೆ, ಆಮೂಲಾಗ್ರವಾಗಿ ಮಧ್ಯಾಕ್ಷರಗತಿಯಾಗಿದ್ದು ದುರ್ಬಲಯತಿಸ್ಥಾನಿಗಳಾಗಿರುವು-ದರಿಂದ ಕನ್ನಡಸಂಪ್ರದಾಯಕ್ಕೆ ಒಗ್ಗಿಕೊಂಡು, ಕನ್ನಡ ಕವಿಗಳಿಗೆ ಪ್ರಿಯತರಗಳಾಗಿ ಪರಿಣಮಿಸಿದವು.]

ವಿಖ್ಯಾತವಾದ ಶಾರ್ದೂಲಾದಿ ದುರ್ಬಲಯತಿಸ್ಥಾನಿವೃತ್ತಗಳು ಆಮೂ-ಲಾಗ್ರವಾಗಿ ಮಧ್ಯಾಕ್ಷರಗತಿಯವೇ ಆದರೂ – ಅವುಗಳ ಪಾದಮಧ್ಯಯತಿಸ್ಥಾನದ ಉಭಯಪಾರ್ಶ್ವಗಳಲ್ಲಿ ಹೆಚ್ಚುಕಡಮೆ ಸಮಾನವೆಂದು ಹೇಳಬಹುದಾದ ಅಕ್ಷರ-ಗತಿಪ್ರಕಾರವಿರುವುದಿಲ್ಲ. (ಮಧ್ಯಾಕ್ಷರಗತಿಯು ನಾನಾರೂಪವೆಂಬುದನ್ನು ಹಿಂದೆ ವಿಶದೀಕರಿಸಲಾಗಿದೆ.) ಅವುಗಳ ಛಂದೋವಿನ್ಯಾಸಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಇದು ಸ್ಪಷ್ಟವಾಗಿ ತಿಳಿದುಬರುತ್ತದೆ. ಉದಾ:

೧. ಉತ್ಪಲಮಾಲಾವೃತ್ತ:

–∪ ∪ –∪ – ∪ ∪∪ – ∪∪ – ∪∪ – ∪ –∪ –
ಕಟ್ಟುಗೆ ಕಟ್ಟದಿರ್ಕೆ ಕಡಲಂ : ಕಪಿಸಂತತಿ ವಾಮನಕ್ರಮಂ ।

ಮುಟ್ಟುಗೆ ಮುಟ್ಟದಿರ್ಕೆ ನಭಮಂ : ಹರನಂ ನರನಿಕ್ಕಿ ಗಂಟಲಂ ॥

ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ : ಕೃತಿಬಂಧದೊಳಲ್ತೆ ಕಟ್ಟಿದರ್ ।

ಮುಟ್ಟಿದರಿಕ್ಕಿ ಮೆಟ್ಟಿದರಿದೇ : ನಳವಗ್ಗವೋ ಕವೀಂದ್ರರಾ ॥ . ॥

(ನೇಮಿಚಂದ್ರ)

೨. ಮತ್ತೇಭವಿಕ್ರೀಡಿತವೃತ್ತ:

∪∪ – – ∪ ∪ – ∪ –∪ ∪∪ – – – ∪ – – ∪ –
ಕೆಲವಂ ಬಲ್ಲವರಿಂದ ಕಲ್ತು ಕೆಲವಂ : ಗ್ರಂಥಂಗಳಿಂದೋದುತಂ ।

ಕೆಲವಂ ಮಾಟ್ಪವರಿಂದೆ ಕಂಡು ಕೆಲವಂ : ಸ್ವಜ್ಞಾನದಿಂ ನೋಡುತಂ ॥

ಕೆಲವಂ ಸಜ್ಜನಸಂಗದಿಂದಱಿಯುತಂ : ಸರ್ವಜ್ಞನಪ್ಪಂ ನರಂ ।

ಪಲವುಂ ಪಳ್ಳ ಸಮುದ್ರಮೈ ಹರ ಹರಾ : ಶ್ರೀ ಚೆನ್ನಸೋಮೇಶ್ವರಾ ॥ . ॥

(ಸೋಮೇಶ್ವರ ಶತಕ)

[ಉತ್ಪಲ ಚಂಪಕ ವೃತ್ತಪಾದಗಳ ದ್ವಿತೀಯ ಛಂದಃಪದಗಳು ಸಮಾನ ರೂಪದವು; ಮತ್ತು ಶಾರ್ದೂಲಮತ್ತೇಭಗಳ ಪಾದಗಳ ದ್ವಿತೀಯ ಛಂದಃ-ಪದಗಳೂ ಏಕರೂಪದವುಗಳಾಗಿರುತ್ತವೆ.]

ಹೀಗೆ – ಕೇವಲ ಮಧ್ಯಾಕ್ಷರಗತಿವಿಶಿಷ್ಟವಾದ ವೃತ್ತಗಳಲ್ಲಿಯೂ, ಛಂದಃ ಪದವಿಭಾಗವಿರುವಲ್ಲಿ ಪೂರ್ವಾಪರಭಾಗಗಳ ಅಕ್ಷರಗತಿರೂಪಗಳಲ್ಲಿ ಅಷ್ಟಿಷ್ಟು ಭೇದವಿದ್ದೇ ಇರುತ್ತದೆ. ಇದರಿಂದಾಗಿ – ಈ ವೃತ್ತಗಳ ಗತಿಯಲ್ಲಿ ಕಂಡುಬರ-ಬಹುದಾಗಿದ್ದ 'ಏಕರೂಪತೆ' (monotony) ಪರಿಹೃತವಾಗುತ್ತದೆ; ಹಾಗೂ ಆ ಮೂಲಕ ಗತಿಸೌಂದರ್ಯಕ್ಕೆ ಪುಷ್ಟಿ ದೊರೆಯುತ್ತದೆ.

ವಿಷಮಗತಿವೃತ್ತಗಳ ಗತಿಸೌಂದರ್ಯದ ಕುರಿತು ನಾವು ಈ ವರೆಗೆ ಮಾಡಿದ ವಿಚಾರದ ಫಲಿತಾಂಶವನ್ನು ಹೀಗೆ ಸಂಗ್ರಹಿಸಬಹುದು: ಈ ವೃತ್ತ-

ಬಂಧಗಳ ಸೌಂದರ್ಯಕ್ಕೆ ಮೂಲಹೇತು ಇವುಗಳ ಅಕ್ಷರಗತಿಸ್ವರೂಪವಾಗಿರು-ತ್ತದೆ. ಆದಕಾರಣವೇ ನೈಕಾಕ್ಷರಗತಿಭೇದಸಂಪನ್ನವಾದ ಪ್ರಬಲಯತಿಸ್ಥಾನಿವೃತ್ತಗಳ ಗತಿಯಲ್ಲಿ ಆಕರ್ಷಕತ್ವವು ಅಧಿಕವಾಗಿರುವುದಾಗಿದೆ. ಆದರೆ ಅದೊಂದರಿಂದಲೇ ಆ ಸೌಂದರ್ಯವು ಸಿದ್ಧಿಸುವುದಾಗಿರದೆ, ಆಯಾ ವೃತ್ತದ ಛಂದಃಪದಗಳ ಪರಸ್ಪರ ಪರಿಮಾಣಮೈತ್ರಿಯೂ ಅದಕ್ಕೆ ಅಪರಿಹಾರ್ಯವಾದೊಂದು ಕಾರಣ-ವಾಗಿರುತ್ತದೆ.[84] (ಕೇವಲ ಒಂದೇ ಅಕ್ಷರಗತಿಯ, ಎಂದರೆ ಆಮೂಲಾಗ್ರವಾಗಿ

---

84. {'ವೃತ್ತಗಂಧಿ' ಗದ್ಯದಲ್ಲಿ ವಾಕ್ಯಾಂಗಗಳ ಪರಿಮಾಣಮೈತ್ರಿ} ಈ ತಥ್ಯವನ್ನು 'ವೃತ್ತಗಂಧಿ'-ಗಳಾದ ಗದ್ಯಖಂಡಗಳ ಪರೀಕ್ಷಣದಿಂದ ತಿಳಿದುಕೊಳ್ಳಬಹುದಾಗಿದೆ. ಅದಕ್ಕಾಗಿ – ಅಂತಹ ಒಂದೆರಡು ವಾಕ್ಯಗಳನ್ನೆತ್ತಿಕೊಳ್ಳೋಣ:

(೪) (೬) (೭) (೬)
(೧) "ಪೆಱವರ । ಕಿಡುದೆಸೆಯೊಳ್ । ಕಡುಸಂತಸ । ಕೈಡೆಗುಡದಿರ್" ॥

(೪) (೫) (೭) (೬) (೩) (೩)
(೨) ಅೞಿದೊಡೆ । ಮುೞಿದೊಡಂ । ಬಟ್ಟೆದೋಱಿಪ । ರಸಭರಿತಂ । ಚರಿತ । ಪ್ಪೈಸೆ ॥'

(ಶ್ರೀರಾಮಾಶ್ವಮೇಧ – ಪ್ರಥಮಾಶ್ವಾಸ)

['ವೃತ್ತಗಂಧಿ' ಎಂಬುದು ಪರಮಾರ್ಥತಃ ಗದ್ಯವೇ ಆಗಿರುವುದರಿಂದ – ಗದ್ಯಕ್ಕೆ 'ಪಾದ ಪರಿಮಾಣ'ವೆಂಬುದಿಲ್ಲವಾದುದರಿಂದ – 'ವೃತ್ತಗಂಧಿ'ಯ ಅವಯವವಿಚಾರಮಾಡುವಾಗ ತದ್ಗತ ವಾಕ್ಯಾಂಗಗಳನ್ನೇ ಎಂದರೆ ಪದಗಳನ್ನೋ ಪದಪುಂಜಗಳನ್ನೋ ಅದರ ಛಂದಃ ಪದಗಳಾಗಿ ಸ್ವೀಕರಿಸಬೇಕಾಗುತ್ತದೆ.]

ಈ ವಾಕ್ಯಗಳು ವೃತ್ತಗಂಧಿಗಳಾಗಿವೆ ಎಂಬುದರಲ್ಲಿ ಮತಭೇದವಿರಲಾರದು. ಇವು ಸಾಮಾನ್ಯವಾದ ಗದ್ಯವಾಕ್ಯಗಳಂತಿರದೆ ಪದ್ಯಭಾಗಗಳೋ ಎಂಬಂತೆ ಭಾಸವಾಗುವುದಕ್ಕೆ ಕಾರಣವೇನು? – ಇದಿಲ್ಲಿ ವಿಚಾರಣೀಯ.

ಈ ವಾಕ್ಯಗಳಲ್ಲಿ ಅಲ್ಲಲ್ಲಿ ಚಿಗುರಿರುವ ಅನುಪ್ರಾಸಗಳೂ, ಒಳ್ಳೆಯ ಪದ್ಯಕ್ಕೆ ಅವಶ್ಯ-ವಾದ ಲಕ್ಷಣವೆಂದು ಆಲಂಕಾರಿಕರಿಂದ ಭಾವಿಸಲ್ಪಟ್ಟಿರುವ ಮತ್ತು ನಮ್ಮ ಮಹಾಕವಿಪರಂಪರೆ ಅನುಸರಿಸುತ್ತ ಬಂದಿರುವ 'ಶಯ್ಯೆ' (ಎಂದರೆ ಸಂಘಟಿತವಾಗುವ ಪದಗಳ ಪರಸ್ಪರ 'ನಾದಮೈತ್ರಿ'. – "ಯಾ ಪದಾನಾಂ ಪರಾನ್ಯೋನ್ಯಮೈತ್ರೀ ಶಯ್ಯೇತಿ ಕಥ್ಯತೇ") ಇವುಗಳಲ್ಲಿ ನೆಲೆಗೊಂಡಿರುವುದೂ ಇವು ಪದ್ಯಭಾಗಗಳೋ ಎಂಬಂತೆ ಭಾಸವಾಗುವುದಕ್ಕೆ ಪೋಷಕವಾಗಿ-ರುವವಾದರೂ, ಈ ಗುಣವಿಶೇಷಗಳು ಪದ್ಯಗಳಲ್ಲಿ ಹೇಗೋ ಹಾಗೆ ಗದ್ಯದಲ್ಲಿಯೂ ಇರಬಹುದಾದ ಲಕ್ಷಣಗಳಾಗಿರುವುದರಿಂದ, ಇವು 'ವೃತ್ತಗಂಧಿತ್ವ'ದ ಹೇತುಗಳೆಂದಾಗವು. ಈ ವಾಕ್ಯಗಳ 'ಅಕ್ಷರಗತಿ'(ಇಲ್ಲಿ ಬಂದಿರುವುದು ಮುಖ್ಯವಾಗಿ ದ್ರುತಾಕ್ಷರಗತಿ)ಯ ಆಕರ್ಷಕತ್ವ-ದಿಂದಾಗಿ ಇದು ಸಾಮಾನ್ಯಗದ್ಯಕ್ಕಿಂತ ಭಿನ್ನವಾಗಿ ಕಂಡುಬರುತ್ತಿರುವುದಾದರೂ, (ಶಾರ್ಙ್ಗ-ದೇವೋಕ್ತವಾಗಿರುವಂತೆ) ಇಂತಹ ಗತಿ ಗದ್ಯದಲ್ಲಿಯೂ ಇರುಬಹುದಾದುದರಿಂದ ಇದು ಸಹ ವೃತ್ತಗಂಧಿತ್ವಕ್ಕೆ ಮೂಲಹೇತುವೆನಿಸುವಂತಿಲ್ಲ. ಹಾಗಾದರೆ ಆ ಹೇತು ಯಾವುದು? – ಇದನ್ನು ಚಿಂತಿಸುತ್ತಾಹೋದರೆ, ಈ ವಾಕ್ಯಗಳ ಘಟಕಗಳಾದ ಪದಗಳ ಅನ್ಯೋನ್ಯಪರಿಮಾಣಪ್ರಕಾರ-

ಮಧ್ಯಕ್ಷಾರಗತಿಸಂಪನ್ನವಾದ ದುರ್ಬಲಯತಿಸ್ಥಾನಿವೃತ್ತಗಳ ಗತಿಸೌಂದರ್ಯಕ್ಕೆ ಛಂದೋಕ್ಷರಗತಿಗೂ – ಸಂಸ್ಕೃತ ಮತ್ತು ಹಳಗನ್ನಡ – ಭಾಷಾಕ್ಷರಗತಿಗೂ ಅವುಗಳಲ್ಲಿ ನಿರಾಯಾಸವಾಗಿ ಒದಗುವ ಸಾಮರಸ್ಯವೂ ಒಂದು ಕಾರಣವಾಗಿ ಪರಿಣಮಿಸುವಂತಹದಾಗಿದೆ.)

---

ಗಳೇ ಇವುಗಳ ವೃತ್ತಗಂಧಿತ್ವದ ಮೂಲಹೇತುವೆಂಬ ತಥ್ಯವು ಗೋಚರವಾಗುವುದು. ಈ ವಾಕ್ಯಗಳ ಪದಗಳೆಲ್ಲ ಸಮಪರಿಮಾಣದವಲ್ಲವಾದರೂ ಆ ಪರಿಮಾಣಪ್ರಕಾರಗಳೊಳಗೆ ಅನಿರ್ವಚನೀಯವಾದೊಂದು ಮೈತ್ರಿಯ ಅನುಭವವಾಗುವುದರಿಂದಾಗಿ, ಈ ವಾಕ್ಯಗಳು ಯಾವುದೋ ಒಂದು ವಿಷಮಗತಿವೃತ್ತದ ಭಾಗಗಳೋ ಎಂಬಂತೆ ಭಾಸವಾಗುವುದಾಗಿದೆ. (ಯಾವುದೊಂದು ವಾಕ್ಯದ ಪದಗಳು ಸಮಪರಿಮಾಣದವುಗಳಾಗಿದ್ದರೆ ಅಲ್ಲಿ ಲಯೋ-ತ್ಪತ್ತಿಯಾಗುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅಂತಹ ವಾಕ್ಯವು 'ಲಯಾನ್ವಿತ-ವೃತ್ತಗಂಧಿ'ಯಾಗುತ್ತದೆ.) ಅಕ್ಷರಗತಿಯಲ್ಲಿ ಸೌಂದರ್ಯವಿರಲಿ, ಇಲ್ಲದಿರಲಿ – 'ಲಯ'-ವೆಂಬುದೊಂದಿದ್ದರೆ ಸಾಕು, ಅಲ್ಲಿ ಸೌಂದರ್ಯದ ಆವಿರ್ಭಾವವಾಗುತ್ತದೆ. ಆದರೆ ವಿಷಮಗತಿ ಎಂಬುದು ಹೃದ್ಯವೆನಿಸಬೇಕಾದರೆ ಆಕರ್ಷಕವಾದ ಅಕ್ಷರಗತಿಯ ಅವಶ್ಯಕತೆ ಇದ್ದೇ ಇರುತ್ತದೆ; ಮತ್ತು, ಭಿನ್ನಪರಿಮಾಣದ ಪದಗಳೊಳಗಿನ ಮೈತ್ರಿಗೆ ಅಕ್ಷರಗತಿಯ, ಅರ್ಥಾತ್ ಛಂದೋ-ವಿನ್ಯಾಸದ ಬೆಂಬಲವಿರಬೇಕಾಗುವುದರಿಂದ – ವಿಷಮಗತಿವೃತ್ತಗಂಧಿತ್ವಕ್ಕೆ ಅಕ್ಷರಗತಿ ಸ್ವರೂಪವು ಮುಖ್ಯಕಾರಣವಲ್ಲದಿದ್ದರೂ, ಸಹಕಾರಿಕಾರಣವೇನೋ ಆಗಿಯೇ ಆಗುತ್ತದೆ. [ಆಕರ್ಷಕವಾದ ಅಕ್ಷರಗತಿ ಇದ್ದೊಡನೆ ಆ ಗದ್ಯಭಾಗವನ್ನು 'ವೃತ್ತಗಂಧಿ' ಅಥವಾ 'ಪದ್ಯಗಂಧಿ' ಎಂದು ಕೆಲವರು ಭಾವಿಸುವ ಹಾಗೆ ತೋರುತ್ತದೆ. ಆದರೆ ಇದು ಸರಿಯೆನಿಸಲಾರದು. ಏಕೆಂದರೆ – ಪರಿಮಾಣಬದ್ಧವಲ್ಲದುದು 'ಪದ್ಯ' ಎನಿಸಿಕೊಳ್ಳುವುದಿಲ್ಲ. ವೃತ್ತವೆಂಬುದೂ ಒಂದು ಪದ್ಯ-ಭೇದವೇ ಹೊರತು ಬೇರೇನೂ ಅಲ್ಲ. ಆದುದರಿಂದ, ಒಂದು ಗದ್ಯಭಾಗದಲ್ಲಿ ಅಕ್ಷರಗತಿ-ವಿಶೇಷವೂ ಪದಪರಿಮಾಣಗಳ ಅನ್ಯೋನ್ಯ ಮೈತ್ರಿಯೂ ಒಡಗೂಡಿದ್ದರೆ ಮಾತ್ರ ಅದು (ವಿಷಮಗತಿ)ವೃತ್ತಗಂಧಿಯಾಗುತ್ತದೆ. ಪದಪರಿಮಾಣಮೈತ್ರಿಯಿಲ್ಲದೆ ಕೇವಲ ಅಕ್ಷರಗತಿ-ಸೌಂದರ್ಯವಿರುವ ಗದ್ಯಭಾಗವು "ಗತಿವಿಲಸಿತವಾದ ಗದ್ಯ" (=ಆಕರ್ಷಕಗತಿಸಂಪನ್ನವಾದ ಗದ್ಯ) ಎಂದಿಷ್ಟೇ ಆಗಬಲ್ಲುದು. ಉದಾ:

– –  – – –  – –  – –  ∪∪∪ –  – ∪  – ∪ – –
ಅಸ್ತಿ । ಬ್ರಹ್ಮಾರಣ್ಯೇ । ಕರ್ಪೂರತಿಲಕೋ ನಾಮ । ಮತ್ತಹಸ್ತೀ ॥

ಈ ವಾಕ್ಯದ ಆದಿಭಾಗದಲ್ಲಿ ವಿಲಂಬಿತಾಕ್ಷರಗತಿ ವಿಜೃಂಭಿಸುತ್ತಿದೆ; ಉಳಿದ ಭಾಗದಲ್ಲೆಲ್ಲ ಮಧ್ಯಾಕ್ಷರಗತಿ ಪ್ರವಹಿಸುತ್ತಿದೆ. ಹೀಗಿದ್ದರೂ, ಇದನ್ನು ಪಠಿಸುವಾಗ ಇದೊಂದು ಪದ್ಯಭಾಗವೋ ಎಂಬ ಶಂಕೆ ಹುಟ್ಟುವುದಿಲ್ಲ. ತಾತ್ಪರ್ಯವೇನೆಂದರೆ – ಗದ್ಯಭಾಗವೊಂದು (ವಿಷಮಗತಿಯ) 'ವೃತ್ತಗಂಧಿ' ಎನಿಸಬೇಕಾದರೆ ಅದರ ವಾಕ್ಯಾಂಗಗಳ ಪರಿಮಾಣಗಳೊಳಗೆ ಮೈತ್ರಿ ಇರಲೇಬೇಕಾಗುತ್ತದೆ. ಮತ್ತು ಅಂತಹ ಮೈತ್ರಿಯೊದಗುವುದಕ್ಕೆ ಅಕ್ಷರಗತಿಸ್ವರೂಪದ, ಎಂದರೆ ಛಂದೋವಿನ್ಯಾಸದ ನೆರವೂ ಬೇಕಾಗುತ್ತದೆ. ಆದರೆ ಈ ಮೈತ್ರಿ ಎಲ್ಲಿ ಇದೆ, ಎಲ್ಲಿ ಇಲ್ಲ ಎಂಬುದಕ್ಕೆ ಪರಿಪಕ್ವವಾದ ಗತಿಪ್ರಜ್ಞೆಯೊಂದೇ ಪ್ರಮಾಣ. ಅಂತಹ ಮೈತ್ರಿಯುಳ್ಳ ಛಂದಃಖಂಡಗಳು ತದನುರೂಪವಾದ ಪಾದಪರಿಮಾಣವನ್ನು ಆಶ್ರಯಿಸಿದಾಗ ಮಾತ್ರ, ಒಂದು ವಿಷಮಗತಿವೃತ್ತದ ಆವಿರ್ಭಾವವಾಗುತ್ತದೆ.]

ವಿಷಮಗತಿ ವೃತ್ತಬಂಧಗಳು ವಸ್ತುತಃ ಅಪೂರ್ವವೂ ಅಸಾಧಾರಣವೂ ಆದೊಂದು ಛಂದಃಪ್ರಜ್ಞಾವಿಶೇಷದ ಫಲವಾಗಿವೆ. ಛಂದಃಸೌಂದರ್ಯದ ಪರಾ-ಕಾಷ್ಠೆಯನ್ನು ಕಂಡ ಭಾರತೀಯ ಛಂದಃಪ್ರತಿಭಾವಿಶೇಷವನ್ನು ಇವುಗಳಲ್ಲಿ ಮುಖಾಮುಖಿಯಾಗಿ ಸಂದರ್ಶಿಸಬಹುದು. ಆದರೆ ಆ ಸೌಂದರ್ಯದ ಪೂರ್ಣಾನುಭವವು ಸರ್ವಸುಲಭವಲ್ಲ. ಅದರ ಅನುಭವವಾಗಬೇಕಾದರೆ ಪರಿಪಕ್ವವಾದ ಗತಿಪ್ರಜ್ಞೆಯ ಅವಶ್ಯಕತೆ ಇರುತ್ತದೆ. ಭಾರತೀಯ (ಶಾಸ್ತ್ರೀಯ) ಸಂಗೀತದ ಸರ್ವೋನ್ನತ ಸ್ವರೂಪಗಳೆಂದರೆ, ರಾಗಾಲಪ್ತಿ ಮತ್ತು ರೂಪಕಾಲಪ್ತಿ ಎಂಬ ರಾಗಪ್ರಧಾನವಾದ ಗಾಯನಗಳು. ['ರಾಗಾಲಪ್ತಿ' ಎಂಬುದು ತಾಳಬದ್ಧ-ವಲ್ಲದ (ಸಾಹಿತ್ಯರಹಿತವಾದ) ರಾಗವಿಸ್ತಾರ, ಎಂದರೆ "ಆಲಾಪ". 'ರೂಪಕಾಲಪ್ತಿ' ಎಂದರೆ ಅತಿವಿಲಂಬಿತಲಯದ, ತಾಳಬದ್ಧವೇ ಆದ (ಅಲ್ಪಾಕ್ಷರ ಸಾಹಿತ್ಯದ) ಒಂದು ಗಾಯನರೂಪ. ಅದು ಈಗ ಹಿಂದುಸ್ತಾನಿ ಸಂಗೀತಪದ್ಧತಿಯಲ್ಲಿ "ಬಡಾ ಖಯಾಲ್" ಎಂಬ ಹೆಸರಿನಲ್ಲಿ ರೂಢವಾಗಿದೆ, ಬಂಗಾಳದಲ್ಲಿ ಅದನ್ನು "ರಾಗ ಪ್ರಧಾನ"ವೆಂದೇ ಕರೆಯುತ್ತಾರೆ. ಕರ್ಣಾಟಕ ಸಂಗೀತಪದ್ಧತಿಯಲ್ಲಿ ಅದೀಗ ರಾಗ ಪ್ರಧಾನತ್ವವನ್ನು ಬಿಟ್ಟು ತಾಳಪ್ರಧಾನವಾಗಿ ಮಾರ್ಪಟ್ಟು "ಪಲ್ಲವಿ" ಎಂಬ ಹೆಸರಿನಲ್ಲಿ ಪ್ರಚಲಿತವಾಗಿದೆ.] ಆದರೆ ಈ 'ಆಲಪ್ತಿ'ಗಳಲ್ಲಿ ನಾದಾರಾಧಕರಿಗೆ ಲಭ್ಯವಾಗುವಂತಹ ಅಮೋಘವಾದ ಆನಂದವು ಸಾಮಾನ್ಯಜನರಿಗೆ ಲಭಿಸು-ವುದಿಲ್ಲವೆಂಬುದೂ, ತಾಳಲಯಗಳ ಪರಿಸ್ಫುಟತೆಯಿರುವ ಸಂಗೀತವೇ ಜನ-ಸಾಮಾನ್ಯಕ್ಕೆ ಪ್ರಿಯತರವೆಂಬುದೂ ಲೋಕಾನುಭವಸಿದ್ಧ. ಈ ತಥ್ಯವು ಛಂದೋ-ಬಂಧಗಳಿಗೂ ಅನ್ವಯಿಸುವಂತಹದೇ ಆಗಿದೆ: ಸಾಮಾನ್ಯಜನತೆಯ ಹೃದಯವು ಲಯಾನ್ವಿತವಾದ ಛಂದೋಗತಿಯಲ್ಲಿ ರಮಿಸುವಷ್ಟು ಲಯರಹಿತವಾದುದರಲ್ಲಿ ರಮಿಸುವಂತಿಲ್ಲ. ಒಂದು ಛಂದೋಬಂಧವು ಸರ್ವಜನಪ್ರಿಯವಾಗಬೇಕಾದರೆ ಅದು ಲಯಾನ್ವಿತವಾಗಿರಬೇಕಾಗುತ್ತದೆ.

[ಸೂಕ್ಷ್ಮವಾಗಿ ಪರಾಮರ್ಶಿಸಿದರೆ ಮಾತ್ರ ಲಯಾನ್ವಿತಬಂಧವೆಂದು ಗೊತ್ತಾಗಬಲ್ಲ – ಆದರೆ ಸಾಮಾನ್ಯದೃಷ್ಟಿಗೆ ವಿಷಮಗತಿಯದಾಗಿಯೇ ಕಾಣುವ – ಕೆಲವು ವೃತ್ತಗಳಿವೆ. ಉದಾ: ಪೃಥ್ವೀವೃತ್ತ, ವಸಂತತಿಲಕಾವೃತ್ತ. ಇಂಥವುಗಳನ್ನು ವಿಷಮಾಭಾಸಗತಿಯ ಅಥವಾ ವಿಷಮೀಕೃತಗತಿಯ ವೃತ್ತಗಳೆಂದು ಹೆಸರಿಸ-ಬಹುದು. ಲಯಾನ್ವಿತಬಂಧಗಳ ಪಾದಗಳು ಸಾಮಾನ್ಯವಾಗಿ ಎರಡೋ, ನಾಲ್ಕೋ ಎಂಟೋ, ಹದಿನಾರೋ ಆವರ್ತಗಳಿಂದ ಘಟಿತವಾಗಿರುತ್ತವೆ; ಮತ್ತು ಆವರ್ತ-ಸಂಧಿಗಳೇ ಅವುಗಳ ಸಹಜವಾದ ಪಾದಮಧ್ಯಯತಿಸ್ಥಾನಗಳಾಗಿರುತ್ತವೆ. ಇದೂ ಅಲ್ಲದೆ, ಲಯಾನ್ವಿತ ಛಂದೋಬಂಧಗಳ ಆವರ್ತಗಳು ಪರಸ್ಪರ ಪ್ರತಿಕೂಲವಲ್ಲದ ಛಂದೋವಿನ್ಯಾಸಗಳನ್ನು ಹೊಂದಿರಬೇಕಾಗುತ್ತದೆ. ಆದರೆ ಪೃಥ್ವೀವಸಂತತಿಲಕಾದಿ (ವಿಷಮೀಕೃತಗತಿಯ) ವೃತ್ತಗಳ ಸ್ವಭಾವಗಳನ್ನು ಕೂಲಂಕಷವಾಗಿ ಪರಾಮ-ರ್ಶಿಸಿದಲ್ಲಿ – ಲಯಾನ್ವಿತಬಂಧಗಳ ಈ ಮೇಲೆ ಹೇಳಲಾದ ಸಾಮಾನ್ಯ

ನಿಯಮಗಳನ್ನು ಉಲ್ಲಂಘಿಸುವ ಮೂಲಕವೇ ಆ ವೃತ್ತಗಳ ಗತಿಯನ್ನು ವಿಷಮೀಕರಿಸಲಾಗಿದೆ ಎಂಬ ತಥ್ಯವು ಮನವರಿಕೆಯಾಗುತ್ತದೆ. ಇಲ್ಲಿ ಹೆಸರಿಸಿದ ಎರಡು ವೃತ್ತಗಳೊಳಗೆ ಪೃಥ್ವೀವೃತ್ತದ ಪಾದಗಳಲ್ಲಿ ಎಂಟೆಂಟು ಮಾತ್ರೆಗಳ ಮೂರು ಆವರ್ತಗಳಿದ್ದು, ಪಾದಮಧ್ಯಯತಿಸ್ಥಾನವು ೧೧ನೆಯ ಮಾತ್ರೆಯಲ್ಲಿರು-ತ್ತದೆ. (ಈ ವೃತ್ತದ ಗತಿಸ್ವರೂಪವನ್ನು ಈ ನಿಬಂಧದ 75ನೆಯ ಟಿಪ್ಪಣಿಯಲ್ಲಿ ಈ ಮೊದಲೇ ಸೋದಾಹರಣವಾಗಿ ಪರಾಮರ್ಶಿಸಿರುವುದರಿಂದ ಇಲ್ಲಿ ಅದರ ವಿವರಣೆ ಅನವಶ್ಯ.) ವಸಂತತಿಲಕದ ಸ್ವರೂಪ ಹೀಗೆ:

(೭) (೭) (೭)<br>
— — U — U U U — U U — U — —<br>
ರಮ್ಯಾಣಿ ವೀ । ಕ್ಷ್ಯ ಮಧುರಾಂಶ್ಚ ನಿ । ಶಮ್ಯ ಶಬ್ದಾನ್ ।

(೭) (೭) (೭)<br>
— — U — U U U — U U — U — —<br>
ಪರ್ಯುತ್ಸುಕೀ । ಭವತಿ ಯತ್ಸುಖಿ । ತೋಪಿ ಜಂತುಃ ॥

ತಚ್ಚೇತಸಾ । ಸ್ಮರತಿ ನೂನಮ । ಬೋಧಪೂರ್ವಂ ।

ಭಾವಸ್ಥಿರಾ । ಣಿ ಜನನಾಂತರ । ಸೌಹೃದಾನಿ ॥ . ॥

(ಅಭಿಜ್ಞಾನಶಾಕುಂತಲ, ಅಂಕ – ೫)

(ಈ ವೃತ್ತವು ಅಷ್ಟೊಂದು ಸಣ್ಣ ವೃತ್ತವಲ್ಲವಾದರೂ, ಇದಕ್ಕೆ ಸ್ಥಿರವಾದೊಂದು ಪಾದಮಧ್ಯಯತಿಸ್ಥಾನವಿಲ್ಲದಿರುವುದರಿಂದ, ಪಾದಾಂತದಲ್ಲಿ ಮಾತ್ರ ಇದಕ್ಕೆ 'ಯತಿ'ಯೆಂದು ಪಿಂಗಳಾದಿಗಳು ಹೇಳಿರುತ್ತಾರೆ. ಪದಯತಿಯನ್ನು ಇದರ ಪಾದದ ಯಾವ ಸ್ಥಾನದಲ್ಲಿಟ್ಟರೂ ಈ ವೃತ್ತದ ಗತಿಗೆ ಭಂಗಬರುವುದಿಲ್ಲ.)

ಮೇಲೆ ತೋರಿಸಿರುವಂತೆ – ಈ ವೃತ್ತದ ಪಾದಗಳು ಏಳು ಮಾತ್ರೆಯ ಮೂರು ಮೂರು ಆವರ್ತಗಳಾಗಿ ವಿಭಕ್ತವಾಗುತ್ತವೆ. ಹೀಗಿದ್ದರೂ, ಇದನ್ನು ಪಠಿಸುವಾಗ (ಸಂಗೀತಾಭ್ಯಾಸ ಮಾಡದಿರುವ ಸಾಮಾನ್ಯರ ಗತಿಪ್ರಜ್ಞೆಗೆ) ಇದು ಲಯಾನ್ವಿತವೆಂಬ ಭಾವನೆ ಬರುವುದಿಲ್ಲ. ಇದಕ್ಕೆ ಕಾರಣವೇನೆಂದರೆ – ಇದರ ಪಾದಗಳ ಪ್ರಥಮಾವರ್ತದ ಛಂದೋವಿನ್ಯಾಸವು ಉಳಿದೆರಡು ಆವರ್ತಗಳ ವಿನ್ಯಾಸರೂಪಕ್ಕೆ ಪ್ರತಿಕೂಲವಾಗಿರುವುದಾಗಿದೆ: ಎರಡನೆಯ ಮತ್ತು ಮೂರನೆಯ ಆವರ್ತಗಳು ೩+೪=೭ ಮಾತ್ರೆಗಳವು; ಮೊದಲನೆಯದಾದರೋ ೪+೩=೭ ಮಾತ್ರೆಗಳದು. ಇದರಿಂದಾಗಿ, ಆವರ್ತಸಂಧಿಗಳಲ್ಲಿ ಪದಯತಿ ಇದ್ದರೂ ಸಹ, ಪಠನಕಾಲದಲ್ಲಿ ಇದು ಲಯಾನ್ವಿತವೆಂದು ಭಾಸವಾಗುವುದಿಲ್ಲ. ಉದಾ:

— — U — U U U — U U — U — —<br>
ರಾತ್ರಿರ್ಗತಾ, । ಮತಿಮತಾಂವರ, । ಮುಂಚ ಶಯ್ಯಾಂ ॥

(ರಘುವಂಶ, ಸರ್ಗ–೫)

[ಏಳು ಮಾತ್ರೆಗಳ ದ್ರುತಮಧ್ಯಾವರ್ತಗತಿಯು ಇಂತಹ ಪ್ರತಿಕೂಲ ವಿನ್ಯಾಸವನ್ನು ಸಹಿಸುವುದಿಲ್ಲವೆಂಬುದು ಹಿಂದೆಯೇ ಸೂಚಿತವಾಗಿದೆ. ಪೃಥ್ವೀ ವೃತ್ತವು ವಿಷಮೀಕೃತವಾದುದು ಮುಖ್ಯವಾಗಿ ಅದರ ಯತಿಸ್ಥಾನವಿಶೇಷದ ಬಲದಿಂದ; ವಸಂತತಿಲಕವು ವಿಷಮೀಕೃತವಾದುದು ಮುಖ್ಯವಾಗಿ ಅದರ ಆವರ್ತಗಳ ಪರಸ್ಪರ ವಿರುದ್ಧವಾದ ಗುರುಲಘುವಿನ್ಯಾಸಬಲದಿಂದ. ಮತ್ತು ಲಯಾನ್ವಿತ ಬಂಧಗಳ ಸಾಮಾನ್ಯಲಕ್ಷಣಕ್ಕೆ ವಿರುದ್ಧವಾಗಿ ಈ ವೃತ್ತಗಳ ಪಾದಗಳಲ್ಲಿ ಆವರ್ತಗಳ ಸಂಖ್ಯೆ ಮೂರುಮೂರೇ ಆಗಿರುವುದು, ಈ ಎರಡು ವೃತ್ತಗಳಲ್ಲಿ ವಿಷಮಗತಿಯೇ ಭಾಸವಾಗುವಂತೆ ಮಾಡುವುದಕ್ಕೆ ಒಂದು ಸಹಕಾರಿಕಾರಣವಾಗಿಯೂ ಇರುತ್ತದೆ.][85]



85. ಸಮಪರಿಮಾಣದ ಪಾದಗಳಿಂದ ಘಟಿತವಾಗಿರುವ ಲಯಾನ್ವಿತಛಂದೋಬಂಧಗಳ ಪಾದಗಳಲ್ಲಿಯೂ ಒಮ್ಮೊಮ್ಮೆ ಮೂರೇ ಆವರ್ತಗಳಿರುವುದುಂಟು. ಹಾಗಿರುವಲ್ಲಿ - ಪಾದಾಂತಗಳಲ್ಲಿ ಒಂದು ಆವರ್ತಕಾಲದ ವಿರಾಮವು ಪಠನದಲ್ಲಿ ಕಡ್ಡಾಯವಾಗಿ ಬಂದೇ ಬರುತ್ತದೆ. (ಸೋದಾಹರಣವಾಗಿ ಮಾಡಲಾದ ಈ ತಥ್ಯದ ವಿವರಣವನ್ನು "ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ" ಎಂಬ ನನ್ನ ನಿಬಂಧದ ೨೮, ೨೯ನೆಯ ಪುಟಗಳಲ್ಲಿ ನೋಡಬಹುದು.) ಆದರೆ - ಪಠನಕಾಲದಲ್ಲಿ ಅಂತಹ ವಿರಾಮಪ್ರಚೋದನೆಯುಂಟಾಗಬೇಕಾದರೆ, ಪಾದದ ಪೂರ್ವಾಂಶಗಳು ಪರಿಸ್ಫುಟವಾದ ಲಯಪ್ರತೀತಿಯನ್ನು ಉಂಟುಮಾಡುವಂತಿರಬೇಕು. (ವಸಂತತಿಲಕವಾದರೋ ತದ್ವಿರುದ್ಧವಾಗಿದ್ದು, ಆವರ್ತಸಂಧಿಗಳಲ್ಲಿ ಪದಯತಿ ಇರುವ ರಚನೆಯಲ್ಲಿ ಸಹ, ಪಠನಕಾಲದಲ್ಲಿ ಆವರ್ತಬೋಧವಾಗುವುದಿಲ್ಲವೆಂಬುದನ್ನು ಈ ಹಿಂದೆ ತೋರಿಸಲಾಗಿದೆ.) ತಾತ್ಪರ್ಯವೇನೆಂದರೆ - ಗಣಿತಾನುಗುಣವಾಗಿ ಮೂರು ಆವರ್ತಗಳ ಪಾದಗಳುಳ್ಳ ವಿಷಮಾಭಾಸಗತಿಯ ವೃತ್ತಗಳ ಪಾದಾಂತಗಳಲ್ಲಿ, ಮತ್ತೊಂದು ಆವರ್ತದಷ್ಟು ಕಾಲದ ವಿರಾಮಪ್ರಚೋದನೆ ಉಂಟಾಗುವುದಿಲ್ಲ.

# ಪರಿಚ್ಛೇದ ಒಂಬತ್ತು

## ಅಕ್ಷರ ಜಾತಿಗಳು – ಅನುಷ್ಟುಪ್ ಶ್ಲೋಕದ ವಿಕಾಸ – ಉಪಜಾತಿಗಳ ಉತ್ಪತ್ತಿ – ವೈದಿಕ ಛಂದಃಸ್ವಭಾವ ದಿಗ್ದರ್ಶನ

ಹಿಂದಿನ ಪರಿಚ್ಛೇದದಲ್ಲಿ ಸೂಚಿಸಿರುವಂತೆ – ವಿಷಮಗತಿಬಂಧಗಳಲ್ಲಿ ಮೂಲತಃ ಎರಡು ವರ್ಗಗಳಿವೆ: ಗುರುಲಘುಸ್ಥಿರವಾದ ಅಕ್ಷರಸಂಖ್ಯಾನಿಯಮ-ವುಳ್ಳ 'ವೃತ್ತ'ಗಳದು ಒಂದು ವರ್ಗ; ಅಕ್ಷರಸಂಖ್ಯಾನಿಯಮಬದ್ಧವಾಗಿದ್ದರೂ, ಗುರುಲಘುಸ್ಥಿರತೆ (ಪರಿಪೂರ್ಣವಾಗಿ) ಇಲ್ಲದ "ಅಕ್ಷರಜಾತಿ"ಗಳದು ಇನ್ನೊಂದು ವರ್ಗ. ಇವೆರಡರೊಳಗೆ ಮೊದಲನೆಯ ವರ್ಗದವುಗಳ ವಿಚಾರವನ್ನು ಯಥಾ-ಮತಿ ಮಾಡಿದ್ದಾಯಿತು. ಈಗ ಎರಡನೆಯ ವರ್ಗದವುಗಳ ವಿಚಾರವನ್ನೆತ್ತಿ-ಕೊಳ್ಳೋಣ.

{ಅನುಷ್ಟುಪ್ ಶ್ಲೋಕದ ಗತಿವಿಚಾರ}

'ಅಕ್ಷರಜಾತಿ'ಗಳೊಳಗೆ ಪ್ರಧಾನವಾದ ಛಂದೋಬಂಧವು 'ಅನುಷ್ಟುಪ್ ಶ್ಲೋಕ'. ಇದರ ನಾಲ್ಕು ಪಾದಗಳೊಳಗೆ ಪ್ರತಿಯೊಂದರಲ್ಲಿಯೂ ಎಂಟು ಅಕ್ಷರಗಳಿದ್ದು, ಪಾದಪರಿಮಾಣದೃಷ್ಟಿಯಿಂದ ಇದೊಂದು ಸಮಚತುಷ್ಪದ ಬಂಧ-ವೆನಿಸಿಕೊಳ್ಳುವುದಾದರೂ – ಇದರ ಓಜಪಾದಗಳಿಗೂ ಯುಕ್ಪಾದಗಳಿಗೂ[86] ರೂಪ ಭೇದವು ಕಡ್ಡಾಯವಾಗಿ ಇರುತ್ತದೆ. ಇದಲ್ಲದೆ, ಇದರಲ್ಲಿರುವ ಇನ್ನೂ ಒಂದು ವಿಶೇಷವೇನೆಂದರೆ : ಅಕ್ಷರಜಾತಿಗಳಲ್ಲಿಯೂ (ವೃತ್ತಗಳಲ್ಲಿ ಹೇಗೋ ಹಾಗೆ) ಪಾದಾಂತ್ಯವು ಲಘ್ವಕ್ಷರವಾಗಿದ್ದರೆ ಅದು ಕರ್ಷಿತವಾಗಿ ಗುರೂಚ್ಚಾರವನ್ನು ಪಡೆಯು-ವುದು ಸಾಮಾನ್ಯ ನಿಯಮ. ಆದರೆ ಅನುಷ್ಟುಪ್‌ಶ್ಲೋಕದ ಓಜಪಾದಗಳಲ್ಲಿ ಇದು ಐಚ್ಛಿಕ ಮಾತ್ರವಲ್ಲ, ಕೆಲವು ಸಂದರ್ಭಗಳಲ್ಲಿ ಅಲ್ಲಿಯ ಲಘ್ವಕ್ಷರವನ್ನು ಲಘು-ವಾಗಿಯೇ ಪಠಿಸದಿದ್ದರೆ ಅಲ್ಲಿ ಅಪಶಬ್ದವು ಶ್ರುತಿ ಗೋಚರವಾಗುತ್ತದೆ. ಉದಾ:

> ಚತುರ್ಮುಖಮುಖಾಂಭೋಜ ।
> ವನಹಂಸವಧೂರ್ಮಮ ॥
> ಮಾನಸೇ ರಮತಾಂ ನಿತ್ಯಂ ।
> ಸರ್ವಶುಕ್ಲಾ ಸರಸ್ವತೀ ॥ . ॥
>
> (ದಂಡಿ, ಕಾವ್ಯಾದರ್ಶ ೧-೧)

ಈ ಶ್ಲೋಕದ ಪೂರ್ವಾರ್ಧದ ಓಜಪಾದದ ಕೊನೆಯ ಲಘ್ವಕ್ಷರವನ್ನು ಪಾದಾಂತ್ಯವೆಂಬ ಕಾರಣದಿಂದ ಗುರುವಾಗಿ ಉಚ್ಚರಿಸಿದರೆ "ಅಂಭೋಜಾವನ"

---

೮೬. ಓಜ = odd ; ಯುಕ್ = even

ಎಂಬ ಅಪಶಬ್ದ ಹುಟ್ಟುತ್ತದೆ. ಆದುದರಿಂದ ಅದನ್ನು ಯಥಾಕ್ಷರವಾಗಿಯೇ ಎಂದರೆ ಲಘುವಾಗಿಯೇ ಉಚ್ಚರಿಸಬೇಕಾಗುತ್ತದೆ; ಮಾತ್ರವಲ್ಲ, ಅಲ್ಲಿ ಸರ್ವಥಾ ವಿರಮಿಸದೆ "ಅಂಭೋಜವನ" ಎಂದೇ ಶ್ರುತಿಗೋಚರವಾಗುವಂತೆ, ವ್ಯವಧಾನ ರಹಿತವಾಗಿ ಮುಂದಿನ ಪಾದವನ್ನೆತ್ತಿಕೊಂಡು, ಆ ಎರಡೂ ಪಾದಗಳು ಕೂಡಿ ಒಂದೇ ಪಾದವೆಂಬಂತೆ ಪಠಿಸಬೇಕಾಗುತ್ತದೆ. ಇನ್ನೊಂದು ಉದಾಹರಣೆ:

ನಮಸ್ತುಂಗಶಿರಶ್ಚುಂಬಿ ।
ಚಂದ್ರಚಾಮರಚಾರವೇ ॥
ತ್ರೈಲೋಕ್ಯನಗರಾರಂಭ ।
ಮೂಲಸ್ತಂಭಾಯ ಶಂಭವೇ ॥ . ॥
(ಬಾಣ, 'ಹರ್ಷಚರಿತ'ದ ಮಂಗಲಶ್ಲೋಕ)

ಈ ಶ್ಲೋಕದ ಎರಡೂ ಅರ್ಧಗಳ ಓಜಪಾದಗಳ ಕೊನೆಗಳಲ್ಲಿ ಕ್ಷಣಾರ್ಧ ಕಾಲ ವಿರಮಿಸಿ ಪಠಿಸಬಹುದಾದರೂ – ಅಲ್ಲಿರುವ ಲಘ್ವಕ್ಷರಗಳನ್ನು ಲಘು- ವಾಗಿಯೇ ಉಚ್ಚರಿಸಬೇಕಾಗುತ್ತದೆ. ಹಾಗೆ ಉಚ್ಚರಿಸದೆ, ಪಾದಾಂತದವುಗಳೆಂಬ ಕಾರಣದಿಂದ ಗುರುಗಳಾಗಿ ಉಚ್ಚರಿಸಿದರೆ – ಅಲ್ಲಿ ಎಡೆಗೊಂಡಿರುವ ಸಮಸ್ತ ಪದಗಳು ಕೆಟ್ಟುಹೋಗಿ, ಆ ಪದ್ಯಗತವಾದ ವಾಕ್ಯವು ಅನ್ವಯಬಾಹಿರವೂ ಅರ್ಥ ರಹಿತವೂ ಆಗುತ್ತದೆ.

ಇಂತಹ ಅಸಂಖ್ಯ ನಿದರ್ಶನಗಳಿಂದ ವಿದಿತವಾಗುವುದೇನೆಂದರೆ: ಅನು- ಷ್ಟುಪ್ ಶ್ಲೋಕದ ಓಜಪಾದಗಳ ಕೊನೆಗಳಲ್ಲಿ 'ಪದಯತಿ' ಕಡ್ಡಾಯವಾಗಿ ಇದ್ದೇ ಇರುವುದಾದರೂ, (ಇಲ್ಲದಿದ್ದಲ್ಲಿ ಅಲ್ಲಿ ಪದ್ಯಗತಿಗೆ ಭಂಗ ಬಂದೇಬರುತ್ತದೆ.) ಆ ಯತಿಸ್ಥಾನಗಳು – ಲಘ್ವಕ್ಷರವು ಕರ್ಷಿತವಾಗಿ ಗುರುತ್ವವನ್ನು ಪಡೆಯತಕ್ಕಂತಹ (ವಾಸ್ತವಿಕವಾದ ಪಾದಾಂತ)ಯತಿಸ್ಥಾನಗಳಲ್ಲ; ಅದರ ಯುಕ್ಪಾದಗಳ ಕೊನೆಗಳು ಮಾತ್ರ (ಲಘ್ವಕ್ಷರವು ಗುರೂಚ್ಚಾರವನ್ನು ಪಡೆಯಬಲ್ಲ) ವಾಸ್ತವಿಕವಾದ ಪಾದಾಂತ ಯತಿಸ್ಥಾನಗಳಾಗಿರುತ್ತವೆ. ಇದರ ಪರಿಣಾಮವಾಗಿ ಅನುಷ್ಟುಪ್ ಶ್ಲೋಕದಲ್ಲಿ "ಗತಿವಿಶ್ರಾಂತಿಸ್ಥಾನ"ಗಳು ಎರಡೇ ಆಗುತ್ತವೆ; ಎಂದರೆ ಅದರ ಗತಿ ಪದ್ಯಾರ್ಧ- ಗಳ ಕೊನೆಗಳಲ್ಲಿ ಮಾತ್ರ ವಿಶ್ರಮಿಸುವ ಸ್ವಭಾವದ್ದಾಗಿರುತ್ತದೆ. ಹೀಗೆ ಛಂದೋ ಗತಿಗನುಗುಣವಾಗಿ ಅನುಷ್ಟುಪ್ ಶ್ಲೋಕವನ್ನು ಪರೀಕ್ಷಿಸಿದಾಗ – ಅದರ ಓಜ ಪಾದಾಂತಯತಿಸ್ಥಾನಗಳು (ವೃತ್ತಗಳ ಛಂದಃಪದಾಂತಗಳಲ್ಲಿರುವಂತಹ) ಪಾದ ಮಧ್ಯಯತಿಸ್ಥಾನಗಳಿಗೆ ತುಲ್ಯವಾಗಿರುವುದು ಗೊತ್ತಾಗುತ್ತದೆ. ಈ ಕಾರಣದಿಂದ, ಅನುಷ್ಟುಪ್ ಶ್ಲೋಕಕ್ಕೆ ಪರಮಾರ್ಥತಃ ಪಾದಗಳು ಎರಡೇ ಆದಂತಾಗುತ್ತವೆ. ಆದುದರಿಂದ, ಛಂದೋಗತಿಗನುಗುಣವಾಗಿ ಹೇಳುವುದಾದರೆ, ಅದನ್ನು ಒಂದು "ದ್ವಿಪದಬಂಧ"ವೆಂದು ಹೇಳಲೂಬಹುದಾಗಿದೆ.

[ಗತಿಸ್ವಭಾವಾನುಗುಣವಾಗಿ ನೋಡಿದಲ್ಲಿ – ಪದ್ಯಾರ್ಧಗಳ ಕೊನೆಗಳಲ್ಲಿ ಮಾತ್ರ "ಗತಿವಿಶ್ರಾಂತಿ"ಯಿರುವ ಛಂದೋಬಂಧಗಳೆಲ್ಲವೂ ತಾತ್ತ್ವಿಕವಾಗಿ (ವ್ಯಾವಹಾರಿಕವಾಗಿ ಅಲ್ಲ) – ದ್ವಿಪದಬಂಧಗಳೇ ಆಗಿವೆಯೆಂಬ ತಥ್ಯವು ವಿದಿತವಾಗುತ್ತದೆ][87]

---

87. ಕೆಲವು ಛಂದೋಗ್ರಂಥಗಳಲ್ಲಿ ಅನುಷ್ಟುಪ್ ಶ್ಲೋಕವನ್ನು "ವಿಷಮವೃತ್ತ"ಗಳಲ್ಲೊಂದಾಗಿ ಹೇಳಲಾಗಿದೆ. ಆದರೆ ವಾಸ್ತವಿಕವಾಗಿ ಅದು "ವೃತ್ತ"ವೇ ಅಲ್ಲ. ಏಕೆಂದರೆ, ವೃತ್ತವೆನಿಸಿ–ಕೊಳ್ಳುವುದಕ್ಕೆ ಅರ್ಹವಾಗಬೇಕಾದರೆ ಆ ಛಂದೋಬಂಧವು 'ಗುರುಲಘುಸ್ಥಿರ'ವಾಗಿರಲೇ ಬೇಕು. ( ಈ ನಿಬಂಧದ 20 ನೆಯ ಟಿಪ್ಪಣಿಯನ್ನು ನೋಡಿರಿ.) ಅನುಷ್ಟುಪ್ ಶ್ಲೋಕವನ್ನೂ 'ವೃತ್ತ' ಎಂದು ಕೆಲವು ಛಂದಃಶಾಸ್ತ್ರಗ್ರಂಥಗಳಲ್ಲಿ ಹೇಳಿರುವುದಕ್ಕೆ, ವೃತ್ತಶಬ್ದದ ಮೂಲಾರ್ಥವು ಕಣ್ಮರೆಯಾಗಿಹೋಗಿ 'ವೃತ್ತ' ಎಂಬುದು 'ಪದ್ಯ' ಎಂಬುದರ ಪರ್ಯಾಯವೆಂಬ (ಅಸಾಧುವಾದ) ಅಭಿಪ್ರಾಯವು ರೂಢಿಗೆ ಬಂದುದು ಒಂದು ಕಾರಣವಾಗಿದೆ. ಇನ್ನೊಂದು ಕಾರಣವೇನೆಂದರೆ, ವೃತ್ತ ಎಂದರೂ 'ಅಕ್ಷರಚ್ಛಂದ' ಎಂದರೂ ಅರ್ಥ ಒಂದೇ ಎಂಬ ಅವಾಸ್ತವವಾದ ಭಾವನೆ ಛಂದಃಶಾಸ್ತ್ರಜ್ಞರೊಳಗೆ ಕೆಲವರಲ್ಲಿ ಆಶ್ರಯವನ್ನು ಪಡೆದುದಾಗಿದೆ. [ಕೆಲವು ಛಂದೋಗ್ರಂಥಗಳ ಸಂದರ್ಭವಿಶೇಷಗಳನ್ನು ಪರೀಕ್ಷಿಸಿದರೆ, ಆ ಗ್ರಂಥಕಾರರಲ್ಲಿದ್ದ ಈ ಭಾವನೆ ಸ್ಪಷ್ಟವಾಗುತ್ತದೆ. ಸಂಸ್ಕೃತದ ಅನೇಕ ಛಂದೋಗ್ರಂಥಗಳನ್ನು ಸಂಪಾದಿಸಿ ಪ್ರಕಟಪಡಿಸಿ ಆಧುನಿಕ ಛಂದೋಭಿಜ್ಞರಲ್ಲಿ ಮಹೋನ್ನತರೆಂದು ವಿಖ್ಯಾತರಾಗಿರುವ ಶ್ರೀ ವೇಲಣಕರ–ರಲ್ಲಿಯೂ ಈ ಮೇಲೆ ಹೇಳಿದ ಎರಡೂ ಭಾವನೆಗಳು ನೆಲೆಗೊಂಡಿರುವುದನ್ನು, ಅವರು ಸಂಪಾದಿಸಿರುವ ಒಂದು ಛಂದೋಗ್ರಂಥಸಮುಚ್ಚಯಕ್ಕೆ ಅವರು ಬರೆದಿರುವ ಪೀಠಿಕೆ (Jayadaman - Introduction)ಯಲ್ಲಿ ಕಾಣಬಹುದು.]

ಆನುಷಂಗಿಕವಾಗಿ ಇಲ್ಲಿ ಎರಡು ಮಾತುಗಳನ್ನು ಹೇಳಬಹುದಾಗಿದೆ: ನಮ್ಮ ಛಂದಃಶಾಸ್ತ್ರಗ್ರಂಥಗಳನ್ನು ಅವಲೋಕಿಸಿದರೆ, ಛಂದೋಬಂಧಗಳ ವಿಷಮತ್ವದ ಆಧಾರವಾಗಿ – ಕೆಲವೆಡೆಗಳಲ್ಲಿ ಪಾದಪರಿಮಾಣಗಳಲ್ಲಿ ಕಂಡುಬರುವ ಅಸಮಾನತೆಗಳನ್ನೂ, ಇನ್ನು ಕೆಲವೆಡೆಗಳಲ್ಲಿ ಪಾದಗಳ ಛಂದೋವಿನ್ಯಾಸಗಳಲ್ಲಿ ಕಂಡುಬರುವ ಅಸಮಾನತೆಗಳನ್ನೂ ಆ ಗ್ರಂಥಕರ್ತರು ಅವಲಂಬಿಸಿರುವಂತೆ ತೋರುತ್ತದೆ. ಅನುಷ್ಟುಪ್ ಶ್ಲೋಕವನ್ನು ವಿಷಮವೃತ್ತ ವರ್ಗಕ್ಕೆ ಕೆಲವರು ಸೇರಿಸಿರುವುದಕ್ಕೆ, ಅದರ ಪಾದಗಳ ಛಂದೋವಿನ್ಯಾಸಗಳಲ್ಲಿ ಸಮಾನತೆ ಇಲ್ಲದಿರುವುದೇ ಕಾರಣವಾಗಿದೆ ಹೊರತು, ಪಾದಪರಿಮಾಣಭೇದವಲ್ಲ. (ಏಕೆಂದರೆ, ಅನುಷ್ಟುಪ್ ಶ್ಲೋಕದ ನಾಲ್ಕು ಪಾದಗಳೂ ಸಮಾನಾಕ್ಷರಸಂಖ್ಯೆಯವಾಗಿದ್ದು ಕೇವಲ ಅಕ್ಷರ ಸಂಖ್ಯಾಗಣನೆಯೇ ಪಾದಪರಿಮಾಣನಿರ್ಣಯಸಾಧನವಾಗಿರುವ ಛಂದೋವರ್ಗದ ಬಂಧವು ಅದಾಗಿರುವುದರಿಂದ, ಪಾದಪರಿಮಾಣವನ್ನವಲಂಬಿಸಿ ವರ್ಗೀಕರಿಸಿದರೆ ಅದು ಸಮಚತುಷ್ಪದ ಪದ್ಯವರ್ಗದಲ್ಲಿ ಸೇರಬೇಕಾಗುತ್ತದೆ.) ಅನುಷ್ಟುಪ್ ಶ್ಲೋಕವನ್ನು ವಿಷಮವೃತ್ತವರ್ಗಕ್ಕೆ ಸೇರಿಸಿದ ವಿಧಾನವನ್ನು ಅನುಸರಿಸಿ ಎಲ್ಲಾ ಪದ್ಯಗಳ ಸಮತ್ವವಿಷಮತ್ವಗಳನ್ನು ನಿರ್ಧರಿಸತೊಡಗಿದರೆ – ಎಂದರೆ, ಪದ್ಯಗಳ ವಿಷಮತ್ವಕ್ಕೆ ಪಾದಗಳ ಪರಿಮಾಣಭೇದವನ್ನು ಆಧರಿಸದೆ, ಪಾದಗಳ ಛಂದೋವಿನ್ಯಾಸಭೇದವನ್ನು ಆಧರಿಸಿ ವಿಷಮತ್ವವನ್ನು ಆರೋಪಿಸತೊಡಗಿದರೆ – ಪಾದ ಪರಿಮಾಣಗಳು ಸಮನಾಗಿರಲಿ, ಇಲ್ಲದಿರಲಿ – ಗುರುಲಘುಸ್ಥಿರವಲ್ಲದ ಎಲ್ಲಾ ಪದ್ಯಗಳನ್ನೂ, (ಎಂದರೆ ಕಂದ ಇತ್ಯಾದಿಗಳನ್ನೂ) "ವಿಷಮವೃತ್ತ"ಗಳೆಂದೇ ಹೇಳಬೇಕಾದ ಪ್ರಸಂಗ ಬರುತ್ತದೆ! ತತ್ಪರಿಣಾಮವಾಗಿ ಅಕ್ಷರಬಂಧ, ಮಾತ್ರಾಬಂಧ ಇತ್ಯಾದಿ ವಿಭಜನೆಯೇ ಅರ್ಥ

ಸಂಸ್ಕೃತ(ಲೌಕಿಕ) ಭಾಷೆಯ ಸಹಜವಾದ ಅಕ್ಷರಗತಿಗೆ ಅನುಷ್ಟುಪ್ ಶ್ಲೋಕದಷ್ಟು ಹಿತವಾದ ಛಂದೋಬಂಧ ಬೇರಾವುದೂ ಇಲ್ಲ. ಈ ಛಂದೋಬಂಧವು, ವಿಶಾಲವಾದ ಸಂಸ್ಕೃತ (ಲೌಕಿಕ) ವಾಙ್ಮಯದ ಸುಮಾರು ಮುಕ್ಕಾಲು ಭಾಗವನ್ನೂ ತನ್ನಲ್ಲಿ ಒಳಕೊಂಡಿರುವುದಕ್ಕೆ ಇದುವೇ ಕಾರಣ. ಯಾವುದೊಂದು ಭಾಷೆಯ ಸಹಜವಾದ ಗತಿಗೆ, ಎಂದರೆ ಆ ಭಾಷೆಯ ಅಕೃತಕವಾದ ಗದ್ಯಗತಿಗೆ ಯಾವ ಛಂದೋಬಂಧದ ಅಕ್ಷರಗತಿ (= ಗುರುಲಘುವಿನ್ಯಾಸರೂಪ) ಸಮೀಪ-ತಮವಾಗಿರುವುದೋ ಆ ಛಂದೋಬಂಧವನ್ನೇ ಆಶ್ರಯಿಸಿ ಆ ಭಾಷೆಯ ಪದ್ಯ ಸಾಹಿತ್ಯದ ಅಧಿಕಾಂಶದ ನಿರ್ಮಿತಿಯಾಗುತ್ತದೆ. ಹೊಸಗನ್ನಡ ಪದ್ಯಸಾಹಿತ್ಯವೂ ಇದಕ್ಕೊಂದು ದೃಷ್ಟಾಂತವಾಗಿದೆ. ಈ ಶತಮಾನದಲ್ಲಿ ರಚಿತವಾದ ಕನ್ನಡ ಪದ್ಯ-ರಾಶಿಯಲ್ಲಿ 'ಪಂಚಕಲ' (= ಐದು ಮಾತ್ರೆಗಳ ಗಣ) ಬಂಧಗಳ ಪಾಲು ಬಲು ದೊಡ್ಡದು; ಅರ್ಧಾಂಶಕ್ಕಿಂತಲೂ ಅಧಿಕವಾದುದು. ಹೀಗಾಗಿರುವುದಕ್ಕೆ ಕಾರಣವು ಈ ಮೇಲೆ ಹೇಳಿದುದೇ ಆಗಿರುತ್ತದೆಂಬುದು – ಇಂದಿನ ಗದ್ಯದ ಅಕ್ಷರವಿನ್ಯಾಸ ಪ್ರಕಾರವನ್ನೂ ಪಂಚಕಲಬಂಧಗಳ ಅಕ್ಷರವಿನ್ಯಾಸಪ್ರಕಾರವನ್ನೂ ಹೋಲಿಸಿ ಪರೀಕ್ಷಿಸಿದಾಗ ಸುವ್ಯಕ್ತವಾಗುತ್ತದೆ. (ಹಳಗನ್ನಡ ಪದ್ಯಸಾಹಿತ್ಯದಲ್ಲಿ ಕಂದಪದ್ಯದ ಬಾಹುಳ್ಯವುಂಟಾದುದಕ್ಕೂ – ಆ ಛಂದೋಗತಿಗೂ ಆ ಭಾಷಾರೂಪದ ಅಕ್ಷರ-ಗತಿಗೂ ಇದ್ದ ಸಾಧರ್ಮ್ಯವೇ ಕಾರಣವಾಗಿರುತ್ತದೆ. ಹಳೆಯ ಭಾಷಾರೂಪದ ಪದಾಂತವ್ಯಂಜನಗಳೆಲ್ಲ ಸಸ್ವರವಾಗಿ ಮಾರ್ಪಟ್ಟುದರಿಂದ ಉಂಟಾದ ನಡುಗನ್ನಡವು ಕಂದವೃತ್ತಗಳನ್ನು ತ್ಯಜಿಸಿ ವಾರ್ಧಕಾದಿ ಷಟ್ಪದಿಗಳನ್ನಾಶ್ರಯಿಸಿ-ದುದಕ್ಕೂ ಆ ವೈಧರ್ಮ್ಯಸಾಧರ್ಮ್ಯಗಳೇ ಹೇತುಗಳಾಗಿವೆ.)

ಹಿಂದೊಮ್ಮೆ ಸೂಚಿಸಿರುವಂತೆ – ಲೌಕಿಕ ಸಂಸ್ಕೃತವು (ಅಕ್ಷರಗತಿಯ ತ್ರಿವಿಧರೂಪಗಳನ್ನೂ ಲೀಲಾಜಾಲವಾಗಿ ಸೃಜಿಸಬಲ್ಲ ವಿಚಿತ್ರಪದಸಂಪತ್ತಿಯುಳ್ಳ ಭಾಷೆಯಾದರೂ) ತನ್ನ ಸಹಜವೂ ಸಾಮಾನ್ಯವೂ ಆದ ರೂಪದಲ್ಲಿ ಗುರ್ವಕ್ಷರ ಪ್ರಾಬಲ್ಯವುಳ್ಳ ಮಧ್ಯಾಕ್ಷರಗತಿಯದಾಗಿರುತ್ತದೆ. ಅನುಷ್ಟುಪ್ ಶ್ಲೋಕದ ಅಕ್ಷರ-

---

ಹೀನವಾಗುತ್ತದೆ. (ವಸ್ತುತಃ, ಪಾದಗಳ ಛಂದೋವಿನ್ಯಾಸಸ್ವರೂಪಮೂಲವಾಗಿ ಸಮತ್ವ ವಿಷಮತ್ವಗಳನ್ನು ಹೇಳಹೊರಟರೆ, ಅವು ಗುರುಲಘುಸ್ಥಿರವಾದ ಛಂದೋಬಂಧಗಳಿಗೆ ಮಾತ್ರ ಅನ್ವಯಿಸಬಲ್ಲವೇ ಹೊರತು, ಗುರುಲಘುಸ್ಥಿರವಲ್ಲದ "ಜಾತಿಬಂಧ"ಗಳಿಗೆ – ಅವು ಅನುಷ್ಟುಪ್ ಶ್ಲೋಕದಂತೆ ಅಕ್ಷರಬಂಧಗಳಾಗಿರಲಿ, ಕಂದ ಮೊದಲಾದವುಗಳಂತೆ ಮಾತ್ರಾಬಂಧಗಳಾಗಿರಲಿ, ಅಥವಾ ಪಿರಿಯಕ್ಕರದಂತೆ ತ್ರಿಮೂರ್ತಿಗಣಬಂಧಗಳಾಗಿರಲಿ – ಅನ್ವಯಿಸತಕ್ಕವಾಗಲಾರವು.) ಆದುದರಿಂದ – ಪೂರ್ವಸೂಚಿತ ಛಂದಃಶಾಸ್ತ್ರವೇತ್ತರ ಹಾಗೂ ಗ್ರಂಥಕಾರರ ಅಭಿಪ್ರಾಯ ಹೇಗಾದರೂ ಆಗಿರಲಿ – ಗುರುಲಘುಸ್ಥಿರವಲ್ಲದ ಪದ್ಯಭೇದಗಳಿಗೂ ಅನ್ವಯಿಸಬಲ್ಲ ಸಮತ್ವ ಅರ್ಧಸಮತ್ವ ವಿಷಮತ್ವಗಳಿಗೆ ಪಾದಪರಿಮಾಣವೇ ಮಾನದಂಡವಾಗಿರಬೇಕಾಗುತ್ತದೆ. ಹಾಗಿದ್ದರೆ ಮಾತ್ರ ಸಮಚತುಷ್ಪದ, ಅರ್ಧಸಮಚತುಷ್ಪದ, ವಿಷಮಚತುಷ್ಪದ ಇತ್ಯಾದಿ ಛಂದೋವ್ಯವಹಾರವು ನಿಷ್ಕಂಟಕವಾಗುತ್ತದೆ.

ಗತಿಯೂ ಗುರುಪ್ರಾಬಲ್ಯವುಳ್ಳ ಮಧ್ಯಗತಿಯೇ ಆಗಿರುತ್ತದೆಂಬುದನ್ನು (ಅದು ಗುರುಲಘುಸ್ಥಿರವಲ್ಲದ ಛಂದೋಬಂಧವಾಗಿರುವುದರಿಂದ ಅದರ ಹಲವೆಡೆಗಳಲ್ಲಿ ಗುರುಲಘುಗಳು ಐಚ್ಛಿಕವಾಗಿ ಪ್ರಯುಕ್ತವಾಗುವವಾದರೂ) ಆ ಛಂದೋ-ಬಂಧದಲ್ಲಿ ಕಾಣಿಸಿಕೊಳ್ಳಬಲ್ಲ ಗುರುಲಘುಗಳ ಕನಿಷ್ಠ ಗರಿಷ್ಠ ಸಂಖ್ಯೆಗಳು ಪ್ರತ್ಯಕ್ಷೀಕರಿಸುತ್ತವೆ. ಇದು ಹೇಗೆಂದರೆ – (ಅರ್ಧಸಮರೂಪವನ್ನು ಪಡೆದಿರುವ) ಅನುಷ್ಟುಪ್ ಶ್ಲೋಕದ ಒಂದು ಅರ್ಧದಲ್ಲಿರುವ ಹದಿನಾರು (= ೮ + ೮) ಅಕ್ಷರಗಳೊಳಗೆ ಇರಬಹುದಾದ ಗುರ್ವಕ್ಷರಗಳ ಸಂಖ್ಯೆ ೧೩. ಆದರೆ ಅದರಲ್ಲಿರ-ಬಹುದಾದ ಲಘ್ವಕ್ಷರಗಳ ಸಂಖ್ಯೆ – ಪದ್ಯಾರ್ಧದ ಕೊನೆಯಲ್ಲಿ ಕರ್ಷಿತವಾಗಿ ಗುರುವಾಗುವ ಲಘ್ವಕ್ಷರವೂ ಕೂಡಿ–೧೧ ಮಾತ್ರ; ( ಅರ್ಥಾತ್ ಅದರಲ್ಲಿರ-ಬಹುದಾದ ಶುದ್ಧಲಘುಗಳ ಸಂಖ್ಯೆ ಕೇವಲ ೧೦) ಮತ್ತು, ಪದ್ಯಾರ್ಧದ ಕೊನೆ-ಯಲ್ಲಿ ಕರ್ಷಣದ ಫಲವಾಗಿ ಉಂಟಾಗುವ ಗುರುವಿನ ಹೊರತಾಗಿಯೂ – ಐದು (ಶುದ್ಧ) ಗುರ್ವಕ್ಷರಗಳಿಲ್ಲದೆ ಶ್ಲೋಕದ ಧಾಟಿ ಉನ್ಮೀಲಿತವಾಗುವುದಿಲ್ಲ. ಆದರೆ, ಶ್ಲೋಕಾರ್ಧದಲ್ಲಿ ಮೂರೇ ಲಘ್ವಕ್ಷರಗಳಿದ್ದರೂ ಸಾಕು, ಶ್ಲೋಕದ ಧಾಟಿ ಮೈಯ್ದುಂಬಿಕೊಳ್ಳುತ್ತದೆ. ಈ ತಥ್ಯಗಳು ಈ ಕೆಳಗಿನ ನಿರೂಪಣೆಯಿಂದ ಸುಸ್ಪಷ್ಟವಾಗಬಲ್ಲವು :

೧. ಗರಿಷ್ಠ ಗುರುಸಂಖ್ಯೆಯ ಶ್ಲೋಕಾರ್ಧದ ಛಂದೋರೂಪ:

— — — — ∪— — — । — — — — ∪— ∪—
ಗಂ ಗಂ ಗಂ ಗಂ ಲಗಂ ಗಂ ಗಂ । ಗಂ ಗಂ ಗಂ ಗಂ ಲಗಂ ಲಗಂ ॥

[ಗು ೧೩+ ಲ ೩]

೨. ಗರಿಷ್ಠ ಲಘುಸಂಖ್ಯೆಯ ಶ್ಲೋಕಾರ್ಧದ ಛಂದೋರೂಪ:

∪∪— ∪∪— —∪ । ∪∪— ∪∪— ∪∪
ಲಲಗಂ ಲಲಗಂ ಗಾಲ । ಲಲಗಂ ಲಲಗಂ ಲಲ* ॥

[ಲ (೧೦+೧) + ಗು ೫ ]

(*ಇದು ಇಲ್ಲಿ ಕರ್ಷಿತವಾಗಿ ಗುರುವಾಗುವ ಲಘು; ಶುದ್ಧ ಲಘುವಲ್ಲ.)

ಅನುಷ್ಟುಪ್ ಶ್ಲೋಕದಲ್ಲಿ ಅವ್ಯವಧಾನವಾಗಿ ಪ್ರಯುಕ್ತವಾಗಬಹುದಾದ ಗುರುಲಘುಗಳ ಸಂಖ್ಯೆಯೂ ಅದರ ಗುರುಪಕ್ಷಪಾತವನ್ನೇ ಪ್ರಕಟಿಸುತ್ತದೆ. ಅದರ ಯಾವ ಪಾದವಾದರೂ ಕೇವಲ ಗುರ್ವಕ್ಷರಗಳಿಂದಲೇ ನಿರ್ಮಿತವಾಗುವಂತಿಲ್ಲ-ವಾದರೂ, (ಅದರ ಓಜಪಾದಗಳಲ್ಲಿ ಒಂದಾದರೂ ಲಘುವಿರಲೇಬೇಕಾಗುತ್ತದೆ; ಯುಕ್ಪಾದಗಳಲ್ಲಿ ಎರಡು ಲಘುಗಳು – ನಿಶ್ಚಿತಸ್ಥಾನಗಳಲ್ಲಿ – ಕಡ್ಡಾಯವಾಗಿ ಇರ-ಬೇಕಾಗುತ್ತವೆ.) ನಾಲ್ಕು ಗುರ್ವಕ್ಷರಗಳು ಯಾವ ಪಾದದಲ್ಲಾದರೂ ಅವ್ಯವ-ಧಾನವಾಗಿ ಪ್ರಯುಕ್ತವಾಗುವುದಕ್ಕೆ ಅಡ್ಡಿಯೇನೂ ಇಲ್ಲ. [ಆದರೆ ಅವ್ಯವಧಾನ-ವಾಗಿ ಪ್ರಯುಕ್ತವಾಗಬಹುದಾದ ಲಘ್ವಕ್ಷರಗಳ ಸಂಖ್ಯೆ (ಕ್ವಚಿತ್ ಓಜಪಾದಗಳ ಉತ್ತರಾರ್ಧದಲ್ಲಿ ಮಾತ್ರ ಬರಬಹುದಾದ ಮೂರರ ಹೊರತು) ಎರಡಕ್ಕಿಂತ

ಅಧಿಕವಾಗಿ ಇರುವುದಕ್ಕಾಗುವುದಿಲ್ಲ.][88] ಹೀಗೆ, ಇತರ ಯಾವ ಛಂದೋಬಂಧ- ದಲ್ಲಿಯೂ ದೊರೆಯದಿರುವಷ್ಟು ಪದರಚನಾಸೌಲಭ್ಯವು ಎಂದರೆ ಪದ- ಸಂಘಟನಾಸ್ವಾತಂತ್ರ್ಯವು ಈ ಛಂದೋಬಂಧದಲ್ಲಿ ದೊರೆಯುವುದಾದರೂ – ಮೂರೋ, ನಾಲ್ಕೋ ಲಘ್ವಕ್ಷರಗಳು ವ್ಯವಧಾನರಹಿತವಾಗಿ ಇರುವ ಪದಗಳ ಆಧಿಕ್ಯವುಳ್ಳ ಭಾಷೆಗಳಲ್ಲಿ ಈ ಛಂದೋಬಂಧವನ್ನು ಬಳಸುವುದು ಕಷ್ಟಸಾಧ್ಯ-

---

88. ಅನುಷ್ಟುಪ್ ಶ್ಲೋಕದ ಓಜಪಾದಗಳ ಉತ್ತರಾರ್ಧದಲ್ಲಿ ಮೂರು ಲಘ್ವಕ್ಷರಗಳು ಅವ್ಯವಧಾನವಾಗಿ ಪ್ರಯುಕ್ತವಾಗುವುದುಂಟಾದರೂ – ಅಂತಹ ಪ್ರಯೋಗಕ್ಕೆ ವಿಶಿಷ್ಟ- ವಾದೊಂದು ಸಂನಿವೇಶದ ಅವಶ್ಯಕತೆ ಇರುತ್ತದೆ. ಅದೇನೆಂದರೆ – ಆ ಮೂರು ಲಘ್ವಕ್ಷರ- ಗಳುಳ್ಳ ಭಾಗದ ಮುಂದಿನ ಅಕ್ಷರವು – ಎಂದರೆ ಆ ಓಜಪಾದದ ಕೊನೆಯ ಅಕ್ಷರವು ಸಹಜಗುರುವೇ ಆಗಿರಬೇಕು ಹೊರತು, ಪಾದಾಂತಕರ್ಷಣದಿಂದ ರೂಪುಗೊಳ್ಳುವ ಗುರು- ವಾಗಿರಬಾರದು; ಮತ್ತು ಆ ಪಾದದ ಪೂರ್ವಾರ್ಧದ ಕೊನೆಯ ಎರಡು ಅಕ್ಷರಗಳು, ಕನಿಷ್ಠ ಪಕ್ಷದಲ್ಲಿ ಕೊನೆಯದೊಂದಾದರೂ, ಗುರುವೇ ಆಗಿರಬೇಕು; ಅರ್ಥಾತ್, ಆ ಓಜಪಾದದ ೪ ಮತ್ತು ೮ನೇ ಅಕ್ಷರಗಳು ಗುರುಗಳೇ ಆಗಿರಬೇಕು. ಸಂನಿವೇಶವು ಹೀಗಿದ್ದರೆ ಮಾತ್ರ ೫, ೬, ೭ – ಈ ಮೂರು ಅಕ್ಷರಗಳು ಲಘುಗಳಾಗಿರಬಹುದಾಗುತ್ತದೆ; ಹಾಗಿಲ್ಲದಿದ್ದರೆ ಶ್ಲೋಕದ ಗತಿಗೆ ಭಂಗಬರುತ್ತದೆ. ಈ ತಥ್ಯಗಳನ್ನು ಈ ಮುಂದಿನ ಉದಾಹರಣಗಳು ಮನವರಿಕೆ ಮಾಡಿಕೊಡಬಲ್ಲವು;

(೧) ತಪಃಸ್ವಾಧ್ಯಾಯನಿರತಂ । ತಪಸ್ವೀ ವಾಗ್ವಿದಾಂ ವರಂ ॥
ನಾರದಂ ಪರಿಪಪ್ರಚ್ಛ । ವಾಲ್ಮೀಕಿರ್ಮುನಿಪುಂಗವಂ ॥ . ॥

(ಶ್ರೀಮದ್ರಾಮಾಯಣ, ೧-೧)

(೨) ಸ್ವೇಸ್ವೇ ಕರ್ಮಣ್ಯಭಿರತಃ । ಸಂಸಿದ್ಧಿಂ ಲಭತೇ ನರಃ ॥
ಸ್ವಕರ್ಮನಿರತಃ ಸಿದ್ಧಿಂ । ಯಥಾ ವಿಂದತಿ ತಚ್ಛೃಣು ॥ . ॥

(ಶ್ರೀಮದ್ಭಗವದ್ಗೀತಾ, ೧೮-೪೫)

ಸಂನಿವೇಶವು ಈ ಮೇಲಿನಂತಿಲ್ಲದಿದ್ದಾಗ ಓಜಪಾದದ ೫, ೬, ೭ನೆಯ ಅಕ್ಷರಗಳು ಲಘುಗಳಾದರೆ, ಶ್ಲೋಕದ ಗತಿಗೆ ಭಂಗವುಂಟಾಗುತ್ತದೆ. ಉದಾ:

(೩) ಪತ್ರಂ ಪುಷ್ಪಂ ಫಲಂ ತೋಯಂ । ಯೋ ಮೇ ಭಕ್ತ್ಯಾ ಪ್ರಯಚ್ಛತಿ ॥
ತದಹಂ ಭಕ್ತ್ಯುಪಹೃತ* । ಮಶ್ನಾಮಿ ಪ್ರಯತಾತ್ಮನಃ ॥ . ॥

(ಶ್ರೀಮದ್ಭಗವದ್ಗೀತಾ, ೯-೨೬)

[* ಈ ಪಾದದ ೮ನೆಯ ಅಕ್ಷರವು (ಸಹಜ) ಗುರುವಲ್ಲ. ಆದರೆ ಇಲ್ಲಿ ಸಂಧಿ ವಿಂಗಡಿಸಿ, ಈ ಶ್ಲೋಕಾರ್ಧವನ್ನು – "ತದಹಂ ಭಕ್ತ್ಯುಪಹೃತಂ । ಅಶ್ನಾಮಿ ಪ್ರಯತಾತ್ಮನಃ ॥" ಎಂದು ಪಠಿಸಿದರೆ ಗತಿಭಂಗವು ಪರಿಹೃತವಾಗುತ್ತದೆ. ಪಾದಾಂತದಲ್ಲಿ ಸಂಧಿಕಾರ್ಯವು ಐಚ್ಛಿಕವಾಗಿರುವುದರಿಂದ ಹೀಗೆ ವಿಂಗಡಿಸಿ ಪಠಿಸುವುದರಲ್ಲಿ ಯಾವ ದೋಷವೂ ಇರುವುದಿಲ್ಲ. ವಸ್ತುಸ್ಥಿತಿ ಹೀಗಿರುವುದರಿಂದ – ಮೂಲತಃ ಅದು ಹಾಗೆ ವಿಭಕ್ತವಾಗಿಯೇ ಇದ್ದಿರಬೇಕೆಂದೂ, ಮುಂದೆ ಲಿಪಿಕಾರರು ಆ ಪೂರ್ವಪಾದಾಂತ್ಯವನ್ನು ಉತ್ತರಪಾದಾದಿಗೆ ಸಂಧಿಸಿದ್ದಿರಬೇಕೆಂದೂ ಊಹಿಸಿದರೆ ತಪ್ಪಾಗಲಾರದೆಂದು ನನಗೆ ತೋರುತ್ತದೆ.]

ವಾದೊಂದು ಕೆಲಸವಾಗಿ ಪರಿಣಮಿಸುತ್ತದೆ. ಕನ್ನಡದಲ್ಲಿ – ನಡುಗನ್ನಡ ಹೊಸಗನ್ನಡಗಳಿಗಿಂತ ಅಧಿಕಗುರುಸೌಲಭ್ಯವಿರುವ ಹಳಗನ್ನಡದಲ್ಲಿ ಸಹ –ಅನುಷ್ಟುಪ್ ಶ್ಲೋಕವು ಅಪೂರ್ವವಾಗಿರುವುದಕ್ಕೆ ಇದುವೇ ಕಾರಣವಾಗಿದೆ.[89] ಸಂಸ್ಕೃತಸಾಹಿತ್ಯ-ವಾದರೆ ಸಹಜವಾಗಿ ಈ ಛಂದೋಬಂಧದಲ್ಲಿರುವ ರಚನಾಸೌಲಭ್ಯವನ್ನು ಯಥೇಚ್ಛವಾಗಿ ಉಪಯೋಗಿಸಿಕೊಂಡಿದೆ. ಪದಗಳು ಬಿಡಿ ಬಿಡಿಯಾಗಿರುವ ರಚನೆಗೆ ಹೇಗೆ ಈ ಬಂಧವು ಹಿತವಾಗಿ ತನ್ನ ಮೆಯ್ಯೊಪ್ಪಿಸುತ್ತದೆಯೋ, ಹಾಗೆಯೇ – ಪದ್ಯಾರ್ಧವನ್ನೆಲ್ಲ ಆಕ್ರಮಿಸಿಕೊಳ್ಳುವ ದೀರ್ಘ ಸಮಾಸರಚನೆ-ಯನ್ನೂ ಸುಖವಾಗಿ ಆಲಿಂಗಿಸಿಕೊಳ್ಳುತ್ತದೆ. ಉದಾ :

(a) ಅಸಮಸ್ತಪದನ್ಯಾಸಕ್ಕೆ –

೧) ಅಕಿಂಚನಸ್ಯ ದಾಂತಸ್ಯ । ಶಾಂತಸ್ಯ ಸಮಚೇತಸಃ ॥
ಸದಾ ಸಂತುಷ್ಟಮನಸಃ । ಸರ್ವಾಃ ಸುಖಮಯಾ ದಿಶಃ ॥ . ॥

['ಸಂತುಷ್ಟಮನಸಃ' ಮತ್ತು 'ಸಮಚೇತಸಃ' ಎಂಬವು ಮಾತ್ರ ಈ ಪದ್ಯದಲ್ಲಿರುವ (ಹಗುರವಾದ) ಸಮಸ್ತಪದಗಳು.]

೨) ಕಲ್ಯಾಣೀ ಬತ ಗಾಥೇಯಂ । ಲೌಕಿಕೀ ಪ್ರತಿಭಾತಿ ಮಾ ॥
ಏತಿ ಜೀವಂತಮಾನಂದೋ । ನರಂ ವರ್ಷಶತಾದಪಿ ॥ . ॥

( ಶ್ರೀಮದ್ರಾಮಾಯಣ)

---

89. {ಕನ್ನಡದಲ್ಲಿ ಅನುಷ್ಟುಪ್ ಪ್ರಯೋಗ} ಹಳಗನ್ನಡ ಗ್ರಂಥಗಳೊಳಗೆ ಕವಿರಾಜಮಾರ್ಗ-ದಲ್ಲೇನೋ ಕೆಲವು ಅನುಷ್ಟುಪ್ ಶ್ಲೋಕಗಳು ಕಣ್ಣಿಗೆ ಬೀಳುತ್ತವೆ. ಹೊಸಗನ್ನಡದಲ್ಲಿ, ಕೀರ್ತಿಶೇಷ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಈ ಪ್ರಯತ್ನ ಮಾಡಿದ್ದೂ ಕಂಡುಬರುತ್ತದೆ. ಅವರು ತಮ್ಮ "ಹಗಲಿರುಳು" ಎಂಬ ತಾತ್ತ್ವಿಕವಾದೊಂದು ನಾಟಕದಲ್ಲಿ (ಅವರೇ ಸಂಪಾದಿಸಿ ಪ್ರಕಟಿಸುತ್ತಿದ್ದ "ಕನ್ನಡ ಕೋಗಿಲೆ" ಎಂಬ ಮಾಸಪತ್ರಿಕೆಯಲ್ಲಿ ಈ ಶತಮಾನದ ಎರಡನೆಯ ದಶಕದಲ್ಲಿ ಅದು ಪ್ರಕಾಶಿತವಾಗಿತ್ತು.) ಅದರ ಸೂತ್ರಧಾರನಾದ ಕಾಲಪುರುಷನಿಂದ ಈ ಎರಡು ಶ್ಲೋಕಗಳನ್ನು ನುಡಿಸಿರುತ್ತಾರೆ:

U U –  U U –  – U  U U – U U – U –
ಹಗಲೂ ಇರುಳೂ ತಾವು । ತಿರುಗುತ್ತಿರುವಂದದಿ* ॥
U U –  – U –  – U  – U – U U – U –
ಸುಖವೂ ದುಃಖವೂ ಮೇಲೆ । ಮೇಲೆ ಬಪ್ಪುದು ಮಂದಿಗೆ* ॥ ೧ ॥
– U –  – U –  – U  U – – U U – U –
ಎಲ್ಲಕೂ ಕರ್ತೃವಾ ದೇವ । ನದಕ್ಕಾನು ನಿಮಿತ್ತವೈ ॥
– U – U U –  – U  – –  – U U – U –
ಸೂಜಿ ಚಿಪ್ಪಿಗನೊಪ್ಪಿಂದೆ । ನೂಲಂ ಬಟ್ಟೆಯೊಳೊಯ್ವವೋಲ್ ॥ ೨ ॥

(*ಗತಿವಿಶ್ರಾಂತಿಸ್ಥಾನವಾದುದರಿಂದ, ಇಲ್ಲಿರುವುದು ಲಘ್ವಕ್ಷರವಾದರೂ ಗುರುವೆಂದು ಗೃಹೀತವಾಗುತ್ತದೆ.)

ಪ್ರಯೋಗಶೀಲರಾಗಿದ್ದ ಅವರು ಅನುಷ್ಟುಪ್ ಶ್ಲೋಕವನ್ನು ಹೊಸಗನ್ನಡ-ನುಡಿಗಳಲ್ಲಿಯೇ ರಚಿಸುವ ಪ್ರಯತ್ನ ಮಾಡಿದ್ದಕ್ಕೂ, ಆ ಪ್ರಯತ್ನದಲ್ಲಿ ಸಾಫಲ್ಯವು ದೂರವಾಗಿ ಕಂಡುಬಂದು, ನಡುಗನ್ನಡರೂಪಗಳ ನೆರವನ್ನು ಮಾತ್ರವಲ್ಲ – ಕೊನೆಗೆ ಹಳಗನ್ನಡ ರೂಪಗಳ ನೆರವನ್ನು ಸಹ ಪಡೆದುಕೊಂಡುದಕ್ಕೂ ಈ ಶ್ಲೋಕಗಳು ಸಾಕ್ಷಿಗಳಾಗಿವೆ.

[ಇದರಲ್ಲಿ 'ವರ್ಷಶತಾತ್' ಎಂಬುದು ಮಾತ್ರ ಕಿರಿಯದೊಂದು ಸಮಸ್ತಪದ.]

೩) ಸ್ನೇಹಂ ದಯಾಂ ಚ ಸೌಖ್ಯಂ ಚ । ಯದಿ ವಾ ಜಾನಕೀಮಪಿ ॥
ಆರಾಧನಾಯ ಲೋಕಸ್ಯ । ಮುಂಚತೋ ನಾಸ್ತಿ ಮೇ ವ್ಯಥಾ ॥ . ॥
(ಭವಭೂತಿ, ಉತ್ತರರಾಮಚರಿತ)

[ಇದರಲ್ಲಿ ಸಮಾಸಪದ ಒಂದೂ ಇಲ್ಲ.]

(b) ದೀರ್ಘಸಮಾಸಕ್ಕೆ–

೧) ದಿಕ್ಕಾಲಾದ್ಯನವಚ್ಛಿನ್ನಾ । ನಂತಚಿನ್ಮಾತ್ರಮೂರ್ತಯೇ ॥
ಸ್ವಾನುಭೂತ್ಯೇಕಮಾನಾಯ । ನಮಃ ಶಾಂತಾಯ ತೇಜಸೇ ॥ . ॥
(ಭರ್ತೃಹರಿ, ನೀತಿಶತಕ – ೧)

[ಇದರ ಪೂರ್ವಾರ್ಧವೆಲ್ಲವೂ ಒಂದು ಸಮಸ್ತಪದ.]

೨) ನಮಸ್ತುಂಗಶಿರಶ್ಚುಂಬಿ । ಚಂದ್ರಚಾಮರಚಾಮರವೇ ॥
ತ್ರೈಲೋಕ್ಯನಗರಾರಂಭ । ಮೂಲಸ್ತಂಭಾಯ ಶಂಭವೇ ॥ . ॥
(ಬಾಣ, ಹರ್ಷಚರಿತ)

[ಇದರ ಪೂರ್ವಾರ್ಧದಲ್ಲಿ 'ನಮಃ' ಎಂಬುದೊಂದನ್ನುಳಿದು, ಬೇರೆಲ್ಲವೂ ಒಂದು ಸಮಸ್ತಪದ; ಉತ್ತರಾರ್ಧದಲ್ಲಿ 'ಶಂಭವೇ' ಎಂಬುದೊಂದು ಹೊರತಾಗಿ ಉಳಿದುದೆಲ್ಲ ಒಂದೇ ಸಮಸ್ತಪದ.]

ವೃತ್ತಗಳಿಗೆ ಹೇಗೋ ಹಾಗೆ ಅನುಷ್ಟುಪ್ ಶ್ಲೋಕಕ್ಕೂ ಅಕ್ಷರಸಂಖ್ಯಾ ನಿಯಮವಿರುವುದಾದರೂ, ಅವುಗಳಲ್ಲಿರುವ ಗುರುಲಘುಸ್ಥಿರತೆ –ಯುಕ್ಪಾದಗಳ ಉತ್ತರಾರ್ಧದಲ್ಲಿ ಹೊರತು – ಇದರಲ್ಲಿ ಬೇಕಾಗದಿರುವುದೂ, ತತ್ಪರಿಣಾಮವಾಗಿ – ಇದರ ಪಾದಗಳಿಗೆ ಅತಏವ ಈ ಪದ್ಯಕ್ಕೆ (ವೃತ್ತಗಳಲ್ಲಿಯೂ ಮಾತ್ರಾಬಂಧ–ಗಳಲ್ಲಿಯೂ ಇರುವಂತಹ) ಮಾತ್ರಾಸಂಖ್ಯಾಪರಿಮಿತಿಯ ನಿರ್ಬಂಧವು ಇಲ್ಲದಾ–ಗುವುದೂ ಇದರಲ್ಲಿರುವ ಅನ್ಯಾದೃಶವಾದ ರಚನಾಸೌಲಭ್ಯಕ್ಕೆ ಕಾರಣವಾಗಿದೆ. (ಮಾತ್ರಾಪರಿಮಿತಿ ಇಲ್ಲದಿರುವುದರಿಂದ, ಈ ಛಂದೋಬಂಧದ ಪಾದಗಳು ಐಚ್ಛಿಕವಾಗಿ ದೀರ್ಘವೋ ಹ್ರಸ್ವವೋ ಆಗುತ್ತವೆ.)

ಈ ಹಿಂದೆ ನಿದರ್ಶಿಸಿರುವ ಗರಿಷ್ಠ ಕನಿಷ್ಠ ಗುರುಲಘುಸಂಖ್ಯೆಗಳ ಶ್ಲೋಕಬಂಧಸ್ವರೂಪಗಳಿಂದ ತಿಳಿದುಕೊಳ್ಳಬಹುದಾದಂತೆ – ಇದರ ಓಜಪಾದ–ಗಳ ಮಾತ್ರಾಸಂಖ್ಯೆಯ ಗರಿಷ್ಠಮಿತಿ ೧೫; ಯುಕ್ಪಾದಗಳದು ೧೪. ಓಜಪಾದಗಳ ಮಾತ್ರಾಸಂಖ್ಯೆಯ ಕನಿಷ್ಠಮಿತಿ ೧೧, ಮತ್ತು ಯುಕ್ಪಾದಗಳದು –ಪಾದಾಂತ–ಗಳಲ್ಲಿರಬಹುದಾದ ಲಘುಗಳಿಗೆ ಗುರುತ್ವಾರೋಪ ಮಾಡಿದಾಗ – ೧೧; (ಯಥಾಕ್ಷರವಾಗಿ ೧೦). ಹೀಗೆ – ಒಂದು ಶ್ಲೋಕದ ಮಾತ್ರಾಸಂಖ್ಯೆ ೫೮ರ ವರೆಗೂ ಏರಬಹುದು; ೪೪ರ ವರೆಗೂ (ಯಥಾಕ್ಷರವಾಗಿ ೪೨ರ ವರೆಗೂ) ಇಳಿಯಬಹುದು. ಉಚ್ಚಾರಕಾಲಪರಿಮಾಣದಲ್ಲಿ ಇಷ್ಟು ವ್ಯತ್ಯಾಸವಿರು–

ವಂತಿದ್ದರೂ – ಉಕ್ತಪರಿಮಿತಿಗಳೊಳಗೆ ಯಥಾಕ್ಷರಗುರುಲಘುವಾಗಿಯೇ ಪಠಿ–ಸಲ್ಪಡುವ ೩೨ ಅಕ್ಷರಗಳ ಸಮುದಾಯವಾಗಿರುವ ಮತ್ತು ವಿಭಿನ್ನಕಾಲಪರಿ–ಮಾಣದ ಹಾಗೂ ವಿಭಿನ್ನಗುರುಲಘುವಿನ್ಯಾಸದ ಈ ವಿಷಮಗತಿಬಂಧದ ನಾನಾ ಶ್ಲೋಕಗಳೊಳಗೆ ಸಮಾನವೆಂದೇ ಭಾಸವಾಗುವ 'ಧಾಟಿ'ಯೊಂದು ಆವಿರ್ಭವಿಸಿ ನೆಲೆಗೊಂಡಿರುವುದು ಅನಿರ್ವಚನೀಯವೂ ವಿಸ್ಮಯಾವಹವೂ ಆದೊಂದು ಗತಿ–ತತ್ತ್ವರಹಸ್ಯವಾಗಿದೆ.[90]

---

90. {ವೈದಿಕ ಅನುಷ್ಟುಪ್ ಛಂದವಿಚಾರ} 'ಅನುಷ್ಟುಪ್ ಶ್ಲೋಕ"ದ ಪೂರ್ವರೂಪಗಳಾದ ವೈದಿಕ "ಅನುಷ್ಟುಪ್ ಛಂದ"ಗಳಲ್ಲಿ ವ್ಯವಸ್ಥಿತವೆನ್ನಬಹುದಾದ ಛಂದೋವಿನ್ಯಾಸವಿರುವು–ದಿಲ್ಲವಾದ ಕಾರಣ – ಸಮಾನವಾದ ಯಾವುದೊಂದು ಧಾಟಿಯನ್ನು ಆ 'ಛಂದ'ಗಳಲ್ಲಿ (ಸಾಮಾನ್ಯವಾಗಿ) ಕಾಣುವಂತಿಲ್ಲ; ಮಾತ್ರವಲ್ಲ, ಅವುಗಳ ಪಾದಾಕ್ಷರಸಂಖ್ಯೆಗಳಲ್ಲಿಯೂ ಭಿನ್ನತೆ ಇರುವುದುಂಟು. ಉದಾ:

ಸಮಾನೀ ವ ಆಕೂತಿಃ । (೭)
ಸಮಾನಾ ಹೃದಯಾನಿ ವಃ ॥ (೮)*
ಸಮಾನಮಸ್ತು ವೋ ಮನಃ । (೮)
ಯಥಾ ವಃ ಸುಸಹಾ_ಸತಿ ॥ . ॥ (೮)*
(ಋಗ್ವೇದ, ೧೦-೧೯೧-೪)

ಪುರುಷ ಏವೇದಂ ಸರ್ವಂ । (೮)
ಯದ್ಭೂತಂ ಯಚ್ಚ ಭವ್ಯಂ ॥ (೭)
ಉತಾಮೃತತ್ವಸ್ಯೇಶಾನಃ । (೮)
ಯದನ್ನೇನಾತಿ ರೋಹತಿ ॥ (೮)*
(ಪುರುಷಸೂಕ್ತ ; ಋಗ್ವೇದ, ೧೦-೯೦-೨)

"ಅನುಷ್ಟುಪ್‌ಛಂದ"ಕ್ಕೆ "ಗಾಯತ್ರೀಚ್ಛಂದ"ವು ಮೂಲವೆಂದು ತಿಳಿಯಲ್ಪಟ್ಟಿರುತ್ತದೆ. ಗಾಯತ್ರೀ–ಚ್ಛಂದಕ್ಕೆ (ಅಷ್ಟಾಕ್ಷರ) ಪಾದಗಳು ಮೂರು; 'ಅನುಷ್ಟುಪ್ ಛಂದ'ಕ್ಕೆ ನಾಲ್ಕು – ಇವುಗಳೊಳಗಿನ ವ್ಯತ್ಯಾಸ ಇಷ್ಟೇ. ಅನುಷ್ಟುಪ್ ಛಂದದಲ್ಲಿ ಹೇಗೋ ಹಾಗೆ – ಗಾಯತ್ರೀಚ್ಛಂದದಲ್ಲಿಯೂ ವ್ಯವಸ್ಥಿತವಾದ ಛಂದೋವಿನ್ಯಾಸವಾಗಲಿ, ಸಾರ್ವತ್ರಿಕವಾಗಿ ಪಾದಾಕ್ಷರಸಮತೆಯಾಗಲಿ ಇರುವುದಿಲ್ಲ. ಉದಾ:

ಸ ನಃ ಪಿತೇವ ಸೂನವೇ । (೮)
ಅಗ್ನೇ ಸೂಪಾಯನೋ ಭವ ॥ (೮)*
ಸಚಸ್ವಾನಃ ಸ್ವಸ್ತಯೇ ॥ . ॥ (೭)
(ಋಗ್ವೇದ, ೧-೧-೯)

ತ್ರೀಣಿ ಪದಾ ವಿಚಕ್ರಮೇ । (೮)
ವಿಷ್ಣುರ್ಗೋಪಾ ಅದಾಭ್ಯಃ ॥ (೭)
ಅತೋ ಧರ್ಮಾಣಿ ಧಾರಯನ್ ॥ . ॥ (೮)*
(ವಿಷ್ಣುಸೂಕ್ತ; ಋಗ್ವೇದ, ೧-೨೨-೧೮)

**{ಉಪಜಾತಿ ಛಂದೋಬಂಧಗಳ ಗತಿವಿಚಾರ}**

ಛಂದೋಗ್ರಂಥಗಳಲ್ಲಿ ಲಕ್ಷಣ ಹೇಳಲ್ಪಟ್ಟಿರುವ "ಜಾತಿಗಾಥ" ಎಂಬುದು ಆರು ಪಾದಗಳ ಅನುಷ್ಟುಪ್ ಶ್ಲೋಕ – ಎಂದರೆ "ಒಂದೂವರೆ ಶ್ಲೋಕ"ವೇ ಹೊರತು ಬೇರೇನೂ ಅಲ್ಲ. ಇದು ರಾಮಾಯಣ ಮಹಾಭಾರತಾದಿ ಪುರಾತನ ಗ್ರಂಥಗಳಲ್ಲಿ ಅನುಷ್ಟುಪ್ ಶ್ಲೋಕಗಳೊಡನೆ ಒಂದೊಂದೆಡೆಯಲ್ಲಿ ಕಂಡುಬರುತ್ತದೆ. 'ವಿಜಾತಿಗಾಥೆ' ಎಂಬುದೂ ಅನುಷ್ಟುಪ್ ಶ್ಲೋಕದ ಒಂದು ವಿಕೃತಿಯಾಗಿದ್ದು, ಛಂದೋಗ್ರಂಥಗಳಲ್ಲಿ ಹೊರತು ಕಾವ್ಯಾದಿಗಳಲ್ಲಿ ದುರ್ಲಭ. ಇವೆರಡಲ್ಲದೆ ಅನು-ಷ್ಟುಪ್ ಶ್ಲೋಕದ ವಿಸ್ತರಣವಾಗಿರುವ "ಪದಚತುರೂರ್ಧ್ವ" ಎಂಬೊಂದು "ಅಕ್ಷರ ಜಾತಿ"ಯ ನಾನಾರೂಪಗಳು ಛಂದೋಗ್ರಂಥಗಳಲ್ಲಿ ಲಕ್ಷಿತವಾಗಿದ್ದರೂ, ಕಾವ್ಯಾದಿ-ಗಳಲ್ಲಿ ಪ್ರಸಿದ್ಧವಾಗಿಲ್ಲ. ಆದುದರಿಂದ, ಈ ಕೆಲವು ಅಕ್ಷರಜಾತಿಗಳ ಗತಿಸ್ವರೂಪ ಪರಾಮರ್ಶವು ಅಪ್ರಸ್ತುತವಲ್ಲದಿದ್ದರೂ ಅನವಶ್ಯವೆನ್ನಲಡ್ಡಿಯಿಲ್ಲ. ಇನ್ನು – ಸಂಸ್ಕೃತ ಕಾವ್ಯಾದಿಗಳಲ್ಲಿ ಸುಪ್ರಸಿದ್ಧವಾಗಿರುವ "ಉಪಜಾತಿ" ಎಂಬ ಹೆಸರಿನ ಛಂದೋ ಬಂಧಗಳು, "ಏಕದೇಶಸ್ಥಿರಾ ಜಾತಿಃ" ಎಂಬ ಲಕ್ಷಣಾನುಗುಣವಾಗಿ ಹೇಳುವು-ದಾದರೆ, 'ಅಕ್ಷರಜಾತಿ' ವರ್ಗದವೆನ್ನಬೇಕಾಗುವುದಾದರೂ (ಟಿಪ್ಪಣಿ 20 ನೋಡಿರಿ) ಅವುಗಳ ಪಾದಗಳೆಲ್ಲವೂ ಆ ಅಕ್ಷರಸಂಖ್ಯೆಯ ಯಾವುದೊಂದು 'ಸಮವೃತ್ತ'ದ ಪಾದಗಳಾಗಿರುವುದರಿಂದ, ಅವನ್ನು "ಮಿಶ್ರವೃತ್ತ"ಗಳೆಂದೂ ಹೆಸರಿಸಬಹು-ದಾಗಿದೆ. ಅಂಥವುಗಳೊಳಗೆ ಅತ್ಯಂತ ಪ್ರಸಿದ್ಧವಾದ ಛಂದೋಬಂಧವು 'ಇಂದ್ರ ವಜ್ರ' ಮತ್ತು 'ಉಪೇಂದ್ರವಜ್ರ' ಎಂಬೆರಡರ ಮಿಶ್ರಣ ರೂಪವಾಗಿದೆ. ಉದಾ:

– – ∪ – – ∪ ∪ – ∪ – –
ಲಾಂಗೂಲವಿಕ್ಷೇಪವಿಸರ್ಪಿಶೋಭೈಃ ।
∪ – ∪ – – ∪ ∪ – ∪ – –
ಇತಸ್ತತಶ್ಚಂದ್ರಮರೀಚಿಗೌರೈಃ ॥
– – ∪ – – ∪ ∪ – ∪ – –
ಯಸ್ಯಾರ್ಥಯುಕ್ತಂ ಗಿರಿರಾಜಶಬ್ದಂ ।
– – ∪ – – ∪ ∪ – ∪ – –
ಕುರ್ವಂತಿ ವಾಲವ್ಯಜನೈಶ್ಚಮರ್ಯಃ ॥ . ॥

(ಕಾಲಿದಾಸ, ಕುಮಾರಸಂಭವ. ೧–೧೩)

---

[*ಈ ಗುರುತು ಹಾಕಿರುವ ಪಾದಗಳಲ್ಲಿ ಲೌಕಿಕಶ್ಲೋಕಗಳ ಯುಕ್ಪಾದದ 'ಬಿಂಬ'ಗಳನ್ನು ಕಾಣಬಹುದಾಗಿದೆ. ಎಲ್ಲಿಯಾದರೊಮ್ಮೆ ಲೌಕಿಕಶ್ಲೋಕದ ಪೂರ್ಣಬಿಂಬವು ವೈದಿಕ ಅನುಷ್ಟುಪ್ ಛಂದದಲ್ಲಿ ಕಂಡುಬರುವುದೂ ಉಂಟು. ಉದಾ:

∪ – ∪ – – ∪ ∪ –
ಸಹಸ್ರಶೀರ್ಷಾ ಪುರುಷಃ ।
∪ – – – ∪ – ∪ –
ಸಹಸ್ರಾಕ್ಷಃ ಸಹಸ್ರಪಾತ್ ॥
∪ – – – ∪ –
ಸ ಭೂಮಿಂ ವಿಶ್ವತೋ ವೃತ್ವಾ ।
– ∪ – – ∪ – ∪ –
ಅತ್ಯತಿಷ್ಠತ್ ದಶಾಂಗುಲಂ ॥ . ॥

(ಪುರುಷಸೂಕ್ತ; ಋಗ್ವೇದ, ೧–೯೦–೧)

ಈ ಪದ್ಯದ ೧, ೩, ೪ನೆಯ ಪಾದಗಳು ಇಂದ್ರವಜ್ರದವು; ಎರಡನೆಯ ಪಾದವು ಉಪೇಂದ್ರವಜ್ರದ್ದು. ಇದಲ್ಲದೆ ಬೇರೊಂದು 'ಉಪಜಾತಿ'ಯೂ ಪುರಾಣಾದಿಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಅದು ಇಂದ್ರವಂಶ ಮತ್ತು ವಂಶಸ್ಥ ಎಂಬ ವೃತ್ತಗಳ (ಪಾದಗಳ) ಮಿಶ್ರಣದಿಂದ ಉಂಟಾಗುತ್ತದೆ. ಇದಕ್ಕೆ 'ಕರಂಬ-ಜಾತಿ' ಎಂಬ ಹೆಸರಿದೆ ಎಂದು ಜಯಕೀರ್ತಿ ಹೇಳುತ್ತಾನೆ. (ಛಂದೋನುಶಾಸನ II-೧೪೫) ಈ 'ಮಿಶ್ರವೃತ್ತ'ಗಳ ಪಾದಗಳು ಅಷ್ಟೇನೂ ಚಿಕ್ಕವುಗಳಲ್ಲವಾದರೂ, ಇವುಗಳಿಗೆ "ಪಾದಮಧ್ಯಯತಿಸ್ಥಾನ"ವೆಂಬುದೇನೂ ಇಲ್ಲ. (ಇವುಗಳ ಆಧಾರ-ಗಳಾಗಿ ಗೃಹೀತವಾಗಿರುವ ಇಂದ್ರವಜ್ರ, ಉಪೇಂದ್ರವಜ್ರ, ಇಂದ್ರವಂಶ, ವಂಶಸ್ಥ ಎಂಬ ವೃತ್ತಗಳಿಗೂ ಪಾದಮಧ್ಯಯತಿಸ್ಥಾನವಿಲ್ಲ; ಪಿಂಗಲಾದಿಗಳೂ ನಿರ್ದೇಶಿಸಿ-ರುವುದಿಲ್ಲ. ಪಿಂಗಲವ್ಯಾಖ್ಯಾನದಲ್ಲಿ ಹಲಾಯುಧ ಭಟ್ಟನು ಇವುಗಳಿಗೆಲ್ಲ ಪಾದಾಂತದಲ್ಲಿ ಮಾತ್ರ ಯತಿನಿರ್ದೇಶ ಮಾಡಿದ್ದಾನೆ.) ಹಿಂದೆಯೇ ಸೂಚಿಸಿರು-ವಂತೆ – ಪಾದಮಧ್ಯದಲ್ಲಿ 'ಯತಿಸ್ಥಾನ'ವಿಲ್ಲದಿರುವ ವಿಷಮಗತಿಬಂಧಗಳ ಛಂದಃಪದಗಳೆಂದರೆ ಅವುಗಳ ಪಾದಗಳೇ ಆಗಿವೆ. ತದನುಸಾರವಾಗಿ – ಪ್ರಸ್ತುತವಾದ 'ಉಪಜಾತಿ'ಬಂಧಗಳ ಪಾದಗಳೂ ಅವುಗಳ ಒಂದೊಂದು ಛಂದಃಪದಗಳೇ ಆಗಿರುತ್ತವೆ. ಈ ಛಂದಃಪದಗಳಾದರೋ ಅನಲ್ಪಪರಿಮಾಣ-ದವುಗಳಾಗಿರುವುದರಿಂದ, ಇವು ಸಹಜವಾಗಿ ಅನೇಕಾವಯವಘಟಿತಗಳಾಗಿರು-ತ್ತವೆ. ಆದರೆ ಆ ಅವಯವಪರಿಮಾಣಗಳೆಲ್ಲವೂ (ಹಿಂದಿನ ಪರಿಚ್ಛೇದದಲ್ಲಿ ವಿವೃತವಾಗಿರುವಂತೆ) ತದ್ಗತಪದಪರಿಮಾಣಗಳೇ ಆಗುವ ಕಾರಣ, ಈ ಛಂದೋ ಬಂಧಗಳ ಪ್ರತಿಯೊಂದು ಪಾದದಲ್ಲಿಯೂ ಪದಗತಿಗೆ ಅಸಾಧಾರಣವಾದ ಸ್ವಾತಂತ್ರ್ಯವು ಲಭಿಸುತ್ತದೆ; ಮತ್ತು ಛಂದೋಗತಿಗೂ ಪದಗತಿಗೂ ಪರಿಪೂರ್ಣ-ವಾದ ಐಕ್ಯವೂ ಸಿದ್ಧಿಸುತ್ತದೆ. ಇದರ ಪರಿಣಾಮವಾಗಿ ಈ ಪದ್ಯಗಳನ್ನು (ಅರ್ಥಾನುಗುಣವಾಗಿ) ಪಾದದ ಯಾವ ಸ್ಥಾನದಲ್ಲಿ 'ವಿಚ್ಛೇದಿಸಿ' ಪಠಿಸಿದರೂ 'ಪದ್ಯಗತಿ'ಗೆ ಕಿಂಚಿತ್ತಾದರೂ ಭಂಗವೊದಗುವುದಿಲ್ಲ. ಹೀಗೆ ಇವುಗಳಲ್ಲಿ ಪದ-ರಚನೆಗೆ ಅಧಿಕ ಸೌಲಭ್ಯವು ದೊರೆಯುವುದರಿಂದ, ಈ ಛಂದೋಬಂಧಗಳು ಸಂಸ್ಕೃತ ವಾಙ್ಮಯದಲ್ಲಿ ವಿಪುಲವಾಗಿ ಪ್ರಯುಕ್ತವಾಗಿರುತ್ತವೆ.[91]

---

91. {ಪ್ರಾಸದ ಕಾರಣದಿಂದ ಕನ್ನಡದಲ್ಲಿ ಉಪಜಾತಿಗೆ ಸ್ಥಾನವಿಲ್ಲ} ಕನ್ನಡದಲ್ಲಿ ಈ ಉಪಜಾತಿಗೆ ಸ್ಥಾನವೇ ಲಭಿಸಲಿಲ್ಲ. ಇದಕ್ಕೆ ಕಾರಣವೇನೆಂದರೆ – "ಪ್ರಾಸ"ವು ಕನ್ನಡಪದ್ಯಗಳಲ್ಲಿ ನಿರಪ-ವಾದವಾಗಿ ಇರಲೇಬೇಕಾದ ಒಂದು ನಿಯಮವಾಗಿದ್ದುದಾಗಿದೆ. ಪ್ರಾಸಕ್ಕೆ ಬಂದಿರುವ 'ನಿಯಮ' ಅಥವಾ 'ನಿಯಾಮ' ಎಂಬ ಹೆಸರು (ಉದಾ: "ಕುಳದ ನಿಯಾಮದೊಳೆಂದುಂ । ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ" – ಶಬ್ದಮಣಿದರ್ಪಣ, ಸೂತ್ರ – ೧೫) ಅದರ ಅನುಲ್ಲಂಘನೀ-ಯತೆಯನ್ನು ಉದ್ಘೋಷಿಸುವಂತಹದಾಗಿದೆ. ಈ "ಪ್ರಾಸ"ವೆಂದರೇನೆಂಬುದನ್ನು ತಿಳಿಸುವಾಗ, ಲಾಕ್ಷಣಿಕರು ಸಹ, ಸಾಮಾನ್ಯವಾಗಿ – "ಒಂದು ಪದ್ಯದ ಪಾದಗಳ ದ್ವಿತೀಯಾಕ್ಷರಗಳ ಅಭಿನ್ನತೆ" – ಎಂದಿಷ್ಟೇ ಹೇಳುತ್ತಾರೆ. ಉದಾ: "ಪಾದದೊಳೆರಡನೆಯಕ್ಕರ । ಮಾದರದಿಂದಾ-

ದುದಾವುದದನಱಿದನಿತಂ ॥ ಪಾದದೊಳಿಡುವುದದಕ್ಕುಂ ॥" (ಕವಿರಾಜಮಾರ್ಗ, II-೩೨) ಆದರೆ ಇಷ್ಟು ಹೇಳಿದ ಮಾತ್ರದಿಂದ "ಪ್ರಾಸ"ದ ಲಕ್ಷಣವನ್ನು ಪೂರ್ಣವಾಗಿ ಹೇಳಿದಂತಾ-ಗುವುದಿಲ್ಲ. ಇಂತಹ ಲಕ್ಷಣವಾಕ್ಯಗಳ ಅಪರ್ಯಾಪ್ತತೆಯನ್ನು ಕಂಡ ಲಾಕ್ಷಣಿಕನು ಪ್ರಾಯಶಃ ಜಯಕೀರ್ತಿಯೊಬ್ಬನೇ ಎಂದು ತೋರುತ್ತದೆ. 'ಪ್ರಾಸ'ದ ವಿಷಯದಲ್ಲಿ ಅವನು ತನ್ನ ಗ್ರಂಥದ ಎರಡು ಕಡೆಗಳಲ್ಲಿ ಹೇಳಿರುವ ಮಾತುಗಳು ಹೀಗಿವೆ:

೧. ಪಾದದ್ವಿತೀಯವರ್ಣಃ । ಪಾದಂ ಪಾದಂ ಯ ಏತಿ ಸೋ ಹಿ ಪ್ರಾಸಃ ॥ (I -೨೫)

(ಮುದ್ರಿತ ಪುಸ್ತಕದ ಪಾಠವು "ಸೋನುಪ್ರಾಸಃ" ಎಂದಾಗಿದೆ. ಆದರೆ ಅದು ಅಪಪಾಠ-ವೆಂದೂ, "ಸೋ ಹಿ ಪ್ರಾಸಃ" ಎಂಬುದು ಶುದ್ಧಪಾಠವಾಗಿದ್ದಿರಬೇಕೆಂದೂ 32ನೆಯ ಟಿಪ್ಪಣಿ-ಯಲ್ಲಿ ಹಿಂದೆಯೇ ಪ್ರತಿಪಾದಿಸಲಾಗಿದೆ.)

೨. ಆದಿರ್ಗುರುಪೂರ್ವಶ್ಚೇತ್ । ಪಾದೋ ಗುರುಪೂರ್ವಕಾಸ್ತಥಾನ್ಯೇ ಜಾತೌ ॥
ಪಾದೋ ಲಘುಪೂರ್ವಶ್ಚೇ । ದಾದಿಃ ಶೇಷಾಸ್ತಥೈವ ಭಾಷಾವಿಷಯೇ ॥ (VI -೨೧)

ಈ ಎರಡರೊಳಗೆ ಮೊದಲನೆಯದು (ಹಿಂದೆ ಕನ್ನಡದಲ್ಲಿ ಪ್ರಸಿದ್ಧವಾಗಿದ್ದಂತೆ ತೋರುವ) "ಪದ್ಧತಿ" ಎಂಬ ದ್ವಿಪದಬಂಧದ ಲಕ್ಷಣಕ್ಕೆ ಪರಿಶಿಷ್ಟವಾಗಿ, (ಸ್ಥೂಲದೃಷ್ಟಿಯಿಂದ) ಮಾಡಲ್ಪಟ್ಟ ಪ್ರಾಸಸ್ವರೂಪನಿರ್ದೇಶ. ಎರಡನೆಯದು "ಕರ್ಣಾಟಕವಿಷಯಭಾಷಾಜಾತಿ"ಗಳ ಲಕ್ಷಣನಿರೂ-ಪಣೆಯ ಉಪಸಂಹಾರವಾಗಿ ಮಾಡಿದ (ಕನ್ನಡಪದ್ಯಗಳ 'ನಿಯಮ'ವೇ ಆಗಿದ್ದ) 'ಪ್ರಾಸ'ದ ಒಂದು 'ಅಂಗ'ದ ಅಥವಾ ಆಧಾರದ ಸ್ವರೂಪದರ್ಶನ. ಮೊದಲನೆಯದಾದರೆ, ಕವಿರಾಜ-ಮಾರ್ಗಾದಿಗಳಲ್ಲಿಯೂ ಕಂಡುಬರುವಂತಹದೇ ಆದ ಸ್ಥೂಲಲಕ್ಷಣ; ಎರಡನೆಯದು, ಬೇರಾರೂ ಹೇಳಿದಂತಿಲ್ಲದ ಸೂಕ್ಷ್ಮವೂ ವಿಶಿಷ್ಟವೂ ಆದ ಲಕ್ಷಣ. ಈ ಲಕ್ಷಣೋಕ್ತಿಯನ್ನು ಭಾಷಾಂತರಿಸಿ ಹೇಳುವುದಾದರೆ ಅದು ಹೀಗೆ: "ಕರ್ಣಾಟಕಭಾಷಾವಿಷಯದಲ್ಲಿ – ಯಾವುದೊಂದು ಪದ್ಯದಲ್ಲಿ – ಮೊದಲನೆಯ ಪಾದದ ಪ್ರಥಮಾಕ್ಷರವು ಗುರುವಾಗಿದ್ದರೆ, ಆ ಪದ್ಯದ ಉಳಿದ ಪಾದಗಳ ಪ್ರಥಮಾಕ್ಷರಗಳೆಲ್ಲವೂ ಗುರುಗಳಾಗಿರಬೇಕಾಗುತ್ತದೆ. ಹಾಗೆಯೇ ಮೊದಲನೆಯ ಪಾದದ ಪ್ರಥಮಾಕ್ಷರವು ಲಘುವಾಗಿದ್ದರೆ ಉಳಿದ ಪಾದಗಳ ಪ್ರಥಮಾ-ಕ್ಷರಗಳೂ ಲಘುಗಳಾಗಿರಬೇಕಾಗುತ್ತವೆ." ಆದರೆ, ಈ "ಪ್ರಾಸ"ವೆಂಬುದೂ (ಅನುಪ್ರಾಸದಂತೆ) ಒಂದು ಶಬ್ದಾಲಂಕಾರವೆಂದೇ ಲಾಕ್ಷಣಿಕರು ಹೇಳಿದ್ದಾರೆ. ಉದಾ: "ನುತಶಬ್ದಾಲಂಕಾರದೊ । ಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ ॥" (ಕವಿರಾಜಮಾರ್ಗ I – ೩೦) ಆದುದರಿಂದ ಇದು ಅಲಂಕಾರಶಾಸ್ತ್ರವಿಷಯವೇ ಹೊರತು, ಛಂದಃಶಾಸ್ತ್ರವಿಷಯವಲ್ಲವೆಂದು ಹೇಳುವಂತಿ-ರುವುದಾದರೂ, (ಜಯಕೀರ್ತಿ ಪ್ರಕಾಶಪಡಿಸಿರುವಂತೆ) ಕನ್ನಡದಲ್ಲಿ ಅನುಲ್ಲಂಘನೀಯವಾದ 'ನಿಯಮ'ವಾಗಿದ್ದ "ಪ್ರಾಸ"ವು ಕೇವಲ ಅಲಂಕಾರವಿಷಯಕವಾಗಿರದೆ ಛಂದೋವಿಷಯಕವೂ ಆಗಿತ್ತೆಂಬುದು ಸಮ್ಯಗ್ವಿಚಾರಕ್ಕೆ ಗೋಚರವಾಗದಿರದು. ಅದು ಹೇಗೆಂದರೆ – ಪ್ರಾಸಾಕ್ಷರವು (ಇದಕ್ಕೆ 'ಪ್ರಾಣಾಕ್ಷರ'ವೆಂಬ ಹೆಸರು ಮೊನ್ನೆ ಮೊನ್ನೆಯವರೆಗೂ ನಮ್ಮೂರಲ್ಲಿ ಕೇಳಿಬರುತ್ತಿತ್ತು. ಇದು ಪ್ರಾದೇಶಿಕವಾಗಿದ್ದ ರೂಢಿಯೇನೂ ಆಗಿರದೆ, ಹಿಂದಿನ ಕಾಲದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದ್ದ ಪದಪ್ರಯೋಗವಾಗಿತ್ತೆಂಬುದು ಚಾಲುಕ್ಯ ಸೋಮೇಶ್ವರನ ಮಾತಿನಿಂದ ವ್ಯಕ್ತವಾಗುತ್ತದೆ. ಆ ಮಾತು ಹೀಗಿದೆ:

"ದ್ವಿತೀಯಮಕ್ಷರಂ ಪಾದೇ ಪ್ರಾಣಾಕ್ಷರಮಿತಿ ಸ್ಮೃತಂ ।
ಪಾದೇಷ್ವಾವರ್ತತೇ ತತ್ತು ಸ್ವರಸ್ಯ ನಿಯಮೋ ನ ಹಿ ॥"

– ಮಾನಸೋಲ್ಲಾಸ, ಚತುರ್ಥಖಂಡ, ಅಧ್ಯಾಯ ೧೬–೨೮೧) ಪಾದದ ಪ್ರಥಮಾಕ್ಷರಾನಂತರ ಬರುವ ವ್ಯಂಜನಾಕ್ಷರ ಮಾತ್ರವಾಗಿದ್ದರೆ ಸಾಲದು; ಆ ಅಕ್ಷರದ ವ್ಯಂಜನಾಂಶವು ಮೊದಲನೆಯ ಪಾದದ ಎಷ್ಟನೆಯ ಮಾತ್ರಾಸ್ಥಾನದಲ್ಲಿ ಬಂದಿರುತ್ತದೆಯೋ, ಅದು ಆ ಪದ್ಯದ ಇತರ ಪಾದಗಳಲ್ಲಿಯೂ ಅಷ್ಟನೆಯ ಮಾತ್ರಾಸ್ಥಾನದಲ್ಲಿ ಕಾಣಿಸಿಕೊಳ್ಳಬೇಕಾಗುತ್ತದೆ. ಉದಾ: ಪ್ರಥಮಪಾದಾದಿಯು 'ಆನೆ' ಎಂದಿದ್ದರೆ, ಉತ್ತರಪಾದಾದಿಯು 'ನೀನು' ಎಂದೋ, 'ಊನ'–ವೆಂದೋ ಇರಬಹುದು ಹೊರತು – 'ವಿನಯ' ಎಂದಿರುವುದಕ್ಕಾಗುವುದಿಲ್ಲ. (ಉದಾಹೃತ–ವಾದ 'ಆನೆ' ಎಂಬುದರಲ್ಲಿ 'ಪ್ರಾಣಾಕ್ಷರ'ದ ವ್ಯಂಜನಾಂಶವು ಮೂರನೆಯ ಮಾತ್ರಾಸ್ಥಾನ–ದಲ್ಲಿದೆ; 'ನೀನು' 'ಊನ' ಎಂಬುವುಗಳಲ್ಲಿಯೂ ಅದು ಮೂರನೆಯ ಮಾತ್ರಾಸ್ಥಾನದಲ್ಲಿಯೇ ಇರುವುದರಿಂದ ಅವು 'ಆನೆ' ಎಂಬುದಕ್ಕೆ ಪ್ರಾಸವಾಗಬಲ್ಲವಾಗುತ್ತವೆ. ಆದರೆ 'ವಿನಯ' ಎಂಬುದರಲ್ಲಿ ಆ ವ್ಯಂಜನಾಂಶವು ಎರಡನೆಯ ಮಾತ್ರಾಸ್ಥಾನದಲ್ಲಿರುವುದರಿಂದ, ಅದು 'ಆನೆ'ಗೆ ಪ್ರಾಸವಾಗಲಾರದುದಾಗಿದೆ.) ಹೀಗೆ 'ಪ್ರಾಸ'ವೆಂಬುದು ಪಾದಾದಿಯ ಛಂದೋವಿನ್ಯಾಸವನ್ನೂ ನಿಯಂತ್ರಿಸುವ ಕಾರಣ, ಅದು ಅನುಪ್ರಾಸದಂತೆ ಕೇವಲ ಅಲಂಕಾರಶಾಸ್ತ್ರವಿಷಯಕವಾಗಿ ಉಳಿಯದೆ, ಛಂದಃಶಾಸ್ತ್ರದ ಕ್ಷೇತ್ರವನ್ನೂ ಪ್ರವೇಶಿಸಿರುವ ಶಬ್ದಾಲಂಕಾರವಿಶೇಷವಾಗಿರುತ್ತದೆ. ಈ ವಿವರಣೆಯಿಂದ ವಿಶದವಾಗಬಹುದಾದಂತೆ – ಪದ್ಯದ ಪಾದಗಳ ಆದಿಯಲ್ಲಿ ಸಮಾನವಾದ ಛಂದೋವಿನ್ಯಾಸವಿಲ್ಲದಿದ್ದರೆ ಅಲ್ಲಿ ಪ್ರಾಸಕ್ಕೆ ಅಸ್ತಿತ್ವವೇ ಇಲ್ಲವಾಗು–ತ್ತದೆ. ಆದುದರಿಂದ, ಪಾದಾದಿಯ ಛಂದೋವಿನ್ಯಾಸದ ಸಮಾನತೆಯನ್ನು "ಪ್ರಾಸ (=ಪ್ರಾಣಾಕ್ಷರ)ದ ಆಧಾರ"ವೆಂದು ಅಥವಾ "ಪ್ರಾಸಪೀಠ"ವೆಂದು ಹೆಸರಿಸಬಹುದಾಗಿದೆ. 'ಉಪಜಾತಿ'ಗಳ ವೈಶಿಷ್ಟ್ಯವಾದರೋ ಈ "ಪ್ರಾಸಾಧಾರ"ಕ್ಕೆ ವಿಪರೀತವಾದ ಛಂದೋವಿನ್ಯಾಸವೇ ಆಗಿದೆ. ಆ ವಿಶಿಷ್ಟತೆ ಇಲ್ಲದಿದ್ದರೆ, ಅವು 'ಇಂದ್ರವಜ್ರ' ಅಥವಾ 'ಉಪೇಂದ್ರವಜ್ರ'ವೆಂಬ ಸಮವೃತ್ತಗಳಾಗಿ ಬಿಡುತ್ತವೆ ಹೊರತು, 'ಉಪಜಾತಿ'ಗಳೆನಿಸುವುದೇ ಇಲ್ಲ. (ಇಂದ್ರವಂಶ ಮತ್ತು ವಂಶಸ್ಥ ಎಂಬ ವೃತ್ತಗಳ ಮಿಶ್ರಣದಿಂದ ಹುಟ್ಟುವ 'ಕರಂಬಜಾತಿ' ಎಂಬ ನಾಮವಿಶೇಷವುಳ್ಳ ಉಪಜಾತಿಬಂಧಗಳಿಗೂ ಈ ಮೇಲೆ ಹೇಳಿದ ಮಾತುಗಳು ಪೂರ್ಣವಾಗಿ ಅನ್ವಯಿಸುತ್ತವೆ.) ತಥ್ಯವು ಹೀಗಿರುವುದರಿಂದ – "ಪ್ರಾಸ"ವು ಅನುಲ್ಲಂಘ–ನೀಯವಾದ ನಿಯಮವಾಗಿದ್ದ ಕನ್ನಡದಲ್ಲಿ 'ಉಪಜಾತಿ'ಗಳಿಗೆ ಆಸರೆಯೇ ಇಲ್ಲವಾಯಿತು. ['ಉಪಜಾತಿ'ಗಳ ಮೂಲಗಳಾಗಿ ಗೃಹೀತವಾದ ಇಂದ್ರವಜ್ರ ಹಾಗೂ ಉಪೇಂದ್ರವಜ್ರ ಮತ್ತು ಇಂದ್ರವಂಶ ಹಾಗೂ ವಂಶಸ್ಥ ಎಂಬ ವೃತ್ತಗಳಾದರೂ – ಕನ್ನಡದಲ್ಲಿ ಇಲ್ಲವೇ ಇಲ್ಲವೆಂದು ಹೇಳುವ ಮಾತು ಬಾರದಂತೆ – ಎಲ್ಲಿಯಾದರೂ ಒಂದೊಂದು ಕಾಣಿಸಿಕೊಳ್ಳುವುದಿದೆ. ಉದಾ: (ವಂಶಸ್ಥವೃತ್ತ)

> ಎನಿತ್ತೆನಿತ್ತಂಬುಜಪತ್ರನೇತ್ರೆಯಾ ।
> ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
> ಅನಿತ್ತನಿತ್ತಂ ವನದೊಳ್ ವನೇಚರಂ ।
> ತನತ್ತು ಬಿಲ್ಲಾನದನೊತ್ತಿ ಕೀಸುವಂ ॥ . ॥
>
> (ಶಬ್ದಮಣಿದರ್ಪಣದಲ್ಲಿ ಉದಾಹೃತ)

ಸಂಸ್ಕೃತಮಹಾಕಾವ್ಯಗಳಲ್ಲಿ ಅನಲ್ಪಾವಕಾಶವನ್ನು ಪಡೆದಿರುವ ಈ ಮೇಲೆ ಹೆಸರಿಸಿದಂತಹ ವೃತ್ತಗಳು, ಸಂಸ್ಕೃತಕಾವ್ಯಮಾರ್ಗವನ್ನನುಸರಿಸಿ ನಿರ್ಮಿತವಾಗಿ "ಸಮಸಂಸ್ಕೃತಕಾವ್ಯ"ಗಳೆಂಬ ಹೆಸರುಗಳಿಸಿದ ಕನ್ನಡಮಹಾಕಾವ್ಯಗಳಲ್ಲಿ (ಕವಿರಾಜಮಾರ್ಗ ।–೨೬, ೨೭) ಅಪೂರ್ವ–

[ಆದರೂ – ಅನುಷ್ಟುಪ್ ಶ್ಲೋಕದಲ್ಲಿರುವಷ್ಟು ಪದರಚನಾಸೌಲಭ್ಯವು 'ಉಪಜಾತಿ'ಗಳಲ್ಲಿಲ್ಲ. ಏಕೆಂದರೆ, ಉಪಜಾತಿಬಂಧಗಳಲ್ಲಿ ಪಾದಾದಿಯ ಅಕ್ಷರವು ಮಾತ್ರ ಐಚ್ಛಿಕವಾಗಿ ಗುರುವೋ ಲಘುವೋ ಆಗಬಲ್ಲದು; ಉಳಿದ ಭಾಗವೆಲ್ಲ ಗುರುಲಘುಸ್ಥಿರವಾಗಿರಬೇಕಾಗುತ್ತದೆ. 'ಅನುಷ್ಟುಪ್ ಜಾತಿ'(=ಅನುಷ್ಟುಪ್ ಶ್ಲೋಕ)-ಯಲ್ಲಾದರೆ ಗುರುಲಘುಸ್ಥಿರತೆ ಇರಬೇಕಾದ ಭಾಗ ಅತ್ಯಲ್ಪ.]

ಲೌಕಿಕ ಅನುಷ್ಟುಪ್ ಶ್ಲೋಕಕ್ಕೆ ವೈದಿಕ "ಅನುಷ್ಟುಪ್‌ಛಂದ"ವೇ ಮೂಲ-ವೆಂಬುದನ್ನು ಆ ಹೆಸರೇ ತಿಳಿಸುತ್ತದೆ. ಆದರೆ – ಸಂಸ್ಕೃತ ಗ್ರಂಥರಾಶಿಯಲ್ಲಿ ಎಲ್ಲಿ ನೋಡಿದರಲ್ಲಿ ಅದ್ವಿತೀಯವಾದ ಸ್ಥಾನವನ್ನು ಪಡೆದು ಮೆರೆಯುತ್ತಿರುವ ಈ ಲೌಕಿಕಛಂದೋಬಂಧಕ್ಕೆ ಈ ರೂಪವು ಒಮ್ಮಿಂದೊಮ್ಮೆ ಪ್ರಾಪ್ತವಾದುದಾಗಿರದೆ, ಕ್ರಮಶಃ ಬೇರೆಬೇರೆ ರೂಪಗಳು ಬಂದು ಕೊನೆಗೆ ಒಂದು ಬಗೆಯ ಸ್ಥಿರತೆಯನ್ನು ಅದು ಪಡೆದ ಹಾಗೆ ತೋರುತ್ತದೆ. ಏಕೆಂದರೆ – ಪಿಂಗಲಛಂದಃಶಾಸ್ತ್ರದಲ್ಲಿ "ಅನುಷ್ಟುಪ್ ಜಾತಿ"ಯ ಇತರ ರೂಪಗಳ ಲಕ್ಷಣಗಳೂ ಪ್ರೋಕ್ತವಾಗಿವೆ. ಆದರೆ ಆ ರೂಪಗಳ ಶ್ಲೋಕಗಳು ನಮಗೆ ಲಬ್ಧವಾಗಿರುವ ಯಾವ ಲೌಕಿಕ ಗ್ರಂಥಗಳಲ್ಲಿಯೂ ಬಳಕೆಯಾದಂತಿಲ್ಲ; ಅವು ಛಂದೋಗ್ರಂಥಗಳಲ್ಲಿ ಮಾತ್ರ ತಮ್ಮ ಅಸ್ತಿತ್ವವನ್ನುಳಿಸಿಕೊಂಡು ಇತರತ್ರ ಲುಪ್ತವಾದಹಾಗೆ ಕಾಣುತ್ತದೆ. ನಮಗೆ ಪರಿಚಿತವಾದ ಶ್ಲೋಕಬಂಧದಲ್ಲಿರುವ ರಚನಾಸೌಲಭ್ಯವು ಅವುಗಳಲ್ಲಿಯೂ ಇರುವುದಾದರೂ, ಅವುಗಳ ಬಳಕೆ ಇಲ್ಲದಾಗಲು ಕಾರಣವೇನು? ನನಗೆ ತೋರುವಂತೆ ಹೇಳುವುದಾದರೆ ಅದು ಹೀಗೆ:- ಕೇವಲ ರಚನಾಸೌಲಭ್ಯವಿರುವ ಮಾತ್ರದಿಂದ ಒಂದು ಛಂದೋಬಂಧವು ಲೋಕಪ್ರಿಯವಾಗುವುದಿಲ್ಲ. ಅದರಲ್ಲಿ "ಶ್ರವ್ಯತ್ವ" ಎಂದರೆ ಗತಿಸೌಂದರ್ಯವೂ ಸಾಕಷ್ಟು ಇರಲೇಬೇಕಾಗುತ್ತದೆ. ಈ ದೃಷ್ಟಿಯಿಂದ ಪರೀಕ್ಷಿಸಿದರೆ, ಸುಪ್ರಸಿದ್ಧವಾಗಿರುವ "ಶ್ಲೋಕ"ದಲ್ಲಿರುವಂತಹ ಗತಿ ಸೌಂದರ್ಯವು ಪಿಂಗಲಪ್ರೋಕ್ತವಾದ (ಬಳಕೆತಪ್ಪಿದ) ಆ ಕೆಲವು 'ಅನುಷ್ಟುಪ್ ಜಾತಿ'ಗಳಲ್ಲಿ ಇಲ್ಲವೆಂದು ತೋರಿಬರುವುದರಲ್ಲಿ ಸಂದೇಹವಿಲ್ಲ. ಲೌಕಿಕಛಂದೋ-ಬಂಧಗಳ 'ಜೀವಾಳ'ವಾದರೋ ಗತಿಸೌಂದರ್ಯವೇ ಆಗಿದೆ. ಆದುದರಿಂದ ಗತಿಸೌಂದರ್ಯವು ಲಕ್ಷ್ಯವಾಗಿದ್ದಿರದ ವೈದಿಕಬಂಧಗಳು ಲೌಕಿಕವಾಗಿ ಪ್ರಯುಕ್ತ-ವಾಗತೊಡಗಿದಾಗ, ಗತಿಸೌಂದರ್ಯದ ಕಡೆಗೆ ಲಕ್ಷ್ಯವು ಹರಿದುದು ಸ್ವಾಭಾವಿಕ; ಮಾತ್ರವಲ್ಲ, ಅದರ ಹೆಚ್ಚಳಕ್ಕಾಗಿ ಹಲವು ಪ್ರಯೋಗಗಳಾಗಿದ್ದಿರುವುದೂ ಸಂಭಾವ್ಯ. ಆದುದರಿಂದ – ಬಳಕೆ ಇಲ್ಲದೆ ಹೋಗಿ, ಛಂದೋಗ್ರಂಥಗಳಲ್ಲಿ ಮಾತ್ರ ಉಳಿದಿರುವ ಆ ಕೆಲವು ಅನುಷ್ಟುಪ್ ಜಾತಿಗಳು "ಶ್ಲೋಕ"ದ 'ಗತಿಸೌಂದರ್ಯ-ಸಾಧನಮಾರ್ಗ'ದಲ್ಲಿ ಕ್ರಮಿಸುತ್ತಾ ಹೋದ ನಮ್ಮ ಪುರಾತನ ಕವಿಗಳ ಹಜ್ಜೆಯ

---

ವಾಗಿರುವುದಕ್ಕೆ ಕಾರಣ ಬೇರೆ: ಅದು ಮುಂದೆ ಈ ಪರಿಚ್ಛೇದದಲ್ಲಿ ಮಾಡಲಿರುವ ಪ್ರತಿಪಾದನೆಯಿಂದ ಅವಗತವಾಗಬಹುದಾಗಿದೆ.]

ಗುರುತುಗಳಿಂದು ಅನುಮಾನಿಸಿದರೆ, ಪ್ರಾಯಶಃ ಅದು ತಪ್ಪಾಗಲಾರದೆಂದು ನನಗೆ ತೋರುತ್ತದೆ.

[ನಮಗೆ ಸುಪರಿಚಿತವಾದ "ಶ್ಲೋಕ"ವೆಂಬ 'ಅನುಷ್ಟುಪ್ ಜಾತಿ'ಯ ವಿಭಿನ್ನ ಛಂದೋವಿನ್ಯಾಸಗಳೆಲ್ಲ ಪಿಂಗಲಪ್ರೋಕ್ತವಾದ 'ಪಥ್ಯಾ' ಮತ್ತು 'ವಿಪುಲಾ' ಎಂಬ ಎರಡು 'ಅನುಷ್ಟುಪ್ ಜಾತಿ' ವರ್ಗಗಳ ಛಂದೋರೂಪಗಳಲ್ಲಿ ಅಡಕ-ವಾಗುತ್ತವೆ. ಈ ಹೆಸರುಗಳಾದರೋ ಉದ್ಬೋಧಕವಾಗಿವೆ: 'ಪಥ್ಯ' ಎಂದರೆ 'ಹಿತ', 'ವಿಪುಲ' ಎಂದರೆ 'ವಿಶಾಲ'. ಅವುಗಳೊಳಗೆ ಈ ಹೆಸರು ಕೊಟ್ಟವರ ಆಶಯವು – ಅನುಷ್ಟುಪ್ ಜಾತಿಗಳೊಳಗೆ ಆ ಛಂದೋರೂಪಗಳು ಹಿತ ಅರ್ಥಾತ್ ರೋಚಕವೂ, ವಿಶಾಲ ಅರ್ಥಾತ್ ಬಹುಜನಗ್ರಾಹ್ಯವೂ ಆಗಿರುವ-ವೆಂಬುದನ್ನು ಸೂಚಿಸುವುದಾಗಿದ್ದಂತೆ ತೋರುತ್ತದೆ. ಈ ಊಹೆ ಸರಿಯೆಂದಾ-ದರೆ, "ಶ್ಲೋಕ"ದ ಛಂದೋರೂಪದ ವ್ಯವಸ್ಥಿತಿವಿಷಯದಲ್ಲಿ ಈ ಮೇಲೆ ಮಾಡಿದ ಪ್ರತಿಪಾದನೆ ಈ ಹೆಸರುಗಳಿಂದಲೂ ಸಮರ್ಥಿತವಾದಂತಾಗುತ್ತದೆ.]

{ಉಪಜಾತಿಗಳ ರೂಪವಿಕಾಸ}

ಲೌಕಿಕ ಸಂಸ್ಕೃತವಾಙ್ಮಯದಲ್ಲಿ ಧಾರಾಳವಾಗಿ ಪ್ರಯುಕ್ತವಾಗಿರುವ 'ಉಪಜಾತಿ' ಬಂಧಗಳಿಗೆ ಇಂದ್ರವಜ್ರ ಉಪೇಂದ್ರವಜ್ರಗಳನ್ನು (ಮತ್ತು ಉಪಜಾತಿ ಭೇದವೇ ಆದ 'ಕರಂಬಜಾತಿ'ಗೆ ಇಂದ್ರವಂಶವಂಶಸ್ಥಗಳನ್ನು) ಆಧಾರಗಳಾಗಿ ಸ್ವೀಕರಿಸುವುದು ಲಾಕ್ಷಣಿಕದೃಷ್ಟಿಯಿಂದ ಸಮಂಜಸವೇ ಆಗಿರುವುದಾದರೂ – ಉಪಜಾತಿಗಳ (ಹಾಗೂ ಆ ನಾಲ್ಕು ವೃತ್ತಗಳ) ರೂಪವಿಕಾಸವನ್ನು ಐತಿಹಾಸಿಕ ದೃಷ್ಟಿಯಿಂದ ನೋಡಿ ಹೇಳುವುದಾದರೆ, ಆ ನಾಲ್ಕು ವೃತ್ತಗಳಿಗಿಂತ ಆ ಉಪ ಜಾತಿಗಳೇ ಪೂರ್ವತರಗಳೆನ್ನಬೇಕಾಗುತ್ತದೆ. ಏಕೆಂದರೆ – ಮಹಾಭಾರತಾದಿ ಅತಿ ಪುರಾತನ ಗ್ರಂಥಗಳಲ್ಲಿ (ಹೆಚ್ಚುಕಡಮೆ) 'ಉಪಜಾತಿ'ಗಳಂತಹ "ಅಕ್ಷರಜಾತಿ"-ಗಳನ್ನು ವಿಪುಲವಾಗಿ ಕಾಣಬಹುದಾದರೂ – ಉಪಜಾತಿಗಳ ಆಧಾರವಾಗಿ ಗೃಹೀತವಾಗಿರುವ ಆ 'ವೃತ್ತಗಳು' ಆ ಗ್ರಂಥಗಳಲ್ಲಿ ಬಹಳ ಅಪೂರ್ವವಾಗಿವೆ.[92]

---

92. ಮಹಾಭಾರತದ ಅನುಶಾಸನಿಕಪರ್ವದಲ್ಲಿರುವ "ವಿಷ್ಣುಸಹಸ್ರನಾಮಸ್ತೋತ್ರ"ದ ಫಲಶ್ರುತಿ ಭಾಗದ ೨೫ನೆಯ ಪದ್ಯ ಈ ಕೆಳಗಿನಂತಿದೆ:

> ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ ।
> ಸಹಸ್ರಪಾದಾಕ್ಷಿಶಿರೋರುಬಾಹವೇ ॥
> ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ।
> U – U –   U U   U –   U –   U –
> ಸಹಸ್ರಕೋಟಿಯುಗಧಾರಿಣೇ ನಮಃ ॥ . ॥

ಇದರ ಪಾದಾಕ್ಷರಸಂಖ್ಯೆ ಹನ್ನೆರಡಾಗಿದ್ದು, ಇದರ 'ಧಾಟಿ' ಉಪಜಾತಿಭೇದವಾದ 'ಕರಂಬ ಜಾತಿ'ಯದರಂತಿದೆ. ಆದರೆ ನಾಲ್ಕನೆಯ ಪಾದದ ಐದನೆಯ ಅಕ್ಷರವು–ಕರಂಬಜಾತಿ–

ಆ 'ಅಕ್ಷರಜಾತಿಬಂಧ'ಗಳೊಳಗೆ ಛಂದಃಶಾಸ್ತ್ರೋಕ್ತವಾದ ಉಪಜಾತಿಗೆ ಸಂಪೂರ್ಣಸಮನಾಗಿರುವ ಪದ್ಯಗಳೂ ಇವೆ: ಅಷ್ಟಿಷ್ಟು ಭಿನ್ನವಾದವುಗಳೂ ಇವೆ. ಉದಾ:

೧. ಪಶ್ಯಾಮಿ ದೇವಾಂಸ್ತವ ದೇವ ದೇಹೇ ।
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ॥
ಬ್ರಹ್ಮಾಣಮೀಶಂ ಕಮಲಾಸನಸ್ಥಂ ।
ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥. ॥

೨. ಅನೇಕ ಬಾಹೂದರವಕ್ತ್ರನೇತ್ರಂ ।
ಪಶ್ಯಾಮಿ ತ್ವಾಂ ಸರ್ವತೋನಂತರೂಪಂ ॥
ನಾಂತಂ ನ ಮಧ್ಯಂ ನ ಪುನಸ್ತವಾದಿಂ ।
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ* ॥ . ॥

(ಶ್ರೀಮದ್ಭಗವದ್ಗೀತಾ, xi – ೧೫, ೧೬)

(* ಇದು ಲಘ್ವಕ್ಷರವಾದರೂ ಪಾದಾಂತ್ಯವಾದುದರಿಂದ ಗುರುವಾಗಿ ಗೃಹೀತ.)

[ಈ ಉದಾಹರಣಗಳೊಳಗೆ ಒಂದನೆಯದು, ಕಾಳಿದಾಸಾದಿಗಳು ಬಳಸಿರುವ ಉಪಜಾತಿಯಂತೆಯೇ ಇದೆ. (ಇದರ ನಾಲ್ಕನೆಯ ಪಾದವು 'ಉಪೇಂದ್ರವಜ್ರ'ದ ಪಾದಕ್ಕೆ ಸಮನಾಗಿಯೂ, ಉಳಿದ ಮೂರು 'ಇಂದ್ರವಜ್ರ'ದ ಪಾದಗಳಿಗೆ ಸಮನಾಗಿಯೂ ಇವೆ.) ಎರಡನೆಯ ಉದಾಹರಣದಲ್ಲಿ ಮೊದಲನೆಯ ಪಾದವು ಉಪೇಂದ್ರವಜ್ರದ ಪಾದದ ಹಾಗೆ, ಮತ್ತು ಮೂರನೆಯ ಹಾಗೂ ನಾಲ್ಕನೆಯ ಪಾದಗಳು ಇಂದ್ರವಜ್ರದವುಗಳ ಹಾಗೆ ಇರುವವಾದರೂ –ಎರಡನೆಯ ಪಾದವು ಆ ಎರಡು ವೃತ್ತಗಳೊಳಗೆ ಯಾವುದರ ಪಾದದ ಹಾಗೂ ಇಲ್ಲ. ಹೀಗೆ ಈ ಪದ್ಯದಲ್ಲಿ 'ಉಪಜಾತಿ'ಯ ಲಕ್ಷಣವು ಅಪೂರ್ಣವಾಗಿರುವ ಕಾರಣ, ಇದನ್ನು ಉಪಜಾತಿಬಂಧವೆನ್ನುವಂತಿಲ್ಲವಾದರೂ – ಇದರ ಧಾಟಿ ಹೆಚ್ಚುಕಡಮೆ

---

ಯಲ್ಲಿರಬೇಕಾದಂತೆ – ಗುರುವಾಗಿಲ್ಲದಿರುವುದರಿಂದ ಇದನ್ನು ಕರಂಬಜಾತಿ ಎನ್ನಲಾಗುವುದಿಲ್ಲ. ಈ ಪದ್ಯಭಾಗಕ್ಕೆ ಒಂದು ಪಾಠಾಂತರವಿದ್ದು, ಅದು ಹೀಗಿದೆ:

"ಸಹಸ್ರಕೋಟೀ ಯುಗಧಾರಿಣೇ ನಮಃ"

ಆದರೆ ಈ ಪಾಠವನ್ನು ಸ್ವೀಕರಿಸಿದಾಗ – ಈ ಪದ್ಯದ ನಾಲ್ಕೂ ಪಾದಗಳ ಛಂದೋವಿನ್ಯಾಸಗಳು ಸಂಪೂರ್ಣವಾಗಿ ಸಮಾನವಾಗುವುದರಿಂದ – ಇದು ಅಕ್ಷರಜಾತಿವರ್ಗದ ಛಂದೋಬಂಧವಾಗಿ ಉಳಿಯದೆ "ವಂಶಸ್ಥವೃತ್ತ"ವೇ ಆಗಿಬಿಡುತ್ತದೆ.

ಉಪಜಾತಿಯ ಧಾಟಿಯನ್ನು ಹೋಲುವುದರಿಂದ, ಮತ್ತು ಇಂತಹ ಲೌಕಿಕ ಛಂದೋಬಂಧದ ಲಕ್ಷಣವು ನಮಗೆ ಲಬ್ಧವಾಗಿರುವ ಯಾವ ಛಂದೋ-ಗ್ರಂಥದಲ್ಲಿಯೂ ಕಂಡುಬರುವುದಿಲ್ಲವಾದುದರಿಂದ – ಈ ಬಗೆಯ ಪುರಾತನ ಛಂದೋಬಂಧಗಳನ್ನು ಉಪಜಾತಿಯ ಮೂಲಗಳೆಂದು ತಿಳಿಯಬಹುದಾಗಿದೆ.]

ಈ ಮೇಲೆ ಉದಾಹರಿಸಿದ ಎರಡನೆಯ ಪದ್ಯದ ವಿನ್ಯಾಸದಲ್ಲಿರುವಷ್ಟು ಸಮತೆಯೂ ಇಲ್ಲದಿರುವ ಹನ್ನೊಂದಕ್ಷರಗಳ ಹಾಗೂ ಹನ್ನೆರಡಕ್ಷರಗಳ ಪಾದದ ಛಂದೋಬಂಧಗಳು – ಮಹಾಭಾರತಾದಿಗಳಿಗಿಂತಲೂ ಎಷ್ಟೋ ಹಿಂದಿನ ಕಾಲದವುಗಳಾದ ವೈದಿಕಗ್ರಂಥಗಳಲ್ಲಿ ವಿಪುಲವಾಗಿರುವುದು ಕಂಡುಬರುತ್ತದೆ. ಉದಾ:

A (೧) ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ।
ವಿಶ್ವಾನಿ ದೇವ ವಯುನಾನಿ ವಿದ್ವಾನ್ ॥
U – U – – U U – U – –
ಯುಯೋಧಿ + ಅಸ್ಮಜ್ಜುಹುರಾಣಮೇನೋ ।
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ . ॥

(ಋಗ್ವೇದ ೧-೧೮೯-೧; ಮತ್ತು ಈಶಾವಾಸ್ಯೋಪನಿಷತ್-೧೮)

(೨) ಗಣಾನಾಂ ತ್ವಾ ಗಣಪತಿಂ ಹವಾಮಹೇ ।
U – U – – U U – U – U –
ಕವಿಂ ಕವೀನಾಮುಪಮಶ್ರವಸ್ತಮಂ ॥
ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತೇ ।
ಆ ನಃ ಶ್ರುಣ್ವನ್ ಊತಿಭಿಃ ಸೀದ ಸಾದನಂ ॥ . ॥

(ಋಗ್ವೇದ ೨-೨೩-೧)

ಇಲ್ಲಿ ಉದಾಹರಿಸಿದ "ಛಂದ"ಗಳೊಳಗೆ ಮೊದಲನೆಯದು ಹನ್ನೊಂ-ದಕ್ಷರಗಳ ಪಾದದ 'ತ್ರಿಷ್ಟುಪ್‌ಛಂದ'. ಎರಡನೆಯದು ಹನ್ನೆರಡಕ್ಷರಗಳ ಪಾದದ 'ಜಗತೀಛ್ಛಂದ'. ಇವುಗಳಲ್ಲಿ ಅಕ್ಷರಸಂಖ್ಯಾಸಮತೆ ಇರುವುದಾದರೂ ಪಾದಗಳ ಛಂದೋವಿನ್ಯಾಸದಲ್ಲಿ ಸಮತೆಯೆಂಬುದೇನೂ ಇಲ್ಲ. ಆದರೆ – ಮೊದಲನೆಯ-ದರ ಮೂರನೆಯ ಪಾದದ ವಿನ್ಯಾಸವು (ಉಪೇಂದ್ರವಜ್ರದ ಪಾದದಂತಿರುವುದ-ರಿಂದ) ಉಪಜಾತಿಯ ಪಾದದ ಲಕ್ಷಣಕ್ಕೆ ಒಳಪಡುವಂತಹದಾಗಿದೆ. ಎರಡನೆ-ಯದರ ದ್ವಿತೀಯಪಾದದ ವಿನ್ಯಾಸವು (ವಂಶಸ್ಥದ ಪಾದದಂತಿರುವುದರಿಂದ) ಉಪಜಾತಿಭೇದವಾದ ಕರಂಬಜಾತಿಯ ಪಾದದ ಲಕ್ಷಣಕ್ಕೆ ಒಳಪಡುವಂತಹ-ದಾಗಿದೆ. ಇನ್ನು ಕೆಲವು 'ಛಂದ'ಗಳಲ್ಲಿ ಅಕ್ಷರಸಂಖ್ಯಾಸಮತೆಯೂ ಇಲ್ಲದಿರುವು-ದುಂಟು. ಉದಾ :

B (೧) ಯಜ್ಞೇನ ಯಜ್ಞಮಯಜಂತ ದೇವಾಃ । (೧೧)
ತಾನಿ ಧರ್ಮಾಣಿ ಪ್ರಥಮಾನಿ+ಆಸನ್ ॥ (೧೧)

ತೇ ಹ ನಾಕಂ ಮಹಿಮಾನಃ ಸಚಂತೇ । (೧೧)
ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ . ॥ (೧೦)
(ಪುರುಷಸೂಕ್ತ; ಋಗ್ವೇದೀಯಪಾಠ–೧೬ ; ಯಜುರ್ವೇದೀಯಪಾಠ–೧೮)

(೨) ದ್ವಾ ಸುಪರ್ಣಾ ಸಯುಜಾ ಸಖಾಯಾ । (೧೦)
ಸಮಾನಂ ವೃಕ್ಷಂ ಪರಿಷಸ್ವಜಾತೇ ॥ (೧೧)
ತಯೋರನ್ಯಃ ಪಿಪ್ಪಲಂ ಸ್ವಾದು+ಅತ್ತಿ । (೧೧)
ಅನಶ್ನನ್ ಅನ್ಯೋ ಅಭಿಚಾಕಶೀತಿ ॥ . ॥ (೧೧)
(ಋಗ್ವೇದ, ೧–೧೬೪–೨೦ ; ಮತ್ತು ಮುಂಡಕೋಪನಿಷತ್ ೩–೧–೧)

ಇವೆರಡೂ 'ತ್ರಿಷ್ಟುಪ್‌ಛಂದ'ಗಳಾಗಿವೆ. ಈ 'ಛಂದ'ದ ಪಾದಗಳಲ್ಲಿ ಇರಬೇಕಾದ ಅಕ್ಷರಗಳ ಸಂಖ್ಯೆ ಹನ್ನೊಂದು. ಆದರೆ ಇಲ್ಲಿ ಉದಾಹರಿಸಿದ ಮೊದಲನೆಯ ಛಂದದ ನಾಲ್ಕನೆಯ ಪಾದದಲ್ಲಿ ಇರುವ ಅಕ್ಷರಗಳು ಹತ್ತೇ ಆಗಿವೆ; ಮತ್ತು ಎರಡನೆಯ ಉದಾಹರಣದ ಪ್ರಥಮಪಾದದ ಅಕ್ಷರಸಂಖ್ಯೆಯೂ ಹತ್ತೇ ಆಗಿರುವುದನ್ನು ನೋಡಬಹುದು. ಇನ್ನೂ ಒಂದೆರಡು ಛಂದಗಳನ್ನು ನೋಡೋಣ:

C (೧) ವೇದಾಹಮೇತಂ ಪುರುಷಂ ಮಹಾಂತಂ । (೧೧)
ಆದಿತ್ಯವರ್ಣಂ ತಮಸಸ್ತು ಪಾರೇ ॥ (೧೧)
ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ । (೧೧)
ನಾಮಾನಿ ಕೃತ್ವಾಭಿವದನ್ ಯದಾಸ್ತೇ ॥ . ॥ (೧೧)

(೨) ಧಾತಾ ಪುರಸ್ತಾದ್ಯಮುದಾಜಹಾರ । (೧೧)
ಶಕ್ರಃ ಪ್ರವಿದ್ವಾನ್ ಪ್ರದಿಶಃ ಚತಸ್ರಃ ॥ (೧೧)
ತಮೇವಂ ವಿದ್ವಾನಮೃತ ಇಹ ಭವತಿ । (೧೩)
ನಾನ್ಯಃ ಪಂಥಾ ಅಯನಾಯ ವಿದ್ಯತೇ ॥ . ॥ (೧೧)
(ಪುರುಷಸೂಕ್ತ, ಯಜುರ್ವೇದೀಯಪಾಠ – ೧೬, ೧೭)

ಈ ಮೇಲಿನ ಎರಡು ತ್ರಿಷ್ಟುಪ್‌ಛಂದಗಳೊಳಗೆ ಮೊದಲನೆಯದರ ಪಾದಗಳಲ್ಲಿ ಅಕ್ಷರಸಂಖ್ಯಾಸಮತೆ ಮಾತ್ರವಲ್ಲ, ಗುರುಲಘುವಿನ್ಯಾಸಸಮತೆಯೂ ಇದ್ದು, ಇದರ ಛಂದೋರೂಪವು ಪೂರ್ಣವಾಗಿ "ಇಂದ್ರವಜ್ರವೃತ್ತ"ಕ್ಕೆ ಸಮ–ನಾಗಿದೆ. ಎರಡನೆಯ ಛಂದದ ಪೂರ್ವಾರ್ಧವೂ ಆ ವೃತ್ತದ ಅರ್ಧದ ಹಾಗೆಯೇ ಇದೆಯಾದರೂ – ಅದರ ಉತ್ತರಾರ್ಧಕ್ಕೂ ಆ ವೃತ್ತಕ್ಕೂ ಸಾಮ್ಯದ ಲೇಶವೂ ಇಲ್ಲ; ಅಲ್ಲದೆ ಆ ಭಾಗದಲ್ಲಿ ಅಕ್ಷರಸಂಖ್ಯಾಸಮತೆಯೂ ಇಲ್ಲ.

ತ್ರಿಷ್ಟುಪ್ ಮತ್ತು ಜಗತೀಚ್ಛಂದಗಳ ಈ ಕೆಲವು ಉದಾಹರಣಗಳಿಂದ – ಗುರುಲಘುವ್ಯವಸ್ಥೆ ಹಾಗೂ ತತ್ಫಲವಾಗಿ ಗತಿಸೌಂದರ್ಯವು ಆ ಛಂದೋ

ಬಂಧಗಳ ಲಕ್ಷ್ಯವಾಗಿರಲಿಲ್ಲವೆಂಬುದು ಖಚಿತವಾಗುತ್ತದೆ. ಆದುದರಿಂದ – ಅವು-ಗಳಲ್ಲಿ ಉಪಜಾತಿಗಳ (ಅರ್ಥಾತ್ ಇಂದ್ರವಜ್ರಾದಿಗಳ) ಹೋಲಿಕೆಯ ವ್ಯವಸ್ಥಿತ ಗತಿಸ್ವರೂಪಗಳು ಅಲ್ಲಲ್ಲಿ (ಉದಾ: A(೧)ರ ಮೂರನೆಯ ಪಾದ; A(೨)ರ ಎರಡನೆಯ ಪಾದ; B(೨)ರ "ಸಯುಜಾ ಸಖಾಯಾ", "ಪರಿಷ ಸ್ವಜಾತೇ", "ಅಭಿಚಾಕಶೀತಿ" ಎಂಬ ಭಾಗಗಳು: C(೧) ಸಂಪೂರ್ಣ; C(೨)ರ ಪೂರ್ವಾರ್ಧ.) ಉನ್ಮೀಲಿಸಿರುವುದು ಉದ್ದೇಶಪೂರ್ವಕವೇನೂ ಆಗಿರದೆ, ಯಾದೃಚ್ಛಿಕವಾಗಿ ಒದಗಿಬಂದವುಗಳೆಂದೇ ತಿಳಿಯಬೇಕಾಗುತ್ತದೆ. ವೈದಿಕಬಂಧಗಳಲ್ಲಿ ಸಾಧಾರಣ-ವಾಗಿ ಕಂಡುಬರುವ ಒಂದು ಛಂದೋವ್ಯವಸ್ಥೆಯೆಂದರೆ ಅಕ್ಷರಸಂಖ್ಯಾಸಮತೆ (ಹಾಗೂ ಪಾದಾಂತಯತಿ)ಯಾಗಿದೆ. ಆದರೆ ಈ ಸಮತೆಯೂ ಸರ್ವಥಾ ನಿರಪ-ವಾದವಲ್ಲವೆಂಬುದನ್ನು B(೧), B(೨), C(೨)ನೆಯ ಉದಾಹರಣಗಳು (ಮತ್ತು ಹಿಂದೆ 90ನೆಯ ಟಿಪ್ಪಣಿಯಲ್ಲಿ ಉದಾಹೃತವಾದ ಅನುಷ್ಟುಪ್ ಛಂದಗಳಲ್ಲಿ ಎರಡು, ಹಾಗೂ ಅಲ್ಲಿ ಉದಾಹೃತವಾದ ಗಾಯತ್ರೀಚ್ಛಂದಗಳು) ತೋರಿಸುತ್ತವೆ.

ಛಂದಃಶಾಸ್ತ್ರಗ್ರಂಥಗಳಲ್ಲಿ ಉಪಜಾತಿಗಳ ಆಧಾರವಾಗಿ ಗೃಹೀತವಾಗಿರುವ (ಇಂದ್ರವಜ್ರ, ಉಪೇಂದ್ರವಜ್ರ, ಇಂದ್ರವಂಶ, ವಂಶಸ್ಥ ಎಂಬ) "ವೃತ್ತ"ಗಳನ್ನೂ, (ಎರಡು ಬಗೆಯ) ಉಪಜಾತಿಗಳನ್ನೂ, ಮಹಾಭಾರತಾದಿಗಳಲ್ಲಿ ಕಂಡುಬರುವ (ಉಪಜಾತಿಗಳಂತಹ) ಅಕ್ಷರಜಾತಿಗಳನ್ನೂ, ವೈದಿಕಗ್ರಂಥಗಳ ತ್ರಿಷ್ಟುಪ್ ಮತ್ತು ಜಗತೀಚ್ಛಂದಗಳನ್ನೂ ಗುರುಲಘುವ್ಯವಸ್ಥಾದೃಷ್ಟಿಯಿಂದ ಐತಿಹಾಸಿಕವಾಗಿ ಪರಾ-ಮರ್ಶಿಸುವಾಗ – ಇಲ್ಲಿ ಮೊದಮೊದಲು ಹೆಸರಿಸಿದವುಗಳಿಗೆ ಮತ್ತೆಮತ್ತೆ ಹೆಸರಿಸಿದವುಗಳು ಮಾತೃಕೆಗಳಾಗಿ ತೋರಿಬರುತ್ತವೆ. ಬಂಧದಲ್ಲೊಂದು ವ್ಯವಸ್ಥೆ-ಯಿಲ್ಲದೆ ಛಂದೋಗತಿಸೌಂದರ್ಯವು ಮೂಡಿಬರುವುದಿಲ್ಲ; ಗತಿಸೌಂದರ್ಯ-ವಿಲ್ಲದೆ ಛಂದೋಬಂಧವು ಲೋಕಪ್ರಿಯವಾಗುವಂತಿಲ್ಲ. ಹಿಂದೊಮ್ಮೆ ಹೇಳಿದಂತೆ, ಲೌಕಿಕಬಂಧಗಳಿಗೆ ಗತಿಸೌಂದರ್ಯವು ಜೀವಾಳದಂತಿರುವ ಕಾರಣ, ವೈದಿಕ-ಬಂಧವು ಲೌಕಿಕವಾಗಿ ಮಾರ್ಪಡುವ ಕಾಲದಲ್ಲಿ – (ಯಾದೃಚ್ಛಿಕವಾಗಿ) ಆ ವೈದಿಕಬಂಧಗಳಲ್ಲಿ ಅಲ್ಲಲ್ಲಿ ಉನ್ಮೀಲಿಸಿದ ಗತಿವಿಶೇಷಗಳನ್ನು ಗ್ರಹಿಸಿ, ಅವುಗಳನ್ನು ವ್ಯಾಪಕವಾಗಿಸುವ ಮೂಲಕ ಗತಿಸೌಂದರ್ಯವನ್ನೊದಗಿಸುವ ಪ್ರಯತ್ನಮಾಡಿ-ದುದರ ಫಲವಾಗಿ ಮಹಾಭಾರತಾದಿಗಳ ಆ ಅಕ್ಷರಜಾತಿಗಳು ಹುಟ್ಟಿದುವೆಂದೂ, ಆ ಅಕ್ಷರಜಾತಿಗಳ ಗುರುಲಘುವಿನ್ಯಾಸದಲ್ಲಿ ಸ್ಥಿರತೆಯನ್ನು ಹೆಚ್ಚಿಸುತ್ತಾ ಹೋದಾಗ "ಉಪಜಾತಿ"ಗಳು ರೂಪುಗೊಂಡವೆಂದೂ, ಆ ಉಪಜಾತಿಗಳ ಪಾದಗಳ ಗುರು-ಲಘುವಿನ್ಯಾಸಗಳಲ್ಲಿ ಸಂಪೂರ್ಣ ಸಮತೆಯನ್ನನುಗೊಳಿಸಿದಾಗ ಪೂರ್ವೋಕ್ತವಾದ ನಾಲ್ಕು "ವೃತ್ತ"ಗಳು ಉದ್ಭವಿಸಿದವೆಂದೂ ಊಹಿಸುವುದು ತಪ್ಪಾಗಲಾರದೆನ್ನ-ಬಹುದು.

ತಾತ್ಪರ್ಯವೇನೆಂದರೆ – ಗತಿಸೌಂದರ್ಯವು ಲಕ್ಷ್ಯವಾಗಿರದಿದ್ದ ವೈದಿಕ "ಅನುಷ್ಟುಪ್ ಛಂದ"ವು, ಗತಿಸೌಂದರ್ಯಲಾಭಕ್ಕಾಗಿ ಮಾಡಿದ (ಲೌಕಿಕ)

ಪ್ರಯೋಗಗಳ ಅಂತಿಮಫಲವಾಗಿ (ಸುಪ್ರಸಿದ್ಧವಾದ) "ಶ್ಲೋಕ" ಎಂಬ ಸ್ವರೂಪದಲ್ಲಿ ಒಂದು ಸ್ಥಿರತೆಯನ್ನು ಪಡೆದು ಲೌಕಿಕವಾಙ್ಮಯದಲ್ಲೆಲ್ಲ ನೆಲೆಗೊಂಡ ಹಾಗೆಯೇ – ಗತಿಸೌಂದರ್ಯವು ಲಕ್ಷ್ಯವಾಗಿರದಿದ್ದ ತ್ರಿಷ್ಟುಪ್ ಮತ್ತು ಜಗತೀ ಎಂಬ ವೈದಿಕಚ್ಛಂದಗಳು ಸಹ, ಲೌಕಿಕಪ್ರಯೋಗಗಳಲ್ಲಿ ಕ್ರಮಶಃ ವಿಕಸಿತವಾಗಿ, ಕೊನೆಗೆ (ಛಂದಃಶಾಸ್ತ್ರಪ್ರೋಕ್ತವಾಗಿರುವಂತಹ) ಸುವ್ಯವಸ್ಥಿತ ರೂಪವನ್ನು ಧರಿಸಿ ಕಾವ್ಯಾದಿಗಳಲ್ಲಿ ಆಶ್ರಯಪಡೆದು, ಛಂದೋವಿದರಿಂದ "ಉಪಜಾತಿ"ಗಳೆಂದು ಹೆಸರಿಸಲ್ಪಟ್ಟವೆಂದು ತಿಳಿಯುವುದು ಯುಕ್ತವಾಗಿದೆ. ಆದುದರಿಂದ –ಇಂದ್ರವಜ್ರಾದಿಗಳ ಮಿಶ್ರಣದಿಂದ ಉಪಜಾತಿಗಳ ನಿಷ್ಪತ್ತಿಯನ್ನು ಹೇಳುವ ಛಂದಃಶಾಸ್ತ್ರ ಸಂಪ್ರದಾಯವು (ಲಕ್ಷಣನಿರೂಪಣವಿಷಯದಲ್ಲಿ ಸೌಲಭ್ಯವನ್ನೊದಗಿಸುವ ಕಾರಣ) ಲಾಕ್ಷಣಿಕವಾಗಿ ಸ್ವೀಕಾರ್ಯ-ವೇ ಆದರೂ – (ಛಂದಃಶಾಸ್ತ್ರ ಸಂಪ್ರದಾಯದ) ಆ ಜನ್ಯ ಜನಕ ಭಾವವನ್ನು ಒಂದು ಐತಿಹಾಸಿಕ ತಥ್ಯವಾಗಿ ಪರಿಗಣಿಸುವುದು ಯುಕ್ತವೆನಿಸಲಾರದು.[93]

---

93. {'ಉಪಜಾತಿ' ಎಂಬ ಹೆಸರು} ಈ ಮೇಲಿನ ಅಭಿಪ್ರಾಯವನ್ನು 'ಉಪಜಾತಿ' ಎಂಬ ಹೆಸರೇ ಸೂಚಿಸುವ ಹಾಗಿದೆ: ಈ ಹೆಸರಿನಲ್ಲಿ 'ಉಪ' ಎಂಬ ಉಪಸರ್ಗವು 'ಸಮೀಪ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆಯೆಂದು ತಿಳಿದಾಗ – 'ಉಪಜಾತಿ' ಎಂಬ ಸಂಜ್ಞೆಗೆ "ಜಾತಿಗೆ ಸಮೀಪವಾದುದು" ಎಂದರೆ, "ಜಾತಿ" ಎಂಬ ವರ್ಗದ ಛಂದೋಬಂಧಗಳ ಲಕ್ಷಣವನ್ನು ಒಂದಿಷ್ಟು ಪಡೆದಿರುವ ಛಂದೋಬಂಧ – ಎಂಬರ್ಥವು ನಿಷ್ಪನ್ನವಾಗುತ್ತದೆ. "ಜಾತಿ" ಎಂಬುದು "ಏಕದೇಶಸ್ಥಿರ"ವಾದ ಛಂದೋಬಂಧಕ್ಕೆ ಮೀಸಲಾಗಿರುವ ಹೆಸರು. ಪ್ರಸ್ತುತ ವಿಚಾರಕ್ಕೆ ವಿಷಯವಾಗಿರುವ ಉಪಜಾತಿಗಳ ಪಾದಾದಿಯು ಮಾತ್ರ ಅಸ್ಥಿರವಾಗಿದ್ದು ಉಳಿದ ಭಾಗವೆಲ್ಲವೂ 'ಗುರುಲಘುಸ್ಥಿರ'ವಾಗಿರುತ್ತದೆ. ಆದರೆ ಅನುಷ್ಟುಪ್‌ಶ್ಲೋಕ ಮೊದಲಾದ "ಜಾತಿಬಂಧ"ಗಳಲ್ಲಿ ಅಸ್ಥಿರಾಂಶವೇ ಅಧಿಕವಾಗಿದ್ದು, ಸ್ಥಿರಾಂಶವು ಬಹಳ ಕಡಮೆಯಾಗಿರುವ ಕಾರಣ 'ಏಕದೇಶಸ್ಥಿರ' ಎಂಬ ಲಕ್ಷಣವು ಅವುಗಳಿಗೆ ಪರಿಪೂರ್ಣವಾಗಿ ಅನ್ವಯಿಸುತ್ತದೆ. 'ಉಪಜಾತಿ'ಗಳಲ್ಲಾದರೋ ಸ್ಥಿರಾಂಶವೇ ಬಹಳ ದೊಡ್ಡದಾಗಿದ್ದು, ಅಸ್ಥಿರಾಂಶವು ಈಷನ್ಮಾತ್ರ-ವಾಗಿರುವ ಕಾರಣ, 'ಏಕದೇಶಸ್ಥಿರ' ಎಂಬ ಲಕ್ಷಣವು ಇವುಗಳಿಗೆ ನಾಮಮಾತ್ರವಾಗಿ ಅನ್ವಯಿಸುವುದಾಗಿದೆ. ಹೀಗೆ ಇವುಗಳಲ್ಲಿ 'ಜಾತಿ' ಎಂಬ ಹೆಸರನ್ನು ಪಡೆಯುವುದಕ್ಕೆ ಬೇಕಾಗಿರುವ ಅರ್ಹತೆ ಅತ್ಯಲ್ಪವಾಗಿರುವುದರಿಂದ, ಇವಕ್ಕೆ 'ಉಪಜಾತಿಗಳು' – ಎಂದರೆ ಜಾತಿವರ್ಗದ ಸಮೀಪದಲ್ಲಿರುವ ಛಂದೋಬಂಧಗಳು – ಎಂಬ ಹೆಸರು ಬಂದುದು ಸ್ವಾಭಾವಿಕವೇ ಸರಿ. ಇವು ಮೂಲತಃ ಇಂದ್ರವಜ್ರಾದಿಗಳ ಸಂಮಿಶ್ರಣದಿಂದಲೇ ಉದ್ಭವಿಸಿ-ದ್ದುವಾಗಿದ್ದರೆ, ಇವಕ್ಕೆ ಉಪಜಾತಿಗಳೆಂದು ಹೆಸರು ಬರುತ್ತಿರಲಿಲ್ಲ. ಏಕೆಂದರೆ, ಪೂರ್ಣವಾಗಿ ಗುರುಲಘುಸ್ಥಿರವಾದ ವೃತ್ತಪಾದಗಳ ಮಿಶ್ರಣದಿಂದ ಹುಟ್ಟಿದ ಛಂದೋಬಂಧಕ್ಕೆ ಜಾತಿತ್ವ ಸೂಚಕವಾದ ಹೆಸರನ್ನಿಡುವುದು ಸಂಭಾವ್ಯವಲ್ಲ. ಆದುದರಿಂದ – ಇವು (ಲಾಕ್ಷಣಿಕ ವ್ಯವಸ್ಥೆಯಲ್ಲಿ ಮಾತ್ರವಲ್ಲದೆ) ಐತಿಹಾಸಿಕವಾಗಿಯೂ ಇಂದ್ರವಜ್ರಾದಿಗಳ ಅಪತ್ಯಗಳಾಗಿರುತ್ತಿ-ದ್ದರೆ, ಇವುಗಳಿಗೆ "ಮಿಶ್ರವೃತ್ತ"ಗಳೆಂಬ ಹೆಸರೇ ಛಂದೋಗ್ರಂಥಗಳಲ್ಲಿ ನೆಲಸುತ್ತಿತ್ತು ಹೊರತು, "ಉಪಜಾತಿ"ಗಳೆಂದಲ್ಲ.

{ವೈದಿಕ ಛಂದಗಳ ಗತಿಸೌಂದರ್ಯದ ರಹಸ್ಯ}

ವಿಷಮಗತಿಯ ಪದ್ಯಗಳ ಗತಿಸೌಂದರ್ಯಕ್ಕೆ ಅನಿವಾರ್ಯ ಹೇತುಗಳು ಎರಡು: (೧) ಪಾದಪರಿಮಾಣವ್ಯವಸ್ಥೆ, (೨) ಗುರುಲಘುವಿನ್ಯಾಸವ್ಯವಸ್ಥೆ. 'ಛಂದ'ಗಳಲ್ಲಿ ಎಂದರೆ ವೈದಿಕಪದ್ಯಗಳಲ್ಲಿ ಈ ಎರಡರೊಳಗೆ ಮೊದಲನೆಯದು ಸುಮಾರಾಗಿ ಉಂಟೆನ್ನುವಂತಿದೆಯಾದರೂ, ಎರಡನೆಯದು (ಸಾಧಾರಣವಾಗಿ) ಇಲ್ಲವೆಂದೇ ಹೇಳಬಹುದೆಂಬ ಹಾಗಿದೆ. (ಈ ಮಾತು ಹಿಂದೆ ಉದಾಹರಿಸಿದ ಛಂದಗಳಿಂದಲೇ ವಿಶದವಾಗಬಹುದಾದುದರಿಂದ, ಬೇರೆ ಉದಾಹರಣಗಳು ಇಲ್ಲಿ ಅನವಶ್ಯ.) ಇದರಿಂದ, ಗತಿಸೌಂದರ್ಯವು ವೈದಿಕಛಂದಗಳ ಲಕ್ಷ್ಯವಾಗಿರ-ಲಿಲ್ಲವೆಂಬುದು ಸುಸ್ಪಷ್ಟವಾಗುತ್ತದೆ. ಆದರೂ – ಗತಿಸೌಂದರ್ಯವೆಂಬುದು ಅವುಗಳಲ್ಲಿ ಇಲ್ಲವೇ ಇಲ್ಲವೆಂದು ಹೇಳುವುದು ಯಥಾರ್ಥವೆನಿಸಲಾರದು. ಏಕೆಂದರೆ, ಅವುಗಳ ಪಠನಕಾಲದಲ್ಲಿ ಅವುಗಳಲ್ಲಿರುವ ವಿಶಿಷ್ಟವಾದೊಂದು 'ಶ್ರವ್ಯತ್ವ'ದ, ಎಂದರೆ ಗತಿಸೌಂದರ್ಯದ, ಅನುಭವವು ಸರ್ವರಿಗೂ ಆಗಿಯೇ ಆಗುತ್ತದೆ. ಇದರ ರಹಸ್ಯವೇನು?

ಸಂಸ್ಕೃತಛಂದಃಶಾಸ್ತ್ರಪಾರಂಗತರಾದ ಆಧುನಿಕ ವಿದ್ವಾಂಸರೊಳಗೆ ಮೂರ್ಧನ್ಯರೆಂದು ವಿಖ್ಯಾತರಾಗಿರುವ ಶ್ರೀಮಾನ್ ವೇಲಣಕರರು ಹೀಗೆ ಹೇಳುತ್ತಾರೆ: "All these Vedic metres are based on the 'swarasangita' or the music of voice - modulation, where the time – element plays no important role in the production of the metrical music." (Jayadaman, Introduction, p.9)

ಈ ಮಾತುಗಳ ಸಾರಾಂಶ ಇದು: "ವೈದಿಕಪದ್ಯಬಂಧಗಳ ಛಂದಃಸೌಂದರ್ಯವು (=ಛಂದೋಗತಿಸೌಂದರ್ಯ = 'ಶ್ರವ್ಯತ್ವ' = metrical music) 'ಸ್ವರಪರಿವರ್ತನ'ವನ್ನು ಆಧರಿಸಿದೆ ಹೊರತು, ಆ ಸೌಂದರ್ಯದ ನಿಷ್ಪತ್ತಿಯಲ್ಲಿ ಅಕ್ಷರೋಚ್ಚಾರದ ಕಾಲಪರಿಮಾಣಕ್ಕೆ ಮಹತ್ತ್ವವಿಲ್ಲ."

ಇಲ್ಲಿ ಸ್ವರಪರಿವರ್ತನ(voice - modulation)ವೆಂದು ಹೇಳಿದುದು, ವೇದಸೂಕ್ತಗಳ ಪಠನದಲ್ಲಿ ನಿಯತವಾಗಿರುವ ಉದಾತ್ತಾದಿ 'ತ್ರೈಸ್ವರ್ಯ'ವಿಧಾನ-ವನ್ನಾಗಿದೆ. ಈ ಉದಾತ್ತಾದಿ ಮೂರು ಪಾಠ್ಯಸ್ವರಗಳಿಗೆ "ನ್ಯಾಯ"ಗಳೆಂಬ ಹೆಸರೂ ಇದೆ. (ಕುಮಾರಸಂಭವ, ಸರ್ಗ II, ಶ್ಲೋಕ ೧೨) ಈ ಸ್ವರಭೇದಗಳು ಸಂಗೀತದ ಸಪ್ತಸ್ವರಾಂತರ್ಗತವಾದ "ಶ್ರುತಿ"(pitch)ಭೇದಗಳೇ ಹೊರತು ಬೇರೇನೂ ಅಲ್ಲ-ವೆಂಬುದನ್ನು ಶಿಕ್ಷಾಶಾಸ್ತ್ರವು ಸ್ಪಷ್ಟವಾಗಿ ತಿಳಿಸುತ್ತದೆ. (ಪಾಣಿನೀಯಶಿಕ್ಷಾ – ಶ್ಲೋಕ – ೧೨) ಆದುದರಿಂದ ಇವು ವಸ್ತುತಃ 'ಗೀತಸ್ವರ'ಗಳೇ ಆಗಿವೆ.[94] "ಗೀತಸ್ವರ"-

---

94. 'ಸ್ವರ' ಎಂಬ ಪದಕ್ಕೆ – ವ್ಯಾಕರಣಸಂದರ್ಭಗಳಲ್ಲಿ 'ಸ್ವರಾಕ್ಷರ'(vowel)ವೆಂದು, ಸಂಗೀತವಿಚಾರಗಳಲ್ಲಿ 'ಸಪ್ತಸ್ವರ'ರೂಪವಾದ 'ಶ್ರುತಿಭೇದ'(musical note)ವೆಂದು, ಪಠನ-

ಗಳು ಯಾವುದೊಂದು ಛಂದೋಬಂಧದ ಪಠನಗಾಯನಗಳ ಆಧಾರಗಳಾಗ-ಬಲ್ಲವೇ ಹೊರತು, ಆ ಛಂದೋರೂಪಕ್ಕೆ ಆಧಾರಭೂತವಾದ ಛಂದೋಲಕ್ಷಣ-ಗಳೆನಿಸಿಕೊಳ್ಳಲಾರವು. ಅಷ್ಟುಮಾತ್ರವಲ್ಲ, ಪ್ರಸ್ತುತವಾದ 'ಸ್ವರಪರಿವರ್ತನ' ಅರ್ಥಾತ್ 'ತ್ರೈಸ್ವರ್ಯ'ವಿಧಾನವು ವೈದಿಕಪದ್ಯಬಂಧಗಳಿಗೆ (=ಋಕ್‌ಛಂದಗಳಿಗೆ) ಮಾತ್ರ ಸೀಮಿತವಾದುದಾಗಿರದೆ, ವೈದಿಕಗದ್ಯಕ್ಕೂ (=ಯಜುಸ್) ಅಷ್ಟೇ ಕಟ್ಟು-ನಿಟ್ಟಾಗಿ ಅನ್ವಯಿಸುವಂತಹದಾಗಿದೆ.[95] ವಸ್ತುಸ್ಥಿತಿ ಹೀಗಿರುವುದರಿಂದ, ಗದ್ಯಪದ್ಯ

---

ಗಾಯನ ಸಂದರ್ಭಗಳಲ್ಲಿ 'ಶಾರೀರ'ಎಂದರೆ ಕಂಠಸ್ವರ(voice)ವೆಂದು, ವೇದಪಠನದಲ್ಲಿ ಉದಾತ್ತಾದಿ 'ತ್ರಿಸ್ವರ' ಅಥವಾ 'ನ್ಯಾಯತ್ರಯ'ವೆಂದು – ಹೀಗೆ ಬೇರೆಬೇರೆ ಅರ್ಥಗಳು ಬರುತ್ತವೆ. ಈ ಎಲ್ಲಾ ಅರ್ಥಗಳಲ್ಲಿ 'ಸ್ವರ' ಎಂಬ ಒಂದೇ ಪದವನ್ನು ಬಳಸುವುದು ಕೆಲವು ವೇಳೆ ಅಸ್ಪಷ್ಟತೆಗೆ ಕಾರಣವಾಗುತ್ತದೆ. ಸಂದರ್ಭಾನುಸಾರವಾಗಿ ಬರುವ ಈ ಬೇರೆ ಬೇರೆ ಅರ್ಥಗಳಿಗೆ, ಇಂಗ್ಲಿಷಿನಲ್ಲಿರುವಂತೆ, ನಮ್ಮ ಭಾಷೆಗಳಲ್ಲಿಯೂ ಬೇರೆ ಬೇರೆ ಶಬ್ದಗಳಿರುತ್ತಿದ್ದರೆ ಅರ್ಥಗ್ರಹಣವು ಸುಲಭತರವಾಗುತ್ತಿತ್ತೆಂಬುದರಲ್ಲಿ ಅಭಿಪ್ರಾಯಭೇದವಿರಲಾರದಾದರೂ – ಆ ಎಲ್ಲಾ ಅರ್ಥಗಳಲ್ಲಿ ಆ ಒಂದೇ ಪದದ ಪ್ರಯೋಗವು ರೂಢವಾಗಿರುವುದು ಅವೈಜ್ಞಾನಿಕವೇನೂ ಅಲ್ಲ. ಅದು ಹೇಗೆಂದರೆ – ನಾವು ಯಾವುದೊಂದು 'ಸ್ವರಾಕ್ಷರ'ವನ್ನು ಉಚ್ಚರಿಸುವಾಗ ಅದು ಯಾವುದಾದರೊಂದು 'ಶ್ರುತಿಸ್ಥಾನ'(pitch)ದಲ್ಲಿಯೇ ಇರುತ್ತದೆ. ಮತ್ತು ಸಂಗೀತದ ಸಪ್ತಸ್ವರಗಳಲ್ಲಿ ನಾವು ಯಾವುದೊಂದನ್ನಾದರೂ ಕೇವಲವಾಗಿ ಕಂಠದಿಂದ ಹೊಮ್ಮಿಸುವಾಗ ಅದು ಯಾವುದಾದರೊಂದು ಸ್ವರಾಕ್ಷರರೂಪದಲ್ಲಿಯೇ ಪ್ರಕಟವಾಗುತ್ತದೆ. ಹಾಗೆಯೇ – ನಾವು ಕೇಳುವ ಯಾವುದೊಂದು ಧ್ವನಿಯಾದರೂ ಒಂದು ಶ್ರುತಿಸ್ಥಾನದಲ್ಲಿ ಇರುತ್ತದೆ. ಉದಾತ್ತಾದಿಗಳಂತೂ ಷಡ್ಜಾದಿ ಸಪ್ತಸ್ವರಗಳೊಳಗೆ ಅಡಕವಾಗುತ್ತವೆಂಬುದನ್ನು ಶಿಕ್ಷಾಶಾಸ್ತ್ರವು ಹೇಳುತ್ತದೆ. ಹೀಗೆ (ಪರಮಾರ್ಥತಃ) ಅವೆಲ್ಲ ಬೇರೆಬೇರಾಗಿರುವುದಿಲ್ಲ-ವಾದುದರಿಂದ, ಆ ಎಲ್ಲಾ ಅರ್ಥಗಳಲ್ಲಿಯೂ 'ಸ್ವರ' ಎಂಬ ಒಂದೇ ಶಬ್ದವು ಸಂಸ್ಕೃತ ಭಾಷೆಯಲ್ಲಿ ನೆಲಸಿರುವುದಾಗಿದೆ. ತತ್ಪರಿಣಾಮಾಗಿ ನಮ್ಮ ದೇಶದ ನಾನಾಭಾಷೆಗಳಲ್ಲಿಯೂ ಆ ಸಂಪ್ರದಾಯವೇ ರೂಢವಾಗಿರುತ್ತದೆ. ಹೀಗೆ ಒಂದೇ ಶಬ್ದವನ್ನು ಆ ಎಲ್ಲಾ ಅರ್ಥಗಳನ್ನು ಬಳಸುವುದು 'ಅಭಿಜ್ಞ'ರಾಗಿರುವವರಿಗೆ ಯಾವ ಸಂದಿಗ್ಧತೆಯನ್ನೂ ತಂದೊಡ್ಡುವುದಿಲ್ಲ-ವಾದರೂ, ಸಾಮಾನ್ಯರ ತಿಳಿವಿಗೆ ಅದರಿಂದ ತೊಡಕಾಗದಿರುವುದಿಲ್ಲ. ಅದಕ್ಕಾಗಿ ಈ ನಿಬಂಧದಲ್ಲಿ, ಅವಶ್ಯವಿದ್ದಲ್ಲೆಲ್ಲ 'ಸ್ವರ' ಎಂಬುದನ್ನು ಸವಿಶೇಷಣವಾಗಿ – ಉದಾ : 'ಗೀತಸ್ವರ' (musical note) 'ಕಂಠಸ್ವರ' (voice), 'ಪಾಠ್ಯಸ್ವರ' (= ತ್ರಿಸ್ವರ, ನ್ಯಾಯತ್ರಯ) – ಹೀಗೆ ಪ್ರಯೋಗಿಸಲಾಗಿದೆ.

95. {**ತ್ರೈಸ್ವರ್ಯವು ವೈದಿಕ ಛಂದೋಬಂಧಗಳ ಲಕ್ಷಣವಲ್ಲ**} ವೇದಗಳು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ನಾಲ್ಕಾಗಿದ್ದರೂ – ರಚನಾರೂಪದಲ್ಲಿ ಅವು (ಪದ್ಯ ಮತ್ತು ಗದ್ಯ ಎಂದು) ಎರಡೇ ವಿಧವಾಗಿವೆ. ವೈದಿಕಪದ್ಯಕ್ಕೆ 'ಋಕ್' ಎಂದೂ, ವೈದಿಕಗದ್ಯವಾಕ್ಯಕ್ಕೆ 'ಯಜುಸ್' ಎಂದೂ ಹೆಸರು. (ಯಾವುದೊಂದು) ಋಕ್ಕನ್ನು ತ್ರೈಸ್ವರ್ಯ ವಿಧಾನದಿಂದ ಪಠಿಸದೆ, ಸಪ್ತಸ್ವರಯುಕ್ತವಾಗಿ ಹಾಡಿದಾಗ, ಅದು 'ಸಾಮ' ಎನಿಸಿಕೊಳ್ಳುತ್ತದೆ. 'ಸಾಮ' ಎಂಬುದು 'ಸ+ಅಮ' ಎಂಬೆರಡು ಶಬ್ದಗಳ ಸಂಯುಕ್ತರೂಪವೆಂದೂ, 'ಅಮ' ಎಂದರೆ 'ಗಾನಸ್ವರ'ವೆಂದೂ, 'ಅಮ'ಗಳಿಂದ ಅರ್ಥಾತ್ ಸಪ್ತಸ್ವರಗಳಿಂದೊಡಗೂಡಿರುವು-

ಎಂಬ ದ್ವಿವಿಧರಚನೆಗಳಿಗೂ ನಿರ್ವಿಶೇಷವಾಗಿ ಅನ್ವಯಿಸುವಂತಹ ಹಾಗೂ ಕಾಲಪರಿಮಾಣನಿರಪೇಕ್ಷವಾದೊಂದು "ಗೀತಸ್ವರತತ್ತ್ವ"ವು, ಪದ್ಯದ ಗತಿಗೆ ಹೇತುವಾದ "ಛಂದೋಲಕ್ಷಣ"ವೆಂದಾಗುವುದು ಹೇಗೋ, ನಾನರಿಯೆ!

ವಾಸ್ತವಿಕವಾಗಿ ಹೇಳುವುದಾದರೆ – ಶ್ರೀ ವೇಲಣಕರರು 'ಸ್ವರಪರಿವರ್ತನ' (voice - modulation) ಎಂದು ಹೆಸರಿಸಿರುವ ತ್ರೈಸ್ವರ್ಯವಿಧಾನವು "ವೈದಿಕ ಭಾಷಾಲಕ್ಷಣ"ವೇ ಆಗಿದೆ ಹೊರತು, ವೈದಿಕಪದ್ಯಗಳ 'ಛಂದೋಲಕ್ಷಣ'ವಲ್ಲ. ತ್ರೈಸ್ವರ್ಯವು ವೈದಿಕಭಾಷೆಯ ಲಕ್ಷಣವಾಗಿರುವುದರಿಂದಲೇ, ಅದು ಋಕ್ ಮತ್ತು ಯಜುಸ್ (ವೈದಿಕಪದ್ಯ ಮತ್ತು ವೈದಿಕಗದ್ಯ) ಎಂಬ ಎರಡು ವಾಙ್ಮಯರೂಪಗಳಿಗೂ ನಿರ್ವಿಶೇಷವಾಗಿ ಅನ್ವಯಿಸುವುದಾಗಿದೆ.[96]

---

ದರಿಂದಲೇ ಆ ವೇದಕ್ಕೆ 'ಸಾಮ'ವೆಂಬ ಹೆಸರಾದುದೆಂದೂ 'ಸಾಮಗ'(= ಸಾಮಗಾಯಕ)ರು ಹೇಳುತ್ತಾರೆ. 'ಸಾಮ'ವೆನಿಸದ ವೇದ(ಸಂಹಿತೆಯ)ಭಾಗಗಳೆಲ್ಲವೂ – ಆ ಭಾಗವು ಪದ್ಯರೂಪ ವಾಗಿದ್ದರೂ ಸರಿ, ಗದ್ಯರೂಪವಾಗಿದ್ದರೂ ಸರಿ – ತ್ರೈಸ್ವರ್ಯನಿಯಮಕ್ಕೆ ನಿರಪವಾದವಾಗಿ ಒಳಪಟ್ಟಿರುತ್ತವೆ. ಉದಾ:

(ಗದ್ಯ) ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮಃ ॥

[ಯಜುರ್ವೇದ, ರುದ್ರಾಧ್ಯಾಯ; ಅನುವಾಕ ೨-ಯಜುಸ್-೧)

(ಪದ್ಯ) ಯಾತ ಇಷುಃ ಶಿವತಮಾ ।
ಶಿವಂ ಬಭೂವ ತೇ ಧನುಃ ॥
ಶಿವಾ ಶರವ್ಯಾ ಯಾ ತವ ।
ತಯಾ ನೋ ರುದ್ರ ಮೃಡಯ ॥ . ॥

[ಯಜುರ್ವೇದ, ರುದ್ರಾಧ್ಯಾಯ; ಅನುವಾಕ-೧ (ಅನುಷ್ಟುಪ್) ಋಕ್-೨]

96. ತ್ರೈಸ್ವರ್ಯನಿಯಮವು (ವೈದಿಕ) ಪದ್ಯಗಳಿಗೆ ಮಾತ್ರ ಸಂಬಂಧಿಸಿದ ಲಕ್ಷಣವಲ್ಲವೆಂಬುದನ್ನೂ, ಅದು ವೈದಿಕಭಾಷೆಯ ಉಚ್ಚಾರದಲ್ಲಿ ಪದಾನುಗುಣವಾಗಿ ಮತ್ತು ಅರ್ಥಾನುಗುಣವಾಗಿ ಹಾಗೂ ಪ್ರತ್ಯಯಾದಿ ಸಂಯೋಗಾನುಗುಣವಾಗಿ ನೆಲೆಗೊಂಡಿರುವ ಉಚ್ಚಾವಚತ್ವ(= ಏರಿಳಿತ)ವೆಂಬುದನ್ನೂ ಶಿಕ್ಷಾಶಾಸ್ತ್ರದಿಂದ ಮಾತ್ರವಲ್ಲ, ಸಂಸ್ಕೃತವ್ಯಾಕರಣ ಶಾಸ್ತ್ರದಿಂದಲೂ ತಿಳಿಯಬಹುದಾಗಿದೆ. "ಇಂದ್ರಶತ್ರು" ಎಂಬ ಸಮಸ್ತಪದವನ್ನು ತತ್ಪುರುಷ ಸಮಾಸೋಚಿತವಾದ 'ನ್ಯಾಯ'(= ತ್ರೈಸ್ವರ್ಯ)ದಲ್ಲಿ ಪಠಿಸದೆ, ಬಹುವ್ರೀಹಿ ಸಮಾಸೋಚಿತ-ವಾದ ನ್ಯಾಯದಲ್ಲಿ ತ್ವಷ್ಟನು ಯಜ್ಞಕಾಲದಲ್ಲಿ ಪಠಿಸಿದ ಪರಿಣಾಮವಾಗಿ – ಇಂದ್ರನಿಂದ ಹತನಾಗುವ ವೃತ್ರಾಸುರನ ಜನನವಾಯಿತೆಂಬ ಪುರಾಣೋಕ್ತ ಕಥೆಯಿಂದಲೂ ಈ ತಥ್ಯವು ಸಮರ್ಥಿತವಾಗುತ್ತದೆ. "ಇಂದ್ರಶತ್ರುಃ" ಎಂಬುದು ತತ್ಪುರುಷಸಮಾಸವಾಗಿರುವಾಗ, 'ಇಂದ್ರಸ್ಯ ಶತ್ರುಃ' = 'ಇಂದ್ರನ ಶತ್ರು' ಎಂದರೆ "ಇಂದ್ರನನ್ನು ನಾಶ ಮಾಡುವವನು" (ಶತ್ರು = destroyer) ಎಂಬರ್ಥವನ್ನು ಕೊಡುತ್ತದೆ. ಅದು ಬಹುವ್ರೀಹಿಸಮಾಸವಾದಾಗ, 'ಇಂದ್ರಃ ಶತ್ರುಃ ಯಸ್ಯ ಸಃ' = 'ಇಂದ್ರನು ಯಾವನ ಶತ್ರುವೋ ಅವನು,' ಎಂದರೆ "ಯಾವನ ನಾಶವನ್ನು ಇಂದ್ರನು ಮಾಡುವನೋ ಅವನು" ಎಂಬರ್ಥವು ವ್ಯಕ್ತವಾಗುತ್ತದೆ. ಅರ್ಥಾನು-ಗುಣವಾಗಿ ಧ್ವನಿಯಲ್ಲಿ ಏರಿಳಿತಗಳಾಗುವುದು ನಾವಾಡುವ ಎಲ್ಲಾ ಭಾಷೆಗಳಲ್ಲಿಯೂ ಇದ್ದೇ

ಇದೆ. ಆಯಾ ಭಾಷಾಭಾಷಿಗಳು ಸಹಜವಾಗಿ ಸಂಭಾಷಿಸುವುದನ್ನು ಈ ದೃಷ್ಟಿಯಿಂದ ಕಿವಿಗೊಟ್ಟು ಕೇಳಿದರೆ ಇದು ಮನವರಿಕೆಯಾಗುತ್ತದೆ. ಆದರೆ ಕೆಲವು ಭಾಷೆಗಳಲ್ಲಿ ಈ ಏರಿಳಿತಗಳು ವಿಪುಲವಾಗಿ ಮತ್ತು ಸ್ಫುಟತರವಾಗಿಯೂ (ಉದಾ: ಕೊಂಕಣಿ), ಇನ್ನು ಕೆಲವು ಭಾಷೆಗಳಲ್ಲಿ ಕ್ವಚಿತ್ತಾಗಿ ಮತ್ತು ಅಸ್ಫುಟವಾಗಿಯೂ (ಉದಾ: ಕನ್ನಡ) ಗೋಚರಿಸುತ್ತವೆ. ಇಷ್ಟು ಮಾತ್ರವಲ್ಲ, ಒಂದೇ ಭಾಷೆಯಲ್ಲಾದರೂ ಪ್ರಾದೇಶಿಕತೆ ಮೊದಲಾದ ಕಾರಣಗಳಿಂದ ಆ ಸ್ಫುಟತ್ವದಲ್ಲಿ ಹಾಗೂ ಏರಿಳಿತಗಳಲ್ಲಿ ಅಸಮಾನತೆಯೂ ಕಂಡುಬರುತ್ತದೆ. ಧ್ವನಿಯ ಏರಿಳಿತ-ಗಳು 'ಭಾಷಣಗತ' ಮತ್ತು 'ಭಾಷಾಗತ' ಎಂದು ದ್ವಿವಿಧವಾಗಿವೆ. ಭಾಷಣಗತವಾದುದಕ್ಕೆ 'ಕಾಕು' ಎಂಬ ಹೆಸರಿದೆ. ಇದಕ್ಕೆ ಉದಾಹರಣೆ: ಅಭಿಮತಾರ್ಥದಲ್ಲಿಯೂ ವಿಶಂಕಾದಿ-ಗಳಲ್ಲಿಯೂ ಒಂದೇ ಪದರೂಪವು ಪ್ರಯೋಗಿಸಲ್ಪಡುವಾಗ, (ಬಂದನು – ಇದು ಅಭಿಮತ; ಬಂದನು? – ಇದು ವಿಶಂಕೆ.) ಪದಾಂತ್ಯಸ್ವರವು ಬೇರೆಬೇರೆ 'ಶ್ರುತಿ'(pitch)ಗಳನ್ನಾಶ್ರಯಿ-ಸುತ್ತದೆ. ಭಾಷಾಗತವಾದ ಏರಿಳಿತಕ್ಕೆ ಉದಾಹರಣೆ: "ಚೆಲುವೆ". ಈ ಪದರೂಪವು ಸಂದರ್ಭಾನುಸಾರವಾಗಿ ಎರಡು ಬೇರೆ ಬೇರೆ ಅರ್ಥಗಳನ್ನು ಪ್ರಕಟಿಸುತ್ತದೆ. ಇದು ಸ್ತ್ರೀವಾಚಕವಾಗಿರುವಾಗ 'ಸುಂದರಿ' ಎಂಬರ್ಥವನ್ನು ಕೊಡುತ್ತದೆ. ಆದರೆ 'ಚೆಲುವು' ಎಂಬ ಭಾವವಾಚಕಕ್ಕೆ ಅವಧಾರಣಾರ್ಥದಲ್ಲಿ ಎಕಾರವು ಸೇರುವಾಗಲೂ "ಚೆಲುವೆ" ಎಂಬ ರೂಪವು ಸಿದ್ಧಿಸುತ್ತದೆ. ಹಳಗನ್ನಡದಲ್ಲಿ ಹ್ರಸ್ವರೂಪವಾಗಿ ಬಳಕೆಯಲ್ಲಿದ್ದ ಈ ಅವಧಾರಣಾ-ರ್ಥಕವಾದ ಎಕಾರವು ಹೊಸಗನ್ನಡದಲ್ಲಿ – ಹೆಚ್ಚಾಗಿ –ಏಕಾರವಾಗಿಯೇ ಪ್ರಯುಕ್ತವಾಗುತ್ತಿದೆ. ('ಚೆಲುವೇ' = ಸೌಂದರ್ಯವೇ.) ಆದರೆ ಸ್ತ್ರೀವಾಚಕವಾದ 'ಚೆಲುವೆ' ಎಂಬ ಪದದ ಕೊನೆಯ ಎಕಾರವೂ, ಭಾವವಾಚಕವಾದ (ಚೆಲುವು + ಎ) 'ಚೆಲುವೆ' ಎಂಬ ಪದದ ಕೊನೆಯಲ್ಲಿರುವ (ಅವಧಾರಣಾರ್ಥಕ) ಎಕಾರವೂ ಸಮಾನಶ್ರುತಿಯ ಸ್ವರಗಳಲ್ಲ. ಅವಧಾರ-ಣಾರ್ಥಕವಾದ ಎಕಾರವು ಉಚ್ಚಶ್ರುತಿಯಲ್ಲಿಯೂ, ಸ್ತ್ರೀವಾಚಕದ ಕೊನೆಯಲ್ಲಿರುವ ಎಕಾರವು ನೀಚಶ್ರುತಿಯಲ್ಲಿಯೂ ಉಚ್ಚರಿಸಲ್ಪಡುತ್ತದೆ. ಈ ಏರಿಳಿತಗಳನ್ನು ಯಥಾಕ್ರಮವಾಗಿ ಉಚ್ಚರಿಸ-ದಿದ್ದರೆ ಅರ್ಥಗ್ರಹಣವು ಕ್ಲೇಶದಾಯಕವಾಗುತ್ತದೆ; ಮಾತ್ರವಲ್ಲ, ಸಂದರ್ಭವಿಶೇಷಗಳಲ್ಲಿ ಉದ್ದಿಷ್ಟಾರ್ಥವು ಹೊಳೆಯದೆ, ಉದ್ದಿಷ್ಟವಲ್ಲದ ಅರ್ಥವೇ ಗೃಹೀತವಾಗುವಂತಾಗುತ್ತದೆ. ಆದರೆ ಈ 'ಸ್ವರಪರಿವರ್ತನ'ಗಳ ಪರಿಣಾಮವಾಗಿ ಛಂದಃಸ್ಥಿತಿಯಲ್ಲಿ ವ್ಯತ್ಯಾಸವೇನೂ ಆಗುವುದಿಲ್ಲ: 'ಚೆಲುವೆ' ಎಂಬುದರ ಅಂತ್ಯಸ್ವರವನ್ನು ಉಚ್ಚಶ್ರುತಿಯಲ್ಲಿ ಪಠಿಸಿದರೂ ನೀಚಶ್ರುತಿಯಲ್ಲಿ ಪಠಿಸಿದರೂ ಆ ಪದದ ಛಂದಃಸ್ವರೂಪವು ∪∪∪ ಹೀಗೆ ಏಕಪ್ರಕಾರವಾಗಿಯೇ ಇರುತ್ತದೆ. ಇದರಿಂದ, ಶ್ರುತಿಯ ಉಚ್ಚಾವಚತ್ವಕ್ಕೂ ಛಂದಸ್ತತ್ವಕ್ಕೂ ಸಂಬಂಧವಿಲ್ಲವೆಂಬ ತಥ್ಯವು ಸುಸ್ಪಷ್ಟ-ವಾಗುತ್ತದೆ. ತ್ರೈಸ್ವರ್ಯನಿಯಮವಾದರೂ ಇದೇ ಬಗೆಯದಾಗಿದೆ. ಆದುದರಿಂದ ತ್ರೈಸ್ವರ್ಯವು ವೈದಿಕಪದ್ಯಗಳ ಛಂದೋಲಕ್ಷಣವೆಂಬ ಮಾತಿನಲ್ಲಿ ತಥ್ಯಾಂಶವೇನೂ ಇಲ್ಲವೆಂಬುದು ನಿಶ್ಚಯ.

[ತ್ರೈಸ್ವರ್ಯನಿಯಮವು ವೈದಿಕಪದ್ಯಗಳ ಛಂದೋಲಕ್ಷಣವೆಂಬ ಶ್ರೀವೇಲಣಕರರ ಭಾವನೆಗೆ ಆಂಗ್ಲಭಾಷೆಯ ಛಂದೋವಿಧಾನವು ಪ್ರೇರಣೆಯನ್ನೊದಗಿಸಿತ್ತೋ ಏನೋ. ಆ ಛಂದೋವಿಧಾನವು ಅಕ್ಷರೋಚ್ಚಾರದ ಕಾಲಪರಿಮಾಣವನ್ನು, ಎಂದರೆ ಅಕ್ಷರ(syllable)ಗಳ ಉಚ್ಚಾರಕಾಲದ ದೀರ್ಘತ್ವ ಹ್ರಸ್ವತ್ವಗಳನ್ನು (ಮುಖ್ಯವಾಗಿ) ಅವಲಂಬಿಸಿರುವುದಿಲ್ಲ; ಬದಲಾಗಿ, ಉಚ್ಚಾರದ ಏರುಪೇರುಗಳಿಂದ ಎಂದರೆ ಉಚ್ಚಾರದ ಒತ್ತಡ (accent or stress)ದ ತಾರತಮ್ಯದಿಂದ ಉಂಟಾಗುವ 'ನತೋನ್ನತತ್ವ' ಅಥವಾ ಸ್ಫುಟಾಸ್ಫುಟತ್ವವನ್ನು ಅವಲಂಬಿಸಿ-ರುತ್ತದೆ. (ಈ ನಿಬಂಧದ ಮೂರನೆಯ ಪರಿಚ್ಛೇದದಲ್ಲಿ *Encyclopaedia Britanica* ದಿಂದ

ಎತ್ತಿಬರೆದ A (೨) ಅವತರಣಿಕೆಯನ್ನು ಅವಲೋಕಿಸಿರಿ; ಮತ್ತು accent ಎಂಬುದಕ್ಕೆ *Concise Oxford Dictionary*ಯಲ್ಲಿ ಕೊಟ್ಟಿರುವ ಅರ್ಥವಿವೃತಿಯನ್ನೂ ಪರಾಮರ್ಶಿಸಿರಿ.) ಆಂಗ್ಲಭಾಷೆಯ ಅಕ್ಷರೋಚ್ಚಾರಪದ್ಧತಿಯಲ್ಲಿ ಹ್ರಸ್ವದೀರ್ಘಕಾಲಪರಿಮಾಣ ತಾರತಮ್ಯವು ಅನಿಶ್ಚಿತವೂ ಅಸ್ಪಷ್ಟವೂ ಆಗಿರುವುದರಿಂದ, ಕಾಲಪರಿಮಾಣವನ್ನವಲಂಬಿಸಿ ಅಕ್ಷರಗಳ ಗುರುತ್ವಲಘುತ್ವಗಳನ್ನು ನಿರ್ಧರಿಸುವುದು ಆ ಭಾಷೆಯಲ್ಲಿ ಶಕ್ಯವಾಗುವಂತಹದಲ್ಲ. ಈ ಕಾರಣದಿಂದ ಆ ಭಾಷೆಯ ಸಾಂಪ್ರದಾಯಿಕ ಉಚ್ಚಾರದ ಸಹಜಲಕ್ಷಣವಾದ ಅದೊಂದು ಬಗೆಯ ನತೋನ್ನತತ್ವ ಅಥವಾ ಸ್ಫುಟತ್ವತಾರತಮ್ಯವೇ ಛಂದೋಲಕ್ಷಣವಾಗಿ ಸ್ವೀಕೃತವಾಗು- ವಂತಾಯಿತು. ವೈದಿಕಭಾಷೆಯಲ್ಲಿ ಇಂತಹ ಪರಿಸ್ಥಿತಿಯೇನೂ ಇಲ್ಲದಿರುವುದು ಮಾತ್ರವಲ್ಲ, ಅಕ್ಷರೋಚ್ಚಾರದ ಕಾಲಪರಿಮಾಣವಿಷಯದಲ್ಲಿ ಅದು ಇತರ ಎಲ್ಲಾ ಭಾಷೆಗಳಿಗಿಂತ – ಲೌಕಿಕಸಂಸ್ಕೃತಕ್ಕಿಂತಲೂ – ಸೂಕ್ಷ್ಮತರವೂ ಖಚಿತವೂ ಆದ ಕಾಲಮಾನವನ್ನವಲಂಬಿಸಿರುವ ಭಾಷೆಯಾಗಿದೆ. ಇತರ ಭಾಷೆಗಳಲ್ಲಿ ಸ್ವರಾಕ್ಷರಗಳು ಹ್ರಸ್ವ, ದೀರ್ಘ ಎಂದು ಎರಡೇ ಗೃಹೀತವಾಗುವವಾದರೂ, ವೈದಿಕಭಾಷೆಯಲ್ಲಿ ಅವು ಹ್ರಸ್ವ, ದೀರ್ಘ, ಪ್ಲುತ ಎಂದು ಮೂರು ವಿಧವಾಗಿರುತ್ತವೆ. ಇವು ಅನುಕ್ರಮವಾಗಿ ಒಂದು, ಎರಡು, ಮೂರು ಮಾತ್ರಾಕಾಲದವು- ಗಳಾಗಿದ್ದು, ಹಾಗೆ ಕಟ್ಟುನಿಟ್ಟಾಗಿ ಉಚ್ಚರಿಸಲ್ಪಡುವವುಗಳಾಗಿರುತ್ತವೆ. ಅಕ್ಷರಪರಿಮಾಣ- ನಿಯಮವು ಇಷ್ಟು ನಿಷ್ಕೃಷ್ಟವಾಗಿರುವ ಭಾಷೆ, ಛಂದೋಗತಿಸಿದ್ಧಿಗಾಗಿ ಉಚ್ಚಾರಕಾಲ ಪರಿಮಿತಿಯನ್ನು ಹಾಗೂ ವಿಭಿನ್ನಪರಿಮಾಣದ ಅಕ್ಷರಗಳ ವಿನ್ಯಾಸಪ್ರಕಾರವನ್ನು ಅವಲಂಬಿ- ಸದೆ (ಆಂಗ್ಲಭಾಷೆಯಂತೆ) ಧ್ವನಿತಾರತಮ್ಯವನ್ನು ಅವಲಂಬಿಸುವ ಸಂಭಾವ್ಯತೆ ಸರ್ವಥಾ ಇರಲಾರದೆಂಬುದು ಶ್ರೀ ವೇಲಣಕರರಿಗೆ ಏಕೆ ಹೊಳೆಯಲಿಲ್ಲವೋ, ತಿಳಿಯದು.]

ಛಂದಸ್ತತ್ತ್ವವನ್ನು ತಳಮುಟ್ಟನೋಡುವ ಪ್ರಯತ್ನಮಾಡಿದರೆ – ಸ್ವರದ ಏರಿಳಿತ- ವಾಗಲಿ, ಧ್ವನಿಯ ಸ್ಫುಟಾಸ್ಫುಟತ್ವವಾಗಲಿ 'ಛಂದಸ್' ಎಂಬೊಂದು ಪದಾರ್ಥದ ಅಂಗಗಳೋ ಅಂಶಗಳೋ ಆಗಿ ತೋರಲಾರವು. ಧ್ವನಿ ಇಲ್ಲದಿರುವಲ್ಲಿ ಛಂದಸ್ ಎಂಬುದೂ ಇಲ್ಲವಾಗು- ವುದಾದರೂ – ಧ್ವನಿಯೇ ಛಂದಸ್ ಅಲ್ಲ. ಇದಕ್ಕೆ ಒಂದು ಹೋಲಿಕೆ ಕೊಡುವುದಾದರೆ ಅದು ಹೀಗೆ: ಒಂದು (ಭೌತಿಕ) ವಸ್ತುವಿಲ್ಲದಿರುವಲ್ಲಿ 'ತೂಕ'(=ಭಾರ)ವೂ ಇಲ್ಲವಾಗುವು- ದಾದರೂ – ವಸ್ತುವೇ ಅದರ 'ತೂಕ'ವಲ್ಲ. ವಸ್ತು ಮತ್ತು ಅದರ ತೂಕ ಹೇಗೆ ಪರಸ್ಪರ ಅವಿನಾಭಾವಿಗಳೋ ಹಾಗೆಯೇ – ಧ್ವನಿ ಮತ್ತು ಛಂದಸ್ ಪರಸ್ಪರ ಅವಿನಾಭಾವಿಗಳು. ವಸ್ತುವಿನ ಆಕೃತಿಯ ಬದಲಾವಣೆಯಿಂದ ಅದರ ತೂಕ ಹೇಗೆ ಬದಲಾಗುವುದಿಲ್ಲವೋ ಹಾಗೆಯೇ – ಧ್ವನಿಯ ಏರಿಳಿತದ ಅಥವಾ ಸ್ಫುಟತ್ವದ ಭಿನ್ನತೆಗಳ ಫಲವಾಗಿ ಉಂಟಾಗುವ ರೂಪಾಂತರಗಳಿಂದ ಅದರ 'ಛಂದಸ್' ಬದಲಾಗುವುದಿಲ್ಲ. ಆದರೆ, ಆಂಗ್ಲಭಾಷೆಯ ಛಂದೋವಿಧಾನದಂತೆ – ಧ್ವನಿಯ ರೂಪಾಂತರದಿಂದ ಛಂದಃಸ್ವರೂಪವು ಬೇರಾಗುತ್ತ- ದಲ್ಲಾ? – ಎಂದು ಕೇಳಿದರೆ, ಅದಕ್ಕೆ ಉತ್ತರ ಹೀಗೆ: ಈ ನಿಬಂಧದಲ್ಲಿ ಹಿಂದೆ ನಿವೇದಿಸಿರು- ವಂತೆ – ಪಾಶ್ಚಾತ್ಯರು ತಮ್ಮ ವಿಚಾರಧಾರೆಯಲ್ಲಿ ಧ್ವನಿಯನ್ನೂ ಧ್ವನಿಯ ಪರಿಮಾಣ (=ಉಚ್ಚಾರಕಾಲಪರಿಮಾಣ)ವನ್ನೂ ಬೇರ್ಪಡಿಸಿಕೊಳ್ಳದಿದ್ದುದು ಅದಕ್ಕೆ ಮೂಲಕಾರಣ- ವಾಗಿರುತ್ತದೆ. [ಇದರ ಪರಿಣಾಮವಾಗಿಯೇ ಅವರ 'ಗತಿ' (= rhythm) ತತ್ತ್ವ ಮೀಮಾಂಸೆಯಲ್ಲಿ ಗೊಂದಲವಿರುವುದಾಗಿದೆ. ಈ ನಿಬಂಧದ ಮೂರನೆಯ ಪರಿಚ್ಛೇದದಲ್ಲಿ ಕೊಟ್ಟಿರುವ *Encyclopaedia Britanica*ದ A (೧) ಅವತರಣಿಕೆಯನ್ನು ಅವಲೋಕಿಸಿರಿ.] ಆಂಗ್ಲೇಯ ಛಂದೋವಿಧಾನದಲ್ಲಿ ಧ್ವನಿರೂಪವೇ ಛಂದಃಸ್ವರೂಪನಿರ್ಣಾಯಕವಾಗಿ

ಗೃಹೀತವಾಗಿರುವುದಾದರೂ – ಧ್ವನಿಯ ಉಚ್ಚಾರಕಾಲಪರಿಮಾಣವು ಅಮುಖ್ಯವಲ್ಲವೆಂದೂ, ಅದು (ಆಂಗ್ಲೇಯ) ಛಂದೋಗತಿಯ ಉನ್ಮೀಲನಕ್ಕೆ ಅವಶ್ಯವೇ ಆದ ಸಹಕಾರಿ ಕಾರಣವೆಂದೂ, ಅಕ್ಷರೋಚ್ಚಾರದ ಕಾಲಪರಿಮಾಣವು ಆಂಗ್ಲೇಯ ಛಂದೋಗತಿವಿಷಯದಲ್ಲಿ ನಗಣ್ಯವೆಂದು ಭಾವಿಸುವುದು ತಪ್ಪೆಂದೂ ಪೂರ್ವೋಕ್ತ *Encyclopaedia* ಮಹಾಗ್ರಂಥವು ಸಾರಿಹೇಳುತ್ತದೆ. (ಈ ನಿಬಂಧದ ಮೂರನೆಯ ಪರಿಚ್ಛೇದದಲ್ಲಿರುವ ಆ ಗ್ರಂಥದ ಅವತ-ರಣಿಕೆಗಳೊಳಗೆ A (೨) ಮತ್ತು (೩)ನ್ನು ನೋಡಿರಿ.) ಇದರಿಂದ ವಿಶದವಾಗುವ ತಥ್ಯ-ವೇನೆಂದರೆ – ಯಾವ ಭಾಷೆಯಲ್ಲಾದರೂ 'ಛಂದೋಗತಿ' ಎಂಬುದು ಕಾಲಪರಿಮಾಣ-ನಿರಪೇಕ್ಷವಾಗಿ ಉನ್ಮೀಲಿಸುವುದಿಲ್ಲವೆಂಬುದಾಗಿದೆ. ವಸ್ತುಸ್ಥಿತಿ ಹೀಗಿರುವಾಗ, ಶ್ರೀ ವೇಲಣಕರರು – ವೈದಿಕಪದ್ಯಗಳ ಛಂದೋಗತಿಸೌಂದರ್ಯವು 'ಕಾಲತತ್ತ್ವ' (time element) ನಿರಪೇಕ್ಷ-ವೆಂದೂ, ಅದು ಕೇವಲ ಸ್ವರಪರಿವರ್ತನಾವಲಂಬಿಯೆಂದೂ ಹೇಳುತ್ತಾರಲ್ಲಾ! ಇದಕ್ಕೇನೆನ್ನಲಿ?

ಶ್ರೀ ವೇಲಣಕರರ ಮಾತನ್ನು ವಾದಕ್ಕಾಗಿ – ಕೇವಲ ವಾದಕ್ಕಾಗಿ – ಒಂದು ಕ್ಷಣ ಒಪ್ಪಿಕೊಂಡು ನೋಡಿದರೂ, ಆ ಮಾತಿನಲ್ಲಿರುವ ಅಸಂಗತತ್ವವು ಗೋಚರಿಸದಿರುವುದಿಲ್ಲ. ಅದೇನೆಂದರೆ, ಗತಿಸೌಂದರ್ಯಕ್ಕೆ – ಅದು ಛಂದೋಗತಿಸೌಂದರ್ಯವೋ, ಧ್ವನಿಸರಣಿ ಸೌಂದರ್ಯವೋ, ಅಥವಾ ನರ್ತನಗತಿಸೌಂದರ್ಯವೋ, ಏನೇ ಆಗಿರಲಿ – ಅದಕ್ಕೆ ಆಧಾರಭೂತವಾದ ವಸ್ತುಸ್ಥಿತಿಯಲ್ಲಿ ಒಂದು ವ್ಯವಸ್ಥೆ ಇರಬೇಕಾಗುತ್ತದೆ. ಅಂತಹದೊಂದು ವ್ಯವಸ್ಥೆಗೆ ಒಳಪಡದಿರುವ ಯಾವುದೊಂದು 'ಕೃತಿ'ಯಲ್ಲಿಯೂ ಗತಿಸೌಂದರ್ಯವು ಆವಿರ್ಭವಿಸುವುದಿಲ್ಲ. ಧ್ವನಿಯ ನತೋನ್ನತತ್ವವನ್ನು ಆಧರಿಸಿರುವ ಆಂಗ್ಲೇಯ ಛಂದೋ ವಿಧಾನದಲ್ಲಿ ಆ ನತೋನ್ನತಧ್ವನಿಗಳಿಗೆ ಸ್ಥಾನವ್ಯವಸ್ಥೆ ಇರುವುದರಿಂದಾಗಿಯೇ ಅಲ್ಲಿ ಗತಿ ಸೌಂದರ್ಯವು ತಲೆದೋರುವುದಾಗಿದೆ. ಉದಾ:

(1) Āll dĕlīghts ŏf ' sūmmĕr ' wēathĕr ' (Trochaic)

(2) Tōuch hĕr nŏt ' scōrnfŭllў ' (Dactylic)

ಆದರೆ–ತ್ರೈಸ್ವರ್ಯಕ್ಕೆ, ಯಾವುದಾದರೊಂದು ಕ್ರಮಕ್ಕೆ ಅಳವಡುವ ಸ್ಥಾನವ್ಯವಸ್ಥೆ ವೈದಿಕ ಪದ್ಯಗಳಲ್ಲಿ ಕಂಡುಬರುವುದಿಲ್ಲ. ಉದಾ:

(೧) ಗಾಯತ್ರೀಚ್ಛಂದ (ಋಗ್ವೇದ ೧–೨೨–೧೭)

ಇದಂ ವಿಷ್ಣುರ್ವಿಚಕ್ರಮೇ ।
ತ್ರೇಧಾ ನಿದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ ॥

(೨) ಅನುಷ್ಟುಪ್‌ಛಂದ (ಋಗ್ವೇದ ; ಪುರುಷಸೂಕ್ತ–೨)

ಪುರುಷ ಏವೇದಂ ಸರ್ವಂ ।
ಯದ್ಭೂತಂ ಯಚ್ಚ ಭವ್ಯಂ ।
ಉತಾಮೃತತ್ವಸ್ಯೇಶಾನೋ ।
ಯದನ್ನೇನಾತಿರೋಹತಿ ॥ . ॥

(೩) ತ್ರಿಷ್ಟುಪ್‌ಛಂದ (ಋಗ್ವೇದ ; ಪುರುಷಸೂಕ್ತ-೧೬)

ಯಜ್ಞೇನ ಯಜ್ಞಮಯಜಂತ ದೇವಾಃ ।

ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ॥

ತೇ ಹ ನಾಕಂ ಮಹಿಮಾನಃ ಸಚಂತೇ ।

ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ . ॥

(೪) ಜಗತೀಚ್ಛಂದ (ಋಗ್ವೇದ ೧-೧೧೪-೧)

ಇಮಾಂ ರುದ್ರಾಯ ತವಸೇ ಕಪರ್ದಿನೇ ।

ಕ್ಷಯದ್ವೀರಾಯ ಪ್ರಭರಾಮಹೇ ಮತಿಂ ॥

ಯಥಾ ನಃ ಶಮಸದ್ ದ್ವಿಪದೇ ಚತುಷ್ಪದೇ ।

ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ ಅನಾತುರಂ ॥ . ॥

ತ್ರೈಸ್ವರ್ಯನಿಯಮಕ್ಕೆ ಬದ್ಧವಾದ ವೇದಪಠನದಲ್ಲಿ ಶ್ರವಣಗೋಚರವಾಗುವ ಸ್ವರದ ಏರಿಳಿತ-ಗಳಿಗೆ ವೈದಿಕಪದ್ಯಬಂಧಗಳಲ್ಲಿ ಸ್ಥಾನಕ್ರಮವ್ಯವಸ್ಥೆಯೆಂಬುದೇನೂ ಇಲ್ಲವೆಂಬುದನ್ನು ವಿಶದಪಡಿಸುವುದಕ್ಕೆ ಇಷ್ಟು ಉದಾಹರಣಗಳು ಸಾಕಾಗಬಹುದು. ಇದಲ್ಲದೆ – ಯಾವುದೊಂದು ವಸ್ತುಸ್ಥಿತಿಯು ಒಂದು ಛಂದೋಬಂಧದ ಗತಿಗೆ ಆಧಾರವೆಂದಾಗಬೇಕಾದರೆ, ಆ ವರ್ಗದ ಛಂದೋಬಂಧಗಳಲ್ಲೆಲ್ಲ ಅದು ಏಕಪ್ರಕಾರವಾಗಿ ಗೋಚರಿಸಬೇಕು. [ಉದಾ: 'ಕಂದಪದ್ಯ' ಎನಿಸಿಕೊಳ್ಳುವ ಛಂದೋಬಂಧಗಳಲ್ಲೆಲ್ಲ ಚತುಷ್ಕಲಗಣಗಳೇ (೮+೮=೧೬) ಇರುತ್ತವೆ; ಆದುದರಿಂದ, ಈ ವಸ್ತುಸ್ಥಿತಿಯು ಕಂದಪದ್ಯದ ಗತಿಗೆ ಆಧಾರಭೂತವಾದ ಛಂದೋಲಕ್ಷಣವಾಗಿರುತ್ತದೆ.] ಆದರೆ, ಛಂದೋವರ್ಗವು ಅಭಿನ್ನವಾಗಿರುವಾಗಲೂ ವೈದಿಕಪದ್ಯಗಳ ತ್ರೈಸ್ವರ್ಯರೂಪವು ಏಕಪ್ರಕಾರವಾಗಿರುವುದಿಲ್ಲ. ಉದಾ:

A (೧) ಅಗ್ನಿನಾ ರಯಿಮಶ್ನವತ್ ।

ಪೋಷಮೇವ ದಿವೇ ದಿವೇ ।

ಯಶಸಂ ವೀರವತ್ತಮಂ ॥ . ॥ (ಋಗ್ವೇದ ೧-೧-೩)

(೨) ಮಹೋ ಅರ್ಣಃ ಸರಸ್ವತೀ ।

ಪ್ರಚೇತಯತಿ ಕೇತುನಾ ।

ಧಿಯೋ ವಿಶ್ವಾ ವಿರಾಜತಿ ॥ . ॥ (ಋಗ್ವೇದ ೧-೩-೧೨)

ಈ ಮೇಲಿನವೆರಡೂ 'ಗಾಯತ್ರೀಚ್ಛಂದ'ಗಳು. ಆದರೆ ಇವುಗಳ ತ್ರೈಸ್ವರ್ಯಸ್ಥಿತಿಯಲ್ಲಿ ಏಕರೂಪತೆಯುಂಟೇ?

B (೧) ಪುರುಷ ಏವೇದಂ ಸರ್ವಂ ।
ಯದ್ಭೂತಂ ಯಚ್ಚ ಭವ್ಯಂ ॥
ಉತಾಮೃತತ್ವಸ್ಯೇಶಾನೋ ।
ಯದನ್ನೇನಾತಿರೋಹತಿ ॥ . ॥

(೨) ತಸ್ಮಾದ್ವಿರಾಡಜಾಯತ ।
ವಿರಾಜೋ ಅಧಿ ಪೂರುಷಃ ॥
ಸ ಜಾತೋ ಅತ್ಯರಿಚ್ಯತ ।
ಪಶ್ಚಾತ್ ಭೂಮಿಮಥೋ ಪುರಃ ॥ . ॥

(ಋಗ್ವೇದ, ಪುರುಷಸೂಕ್ತ–೨ ಮತ್ತು ೫)

ಇವೆರಡೂ 'ಅನುಷ್ಟುಪ್ ಛಂದ'ಗಳು. ಆದರೆ ತ್ರೈಸ್ವರ್ಯಸ್ಥಿತಿಯಲ್ಲಿ ಇವುಗಳೊಳಗೆ ಸಾಮ್ಯವೆಲ್ಲಿದೆ? (ತ್ರಿಷ್ಟುಪ್ ಜಗತೀಚ್ಛಂದಗಳ ಪರಿಸ್ಥಿತಿಯಾದರೂ ಹೀಗೆಯೇ ಇರುತ್ತದೆ. ಸಂದೇಹವುಳ್ಳವರು ಪರಾಮರ್ಶಿಸಿ ನೋಡಲಿ.)

ಈ ವರೆಗೆ ಸೋದಾಹರಣವಾಗಿ ಮಾಡಿದ ಪ್ರತಿಪಾದನೆಯಿಂದ – ತ್ರೈಸ್ವರ್ಯಪ್ರಕಾರಕ್ಕೂ ವೈದಿಕ ಪದ್ಯಗಳ ಛಂದೋವಿಧಾನಕ್ಕೂ ಅನ್ಯೋನ್ಯಾವಲಂಬನದ ಲೇಶವೂ ಇಲ್ಲವೆಂಬುದು ಯಾರಿಗಾದರೂ ವಿಶದವಾಗದಿರದು. [ತ್ರೈಸ್ವರ್ಯನಿಯಮದ ಕಾರಣದಿಂದ ವೈದಿಕಪದ್ಯಗಳ ಪಠನದಲ್ಲಿ ತಲೆದೋರುವ ಸೌಂದರ್ಯವಿಶೇಷವು ಛಂದೋಗತಿಸೌಂದರ್ಯವಲ್ಲ; ಅದು–ಗೀತಸ್ವರಗಳೇ ಆಗಿರುವ 'ತ್ರಿಸ್ವರ'ಗಳ ಶ್ರವಣಫಲವಾದ "ಧ್ವನಿಸೌಂದರ್ಯ"; ಅದು ಸಂಗೀತಕ್ಷೇತ್ರದ ಸೊತ್ತು. 'ಛಂದೋಗತಿ' ಎಂಬುದು ಅಕ್ಷರಗಳ ಹಾಗೂ ಅಕ್ಷರಪುಂಜಗಳ ಉಚ್ಚಾರಕಾಲಪರಿಮಾಣಸಂವೇದನೆಯ ಫಲವಾಗಿ ನಮ್ಮ ಮನಃಫಲಕದಲ್ಲಿ ಮೂಡುವ ರೇಖಾಚಿತ್ರ, ಒಂದು ಶಬ್ದ(= ಪದ)ಕ್ಕೂ ಅದರ ಅರ್ಥಕ್ಕೂ ಎಂತಹ ಸಂಬಂಧವಿದೆಯೋ ಅಂತಹದೇ ಒಂದು ಸಂಬಂಧವಿಶೇಷವು ಧ್ವನಿಪುಂಜಗಳಿಗೂ ಅವುಗಳ 'ಗತಿರೂಪ'ಕ್ಕೂ ಇರುತ್ತದೆ. ಶಬ್ದದ ಶ್ರವಣದಿಂದಲೇ ಅರ್ಥವು ನಮಗೆ ಹೊಳೆಯುವುದಾದರೂ, ಅರ್ಥವು ಶ್ರವಣಗೋಚರವಲ್ಲ; ಅದು ಕೇವಲ ಬುದ್ಧಿಗೋಚರ. ಹಾಗೆಯೇ – ಧ್ವನಿಪುಂಜದ ಶ್ರವಣದ ಫಲವಾಗಿಯೇ ಗತಿರೂಪದ ಬೋಧವಾಗುವುದಾದರೂ, ಅದು ಶ್ರವಣಗೋಚರವಲ್ಲ; ಕೇವಲ ಬುದ್ಧಿಗೋಚರ. ವಸ್ತುಸ್ಥಿತಿ ಹೀಗಿರುವಾಗ – ವೈದಿಕಪದ್ಯಗಳ ಛಂದೋಗತಿಸೌಂದರ್ಯವು (metrical music) ತ್ರೈಸ್ವರ್ಯವನ್ನವಲಂಬಿಸಿರುತ್ತದೆಂದು ಯಾರೇ ಹೇಳಲಿ, ಆ ಮಾತು ಅರ್ಥರಹಿತವೇ ಸೈ.]

ತ್ರೈಸ್ವರ್ಯನಿಯಮವು ಈಗ ವೇದದ ಸಂಹಿತಾಭಾಗಗಳಿಗೆ ಮಾತ್ರ ಸೀಮಿತವಾಗಿರುವುದಾದರೂ – ವೈದಿಕಯುಗದಲ್ಲಿ ಅದು ಆ ಭಾಷೆಯ ವ್ಯಾವಹಾರಿಕರೂಪಗಳಿಗೂ ಅನ್ವಯಿಸುತ್ತಿತ್ತೆಂಬುದಕ್ಕೆ ಭರತನ ನಾಟ್ಯಶಾಸ್ತ್ರದಲ್ಲಿ ಸ್ಪಷ್ಟವಾದ ಸೂಚನೆ ಇದೆ. ಅಲ್ಲಿ ವೈದಿಕ ಭಾಷೆಗೆ "ಅತಿಭಾಷಾ" ಎಂಬ ಹೆಸರಿದೆ; ಮತ್ತು ಸಂಸ್ಕೃತದ ಒಂದು ರೂಪವೇ ಆದ ಈ ಭಾಷೆಯ ವಿಶಿಷ್ಟಲಕ್ಷಣವನ್ನು – "ಸಂಸ್ಕಾರಪಾಠ್ಯಸಂಯುಕ್ತ ಸಮ್ಯಕ್ 'ನ್ಯಾಯ'ಪ್ರತಿಷ್ಠಿತಾ" ಎಂದು ಹೇಳಲಾಗಿದೆ. (ನಾಟ್ಯಶಾಸ್ತ್ರ, ಅಧ್ಯಾಯ ೧೭; ಶ್ಲೋಕ ೨೬, ೨೭ ನೋಡಿರಿ.) 'ನ್ಯಾಯಪ್ರತಿಷ್ಠಿತ'ವಾದ, ಎಂದರೆ ನ್ಯಾಯಸ್ವರ(ತ್ರೈಸ್ವರ್ಯ)ನಿಯಮಬದ್ಧವಾದ, ಈ

ಭಾಷಾರೂಪವನ್ನು ನಾಟಕಗಳಲ್ಲಿ (ಅತಿಭಾಷಾ ತು ದೇವಾನಾಂ – ಶ್ಲೋಕ ೨೭) ದೇವತಾಪ್ರಕೃತಿಗಳ ಮತ್ತು ಋಷಿಪ್ರಕೃತಿಗಳ (ದೇವ = fit to be worshipped or honoured - Apte ಪ್ರಕೃತಿ = character) ಮಾತಾಗಿ ಯೋಜಿಸಬೇಕೆಂದೂ ಅಲ್ಲಿ ನಿರ್ದಿಷ್ಟವಾಗಿರುತ್ತದೆ. (ನಾಟ್ಯಶಾಸ್ತ್ರದ ವ್ಯಾಖ್ಯಾನದಲ್ಲಿ ಅಭಿನವಗುಪ್ತನು – "ಅತಿಭಾಷಾ = ಸಂಸ್ಕೃತೈವ ಭಾಷಾ ಸ್ವರಭೇದಾದಿ ಪೂರ್ಣಸಂಸ್ಕಾರೋಪೇತಾ" ಎಂದು ಹೇಳಿರುತ್ತಾನೆಂದು ಆಪ್ತರೊಬ್ಬರು ತಿಳಿಸುತ್ತಾರೆ.) ಹೀಗೆ ತ್ರೈಸ್ವರ್ಯನಿಯಮಬದ್ಧವಾದ ಸಂಸ್ಕೃತಭಾಷೆ ಅರ್ಥಾತ್ ವೈದಿಕಭಾಷೆ ಒಂದಾನೊಂದು ಕಾಲದಲ್ಲಿ ಆಡುಭಾಷೆಯೇ ಆಗಿತ್ತೆಂಬುದನ್ನು ನಾಟ್ಯಶಾಸ್ತ್ರವು ದೃಢಪಡಿಸುತ್ತದೆ.

ಆದರೆ ಈಗ ನಮ್ಮ ಕಿವಿಗೆ ಬೀಳುವ ತ್ರೈಸ್ವರ್ಯನಿಯಮಬದ್ಧವಾದ ವೇದ ಪಠನವು – ಅದು 'ಋಕ್" ಆಗಿರಲಿ, 'ಯಜುಸ್' ಆಗಿರಲಿ – ಸಪ್ತಸ್ವರಗಳೊಳಗೆ ಕೆಲವೇ ಸ್ವರಗಳ ಪ್ರಯೋಗವಿರುವ ಒಂದು ಬಗೆಯ ಗಾಯನವೆಂಬಂತೆ ಭಾಸವಾಗುತ್ತದೆ ಹೊರತು, ಆಡುವ ಮಾತುಗಳ ಹಾಗೆ ಕೇಳುವುದಿಲ್ಲ. ಈ ತ್ರೈಸ್ವರ್ಯವು ಒಂದಾನೊಂದು ಕಾಲದಲ್ಲಿ ಆಡುವ ಮಾತಿನಲ್ಲಿಯೂ ಇತ್ತೆಂದಾದರೆ – ಆ ಕಾಲದಲ್ಲಿ ಸಂಭಾಷಣವು ಒಂದು ಬಗೆಯ ಗಾಯನರೂಪದಲ್ಲಿಯೇ ನಡೆಯುತ್ತಿತ್ತೆಂದಾಗುವುದಿಲ್ಲವೇ? ಮತ್ತು ಹಾಗೆ ನಡೆಯುವುದು ಎಂದಾದರೂ ಸಂಭಾವ್ಯವೇ? – ಎಂಬಿತ್ಯಾದಿ ಶಂಕೆಗಳು ಇಲ್ಲಿ ಉಪಸ್ಥಿತವಾದರೆ ಆಶ್ಚರ್ಯವಿಲ್ಲ. ಆದರೆ 'ಪಠನ' ಎಂದರೆ ಪಾಠ್ಯ(recitation)ಕ್ಕೂ 'ಸಂಭಾಷಣ' ಎಂದರೆ ಮಾತಾಡುವುದಕ್ಕೂ (conversation) ಎಲ್ಲಾ ಭಾಷೆಗಳಲ್ಲಿಯೂ ಇರುವ ಅದೊಂದು ಅಂತರವನ್ನು ಪರಿಭಾವಿಸಿದರೆ ಈ ಶಂಕೆಗಳು ನಿವೃತ್ತವಾಗುತ್ತವೆ.

ಯಾವ ಭಾಷೆಯಲ್ಲಾದರೂ – ಅಕ್ಷರೋಚ್ಚಾರಗಳು ಸಂಭಾಷಣದಲ್ಲಿ ಸ್ಫುಟವಾ–ಗುವುದಕ್ಕಿಂತ ಅಧಿಕತರವಾಗಿ ಪಾಠ್ಯದಲ್ಲಿ ಸ್ಫುಟವಾಗುತ್ತವೆ; ಮತ್ತು (ಅರ್ಥವ್ಯಕ್ತಿಕಾರಕವಾದ) ಧ್ವನಿಯ ಉಚ್ಚಾವಚತ್ವಗಳು ಅತಿಪರಿಸ್ಫುಟವಾಗಿ ಹೊಮ್ಮುತ್ತವೆ. ಈ ಕಾರಣದಿಂದ – ಯಾವ ಭಾಷೆಯಲ್ಲಿ (ಶ್ರುತಿಭೇದರೂಪವಾದ) ಉಚ್ಚಾವಚತ್ವಗಳು ನಿಬಿಡವಾಗಿರುತ್ತವೆಯೋ – (ಉದಾ: ಬಂಗಾಲಿ, ಕೊಂಕಣಿ) ಆ ಭಾಷೆಯ ಪದಸಮೂಹವು ಪಾಠ್ಯವಾಗುವಾಗ ಒಂದಿಷ್ಟು ಗಾಯನಚ್ಛಾಯೆಯನ್ನು ಪಡೆಯುತ್ತದೆ. ವೈದಿಕಭಾಷೆಯಲ್ಲಂತೂ ಈ ಉಚ್ಚಾವಚತ್ವವು (ಗೀತಸ್ವರಗಳೇ ಆಗಿರುವ) ಉದಾತ್ತ, ಅನುದಾತ್ತ, ಸ್ವರಿತ ಎಂಬ ಮೂರು ರೂಪಗಳನ್ನು ಪಡೆದಿರುವ ಕಾರಣ, ಆ ಭಾಷೆಯ ಪದಗಳು ಪಾಠ್ಯವಾಗುವಾಗ ಅವುಗಳಲ್ಲಿ ಗಾಯನ ಚ್ಛಾಯೆ ಕಾಣುವುದು ಕೇವಲ ಸಹಜವೇ ಆಗಿದೆ. ಇದೂ ಅಲ್ಲದೆ, ಇನ್ನೊಂದು ವಸ್ತುಸ್ಥಿತಿಯೂ ವೇದಪಠನದ ಗಾಯನಚ್ಛಾಯೆಯನ್ನು ಹೆಚ್ಚಿಸಿರುತ್ತದೆ. ಅದಾವುದೆಂದರೆ – ವೇದಪಠನದಲ್ಲಿ ಅಕ್ಷರೋಚ್ಚಾರದ ಶುದ್ಧತೆಗೆ ಇರುವ ಮಹತ್ತ್ವಕ್ಕಿಂತ ಎಳ್ಳಷ್ಟೂ ಕಡಮೆಯಲ್ಲದ ಮಹತ್ತ್ವವು ತ್ರೈಸ್ವರ್ಯದ ಶುದ್ಧತೆಗೂ ಇರುವುದರಿಂದ, ಆ ಸ್ವರಗಳ ಗುಣಕ್ಕೆ ಉಪಚಯ (exaggeration)ವನ್ನುಂಟುಮಾಡಿ ಅನುರಣನಧ್ವನಿಯಲ್ಲಿ ಪಠಿಸುವ ಸಂಪ್ರದಾಯವು ನೆಲೆ–ಗೊಂಡಿರುವುದಾಗಿದೆ. ತ್ರೈಸ್ವರ್ಯದ ಈ "ಅತಿಕರಣ"ವೇ (overdoing) ವೇದಪಠನವು ಗಾಯನವೆಂಬಂತೆ ಭಾಸವಾಗುವುದಕ್ಕೆ ಮುಖ್ಯವಾದೊಂದು ಕಾರಣವಾಗಿದೆ; ಮತ್ತು, ವೇದಭಾಷೆಯಲ್ಲಿರುವ ಅನುನಾಸಿಕಧ್ವನಿಗಳ ಬಾಹುಳ್ಯವೂ ಆ ಗಾಯನಚ್ಛಾಯೆಗೆ ಪೋಷಕ–ವಾಗಿರುತ್ತದೆ. [ವೇದಭಾಷೆಯೇ ಕಾಲಾಂತರದಲ್ಲಿ 'ಲೌಕಿಕಸಂಸ್ಕೃತ'ವಾಗಿ ಪರಿಣಮಿಸಿದಾಗ, ತನ್ನಲ್ಲಿ ನೆಲೆಗೊಂಡಿದ್ದ, ತ್ರೈಸ್ವರ್ಯನಿಯಮವನ್ನು ಕಳೆದುಕೊಂಡಿತೆಂಬುದನ್ನು ಇಲ್ಲಿ

ವೈದಿಕಪದ್ಯಗಳಲ್ಲಿ ಕಂಡುಬರುವ ಛಂದೋಲಕ್ಷಣಗಳು – ಪಾದಸಂಖ್ಯಾನಿಯಮ ಮತ್ತು ಪಾದಾಕ್ಷರಸಂಖ್ಯಾನಿಯಮ ಎಂಬಿವು ಮಾತ್ರ ಎಂದು ಹೇಳಿದರೆ ತಪ್ಪಾಗಲಾರದು. (ಈ ಎರಡು ಲಕ್ಷಣಗಳೊಳಗೂ – ಪಾದಾಕ್ಷರ-ಸಂಖ್ಯಾನಿಯಮವೆಂಬುದು ಅವುಗಳಲ್ಲಿ ನಿರಪವಾದವಲ್ಲವೆಂಬುದನ್ನು ಈ ಹಿಂದೆ ಸೋದಾಹರಣವಾಗಿ ನಿರೂಪಿಸಲಾಗಿದೆ.) ವೈದಿಕಪದ್ಯಗಳ ಕೆಲವೆಡೆಗಳಲ್ಲಿ – ಹೆಚ್ಚಾಗಿ ಪಾದಾಂತಗಳಲ್ಲಿ, ಕ್ವಚಿತ್ ಪಾದಮಧ್ಯಗಳಲ್ಲಿ ಸಹ –ಗುರುಲಘು-

---

ಪರಿಭಾವಿಸಿದರೆ, ವೇದಪಠನದಲ್ಲಿ ತ್ರೈಸ್ವರ್ಯವು ಇಂದಿನವರೆಗೂ ಅಚ್ಚಳಿಯದೆ ಉಳಿಯು-ವಂತಾದುದು ಈ 'ಅತಿಕರಣ'ದ ಬಲದಿಂದಲೇ ಎಂಬುದು ಮನವರಿಕೆಯಾಗದಿರದು. ಆದರೆ, ವೇದಪಠನದಲ್ಲಿ ತ್ರೈಸ್ವರ್ಯವನ್ನು ಉಳಿಸಿರುವ ಈ ಅತಿಕರಣವು ಕ್ವಚಿತ್ ವಿಕೃತಿಗೂ ಕಾರಣವಾಗಿ ಪರಿಣಮಿಸಿದ ಹಾಗೆ ಕಾಣುತ್ತದೆ. ನಮಗೆ ಪರಿಚಿತವಾಗಿರುವ (ದಾಕ್ಷಿಣಾತ್ಯ ಸಂಪ್ರದಾಯದ) ಋಗ್ವೇದಪಠನದಲ್ಲಿ – ಹ್ರಸ್ವಾಕ್ಷರಗಳು ಉದಾತ್ತಸ್ವರದವುಗಳಾಗಿರುವಲ್ಲೆಲ್ಲ ದೀರ್ಘಾಕ್ಷರಗಳಾಗಿ ಪಠಿತವಾಗುವುದು ಕೇಳಿಬರುತ್ತದೆ. (ಕೆಲವು ಆಡುಮಾತುಗಳಲ್ಲಿ – ಉದಾ: ಕೊಂಕಣಿ – ಉಚ್ಚಶ್ರುತಿಯ ಹ್ರಸ್ವಾಕ್ಷರಗಳು ದೀರ್ಘಾಕ್ಷರಗಳಾಗಿ ಪರಿಣಮಿಸಿರುವುದು ಕಂಡುಬರುತ್ತದೆ. ಹಳಗನ್ನಡದಲ್ಲಿ ಹ್ರಸ್ವರೂಪದಲ್ಲಿದ್ದ ಅವಧಾರಣಾರ್ಥಕವಾದ ಉಚ್ಚಶ್ರುತಿಯ ಎಕಾರವು ಹೊಸಗನ್ನಡದಲ್ಲಿ ಏಕಾರವಾಗಿಯೇ ಪ್ರಯುಕ್ತವಾಗುತ್ತಿರುವುದನ್ನು ಹಿಂದೆ ಈ ಪರಿಚ್ಛೇದದಲ್ಲಿ ಸೂಚಿಸಲಾಗಿದೆ. ಹೀಗೆ ಆಗಿರುವ ಆ ಪರಿವರ್ತನಕ್ಕೆ, ಪರಿಸ್ಫುಟತೆಗಾಗಿ ಮಾಡುತ್ತಾ ಬಂದ ಅತಿಕರಣವೇ ಕಾರಣವೆಂಬುದರಲ್ಲಿ ಸಂದೇಹವಿಲ್ಲ.) ಋಗ್ವೇದಪಠನದಲ್ಲಿ ಕೇಳಿಬರುವ ಆ ವಿಕೃತಿಗೆ ಒಂದು ಉದಾಹರಣೆ: ಸಹಸ್ರಾಕ್ಷಃ ಸಹಸ್ರಪಾತ್ (ಪುರುಷಸೂಕ್ತ-೧) – ಇದನ್ನು ನಮ್ಮ ಋಗ್ವೇದಿಗಳು – "ಸಹಸ್ರಾಕ್ಷಃ ಸಹಸ್ರಾಪಾತ್" ಎಂದು ಪಠಿಸುತ್ತಾರೆ. ಆದರೆ ಇದನ್ನೇ ಯಜುರ್ವೇದಿಗಳು – ಸಹಸ್ರಾಕ್ಷಃ ಸಹಸ್ರಪಾತ್ – ಎಂದೇ ಪಠಿಸುತ್ತಾರೆ. ವೇದಪಠನದ ಅಕ್ಷರೋಚ್ಚಾರಶುದ್ಧಿಯ ವಿಷಯದಲ್ಲಿಯೂ ಅತಿಕರಣದಿಂದಾದ ವಿಕೃತಿಗಳು ಕಂಡುಬರುತ್ತವೆ: ನಮಗೆ ಪರಿಚಿತವಾಗಿರುವ ಯಜುರ್ವೇದ ಪಠನಸಂಪ್ರದಾಯದ ಶುದ್ಧಾನುಸ್ವಾರೋಚ್ಚಾರದ ಸ್ವರೂಪದಲ್ಲಿ ಒಂದು ವೈಚಿತ್ರ್ಯವಿದೆ. ಉದಾ: ಪುರುಷ ಏವೇದಂ ಸರ್ವಂ (ಪುರುಷಸೂಕ್ತ –೨) ಎಂಬುದನ್ನು ನಮ್ಮ ಯಜುರ್ವೇದಿಗಳು – "ಪುರುಷ ಏವೇದಗ್ಂ ಸರ್ವಂ" ಎಂದು ಪಠಿಸುತ್ತಾರೆ. ಯಜುರ್ವೇದಪಠನಸಂಪ್ರದಾಯದಲ್ಲಿ ಈ ವಿಕೃತಿ ಬಂದಿರುವುದಕ್ಕೆ ಕಾರಣವು, ಶುದ್ಧಾನುಸ್ವಾರದ ಉಚ್ಚಾರವಿಷಯದಲ್ಲಿ ಗುರುಶಿಷ್ಯ-ಪರಂಪರೆಯಿಂದ ಮಾಡುತ್ತಾ ಬಂದ 'ಅತಿಕರಣ'ವೇ ಹೊರತು ಬೇರಾವುದೂ ಅಲ್ಲ. ಏಕೆಂದರೆ, ಋಗ್ವೇದಿಗಳು ಹೀಗೆ ಪಠಿಸದೆ, "ಪುರುಷ ಏವೇದಂ ಸರ್ವಂ" ಎಂದೇ ಪಠಿಸುತ್ತಾರೆ. ಎಲ್ಲಾ ವೇದಸಂಹಿತೆಗಳ ಭಾಷೆಯೂ ತ್ರೈಸ್ವರ್ಯನಿಯಮವೂ ಒಂದೇ ಆಗಿರುವಾಗ – ಇಂತಹ ಉಚ್ಚಾರಸ್ವರೂಪಭೇದಗಳೆಲ್ಲ, ಬೇರೆಬೇರೆ ಪಠನಸಂಪ್ರದಾಯಗಳಲ್ಲಿ ಕಾಲಾನುಕಾಲಕ್ಕೆ ತಲೆದೋರಿ, ಪರಂಪರಾಗತವಾಗಿ ನೆಲೆಗೊಂಡ ವಿಕೃತಿಗಳೇ ಹೊರತು – ವೇದಭಾಷೆಯಲ್ಲಿ ಮೂಲತಃ ಇದ್ದ ಲಕ್ಷಣಗಳೇನೂ ಅಲ್ಲವೆಂಬುದರಲ್ಲಿ ಸಂದೇಹವಿಲ್ಲ. ಇದೇ ಬಗೆಯ ಅತಿಕರಣದಿಂದಾಗಿಯೇ ವಿಸರ್ಗದ ಉಚ್ಚಾರವು, ಇಂದು ಸಸ್ವರವಾದ ಹಕಾರವಾಗಿ (ಉದಾ:– ರಾಮಃ = ರಾಮಹ, ಹರಿಃ = ಹರಿಹಿ, ಭಾನುಃ = ಭಾನುಹು ಇತ್ಯಾದಿ) ಪರಿಣಮಿಸಿರುವುದಾಗಿದೆ.]

ವಿನ್ಯಾಸವ್ಯವಸ್ಥೆ ಅಷ್ಟಿಷ್ಟು ಇರುವಂತಿದೆಯಾದರೂ ಅದು ಆ ವರ್ಗದ ಎಲ್ಲಾ ಪದ್ಯಗಳಲ್ಲಿ ಕಂಡುಬಾರದೆ, ಕೆಲವು ಪದ್ಯಗಳಲ್ಲಿ ಮಾತ್ರ ಹಾಗೂ ಅವುಗಳ ಕೆಲಕೆಲವು ಪಾದಗಳಲ್ಲಿ ಮಾತ್ರ ಕಂಡುಬರುವ ಕಾರಣ, ಅಂತಹದನ್ನು ಆ ಒಂದೊಂದು ಪದ್ಯದ – ಅಥವಾ ಆ ವರ್ಗದ ಪದ್ಯಗಳಲ್ಲಿ ಅಲ್ಲಿಲ್ಲಿ ಕಂಡು ಬರುವ – ವಿಶೇಷತೆ ಎನ್ನಬೇಕೇ ವಿನಾ, ಅದನ್ನು ಆ ಪದ್ಯವರ್ಗದ "ಛಂದೋ ಲಕ್ಷಣ"ವೆಂದು ಪರಿಗಣಿಸುವುದಕ್ಕಾಗುವುದಿಲ್ಲ.[97] ವೈದಿಕಪದ್ಯಗಳ ಛಂದಃ

---

97. {ಕಾಳಿದಾಸನಿಗಿದ್ದ ವೈದಿಕ ಛಂದೋಲಕ್ಷಣದ ಅರಿವು} ವೈದಿಕಪದ್ಯಗಳೊಳಗೆ – ಗಾಯತ್ರೀಚ್ಛಂದದ ಹಾಗೂ ಜಗತೀಚ್ಛಂದದ ಪಾದಾಂತಗಳು ಮತ್ತು ಅನುಷ್ಟುಪ್‌ಛಂದದ ಯುಕ್ಪಾದಾಂತಗಳು ಲಗಂಲಗಂ ರೂಪವಾಗಿಯೂ, ತ್ರಿಷ್ಟುಪ್‌ಛಂದದ ಪಾದಾಂತಗಳು ಗಾಲಗಂಗಂ ರೂಪವಾಗಿಯೂ ಇರುವುದು ಹೆಚ್ಚಾಗಿ ಕಂಡುಬರುತ್ತದೆ; ಮತ್ತು ತ್ರಿಷ್ಟುಪ್‌ಛಂದದ ಹಾಗೂ ಜಗತೀಚ್ಛಂದದ ಪಾದಗಳ ಮಧ್ಯದಲ್ಲಿ ಒಂದು ಲಘುಯುಗ್ಮವು ಬಹುಧಾ ಕಾಣಿಸಿಕೊಳ್ಳುತ್ತದೆ. ಆದರೆ ಈ ವಸ್ತುಸ್ಥಿತಿ ಯಾವುದೂ ಸಾರ್ವತ್ರಿಕವಾಗಿ ಗೋಚರಿಸುವುದಿಲ್ಲವಾದುದರಿಂದ, ಇದು ಆಯಾ, ಛಂದಗಳ ಅನಿವಾರ್ಯಲಕ್ಷಣವೇನೂ ಅಲ್ಲವೆಂಬುದು ಸುಸ್ಪಷ್ಟ. ವೈದಿಕ ಛಂದೋಬಂಧಗಳ ಈ ಲಕ್ಷಣವಿಶೇಷಗಳ ಅಸ್ಥಿರತೆಯನ್ನು ಕಾಳಿದಾಸನೂ ಕಂಡಿದ್ದನೆಂಬುದಕ್ಕೆ, ಅವನ "ಅಭಿಜ್ಞಾನಶಾಕುಂತಲ"ದ ನಾಲ್ಕನೆಯ ಅಂಕದಲ್ಲಿ ಸಾಕ್ಷ್ಯವು ದೊರಕುತ್ತದೆ: ಅವನು ವೇದಭಾಷೆಯಲ್ಲಿ ಒಂದು ತ್ರಿಷ್ಟುಪ್‌ಛಂದವನ್ನು ರಚಿಸಿ, ಅದನ್ನು ಕಣ್ವಮುನಿಯ ಬಾಯಿಂದ ಅಲ್ಲಿ ಹೇಳಿಸಿದ್ದಾನೆ. ಅದು ಹೀಗಿದೆ:

ಅಮೀ ವೇದಿಂ ಪರಿತಃ ಕ್ಲೃಪ್ತ ಧಿಷ್ಣ್ಯಾಃ ।
ಸಮಿದ್ವಂತಃ ಪ್ರಾಂತಸಂಸ್ತೀರ್ಣದರ್ಭಾಃ ॥
ಅಪಘ್ನಂತೋ ದುರಿತಂ ಹವ್ಯಗಂಧೈಃ ।
ವೈತಾನಾಸ್ತ್ವಾಂ ವಹ್ನಯಃ ಪಾಲಯಂತು* ॥ . ॥

[*ತಾತ್ತ್ವಿಕವಾಗಿ ನೋಡಿದಾಗ – ಪಾದಾಂತ್ಯವು ಲಘುವಾಗಿದ್ದರೂ ಗುರುವೆಂದು ಗೃಹೀತ–ವಾಗುವ ಸಂಪ್ರದಾಯವು ವಸ್ತುತಃ ಗತಿವಿಷಯಕವೆಂಬ ತಥ್ಯದ ಅರಿವಾಗುತ್ತದೆ. ಆದುದರಿಂದ, ಅದು ಗತಿಸೌಂದರ್ಯಪರಾಯಣವಾದ ಲೌಕಿಕಛಂದೋಬಂಧಗಳಿಗೆ ಮೀಸಲೇ ಹೊರತು – ಗತಿಸೌಂದರ್ಯವು ಲಕ್ಷ್ಯವಿಲ್ಲದಿರುವ ವೈದಿಕಬಂಧಗಳಿಗೆ ಅನ್ವಯಿಸುವಂತಹದಲ್ಲವೆಂದು ತಿಳಿಯುವುದು ಯುಕ್ತತರವಾಗಿದೆ.]

ಕಾಳಿದಾಸನ ಈ ತ್ರಿಷ್ಟುಪ್‌ಛಂದದ ಎರಡು ಪಾದಮಧ್ಯಗಳಲ್ಲಿ ಒಂದೊಂದು ಲಘುಯುಗ್ಮವಿರುವುದಾದರೂ, ಉಳಿದೆರಡು ಪಾದಗಳಲ್ಲಿ ಅದು ಇಲ್ಲದಿರುವುದು ಇಲ್ಲಿ ಲಕ್ಷಿಸತಕ್ಕದ್ದಾಗಿದೆ. ವೈದಿಕ ಛಂದೋಬಂಧಗಳ ಸ್ವರೂಪವನ್ನು ಅವನು ಎಷ್ಟು ಸೂಕ್ಷ್ಮವಾಗಿ ತಿಳಿದುಕೊಂಡಿದ್ದನೆಂಬುದು ಇದರಿಂದ ವ್ಯಕ್ತವಾಗುತ್ತದೆ.

{ವೈದಿಕ ಛಂದೋಬಂಧಗಳು ಗತಿಸೌಂದರ್ಯವಿರಹಿತವಾಗಿರಲು ಕಾರಣ} ಈ ನಿಬಂಧದಲ್ಲಿ ಪರಾಮರ್ಶಿಸಲ್ಪಟ್ಟ ವೈದಿಕಪದ್ಯಗಳು – ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್ ಮತ್ತು ಜಗತೀ ಎಂಬ ನಾಲ್ಕು ಛಂದಗಳು ಮಾತ್ರ, ಇನ್ನುಳಿದ ಉಷ್ಣಿಕ್, ಬೃಹತೀ, ಪಂಕ್ತಿ ಎಂಬೀ ಮೂರು ವೈದಿಕಛಂದಗಳಲ್ಲಿ ಈ ನಾಲ್ಕು ಛಂದಗಳಲ್ಲಿರುವಷ್ಟು ವ್ಯವಸ್ಥೆಯೂ ಕಂಡುಬರುವು–

ದಿಲ್ಲವಾದುದರಿಂದ ಆ ಮೂರರ ಗತಿವಿಚಾರವನ್ನು ಇಲ್ಲಿ ಮಾಡಿರುವುದಿಲ್ಲ. ಹೀಗೆ, ವೈದಿಕಛಂದೋಬಂಧಗಳಲ್ಲಿ – ಲೌಕಿಕಛಂದೋಬಂಧಗಳಲ್ಲೆಲ್ಲ ಇರುವ ಹಾಗೆ – ಗತಿಸೌಂದರ್ಯಸಾಧಕವಾದ ಸುವ್ಯವಸ್ಥೆ ಇಲ್ಲದಿರಲು ಕಾರಣವೇನೆಂಬುದೊಂದು ಕ್ಲಿಷ್ಟ ಸಮಸ್ಯೆಯಾಗಿದ್ದು, ಆಧುನಿಕ ವಿದ್ವಾಂಸರ ನಾನಾ ಊಹಾಪೋಹಗಳ ಹೇತುವಾಗಿ ಪರಿಣಮಿಸಿರುತ್ತದೆ. ವೇದವು ಅಪೌರುಷೇಯ ಅರ್ಥಾತ್ ದೈವಕೃತ ಅಥವಾ ಸ್ವಯಂಸಿದ್ಧ ಎಂಬ ಅನಾದಿಪರಂಪರಾಗತವಾದ ಅಭಿಮತವನ್ನು ಅವಲಂಬಿಸಿದ ಪಕ್ಷದಲ್ಲಿ – ಅಶ್ವತ್ಥದ ಎಲೆಯ ಆಕೃತಿ ಹಾಗೆ ಏಕೆ, ಮಾವಿನ ಎಲೆಯ ಆಕೃತಿ ಹಾಗಿಲ್ಲವೇಕೆ ಎಂಬಿತ್ಯಾದಿ ಪ್ರಶ್ನೆಗಳು ಹೇಗೆ ಹುಟ್ಟುವುದಿಲ್ಲವೋ ಹಾಗೆಯೇ – ವೈದಿಕಛಂದೋಬಂಧಗಳ ಸ್ವರೂಪವಿಷಯ-ದಲ್ಲಿಯೂ ಪ್ರಶ್ನೆಗಳು ಹುಟ್ಟುವಂತಿಲ್ಲ. ಆದರೆ ಆಧುನಿಕ ವಿಚಾರಧಾರೆಗೆ ವೇದಗಳ ಅಪೌರುಷೇಯತ್ವವು ಮಾನ್ಯವಾಗುವಂತಹದಲ್ಲವಾದುದರಿಂದ, ಈ ಸಮಸ್ಯೆಗೆ ಪೌರುಷೇಯ ದೃಷ್ಟಿಯಿಂದಲೇ ಒಂದು ಸಮಾಧಾನವನ್ನು ಹುಡುಕುವುದು ಇಂದು ಅನಿವಾರ್ಯವಾಗಿದೆ. ಈ ವಿಷಯದಲ್ಲಿ ನನ್ನ ಅಲ್ಪಮತಿಗೆ ಹೊಳೆದುದನ್ನು ನಿವೇದಿಸುವುದಕ್ಕೆ ಮೊದಲು – ಸಂಸ್ಕೃತಛಂದಃಶಾಸ್ತ್ರಪಾರಂಗತರಾದ ಆಧುನಿಕ ವಿದ್ವಾಂಸರೊಳಗೆ ಮುಖ್ಯರೆಂದು ವಿಖ್ಯಾತ-ರಾಗಿರುವ ಶ್ರೀ ವೇಲಣಕರರ ಅಭಿಮತವನ್ನು ಒಂದಿಷ್ಟು ಪರಾಮರ್ಶಿಸುವುದು ವಿಹಿತವೆಂದು ಭಾವಿಸುತ್ತೇನೆ. ಅವರು, ತಾವು ಸಂಪಾದಿಸಿ ಪ್ರಕಟಿಸಿದ *Jayadaman* ಎಂಬ ನಾಲ್ಕು ಸಂಸ್ಕೃತ ಛಂದೋಗ್ರಂಥಗಳ ಸಮುಚ್ಚಯಕ್ಕೆ ಆಂಗ್ಲಭಾಷೆಯಲ್ಲಿ ಬರೆದಿರುವ ಪೀಠಿಕೆಯಲ್ಲಿ ಏತದ್ವಿಷಯಕವಾದ ತಮ್ಮ ಅಭಿಪ್ರಾಯಗಳನ್ನು ಸವಿಸ್ತಾರವಾಗಿ ನಿರೂಪಿಸಿರುತ್ತಾರೆ. ಅವರ ಪ್ರತಿಪಾದನೆಯ ತಾತ್ಪರ್ಯವನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ ಅದು ಹೀಗೆ: "ವೇದ-ರಚನೆಯ ಆರಂಭದ ಕಾಲಗಳಲ್ಲಿ, ಅಕ್ಷರಗಳ ಗುರುತ್ವಲಘುತ್ವಗಳಿಂದಾಗಿ ಛಂದೋಗತಿಯಲ್ಲಿ ಉಂಟಾಗುವ ವ್ಯತ್ಯಾಸದ ಪ್ರಜ್ಞೆ ವೈದಿಕಕವಿಗಳಿಗೆ ಇರಲಿಲ್ಲ; ಆದುದರಿಂದ ಅವರು ಪಾದಾಕ್ಷರಸಂಖ್ಯೆಯನ್ನು ಮಾತ್ರ ಛಂದೋಲಕ್ಷಣವಾಗಿ ಸ್ವೀಕರಿಸಿದರು. ಕಾಲಾಂತರದಲ್ಲಿ – ತ್ರಿಷ್ಟುಪ್‌ಛಂದವನ್ನು ಜಗತೀಚ್ಛಂದವಾಗಿ ಬೆಳೆಯಿಸುವ ಸಂದರ್ಭದಲ್ಲಿ ಆ ವ್ಯತ್ಯಾಸದ ಅರಿವು ಅವರಿಗೆ ಆಗತೊಡಗಿದ್ದಾಗಿರಬೇಕು. ತತ್ಪರಿಣಾಮವಾಗಿ, ವೈದಿಕಛಂದಗಳಲ್ಲಿ ಪಾದಗಳ ಉತ್ತರಾರ್ಧಗಳು ಕ್ರಮಶಃ ವ್ಯವಸ್ಥಿತರೂಪಗಳನ್ನು ಪಡೆಯುತ್ತಾಬರುವಂತಾಯಿತು. ಆದರೂ, ವೈದಿಕಕವಿಗಳಲ್ಲಿ ತಾಳಪ್ರಜ್ಞೆ ಎಂಬುದು ಹುಟ್ಟಿದ್ದೇ ಇಲ್ಲ." – ಇದು ಶ್ರೀ ವೇಲಣಕರರು ಮಾಡಿರುವ ತೀರ್ಮಾನ.

ವೈದಿಕಪದ್ಯಗಳಲ್ಲಿ "ವೃತ್ತ"ಗಳಲ್ಲಿರುವ ಹಾಗೆ, ಗುರುಲಘುಸ್ಥಾನವ್ಯವಸ್ಥೆ ಇಲ್ಲದಿರುವ ಮಾತ್ರಕ್ಕೆ, ಅವುಗಳ ಕರ್ತೃಗಳಿಗೆ ಅಕ್ಷರಗಳ ಗುರುತ್ವಲಘುತ್ವಗಳಿಂದಾಗಿ ಪದ್ಯದ ಛಂದೋಗತಿ-ಯಲ್ಲಾಗುವ ಪರಿಣಾಮಗಳ ಪ್ರಜ್ಞೆಯೇ ಇರಲಿಲ್ಲವೆಂದೂ, ಅವು ತಾಳಬದ್ಧವಲ್ಲದಿರುವ ಮಾತ್ರಕ್ಕೆ ಅವುಗಳನ್ನು ರಚಿಸಿದವರಿಗೆ ತಾಳಪ್ರಜ್ಞೆಯೇ ಇರಲಿಲ್ಲವೆಂದೂ ತೀರ್ಮಾನಿಸುವುದು ಎಷ್ಟರಮಟ್ಟಿಗೆ ಸಾಧುವೆನಿಸೀತೆಂಬುದು ಇಲ್ಲಿ ವಿಚಾರಣೀಯ.

ಯಾವ ಭಾಷೆಗಳಲ್ಲಿ ಪದಗಳ ಅಕ್ಷರೋಚ್ಚಾರಕಾಲಪರಿಮಾಣಗಳಿಗೆ (=ಹ್ರಸ್ವತ್ವ-ದೀರ್ಘತ್ವಗಳಿಗೆ) ಅರ್ಥಪ್ರಕಟನವಿಷಯದಲ್ಲಿ ಅಷ್ಟೊಂದು ಮಹತ್ತ್ವವಿಲ್ಲವೋ (ಉದಾ: ಇಂಗ್ಲಿಷ್) ಅಂತಹ ಭಾಷಾಭಾಷಿಗಳಿಗೆ, ಪದಾಕ್ಷರಗಳ ಹ್ರಸ್ವತ್ವದೀರ್ಘತ್ವಗಳಿಂದಾಗಿ (=ಲಘುತ್ವಗುರುತ್ವಗಳಿಂದಾಗಿ) ವಚನಸರಣಿಯಲ್ಲಿ ಅರ್ಥಾತ್ 'ಅಕ್ಷರಗತಿ'ಯಲ್ಲಿ ಉಂಟಾಗುವ ವ್ಯತ್ಯಾಸಗಳ ಪ್ರಜ್ಞೆ ಸಾಕಷ್ಟು ಇಲ್ಲದಿರುವುದು ಅಸಹಜವೆನಿಸಲಾರದು. ಆದರೆ, ಯಾವ ಭಾಷೆಗಳಲ್ಲಿ ಪದಾಂತರ್ಗತವಾದ ಅಕ್ಷರಗಳ ಉಚ್ಚಾರಕಾಲಪರಿಮಾಣಭೇದಗಳು ಅರ್ಥ-

ಸ್ವರೂಪಪ್ರಕಟನದ ಮುಖ್ಯವೇ ಆದ ಸಾಧನಗಳಾಗಿರುತ್ತವೋ (ಉದಾ: ಮನ, ಮಾನ; ಬಲ, ಬಾಲ.) ಆ ಭಾಷಾಭಾಷಿಗಳಿಗೆ ಅಕ್ಷರಗಳ ಗುರುತ್ವಲಘುತ್ವಗಳಿಂದಾಗಿ 'ಅಕ್ಷರಗತಿ'ಯಲ್ಲಿ ಉಂಟಾಗುವ ವ್ಯತ್ಯಾಸಗಳ ಪ್ರಜ್ಞೆಯು ಮಾತು ಕಲಿಯತೊಡಗುವಂದಿನಿಂದಲೇ ಹುಟ್ಟಿ ಬೆಳೆದು ಸ್ಥಿರೀಕೃತವಾಗುತ್ತದೆ. (ಇದು ಪ್ರತ್ಯಕ್ಷಾವಗಮವಾದ ತಥ್ಯ.) ವೈದಿಕಭಾಷೆ ಈ ಬಗೆಯ- ದಾಗಿರುವುದು ಮಾತ್ರವಲ್ಲ, ತತೋಧಿಕವಾಗಿ – ಹ್ರಸ್ವ (=ಲಘು) ದೀರ್ಘ (=ಗುರು) ಮತ್ತು 'ಪ್ಲುತ' ಎಂಬ ಮೂರು ಅಕ್ಷರೋಚ್ಚಾರಕಾಲಪರಿಮಾಣಭೇದಗಳಿಂದ ಬದ್ಧವಾಗಿರುವ ಭಾಷೆಯಾಗಿರುತ್ತದೆ. ಇಂತಹ ಈ ಭಾಷೆ ಯಾರ ಮಾತೃಭಾಷೆಯಾಗಿತ್ತೋ ಅವರಿಗೆ – ಅವರೊಳಗೂ ಕವಿಗಳಾಗಿದ್ದವರಿಗೆ – ಅಕ್ಷರಗತಿಭೇದಪ್ರಜ್ಞೆ ಇದ್ದಿಲ್ಲವೆಂದಾದರೆ, ಆ ಪ್ರಜ್ಞೆ ಇನ್ನಾರಿಗೆ ಇರಬಲ್ಲುದೋ, ನಾನರಿಯೆ! ಇನ್ನು – ತಾಳಪ್ರಜ್ಞೆಯ ಕುರಿತು ಹೇಳುವುದಾದರೆ ಅದು ಹೀಗೆ; ಸಂಗೀತಶಾಸ್ತ್ರಸಂಪ್ರದಾಯಾನುಸಾರವಾಗಿ 'ತಾಳ' ಎಂಬುದು ವಿವಿಧವಾಗಿರು- ವುದಾದರೂ – ಆ ಎಲ್ಲಾ ತಾಳಗಳ ಆಧಾರವು "ಏಕತಾಳ" ಎಂದರೆ "ಸಮತಾಳ." (ಏಕಃ = ಸಮಃ) ಸಮತಾಳಪ್ರಜ್ಞೆ ಎಂದರೂ ಲಯಪ್ರಜ್ಞೆ ಎಂದರೂ ಒಂದೇ ಆಗಿದೆ. (ಲಯತಾಳಗಳ ಸಂಬಂಧದ ಕೂಲಂಕಷ ವಿಚಾರವನ್ನು ಈ ನಿಬಂಧದ ಆದಿಯಲ್ಲಿಯೇ ಮಾಡಲಾಗಿದೆ.) ಈ ಪ್ರಜ್ಞೆ ಎಳೆಯ ಮಕ್ಕಳಲ್ಲಿಯೂ ಜಾಗೃತವಾಗಿರುತ್ತದೆ. ತಮ್ಮ ಶಿಶುಗಳನ್ನು ಕೈತಟ್ಟಿ ಆಡಿಸುವ ತಾಯಂದಿರೆಲ್ಲರಿಗೂ ಅನುಭವಕ್ಕೆ ಬರಬಹುದಾದ ತಥ್ಯವಿದು. (ಆರೋಗ್ಯ- ವಂತರಾದ ಎಲ್ಲರ ನಾಡೀಸ್ಪಂದನವೂ ಸಹಜವಾಗಿ ಸಮತಾಳದಲ್ಲಿಯೇ ಆಗುತ್ತಿರುವುದು ಈ ಪ್ರಜ್ಞೆಯ ಆವಿರ್ಭಾವಕ್ಕೆ ಮೂಲಹೇತುವಾಗಿರಲೂಬಹುದು.) ಸಕಲ ಭಾಷೆಗಳ (ದೈವಿಕ- ವಲ್ಲದ) ಜಾನಪದಗೀತಗಳೆಲ್ಲವೂ ಸಮತಾಳಬದ್ಧವಾಗಿಯೇ (=ಲಯಾನ್ವಿತವಾಗಿಯೇ) ಇರುತ್ತವೆ. ಅಸಂಸ್ಕೃತರಾಗಿಯೇ ಉಳಿದಿರುವ 'ಜನಜಾತಿ'(tribe)ಗಳ ಹಾಡುಗಳು ಸಹ ಇದಕ್ಕೆ ಅಪವಾದವಲ್ಲ. ಹೀಗೆ, ಮಾನವಜಾತಿಗೆಲ್ಲ ಸಾಮಾನ್ಯವಾದೊಂದು ಸಹಜಪ್ರಜ್ಞೆ- ಯಾಗಿರುವ "ತಾಳಪ್ರಜ್ಞೆ" (= ಸಮತಾಳಪ್ರಜ್ಞೆ = ಲಯಪ್ರಜ್ಞೆ) ವೈದಿಕಕವಿಗಳಲ್ಲಿ ಮಾತ್ರ ಇಲ್ಲದಿದ್ದಿರಬಹುದೇ? ವಸ್ತುಸ್ಥಿತಿ ಹೀಗಿದ್ದರೂ – ಶ್ರೀ ವೇಲಣಕರರು, "Vedic Poets had absolutely no idea of a tala." (*Jayadaman, Introduction, p. 13*) ಎಂದು ನಿಃಶಂಕೆಯಿಂದ ಘೋಷಿಸುತ್ತಾರೆ!

ವೈದಿಕಪದ್ಯಗಳಲ್ಲಿ (ವೃತ್ತಗಳಲ್ಲಿರುವ ಹಾಗೆ) ಗುರುಲಘುಸ್ಥಾನವ್ಯವಸ್ಥೆ ಇಲ್ಲದಿರು- ವುದಕ್ಕೆ ಗುರುಲಘುವಿನ್ಯಾಸಪ್ರಕಾರಜನ್ಯವಾದ ಅಕ್ಷರಗತಿಭೇದಪ್ರಜ್ಞೆ ಆ ಕವಿಗಳಿಗೆ ಇಲ್ಲದಿದ್ದುದೇ ಕಾರಣವೆಂಬ, ಮತ್ತು – ವೈದಿಕಪದ್ಯಗಳು ತಾಳರಹಿತವಾಗಿರುವುದಕ್ಕೆ ಆ ಕವಿಗಳಿಗೆ ತಾಳಪ್ರಜ್ಞೆ ಇಲ್ಲದಿದ್ದುದೇ ಕಾರಣವೆಂಬ ತೀರ್ಮಾನಕ್ಕೆ ಬಂದಿರುವ ಶ್ರೀವೇಲಣಕರರ ತರ್ಕಸರಣಿ ಹೇಗಿದೆ ಎಂದರೆ, – ಪದ್ಯರಚನಾಶಕ್ತಿ ಇಲ್ಲದಿದ್ದುದರಿಂದಲೇ ನಮ್ಮ ಶಿವಶರಣರು "ವಚನ"ಗಳನ್ನು ರಚಿಸಿದ್ದೆಂದೂ, ತಾಳಜ್ಞಾನವಿಲ್ಲದಿರುವುದರಿಂದಲೇ ನಮ್ಮ 'ಗಮಕಿ'ಗಳು ಸತಾಲಬಂಧಗಳಾದ ವಾರ್ಧಕಭಾಮಿನಿಗಳನ್ನು ವಿತಾಲವಾಗಿ ಹಾಡುತ್ತಿರುವುದೆಂದೂ ತರ್ಕಿಸಿದರೆ ಹೇಗೋ ಹಾಗಿದೆ!

ವೇದಗಳ ವಿಷಯದಲ್ಲಿ ಇಂತಹ ಹಲವು ಅಸಂಗತವಿಚಾರಗಳು ನಮ್ಮ ಮಹಾಮಹಾವಿದ್ವಾಂಸರಲ್ಲಿಯೂ ಮೂಡಿಬಂದಿರುವುದಕ್ಕೆ ಅನೇಕ ಕಾರಣಗಳಿರುವವಾದರೂ, ಅವುಗಳೊಳಗೆ ಮೂಲಭೂತವಾದ ಕಾರಣವಾವುದೆಂದರೆ – ವೇದಸೂಕ್ತಗಳು, ತಿರುಕುಳಿ- ಗಳೂ (nomads) ತುರುಕುರಿಗಾಹಿಗಳೂ ಆಗಿದ್ದು ಮಾನಸಿಕ ವಿಕಾಸವು ಸಾಕಷ್ಟು ಆಗದಿದ್ದ

ಒಂದು ಜನಸಮುದಾಯದವರ ರಚನೆಗಾಳಾಗಿರುತ್ತವೆಂದು – ಪಾಶ್ಚಾತ್ಯ ಮೇಧಾವಿಗಳು ನಮಗೆ ರಚಿಸಿಕೊಟ್ಟಿರುವ ನಮ್ಮ ದೇಶದ ಇತಿಹಾಸಕ್ಕೆ ಸಂಮತವಾಗಿ – ನಮ್ಮ ಆಧುನಿಕ ವಿದ್ವಾಂಸರ ಮನಸ್ಸಿನಲ್ಲಿ ವಿದ್ಯಾರ್ಥಿದಶೆಯಲ್ಲಿ ಉತ್ಪನ್ನವಾಗಿ ಬೆಳೆದು ನೆಲೆಗೊಂಡ ಅದೊಂದು ಭಾವನೆಯಾಗಿರುತ್ತದೆ. ಆದರೆ, ವೈದಿಕಪದ್ಯಗಳ ಛಂದೋಗತಿವಿಚಾರವನ್ನು ಮಾತ್ರ ಕೈಗೊಂಡಿರುವ ನಮಗೆ, ಆ ಪುರಾತನ ಜನರು ತಿರುಕುಳಿಗಳೋ, ಹಳ್ಳಿಗರೋ, ಪಟ್ಟಣಿಗರೋ ಎಂಬುದು ಅಪ್ರಸ್ತುತ; ನಮಗಿಲ್ಲಿ ಪ್ರಸ್ತುತವಾಗಿರುವುದು ಅವರ ಮಾನಸಿಕ ವಿಕಾಸದ ವಾಸ್ತವಿಕ ಪರಿಸ್ಥಿತಿ ಮಾತ್ರ.

ಯಾವುದಾದರೊಂದು ಜನಸಮುದಾಯದ ಮಾನಸಿಕ ವಿಕಾಸದ 'ಪ್ರಮಾಣ'ವನ್ನು ಎಂದರೆ 'ಮಟ್ಟ'ವನ್ನು ನಮಗೆ ತಿಳಿಸಿಕೊಡುವ ಸಾಧನಗಳಲ್ಲಿ ಮುಖ್ಯತಮವಾದುದು ಆ ಜನಸಮುದಾಯದ ಭಾಷೆ. ಭಾಷೆ ಎಂಬುದು ಮನೋವ್ಯಾಪಾರದ ಸಾಕ್ಷಾತ್ ಪ್ರತಿಬಿಂಬ. ಆದುದರಿಂದ ಒಂದು ಜನಸಮುದಾಯದ ಭಾಷೆ ಸಾಕಷ್ಟು ವಿಕಸಿತವಾಗಿಲ್ಲದಿದ್ದರೆ, ಆ ಸಮುದಾಯದ ಮಾನಸಿಕವಿಕಾಸವೂ ಸಾಕಷ್ಟು ಆಗಿಲ್ಲವೆಂಬುದು ಸ್ಪಷ್ಟ. ಹಾಗೆಯೇ – ಒಂದು ಸಮುದಾಯದ ಭಾಷೆ ಸಾಕಷ್ಟು ವಿಕಸಿತವಾಗಿರುವುದಾದರೆ, ಆ ಸಮುದಾಯದ ಮಾನಸಿಕ-ವಿಕಾಸವೂ ಸಾಕಷ್ಟು ಆಗಿರುತ್ತದೆಂಬುದು ನಿಶ್ಚಯ. ಯಾವುದೊಂದು ಭಾಷೆ ವಿಕಾಸದ ಯಾವ ಹಂತವನ್ನು ತಲಪಿರುತ್ತದೆಂಬುದನ್ನು ಆ ಭಾಷೆಯ ಅರ್ಥಸ್ವರೂಪ ಪ್ರಕಾಶವಿಧಿ-ಗಳಿಂದ, ಎಂದರೆ ಆ ಭಾಷೆಯ ವ್ಯಾಕರಣಲಕ್ಷಣಗಳಿಂದ ಊಹಿಸಿ ನಿರ್ಣಯಿಸುವುದು ಭಾಷಾವಿಜ್ಞಾನದ ತತ್ತ್ವಗಳಲ್ಲೊಂದಾಗಿದೆ. ಒಂದು ಭಾಷೆ ವಿಕಸಿತವಾಗುತ್ತಾ ಹೋದಂತೆ, ಅರ್ಥಸ್ವರೂಪಭೇದಸೂಚಕವಾದ ಆ ಲಕ್ಷಣಗಳು ಅಧಿಕವೂ ಸೂಕ್ಷ್ಮವೂ ಆಗುತ್ತವೆ. ಈ ದೃಷ್ಟಿಯಿಂದ ವೈದಿಕಭಾಷೆಯ ಆ ಲಕ್ಷಣಗಳನ್ನು ಪರಾಮರ್ಶಿಸಿದರೆ, ಆ ಭಾಷೆ ಎಷ್ಟರಮಟ್ಟಿಗೆ ವಿಕಸಿತವಾಗಿತ್ತೆಂಬುದರ ಖಚಿತವಾದ ಅರಿವು ನಮಗಾಗುತ್ತದೆ.

ವೇದಭಾಷೆಗೆ ಎಂದರೆ ವೈದಿಕಸಂಸ್ಕೃತಕ್ಕೆ, ಮತ್ತು ವಾಲ್ಮೀಕಿರಾಮಾಯಣ ಮಹಾಭಾರತಾದಿಗಳ ಸಂಸ್ಕೃತಕ್ಕೆ ಎಂದರೆ ಲೌಕಿಕಸಂಸ್ಕೃತಕ್ಕೆ ಇರುವ ಭಾಷಾಭೇದ ಅತ್ಯಲ್ಪ; ಅದು ಎಷ್ಟು ಅಲ್ಪವಾದುದೆಂದರೆ – ಹಳಗನ್ನಡಕ್ಕೂ ನಡುಗನ್ನಡಕ್ಕೂ ಇರುವಷ್ಟು ಭೇದವು ಸಹ ಅವುಗಳೊಳಗಿಲ್ಲ. ಪಾಣಿನಿಯ ವ್ಯಾಕರಣವು ಈ ಎರಡಕ್ಕೂ ಅನ್ವಯಿಸಿರುವ ರಚನೆ. ಆದರೂ 'ಸಂಸ್ಕೃತ' ಎಂಬ ಹೆಸರು ಸಾಮಾನ್ಯವಾಗಿ ಲೌಕಿಕಸಂಸ್ಕೃತದ ಹೆಸರೇ ಆಗಿ ಪರಿಣಮಿಸಿದೆ ಎನ್ನಬಹುದು. ಈ ಭಾಷೆ ವಿಶ್ವದ ಭಾಷೆಗಳೊಳಗೆ ಅತ್ಯಂತ ವಿಕಸಿತವಾದ ಭಾಷೆಗಳಲ್ಲೊಂದೆಂಬ ವಿಷಯದಲ್ಲಿ ಯಾವ ದೇಶದ ವಿದ್ವಾಂಸರಿಗೂ ಮತಭೇದವಿಲ್ಲ. ಪಾಶ್ಚಾತ್ಯವಿದ್ವಾಂಸರಲ್ಲಿ ಅನೇಕರು – ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಿಗಿಂತ ಸಂಸ್ಕೃತವೇ ಹೆಚ್ಚು ಪರಿಷ್ಕೃತವೂ ವಿಶಾಲವೂ ಆಗಿರುವ ಭಾಷೆ ಎಂದು ಹೇಳಿರುತ್ತಾರೆ. ಉದಾ: ಈಸ್ಟ್ ಇಂಡಿಯಾ ಕಂಪೆನಿಯ ಆಳಿಕೆಯ ಕಾಲದಲ್ಲಿ ಕಲ್ಕತ್ತದಲ್ಲಿ ನ್ಯಾಯಪೀಠಾಧಿಪತಿಯಾಗಿದ್ದ ಸರ್ ವಿಲಿಯಮ್ ಜೋನ್ಸ್ ಎಂಬ ಆಂಗ್ಲೇಯ ವಿದ್ವಾಂಸನು – ಇವನು ಕಾಳಿದಾಸನ ಶಾಕುಂತಲ ನಾಟಕವನ್ನು ಇಂಗ್ಲಿಷಿಗೆ ಭಾಷಾಂತರಿಸಿದ ಮೊದಲಿಗನು – ೧೭೮೬ರಲ್ಲಿ ಹೇಳಿರುವ ಮಾತುಗಳು ಇವು: "The Sanskrit Language, whatever be its antiquity, is of a more wonderful structure, more perfect than the Greek, more copious than Latin, and more exquisitely refined than either" [As reproduced in "The Hindu" (Madras) on 28-12-1980] ಈ ಭಾಷೆಯಲ್ಲಿ ಅಸಂಖ್ಯಕಾವ್ಯಪುರಾಣಾದಿಗಳೂ ನಾನಾಶಾಸ್ತ್ರಗಳೂ ರಚಿತವಾಗಿರುವ ಕಾರಣ, ಕೇವಲ ದೈವಿಕ ಧಾರ್ಮಿಕ ಆಧ್ಯಾತ್ಮಿಕ

ವಿಷಯಗರ್ಭಿತವಾದ ವೇದಸಂಹಿತೆಗಳ ಭಾಷೆಗಿಂತ ಇದು ಶಬ್ದಸಂಪತ್ತಿಯಲ್ಲಿ ದೊಡ್ಡದೆನಿಸಿಕೊಳ್ಳಬಹುದಾದರೂ, – ಈ ಹಿಂದೆ ಸೂಚಿಸಿದ ಮಾನಸಿಕವಿಕಾಸದ್ಯೋತಕವಾದ ಭಾಷಾಲಕ್ಷಣಸಂಪತ್ತಿಯಲ್ಲಿ ವೇದಭಾಷೆಗಿಂತ ಇದು ಹಿರಿದೆಂದೇನೂ ಹೇಳುವಂತಿಲ್ಲ; ಬದಲಾಗಿ – ವೇದಭಾಷೆಯಲ್ಲಿದ್ದ ಕೆಲವು ಲಕ್ಷಣಗಳನ್ನು ಈ ಭಾಷೆ ಕಳೆದುಕೊಂಡಿರುತ್ತದೆ; ಇತರ ಭಾಷೆಗಳಲ್ಲಿ ಕಂಡುಬಾರದ, ಆದರೆ ವೈದಿಕಭಾಷೆಯಲ್ಲಿದ್ದ, "ದ್ವಿವಚನ"ವು ಈ ಭಾಷೆಯಲ್ಲಿಯೂ ಉಳಿದಿರುವುದಾದರೂ – ವೇದಭಾಷೆಯಲ್ಲಿದ್ದ ಹತ್ತು ಆಖ್ಯಾತ (finite verb)ರೂಪಗಳೊಳಗೆ ಒಂದು (ಲೇಟ್) ಇದರಲ್ಲಿ ಮಾಯವಾಗಿದೆ; ವೇದಭಾಷೆಯಲ್ಲಿದ್ದ 'ಪ್ಲುತ'ವೆಂಬ ಮೂರು ಮಾತ್ರಾಕಾಲದ ದೀರ್ಘತರಸ್ವರವೂ ಲುಪ್ತವಾಗಿದೆ; ತ್ರೈಸ್ವರ್ಯ–ನಿಯಮವಂತೂ ಇದರಲ್ಲಿ ಉಳಿದಿಲ್ಲ. ಹೀಗೆ, ಭಾಷಾಲಕ್ಷಣಸಂಪತ್ತಿಯಲ್ಲಿ ಲೌಕಿಕಸಂಸ್ಕೃತವು ವೈದಿಕಸಂಸ್ಕೃತಕ್ಕಿಂತ ಕಿರಿದೇ ಆಗಿರುತ್ತದೆ. ಲೌಕಿಕಸಂಸ್ಕೃತಕ್ಕಿಂತ ವೈದಿಕಸಂಸ್ಕೃತದಲ್ಲಿ ಸಂಸ್ಕಾರಾತಿಶಯವಿರುವುದರಿಂದಲೇ ಭರತನು ನಾಟ್ಯಶಾಸ್ತ್ರದಲ್ಲಿ ವೈದಿಕಭಾಷೆಯನ್ನು "ಅತಿಭಾಷಾ" ಎಂದು ಹೆಸರಿಸಿದ್ದಾಗಿದೆ. ತಾತ್ಪರ್ಯವೇನೆಂದರೆ – 'ವೇದಭಾಷೆ' ಎಂಬುದು ಚೆನ್ನಾಗಿ ವಿಕಸಿತವಾಗಿದ್ದ ಒಂದು ಪ್ರಬುದ್ಧಭಾಷೆಯಾಗಿತ್ತೇ ಹೊರತು, ಬಾಲಿಶಾವಸ್ಥೆಯಲ್ಲಿದ್ದ ಭಾಷೆಯಾಗಿರಲಿಲ್ಲ. ಒಂದು ಭಾಷೆ ಇಷ್ಟು ವಿಕಸಿತವಾಗಿರಬೇಕಾದರೆ ಆ ಭಾಷಾಭಾಷಿಗಳ ಮಾನಸಿನಶಕ್ತಿಗಳ, ಎಂದರೆ ವಿವಿಧಪ್ರಜ್ಞೆಗಳ, ವಿಕಾಸವೂ ಸಾಕಷ್ಟು ಆಗಿದ್ದಿರಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ವಸ್ತುಸ್ಥಿತಿ ಹೀಗಿರುವುದಾದರೂ, ಶ್ರೀ ವೇಲಣಕರರು – ವೈದಿಕಪದ್ಯಗಳಲ್ಲಿ ಗುರುಲಘುಸ್ಥಾನವ್ಯವಸ್ಥೆಯಾಗಲಿ ತಾಳಬದ್ಧತೆಯಾಗಲಿ ಇಲ್ಲವೆಂಬೊಂದು ಕಾರಣದಿಂದ, ಆ ಕವಿಗಳಿಗೆ ಗುರುಲಘುಭೇದಗಳ ಫಲವಾಗಿ ಪದ್ಯಗಳ ಗತಿಯಲ್ಲಾಗುವ ವ್ಯತ್ಯಾಸದ ಪ್ರಜ್ಞೆಯೂ ಇದ್ದಿಲ್ಲ, (ಆಬಾಲಗೋಪಾಲನಿಶ್ಚಿತವಾದ) ಸಮತಾಳಪ್ರಜ್ಞೆಯೂ ಇದ್ದಿಲ್ಲ – ಎನ್ನುತ್ತಾರೆ! ಆದರೆ ವೈದಿಕಪದ್ಯಗಳಲ್ಲಿ ಇಲ್ಲದಿರುವ ಛಂದೋವ್ಯವಸ್ಥೆ ಇಷ್ಟು ಮಾತ್ರ ಅಲ್ಲ; ಅವುಗಳಲ್ಲಿ ಎಷ್ಟೋ ಕಡೆ ಪಾದಾಕ್ಷರಸಂಖ್ಯಾಸಮತ್ವವೂ ಇಲ್ಲ. ಇದನ್ನನುಲಕ್ಷಿಸಿ – ವೈದಿಕಕವಿಗಳಲ್ಲಿ ಸಂಖ್ಯಾನಪ್ರಜ್ಞೆಯೂ ಸಾಕಷ್ಟು ಇರಲಿಲ್ಲವೆಂದು ಹೇಳುವ ಸಾಹಸವನ್ನು ಶ್ರೀ ವೇಲಣಕರರು, ಏಕೋ, ಮಾಡಲಿಲ್ಲ; ಅಂತಹದನ್ನೆಲ್ಲ ಅವರು, "Poetic Licence" ಎಂದು ಹೇಳಿ ಆ ಕವಿಗಳನ್ನು ಕ್ಷಮಿಸಿಬಿಟ್ಟಿದ್ದಾರೆ ! (*Jayadaman*, Introduction, p.8)

[ಸಂಸ್ಕೃತ ಛಂದೋಬಂಧಗಳ ಕುರಿತು *Jayadaman* ಗ್ರಂಥದ ಪೀಠಿಕೆಯಲ್ಲಿ ಇನ್ನೂ ಕೆಲವು ಅಸಂಗತ ವಿಚಾರಗಳು ಕಂಡುಬರುತ್ತವೆ. ಆದರೆ ಅವೆಲ್ಲ ನಮಗಿಲ್ಲಿ ಪ್ರಸ್ತುತವಲ್ಲ. ಆದರೂ 'ವೈತಾಲೀಯ'ವೆಂಬ ಹೆಸರಿನ ಛಂದೋಬಂಧಗಳ ತಾಳದ ವಿಷಯದಲ್ಲಿ ಶ್ರೀ ವೇಲಣಕರರು ಪ್ರಕಟಿಸಿರುವ ಅಭಿಪ್ರಾಯದ ಕುರಿತು (*Jayadaman*, Introduction, p. 13) ಎರಡು ಮಾತು ಹೇಳದಿರಲಾಗುವುದಿಲ್ಲ; "ವೈತಾಲಿಕರು (=ಸ್ತುತಿಪಾಠಕರು) ಹಾಡುತ್ತಿದ್ದ ಪ್ರಾಕೃತಭಾಷೆಯ ತಾಳಬದ್ಧವಾದೊಂದು ಛಂದೋಬಂಧವು 'ವೈತಾಲೀಯ' ಎಂಬ ಹೆಸರಲ್ಲಿ ಸಂಸ್ಕೃತವನ್ನು ಪ್ರವೇಶಿಸಿದಾಗ – ವೈದಿಕ ಛಂದೋಮಾರ್ಗಾನುಯಾಯಿಗಳಾಗಿದ್ದ ಸಂಸ್ಕೃತಕವಿಗಳು ಅದನ್ನು ತಾಳಹೀನವಾಗಿ ಮಾಡಿಬಿಟ್ಟರು" – ಎಂದು ಅವರು ಹೇಳುತ್ತಾರೆ. ಆದರೆ – ಪಿಂಗಲಸೂತ್ರಾರ್ಥಕ್ಕೆ ಸಂಪೂರ್ಣ ಸಂಮತವಾಗಿ ಹಲಾಯುಧಭಟ್ಟನು ತನ್ನ ಆ ವ್ಯಾಖ್ಯಾನದಲ್ಲಿ ಉದಾಹರಿಸಿರುವ ವಿಭಿನ್ನಸ್ವರೂಪದ ಹದಿನಾಲ್ಕು (ಸಂಸ್ಕೃತ) ವೈತಾಲೀಯಗಳೊಳಗೆ, ತಾಳಹೀನವಾದ ವೈತಾಲೀಯವು ಒಂದೂ ಇಲ್ಲ!! ಅವೆಲ್ಲವೂ ಎಂಟೆಂಟು ಮಾತ್ರೆಗಳ ಆವರ್ತದ ತಾಳಬದ್ಧಮಾತ್ರಾಬಂಧಗಳಾಗಿವೆ–

ಯೆಂಬುದನ್ನರಿತುಕೊಳ್ಳಲು ಹೆಚ್ಚಿನ 'ತಾಳಜ್ಞಾನ'ವೇನೂ ಬೇಡ; ಕೇವಲ 'ಆದಿತಾಳ'ದ ಪರಿಚಯವಿದ್ದರೆ ಸಾಕು. ಪಾದಗಳ ಮಾತ್ರಾಸಂಖ್ಯಾನುಗುಣವಾಗಿ ಅವು ನಾಲ್ಕು ಬಗೆಯವುಗಳಾಗಿವೆ: (೧) ೧೪+೧೬, ೧೪+೧೬. (೨) ೧೬+೧೬, ೧೬+೧೬. (೩) ೧೬+೧೮, ೧೬+೧೮. (೪) ೧೪+೧೪, ೧೪+೧೪ – ಹದಿನಾಲ್ಕು ಮಾತ್ರೆಯ ಪಾದಗಳ ಕೊನೆಯಲ್ಲಿ (ಆವರ್ತಪೂರ್ತಿಗಾಗಿ) ಎರಡು ಮಾತ್ರಾಕಾಲಗಳ ವಿರಾಮ (ಅಥವಾ ಪಾದಾಂತ್ಯಕರ್ಷಣ)ವೂ, ಹದಿನೆಂಟು ಮಾತ್ರೆಗಳುಳ್ಳ ಪಾದಗಳ ಕೊನೆಯಲ್ಲಿ (ಅರ್ಥಾತ್ ಆ ಪದ್ಯದ ಅರ್ಧಗಳ ಕೊನೆಯಲ್ಲಿ) ಆರು ಮಾತ್ರಾಕಾಲಗಳ ವಿರಾಮ(ಅಥವಾ ಆಲಾಪರೂಪದ ಕರ್ಷಣ)ವೂ ಇರುತ್ತದೆ. ಹೀಗೆ ಪಾದಾಂತ್ಯತಾಲಖಂಡಗಳು ಊನಾಕ್ಷರಗಳಾಗಿರುವುದು ಸಕಲಭಾಷೆಗಳ ಲಯಾನ್ವಿತಛಂದೋಬಂಧಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಒಂದು ಲಕ್ಷಣವಾಗಿದೆ. ಇದರಿಂದ ಪಠನಗಾಯನಗಳು ಸುಕರವೂ ಮನೋಹರವೂ ಆಗುತ್ತವೆಂಬುದು ಅನುಭವ ವೇದ್ಯ. ಲಯಾನ್ವಿತಬಂಧಗಳ ಈ ವೈಶಿಷ್ಟ್ಯವನ್ನು ಈ ನಿಬಂಧದ ಆರನೆಯ ಪರಿಚ್ಛೇದದಲ್ಲಿ ಉದಾಹೃತವಾದ ಛಂದೋಬಂಧಗಳು ತೋರಿಸಿಕೊಡಬಲ್ಲವು. ಈ ತಥ್ಯದ ಹೆಚ್ಚಿನ ವಿವರಗಳನ್ನು ತಿಳಿಯಲಿಚ್ಛಿಸುವವರು "ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ" ಎಂಬ, ಹಾಗೂ "ಕನ್ನಡಛಂದಸ್ಸು" ಎಂಬ ನನ್ನ ನಿಬಂಧಗಳನ್ನು ಅವಲೋಕಿಸಬಹುದು.]

ಈ ಮೇಲೆ ವಿವರಿಸಿರುವಂತೆ, ವೇದಭಾಷೆ ಪ್ರೌಢಾವಸ್ಥೆಯನ್ನು ಪಡೆದ ಒಂದು ಭಾಷೆಯಾಗಿತ್ತೆಂಬುದನ್ನು ಪರಿಭಾವಿಸಿದರೆ – ವೇದಸೂಕ್ತಗಳು ಅಪ್ರಬುದ್ಧಾವಸ್ಥೆಯಲ್ಲಿದ್ದ ಒಂದು ಆದಿಮ ಜಾತಿ(primitive tribe)ಯ ಕವಿಗಳು ತೊದಲಿದ ಪದ್ಯಗಳೆಂಬ ಆಧುನಿಕ ಭಾವನೆಗೆ ಆಧಾರವೇ ಇಲ್ಲವೆಂಬುದು ಮನವರಿಕೆಯಾಗುತ್ತದೆ. ಏಕೆಂದರೆ –ಮಾನವ ಮನೋವಿಕಾಸವೂ ಭಾಷಾವಿಕಾಸವೂ ಹೇಗೆ ಒಟ್ಟಿಗೆ ಆಗುವಂಥವುಗಳೋ, ಹಾಗೆಯೇ ಭಾಷಾವಿಕಾಸವೂ ವಾಙ್ಮಯವಿಕಾಸವೂ ಒಂದರೊಡನೊಂದು ಆಗುವಂಥವುಗಳೇ ಹೊರತು, (ಆ ವಾಙ್ಮಯವು ಲಿಖಿತವೇ ಆಗಬೇಕೆಂದೇನೂ ಇಲ್ಲ.) ಒಂದಾದಮೇಲೆ ಇನ್ನೊಂದು ಆಗುವಂಥವುಗಳಲ್ಲ. ಪ್ರಪಂಚದ ಯಾವ ಭಾಷೆಯ ವಾಙ್ಮಯವನ್ನು ಪರೀಕ್ಷಿಸಿದರೂ ಈ ತಥ್ಯವು ಅಲ್ಲಿ ಗೋಚರಿಸದಿರದು. ನಮಗೆ ಲಭಿಸಿರುವ ಪುರಾತನತಮ ವಾಙ್ಮಯವು ವೇದವಾಙ್ಮಯವೆಂಬೊಂದು ಕಾರಣದಿಂದ, ಅದು ಆ ಜನಸಮುದಾಯದ ಆದ್ಯತಮರಚನೆ ಎಂದು ಭಾವಿಸುವುದೂ ಸರಿಯಲ್ಲ; ಅದಕ್ಕಿಂತ ಹಿಂದಿನ ವಾಙ್ಮಯವಾವುದೂ ಲಭಿಸಿಲ್ಲ – ಎಂದಿಷ್ಟೇ ಅದರರ್ಥ. ಯಾವುದೊಂದು ಭಾಷೆಯಲ್ಲಾದರೂ – ವಿಶೇಷತಃ ಬರವಣಿಗೆ ಇಲ್ಲದಿದ್ದ ಕಾಲದಲ್ಲಿ – ಹುಟ್ಟಿದ ರಚನೆಗಳೊಳಗೆ ಘನವಾದವುಗಳು ಮಾತ್ರ ಉಳಿಯಬಲ್ಲವು; ಘನವಲ್ಲದವೆಲ್ಲ ನಿರ್ನಾಮವಾಗಿಹೋಗುವವು. ಇದರಿಂದಾಗಿ, ಚಿರಕಾಲದಿಂದ ಉಳಿದು ಬಂದಿರುವ ರಚನೆಗಳೇ ಆಯಾ ಭಾಷೆಯ ಆದ್ಯರಚನೆಗಳೆಂದು ಕಾಲಾಂತರದಲ್ಲಿ ಭಾವಿಸಲ್ಪಡುವವು. ವೇದಸೂಕ್ತಗಳು ಅನರ್ಘ್ಯವಾದ ಅರ್ಥಸಂಪತ್ತಿಯುಳ್ಳ ದೈವಿಕ (=ದೇವತಾವಿಷಯಕ) ರಚನೆಗಳಾಗಿರುವ ಕಾರಣ, ಆ ಕಾಲದ ಹಾಗೂ ತತ್ಪೂರ್ವದ (ಸಾಮಾನ್ಯವಾದ) ಇತರ ರಚನೆಗಳಂತೆ ಲುಪ್ತವಾಗಿಹೋಗದೆ – ನಮ್ಮ ದೇಶದ ಪುರಾತನ ವಾಸ್ತುರಚನೆಗಳೊಳಗೆ (ಶಿಲಾನಿರ್ಮಿತವಾದ) ದೇವಮಂದಿರಗಳು ಮಾತ್ರ ಉಳಿದಿರುವಂತೆ – ಅವು ಉಳಿದುಬಂದಿರುತ್ತವೆ ಎಂದು ತಿಳಿಯುವುದು ಯುಕ್ತವೂ ಸಮಂಜಸವೂ ಆಗಿದೆ.

ಚೆನ್ನಾಗಿ ವಿಕಸಿತವಾದ, ಮತ್ತು ಸಾಕಷ್ಟು ವಿಕಸಿತವಾಗದೆ ಆಡುಭಾಷೆಗಳಾಗಿಯೇ ಉಳಿದಿರುವ, ನಾನಾಭಾಷೆಗಳಲ್ಲಿ ನಮಗೆ ಲಬ್ಧವಾಗಿರುವ ಆಯಾ ಭಾಷೆಯ ಅತಿ ಹಳೆಯ ವಾಙ್ಮಯರೂಪಗಳನ್ನು ಪರಾಮರ್ಶಿಸಿದರೆ – ಅವೆಲ್ಲ ಪದ್ಯರೂಪದಲ್ಲಿರುವುದೂ, ಆ

ಪದ್ಯಗಳೆಲ್ಲ ಲಯಾನ್ವಿತಗಳೇ ಆಗಿರುವುದೂ ಗೊತ್ತಾಗುತ್ತದೆ. [ನಮ್ಮ ದೇಶದ ಭಾಷೆಗಳೊಳಗೆ, ಸಂಸ್ಕೃತ ಮತ್ತು ಅದರ ವಿಕೃತಿಗಳಾದ 'ಪಾಲಿ' ಮೊದಲಾದ ಪ್ರಾಕೃತಭಾಷೆಗಳ ವಾಙ್ಮಯಗಳನ್ನು ಬಿಟ್ಟರೆ – ನಮಗೆ ಲಭಿಸುವ ಪುರಾತನತಮ ವಾಙ್ಮಯಗಳು ತಮಿಳಿನವು ಮತ್ತು ಕನ್ನಡದವು. ಇವುಗಳ ರೂಪಗಳನ್ನೂ, ಮತ್ತು ನಿನ್ನೆಯವರೆಗೂ ಗ್ರಂಥಸ್ಥವಾಗದೆ ಆಡುನುಡಿಯಾಗಿಯೇ ಇದ್ದ 'ತುಳು'ವಿನ (ದೈವಿಕವಲ್ಲದ) ಹಳೆಯ ವಾಙ್ಮಯವನ್ನೂ, – ಇವಲ್ಲದೆ, ಕನ್ನಡವು ವಿಕಸಿತವಾಗಿ ಸಾವಿರ ವರ್ಷಗಳ ಬಳಿಕ ವಿಕಸಿತವಾದ 'ಮರಾಠಿ'ಯ ಆದಿವಾಙ್ಮಯಸ್ವರೂಪವನ್ನೂ ಯಥಾಮತಿ ಪರಾಮರ್ಶಿಸಿ ನಾನು ಹೇಳುವ ಮಾತುಗಳಿವು.] ಅವೆಲ್ಲವೂ ನಿರಪವಾದವಾಗಿ ಲಯಾನ್ವಿತ(=ತಾಳಬದ್ಧ)ವಾಗಿರುವ ಕಾರಣವೇನೆಂದರೆ – ಆದಿಕಾಲದ ಪದ್ಯಗಳೆಲ್ಲವೂ 'ಹಾಡು'ಗಳಾಗಿಯೇ ಹುಟ್ಟಿದವುಗಳು. ಆದಿಕಾಲಗಳಲ್ಲಿ ಸಂಗೀತವೂ ಸಾಹಿತ್ಯವೂ ಒಂದರಿಂದ ಇನ್ನೊಂದು ಬೇರಾಗಿರಲಿಲ್ಲ. ಆದಿಮಜಾತಿಗಳ ಸಂಗೀತವೆಂದರೆ ಆ ಹಾಡುಗಳನ್ನು ಹಾಡುವುದು ಮಾತ್ರವಲ್ಲ, ಅದಕ್ಕನುಗುಣವಾಗಿ ಕುಣಿಯುವುದೂ ಆಗಿತ್ತು. (ಸಂಗೀತ ಎಂಬ ಶಬ್ದ ಮೂಲಾರ್ಥವಾದರೂ – "ಒಟ್ಟುಕೂಡಿ ಹಾಡಿದುದು" ಎಂದಾಗಿದೆ. "ಗೀತಂ ವಾದ್ಯಂ ನರ್ತನಂ ಚ ತ್ರಯಂ ಸಂಗೀತಮುಚ್ಯತೇ " ಎಂಬ ಶಾಸ್ತ್ರೋಕ್ತಿಯನ್ನೂ ಇಲ್ಲಿ ಸ್ಮರಿಸಿಕೊಳ್ಳುವುದು ವಿಹಿತವಾಗಿದೆ.) ಕುಣಿತಕ್ಕೆ ತಾಳವೇ ತಾಯಿ; ತಾಳಕ್ಕೆ ಲಯವೇ ತಾಯಿ. (ಇದರಿಂದಾಗಿಯೇ ಸಂಸ್ಕೃತದಲ್ಲಿ ನರ್ತಕಿಗೆ 'ಲಯಪುತ್ರಿಕಾ' ಎಂಬ ಹೆಸರು ಬಂದುದಾಗಿದೆ.) ವಸ್ತುಸ್ಥಿತಿ ಹೀಗಿರುವ ಕಾರಣ, ಆದಿಜನಾಂಗಗಳ ಪದ್ಯರಚನೆಗಳು – ಅರ್ಥಾತ್ ಯಾವುದೊಂದು ಭಾಷೆಯಲ್ಲಿ ಹುಟ್ಟಿಬಂದ ಆದ್ಯತಮಪದ್ಯಗಳು – ಲಯ-ರಹಿತವಾಗಿರುವ, ಎಂದರೆ ತಾಳಕ್ಕೆ ಒಡಂಬಡದಿರುವ, ಸಂಭಾವ್ಯತೆಯೇ ಇದ್ದಿಲ್ಲ. ಆದರೆ ನಮಗೆ ಲಬ್ಧವಾಗಿರುವ ವೈದಿಕಜನಾಂಗದ ಪ್ರಾಚೀನತಮ ಪದ್ಯಗಳಾದ ವೇದಸೂಕ್ತಗಳೆಲ್ಲ ಲಯರಹಿತಗಳೇ ಆಗಿವೆ! ಆ ಒಂದು ಆದಿಜನಸಮುದಾಯವು ಇತರ ಆದಿಮಾನವ ಸಮುದಾಯಗಳಿಗಿಂತ ಭಿನ್ನಪ್ರಕೃತಿಯದಾಗಿತ್ತೇ? – ಇದು ಸರ್ವಥಾ ಅಸಂಭವ. ಹಾಗಾದರೆ ಅವು ಲಯರಹಿತವಾಗಿರುವುದಕ್ಕೆ ಕಾರಣವೇನು? ಈ ಪ್ರಶ್ನೆಗೆ ಉತ್ತರ – ಹಿಂದೆಯೇ ಸೂಚಿಸಿರುವಂತೆ, ವೇದಸೂಕ್ತಗಳು ವೈದಿಕಜನಾಂಗದವರ ಪದ್ಯರಚನಾಪ್ರಯತ್ನದ ಆದಿಕಾಲ-ಗಳ ಫಲಗಳಲ್ಲ – ಎಂಬುದೇ ಆಗಿದೆ.

ವೇದಸೂಕ್ತಗಳಲ್ಲಿ – ಛಂದೋಗತಿಸೌಂದರ್ಯಹೇತುಗಳೊಳಗೆ ಅತ್ಯಂತ ಪ್ರಬಲ-ವಾದ 'ಲಯ'ದ ಅಭಾವವಿರುವುದು ಮಾತ್ರವಲ್ಲ, ಆ ಸೌಂದರ್ಯದ ಇನ್ನೊಂದು ಹೇತುವಾದ ಗುರುಲಘುಸ್ಥಾನವ್ಯವಸ್ಥೆಯ ಅಭಾವವೂ ಇದೆ ಎಂಬುದನ್ನು ತಿಳಿದಿರುತ್ತೇವೆ. ಇದೂ ಅಲ್ಲದೆ ಅವುಗಳಲ್ಲಿ ಎಷ್ಟೋ ಸಂದರ್ಭಗಳಲ್ಲಿ ಪಾದಾಕ್ಷರಸಂಖ್ಯಾಸಮತ್ವವು ಸಹ ಇಲ್ಲದಿರುವುದನ್ನು ಕಂಡುಕೊಂಡಿದ್ದೇವೆ. ಅವುಗಳ ರೂಪ ಈ ಬಗೆಯಾಗಿರುವುದಕ್ಕೆ – ಪ್ರಸಂಗವಶಾತ್ ಹಿಂದೆ ಒಂದೆರಡು ಬಾರಿ ಸೂಚಿಸಿರುವಂತೆ – ಅವುಗಳ ಲಕ್ಷ್ಯವು ಗತಿ-ಸೌಂದರ್ಯವಾಗಿಲ್ಲದಿದ್ದುದೇ ಕಾರಣ ಹೊರತು, ಬೇರಾವುದೂ ಅಲ್ಲ. ಗತಿಸೌಂದರ್ಯ-ವೆಂಬುದು ಲೌಕಿಕಾನಂದಕ್ಕಾಗಿ ನಿರ್ಮಿತವಾಗುವ ಛಂದೋರಚನೆಗಳ ಅನಿವಾರ್ಯಲಕ್ಷಣವೇ ಹೊರತು, ದೈವಿಕ ಅಥವಾ ಆಧ್ಯಾತ್ಮಿಕ ರಚನೆಗಳಲ್ಲಿ ಇದ್ದೇ ತೀರಬೇಕಾದೊಂದು ಲಕ್ಷಣವೇನೂ ಅಲ್ಲ. ವೇದಸೂಕ್ತಗಳ ಉದ್ಭವಕಾಲಕ್ಕಿಂತ ಎಷ್ಟೋ ಮತ್ತೆ ಹುಟ್ಟಿದವುಗಳೆಂಬ ವಿಷಯದಲ್ಲಿ ಯಾವ ದೇಶದ ವಿದ್ವಾಂಸರಿಗೂ ಮತಭೇದವಿಲ್ಲದಿರುವ ಉಪನಿಷತ್ತು-ಗಳಲ್ಲಿಯೂ ಎಷ್ಟೋ ಕಡೆ ಇದೇ ಪರಿಸ್ಥಿತಿ ಇರುವುದನ್ನು ನೋಡಬಹುದು. ಉದಾ:

ಸತ್ಯಮೇವ ಜಯತೇ ನಾನೃತಂ । (=೧೦)
ಸತ್ಯೇನ ಪಂಥಾ ವಿತತೋ ದೇವಯಾನಃ ॥ (=೧೨)
ಯೇನಾಕ್ರಮಂತಿ + ಋಷಯೋ ಹ್ಯಾಪ್ತಕಾಮಾಃ । (=೧೨)
ಯತ್ರ ತತ್ ಸತ್ಯಸ್ಯ ಪರಮಂ ನಿಧಾನಂ ॥ . ॥ (೧೨)

(ಮುಂಡಕೋಪನಿಷತ್ ೩-೧-೬)

[ಉಪನಿಷತ್ತಿನ ಈ 'ಛಂದ'ಕ್ಕೂ ವೇದಸೂಕ್ತಗಳಲ್ಲಿರುವ ಈ ಪರಿಮಾಣದ 'ಛಂದ'ಗಳಿಗೂ ಗುರುಲಘುಸ್ಥಾನವ್ಯವಸ್ಥಾವಿಷಯದಲ್ಲಿ ವ್ಯತ್ಯಾಸವೆಲ್ಲಿದೆ? ವೇದಸೂಕ್ತಗಳ ಕವಿಗಳಿಗೆ ಆದಿಯಲ್ಲಿ ಇಲ್ಲದಿದ್ದ ಅಕ್ಷರಗತಿಪ್ರಜ್ಞೆ ಕಾಲಾಂತರದಲ್ಲಿ ಹುಟ್ಟಿ, ಆಮೇಲೆ ಅವರು ಛಂದೋರಚನೆ ಮಾಡುತ್ತಾಹೋದಂತೆ ಆ ಛಂದಗಳಲ್ಲಿ ಗುರುಲಘುಸ್ಥಾನವ್ಯವಸ್ಥೆ ಹೆಚ್ಚುತ್ತಾ ಹೋಯಿತೆಂಬ ಶ್ರೀ ವೇಲಣಕರರ ಅಭಿಪ್ರಾಯದಲ್ಲಿ ಸತ್ಯದ ಲೇಶವಾದರೂ ಇರುತ್ತಿದ್ದ ಪಕ್ಷದಲ್ಲಿ – ಆಧುನಿಕ ವಿದ್ವಾಂಸರೇ ಹೇಳಿರುವಂತೆ, ವೇದಸೂಕ್ತಗಳ ರಚನೆಯಾಗಿ ಸಾವಿರ ವರ್ಷಗಳ ಅನಂತರ ರಚಿತವಾದ ಉಪನಿಷತ್ತುಗಳ (ಈ ಮೇಲಿನ ಉದಾಹರಣದಂತಹ) ಛಂದಗಳಲ್ಲಿಯೂ ಗುರುಲಘುಸ್ಥಾನಗಳು ವೇದಸೂಕ್ತಗಳಲ್ಲಿರುವಷ್ಟೇ ಅವ್ಯವಸ್ಥಿತವಾಗಿರುತ್ತಿದ್ದವೇ? – ಸುಜ್ಞರು ಪರಿಭಾವಿಸಬೇಕು.]

ಹಿಂದೆ ಸೂಚಿಸಿರುವಂತೆ – ಪದ್ಯಬಂಧಗಳು ಮೂಲತಃ ಹುಟ್ಟಿದ್ದು ಲೌಕಿಕಾನಂದಕ್ಕಾಗಿಯೇ ಆಗಿದ್ದರೂ, ಮುಂದೆ ಅವು ಕಾಲಾಂತರದಲ್ಲಿ ದೇವತಾಸ್ತುತಿಗೋ ತತ್ತ್ವಪ್ರಕಾಶನಕ್ಕೋ ಬಳಕೆಯಾಗಿ ಆಧ್ಯಾತ್ಮಿಕಾನಂದದ ಸಾಧನಗಳೂ ಆದವು. ಹೀಗೆ ಅವುಗಳ ಉದ್ದೇಶ್ಯವು ಪರಿವರ್ತಿತವಾದಾಗ, ಅವೇ ಬಂಧಗಳ ಮೂಲರೂಪಗಳು ಎಷ್ಟೋ ವೇಳೆ ಅಷ್ಟಿಷ್ಟು ಪರಿವರ್ತಿತವೂ ಆದವು. ಹೀಗಾಗಿರುವುದರ ನಿದರ್ಶನಗಳು ಬೇರೆ ಬೇರೆ ಭಾಷೆಗಳಲ್ಲಿ ಲಭ್ಯವಾಗುತ್ತವೆ. ಕನ್ನಡದಲ್ಲಿ ಪುರಾತನಕಾಲದಿಂದಲೂ ಹೆಣ್ಣು ಮಕ್ಕಳ ಹಾಡಾಗಿದ್ದ 'ತ್ರಿಪದಿ'ಯನ್ನು ತತ್ತ್ವಾರ್ಥನಿರೂಪಣಕ್ಕಾಗಿ ಬಳಸುವ ಸಂದರ್ಭದಲ್ಲಿ – ಯಥಾಕ್ಷರಗುರುಲಘುವಾಗಿ ಪಠಿಸುವ ಸೌಕರ್ಯಕ್ಕಾಗಿ ಅದನ್ನು ನಿಜಗುಣಶಿವಯೋಗಿಯು 'ತ್ರಿವಿಧಿ'ಯಾಗಿ ಮಾರ್ಪಡಿಸಿದುದನ್ನು ನೋಡಬಹುದು. {ತ್ರಿಪದಿ ಮತ್ತು ತ್ರಿವಿಧಿ ವಿಚಾರವಾಗಿ ಸೇಡಿಯಾಪು ಕೃಷ್ಣಭಟ್ಟರ ವಿಚಾರಗಳು 'ಕನ್ನಡ ಛಂದಸ್ಸು' ನಿಬಂಧದ 21ನೆಯ ಟಿಪ್ಪಣಿಯಲ್ಲಿ ವಿವೃತವಾಗಿವೆ. ತ್ರಿಪದಿಯನ್ನು ತ್ರಿವಿಧಿಯನ್ನಾಗಿ ಮಾರ್ಪಡಿಸಿದವನು ನಿಜಗುಣ ಶಿವಯೋಗಿಯಲ್ಲವೆಂದೂ, ಆತನಿಗಿಂತ ಪ್ರಾಚೀನವಾದ ತ್ರಿವಿಧಿಗಳು ದೊರೆತಿರುವುದರಿಂದ ಈ ಮೇಲೆ ಹೇಳಿದ ವಿಷಯವು ಒಂದು ಪ್ರಮಾದವೆಂದೂ ಆ ಟಿಪ್ಪಣಿಯಲ್ಲಿ ಹೇಳಿ ವಾಚಕರು ಈ ತಪ್ಪನ್ನು ತಿದ್ದಿಕೊಳ್ಳುವಂತೆ ಸೂಚಿಸಿರುತ್ತಾರೆ – ಸಂ.} ದೈವಿಕ ಅಥವಾ ಆಧ್ಯಾತ್ಮಿಕ ಛಂದೋರಚನೆಗಳು ಭಾವಾವಿಷ್ಟವಾಗಿ ಅಯತ್ನಜಾತ(spontaneous)ವಾಗುವಾಗ, ಅವು ತಮ್ಮ ಕಟ್ಟುಪಾಡುಗಳನ್ನು ಆಚೀಚೆ ತಳ್ಳಿ ಸ್ವಚ್ಛಂದವಾಗಿ ಹೊಮ್ಮಿದುದೂ ಉಂಟು. ಮರಾಠಿವಾಙ್ಮಯದಲ್ಲಿ ಪೂಜ್ಯತಮವೆನಿಸಿ ರಾರಾಜಿಸುತ್ತಿರುವ "ಜ್ಞಾನೇಶ್ವರಿ" ಇದಕ್ಕೆ ಉತ್ತಮವಾದೊಂದು ನಿದರ್ಶನವಾಗಿದೆ.

ಜ್ಞಾನೇಶ್ವರಿಯು 'ಓವೀ' ಎಂಬ ಹೆಸರಿನ ದೇಶೀಯ ಛಂದೋಬಂಧದಲ್ಲಿ ರಚಿತವಾಗಿರುತ್ತದೆ. ಓವಿಯು ಮರಾಠಿಭಾಷೆಯ ಅತಿಪುರಾತನವಾದ ಛಂದೋಬಂಧ. ಶಾರ್ಙ್ಗದೇವನ 'ಸಂಗೀತರತ್ನಾಕರ'ದಲ್ಲಿ ಇದರ ಉಲ್ಲೇಖವಿದೆ. ಮೂಲತಃ ಇದು –

ಕನ್ನಡದಲ್ಲಿ ತ್ರಿಪದಿ ಹೇಗೋ ಹಾಗೆ-ಹೆಣ್ಣುಮಕ್ಕಳ ಹಾಡು. ಇಲ್ಲಿ ನಾನೀಗ ಉದಾಹರಿಸಲಿರುವ 'ಓವಿ' ಅತ್ಯಂತ ಪುರಾತನ ರಚನೆ ಎಂಬ ವಿಷಯದಲ್ಲಿ ಮರಾಠಿ ವಿದ್ವಾಂಸರೊಳಗೆ ಮತಭೇದವಿಲ್ಲ. ಸಾಧ್ವಿಯೊಬ್ಬಳ ರಚನೆಯಾಗಿ ತೋರುವ ಆ ಓವಿ ಹೀಗಿದೆ:

ಪಹಲೀ ಮಾಝೀ ಓವೀ ।
ಪಹಿಲಾ ಮಾಝಾ ನೇಮ ।
ತುಳಶೀ ಖಾಲೀ ರಾಮ ।
ಬಸತಸೇ ॥ . ॥

[ಸಂಗೀತರತ್ನಾಕರದಲ್ಲಿ ಹೇಳಿರುವ ಓವೀಬಂಧದ ಲಕ್ಷಣವು ಅಪರ್ಯಾಪ್ತವಾಗಿರುವು-ದಾದರೂ, ಅದಕ್ಕೆ 'ಓವೀ' ಎಂಬ ಹೆಸರು ಬರಲು ಕಾರಣವೇನೆಂಬುದು ಅದರಿಂದ ಸೂಚಿತವಾಗುತ್ತದೆ. ಆ ಭಾಗ ಹೀಗಿದೆ:

ಖಂಡತ್ರಯಂ ಪ್ರಾಸಯುತಂ । ಗೀಯತೇ ದೇಶಭಾಷಯಾ ॥
ಓವೀಪದಂ ತದಂತೇ ಚೇತ್ । ಓವೀ ತಜ್ಞೈಸ್ತದೋದಿತಾ ॥ . ॥

(ಸಂ.ರ. ಪ್ರಬಂಧಾಧ್ಯಾಯ ೩೦೪-೩೦೫)

ಶಾರ್ಙ್ಗದೇವನ ಈ ಮಾತುಗಳಿಂದ ತಿಳಿದುಬರುವ ಅಂಶ ಇಷ್ಟು : "ಓವೀ ಎಂಬುದು ದೇಶಭಾಷೆಯಲ್ಲಿರುವ ಒಂದು ಗೀತಚ್ಛಂದ. ಇದರ ಮೂರು ಖಂಡಗಳು (ಅಂತ್ಯ) ಪ್ರಾಸಯುಕ್ತವಾಗಿರುತ್ತವೆ. ಕೊನೆಯಲ್ಲಿ 'ಓವೀ' ಎಂಬ ಪದವನ್ನು ಸೇರಿಸಿ ಇದನ್ನು ಹಾಡುತ್ತಾರೆ." – ಓವೀ ಎಂಬ ಹೆಸರು ಹುಟ್ಟಿದ ಕಾರಣವು ಇದರಿಂದ ಸುಸ್ಪಷ್ಟವಾಗುವುದು ಮಾತ್ರವಲ್ಲ, ಓವಿಯು ಆ ಕಾಲದಲ್ಲಿ ಕೇವಲ ಸ್ತ್ರೀಗೀತವೇ ಆಗಿತ್ತೆಂಬುದೂ ಸುವ್ಯಕ್ತವಾಗುತ್ತದೆ. ಅದು ಹೇಗೆಂದರೆ – ಅಳುವ ಕಿರುಗೂಸುಗಳನ್ನು ಸಂತಯಿಸುವಾಗ ತಾಯಂದಿರು ಒಂದು 'ಸೂಲು'(stanza) ವಿಲಂಬಿತವಾಗಿ ಹಾಡಿ, ಕೊನೆಗೆ ಶ್ರವಣ ಮನೋಹರವಾದೊಂದು ನಿರರ್ಥಕ ಪದವನ್ನು – ಉದಾ: ಲಾಲೀ, ಜೋಜೋ, ತ್ರೂಂವೀ, ಓಯೇಂ, ಲೋಲೀ ಇತ್ಯಾದಿಗಳಲ್ಲೊಂದನ್ನು ಅವರೋಹಣರೂಪದ ದೀರ್ಘಧ್ವನಿಯಲ್ಲಿ ಹಾಡುವುದು ನಮ್ಮ ದೇಶದಲ್ಲಿ ಪರಂಪರಾಗತವಾಗಿ ಬಂದಿರುವ ಸಂಪ್ರದಾಯವೆಂಬುದನ್ನು ಪ್ರಾಯಶಃ ಎಲ್ಲರೂ ಬಲ್ಲರು. ಈ ಸಂಪ್ರದಾಯಾನುಗುಣವಾಗಿಯೇ 'ಓವೀ' ಎಂಬ ಹೆಸರನ್ನೂ ಗಳಿಸಿಕೊಟ್ಟಿತು – ಎಂಬುದರಲ್ಲಿ ಸಂದೇಹವಿಲ್ಲ. ಈ ಪದವನ್ನು 'ಓವೀ' ಎಂದೇ ಬರೆಯುವುದೂ ಮುದ್ರಿಸುವುದೂ ಇಂದು (ಮರಾಠಿ ಗ್ರಂಥಗಳಲ್ಲಿ) ಹೆಚ್ಚು ಕಂಡುಬರುವುದಾದರೂ – ಇದರ ನಿಜವಾದ ಉಚ್ಚಾರವು ಓಂವೀಂ ಎಂದೇ ಆಗಿತ್ತೆಂಬುದು - ಅತ್ಯುತ್ತಮ ರೀತಿಯಲ್ಲಿ ಸಂಪಾದಿತವಾಗಿ ಎಷ್ಟೋ ವರ್ಷಗಳ ಮೊದಲು ಪ್ರಕಾಶಿಸಲ್ಪಟ್ಟ (ಪ್ರಾಚೀನ ಪದ್ಯಸಂಗ್ರಹ-ವಾಗಿರುವ) "ನವನೀತ" ಎಂಬ ಗ್ರಂಥದಿಂದ ಗೊತ್ತಾಗುತ್ತದೆ. ಅದರಲ್ಲಿ ಸರ್ವತ್ರ ಈ ಪದವನ್ನು (ನಾಗರೀ ಲಿಪಿಯಲ್ಲಿ) "ಓಂವೀ" ಎಂದೇ ಮುದ್ರಿಸಲಾಗಿದೆ. ಓವೀ ಎಂಬ ಪದವು ಶಿಶುಸಾಂತ್ವನಕ್ಕಾಗಿ ಹಾಡಿನಲ್ಲಿ ಸೇರಿದುದೆಂಬುದನ್ನು ಆ ಪದದ ಈ ರೂಪವೂ ಸಮರ್ಥಿಸುತ್ತದೆ; ಶಿಶುವನ್ನು ಸಂತಯಿಸುವ ಶಕ್ತಿ ನಿರುನಾಸಿಕಧ್ವನಿಗಿಂತ ಸಾನುನಾಸಿಕ ಧ್ವನಿಯಲ್ಲಿ ಅಧಿಕವೆಂಬುದನ್ನು ತಾಯಂದಿರೆಲ್ಲವರೂ ಬಲ್ಲರು.]

ವಿಲಂಬಿತಲಯದ ಏಳುಮಾತ್ರೆಗಳ ಆವರ್ತದ ತಾಳದಲ್ಲಿ ಓವಿಯನ್ನು ಹಾಡು-ವುದು ಪರಂಪರಾಗತವಾದ ಸ್ತ್ರೀಸಂಪ್ರದಾಯವೆಂದು ತಿಳಿದುಬರುತ್ತದೆ. ಈ ಗೀತಬಂಧದ ಪಾದಗಳ ಅನ್ಯೋನ್ಯ ಪರಿಮಾಣವ್ಯವಸ್ಥೆಯನ್ನು ಪರಿಶೀಲಿಸುವಾಗ – ಇದಕ್ಕೂ ಕನ್ನಡದ

'ಏಳೆ'ಗೂ ಕಿಂಚಿತ್ ಸಾಮ್ಯವು ಕಂಡು ಬರಬಹುದಾದರೂ, ಏಳೆಗೆ ಇರುವ ಹಾಗೆ ಓವಿಗೆ ಗಣನಿಯಮವೇನೂ ಇಲ್ಲ. ಹಳೆಯ ಸಂಪ್ರದಾಯದ ಓವಿಗಳಲ್ಲಿ ಸಾಮಾನ್ಯವಾಗಿ ಅಕ್ಷರಸಂಖ್ಯಾನಿಯಮವಿರುವುದು ಕಂಡಬರುತ್ತದೆ. ಅವುಗಳ ನಾಲ್ಕನೆಯ ಪಾದಗಳಲ್ಲಿ ನಾಲ್ಕೇ ಅಕ್ಷರಗಳಿರುತ್ತವೆ. ಉಳಿದ ಮೂರು ಪಾದಗಳಲ್ಲಿ ಏಳು ಅಥವಾ ಆರು ಅಕ್ಷರಗಳಿರುತ್ತವೆ, ಆದರೆ ಈ ಅಕ್ಷರಗಳಿಗೆ ಗುರುಲಘುನಿಯಮವಿಲ್ಲದಿರುವುದರಿಂದ, ತಾಳಕ್ಕನುಗುಣವಾಗಿ ಅವು ಕರ್ಷಿತವಾಗಬೇಕಾಗುತ್ತವೆ. ತದನುಸಾರವಾಗಿ ಹಾಡುವಾಗ – (ಮೇಲೆ ಉದಾಹರಿಸಿರುವ ಪುರಾತನ ಓವಿಯಂತೆ, ಮೊದಲಿನ ಮೂರು ಪಾದಗಳಲ್ಲಿ ಏಳೇಳು ಅಕ್ಷರಗಳಲ್ಲಿರುವ) ಓವಿಯ ಅಕ್ಷರಗಳೆಲ್ಲ ಗುರೂಚ್ಚಾರವನ್ನು ಪಡೆಯುತ್ತವೆ. ಆಗ ಅದರ ಸ್ವರೂಪವು ಈ ಕೆಳಗಿನಂತೆ ಶ್ರವಣಗೋಚರವಾಗುತ್ತದೆ:

ಪಾಹೀಲೀ ಮಾಝೀ ಓವೀ ।
ಪಾಹೀಲಾ ಮಾಝಾ ನೇಮಾ ।
ತೂಳಾಶೀ ಖಾಲೀ ರಾಮಾ ।
ಬಾಸಾತಾಸೇ + (ಆಲಾಪ) ॥

(ಏಳಕ್ಷರಗಳು ಇರುವುದರ ಬದಲಾಗಿ ಆರೇ ಅಕ್ಷರಗಳಿರುವಲ್ಲಿ ಪಾದಾಂತ್ಯಕ್ಕೆ ಕರ್ಷಣಾಧಿಕ್ಯವುಂಟಾಗಿ ಆವರ್ತಪೂರ್ತಿಯಾಗುತ್ತದೆ.) ಹೆಣ್ಣುಮಕ್ಕಳ ಹಾಡಾಗಿದ್ದ (ಈ ಮೇಲಿನದರಂತಹ) ಓವಿಗಳ ಸ್ವರೂಪಕ್ಕೂ 'ಜ್ಞಾನೇಶ್ವರಿ'ಯ ಓವಿಗಳ ಸ್ವರೂಪಕ್ಕೂ ಬಹಳ ಅಂತರವಿದೆ. ಸ್ತ್ರೀಗೀತವಾಗಿದ್ದ ಓವಿಯಲ್ಲಿರು–ವಂತಹ ಅಕ್ಷರಸಂಖ್ಯಾನಿಯಮಕ್ಕೆ ಜ್ಞಾನೇಶ್ವರಿಯ ಓವಿಗಳು ಬಹಿರ್ಭೂತವಾಗಿವೆ. ಅವುಗಳ ಮೊದಲ ಮೂರು ಪಾದಗಳ ಪರಿಣಾಮಗಳಲ್ಲಿ ಸಮತೆ ಇರುವುದೂ ವಿರಳ. ನಾಲ್ಕನೆಯ ಪಾದವು ಉಳಿದವುಗಳಿಗಿಂತ ಚಿಕ್ಕದೇನೋ ಆಗಿರುವುದಾದರೂ, ಅದರ ಅಕ್ಷರಸಂಖ್ಯೆ, ನಾಲ್ಕಕ್ಕೆ ಸೀಮಿತವೂ ಅಲ್ಲ. ಈ ಮುಂದಿನ ಉದಾಹರಣಗಳು ಆ ವೈಲಕ್ಷಣ್ಯಗಳನ್ನು ತೋರಿಸಿಕೊಡಬಲ್ಲವು:

ಓಂ ನಮೋ ಜೀ ಆದ್ಯಾ । (=೬)
ವೇದಪ್ರತಿಪಾದ್ಯಾ । (=೬)
ಜಯಜಯ ಸ್ವಸಂವೇದ್ಯಾ (=೮)
ಆತ್ಮರೂಪಾ ॥ . ॥ (=೪)

ದೇವಾ ತೂಂಚಿ ಗಣೇಶು । (=೭)
ಸಕಲಮತಿಪ್ರಕಾಶು । (=೮)
ಮ್ಹಣೇ ನಿವೃತ್ತಿದಾಸು । (=೭)
ಅವಧಾರಿಜೋ ಜೀ ॥ . ॥ (=೬)

(ಇವು 'ಜ್ಞಾನೇಶ್ವರಿ'ಯ ಆರಂಭದ ಎರಡು ಓವಿಗಳು.)

ಐಸೇ ಯಾ ಗುರು ಗ್ರಾಮೀಚೇಂ ಆಲೇಂ । (=೧೦)
ಕಾಂ ಸ್ವಯೇಂ ಗುರು ನೀಂಚಿ ಧಾಡಿಲೇಂ । (=೧೦)
ತರಿ ಗತಾಯುಷ್ಯಾ ಜೋಡಲೇಂ । (=೯)
ಆಯುಷ್ಯ ಜೈಸೇಂ ॥ . ॥ (=೫)

* * *

ಕಾಂ ಸುಕತಯಾ ಅಂಕುರಾ । (=೮)
ವರಿ ಪಡಿಲಿಯಾ ಪೀಯೂಷಧಾರಾ । (=೧೧)
ನಾನಾ ಅಲ್ಪೋದಕೀಂಚಾ ಸಾಗರಾ । (=೧೦)
ಆಲಾ ಮಾಸಾ ॥ . ॥ (=೪)

* * *

ನಾತರೀ ರಂಕೇಂ ನಿಧಾನ ದೇಖಿಲೇಂ । (=೧೧)
ಕಾಂ ಆಂಧಳಿಯಾ ಡೋಳೇ ಉಘಡಲೇ । (=೧೧)
ಭಣಂಗಾಚಿಯಾ ಆಂಗಾ ಆಲೇ । (=೯)
ಇಂದ್ರಪದ ॥ . ॥ (=೪)

* * *

ಮಹಾಸಿಂಧು ಜೈಸೇಂ । (=೬)
ಗ್ರೀಷ್ಮವರ್ಷ ಸರಿಸೇಂ । (=೭)
ಇಷ್ಟಾನಿಷ್ಟ ತೈಸೇಂ । (=೬)
ಜಯಾಚ್ಯಾ ಠಾಯೀಂ ॥ . ॥ (=೫)

(ಈ ನಾಲ್ಕು, ಪೂರ್ವೋಕ್ತವಾದ "ನವನೀತ"ದಿಂದ ಆಯ್ದುಕೊಂಡ 'ಜ್ಞಾನೇಶ್ವರಿ'ಯ ಓವಿಗಳು.)

ಓವಿಯು ಸಹಜಸ್ವರೂಪದಲ್ಲಿ ಲಯಾನ್ವಿತವೇ ಆದ, ಎಂದರೆ ತಾಳಬದ್ಧವಾದ ಛಂದೋಬಂಧವೆಂಬುದರಲ್ಲಿ ವಿದ್ವಾಂಸರೊಳಗೆ ಮತಭೇದವಿಲ್ಲ. ಆದರೆ ಜ್ಞಾನೇಶ್ವರಿಯ ಓವಿಗಳು ಆ ಬಗೆಯವಲ್ಲವಾದುದರಿಂದ ಅವುಗಳನ್ನು ವಿತಾಲವಾಗಿ ಪಠಿಸಬೇಕಾಗುತ್ತದೆ. ಆರೋ ಏಳೋ ಅಕ್ಷರಗಳಿರಬೇಕಾದಲ್ಲಿ ಹತ್ತೋ ಹನ್ನೊಂದೋ (ಗುರುಲಘುವ್ಯವಸ್ಥೆಯಿಲ್ಲದ) ಅಕ್ಷರಗಳಿರುವಾಗ, ಅವನ್ನು ಆ ಧಾಟಿಗೆ ಅಳವಡಿಸುವುದಾದರೂ ಹೇಗೆ? ಆ ಅಕ್ಷರಗಳ ಉಚ್ಚಾರಕಾಲಗಳನ್ನು ಹೇಗೆಹೇಗೋ ಎಷ್ಟೆಷ್ಟೋ ಕುಗ್ಗಿಸಿ ಹಿಗ್ಗಿಸಿ ಯೇನಕೇನಪ್ರಕಾರೇಣ ತಾಳಬದ್ಧವಾಗಿ ಮಾಡುವುದು ಶಕ್ಯವಾಗಬಹುದಾದರೂ, ಹಾಗೆ ಮಾಡಿ ಹಾಡಿದರೆ ಅವುಗಳ ಅರ್ಥವೇನೆಂಬುದು ಹೊಳೆಯದೆ – ಅಮೋಘಾರ್ಥಸಂಪನ್ನವಾದ ಆ ಗ್ರಂಥದ ಪಠನ–ಗಾಯನಗಳು ನಿರರ್ಥಕವಾಗದಿರುವುದಿಲ್ಲ. ಹಾಗಾಗಿ, ಜ್ಞಾನೇಶ್ವರಿಯ ಓವಿಗಳನ್ನು ವಿತಾಲ–ವಾಗಿಯೇ – ಯಥಾಕ್ಷರಗುರುಲಘುವಾಗಿ – ಪಠಿಸುವುದೂ ಹಾಡುವುದೂ ನಿರಪವಾದವಾಗಿ ನೆಲೆಗೊಂಡಿರುವ ಸಂಪ್ರದಾಯವಾಗಿದೆ.

ಜ್ಞಾನೇಶ್ವರನು ಮರಾಠಿಭಾಷೆಯ (ಮೊತ್ತಮೊದಲ) ಮಹಾಕವಿ ಎಂದು ಸರ್ವಮಾನ್ಯನಾದ ಮಹನೀಯನು. ಅಂತಹ ಪ್ರತಿಭಾವಂತನ ಕೈಯಲ್ಲಿ, ಹೆಣ್ಣುಮಕ್ಕಳ ಬಾಯಲ್ಲಿ ಅಚ್ಚುಕಟ್ಟಾಗಿ ರೂಪುಗೊಂಡಿದ್ದ ತಾಳಬದ್ಧವಾದ ಓವಿಯು ತಾಳಹೀನವೂ ಅವ್ಯವಸ್ಥಿತವೂ ಆದ ರೂಪವನ್ನು ಪಡೆದ ಕಾರಣವೇನು? ತಾಳಬದ್ಧವೇ ಆದ ಬೇರೆಷ್ಟೋ ರಚನೆಗಳನ್ನು ಅವನು ಮಾಡಿರುವುದರಿಂದ, ಅವನಿಗೆ ತಾಳಪ್ರಜ್ಞೆ ಇದ್ದಿಲ್ಲವೆಂದು ಯಾರೂ ಹೇಳುವ ಹಾಗಿಲ್ಲ ; ಶ್ರೀ ವೇಲಣಕರರು ಕೂಡ ಹಾಗೆ ಹೇಳಿಲ್ಲ! – "ತಾಳಚ್ಛಂದವಾಗಿದ್ದ ಓವಿಯನ್ನು ವಿದ್ವತ್ಕವಿಗಳು ತಾಳಹೀನವಾಗಿ ಮಾಡಿಹಾಕಿದರು" – ಎಂದಿಷ್ಟೇ ಈ

ವಿಷಯದಲ್ಲಿ ಅವರ ದೂರು (*Jayadaman*, Introduction, p. 13). ಆದರೆ ಇದು ಇಷ್ಟು ಲಘುವಾಗಿ ಹೇಳಿಬಿಡುವ ಸಂಗತಿಯಲ್ಲವೆಂದೂ, ಇದೊಂದು ಗಂಭೀರವಾದ ಚಿಂತನಕ್ಕೆ ಅರ್ಹವಾದ ವಿಷಯವೆಂದೂ ನನಗೆ ತೋರುತ್ತದೆ.

ಜ್ಞಾನೇಶ್ವರನು ಅಸಾಧಾರಣಪ್ರತಿಭಾವಂತನಾದೊಬ್ಬ ಮಹಾಪುರುಷನು. ತಾರುಣ್ಯವು ಪ್ರಾಪ್ತವಾಗುವುದಕ್ಕೆ ಮೊದಲೇ ಯೋಗಿ ಎನಿಸಿದ್ದನು. ಅವನ ಜೀವತಕಾಲವು ಕೇವಲ ಇಪ್ಪತ್ತೊಂದು ವರ್ಷ. ಅಷ್ಟರೊಳಗೆ ಅವನು ಈ ಮಹಾಗ್ರಂಥವನ್ನೂ, 'ಅಮೃತಾನುಭವ' ಮುಂತಾದ ಬೇರೆ ಕೆಲವು ಆಧ್ಯಾತ್ಮಿಕಗ್ರಂಥಗಳನ್ನು ಎಷ್ಟೋ ಭಕ್ತಿಗೀತಗಳನ್ನೂ ರಚಿಸಿದ್ದನು. ಈ 'ಜ್ಞಾನೇಶ್ವರಿ' ಎಂಬುದು ಶ್ರೀಮದ್ಭಗವದ್ಗೀತೆಯ 'ಭಾವಾರ್ಥದೀಪಿಕೆ' ಎಂದು ರಚಿತ-ವಾದುದಾದರೂ, ಇದೊಂದು ಸ್ವತಂತ್ರವಾದ ಆಧ್ಯಾತ್ಮಿಕ ಮಹಾಕಾವ್ಯವೇ ಆಗಿದೆ. ಇದು ರಚಿತವಾಗಿ ಆರು ಶತಮಾನಗಳು ಕಳೆದಿರುವವಾದರೂ, ಇಷ್ಟು ಘನವಾದ ಬೇರೆ ರಚನೆ ಮರಾಠಿಯಲ್ಲಿ ಇಂದಿನ ವರೆಗೆ ಉದಯಿಸಿರುವುದಿಲ್ಲ. ಯಾವುದೊಂದು ಲೌಕಿಕ ಫಲಾಪೇಕ್ಷೆ-ಯಿಂದ ಹುಟ್ಟಿದ ಗ್ರಂಥ ಇದಲ್ಲ. "ಕವಿತೆಯೊಳಾಸೆಗೆಯ್ವ ಫಲಮಾವುದೊ? ಪೂಜೆ ನೆಗಟ್ತೆ ಲಾಭಮೆಂಬಿನಿತೆ ವಲಂ" ಎಂಬೀ ಪಂಪನ ಉಕ್ತಿಗೆ ಜ್ಞಾನೇಶ್ವರನ ರಚನೆಗಳು ಒಳಪಡುವವಲ್ಲ. ಬಾಲ್ಯದಿಂದಲೇ ಅವನು ವಿರಕ್ತನು, ಆತ್ಮನಿಷ್ಠನು. ತಾನಿನ್ನು ಈ ಪ್ರಪಂಚ-ದಲ್ಲಿದ್ದು ಮಾಡತಕ್ಕದ್ದೇನೂ ಉಳಿದಿಲ್ಲವೆಂದು ಮನವರಿಕೆಯಾದೊಡನೆ, ಋಷಿತುಲ್ಯನಾದ ಆ ಮಹಾಯೋಗಿ ಧ್ಯಾನಸ್ಥನಾಗಿ ಯೋಗಬಲದಿಂದ ದೇಹತ್ಯಾಗಮಾಡಿದನು. ಇದನ್ನೆಲ್ಲ ಪರಿಭಾವಿಸಿದೆವಾದರೆ ಈ ಗ್ರಂಥರಚನೆಯಲ್ಲಿ ಅವನ ಗುರಿ ಆತ್ಮಾನುಭವಪ್ರಕಾಶನವೊಂದೇ ಆಗಿತ್ತೆಂಬ ಅರಿವು ನಮಗಾಗದಿರದು. ಜ್ಞಾನೇಶ್ವರಿಯ ಮೊತ್ತಮೊದಲ ಪದ್ಯವೇ ಅವನ ಆತ್ಮೈಕನಿಷ್ಠೆಯನ್ನು ಪರಿಸ್ಫುಟವಾಗಿ ಪ್ರಕಟಿಸುತ್ತದೆ. ಆತ್ಮಾರಾಧನೆಯ ಘಂಟಾನಾದವೆಂಬಂತೆ ಧ್ವನಿಸುತ್ತಿರುವ ಆ ಪದ್ಯವು ಭಾವುಕರಿಗೆ ರೋಮಾಂಚನಕಾರಿಯಾಗಿದೆ. ಅದನ್ನವನು ಸಾಂಪ್ರ-ದಾಯಿಕವಾದ ಓವಿಯ ಸ್ವರೂಪದಲ್ಲಿಯೇ ಆರಂಭಿಸಿದ್ದರೂ – ಮೂರನೆಯ ಪಾದಕ್ಕೆ ಬರುವಷ್ಟರಲ್ಲಿ ಭಾವವಶನಾಗಿ, "ಜಯಜಯ ಸ್ವಸಂವೇದ್ಯಾ !" ಎಂದು ಉದ್ಗರಿಸಿದಾಗ ಆ 'ಛಂದೋಬಂಧನ'ವು ಕಳಚಿಬಿದ್ದಹಾಗೆ ಕಾಣುತ್ತದೆ. ಮುಂದೆಲ್ಲ ಅವನ ಓವಿಗಳು ನಾನಾ ಪಾದಪರಿಮಾಣಗಳನ್ನು ಪಡೆದು ಸಾಗಿರುತ್ತವೆ. ಹೀಗಿರುವುದರಿಂದ, ಈ ಗ್ರಂಥರಚನೆಯಲ್ಲಿ ಗತಿಸೌಂದರ್ಯದ ಗೊಡವೆಯೇ ಅವನಿಗೆ ಇದ್ದಿಲ್ಲವೆಂಬುದು ಸುಸ್ಪಷ್ಟವಾಗಿ ಗೋಚರಿಸುತ್ತದೆ. ಆದುದರಿಂದ – ತಾಳಬದ್ಧವಾಗಿದ್ದು ವ್ಯವಸ್ಥಿತವಾದೊಂದು ರೂಪದಲ್ಲಿದ್ದ ಓವಿಯು ಜ್ಞಾನೇಶ್ವರಿಯಲ್ಲಿ ತಾಳಹೀನವೂ ಅವ್ಯವಸ್ಥಿತವೂ ಆಗಿ ಪರಿಣಮಿಸಿದುದಕ್ಕೆ ಆ ಯೋಗಿರಾಜನ ಗತಿಸೌಂದರ್ಯನಿರಪೇಕ್ಷೆಯೇ ನಿಜವಾದ ಕಾರಣವೆಂಬುದರಲ್ಲಿ ಸಂದೇಹವಿಲ್ಲ.

ಓವಿಯು ಜ್ಞಾನೇಶ್ವರಿಯಲ್ಲಿ ತಾಳಹೀನವೂ ಅವ್ಯವಸ್ಥಿತರೂಪವೂ ಆಗಲು (ಜ್ಞಾನೇಶ್ವರನ) ಯಾವ ಅಲೌಕಿಕವಾದೊಂದು ಮನೋಧರ್ಮವು ಕಾರಣವಾಯಿತೋ, ಅಂತಹದೇ ಆಗಿದ್ದ (ವೇದರ್ಷಿಗಳ) ಅದೊಂದು ಅಲೌಕಿಕಮನೋಧರ್ಮವು ವೈದಿಕಛಂದ-ಗಳ ಅವ್ಯವಸ್ಥಿತವಾದೊಂದು ರೂಪಕ್ಕೆ (ಹಾಗೂ ಅವು ತಾಳಾತೀತವಾಗಿರುವುದಕ್ಕೆ) ಕಾರಣ ಹೊರತು, ಬೇರಾವುದೂ ಆಗಿರುವಂತಿಲ್ಲವೆಂದು ನನ್ನ ಅಲ್ಪಮತಿ ಹೇಳುತ್ತದೆ. ಹಿಂದೆ ವಿಶದೀಕರಿಸಿರುವಂತೆ – ವೇದಗಳು ಅಪೌರುಷೇಯವೆಂಬ ಭಾವನೆಯನ್ನು ತ್ಯಜಿಸಿ ವಿಚಾರ ಮಾಡುವಲ್ಲಿ – ವೈದಿಕಛಂದೋರೂಪಗಳು ಆ ಭಾಷೆಯ ಛಂದೋಬಂಧಗಳ ಪ್ರಾಥಮಿಕ ರೂಪಗಳೆಂದು ಭಾವಿಸುವುದಕ್ಕೆ ಆಸ್ಪದವಿರುವುದಿಲ್ಲ. ಏಕೆಂದರೆ – ಯಾವ ಭಾಷೆ-ಯಲ್ಲಾದರೂ 'ಛಂದೋಬಂಧ' (=ಪದ್ಯ) ಎಂಬುದು ಮೂಲತಃ ಲಯಾನ್ವಿತ(=ಸಮತಾಳ

ಬದ್ಧ)ವಾಗಿಯೇ ಹುಟ್ಟಿಬರುವ ಒಂದು ಲೌಕಿಕಾನಂದಮಾಧ್ಯಮ; ಇದು ನಿರಪವಾದ-ವಾಗಿರುವ ಪ್ರಾಕೃತಿಕ ತಥ್ಯ. ಆದುದರಿಂದ ವೈದಿಕಜನಾಂಗದ ವಾಙ್ಮಯವಿಕಾಸದ ಮೊದ ಮೊದಲ ಹಂತಗಳಲ್ಲಿ ರೂಪುಗೊಂಡು ರೂಢವಾಗಿದ್ದ (ಆದರೆ ನಮಗೀಗ ಅಜ್ಞಾತವಾಗಿರುವ – ಮಾತ್ರವಲ್ಲ, ವೇದಪೂರ್ವದ ಅಥವಾ ವೇದಸಮಕಾಲದ ಲೌಕಿಕವಾಙ್ಮಯವು ಸರ್ವಥಾ ಅಲಭ್ಯವಾಗಿರುವುದರಿಂದ, ಅಜ್ಞೇಯವೇ ಆಗಿರುವ) ಯಾವುವೋ ತಾಳಚ್ಛಂದಗಳು, – ತಾಳ ಬದ್ಧವಾಗಿದ್ದ ಓವಿಯು ಜ್ಞಾನೇಶ್ವರಿಯಲ್ಲಿ ಯಾವ ಕಾರಣವಿಶೇಷಗಳಿಂದ, ಅವ್ಯವಸ್ಥಿತ ರೂಪವನ್ನು ಪಡೆದು ತಾಳರಹಿತವಾಯಿತೋ ತತ್ತುಲ್ಯವಾದ ಕಾರಣಗಳಿಂದ, – ವೇದಸೂಕ್ತ-ಗಳಲ್ಲಿ ಅವ್ಯವಸ್ಥಿತರೂಪಗಳನ್ನು ಪಡೆದು ತಾಳಾತೀತಗಳಾಗಿ ಪರಿಣಮಿಸಿದವೆಂದು ತಿಳಿಯುವುದು ಯುಕ್ತವೂ ಸಮಂಜಸವೂ ಆಗಿದೆಯೆಂದು ನಮ್ರತೆಯೆಂದು ನಿವೇದಿಸುತ್ತೇನೆ.

"ಅಪಿ ಮಾಷಂ ಮಷಂ ಕುರ್ಯಾತ್ ಛಂದೋಭಂಗಂ ನ ಕಾರಯೇತ್" ಎಂಬ ಮಾತು ಲೋಕಪ್ರಿಯತೆಯ ಗುರಿಯುಳ್ಳ ಪದ್ಯರಚನೆಗಳಿಗೆ ಸಂಬಂಧಿಸಿ ಹುಟ್ಟಿದ್ದಾಗಿದೆ ಹೊರತು – ಯಾವ ಲೌಕಿಕ ಫಲಾಪೇಕ್ಷೆಯೂ ಇಲ್ಲದೆ, ಅದೊಂದು ಅಂತಃಪ್ರೇರಣೆಯಿಂದ ಹೊರಹೊಮ್ಮುವ ದಿವ್ಯ ಅಥವಾ ಆಧ್ಯಾತ್ಮಿಕ ವಾಙ್ಮಯರೂಪಕ್ಕೆ ಅದು ಅನ್ವಯಿಸುವಂತಹದಲ್ಲ. ಛಂದಃಸ್ವರೂಪಸೌಷ್ಠವದಿಂದಾಗಿ ಉತ್ಪನ್ನವಾಗುವ ಗತಿಸೌಂದರ್ಯವನ್ನಾಗಲಿ ಯಾವ ಅಲಂಕಾರಗಳನ್ನಾಗಲಿ ಅದು ತಾನಾಗಿ ಹಾರೈಸುವುದಿಲ್ಲ. ನಾನಾಭಾಷೆಗಳ ಆದಿವಾಙ್ಮಯ ರೂಪಗಳನ್ನು ನೋಡಿದರೆ, ಅವುಗಳಲ್ಲೆಲ್ಲ ಪದ್ಯಕ್ಕೂ ಪ್ರಾಸಕ್ಕೂ ಸಾಹಚರ್ಯವಿರುವುದು ಕಂಡುಬರುತ್ತದೆ. ವೈದಿಕಛಂದೋಬಂಧಗಳಲ್ಲಾದರೋ – ಎಲ್ಲಿಯೇ ನೋಡಲಿ, ಆದಿಪ್ರಾಸ-ವಾಗಲಿ ಅಂತ್ಯಪ್ರಾಸವಾಗಲಿ ಇಲ್ಲವೇ ಇಲ್ಲ. (ಈ ಕಾರಣದಿಂದ, ವೈದಿಕ ಕವಿಗಳಿಗೆ ವರ್ಣಾವೃತ್ತಿಸೌಂದರ್ಯದ ಪ್ರಜ್ಞೆಯೇ ಇದ್ದಿಲ್ಲವೆಂದು ಶ್ರೀ ವೇಲಣಕರರು ತೀರ್ಮಾನಿಸಿ-ದ್ದಾರೋ ಏನೋ ಗೊತ್ತಿಲ್ಲ.) ಕಾಳಿದಾಸಾದಿ (ಲೌಕಿಕ) ಸಂಸ್ಕೃತ ಮಹಾಕವಿಗಳಿಗೂ ಆದಿಪ್ರಾಸವಾಗಲಿ ಅಂತ್ಯಪ್ರಾಸವಾಗಲಿ ಇಷ್ಟವಾಗಿದ್ದಿಲ್ಲವಾದರೂ –ಅವರೊಳಗೆ ಕೆಲವರಲ್ಲಿ ಒಂದಿಷ್ಟು ಅನುಪ್ರಾಸಪ್ರಿಯತೆಯೋ, ಕ್ವಚಿತ್ ಯಮಕಪ್ರಿಯತೆಯೋ ಇದ್ದುದು ಕಂಡು-ಬರುತ್ತದೆ. ಆದರೆ ವೈದಿಕರಚನೆಗಳಲ್ಲಿ ಅವು ಸಹ ಇಲ್ಲ. ಅಲ್ಲಲ್ಲಿ ಕೆಲವೆಡೆಗಳಲ್ಲಿ ಅನುಪ್ರಾಸ-ವೆಂಬಂತೆ ಭಾಸವಾಗಬಹುದಾದ ಧ್ವನಿಪೌನಃಪುನ್ಯವು ಅವುಗಳಲ್ಲಿ ಗೋಚರಿಸುವುದಾದರೂ – ಅಂತಹದಲ್ಲ, [ಉದಾ: "ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ" – (ರುದ್ರಾಧ್ಯಾಯ)] ವಚೋವಾಹಿನಿಯಲ್ಲಿ ಯಾದೃಚ್ಛಿಕವಾಗಿ ತೇಲಿಬಂದವುಗಳೇ ಹೊರತು, ಉದ್ದಿಷ್ಟವಾಗಿ ನಿವೇಶಿತವಾದವುಗಳಲ್ಲವೆಂಬುದು ಆ ಸಂದರ್ಭಗಳ ಪರಾಮರ್ಶದಿಂದ ಸ್ಪಷ್ಟವಾಗಿ ಗೊತ್ತಾಗದಿರದು. ಹೀಗೆ, ಯಾವ ವಿಧದ ಭಾಷಾಲಂಕಾರವೂ ವೈದಿಕಕವಿಗಳ ಲಕ್ಷ್ಯವಾಗಿಲ್ಲದಿದ್ದಂತೆಯೇ – ಗತಿಸೌಂದರ್ಯವೂ ಅವರ ಲಕ್ಷ್ಯವಾಗಿರದಿದ್ದುದರಿಂದ ವೈದಿಕಛಂದಗಳು ಅವ್ಯವಸ್ಥಿತರೂಪಗಳನ್ನು ಪಡೆದವೆಂದು ತಿಳಿಯುವುದು ಸುಸಂಗತವಾಗಿದೆ. ವೈದಿಕಕವಿಗಳ ಈ ನಿರ್ಲಕ್ಷ್ಯಭಾವಕ್ಕೆ ಆ ಛಂದಗಳು ಅಯತ್ನಜಾತಗಳಾಗಿರುವುದೇ ನಿಜವಾದ ಕಾರಣವೆಂಬುದನ್ನು, ಅವುಗಳಲ್ಲಿ ಅಲ್ಲಲ್ಲಿ ಮಾತ್ರ ಯಾದೃಚ್ಛಿಕವಾಗಿ ಮೂಡಿಬಂದಿರುವ ಸುವ್ಯವಸ್ಥಿತ ಛಂದೋರೂಪಗಳು ಖಚಿತಪಡಿಸುತ್ತವೆ. ಉದಾ:

U – U – U – U –
ಯ ಈಂಖಯಂತಿ ಪರ್ವತಾನ್ ।

U – U – U – U –
ತಿರಃಸಮುದ್ರಮರ್ಣವಂ ।

U – U –U –U–
ಮರುದ್ಭಿರಗ್ನ ಆಗಹಿ* ॥ . ॥ (ಋಗ್ವೇದ ೧-೧೯-೭)

(*ಪ್ರಸ್ತುತ ವಿಚಾರವು ಗತಿವಿಷಯಕವಾಗಿರುವುದರಿಂದ, 'ಆಗಹಿ' ಎಂಬಲ್ಲಿ – ಲೌಕಿಕಛಂದೋಮರ್ಯಾದೆಯಲ್ಲಿ – ಪಾದಾಂತದ ಲಘುವನ್ನು ಗುರುವಾಗಿ ಭಾವಿಸಿದ್ದಾಗಿದೆ.)

ಈ ಗಾಯತ್ರೀಚ್ಛಂದದ ಪಾದಗಳೆಲ್ಲವೂ 'ಪ್ರಮಾಣೀಗತಿ'ಯಲ್ಲಿದ್ದು, ಛಂದೋಗ್ರಂಥಗಳಲ್ಲಿ 'ಪ್ರಮಾಣಿಕಾ' ಎಂದು ಹೆಸರಿಸಲ್ಪಟ್ಟಿರುವ ವೃತ್ತದ ಪಾದಗಳಂತೆಯೇ ಇವೆ. ಆದರೆ ಒಂಬತ್ತು ಛಂದ(=ಪದ್ಯ)ಗಳುಳ್ಳ ಈ ಸೂಕ್ತದ ಇತರ ಛಂದವಾವುದೂ ಇದರಂತಿಲ್ಲ.

– U U – U U –
ಯತ್ಪುರುಷಂ ವ್ಯದಧುಃ ।

UU– U –U –
ಕತಿಧಾ ವ್ಯಕಲ್ಪಯನ್ ।

U – U – – –
ಮುಖಂ ಕಿಮಸ್ಯ ಕೌ ಬಾಹೂ ।

– – – – – – – –
ಕಾ ಊರೂ ಪಾದಾ ಉಚ್ಯೇತೇ ॥ . ॥ (ಋಗ್ವೇದ, ಪುರುಷಸೂಕ್ತ-೧೧)

ಈ ಅನುಷ್ಟುಪ್ ಛಂದದ ನಾಲ್ಕನೆಯ ಪಾದವು 'ಏಕತಾನೀಗತಿ'ಯಲ್ಲಿದ್ದು, ಛಂದೋಗ್ರಂಥಗಳಲ್ಲಿ ಪ್ರೋಕ್ತವಾಗಿರುವ 'ವಿದ್ಯುನ್ಮಾಲಾವೃತ್ತ'ದ ಪಾದಗಳ ಹಾಗೆಯೇ ಇದೆ-ಯಾದರೂ, ಉಳಿದ ಪಾದಗಳಾವುವೂ ಹಾಗೆ ಇಲ್ಲ. ವೈದಿಕಛಂದಗಳಲ್ಲಿ ಸುವ್ಯವಸ್ಥಿತ ರೂಪಗಳು ಹೀಗೆ ಎಲ್ಲಿಯೋ ಕೆಲವೆಡೆಗಳಲ್ಲಿ ಮಾತ್ರ – ಅದು ಕೂಡ ಯಾವುದೊಂದು ಕ್ರಮಕ್ಕೆ ಒಳಪಡದೆ – ಗೋಚರವಾಗುವ ಕಾರಣ, ಅವು ಉದ್ದೇಶಪೂರ್ವಕವಾಗಿ ನಿವೇಶಿತ-ವಾದವುಗಳಲ್ಲವೆಂಬುದು ಸುಸ್ಪಷ್ಟ. ವೇದಸೂಕ್ತಗಳು "ಕೃತಿ"ಗಳೆನಿಸಿಕೊಳ್ಳದೆ "ಶ್ರುತಿ"ಗಳೆನಿಸಿ-ಕೊಂಡಿರುವುದಕ್ಕೆ, ಅವು ಅಂತಃಪ್ರೇರಣೆಯ ಪರಿಣಾಮವಾಗಿ ಅಯತ್ನಜಾತವಾಗಿದ್ದುದೇ ಕಾರಣವಾಗಿತ್ತೆಂದು ತಿಳಿದೆವಾದರೆ – ಅವುಗಳ ಛಂದೋಗತಿ ಅವ್ಯವಸ್ಥಿತರೂಪಗಳನ್ನು ಪಡೆದುದೇಕೆಂಬುದೂ ತಿಳಿದುಬರುತ್ತದೆ.

ಎಷ್ಟೋ ಸಂದರ್ಭಗಳಲ್ಲಿ ವೈದಿಕಛಂದಗಳ ಪಾದಾಕ್ಷರಸಂಖ್ಯೆಗಳು ಆ ಛಂದಕ್ಕೆ ಇರಬೇಕಾದುದಕ್ಕಿಂತ ಹೆಚ್ಚೋ ಕಡಮೆಯೋ ಆಗಿರುವುದನ್ನು ಹಿಂದೆ ತೋರಿಸಲಾಗಿದೆ. ಹೀಗಾಗಿರುವುದಕ್ಕೆ ಈ ಮೇಲೆ ಹೇಳಿದ ಕಾರಣವಲ್ಲದೆ, ಬೇರೊಂದು ಕಾರಣವೂ ಇರುವುದು ಕಂಡುಬರುತ್ತದೆ. ಅದಾವುದೆಂದರೆ, ವೈದಿಕ ಛಂದಗಳ ಪಾದಾಂತಯತಿಸ್ವರೂಪದ ವೈಶಿಷ್ಟ್ಯ. ಆ ಯತಿಗಳು ಕೇವಲ 'ಪದಯತಿ'ಗಳಲ್ಲ. ಅವನ್ನು 'ವಾಕ್ಯಯತಿ'ಗಳೆಂದು ಕರೆದರೂ ಕರೆಯಬಹುದಾಗಿದೆ. ಏಕೆಂದರೆ ಆ ಸ್ಥಾನಗಳಲ್ಲೆಲ್ಲ ಸಾಮಾನ್ಯವಾಗಿ ಒಂದು ವಾಕ್ಯ ಅಥವಾ ಅದರ ಒಂದು 'ಶಾಖೆ' ಪೂರ್ಣತೆಯನ್ನು ಪಡೆಯುತ್ತದೆ. [ವೈದಿಕಛಂದೋಬಂಧಗಳೊಳಗೆ ಅತಿಸಣ್ಣದಾದ ಗಾಯತ್ರಿಯ ಪ್ರಥಮ ಪಾದಾಂತದಲ್ಲಿ ಮಾತ್ರ ಇದಕ್ಕೆ ಅಪವಾದ-ವಿರುವುದುಂಟು. ಗಾಯತ್ರೀಚ್ಛಂದದಲ್ಲಿ ಪಾದಸಂಖ್ಯೆ ಮೂರಾಗಿದ್ದರೂ, ವಿರಾಮಸ್ಥಾನಗಳು – ದ್ವಿತೀಯಪಾದಾಂತ ಮತ್ತು ತೃತೀಯಪಾದಾಂತ – ಇವೆರಡೇ ಆಗಿರುವುದು ಅದಕ್ಕೆ ಕಾರಣವಾಗಿರುತ್ತದೆ; ಹೀಗಿದ್ದರೂ, ಪರಿಪೂರ್ಣವಾದ 'ಪದಯತಿ' ಪ್ರಥಮ ಪಾದಾಂತ-ದಲ್ಲಿಯೂ ಇದ್ದೇ ಇರುತ್ತದೆ.] ವಿಶಿಷ್ಟವಾದೀ ಯತಿವ್ಯವಸ್ಥೆ ವೈದಿಕಛಂದೋರೂಪಗಳ ಮೇಲೆ ಪ್ರಭುತ್ವವನ್ನು ಸ್ಥಾಪಿಸಿರುತ್ತದೆ. ಯಾವುದೊಂದು ಛಂದಕ್ಕೆ ನಿಯತವಾದ ಪಾದಾಕ್ಷರಸಂಖ್ಯೆ ಪೂರ್ಣವಾಗುವ ಮೊದಲೇ ವಾಕ್ಯ ಅಥವಾ ಅದರ ಶಾಖೆ ಕೊನೆಗೊಂಡರೆ, ಆ ಪಾದವು

ಅಷ್ಟಕ್ಕೇ ಕೊನೆಗೊಳ್ಳುತ್ತದೆ'; ಪಾದಾಕ್ಷರಸಂಖ್ಯೆ ಪೂರ್ಣವಾದರೂ ವಾಕ್ಯ ಅಥವಾ ವಾಕ್ಯಶಾಖೆ ಕೊನೆಗೊಳ್ಳದಿದ್ದರೆ ಅದು ಕೊನೆಗೊಳ್ಳುವವರೆಗೂ ಆ ಪಾದವು ವಿಸ್ತರಿಸುತ್ತದೆ. ಹಿಂದೆ ಉದಾಹರಿಸಿದ ಕೆಲವು ಛಂದಗಳೇ ಇದನ್ನು ತೋರಿಸುವವಾದರೂ – ವಿಶದತೆಗಾಗಿ ಇಲ್ಲಿ ಇನ್ನೂ ಒಂದೆರಡನ್ನು ಉದಾಹರಿಸುತ್ತೇನೆ:

ತ್ವಂ ಹಿ ನಃ ಪಿತಾ ವಸೋ, (೭)
ತ್ವಂ ಮಾತಾ ಶತಕ್ರತೋ ಬಭೂವಿಥ; (೧೧)
ಅಧಾ ತೇ ಸುಮ್ನಮೀಮಹೇ. (೮)
(ಋಗ್ವೇದ, ೮-೯೮-೧೧)

(ಈ ಛಂದವು ಗಾಯತ್ರಿ; ಇದಕ್ಕೆ ನಿಯತವಾದ ಪಾದಾಕ್ಷರಸಂಖ್ಯೆ ಎಂಟು.)

ಅಶ್ವಪೂರ್ವಾಂ ರಥಮಧ್ಯಾಂ, (೮)
ಹಸ್ತಿನಾದಪ್ರಬೋಧಿನೀಂ, (೮)
ಶ್ರಿಯಂ ದೇವೀಮುಪಹ್ವಯೇ; (೮)
ಶ್ರೀರ್ಮಾ ದೇವೀ ಜುಷತಾಂ. (೭)
(ಋಗ್ವೇದ, ಶ್ರೀಸೂಕ್ತ-೩)

(ಇದು ಅನುಷ್ಟುಪ್ ಛಂದ; ಇದಕ್ಕೆ ನಿಯತವಾದ ಪಾದಾಕ್ಷರಸಂಖ್ಯೆ ಎಂಟು.)

ಹೀಗೆ ಛಂದಃಪರಿಮಾಣವನ್ನು ಗಣಿಸದೆ ಯತಿಸ್ಥಾಪನೆ ಮಾಡಿರುವ ನಿದರ್ಶನಗಳು ವೇದಸೂಕ್ತಗಳಲ್ಲಿ ಹೇರಳವಾಗಿವೆ. ಉಪನಿಷತ್ತುಗಳ ಹಲವು ಉದ್ಘೋಷಗಳೂ ಇದೇ ಬಗೆಯಾಗಿವೆ. ಉದಾ:

ಬ್ರಹ್ಮೈವೇದಮಮೃತಂ ಪುರಸ್ತಾತ್, (೧೦)
ಬ್ರಹ್ಮ ಪಶ್ಚಾತ್, ಬ್ರಹ್ಮ ದಕ್ಷಿಣತಶ್ಚೋತ್ತರೇಣ; (೧೪)
ಅಧಶ್ಚೋರ್ಧ್ವಂ ಚ ಪ್ರಸೃತಂ ; (೮)
ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ. (೧೧)
(ಮುಂಡಕೋಪನಿಷತ್, ೨-೨-೧೧)

ಇಂತಹ ಅನೇಕಾನೇಕ ನಿದರ್ಶನಗಳಿಂದ ತಿಳಿಯುವಂತೆ – ವಾಕ್ಯಸ್ವರೂಪಸ್ಫುಟತ್ವವೂ ತತ್ಸಾಧಕವಾದ ಪಾದಾಂತಯತಿಯೂ ವೈದಿಕಛಂದೋರೂಪಗಳಲ್ಲಿ ಮುಖ್ಯತ್ವವನ್ನು ಪಡೆದಿದ್ದು, ಛಂದಃಸ್ವರೂಪಸೌಷ್ಠವವು ಗೌಣತ್ವವನ್ನು ಪಡೆದುದರಿಂದ, – ಅವುಗಳ ಪಾದಾಕ್ಷರಸಂಖ್ಯೆಗಳಲ್ಲಿ ಹೆಚ್ಚು ಕಡಮೆಗಳುಂಟಾದುದರಲ್ಲಿ ಆಶ್ಚರ್ಯವಿಲ್ಲ. ನಿಜವಾಗಿಯೂ ಆಶ್ಚರ್ಯಕರವಾದ ಸಂಗತಿ ಯಾವುದೆಂದರೆ – ಕವಿಗಳೆಲ್ಲರ ಅನುಭವದಂತೆ, ಛಂದೋಮಾರ್ಗದಲ್ಲಿ ಕ್ರಮಿಸು-ತ್ತಿರುವಾಗ ಕವಿವಾಣಿಗೆ ಆಲಂಬನಗಳಾಗಿರುವ ಲಯ, ಮಾತ್ರಾನಿಯಮ, ಗುರುಲಘು ಸ್ಥಾನವ್ಯವಸ್ಥೆ ಇತ್ಯಾದಿಗಳೊಳಗೆ ಯಾವುದೊಂದೂ ಇಲ್ಲದೆ ಕೇವಲ ಅಕ್ಷರಸಂಖ್ಯಾ ನಿಯಮವೊಂದೇ ಇರುವ ಮತ್ತು ಹನ್ನೆರಡು ಅಕ್ಷರಗಳವರೆಗೂ ವಿಸ್ತರಿಸುವ ದೀರ್ಘಪಾದ-ಗಳುಳ್ಳ ಛಂದಗಳಲ್ಲಿ ಸಹ ಪಾದಮಧ್ಯದಲ್ಲೊಂದು ನಿಶ್ಚಿತಯತಿಸ್ಥಾನವಿಲ್ಲದಿರುವ ಛಂದೋ ರೂಪಗಳಲ್ಲಿ – ಆಡುವ ಮಾತುಗಳ ಹಾಗೆ ನಿರಾಯಾಸವಾಗಿ ಗಮಿಸುವ ಸರಳವೂ ಸಹಜವೂ ಆದ ವೇದವಾಕ್ಯಗಳ ಅಕ್ಷರಸಂಖ್ಯೆಗಳಿಗೂ ಪಾದಾಕ್ಷರಸಂಖ್ಯೆಗಳಿಗೂ ಏಕತ್ವವೇ ಇರುವ ಸಂದರ್ಭಗಳೇ ಅಧಿಕವಾಗಿ ಇರುವುದಾಗಿದೆ. ವಸ್ತುಸ್ಥಿತಿ ಹೀಗಿರುವುದರಿಂದ – ವೈದಿಕಛಂದಗಳು ಪ್ರಯತ್ನಸಿದ್ಧವಾಗಿರದೆ, ಯಾವುದೋ ಒಂದು ಅನಿರ್ವಚನೀಯವಾದ ಅಂತಃಪ್ರೇರಣೆಯ ಫಲವಾಗಿ ಹೊರಹೊಮ್ಮಿದವುಗಳೆನ್ನುವುದಕ್ಕೆ ಪ್ರಮಾಣಾಂತರದ ಅವಶ್ಯಕತೆ

ಪ್ರಾಯಶಃ ಇಲ್ಲವೆನ್ನಬಹುದು. ತಾತ್ಪರ್ಯವೇನೆಂದರೆ – ವೈದಿಕಛಂದಗಳಲ್ಲಿ, ಇತರ ಛಂದೋರಚನೆಗಳಂತೆ, ಪಾದಪರಿಮಾಣಕ್ಕೆ ಮಾತು ಅಧೀನವಾಗಿರುವುದಿಲ್ಲ; ಬದಲಾಗಿ, ವಾಕ್ಯಪರಿಮಾಣಕ್ಕೆ ಪಾದಗಳು ಅಧೀನವಾಗಿರುತ್ತವೆ. ಇದನ್ನೇ ಭವಭೂತಿಯ ವಚನ ಭಂಗಿಯಲ್ಲಿ ಹೇಳುವುದಾದರೆ ಅದು ಹೀಗೆ: ಲೌಕಿಕ ಕವಿಗಳ ಮಾತು ಛಂದಸ್ಸನ್ನು ಅನುಸರಿಸುತ್ತದೆ; ವೈದಿಕ ಕವಿಗಳದಾದರೋ – **ವಾಚಂ ಛಂದೋನುಧಾವತಿ.**

[ವೈದಿಕಛಂದಗಳ ಈ ಸ್ವಚ್ಛಂದತೆಯಿಂದಾಗಿ ಅವುಗಳ ರೂಪವು ಅವ್ಯವಸ್ಥಿತವಾಗಿ ಪರಿಣಮಿಸಿತಾದರೂ, ಅವುಗಳಲ್ಲಿ ಯಾದೃಚ್ಛಿಕವಾಗಿ ಅಲ್ಲಲ್ಲಿ ಉನ್ಮೀಲಿಸಿದ – ಲಯರಹಿತವಾದರೂ ಆಕರ್ಷಕವಾದ – ಅಕ್ಷರಗತಿರೂಪಗಳು, (ನನಗೆ ತಿಳಿದಿರುವ ಮಟ್ಟಿಗೆ ಇತರ ಯಾವ ಭಾಷೆಯಲ್ಲಿಯೂ ಹುಟ್ಟದ) ವಿಷಮಗತಿಬಂಧಗಳಿಗೆ ಲೌಕಿಕಸಂಸ್ಕೃತದಲ್ಲಿ ಜನ್ಮವಿತ್ತವು; ಮತ್ತು ಛಂದಃಸುವ್ಯವಸ್ಥೆಯ ಹಾಗೂ ಛಂದೋಗತಿಸೌಂದರ್ಯದ ಪರಾಕಾಷ್ಠೆಯನ್ನು ಮುಟ್ಟಿರುವ "ವೃತ್ತ"ಗಳ ಅವಿರ್ಭಾವಕ್ಕೂ ಕಾರಣವಾದವು.]

ಭಾಷಾಗಾನವಿಶೇಷಂಗಳೀಷದಿಲ್ ಅಕ್ಷರಕ್ರಮಂ ।
ಘೋಷಿಕ್ಕುಂ ಮಾತ್ರೆಗಳ್ಕಿಲ್ಲೇ ವಿಶೇಷಂ ತಾಳರೀತಿಪೋಲ್ ॥

–ಎಂಬೀ ಶ್ಲೋಕವು 'ಕೇರಳಕೌಮುದಿ' ಎಂಬ ಮಲಯಾಳ ಲಕ್ಷಣಗ್ರಂಥದಲ್ಲಿರುವುದಾಗಿದೆ. ಇದರ ತಾತ್ಪರ್ಯ ಹೀಗೆ: "ದೇಶಭಾಷಾಜನ್ಯ ಪದ್ಯವಿಶೇಷಗಳಲ್ಲಿ ಅಕ್ಷರಸಂಖ್ಯಾನಿಯಮವು ಅಷ್ಟಿಷ್ಟು ಇರುತ್ತದೆ. ಆದರೆ ಅವುಗಳಿಗೆ ಮಾತ್ರಾನಿಯಮವಿಲ್ಲ; ಅವು ತಾಳಾಧೀನ."– ಗ್ರಂಥಕಾರನು ಈ ಮಾತುಗಳನ್ನು ಮಲಯಾಳ ಭಾಷೆಯ ಕುರಿತಾಗಿ ಮಾತ್ರ ಹೇಳಿರುವು–ದಾದರೂ, ಅವು ನಮ್ಮ ದೇಶದ ನಾನಾಭಾಷೆಗಳ ಆದಿವಾಙ್ಮಯಗಳ ಛಂದೋಬಂಧಗಳಿಗೆಲ್ಲ ಅನ್ವಯಿಸುವಂತಿವೆ. ಆ ಆದಿಮ ಪದ್ಯರೂಪಗಳು, ಗುರುಲಘುಭೇದಗಣನೆಯಿಲ್ಲದ ಅಕ್ಷರ ಸಂಖ್ಯಾನಿಯಮಕ್ಕೆ ಮಾತ್ರ ಒಳಪಟ್ಟು ಮಾತ್ರಾನಿಯಮಬಾಹಿರವಾಗಿದ್ದುದರಿಂದ, ಅಕ್ಷರಗಳು ಯಥೋಚಿತವಾಗಿ ಕರ್ಷಿಸುವ ಮೂಲಕವೇ ತಾಳಾನ್ವಿತವಾಗುವವುಗಳಾಗಿದ್ದವು. ಆದರೆ ಕರ್ಷಣವಿಧಾನವು ಆ ಭಾಷೆಗಳಲ್ಲೆಲ್ಲ ಒಂದೇ ಬಗೆಯಾಗಿದ್ದಿಲ್ಲ. ಕೆಲವು ಭಾಷೆಗಳ ಛಂದೋಬಂಧಗಳಲ್ಲಿ ಪಾದಾಕ್ಷರಗಳೆಲ್ಲವೂ – ಸಹಜವಾಗಿ ಅವು ಲಘುಗಳಾಗಿರಲಿ, ಗುರುಗಳಾಗಿರಲಿ – ಪಠನಕಾಲದಲ್ಲಿ ಗುರೂಚ್ಚಾರವನ್ನೇ ಪಡೆಯುತ್ತಿದ್ದುದುಂಟು. ಮಲಯಾಳದ 'ವಂಜಿಪ್ಪಾಟ್' (ಇದಕ್ಕೆ 'ನತೋನ್ನತ' ಎಂಬ ಹೆಸರೂ ಇದೆ.) ಮತ್ತು ಹಿಂದೀಭಾಷೆಯ 'ಕವಿತ್ತ' (ಇದಕ್ಕೆ 'ಘನಾಕ್ಷರೀ' ಎಂಬ ಹೆಸರೂ ಇದೆ.) – ಇವು ಈ ವಿಧಾನಕ್ಕೆ ಉತ್ತಮವಾದ ಉದಾಹರಣಗಳು. ಸ್ತ್ರೀಗೀತವಾಗಿದ್ದ ಮರಾಠಿಯ ಹಳೆಯ ಓವಿಗಳಲ್ಲಿಯೂ ಕರ್ಷಣವಿಧಾನವು ಹೆಚ್ಚುಕಡಮೆ ಇದೇ ಬಗೆಯದಾಗಿತ್ತು. ಕನ್ನಡದ ತ್ರಿಮೂರ್ತಿಗಣಬಂಧಗಳ ಕರ್ಷಣವಿಧಾನವು ಬೇರೊಂದು. ಅವುಗಳಲ್ಲಿ ಬರುವ ಇತರ ಲಘುಗಳೆಲ್ಲವೂ ಪಠನದಲ್ಲಿ ಗುರುತ್ವವನ್ನು ಪಡೆಯುವವಾದರೂ – ಗಣಾದಿಯಲ್ಲಿ ಮಾತ್ರ ಕಾಣಿಸಿಕೊಳ್ಳಬಹುದಾದ – ಜಂಟಿ ಲಘುಗಳು ಸ್ವಸ್ವರೂಪದಲ್ಲಿಯೇ ಉಳಿಯುವವು. ತಮಿಳಿನ ಛಂದೋಗಣ(ಚೀರ್)ಗಳ ಕೊನೆಯಲ್ಲಿ ಬರುವ ಲಘುವೂ ಕರ್ಷಿತವಾಗಿ ಗುರೂಚ್ಚಾರವನ್ನೇ ಪಡೆಯುವಂತಹದಾಗಿತ್ತು. ಹೀಗೆ – ಆ ಆದಿಮ ಛಂದೋಬಂಧಗಳೆಲ್ಲ ತಂತಮ್ಮ ವಿಶಿಷ್ಟ ವಿಧಾನಗಳಿಂದ ಕರ್ಷಿತವಾಗಿ ತಾಳಾನ್ವಿತವಾಗುವವುಗಳಾಗಿದ್ದವು. (ಕರ್ಣಾಟಕವಿಷಯ ಜಾತಿಗಳೆಂದು ಪ್ರಸಿದ್ಧವಾಗಿರುವ ತ್ರಿಮೂರ್ತಿಗಣಬಂಧಗಳೊಳಗೆ ಮುಖ್ಯತಮವಾದ ವಿಷ್ಣುಗಣಪ್ರಧಾನಬಂಧಗಳು ಕನ್ನಡಕ್ಕೆ ಮತ್ತು ಕನ್ನಡದ ನೆರೆಯ ತೆಲುಗುಮಲಯಾಳಗಳಿಗೆ ಸೀಮಿತವಾಗಿರದೆ – ಮಧ್ಯಪ್ರದೇಶದ, ಉತ್ಕಲದ, ಮಾತ್ರವಲ್ಲ – ನೇಪಾಳೀ ಹಾಗೂ

ಸಿಂಹಳೀ ಭಾಷೆಗಳ ಹಳೆಯ ಜಾನಪದ ರಚನೆಗಳೊಳಗೂ ಇದ್ದವೆಂಬುದು ರೇಡಿಯೋ ಪ್ರಸಾರಗಳಿಂದ ಗೊತ್ತಾಗುತ್ತದೆ.) ಇದನ್ನೆಲ್ಲ ಪರಿಭಾವಿಸುವಾಗ – ಮಾತ್ರಾನಿಯಮವಿಲ್ಲದ ಅಕ್ಷರಸಂಖ್ಯಾಗಣನೆಗೆ ಒಳಪಟ್ಟು, ಯಥೋಚಿತವಾದ ಕರ್ಷಣವ್ಯವಸ್ಥೆಯ ಮೂಲಕ ತಾಳಾನ್ವಿತವಾಗುವುದು ಭಾರತದ ಹಾಗೂ ಭಾರತೀಯ ಮೂಲದ ಭಾಷೆಗಳ ಆದಿಕಾಲದ (ಲೌಕಿಕ) ಛಂದೋಬಂಧಗಳ ಸ್ವಭಾವವಾಗಿತ್ತೆಂದು ಮನವರಿಕೆಯಾಗುತ್ತದೆ. ಹಿಂದೊಮ್ಮೆ ನಿವೇದಿಸಿರುವಂತೆ – ವೈದಿಕಛಂದಗಳಲ್ಲಿರುವ "ಛಂದೋಲಕ್ಷಣ" ಎನ್ನಬಹುದಾದ ಸಾಮಾನ್ಯ ನಿಯಮಗಳು ಪಾದಸಂಖ್ಯಾಪರಿಮಿತಿ ಮತ್ತು ಪಾದಾಕ್ಷರಸಂಖ್ಯಾಪರಿಮಿತಿ ಎಂಬಿವೆರಡೇ ಆಗಿವೆ. ಈ ಎರಡು ಲಕ್ಷಣಗಳು, ವೈದಿಕಛಂದಗಳ ಹಿನ್ನೆಲೆಯಲ್ಲಿದ್ದವುಗಳೆಂದು ಈ ಹಿಂದೆ ಊಹಿಸಲಾದ ಲೌಕಿಕಛಂದಗಳ ಲಕ್ಷಣಗಳೇ ಆಗಿದ್ದಿರಬೇಕೆನ್ನುವುದು ಯುಕ್ತವಾಗಿ ತೋರು-ತ್ತದೆ. ಏಕೆಂದರೆ – ಈ ಮೇಲೆ ಸಂಕ್ಷಿಪ್ತವಾಗಿ ನಿವೇದಿಸಿರುವಂತೆ, ಭಾರತದ ಹಾಗೂ ಭಾರತೀಯ ಮೂಲದ ಇತರ ಭಾಷೆಗಳ ಆದಿಕಾಲದ ಛಂದೋಬಂಧಗಳ ಲಕ್ಷಣಗಳಾದರೂ ಆ ಎರಡೇ ಆಗಿದ್ದುವು. ಈ ಕಾರಣದಿಂದ – ವೈದಿಕಛಂದಗಳ ಹಿನ್ನೆಲೆಯವೆಂದು ಈ ನಿಬಂಧದಲ್ಲಿ ಊಹಿಸಲ್ಪಟ್ಟಿರುವ ಲೌಕಿಕಬಂಧಗಳು ಸಹ, ಭಾರತದ ಇತರ ಭಾಷೆಗಳ ಆದಿಕಾಲದ ಛಂದೋಬಂಧಗಳಂತೆ, ಕರ್ಷಣವಿಧಾನದಿಂದ ತಾಳಾನ್ವಿತವಾಗುವಂಥವುಗಳೇ ಆಗಿದ್ದುವೆಂದು ಭಾವಿಸಬೇಕಾಗುತ್ತದೆ. ಆದರೆ ಅವುಗಳ ಕರ್ಷಣವಿಧಾನವು ಹೇಗಿದ್ದಿರ-ಬಹುದೆಂಬುದನ್ನು ಊಹಿಸುವುದು ಶಕ್ಯವಲ್ಲ. ಏಕೆಂದರೆ, ಕರ್ಷಣವಿಧಾನಗಳು ಭಾರತೀಯ ಭಾಷೆಗಳಲ್ಲೆಲ್ಲ ಏಕರೂಪವಾಗಿದ್ದಿಲ್ಲ. ಇದೂ ಅಲ್ಲದೆ, ವೈದಿಕಛಂದಗಳಲ್ಲಿ ಕಂಡುಬರುವ ಒಂದು ಛಂದೋವಿನ್ಯಾಸವಿಶೇಷವು ಅವುಗಳ ಹಿನ್ನೆಲೆಯ ತಾಳಚ್ಛಂದಗಳ ಕರ್ಷಣ ವಿಧಾನವನ್ನು ಮತ್ತಷ್ಟು ದುರೂಹ್ಯವಾಗಿ ಮಾಡಿರುತ್ತದೆ. ಅದೇನೆಂದರೆ – ವೈದಿಕಛಂದಗಳ ಪಾದಗಳ ಪೂರ್ವಾರ್ಧಗಳ ಛಂದೋವಿನ್ಯಾಸದಲ್ಲಿ ಯಾವ ವಿಶೇಷತೆಯೂ ಗೋಚರಿಸುವು-ದಿಲ್ಲವಾದರೂ. ಉತ್ತರಾರ್ಧಗಳ ಅಥವಾ ಪಾದಾಂತಗಳ ವಿನ್ಯಾಸದಲ್ಲಿ ಅಷ್ಟಿಷ್ಟು ವಿಶೇಷತೆ ಇರುವುದು ಬಹಳವಾಗಿ ಕಂಡುಬರುತ್ತದೆ. ಈ ವಿಶೇಷತೆಗಳೂ ಅವುಗಳ ಹಿನ್ನೆಲೆಯ ಲೌಕಿಕಛಂದಗಳ ಲಕ್ಷಣಗಳೇ ಆಗಿದ್ದವೋ ಏನೋ, ಖಚಿತವಾಗಿ ಹೇಳಲಳವಲ್ಲ. ಏಕೆಂದರೆ, ಮಾತ್ರಾಛಂದಗಳ ಉದಯಕ್ಕೆ ಹಿಂದಿನದಾದ ಲೌಕಿಕಪರಂಪರೆಯ ಛಂದೋರೂಪವಾವುದೂ – ಸಂಸ್ಕೃತದಲ್ಲಾಗಲಿ ಪ್ರಾಕೃತಗಳಲ್ಲಾಗಲಿ – ಉಪಲಬ್ಧವಾಗಿಲ್ಲ. ನಮಗೆ ಲಬ್ಧವಾಗಿರುವ ಲೌಕಿಕಸಂಸ್ಕೃತದ ಹಾಗೂ ಪ್ರಾಕೃತಗಳ ಪುರಾತನತಮ ಪದ್ಯರಚನೆಗಳೆಲ್ಲ ಶಾಸ್ತ್ರಗಳೋ ಧಾರ್ಮಿಕ ಸ್ವಭಾವದವುಗಳೋ ಆಗಿದ್ದು, ಅವೆಲ್ಲ ವೈದಿಕಛಂದಗಳ ರೂಪಾಂತರಗಳಾದ ಅನುಷ್ಟುಪ್ ಶ್ಲೋಕ ಅಥವಾ ಉಪಜಾತಿಬಂಧಗಳಲ್ಲಿ ರಚಿತವಾಗಿರುತ್ತವೆಯೇ ವಿನಾ, ಪುರಾತನ ಲೌಕಿಕಪರಂಪರೆಯ (ಮಾತ್ರಾನಿಯಮರಹಿತ) ತಾಳಚ್ಛಂದವೊಂದೂ ಅವುಗಳಲ್ಲಿ ಲಭಿಸಿರುವುದಿಲ್ಲ. ಸಂಸ್ಕೃತದಲ್ಲಿ ನಮಗೆ ಲಬ್ಧವಾಗಿರುವ ಹಳೆಯ ಮಾತ್ರಾಛಂದಗಳಲ್ಲಿ ಮುಖ್ಯವಾದವುಗಳು ವೈತಾಲೀಯ ಮತ್ತು ಆರ್ಯಾಬಂಧ ಎಂಬೆರಡಾಗಿವೆ. (ಹಿಂದೆ ನಿರೂಪಿಸಿರುವಂತೆ) ಅರ್ಧಸಮಮಾತ್ರಾಜಾತಿಯಾಗಿರುವ ವೈತಾಲೀಯದ ವಿರಾಮಸ್ಥಾನಗಳ ಮತ್ತು ಆರ್ಯೆಯ ಕೊನೆಯ ಭಾಗದ ಛಂದೋವಿನ್ಯಾಸಗಳಲ್ಲಿ – ವೈದಿಕಛಂದಗಳ ಪಾದಾಂತಗಳನ್ನು ನೆನಪಿಗೆ ತರುವಂತಹ – ವಿಶಿಷ್ಟತೆಗಳು ನಿಯತವಾಗಿ ಇದ್ದೇ ಇರುವುದು ಉದ್ಬೋಧಕವಾಗಿದೆ. ಮಾತ್ರಾಬಂಧಗಳೆಲ್ಲವೂ – ಅವು ಯಾವ ಭಾಷೆಯಲ್ಲಿಯೇ ಹುಟ್ಟಿರಲಿ – ನಿರಪವಾದವಾಗಿ ಲಯಾನ್ವಿತ(=ತಾಳಬದ್ಧ)ವೇ ಆಗಿರುತ್ತವೆಂಬ ತಥ್ಯವನ್ನು ಹಿಂದೆ ಈ ನಿಬಂಧದಲ್ಲಿ ವಿಶದೀಕರಿಸಲಾಗಿದೆಯಷ್ಟೆ. ಗಾನಪ್ರಧಾನವಾಗಿದ್ದು, ಕರ್ಷಣದ ಮೂಲಕವೇ

ಲಯಾನ್ವಿತವಾಗಬೇಕಾಗಿದ್ದ ಆದಿಕಾಲದ ಛಂದೋಬಂಧಗಳು ಕಾಲಾಂತರದಲ್ಲಿ ಅರ್ಥಪ್ರಧಾನವಾಗುತ್ತಾ ಬರುವಾಗ, (ಅಕ್ಷರಗಳನ್ನು ಕರ್ಷಿಸಿ ಪಠಿಸುವುದು ಎಷ್ಟೋ ವೇಳೆ ಅರ್ಥಗ್ರಹಣಕ್ಕೆ ತೊಡಕಾಗುವ ಕಾರಣ) ಯಥಾಕ್ಷರವಾಗಿ ಪಠಿಸುವಾಗಲೇ ನಿರಾಯಾಸವಾಗಿ ಲಯೋನ್ಮೀಲನವಾಗುವ ಮಾತ್ರಾಬಂಧಗಳು ಉದ್ಭವಿಸಿ, ಆ ಹಿಂದಿನ ತಾಳಚ್ಛಂದಗಳನ್ನು ಮೂಲೆಗುಂಪಾಗಿಸುವುದು ಸ್ವಾಭಾವಿಕ; ಮತ್ತು ಹೊಸದಾಗಿ ಹುಟ್ಟುವ ಛಂದೋರೂಪಗಳು ತತ್ಪೂರ್ವದ ಛಂದೋಬಂಧಗಳ ಲಕ್ಷಣವಿಶೇಷಗಳಲ್ಲಿ ಅಷ್ಟಿಷ್ಟನ್ನು ಉಳಿಸಿಕೊಳ್ಳುವುದೂ ಸ್ವಾಭಾವಿಕವೇ ಆಗಿದೆ. ಛಂದೋವಿಧಾನದಲ್ಲಿ ಆಗುವ ಇಂತಹ ಸಹಜವಿಕಾಸಕ್ಕೆ ಕನ್ನಡವು ಉತ್ತಮವಾದೊಂದು ನಿದರ್ಶನವಾಗಿರುತ್ತದೆ. ಕನ್ನಡದ ಆದಿಕಾಲದ ದೇಶೀಯ ಛಂದೋರೂಪಗಳಾಗಿದ್ದ ತ್ರಿಮೂರ್ತಿಗಣಬಂಧಗಳು ಕಾಲಾಂತರದಲ್ಲಿ ಒಂದೊಂದಾಗಿ ಬಳಕೆತಪ್ಪುತ್ತಾಹೋಗಿ, ವಾರ್ಧಕಾದಿ ಷಟ್ಪದಿಗಳು ಕನ್ನಡ ಪದ್ಯವಾಙ್ಮಯವನ್ನೆಲ್ಲ ತಮ್ಮದಾಗಿ ಮಾಡಿಕೊಂಡುದನ್ನೂ, ಈ ವಾರ್ಧಕಾದಿಗಳು ವಿಶುದ್ಧಮಾತ್ರಾಬಂಧಗಳಾದರೂ ತತ್ಪೂರ್ವದ ತ್ರಿಮೂರ್ತಿಬಂಧಗಳ ವೈಶಿಷ್ಟ್ಯವಾದ ಲಗಾದಿಗಣನಿಷೇಧವನ್ನು ತಮ್ಮಲ್ಲಿಯೂ ನಿರಪವಾದ-ವಾಗಿ ಉಳಿಸಿಕೊಂಡಿರುವುದನ್ನೂ ಕಾಣುತ್ತೇವೆ. ಇಂತಹದೇ ವಿದ್ಯಮಾನವು (ಲೌಕಿಕ) ಸಂಸ್ಕೃತದಲ್ಲಿಯೂ ಆಗಿದ್ದಿರುವುದು ಸಂಭಾವ್ಯವೇ ಆಗಿರುವುದರಿಂದ – ವೈತಾಲೀಯದ ವಿರಾಮಸ್ಥಾನಗಳ ಹಾಗೂ ಆರ್ಯಾಬಂಧದ ಕೊನೆಯ ಭಾಗದ ವಿನ್ಯಾಸವೈಚಿತ್ರ್ಯಗಳು, ತತ್ಪೂರ್ವದಲ್ಲಿ ಬಳಕೆಯಲ್ಲಿದ್ದ ಆದಿಕಾಲದ ತಾಳಚ್ಛಂದಗಳ ಪಾದಾಂತಗಳ ಲಕ್ಷಣವಿಶೇಷಗಳ ಪ್ರತಿಬಿಂಬಗಳೋ ಅವಶೇಷಗಳೋ ಆಗಿದ್ದಿರಬೇಕೆಂಬ ಊಹೆ ತಲೆದೋರುತ್ತದೆ. ಈ ಊಹೆ ಸಾಧುವೆಂದಾದರೆ, ವೈದಿಕಛಂದಗಳಲ್ಲಿ – ಪಾದಗಳ ಉತ್ತರಾರ್ಧಗಳಲ್ಲಿ ಅಥವಾ ಪಾದಾಂತ-ಗಳಲ್ಲಿ – ಬಹುಧಾ ಗೋಚರಿಸುವ ವಿನ್ಯಾಸವಿಶೇಷಗಳೂ (ಅವುಗಳ ಹಿನ್ನೆಲೆಯವೆಂದು ಊಹಿಸಲಾದ) ಆದಿಕಾಲದ ಆ ತಾಳಚ್ಛಂದಗಳ ಪಾದಗಳ ಉತ್ತರಭಾಗಗಳ ವಿಶಿಷ್ಟಲಕ್ಷಣಗಳ ಪ್ರತಿಬಿಂಬಗಳಾಗಿರಬೇಕೆಂದು ಹೇಳುವುದು ಯುಕ್ತವೆನಿಸುತ್ತದೆ. ವಸ್ತುಸ್ಥಿತಿ ಇದಾಗಿತ್ತೆಂದಾದರೆ – ಆ ತಾಳಚ್ಛಂದಗಳ ಪಾದಗಳಲ್ಲಿ ಕರ್ಷಣಪ್ರಕಾರವು ಏಕರೂಪವಾಗಿರದೆ, ಪೂರ್ವಭಾಗದಲ್ಲಿ ಒಂದು ಬಗೆಯಾಗಿಯೂ ಉತ್ತರಭಾಗದಲ್ಲಿ ಬೇರೊಂದು ಬಗೆಯಾಗಿಯೂ ಇದ್ದಿರಬೇಕಾಗು-ತ್ತದೆ. ಆದುದರಿಂದ, ವೈದಿಕಛಂದಗಳ ಹಿನ್ನೆಲೆಯ ಲೌಕಿಕ ಛಂದೋಬಂಧಗಳು ಯಾವುದೋ ಒಂದು ವಿಶಿಷ್ಟರೀತಿಯಲ್ಲಿ ಕರ್ಷಿತವಾಗಿ ತಾಳಾನ್ವಿತವಾಗುತ್ತಿದ್ದಿರಬೇಕು – ಎಂದಿಷ್ಟೇ ಹೇಳಬಹುದಾಗಿದೆ ಹೊರತು, ಇದಕ್ಕಿಂತ ಹೆಚ್ಚಿನದೇನನ್ನೂ ಹೇಳಲಳವಲ್ಲ; ಅದೆಲ್ಲ ಊಹೆಯ ಪರಿಧಿಯಿಂದ ಆಚೆಯದೇ ಸರಿ.

ವೈದಿಕಛಂದಗಳಲ್ಲಿ ಗತಿಸೌಂದರ್ಯಸಾಧಕವಾದ ವ್ಯವಸ್ಥೆಗಳಿಲ್ಲದಿರುವುದಕ್ಕೆ ಕಾರಣವೇನೆಂಬುದನ್ನು ಕುರಿತು ಆಧುನಿಕ ವಿಚಾರಧಾರೆಗನುಗುಣವಾಗಿ – ಎಂದರೆ ಕ್ರಮವಿಕಾಸದೃಷ್ಟಿಯಿಂದ – ಚಿಂತಿಸುತ್ತಾ ಹೋದಾಗ, ನನ್ನ ಅಲ್ಪಮತಿಗೆ ಏನು ಹೊಳೆ-ಯಿತೋ ಅದನ್ನು ಈವರೆಗೆ ನಿವೇದಿಸಿದ್ದಾಯಿತು. ಆದರೆ, ವೇದಸೂಕ್ತಗಳು ಅಪೌರುಷೇಯ-ಗಳು – ಎಂದರೆ (ವಿಕಾಸಕ್ರಮನಿರಪೇಕ್ಷವಾಗಿ) ಋಷಿಗಳ ಮುಖದಿಂದ ಸ್ವಯಂಪ್ರಭೂತ-ವಾದವುಗಳು – ಎಂಬ ಅನಾದಿಪರಂಪರಾಗತವಾದ ಭಾವನೆಯನ್ನು ನಿರಾಧಾರವಾದ ಕಲ್ಪನೆಯೆಂದು ತಳ್ಳಿಬಿಡುವುದು ಸಾಧ್ಯವಾಗದಂತಹ ಅಪೂರ್ವ ದೃಷ್ಟಾಂತವೊಂದು ಈ ಶತಮಾನದ ಆದಿಭಾಗದಲ್ಲಿ ಘಟಿಸಿರುವುದನ್ನು ಇಲ್ಲಿ ಪ್ರಸ್ತಾವಿಸದಿರಲಾಗುವುದಿಲ್ಲ. ಆದುದ-ರಿಂದ ದಿಙ್ಮಾತ್ರವಾಗಿ ಅದನ್ನು ಸೂಚಿಸಿ, ನಾನು ಇಚ್ಛೆಸಿದ್ದುದಕ್ಕಿಂತ ಅತಿತರವಾಗಿ ಬೆಳೆದ ಈ ವೈದಿಕ ಛಂದೋಗತಿವಿಚಾರವನ್ನು ಪೂರ್ತಿಗೊಳಿಸುತ್ತೇನೆ. ಆ ಘಟನೆ ೧೯೧೭ನೆಯ

ಸ್ವರೂಪವು ಹೀಗೆ ಅವ್ಯವಸ್ಥಿತವಾಗಿರುವುದಾದರೂ, ಅವುಗಳಲ್ಲಿ ವಿಶಿಷ್ಟ-ವಾದೊಂದು ಛಂದೋಗತಿಸೌಂದರ್ಯವೇನೋ ಇದ್ದೇ ಇರುತ್ತದೆಂಬುದು – ತ್ರೈಸ್ವರ್ಯವನ್ನು ವರ್ಜಿಸಿ ಅವನ್ನು ಪಠಿಸಿದಾಗ – ನಮಗೆ ತಿಳಿದುಬರುತ್ತದೆ. ಆದರೆ ಈ ಗತಿಸೌಂದರ್ಯವು ವೈದಿಕಪದ್ಯಗಳ ಪಠನದಲ್ಲಿ ಮಾತ್ರವಲ್ಲ, ವೈದಿಕ ಗದ್ಯವಾಕ್ಯ(=ಯಜುಸ್)ಗಳ ಪಠನದಲ್ಲಿಯೂ – ಹೆಚ್ಚುಕಡಮೆ ತದ್ವತ್ತಾಗಿ – ಉನ್ಮೀಲಿಸುತ್ತದೆಂಬುದೂ, ಆ ಗದ್ಯವಾಕ್ಯಗಳನ್ನು ತ್ರೈಸ್ವರ್ಯರಹಿತವಾಗಿ ಪಠಿಸಿ-ದಾಗ ನಮಗೆ ಮನವರಿಕೆಯಾಗುತ್ತದೆ. ಆದುದರಿಂದ, ವಿಶಿಷ್ಟವಾದೀ ಗತಿ-

---

ಇಸವಿಯಲ್ಲಿ ನಡೆದುದಾಗಿ ತಿಳಿದುಬರುತ್ತದೆ. ಅದು ಹೀಗೆ: ಅಷ್ಟೇನೂ ಸಂಸ್ಕೃತಜ್ಞನಾಗಿರದಿದ್ದ ಇಪ್ಪತ್ತೈದು ವರ್ಷ ವಯಸ್ಸಿನ ತಮ್ಮ ಶಿಷ್ಯನೊಬ್ಬನು (ಈ ಘಟನೆಯಿಂದಾಗಿ ಆ ತರುಣನು ಮುಂದೆ 'ಬ್ರಹ್ಮರ್ಷಿ ದೈವರಾತ'ನೆಂದು ವಿಖ್ಯಾತನಾದನು.) ಅನನ್ಯನಿಷ್ಠೆಯಿಂದ ವ್ರತನಿರತನಾಗಿ ಯೋಗಧ್ಯಾನಮಗ್ನನಾಗಿದ್ದ ಸಮಯದಲ್ಲಿ, ಒಂದು ದಿನ ಅವನ ಬಾಯಿಂದ – ಛಂದಃಸ್ವರೂಪದಲ್ಲಿಯೂ ಭಾಷೆಯಲ್ಲಿಯೂ ತ್ರೈಸ್ವರ್ಯವಿಧಾನದಲ್ಲಿಯೂ ಅರ್ಥಮಹತ್ತ್ವ-ದಲ್ಲಿಯೂ ಋಗ್ವೇದದ ಛಂದಗಳನ್ನು ಪೂರ್ಣವಾಗಿ ಹೋಲುವ ಅಶ್ರುತಪೂರ್ವವಾದ ಛಂದಗಳು ನಿರರ್ಗಳವಾಗಿ ಹೊರಹೊಮ್ಮತೊಡಗಿದವೆಂದೂ, ಈ ಘಟನೆ ಹದಿನಾರು ದಿನಗಳವರೆಗೆ ಪುನಃಪುನರಾವರ್ತಿಸಿತೆಂದೂ, ಆ ಛಂದಗಳೊಳಗೆ ಸಾಧ್ಯವಾದಷ್ಟನ್ನು ತಾನು ಬರೆದುಕೊಂಡೆನೆಂದೂ ಆಗ ಅವನೊಡನಿದ್ದ ಅವನ ಗುರು ವಾಸಿಷ್ಠಗಣಪತಿಮುನಿಗಳು (ಇವರು ಭಗವಾನ್ ಶ್ರೀ ರಮಣಮಹರ್ಷಿಗಳ ಶಿಷ್ಯ) ಆ ನೂತನ ಛಂದಗಳ ಸಂಹಿತೆಗೆ 'ಛಂದೋದರ್ಶನ' ಎಂಬ ಹೆಸರುಕೊಟ್ಟು ಅದಕ್ಕೆ ತಾವು ಬರೆದಿರುವ ಭಾಷ್ಯದ ಭೂಮಿಕೆಯಲ್ಲಿ ತಿಳಿಸಿರುತ್ತಾರೆ. ಆ ಛಂದಗಳ ಸಂಖ್ಯೆಯಾದರೂ ಸಣ್ಣದೇನಲ್ಲ:– ನಾನ್ನೂರ ಐವತ್ತು! ಅವನ್ನು ಪರಾಮರ್ಶಿಸಿದ ಮಹಾಮಹೋಪಾಧ್ಯಾಯ ದತ್ತೋ ವಾಮನ ಪೋತದಾರ್, ಆಚಾರ್ಯ ವಿನೋಬಾ ಭಾವೆ, ಡಾಕ್ಟರ್ ಹಾನ್ಸ್ ಪೀಟರ್ ಮೊದಲಾದ ವೇದಪಾರಂಗತರು – ಅವು ಎಲ್ಲಾ ಲಕ್ಷಣಗಳಲ್ಲಿಯೂ ಋಗ್ವೇದದ ಛಂದಗಳಿಗೆ ತುಲ್ಯವಾಗಿವೆ ಎಂಬ ಏಕಾಭಿಪ್ರಾಯವನ್ನು ವ್ಯಕ್ತಪಡಿಸಿರುವರೆಂದು – ಆ ಭಾಷ್ಯ ಮತ್ತು ಆಂಗ್ಲಭಾಷಾಂತರ-ಸಹಿತವಾಗಿ ಆ ಛಂದಗಳು "ಭಾರತೀಯ ವಿದ್ಯಾಭವನ"ದಿಂದ ಪ್ರಕಾಶಿತವಾಗುವುದಕ್ಕೆ ಕಾರಣಭೂತರಾದ ಶ್ರೀಮಾನ್ ಆರ್. ಆರ್. ದಿವಾಕರರು ತಾವು ಆ ಪುಸ್ತಕಕ್ಕೆ ಬರೆದಿರುವ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ. ವೇದವಿದ್ಯಾಸಕ್ತರೆಲ್ಲರೂ ಓದಲೇಬೇಕಾದ ಒಂದು ಅಮೋಘವಾದ ಗ್ರಂಥ ಅದೆಂಬುದರಲ್ಲಿ ಸಂದೇಹವಿಲ್ಲ. ಹೀಗೆ –ವಿಶ್ವಸನೀಯವಾದೊಂದು ಸಮಕಾಲೀನ ಸಾಕ್ಷ್ಯವು ಕಣ್ಣಮುಂದಿರುವಾಗ, ವೇದಗಳ ಸ್ವಯಂಭೂತ್ವವನ್ನು ಕೇವಲ ಕಾಲ್ಪನಿಕವೆಂದು ತಳ್ಳಿಹಾಕುವುದಕ್ಕಾದೀತೇ? – ಸುಜ್ಞರು ಪರಿಭಾವಿಸಬೇಕು. ಧ್ಯಾನಸೋಪಾನವನ್ನೇರುತ್ತಾ ಹೋಗುವಾಗ ಮಹಾಯೋಗಿಗಳ ಅಂತರಿಂದ್ರಿಯಕ್ಕೆ ಯಾವ ಯಾವ ಹಂತಗಳಲ್ಲಿ ಏನೇನೆಲ್ಲ ಕಾಣುತ್ತದೆ, ಏನೇನೆಲ್ಲ ಕೇಳುತ್ತದೆ ಎಂಬುದನ್ನಾಗಲಿ, 'ವಿಶ್ವಸ್ಯಾಯತನಂ' (=ಎಲ್ಲದರ ನೆಲೆ) ಎಂದು "ನಾರಾಯಣಸೂಕ್ತ"ದಲ್ಲಿ ನಿಗದಿತವಾದ ಅಂತರ್ಹೃದಯದಲ್ಲಿ ಅಡಗಿರಬಹುದಾದ ಅದ್ಭುತಗಳನ್ನಾಗಲಿ ನಾವೆಲ್ಲಿ ಬಲ್ಲೆವು?

ಓಂ ತತ್ ಸತ್

ಸೌಂದರ್ಯವು (ವೈದಿಕ) ಪದ್ಯಗಳಿಗೆ ಮಾತ್ರ ಮೀಸಲೇನೂ ಅಲ್ಲವೆಂಬುದು ಖಚಿತ. ಹಾಗಾದರೆ ಈ ಗತಿಸೌಂದರ್ಯಕ್ಕೆ ಆಧಾರಭೂತವಾದ ವಸ್ತುಸ್ಥಿತಿ ಯಾವುದು?

ವಿಶಿಷ್ಟವಾದೀ ಗತಿಸೌಂದರ್ಯವು ವೈದಿಕಪದ್ಯರೂಪಗಳಲ್ಲಿ ಹೇಗೋ ಹಾಗೆ, ವೈದಿಕ ಗದ್ಯರೂಪಗಳಲ್ಲಿಯೂ ಇರುವಂತಹದೆಂಬ ತಥ್ಯವು ನಮಗೆ ತಿಳಿದುಬಂದಾಗ, – ಈ ಗತಿಸೌಂದರ್ಯದ ಆಧಾರವೇನೆಂಬುದೊಂದು ರಹಸ್ಯವಾಗಿ ಉಳಿಯುವುದಿಲ್ಲ. ಏಕೆಂದರೆ – ಗದ್ಯಪದ್ಯ ಎಂಬೆರಡರಲ್ಲಿಯೂ ಏಕರೂಪವಾಗಿ ಇರಬಹುದಾದ ಗತಿಸೌಂದರ್ಯವೆಂದರೆ "ಅಕ್ಷರಗತಿಸೌಂದರ್ಯ" ಹೊರತು ಬೇರಾವುದೂ ಆಗಿರುವಂತಿಲ್ಲ. ಆದುದರಿಂದ, ವೈದಿಕಪದ್ಯಗಳ ಮತ್ತು ಗದ್ಯವಾಕ್ಯಗಳ ಅಕ್ಷರಗತಿಸ್ವರೂಪಗಳ ಪರಿಚಯಮಾಡಿಕೊಳ್ಳುವ ಮೂಲಕ ಆ ತಥ್ಯವನ್ನು ವಿಶದೀಕರಿಸಿಕೊಳ್ಳೋಣ. ಉದಾ:

A. ವೈದಿಕಪದ್ಯ

(೧) ಅಗ್ನಿಮೀಳೇ ಪುರೋಹಿತಂ ।
ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಂ ॥ . ॥

(ಋಗ್ವೇದ I–೧–೧)

(೨) ಋತಂ ದಿವೇ ತದವೋಚಂ ಪೃಥಿವ್ಯಾ ।
ಅಭಿಶ್ರಾವಾಯ ಪ್ರಥಮಂ ಸುಮೇಧಾಃ ॥
ಪಾತಾಮವದ್ಯಾತ್ ದುರಿತಾದಭೀಕೇ ।
ಪಿತಾ ಮಾತಾ ಚ ರಕ್ಷತಾಮವೇಭಿಃ ॥ . ॥

(ಋಗ್ವೇದ I –೧೮೫–೧೦)

(೩) ತ್ವಾದತ್ತೇಭೀ ರುದ್ರ ಶಂತಮೇಭಿಃ ।
ಶತಂ ಹಿಮಾ ಅಶೀಯ ಭೇಷಜೇಭಿಃ ॥
ವ್ಯಸ್ಮದ್ ದ್ವೇಷೋ ವಿತರಂ ವ್ಯಂಹೋ ।
ವ್ಯಮೀ ವಾಶ್ಚಾತಯಸ್ವಾ ವಿಷೂಚೀಃ ॥ . ॥

(ಋಗ್ವೇದ II –೩೩–೨)

## B. ವೈದಿಕಗದ್ಯ

(೧) ಇಡಾದೇವಹೂರ್ಮನುರ್ಯಜ್ಞನೀರ್ಬೃಹಸ್ಪತಿರುಕ್ಥಾಮದಾನಿ
ಶಂಸಿಷದ್ವಿಶ್ವೇದೇವಾಃ ಸೂಕ್ತವಾಚಃ ಪೃಥಿವಿಮಾತರ್ಮಾ ಮಾ ಹಿಂಸೀಃ ।
ಮಧುಮನಿಷ್ಯೇ ಮಧುಜನಿಷ್ಯೇ ಮಧುವಕ್ಷ್ಯಾಮಿ ಮಧುವದಿಷ್ಯಾಮಿ
ಮಧುಮತೀಂ ।
ದೇವೇಭ್ಯೋ ವಾಚಮುದ್ಯಾಸಂ ಶುಶ್ರೂಷೇಣ್ಯಾಂ ಮನುಷ್ಯೇಭ್ಯಃ ।
ತಂ ಮಾ ದೇವಾ ಅವಂತು ಶೋಭಾಯೈ ಪಿತರೋನುಮದಂತು ॥ . ॥
(ಯಜುರ್ವೇದ III-೩-೨-೨)

(೨) ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂಚ ಪತಯೇ ನಮಃ ।
ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ಪಶೂನಾಂ ಪತಯೇ ನಮಃ ।
ನಮಃ ಸಸ್ಪಿಂಜರಾಯ ತ್ವಿಷೀಮತೇ ಪಥೀನಾಂ ಪತಯೇ ನಮಃ ।
ನಮೋ ಬಭ್ಲುಶಾಯ ವಿವ್ಯಾಧಿನೇನ್ನಾನಾಂ ಪತಯೇ ನಮಃ ।
ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮಃ ।
ನಮೋ ಭವಸ್ಯ ಹೇತ್ಯೈ ಜಗತಾಂ ಪತಯೇ ನಮಃ ॥
(ಯಜುರ್ವೇದ ; ರುದ್ರಾಧ್ಯಾಯ, ಅನುವಾಕ-೨)

(೩) ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಂ ।
ಅಸ್ಮಿನ್ ರಾಷ್ಟ್ರೇ ರಾಜನ್ಯಃ ಇಷವ್ಯಃ ಶೂರೋ ಮಹಾರಥೋ ಜಾಯತಾಂ ।
ದೋಗ್ಧ್ರೀ ಧೇನುಃ । ವೋಢಾನಡ್ವಾನ್ । ಆಶುಃ ಸಪ್ತಿಃ ।
ಪುರಂಧ್ರಿರ್ಯೋಷಾ । ಜಿಷ್ಣೂರಥೇಷ್ಠಾಃ । ಸಭೇಯೋ ಯುವಾ ।
ಅಸ್ಯ ಯಜಮಾನಸ್ಯ ವೀರೋ ಜಾಯತಾಂ ।
ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ।
ಫಲಿನ್ಯೋ ನ ಓಷಧಯಃ ಪಚ್ಯಂತಾಂ ।
ಯೋಗಕ್ಷೇಮೋ ನಃ ಕಲ್ಪತಾಂ ॥
(ಯಜುರ್ವೇದ, VII-೫-೧೮-೧)

ಈ ಮೇಲೆ ಉದಾಹರಿಸಿದ ವೇದಸಂಹಿತಾಭಾಗಗಳ ಗುರುಲಘು-ವಿನ್ಯಾಸಪ್ರಕಾರಗಳನ್ನು ಪರಾಮರ್ಶಿಸುವಾಗ – ವೈದಿಕಪದ್ಯದ ಅಕ್ಷರಗತಿಯೂ ವೈದಿಕಗದ್ಯದ ಅಕ್ಷರಗತಿಯೂ ಅಭಿನ್ನವೆಂದೇ ಹೇಳಬಹುದಾದಷ್ಟು ಸಾಮ್ಯವು ಆ ಭಾಗಗಳ ಅಕ್ಷರಗತಿಗಳಲ್ಲಿ ಕಂಡುಬರುತ್ತದೆ. ಯಾವ ವೇದಸಂಹಿತೆಯ ಯಾವ ಭಾಗವನ್ನು ಪರೀಕ್ಷಿಸಿದರೂ, ಅಲ್ಲಿ ಇದೇ ಬಗೆಯ ಅಕ್ಷರಗತಿಸ್ವರೂಪವನ್ನು ಕಾಣಬಹುದಾಗಿದೆ. ನಾನಾಋಷಿಗಳ ಮುಖದಿಂದ ಆವಿರ್ಭವಿಸಿದ ಗದ್ಯಪದ್ಯಗಳ ಅಷ್ಟು ದೊಡ್ಡ ವಾಙ್ಮಯರಾಶಿಯ ಅಕ್ಷರಗತಿರೂಪಗಳಲ್ಲಿ ಇಂತಹದೊಂದು ವಿಸ್ಮಯಾಸ್ಪದವಾದ ಸಾಮ್ಯವಿರುವುದಕ್ಕೆ ಕಾರಣವೇನಿರಬಹುದೆಂದು ಚಿಂತಿಸುತ್ತಾ ಹೋದರೆ – ವಿಶಿಷ್ಟವಾದೀ ಅಕ್ಷರಗತಿಸ್ವರೂಪವು ವೈಯಕ್ತಿಕ ಪ್ರಯತ್ನಗಳ ಫಲ-ವಲ್ಲವೆಂದೂ, ಅದು ಆ ಭಾಷೆಯಲ್ಲಿ ಪ್ರಕೃತ್ಯಾ ನಿಹಿತವಾಗಿರುವ ಸಹಜಲಕ್ಷಣ-ವೆಂದೂ ನಮಗೆ ಅರಿವಾಗುತ್ತದೆ. ಅಕ್ಷರಗತಿಭೇದಾನುಗುಣವಾಗಿ ಹೇಳುವು-ದಾದರೆ, ವೇದಭಾಷೆಯ ಈ ಅಕ್ಷರಗತಿ – ಸರಳವಾದ ಲೌಕಿಕಸಂಸ್ಕೃತದ ಗತಿ ಹೇಗೋ ಹಾಗೆ –(ಗುರುಪಕ್ಷಪಾತಿಯಾದ) ಮಧ್ಯಾಕ್ಷರಗತಿಯೇ ಆಗಿದೆ. ಆದರೆ – ಹಿಂದೆ ಈ ನಿಬಂಧದಲ್ಲಿ ನಿವೇದಿಸಿರುವಂತೆ, ಮಧ್ಯಾಕ್ಷರಗತಿಪ್ರಕಾರಗಳು ನಾನಾವಿಧವಾಗಿರುವುದರಿಂದ, ಅವುಗಳ ರೂಪಭೇದಾನುಗುಣವಾಗಿ ಅವುಗಳ ಸೌಂದರ್ಯದಲ್ಲಿಯೂ ತಾರತಮ್ಯವಿದ್ದೇ ಇರುತ್ತದೆ. ವೇದಸಂಹಿತೆಗಳಲ್ಲೆಲ್ಲ ಏಕ-ಪ್ರಕಾರವಾಗಿ ಗೋಚರಿಸುವ ವಿಶಿಷ್ಟವಾದೊಂದು ಮಧ್ಯಾಕ್ಷರಗತಿ ಅತಿಮನೋ-ಹರವೆಂಬುದರಲ್ಲಿ ಪ್ರಾಯಶಃ ಯಾರಿಗೂ ಮತಭೇದವಿರಲಿಕ್ಕಿಲ್ಲ. ಈ ಗತಿರೂಪವು ಗುರುಲಘುಗಳ ಒಂದು ವಿಶಿಷ್ಟಪ್ರಕಾರದ ಆನುಪೂರ್ವಿಯ ಫಲವಾಗಿದ್ದು – ವೇದಭಾಷೆಯ ಅಕ್ಷರಗತಿಸ್ವರೂಪವೇ ಹೀಗಿರುವುದರಿಂದ, ವೇದಸಂಹಿತೆಗಳಲ್ಲೆಲ್ಲ (ಅಪ್ರಯತ್ನವಾಗಿ) ಇದು ಸರ್ವತ್ರ ಉನ್ಮೀಲಿಸಿರುವುದಾಗಿದೆ. ಆದಕಾರಣ, ವೇದಸಂಹಿತೆಗಳಿಗೆ ಸುಂದರವಾದೀ ಮಧ್ಯಾಕ್ಷರಗತಿಯನ್ನೊದಗಿಸಿರುವಂತಹ ಆ ಗುರುಲಘುಗಳ ಆನುಪೂರ್ವಿಯ ವೈಶಿಷ್ಟ್ಯವೇನೆಂಬುದನ್ನು ತಿಳಿದುಕೊಳ್ಳುವುದಕ್ಕೆ – ಇಲ್ಲಿ ಉದಾಹರಿಸಿರುವಷ್ಟೇ ವೇದಭಾಗಗಳನ್ನು ಪರೀಕ್ಷಿಸಿದರೂ ಸಾಕಾಗ-ಬಹುದಾಗಿದೆ. (ಇಲ್ಲಿ ಅವುಗಳ ಮೇಲುಗಡೆ ಹಾಕಿರುವ ಗುರುಲಘುಚಿಹ್ನಗಳಿಂದ ಸುಲಭವಾಗಿ ತಿಳಿಯಬಹುದಾದಂತೆ) ಅವುಗಳಲ್ಲಿ ಗುರ್ವಕ್ಷರಗಳು ಪರಸ್ಪರ ಸಂನಿಹಿತವಾಗುವ ಸಂದರ್ಭಗಳು ಧಾರಾಳವಾಗಿರುವವಾದರೂ, ಲಘ್ವಕ್ಷರಗಳು ಪರಸ್ಪರ ಸಂನಿಹಿತವಾಗಿರುವ ಸಂದರ್ಭಗಳು ಅತ್ಯಂತ ವಿರಳವಾಗಿರುವುದೇ ಆ ಆನುಪೂರ್ವಿಯ ವೈಶಿಷ್ಟ್ಯವಾಗಿದೆ. ಗುರ್ವಕ್ಷರಗಳ ಬಾಹುಳ್ಯದ ಫಲವಾಗಿ ಭಾಷೆಗೆ ಗಾಂಭೀರ್ಯವೂ, ದೀರ್ಘಸ್ವರಗಳ ನಿರಂತರತೆಯಿಂದ ಭಾಷೆಗೊಂದು 'ಗೇಯಭಾವ'ವೂ, ಗುರುಲಘುಗಳು ಅನ್ಯೋನ್ಯವಾಗಿ ಒಂದರಮೇಲೊಂದರಂತೆ ಬರುತ್ತಾ ಹೋದಾಗ ಭಾಷಾಸರಣಿಗೆ (ಧ್ವನಿಭೇದನಿರಪೇಕ್ಷವಾಗಿರುವ) ಒಂದು ಬಗೆಯ ನತೋನ್ನತತ್ವವೂ ಪ್ರಾಪ್ತವಾಗುತ್ತವೆ. ಇದನ್ನು ಮನಗಂಡಾಗ –

ವೇದಭಾಷೆಯಲ್ಲಿ ಪ್ರಕೃತ್ಯಾ ನಿಹಿತವಾಗಿರುವ, ಆತ ಏವ ವೇದಸಂಹಿತೆಗಳಲ್ಲೆಲ್ಲ ಅಪ್ರಯತ್ನವಾಗಿ ಸರ್ವತ್ರ ಉನ್ಮೀಲಿಸಿರುವ – ಸಮಭೂಮಿಯಲ್ಲಿ ಗಮಿಸುವ ಮಹಾನದಿಯ ಪ್ರವಾಹವನ್ನು ಹೋಲುವ – ಗಂಭೀರವೂ 'ಬಂಧುರ'ವೂ ಆದ ಗತಿಗೆ ಪೂರ್ವೋಕ್ತವಾದ ಆ ಆನುಪೂರ್ವಿಯ ವಿಶೇಷತೆಯೇ ಕಾರಣವೆಂಬುದು ನಮಗೆ ಅವಗತವಾಗುತ್ತದೆ. ವೇದಸಂಹಿತೆಗಳ ಯಾವ ಭಾಗವನ್ನಾದರೂ ಛಂದೋವಿನ್ಯಾಸದ ಮೂಲಘಟಕಗಳಾಗಿ, ಎಂದರೆ ಅಕ್ಷರಯುಗ್ಮಗಳಾಗಿ – ವಿಭಜಿಸಿದರೆ, ಆ ಆನುಪೂರ್ವಿಯ ವೈಶಿಷ್ಟ್ಯವು ಹಾಗೂ ವೇದಭಾಷೆಯ ಅಕ್ಷರಗತಿಯ ಅಂತರಾಳಸ್ವರೂಪವು ಪರಿಸ್ಫುಟವಾಗಿ ಗೋಚರಿಸುವಂತಾಗುತ್ತದೆ. ಇದಕ್ಕಾಗಿ – ಹಿಂದೆ ಉದಾಹರಿಸಿದ ವೈದಿಕ ಗದ್ಯಪದ್ಯಗಳಲ್ಲಿ ಕೆಲವನ್ನು ಹಾಗೆ ವಿಭಜಿಸಿ ನೋಡೋಣ:

A. ಪದ್ಯ

೧. ಅಗ್ನಿ । ಮೀಳೇ । ಪುರೋ । ಹಿತಂ ।
ಯಜ್ಞ । ಸ್ಯದೇ । ವಮೃ । ತ್ವಿಜಂ ।
ಹೋತಾ । ರಂ ರ । ತ್ನಧಾ । ತಮಂ ॥ . ॥

೨. ತ್ವಾದ । ತ್ತೇಭೀ । ರುದ್ರ । ಶಂತ । ಮೇಭಿಃ ।
ಶತಂ । ಹಿಮಾ । ಅಶೀ । ಯ ಭೇ । ಷಜೇ । ಭಿಃ ॥
ವ್ಯಸ್ಮ । ದ್ದ್ವೇಷೋ । ವಿತ । ರಂ ವ್ಯಂ । ಹೋ ।
ವ್ಯಮೀ । ವಾಶ್ಚಾ । ತಯ । ಸ್ವಾವಿ । ಷೂಚೀಃ ॥ . ॥

B. ಗದ್ಯ

೧. ಇಡಾ । ದೇವ । ಹೂರ್ಮ । ನುರ್ಯ । ಜ್ಞನೀ । ಬೃ ಹ । ಸ್ಪತಿ ।
ರುಕ್ಥಾ । ಮದಾ । ನಿಶಂ । ಸಿಷದ್ ।
ವಿಶ್ವೇ । ದೇವಾಃ । ಸೂಕ್ತ । ವಾಚಃ । ಪೃಥಿ । ವಿಮಾ । ತರ್ಮಾ ।
ಮಾಹಿಂ । ಸೀಃ ॥ . ॥

೨. ನಮೋ । ಹಿರ । ಣ್ಯಬಾ । ಹವೇ । ಸೇನಾ । ನ್ಯೇದಿ । ಶಾಂಚ । ಪತ ।
ಯೇನ । ಮಃ ॥ . ॥

ಇಲ್ಲಿ ವಿಭಜಿಸಿ ತೋರಿಸಲಾದ ಅಕ್ಷರಯುಗ್ಮಗಳನ್ನು ಗುರುಲಘು ಯೋಗಾನುಗುಣವಾಗಿ ವರ್ಗೀಕರಿಸಿದರೆ – ಅವು ಉಭಯಗುರು, ಏಕಗುರು,

ಮತ್ತು 'ಅಗುರು' (=ಉಭಯ ಲಘು) ಎಂದು ಮೂರು ಬಗೆಯವಾಗುತ್ತವೆ. ಉದಾಹೃತ ಭಾಗಗಳಲ್ಲಿ ಅವುಗಳ ಸಂಖ್ಯೆ ಅನುಕ್ರಮವಾಗಿ ಈ ಕೆಳಗಿನಂತಿದೆ:

A (೧) ಇದರ ೧೨ ಯುಗ್ಮಗಳಲ್ಲಿ – ಉಭಯಗುರು ೪, ಮತ್ತು ಏಕಗುರು ೮.

A (೨) ಇದರ ೧೯ ಯುಗ್ಮಗಳಲ್ಲಿ – ಉಭಯಗುರು ೮, ಏಕಗುರು ೧೦, ಮತ್ತು ಅಗುರು ೧.

B (೧) ಇದರಲ್ಲಿರುವ ೧೯ ಯುಗ್ಮಗಳಲ್ಲಿ – ಉಭಯಗುರು ೭, ಏಕಗುರು ೧೦, ಮತ್ತು ಅಗುರು ೨.

B (೨) ಇದರಲ್ಲಿರುವ ೯ ಯುಗ್ಮಗಳಲ್ಲಿ – ಉಭಯಗುರು ೧, ಏಕಗುರು ೭, ಮತ್ತು ಅಗುರು ೧.

ಹೀಗೆ, ಈ ನಾಲ್ಕು ಭಾಗಗಳಲ್ಲಿರುವ ಒಟ್ಟು ೫೯ ಅಕ್ಷರಯುಗ್ಮಗಳಲ್ಲಿ – ಉಭಯಗುರುಯುಗ್ಮಗಳು ೨೦, ಏಕಗುರುಯುಗ್ಮಗಳು ೩೫, ಮತ್ತು ಅಗುರು-ಯುಗ್ಮಗಳು ೪ – ಆಗಿರುತ್ತವೆ.

ವೇದಭಾಷೆಯ ಮಾದರಿಯಾಗಿ ಇಲ್ಲಿ ಉದಾಹೃತವಾದ ಭಾಗಗಳ ಅಕ್ಷರಯುಗ್ಮಗಳೊಳಗೆ – ಏಕಗುರುಯುಗ್ಮಗಳ ಸಂಖ್ಯೆ ಬಲು ದೊಡ್ಡದಾಗಿರು-ವುದನ್ನೂ ಉಭಯಗುರುಯುಗ್ಮಗಳ ಸಂಖ್ಯೆ ಅದಕ್ಕಿಂತ ಎಷ್ಟೋ ಕಡಮೆ-ಯಾಗಿರುವುದನ್ನೂ, ಅಗುರುಯುಗ್ಮಗಳ ಸಂಖ್ಯೆ ನಗಣ್ಯವೆಂಬಷ್ಟು ಸಣ್ಣದಾಗಿರು-ವುದನ್ನೂ ಈ ಮೇಲಿನ ನಿರೂಪಣೆ ತೋರಿಸಿಕೊಡುತ್ತದೆ; ಮತ್ತು ವೇದಭಾಷೆಯ ಅಕ್ಷರಗತಿವೈಶಿಷ್ಟ್ಯದ ಪ್ರಧಾನಹೇತುವಾವುದೆಂಬುದನ್ನೂ ನಮಗೆ ಖಚಿತಪಡಿಸು-ತ್ತದೆ. ಆ ಹೇತುವಾವುದೆಂದರೆ – ಗುರುಲಘುಗಳು ಒಂದನ್ನಿನ್ನೊಂದು ಬೆಂಬಿಡದೆ ಹಿಂಬಾಲಿಸಿ ಬರುತ್ತಿರುವ ಸಂನಿವೇಶಪರಂಪರೆ. ಆದರೆ ಇದರಿಂದಾಗಿ ಬರ-ಬಹುದಾಗಿದ್ದ ನೀರಸವಾದ ಏಕರೂಪತೆಯನ್ನು – ಅಲ್ಲಲ್ಲಿ ಕಂಗೊಳಿಸುವ ಗುರುಪರಂಪರೆಗಳೂ ಕ್ವಚಿತ್ ತಲೆದೋರುವ ಲಘುಯುಗ್ಮಗಳೂ ಪರಿಹರಿಸುತ್ತವೆ. ಇವೆಲ್ಲದರ ಪರಿಣಾಮವಾಗಿಯೇ ವೇದಭಾಷೆಗೆ ಅನುಪಮವಾದೊಂದು ಗತಿ ಸೌಂದರ್ಯವು ಸಿದ್ಧಿಸಿರುವುದಾಗಿದೆ.

ವೈದಿಕಪದ್ಯಗಳ ಛಂದಃಸ್ವರೂಪವು ಅವ್ಯವಸ್ಥಿತವಾಗಿರುವುದಾದರೂ ಅವುಗಳಲ್ಲಿ ವಿಶಿಷ್ಟವಾದೊಂದು ಗತಿಸೌಂದರ್ಯವಿರುವುದರ ಅನುಭವವಾಗು-ವುದಕ್ಕೆ ಕಾರಣವೇನೆಂಬುದರ ಕುರಿತು ಈವರೆಗೆ ಸೋದಾಹರಣವಾಗಿ ಮಾಡಿದ ವಿವೇಚನೆಯ ಸಾರಾಂಶವೇನೆಂದರೆ – ಆ ಗತಿಸೌಂದರ್ಯವು ವೈದಿಕಪದ್ಯಗಳಲ್ಲಿ ಹೇಗೋ ಹಾಗೆ ವೈದಿಕಗದ್ಯಗಳಲ್ಲಿಯೂ ಹೆಚ್ಚುಕಡಮೆ ಅದೇ ಬಗೆಯಾಗಿ ಅನುಭವಕ್ಕೆ ಬರುತ್ತದೆ; ಇದರಿಂದ, ಅದು ಆ ಭಾಷೆಯಲ್ಲಿ ಪ್ರಕೃತ್ಯಾ ನಿಹಿತವಾಗಿರುವ ಅಕ್ಷರಗತಿಸೌಂದರ್ಯವೇ ಹೊರತು, ಆ ಪದ್ಯಗಳಿಗೆ ಮಾತ್ರ ಮೀಸಲಾದ "ಲಕ್ಷಣ"ವೇನೂ ಅಲ್ಲವೆಂಬುದು ಸ್ಪಷ್ಟವಾಗುತ್ತದೆ; ಮತ್ತು, ಗತಿ-

ಸೌಂದರ್ಯವು ವೈದಿಕಪದ್ಯಗಳ ಲಕ್ಷ್ಯವಾಗಿಲ್ಲದಿದ್ದುದೇ ಅವುಗಳ ಛಂದಃ-ಸ್ವರೂಪವು ಅವ್ಯವಸ್ಥಿತವಾಗಿರುವುದರ ಕಾರಣವಾಗಿದೆ. ಆ ಪದ್ಯಗಳಲ್ಲಿ ಕೆಲವೆಡೆ-ಗಳಲ್ಲಿ ಯತ್ಕಿಂಚಿತ್ ವ್ಯವಸ್ಥೆ ಇರುವಂತೆ ಕಂಡುಬರುವುದಾದರೂ, ಅದು ಉದ್ದೇಶಪೂರ್ವಕವಾಗಿ ಮಾಡಿದ ಪ್ರಯತ್ನಗಳ ಫಲವಾಗಿರದೆ – ರಚನಾ-ಕಾಲದಲ್ಲಿ ಸ್ವಯಂಜಾತ(spontaneous)ವಾಗಿ ಉನ್ಮೀಲಿಸಿರುವ ವಿಶೇಷತೆಯಾಗಿದೆ.

[ವೈದಿಕಛಂದೋಬಂಧಗಳ – ಮುಖ್ಯವಾಗಿ ಅಷ್ಟಾಕ್ಷರಪಾದದ ಗಾಯತ್ರೀ ಚ್ಛಂದದ ಪಾದದ ಉತ್ತರಾರ್ಧಗಳು ಬಹುಧಾ ಲಗಂಲಗಂ ರೂಪದಲ್ಲಿರುವ ಅದೊಂದು ವಿಶೇಷತೆಯನ್ನವಲಂಬಿಸಿ, ವೈದಿಕಛಂದಗಳು ನಾಲ್ಕಕ್ಷರದ ಗಣಗಳಿಂದ ಬದ್ಧವಾಗಿವೆಯೆಂದು ಸಾಧಿಸುವ ಪ್ರಯತ್ನವನ್ನು 'ಕನ್ನಡ ಕೈಪಿಡಿ'ಯಲ್ಲಿ (ಮೈಸೂರು ವಿ.ವಿ.ನಿಲಯ; ೧೯೩೮ರ ಮುದ್ರಣ) ಮಾಡಲಾಗಿದೆ. ಆದರೆ ಆ ಉತ್ತರಾರ್ಧಗಳ ನಾಲ್ಕಕ್ಷರಗಳ ಉಚ್ಚಾರಕಾಲಪರಿಮಾಣವೂ ಪೂರ್ವಾರ್ಧಗಳ ನಾಲ್ಕಕ್ಷರಗಳ ಉಚ್ಚಾರಕಾಲಪರಿಮಾಣವೂ ಸಮಾನವಾಗಿರುತ್ತಿದ್ದರೆ, ಆ ಗಣ ವಿಭಾಗವು ಉಪಯುಕ್ತವೆನಿಸಬಹುದಾಗಿತ್ತು. ವಸ್ತುಸ್ಥಿತಿ ಹಾಗಿಲ್ಲದಿರುವಾಗ, ಆ ಗಣವಿಭಾಗಪ್ರಯತ್ನದಿಂದ ಲಭಿಸುವ ಪ್ರಯೋಜನವೇನು? ಗಣವಿಭಾಗಕ್ಕೂ ಬಂಧದ ಛಂದೋಗತಿಗೂ ಮೇಳವಿರುವಲ್ಲಿ ಮಾತ್ರ ಅದಕ್ಕೆ ಸ್ವಾಭಾವಿಕವಾದ ಔಚಿತ್ಯವಿರುತ್ತದೆ. ಹಾಗಿಲ್ಲದಿರುವಲ್ಲಿ ಅದು ಬರಿಯ 'ಗಣಿತ'ವಾಗುತ್ತದೆ. ಹಾಗಾ-ದರೆ, ಪಿಂಗಳಾಚಾರ್ಯನ ಮಯರಸಾದಿ ಗಣಗಳಿಗೂ ಅವುಗಳಿಂದ ಲಕ್ಷಿತ-ವಾಗುವ 'ವೃತ್ತ'ಗಳ ಗತಿಗೂ ಮೇಳವೆಲ್ಲಿದೆ? ಇದಾದರೂ ತತ್ತುಲ್ಯವಲ್ಲವೇ? – ಎಂದು ಪ್ರಶ್ನಿಸಿದರೆ, ಉತ್ತರ ಹೀಗೆ: ಹೌದು; ಮಯರಸಾದಿಗಳಿಗೂ ವೃತ್ತಗಳ ಗತಿಗೂ – ದಂಡಕಗತಿಯ ವೃತ್ತಗಳ ಹೊರತು – ಮೇಳವಿಲ್ಲವೆಂಬುದು ನಿಜ. ಆದರೆ ಮಯರಸಾದಿ ಗಣವಿಭಾಗವು – ಗುರುಲಘುಸ್ಥಿರವಾದ 'ವೃತ್ತ'ಗಳ ಸ್ವರೂಪವನ್ನು ಸಂಪೂರ್ಣವಾಗಿ ಮತ್ತು ಖಚಿತವಾಗಿ ತಿಳಿಸುವ ಸುಲಭೋ-ಪಾಯವಾಗಿ ನಿರ್ಮಿತವಾದ ಗಣಿತಕ್ರಿಯೆ. ಪ್ರಸ್ತುತವಾದ ವೈದಿಕಬಂಧಗಳ 'ಚತುರಕ್ಷರಗಣ' ವಿಭಾಗವು ಅಂತಹ ಯಾವ ಪ್ರಯೋಜನವನ್ನೂ ಕೊಡ-ಲಾರದು. ಏಕೆಂದರೆ ವೃತ್ತಗಳಲ್ಲಿರುವ ಹಾಗೆ ವೈದಿಕಛಂದಗಳಲ್ಲಿ ಗುರುಲಘು-ಸ್ಥಾನವ್ಯವಸ್ಥೆ ಇಲ್ಲದೆ, ಪಾದಾಕ್ಷರಸಂಖ್ಯಾಸಮತೆ ಮಾತ್ರ (ಇದೂ ನಿರಪವಾದವಲ್ಲ.) ಇರುವುದರಿಂದ, ಗಣವಿಭಾಗದ ಫಲವಾಗಿ ಪಾದಾಕ್ಷರಸಂಖ್ಯೆಗಿಂತ ಹೆಚ್ಚಿನದೇನೂ ಲಭ್ಯವಾಗುವಂತಿಲ್ಲ. ಈ ಕಾರಣದಿಂದಾಗಿ – ಉದಾ: "ಗಾಯತ್ರಿಯ ಪಾದದ ಅಕ್ಷರಸಂಖ್ಯೆ ಎಂಟು" ಎಂದರೂ, "ಗಾಯತ್ರಿಯ ಪಾದದಲ್ಲಿ ಚತುರಕ್ಷರಗಣಗಳು ಎರಡು" ಎಂದರೂ ಅರ್ಥವೂ ಒಂದೇ, ಪ್ರಯೋಜನವೂ ಅಷ್ಟೇ ಎಂದಾಗುತ್ತದೆ.]

ಹೀಗೆ, ವೈದಿಕಛಂದೋಬಂಧಗಳ ಗತಿಸ್ವರೂಪವು ಅವ್ಯವಸ್ಥಿತವಾಗಿರುವು-ದಾದರೂ ಅವುಗಳಲ್ಲಿರುವ ಗಂಭೀರವಾದೊಂದು ಶೋಭಾತಿಶಯದ ಅನುಭವವು

ಎಲ್ಲರಿಗೂ ಆಗುತ್ತದೆ. ಆ ಶೋಭೆಗೆ ಮನಸೋತ ಕನ್ನಡಕೈಪಿಡಿಕಾರರು ಹೀಗೆ ಹೇಳುತ್ತಾರೆ.

"ಈ ವೈದಿಕವೃತ್ತಗಳು ಸಂಸ್ಕೃತದಲ್ಲಿಯೇ ಮುಂದೆ ಬಿಟ್ಟುಹೋದುವು. ಕನ್ನಡ ಕವಿಗಳಿಗೂ ಕಣ್ಮರೆಯಾದುವು. ಶ್ಲೋಕವೊಂದು ಸ್ವಲ್ಪ ಆಸೆದೋರಿಸಿ ದಕ್ಕದೆಹೋದ ಹಾಗೆ ಕಾಣುತ್ತದೆ. ಮುಂದೆ ಬರುವ ಕವಿಗಳಾದರೂ ಜೀವ-ಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಸೌಂದರ್ಯದ ಕಡೆಗೆ ಕಣ್ಣು ತಿರುಗಿಸಬಹುದಲ್ಲವೆ?" (ಕನ್ನಡ ಕೈಪಿಡಿ, ೧೯೩೬, ಪುಟ ೧೯)

ಆದರೆ, ಅವರೇ ಹೇಳುವಂತೆ – ಅನುಷ್ಟುಪ್ ಶ್ಲೋಕವು ಕನ್ನಡಕ್ಕೆ ದಕ್ಕದೆ ಹೋಗಲು ಕಾರಣವೇನೆಂಬುದನ್ನು ಅವರು ಚಿಂತಿಸಿದ ಹಾಗಿಲ್ಲ; ಚಿಂತಿಸಿದ್ದರೆ ಆ ಮುಂದಿನ ಮಾತನ್ನು ಅವರು ಹೇಳುತ್ತಿದ್ದಿಲ್ಲ. ವೇದಭಾಷೆಯಲ್ಲಿರುವ ಗುರು-ಬಾಹುಳ್ಯವಾಗಲಿ, ಗುರುಲಘುಗಳು ಒಂದನ್ನಿನ್ನೊಂದು ಅನುಸರಿಸುವ ಅಕ್ಷರಾ-ನುಪೂರ್ವಿಯಾಗಲಿ ಕನ್ನಡ ನುಡಿಯಲ್ಲಿ ಇಲ್ಲದಿರುವಾಗ – ಆ ಛಂದೋ ರೂಪಗಳನ್ನು ಕನ್ನಡದಲ್ಲಿ ಮೂಡಿಸುವುದು ಹೇಗೆ? ಒಂದುವೇಳೆ, ಅಂತಹ ದುಷ್ಕರಪ್ರಯತ್ನಕ್ಕೆ ಕೈಹಾಕಿದರೂ – ನಾಲ್ಕಾರು ಪದ್ಯಗಳನ್ನು ಕಟ್ಟಬಹುದೇ ವಿನಾ, ಆ ಬಗೆಯ ಬಂಧಗಳಲ್ಲಿ ನಿರರ್ಗಳವಾಗಿ ಕನ್ನಡ ಕವಿತಾರಚನೆ ಮಾಡುವುದು ಅಶಕ್ಯ. ವೈದಿಕಬಂಧಗಳ ಅಚ್ಚಿನಲ್ಲಿಯೇ ಎರಕಹೊಯ್ದು ನಯಗೊಳಿಸಿದ ಲೌಕಿಕಛಂದೋಬಂಧಗಳಾಗಿರುವ ಅನುಷ್ಟುಪ್ ಶ್ಲೋಕವೂ ಇಂದ್ರವಜ್ರ ಉಪೇಂದ್ರ ವಜ್ರ ವಂಶಸ್ಥವೃತ್ತಗಳೂ – ತುಲನಾತ್ಮಕವಾಗಿ ಹೊಸಗನ್ನಡಕ್ಕಿಂತ ಗುರ್ವಕ್ಷರಾ-ಧಿಕ್ಯವುಳ್ಳ ಹಳಗನ್ನಡದಲ್ಲಿಯೇ ಅಲ್ಲೊಂದು ಇಲ್ಲೊಂದು ಮಾತ್ರ ತಲೆದೋರಿ ನಿಷ್ಕ್ರಾಂತವಾಗಿರುವಾಗ, ಹೊಸಗನ್ನಡದಲ್ಲಿ ವೈದಿಕಛಂದಃಸ್ವರೂಪವು ಉನ್ಮೀಲಿಸಿ ಮೆರೆಯುವಂತಾಗಲಿ ಎಂದು ಹಾರೈಸುವುದು ವ್ಯರ್ಥ. ಪ್ರತಿಯೊಂದು ಭಾಷೆಗೂ ತನ್ನದೇ ಆದೊಂದು ಅಕ್ಷರಗತಿಸ್ವರೂಪವಿರುತ್ತದೆ. ಆ ಸ್ವರೂಪಕ್ಕೆ ಸಂವಾದಿ-ಯಾಗಬಲ್ಲ ಗುರುಲಘುವಿನ್ಯಾಸಕ್ಕೆ ಅಳವಡುವ ಛಂದೋಬಂಧಗಳು ಮಾತ್ರ ಆ ಭಾಷೆಯಲ್ಲಿ ಬೆಳೆಯುತ್ತವೆ, ಬಾಳುತ್ತವೆ.

[ವೈದಿಕ ಪದ್ಯಗಳ ಅನ್ಯಾದೃಶವಾದೊಂದು ಶೋಭೆಗೆ ಆ ಛಂದಃ ಸ್ವರೂಪವು ಏಕಮೇವ ಕಾರಣವೆಂದು ಕನ್ನಡಕೈಪಿಡಿಕಾರರು ಭಾವಿಸಿದಂತಿದೆ. ಆದರೆ ಆ ಶೋಭೆಗೆ ಆ ಛಂದಃಸ್ವರೂಪವು ಎಷ್ಟರಮಟ್ಟಿಗೆ ಕಾರಣವಾಗಿದೆಯೋ ಅಷ್ಟಕ್ಕಿಂತ ವೀಸತೂಕವೂ ಕಡಮೆಯಲ್ಲದ ಕಾರಣವು ವೈದಿಕಭಾಷೆಯ 'ವರ್ಣ-ಧ್ವನಿ'ಗಳ ಓಜಸ್ಸಾಗಿದೆ. ಯಾವುದಾದರೊಂದು ಬೇರೆ ಭಾಷೆಗೆ ಆ ಛಂದೋ-ರೂಪಗಳನ್ನು ಅಳವಡಿಸಿದಾಗ ಇದು ಸ್ಪಷ್ಟವಾಗುತ್ತದೆ. ಈ ಕೆಳಗಿನ ಉದಾ-ಹರಣಗಳಿಂದ ಇದು ವಿಶದವಾಗದಿರದು:

ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ ॥
ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಂ ॥ . ॥

(ಪುರುಷಸೂಕ್ತ-೧)

ಹಿರಣ್ಯವರ್ಣಾಂ ಹರಿಣೀಂ । ಸುವರ್ಣರಜತಸ್ರಜಾಂ ॥
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ । ಜಾತವೇದೋ ಮ ಆವಹ ॥ . ॥

(ಶ್ರೀಸೂಕ್ತ-೧)

ಗಂಧದ್ವಾರಾಂ ದುರಾಧರ್ಷಾಂ । ನಿತ್ಯಪುಷ್ಟಾಂ ಕರೀಷಿಣೀಂ ॥
ಈಶ್ವರೀಂ ಸರ್ವಭೂತಾನಾಂ । ತಾಮಿಹೋಪಹ್ವಯೇ ಶ್ರಿಯಂ ॥ . ॥

(ಶ್ರೀಸೂಕ್ತ-೯)

ಇಲ್ಲಿ ಉದಾಹರಿಸಿದರುವ ವೈದಿಕ ಅನುಷ್ಟುಪ್ ಛಂದೋಬಂಧಗಳೊಡನೆ ಈ ಮುಂದಿನ ಕನ್ನಡ ಅನುಷ್ಟುಪ್ ಛಂದೋಬಂಧಗಳನ್ನು ಹೋಲಿಸಿ ನೋಡಿರಿ;

ಪೆಱನಾವಂ ಧರಾಚಕ್ರ । ಕ್ಕೆಱೆಯಂ ಕೆಳೆಯಪ್ಪವಂ ॥
ನೆಱೆಯಾರೆಣೆಯೆಂಬನ್ನಂ । ಕುಱುತಬ್ಧಿಗೆ ಬನ್ನಮಂ ॥ , ॥

(ಕವಿರಾಜಮಾರ್ಗ ೨-೧೨೭)

ಹಗಲೂ ಇರುಳೂ ತಾವು । ತಿರುಗುತ್ತಿರುವಂದದಿ ॥
ಸುಖವೂ ದುಃಖವೂ ಮೇಲೆ । ಮೇಲೆ ಬಪ್ಪುದು ಮಂದಿಗೆ ॥ ೧ ॥
ಎಲ್ಲಕೂ ಕರ್ತೃವಾದೇವ । ನದಕ್ಕಾನು ನಿಮಿತ್ತವೈ ॥
ಸೂಜಿ ಚಿಪ್ಪಿಗನೊಪ್ಪಿಂದೆ । ನೂಲಂ ಬಟ್ಟೆಯೊಳೊಯ್ವವೋಲ್ ॥ ೨ ॥

(ಮುಳಿಯ ತಿಮ್ಮಪ್ಪಯ್ಯನವರ "ಹಗಲಿರುಳು")

ವೈದಿಕಛಂದೋಬಂಧಗಳಿಗೆ ಸಿದ್ಧಿಸಿರುವ ಶೋಭಾತಿಶಯದಲ್ಲಿ ಆ ಛಂದಃಸ್ವರೂಪಗಳ ಪಾಲು ಎಷ್ಟು, ಆ ಭಾಷೆಯ ವರ್ಣಧ್ವನಿಗಳ ಪಾಲು ಎಷ್ಟು ಎಂಬುದರ ನಿರ್ಣಯವು ನಿರ್ದುಷ್ಟವೂ ಸುಕರವೂ ಆಗುವುದಕ್ಕಾಗಿ – ವೈದಿಕ ಅನುಷ್ಟುಪ್ ಬಂಧದ ಛಂದಃಸ್ವರೂಪಕ್ಕೂ, ಕನ್ನಡದ ಅದೇ ಬಂಧದ ಛಂದಃ ಸ್ವರೂಪಕ್ಕೂ ಗರಿಷ್ಠಪ್ರಮಾಣದ ಸಾಮ್ಯವಿರುವ – ಅರ್ಥಾತ್ ಲೌಕಿಕಸಂಸ್ಕೃತದ ಅನುಷ್ಟುಪ್ ಬಂಧಗಳ ರೂಪವನ್ನೇ (ಯಾದೃಚ್ಛಿಕವಾಗಿ) ಪಡೆದಿರುವ – ವೈದಿಕ ಅನುಷ್ಟುಪ್ ಛಂದಗಳನ್ನು ಹುಡುಕಿ ಹೆಕ್ಕಿ, ಇಲ್ಲಿ ಉದಾಹರಿಸಿದ್ದೇನೆ. ಇದರಿಂದ, ಈ ಕನ್ನಡ ಹಾಗೂ ವೈದಿಕ ರೂಪಗಳಲ್ಲಿರುವ ಗಾಂಭೀರ್ಯದ ತಾರತಮ್ಯವು ಸುಸಂವೇದ್ಯವಾಗಬಹುದಾಗಿದೆ.]

ಪ್ರತಿಯೊಂದು ಭಾಷೆಗೂ ತನ್ನದೇ ಆದೊಂದು ಅಕ್ಷರಗತಿಸ್ವರೂಪ-ವಿರುವಂತೆ, ತನ್ನದೇ ಆದೊಂದು ವರ್ಣಧ್ವನಿರೂಪವೂ ಇರುತ್ತದೆ; ಹಾಗೂ ಅವೆರಡನ್ನೂ ಅವಲಂಬಿಸಿದ ಗುಣವಿಶೇಷವೊಂದು ಆ ಭಾಷೆಯಲ್ಲಿ ಪ್ರಾಧಾನ್ಯ-ವನ್ನು ಪಡೆಯುತ್ತದೆ. ವೇದಭಾಷೆಯ ಸಹಜವಾದೊಂದು ಗಾಂಭೀರ್ಯವು

ಕನ್ನಡದಲ್ಲಿ ಮಾತ್ರವಲ್ಲ, – ಉದ್ದೇಶಪೂರ್ವಕವಾಗಿ ಹಾಗೆ ರಚಿತವಾದ ಹೊರತು – ಲೌಕಿಕಸಂಸ್ಕೃತದಲ್ಲಿಯೂ ಕಾಣುವಂತಿಲ್ಲ. ಅಂತೆಯೇ – ತಿರುಳ್ಗನ್ನಡದ ಲಾಲಿತ್ಯವು ವೇದಭಾಷೆಯಲ್ಲಿ ಗೋಚರಿಸುವಂತಿಲ್ಲ. ಬೇರೆ ಬೇರೆ ಭಾಷೆಗಳೆಲ್ಲ ವಾಗ್ದೇವಿಯ ಬೇರೆಬೇರೆ ಅವಯವಗಳು; ಅವು ಒಂದರಂತೆ ಇನ್ನೊಂದಿಲ್ಲ; ಅವುಗಳಲ್ಲಿ ಒಂದೊಂದರ ಶೋಭೆ ಒಂದೊಂದು ವಿಧ:–

ನಮಸ್ತೇ ರುದ್ರ ಮನ್ಯವ ಉತೋ ತ ಇಷವೇ ನಮಃ ।
ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತ ತೇ ನಮಃ ॥ ೧ ॥

ಯಾ ತಾ ಇಷುಃ ಶಿವತಮಾ ಶಿವಂ ಬಭೂವ ತೇ ಧನುಃ ।
ಶಿವಾ ಶರವ್ಯಾ ಯಾ ತವ ತಯಾ ನೋ ರುದ್ರ ಮೃಡಯ ॥ ೨ ॥

ಯಾ ತೇ ರುದ್ರ ಶಿವಾ ತನೂರಘೋರಾ ಪಾಪಕಾಶಿನೀ ।
ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ ॥ ೩ ॥

ಯಾಮಿಷುಂ ಗಿರಿಶಂತ ಹಸ್ತೇ ಬಿಭರ್ಷ್ಯಸ್ತವೇ ।
ಶಿವಾಂ ಗಿರಿತ್ರ ತಾಂ ಕುರು ಮಾ ಹಿಂಸೀಃ ಪುರುಷಂ ಜಗತ್ ॥ ೪ ॥

(ಯಜುರ್ವೇದ ; ರುದ್ರಾಧ್ಯಾಯ)

– ಇಂತಹ ಸಹಜಗಾಂಭೀರ್ಯ, ಈ ಓಜಸ್ಸು, ವೇದಭಾಷೆಗೆ ಮೀಸಲು.

ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮಾ ।
ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥ . ॥

(ವಾಲ್ಮೀಕಿರಾಮಾಯಣ)

– ಇಂತಹ ಸಹಜಸ್ನಗ್ಧತೆ( ಲೌಕಿಕ) ಸಂಸ್ಕೃತದಲ್ಲಿ ಹೊರತು, ಬೇರೆ ಭಾಷೆಗಳಲ್ಲಿ ಅಲಭ್ಯ.

ತೆಗೆದುದಗ್ಗದ ತಂಪು, ನದಿಸರ –।
ಸಿಗಳ ತಡಿಯಲಿ ಹಜ್ಜೆಯಾದುದು, ।
ಹಗಲ ಹಾವಸೆ ಹರಿದುದೋಕರಿಸಿದುದು ಹಿಮ ಜಲವ, ॥
ಸೆಗಳಿಕೆಗಳೇರಿದವು, ನೋಟಕೆ ।
ಸೊಗಸಿದವು ನೆಳಲುಗಳು, ತಂಗಾ – ।
ಳಿಗೆ ವಿಹಾರಿಸಿ ಮೆಯ್ಯ ತೆತ್ತುದು ಕೂಡೆ ಜನನಿಕರ ॥ . ॥

– (ಗದುಗಿನ ಭಾರತ)

– ಇಂತಹ ಅಕೃತಕಲಾಲಿತ್ಯ ಕನ್ನಡದ ಸಹಜಸೌಭಾಗ್ಯ.



# ಕನ್ನಡ ಛಂದೋವಿಭಾಗ

## ಕನ್ನಡ ಛಂದಸ್ಸು

- ‘ಕನ್ನಡ ಛಂದಸ್ಸು’ ನಿಬಂಧ : ಪೂರ್ವಭಾಗ
- ‘ಕನ್ನಡ ಛಂದಸ್ಸು’ ನಿಬಂಧ : ಉತ್ತರಭಾಗ
- ಪರಿಶಿಷ್ಟ ೧
- ಪರಿಶಿಷ್ಟ ೨
- ಪರಿಶಿಷ್ಟ ೩
- ಪರಿಶಿಷ್ಟ ೪
- ಅವಶಿಷ್ಟ
- ಅನುಬಂಧ ೧
- ಅನುಬಂಧ ೨
- ಅನುಬಂಧ ೩
- ಅನುಬಂಧ ೪

❁ "....ತ್ರಿಮೂರ್ತಿಗಣಘಟಿತವಾದ 'ಕನ್ನಡಜಾತಿ'ಗಳು ಸ್ವತಂತ್ರ ಛಂದೋಬಂಧಗಳು.................... ನಾನು ಹೇಳುವುದೇನೆಂದರೆ – ಕನ್ನಡಿಗರ ಮೋರೆಯಲ್ಲಿ ಮೀಸೆ ಹೇಗೆ ಸ್ವಾಭಾವಿಕವಾಗಿ, ತಾನಾಗಿ ಮೊಳೆಯಿತೋ ಹಾಗೆಯೇ – ಕನ್ನಡನುಡಿಯಲ್ಲಿ 'ಕನ್ನಡ-ಜಾತಿ'ಗಳು ಹುಟ್ಟಿದುವು; ಮತ್ತು ಅವುಗಳ ರಚನಾವಿಧಾನದಲ್ಲಿ ಸ್ವಯಂಸಿದ್ಧವಾಗಿದ್ದ ನಿಯಮವಿಶೇಷಗಳನ್ನು ಕಂಡುಕೊಂಡ ಛಂದೋಭಿಜ್ಞರು ತ್ರಿಮೂರ್ತಿಗಣಗಳನ್ನು ಅನುಗೊಳಿಸಿದರು ಎಂಬುದಾಗಿದೆ."

– **ಸೇಡಿಯಾಪು ಕೃಷ್ಣ ಭಟ್ಟ**
'ಕನ್ನಡ ಛಂದಸ್ಸು' ಕೃತಿಯಲ್ಲಿ

# ಕನ್ನಡ ಛಂದಸ್ಸು

## ಪೂರ್ವಭಾಗ

{ಗತಿನಿಯಮದಿಂದ ರಮಣೀಯತೆ}

ಛಂದಃಶಾಸ್ತ್ರವು[1] – ಬಡಗಿಯ ಮಟ್ಟದಂತೆ – ಪದ್ಯದ ಬಾಹ್ಯ-ಸ್ವರೂಪವನ್ನಳೆಯುವ ಒಂದು ಅಳತೆಯ ಕೋಲೆಂದರೂ ಸಲ್ಲಬಹುದು. ಇದರ ಊಳಿಗವು ಇಷ್ಟು ಅಲ್ಪವಾದುದಾದರೂ, ಅದರ ನಿಯಮದ ಒಲವಿಗೆ ತನ್ನ ಸ್ವಾತಂತ್ರ್ಯವನ್ನು ಮಾರಿಯೇ ಎಂತಹ ವರಕವಿಯಾದರೂ ತನ್ನ ರಚನೆಯನ್ನು ಮಾಡುತ್ತಾನೆ; ತಾನು ಮಾಡುವ ಕೆಲಸಗಳಲ್ಲಿ ಕೈಯಿಕ್ಕಿ ತನ್ನ ಉಪಕರಣಗಳನ್ನು ಅಡಿಮೇಲುಮಾಡಿ 'ಲೂಟಿ' ಮಾಡುವ ತನ್ನ ಮಕ್ಕಳ ಕಾಟವನ್ನು ಸಹಿಸುತ್ತ, ಅವುಗಳ ಒಲವಿನಂತೆ ಆಡಗೊಟ್ಟು ತಾನೂ ಸಂತೋಷದಿಂದ ಅವುಗಳ ಆಟದಲ್ಲಿ ಸೇರಿ ಅದರಲ್ಲಿಯೇ ತನ್ನ ಕೆಲಸವನ್ನು ನೆರವೇರಿಸಿಕೊಳ್ಳುವ ಜಾಣೆಯಾದ ಗೃಹಿಣಿಯಂತೆ – ಛಂದೋಬಂಧವನ್ನು ಕೊರಗಿಸದೆ ತನ್ನ ಭಾವಗಳನ್ನು ರಸಿಕರಿಗೆ ಸಮರ್ಪಿಸುತ್ತಾನೆ. ಹೀಗೆ ಪರಾಧೀನತೆಯಲ್ಲಿ ಸಂತೋಷಪಡಬೇಕಾದರೆ, ತಾಯಿಯಲ್ಲಿರುವ ಒಂದು ಪ್ರಕೃತಿ ಅಥವಾ ಪ್ರವೃತ್ತಿ ಕವಿಯಲ್ಲಿಯೂ ಇರಬೇಕು; ಮತ್ತು, ಛಂದಸ್ಸಿನ ಕಾಟವಿಲ್ಲದ ಗದ್ಯದಲ್ಲಿ ರಚನೆ ಮಾಡುವ – ಮಕ್ಕಳಿಲ್ಲ-ದವಳಲ್ಲಿರುವಂತಹ – ಸ್ವಾತಂತ್ರ್ಯದೊಂದು ಸವಿಗಿಂತ ಹೆಚ್ಚಿನ ಸವಿಯನ್ನೀಯುವ ಒಂದು ಗುಣವಿಶೇಷವು ಛಂದಸ್ಸಿನಲ್ಲಿರಬೇಕು – ಎಂದು ತಿಳಿಯಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ, ಪದ್ಯದಲ್ಲಿರುವ ನಿಯಮಬದ್ಧವಾದ ಗುರುಲಘು ಗತಿಯ ಸೌಂದರ್ಯವೇ ಕವಿಯನ್ನು ವಶೀಕರಿಸುವ ಆ ಗುಣವಿಶೇಷವೆಂದು ಗೊತ್ತಾಗುವುದು. ಒಬ್ಬನೋ ಒಬ್ಬಳೋ ಸಾಮಾನ್ಯವಾಗಿ ನಡೆಯುತ್ತಿರುವಾಗ ನಮ್ಮ ಕಣ್ಮನಗಳು ಆ ಕಡೆಗೆ ಆಕರ್ಷಿತವಾಗುವುದಕ್ಕಿಂತ, ಆ ವ್ಯಕ್ತಿ ನರ್ತಿಸುತ್ತಿರುವಾಗ ಎಷ್ಟೆಷ್ಟೋ ಹೆಚ್ಚಾಗಿ ಆಕರ್ಷಿತವಾಗುವುದಕ್ಕೆ – ಗತಿಯ ನಿಯಮನದಿಂದ ಉಂಟಾಗುವ ಸೌಂದರ್ಯವೇ ಕಾರಣವಾಗಿರುತ್ತದೆ. ಅಂತೆಯೇ – ನಡೆಯಲ್ಲಿ ಹೇಗೋ ಹಾಗೆ ಮಾತಿನಲ್ಲಿಯೂ, ಕಾಲನಿಯಮ ಗತಿನಿಯಮಗಳು ಒಂದು ರಮಣೀಯತೆಯನ್ನುಂಟುಮಾಡುತ್ತವೆ. ಇದರಿಂದಲೇ ಗದ್ಯಕ್ಕಿಂತ ಪದ್ಯವು ಹೆಚ್ಚು ಆಕರ್ಷಕವಾಗಿರುವುದಾಗಿದೆ.

---

1. 'ಛಂದಃಶಾಸ್ತ್ರ' ಎಂಬುದಕ್ಕೆ ಇಲ್ಲಿ 'ಛಂದೋನಿಯಮಗಳು' ಎಂದರ್ಥ.

{'ಛಂದೋಗತಿ' ಪ್ರಕೃತಿಸಹಜ}

ಅಳತೆಯ ಕೋಲು ಮನುಷ್ಯಕೃತ. ಆದರೆ ಅದರ ನಿರ್ಮಾಣಕ್ಕೆ ಆಧಾರವಾಗಿರುವ ಉದ್ದಗಲಗಳು ಮನುಷ್ಯಕೃತವಲ್ಲ; ಅವು ಪ್ರಕೃತಿಸಹಜ. ಹಾಗೆಯೇ ಛಂದಃಶಾಸ್ತ್ರಕ್ಕೆ ಆಧಾರವಾಗಿರುವ ಗುರುಲಘುಸರಣಿರೂಪವಾದ ಛಂದೋಗತಿಯೂ ಪ್ರಕೃತಿಸಹಜವೇ ಆಗಿದೆ. ಅಕ್ಷರಗಳಿಗೆ ಗುರುತ್ವಲಘುತ್ವಗಳನ್ನು ಕೊಡುವುದು ಅಕ್ಷರೋಚ್ಚಾರಕ್ಕೆ ಬೇಕಾದ ಕಾಲವೇ ಆಗಿರುತ್ತದೆ. ಆದುದರಿಂದ 'ಛಂದಸ್ಸು' ಎಂಬುದನ್ನು, ತಾತ್ತ್ವಿಕವಾಗಿ ಹೇಳುವುದಾದರೆ, ಅಕ್ಷರಕಾಲಗಳ ಗತಿ ಎನ್ನಲೂಬಹುದು.

* * * * *

{ಸಮ ವಿಷಮ ಗತಿಗಳು}

ಹೀಗೆ ತಾತ್ತ್ವಿಕವಾಗಿ ನೋಡಿದಾಗ, ಛಂದಸ್ಸೆಂಬುದು ಗುರುಲಘು ರೂಪವಾದ ಕಾಲದ ಗತಿಯೆಂಬುದು ಗೊತ್ತಾಗುತ್ತದೆ. ಈ ಗತಿಯಲ್ಲಿ ಎರಡು ವಿಧಗಳಿವೆ: ಒಂದು ನಿಯತವಾದ ಗತಿ; ಇನ್ನೊಂದು ಅನಿಯತವಾಗಿ ಬೇಕಾ-ದಂತೆ ಹರಿಯುವ ಗತಿ. ಈ ನಿಯತವಾದ ಗತಿಗೂ ನಮ್ಮ 'ಅಳತೆಯ ಕೋಲಿ'ಗೂ ಸಂಬಂಧವಿಲ್ಲ. ನಿಯತಗತಿಯೂ ಎರಡು ವಿಧವಾಗಿರುತ್ತದೆ: ಅವುಗಳಲ್ಲೊಂದು – 'ಸಮಗತಿ', ಎಂದರೆ ಸಮಾಂತರಗಳಲ್ಲಿ ನಿಲ್ಲುತ್ತಾ ನಡೆ-ಯುವ ಲಯಬದ್ಧಗತಿ; ಇನ್ನೊಂದು – 'ವಿಷಮಗತಿ' ಎಂದರೆ ವಿಷಮಾಂತರ-ಗಳಲ್ಲಿ ನಿಂತು ನಡೆಯುವ (ಲಯಬದ್ಧವಲ್ಲದ) ಗತಿ.[2] ಇವಿಷ್ಟೇ ಗತಿಗಳಿಂದ

---

2. {ಧ್ರುವಗತಿ ಮತ್ತು ಅವಕೃಷ್ಟಗತಿಗಳೆಂದರೆ ಸಮಗತಿ ವಿಷಮಗತಿಗಳು} "ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ (೧೯೩೩) ಪ್ರಕಟವಾದ ಈ ನಿಬಂಧದಲ್ಲಿ 'ಸಮಗತಿ'ಯನ್ನು "ಧ್ರುವಗತಿ" ಎಂದೂ, "ವಿಷಮಗತಿ"ಯನ್ನು "ಅಪಕೃಷ್ಟಗತಿ" ಎಂದೂ ಹೆಸರಿಸಲಾಗಿದೆ. ಸಮಗತಿಯನ್ನು ಧ್ರುವಗತಿ (= ತಾಳಬದ್ಧಗತಿ) ಎಂದು ಹೇಳಿದ್ದರಲ್ಲಿ ತಪ್ಪೇನೂ ಇಲ್ಲವಾದರೂ, ವಿಷಮಗತಿ-ಯನ್ನು "ಅಪಕೃಷ್ಟಗತಿ" ಎಂದು ಹೆಸರಿಸಿದ್ದು ಪ್ರಾಮಾದಿಕ. ಭರತನ ನಾಟ್ಯಶಾಸ್ತ್ರದಲ್ಲಿರುವ ಈ ಶಬ್ದದ ಅರ್ಥವನ್ನು ನಾನು ಅಂದು ತಪ್ಪಾಗಿ ಗ್ರಹಿಸಿದುದೇ ಆ ಅಪಪ್ರಯೋಗಕ್ಕೆ ಹೇತು. ವಸ್ತುತಃ ಆ ಶಬ್ದದ ರೂಪವೂ 'ಅಪಕೃಷ್ಟ' ಎಂದಲ್ಲ; ನನಗೆ ಅಂದು ಲಭಿಸಿದ್ದು ಅಪಪಾಠ. ಅದರ ಶುದ್ಧರೂಪವು 'ಅವಕೃಷ್ಟ' ಎಂದಾಗಿದೆ. ಅವಕೃಷ್ಟ ಎಂದರೆ – ಕರ್ಷಣ ಮಾಡಿ ವಿಲಂಬೀಕರಿಸಿದ' ಎಂಬರ್ಥವೇ ಹೊರತು, 'ವಿಷಮ' ಎಂದಲ್ಲ. ನನ್ನ ತಪ್ಪು ನನ್ನ ಅರಿವಿಗೆ ಬಂದದ್ದು ಆ ನಿಬಂಧವು ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿ ಎಷ್ಟೋ ವರ್ಷಗಳು ಕಳೆದ ಮೇಲೆ. ನನ್ನಿಂದ ಆಗಿಹೋದ ಆ ಪ್ರಮಾದಕ್ಕಾಗಿ ಪಶ್ಚಾತ್ತಾಪಪೂರ್ವಕ ಕ್ಷಮಾಯಾಚನೆ ಮಾಡುತ್ತಿದ್ದೇನೆ.

ನನ್ನ ಈ ತಪ್ಪು ಕೇವಲ ನನ್ನದಾಗಿ ಉಳಿಯದೆ, ಆ ನಿಬಂಧವನ್ನು ಬಹಳವಾಗಿ ಮೆಚ್ಚಿದ್ದ ಹಿರಿಯ ವಿದ್ವನ್ಮಹನೀಯರೊಬ್ಬರಿಗೂ ತಗಲಿದುದು ಮತ್ತಷ್ಟು ಶೋಚನೀಯವಾಗಿದೆ. ಆ ಮಹನೀಯರು, ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನದ ಅಧ್ಯಕ್ಷ

ಸಮಸ್ತವಾಙ್ಮಯವು ರೂಪಿತವಾಗುತ್ತದೆ. ಅನಿಯತ ಗುರುಲಘುಗತಿಯಿಂದ ಗದ್ಯ ಉಂಟಾಗುತ್ತದೆ; ನಿಯತಗತಿಯಿಂದ ಪದ್ಯವುಂಟಾಗುತ್ತದೆ. ನಿಯತಗತಿಯಲ್ಲಿ ಅಂತರ್ಭೂತವಾದ ಸಮಗತಿಯಿಂದ ತಾಳಕ್ಕೆ ಅಳವಡುವ ಛಂದೋಬಂಧಗಳೂ, ಉದ್ದವನ್ನು ಮಾತ್ರ ನಿರ್ಬಂಧಿಸಿದ ವಿಷಮಗತಿಯಿಂದ ಶಾರ್ದೂಲವಿಕ್ರೀಡಿತ, ಸ್ರಗ್ಧರಾ ಮೊದಲಾದ ತಾಳಕ್ಕೆ ಸೇರದ ಅಕ್ಷರವೃತ್ತಗಳೂ ನಿರ್ಮಿತವಾಗುತ್ತವೆ. ಹೀಗೆ ಪದ್ಯವಿಧಾನಕ್ಕೆ ಕಾಲದ ನಿಯತಗತಿಯೇ ಆಧಾರವಾಗಿರುವುದರಿಂದ, ಅದೇ ಆಧಾರದ ಮೇಲೆ ನಡೆಯುವ ಸಂಗೀತಕ್ಕೆ – ಮುಖ್ಯವಾಗಿ ತಾಲಬದ್ಧವಾದ ಗಾಯನಕ್ಕೆ ಮತ್ತು ಛಂದಸ್ಸಿಗೆ ಸಂಬಂಧವಿರಲೇಬೇಕಲ್ಲವೆ? ಆದರೆ ಇಂದಿನ ನಮ್ಮ, ಅಥವಾ ಇತರ ಹಲವು ಭಾಷೆಗಳ, ಪದ್ಯಗಳನ್ನೂ – ಮುಖ್ಯವಾಗಿ

---

ಪೀಠದಿಂದ ಮಾಡಿದ ಉಪನ್ಯಾಸದಲ್ಲಿ, ವಿಷಮಗತಿವೃತ್ತಗಳನ್ನು 'ಅಪಕೃಷ್ಟವೃತ್ತಗಳು' ಎಂದು ಹೆಸರಿಸಿಬಿಟ್ಟಿದ್ದಾರೆ! ಆದರೆ ಆ ಅಪಪ್ರಯೋಗಕ್ಕೆ ಕಾರಣಭೂತವಾದ ನನ್ನ ಅಥವಾ ನನ್ನ ಆ ನಿಬಂಧದ ಪ್ರಸ್ತಾವವನ್ನು ಅವರು ಏಕೋ, ಮಾಡಲೇ ಇಲ್ಲ. ಮಾಡಿದ್ದರೆ, ಆ ಅಪಪ್ರಯೋಗದ ಹೊಣೆ ನನ್ನದಾಗಿ ಮಾತ್ರ ಉಳಿಯುತ್ತಿತ್ತು.

ಈಮೇಲೆ ಸೂಚಿಸಿದ ತಪ್ಪು ಹೊರತಾಗಿ – ಬೇರೆ ಒಂದೆರಡು ಸ್ಖಾಲಿತ್ಯಗಳೂ ಆ ನಿಬಂಧದಲ್ಲಿ ಸಂಭವಿಸಿರುತ್ತವೆ :– 'ಲಯ' ಎಂಬ ಸಂಜ್ಞೆಯು ಹೆಚ್ಚಿನ ಸಂದರ್ಭಗಳಲ್ಲಿ ಖಚಿತವೂ ಶಾಸ್ತ್ರಸಮ್ಮತವೂ ಆದ ಅರ್ಥದಲ್ಲಿಯೇ ಆ ನಿಬಂಧದಲ್ಲಿ ಪ್ರಯುಕ್ತವಾಗಿ–ರುವುದಾದರೂ – ಒಂದೋ ಎರಡೋ ಕಡೆ ಅದು ಸಂದಿಗ್ಧತೆಗೆ ಆಸ್ಪದವಾಗುವಂತೆ ಬಳಕೆಯಾಗಿರುತ್ತದೆ. ಮತ್ತು – 'ಕೋರೆ' ಎಂಬ ತಾಳಗತಿಯ ಸ್ವರೂಪವನ್ನು ವಿವರಿಸುವ ಸಂದರ್ಭದಲ್ಲಿ, ಆ ತಾಳದ ಆವರ್ತಗಳ ಮಾತ್ರಾಸಂಖ್ಯೆ ಐದು ಎಂದು ತಪ್ಪಾಗಿ ನಿರೂಪಿತವಾಗಿದೆ. (ಕೋರೆ ಎಂಬುದು ಸಹಜವಾಗಿ ಆರು ಮಾತ್ರೆಗಳ ಆವರ್ತರೂಪದ ವಿಷ್ಣುಗಣವನ್ನು ಏಳು ಮಾತ್ರೆಗಳ ಆವರ್ತದ ಗತಿಗೆ ಪರಿವರ್ತಿಸಿದಾಗ ರೂಪುಗೊಳ್ಳುವ ಒಂದು ತಾಳವಿಶೇಷ.) ಈ ತಪ್ಪುಗಳನ್ನೂ ಈ 'ಸಂಗ್ರಹ'ದಲ್ಲಿ ತಿದ್ದಿಕೊಂಡಿದ್ದೇನೆ. ಮತ್ತು – ಆ ನಿಬಂಧವನ್ನು ರಚಿಸಿದ ಕಾಲದಲ್ಲಿ ಅವಶ್ಯವೆನಿಸಿದ್ದರೂ – ಈ ಕಾಲಕ್ಕೆ ಅನವಶ್ಯವೆಂದು (ಹಾಗೂ ಅಸಂಗತವೆಂದು) ನನಗೆ ತೋರಿದ ಕೆಲವು ಪ್ರತಿಪಾದನೆಗಳನ್ನು ಇದರಲ್ಲಿ ಸಂಗ್ರಹಿಸದೆ ಬಿಟ್ಟಿದ್ದೇನೆ. (ಬಿಟ್ಟಭಾಗಗಳು ಮೂಲ ಲೇಖನದಲ್ಲಿ ಎಲ್ಲೆಲ್ಲಿ ಇದ್ದವುಗಳೆಂಬುದನ್ನು * * * * ಇಂತಹ ಚಿಹ್ನೆಗಳಿಂದ ನಿರ್ದೇಶಿಸಿರುತ್ತೇನೆ.) ಹೀಗೆ ಮೂಲಲೇಖನದಲ್ಲಿದ್ದ ಕೆಲವಂಶಗಳನ್ನು ಇದರಲ್ಲಿ ಬಿಟ್ಟುಬಿಟ್ಟದ್ದೇ ಹೊರತು, ಅದರಲ್ಲಿಲ್ಲದಿದ್ದ ಹೊಸ ಅಂಶವಾವುದನ್ನೂ ಈ ಸಂಗ್ರದ "ಕಾಂಡ"ದಲ್ಲಿ ಸೇರಿಸಿರುವುದಿಲ್ಲ. ಮೂಲಲೇಖನದಲ್ಲಿ ಹಲವು ವಾಕ್ಯಗಳಲ್ಲಿ ನಿರೂಪಿಸಿದ್ದ ವಿಷಯಗಳನ್ನು ಈ ಸಂಗ್ರಹದಲ್ಲಿ (ಕೆಲವೆಡೆಗಳಲ್ಲಿ) ಕೆಲವೇ ವಾಕ್ಯಗಳಲ್ಲಿ ಸಂಕ್ಷೇಪಿಸಿದ್ದುಂಟು; ಮತ್ತು ಅಭಿಪ್ರಾಯವು ಅಸ್ಪಷ್ಟವಾಗಿದ್ದ ಸಂದರ್ಭಗಳಲ್ಲಿ, ಸ್ಪಷ್ಟತೆಗಾಗಿ ವಾಕ್ಯಸ್ವರೂಪಗಳನ್ನು ಬದಲಾಯಿಸಿದ್ದೂ ಉಂಟು. ಹೀಗೆ ಮೂಲಲೇಖನಕ್ಕೂ ಈ ಸಂಗ್ರಹಕ್ಕೂ ಅಷ್ಟಿಷ್ಟು ವ್ಯತ್ಯಾಸಗಳಿರುವವಾದರೂ ಅಂದು ನನ್ನ ತಿಳಿವಿಗೆ ಬಂದಿರದಿದ್ದ ಯಾವುದೊಂದು ಮಹತ್ತ್ವದ ವಿಷಯವೂ ಈ 'ಸಾರಸಂಗ್ರಹ'ದಲ್ಲಿ ಸೇರಿಲ್ಲ. ಹೊಸತಾಗಿ ಹೊಳೆದ ಹಾಗೂ ತಿಳಿದ ವಿಷಯಗಳೂ, ಮೂಲದ ಪ್ರತಿಪಾದನೆಗೆ ಪೋಷಕವಾಗಿ ಮಾಡಿದ ವಿವರಣಗಳೂ ಇದರಲ್ಲಿ 'ಟಿಪ್ಪಣಿ'ಗಳಾಗಿ ಅಥವಾ 'ಅನುಬಂಧ'ಗಳಾಗಿ ಸೇರಿಸಲ್ಪಡುತ್ತವೆ.

ಅವುಗಳನ್ನು ಓದುವ ರೀತಿಯನ್ನೂ – ನಮ್ಮ ಸಂಗೀತಗಾರರು ಗಾಯನದಲ್ಲಿ ಬಳಸುವ ಸಾಹಿತ್ಯವನ್ನೂ ಮೇಲಿಂದ ಮೇಲೆ ಕೇಳಿ ನೋಡಿದರೆ, ಅವುಗಳೊಳಗೆ ಸಂಬಂಧವಿದೆಯೆಂದು ಹೇಳುವುದು ಕಷ್ಟವಾಗಿ ಕಂಡುಬಂದೀತು. (ಸಮಗತಿಯ) ಪದ್ಯಗಳನ್ನು ಲಯಸ್ಥಾನಗಳು ತಿಳಿಯುವಂತೆ 'ರಾಗ'ದಿಂದ, ಎಂದರೆ ಗೀತ–ಚ್ಛಾಯೆಯಲ್ಲಿ ಓದುವುದು ಹಳಬರ ಪದ್ಧತಿ. ಹೊಸಬರು ಇಂಗ್ಲಿಷಿನ 'ರೆಸಿಟೇಶನ್' ಪದ್ಧತಿಯಂತೆ, (ಲಯವಿಟ್ಟೇ ರೆಸಿಟೇಶನ್ ಮಾಡುವವರೂ ಉಂಟು.) ಅರ್ಥದ ತೂಕಕ್ಕೆ ತಕ್ಕಹಾಗೆ 'ಸ್ವರಭಾರ'ವನ್ನು ಹೊರಿಸಿ ಓದುವುದನ್ನು ರೂಢಿಗೆ ತಂದಿದ್ದಾರೆ. ನಮ್ಮ ಸಂಗೀತಗಾರರು ನಮ್ಮ ಕಾವ್ಯಗಳಲ್ಲಿರುವ ಛಂದೋಬಂಧಗಳನ್ನು ಹಾಡದೆ, ಬೇಕಾದಲ್ಲಿ ಬೇಕಾದಷ್ಟು ಎಳೆದು ಹಾಡಬೇಕಾಗುವ – ಸಂಗೀತಜ್ಞರಲ್ಲದೆ ಇತರರು ಓದಿದರೆ ಕೇವಲ ಗದ್ಯವಾಗುವ, ಅರ್ಥಕ್ಕೆ ಮಹತ್ತ್ವ–ವಿಲ್ಲದ – ಹಾಡುಗಳನ್ನು ಹಾಡುತ್ತಾರೆ. ಆದ ಕಾರಣ ಇಂದು ಛಂದಸ್ಸಿಗೂ ಸಂಗೀತಕ್ಕೂ ಸಂಬಂಧವು ಕಡಿದು ಹೋಗಿದೆಯೆಂದರೆ ಅಲ್ಲವೆನ್ನಲು ಬಹಳ ಧೈರ್ಯ ಬೇಕು.

{ಛಂದಸ್ ಶಬ್ದನಿಷ್ಪತ್ತಿ}

ವಿಭಿನ್ನ ಭಾಷೆಗಳ ಬಾಲ್ಯಾವಸ್ಥೆಯನ್ನು ಅವಲೋಕಿಸಿದರೆ – ಅಲ್ಲಿರುವ ಪದ್ಯಸಾಹಿತ್ಯವೆಂದರೆ ಕೇವಲ ಹಾಡುಗಳೆಂದು ಕಂಡುಬರುವುದು. (ಅದು ಆಯಾ ಜನತೆಯ ಸಂಸ್ಕೃತಿಯಂತೆ, ಒಲವಿನಂತೆ, ವೀರರಸಪ್ರಧಾನವೋ ಶೃಂಗಾರಮಯವೋ, ಭಕ್ತಿಪರವೋ ಆಗಿರುತ್ತದೆ.) ಇದರಿಂದ ಪದ್ಯದ ಮತ್ತು ಸಂಗೀತದ ಮೂಲವು ಒಂದೇ ಎಂಬ ಅಭಿಪ್ರಾಯವು ದೃಢವಾಗುತ್ತದೆ. ಈ ಸಂದರ್ಭದಲ್ಲಿ 'ಛಂದಸ್' ಶಬ್ದದ ಹುಟ್ಟನ್ನು ಪರಿಶೀಲಿಸುವುದು ಅಪ್ರಸ್ತುತವೆನಿಸಲಾರದು. ಈ ಶಬ್ದಕ್ಕೆ ಹಲವರು ಹಲವು ಬಗೆಯಲ್ಲಿ ವ್ಯುತ್ಪತ್ತಿಯನ್ನು ಹೇಳುತ್ತಾರೆ. 'ಛದ್' (ಛದ – ಅಪವಾರಣೇ) ಎಂಬ ಧಾತುವಿನಿಂದ ಇದು ನಿಷ್ಪನ್ನವಾಯಿತೆಂದು ಪೂರ್ವಿ–ಕರು ಹೇಳಿದ್ದಾರಂತೆ. ಪಾಶ್ಚಾತ್ಯ ಪಂಡಿತರಲ್ಲಿ ಕೆಲವರು 'ಸ್ಕಂದ್' ಎಂಬ ಧಾತು–ವಿನಲ್ಲಿ ಇದರ ಮೂಲವನ್ನು ಕಾಣುತ್ತಾರಂತೆ. ಘನವಿದ್ವಾಂಸರು ಹೇಳಿರುವ ಈ ಮಾತುಗಳಿಗೆ ಆಕ್ಷೇಪವೆತ್ತುವುದು ಧಾರ್ಷ್ಟ್ಯವೆಂದಾಗಬಹುದಾದರೂ, ನನ್ನ ಬುದ್ಧಿಗೆ ಹೊಳೆದುದನ್ನು ಹೇಳುವುದು ಧರ್ಮವೆಂದು ಭಾವಿಸುತ್ತೇನೆ. ಅದೇನೆಂದರೆ – 'ಛಂದ್'[3] ಎಂಬುದೊಂದು ಧಾತುವೇ ಇರುವಾಗ, ಅದರಿಂದ ಹುಟ್ಟಿದ ಶಬ್ದಗಳು

3. ಅಮರಕೋಶ ವ್ಯಾಖ್ಯಾನಕಾರನಾದ ಭಾನುಜಿ ದೀಕ್ಷಿತನು 'ಛಂದಸ್' ಎಂಬುದು 'ಚದಿ (ಚಂದ್) ಆಹ್ಲಾದನೇ; ಚಂದೇರಾದೇಶ್ಚ ಛಃ' – ಹೀಗೆ ನಿಷ್ಪನ್ನವಾಗಿದೆ ಎಂದು ಹೇಳುತ್ತಾನೆ. 'ಛಂದೋಗತಿ' ಎಂಬ ನನ್ನ ಗ್ರಂಥದ ನಾಲ್ಕನೆಯ ಪರಿಚ್ಛೇದದಲ್ಲಿ ಇದರ ಹೆಚ್ಚಿನ ವಿವರಗಳನ್ನು ನೋಡಿಕೊಳ್ಳಬಹುದು.

ವ್ಯವಹಾರದಲ್ಲಿರುವಾಗ, ಈ ದ್ರಾವಿಡಪ್ರಾಣಾಯಾಮಗಳೇಕೋ ತಿಳಿಯದು. 'ಛಂದ್' ಎಂಬುದಕ್ಕೆ ಒಲಿಸು, ಸಂತೋಷಪಡಿಸು ಇತ್ಯಾದಿ ಅರ್ಥಗಳನ್ನು ಆಪಟೆಯವರು, ಸರ್ವಮಾನ್ಯವಾದ ತಮ್ಮ ಶಬ್ದಕೋಶ(ನಿಘಂಟು)ದಲ್ಲಿ ಕಾಣಿಸಿದ್ದಾರೆ. 'ಛಂದಸ್' ಎಂಬುದು ವೇದಗಳ ಹೆಸರೂ ಆಗಿದೆ. ಅವುಗಳಿಗೆ ಈ ಹೆಸರು ಬಂದಿರುವುದಕ್ಕೆ, ಅವು ದೇವರನ್ನು ಒಲಿಸುವ ಸ್ತೋತ್ರಗಳಾಗಿರುವುದೇ ಕಾರಣವಾಗಿ ತೋರುತ್ತದೆ. 'ಹಾಡುವುದು' ಎಂಬರ್ಥವನ್ನು ಕೊಡುವ ಸಂಸ್ಕೃತದ 'ಗಾ' ಮತ್ತು 'ಗೈ' ಎಂಬ ಧಾತುಗಳಿಗೂ ಒಲಿಸು, ಹೊಗಳು ಎಂಬರ್ಥಗಳಿವೆ. ಅಲ್ಲದೆ, ಸಾಮವೇದಾಧ್ಯಾಯಿಗೆ 'ಛಂದೋಗಃ' ಎಂಬ ವಿಶಿಷ್ಟವಾದ ಹೆಸರಿದೆ. (ಮನುಸ್ಮೃತಿ III – ೧೪೫) ಸಾಮವೇದವೆಂದರೆ ಗಾನವೇದ. ಅದನ್ನು ಹಾಡು-ವವನಿಗೆ ವಿಶಿಷ್ಟವಾಗಿ 'ಛಂದೋಗಃ' ಎಂಬ ಹೆಸರಿರಬೇಕಾದರೆ, ಗೀತ ಮತ್ತು ಛಂದಸ್ ಎಂಬ ಶಬ್ದಗಳು ಸಮಾನಾರ್ಥಕಗಳಾಗಿರಬೇಕಾಗುತ್ತದೆ. ಇದರಿಂದ ಹಿಂದೆ ಪ್ರತಿಪಾದಿಸಿರುವಂತೆ, ಆದಿಯಲ್ಲಿ ಛಂದೋರಚನೆಗಳೊಳಗೆ ಪದ್ಯ, ಗೀತ ಎಂಬ ಭೇದವಿದ್ದಿಲ್ಲವೆಂದೂ, ಅನಂತರ ಆ ರಚನೆಗಳು ಅರ್ಥಪ್ರಧಾನ ಮತ್ತು ಗಾನಪ್ರಧಾನ ಎಂದು ಇಬ್ಬಗೆಯಾಗಿ ಬೆಳೆದುದರಿಂದ ಪದ್ಯ ಮತ್ತು ಗೀತ ಎಂಬ ಭೇದಗಳುಂಟಾದವೆಂದೂ ಸಿದ್ಧವಾಗುತ್ತದೆ.

{ಹಾಡುಗಳೇ ಭಾಷೆಯ ಆದಿಕಾಲದ ಸಾಹಿತ್ಯ}

ಸಮಸ್ತಜಗತ್ತಿನ ಪ್ರಾಚೀನತಮವಾಙ್ಮಯವನ್ನುಳ್ಳ ಸಂಸ್ಕೃತ ಭಾಷೆಯಲ್ಲಿ ಪದ್ಯಕ್ಕೂ ಸಂಗೀತಕ್ಕೂ ಆದಿಕಾಲದಲ್ಲಿದ್ದ ಸಂಬಂಧವನ್ನು ತೋರಿಸಿದ್ದಾಯಿತು. ಈಗ, ಇನ್ನೂ ಬಾಲ್ಯಾವಸ್ಥೆಯಲ್ಲಿಯೇ ಇರುವ ಒಂದು ಭಾಷೆಯ ಸಾಹಿತ್ಯ ಸ್ಥಿತಿಯನ್ನು ಅವಲೋಕಿಸೋಣ :- ನಮ್ಮ ಕನ್ನಡನಾಡಿನೊಳಗಿನ ಒಂದು ಭಾಷೆಯಾದ ತುಳುವನ್ನು ನೋಡಿರಿ: ಅದರಲ್ಲಿರುವ ಸಾಹಿತ್ಯವೆಂದರೆ ತುಳುವರ ಸಂಗೀತಸಾಹಿತ್ಯ; ಅವರ ಸಂಗೀತವೆಂದರೆ ಆ ಸಾಹಿತ್ಯವನ್ನು ಹಾಡುವುದು.[4] ಆ ಸಾಹಿತ್ಯಸ್ವರೂಪವು ಎರಡು ವಿಧವಾಗಿದೆ. 'ಕಬಿತ್ತೊ' (= ಕವಿತೆ) ಎಂಬ ಚರಣ ಬಂಧವುಳ್ಳ ತಾಳಬದ್ಧವಾದ ಹಾಡುಗಳು; ಮತ್ತು ಚರಣರಹಿತವಾದ 'ಪಾರ್ದನೆ' (=ಪ್ರಾರ್ಥನೆ) ಎಂಬ ದೈವವಿಷಯಕವಾದ ರಚನೆಗಳು. ('ಪಾರ್ದನೆ' ಎಂಬುದನ್ನು 'ಪಾಡ್ದನ' ಎಂದೂ ಉಚ್ಚರಿಸುವುದುಂಟು) 'ಪಾರ್ದನೆ'ಗಳು ವಸ್ತುತಃ ಗದ್ಯಗಳೇ ಆಗಿರುವವಾದರೂ, ಅವುಗಳನ್ನೂ (ಆಲಾಪಯುಕ್ತವಾಗಿ) ಹಾಡಿಯೇ ಹೇಳು-ವರು. ಕೆಲವು ಪಾರ್ದನೆಗಳನ್ನು ತಾಳಕ್ಕೆ ಹೊಂದಿಸಿಕೊಂಡು ಹಾಡುವುದೂ

---

4. ಈ ನಿಬಂಧವು ಜನ್ಮವೆತ್ತಿದುದು ಇಂದಿಗೆ (=೧೯೮೫) ಅರ್ಧಶತಮಾನಕ್ಕಿಂತಲೂ ಹಿಂದೆ (೧೯೩೨ರಲ್ಲಿ) ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಇಲ್ಲಿ ನಿರೂಪಿತವಾಗಿರುವುದು ತುಳುವಿನ ಅಂದಿನ ಪರಿಸ್ಥಿತಿ; ಇಂದಿನದಲ್ಲ.

ಉಂಟು. ಹೀಗೆ ಪರಂಪರಾಗತವಾಗಿ (ಮೌಖಿಕವೇ ಆಗಿ) ಬಂದಿರುವ ತುಳು ಸಾಹಿತ್ಯವೆಲ್ಲವೂ ಗಾನದ ಅಂಗವಾಗಿಯೇ ಇರುವುದನ್ನು ಕಾಣಬಹುದು. ಇದರಂತೆಯೇ, ಬೇರೆ ಭಾಷೆಗಳ ಆದಿಕಾಲದ ಸಾಹಿತ್ಯಸ್ಥಿತಿಯೂ ಇರಬಹುದು, ಇದ್ದಿರಬಹುದು ಎಂದು ನನ್ನ ಊಹೆ.

{ಪದ್ಯ ಮತ್ತು ಸಂಗೀತದ ಉದ್ಗಮ ಸ್ಥಾನ ಒಂದೇ}

ಈ ವರೆಗೆ ಇಲ್ಲಿ ಮಾಡಿದ ವಿವರಣೆಯಿಂದ – ಪದ್ಯದ ಮತ್ತು ಸಂಗೀತದ ಉದ್ಗಮ ಸ್ಥಾನವು ಒಂದೇ; ಅವು ಏಕಕಾಲದಲ್ಲಿ ಒಂದಾಗಿ ಹುಟ್ಟಿದವು; ಇದು ಯಾವುದಾದರೊಂದು ಭಾಷೆಗೆ ಸೀಮಿತವಾದ ಸಂಗತಿಯಲ್ಲ, ಸಾರ್ವತ್ರಿಕವಾದ ಪ್ರಕೃತಿನಿಯಮ – ಎಂದು ಹೇಳಿದ ಹಾಗಾಯಿತು. ನಮ್ಮ ಪ್ರಾಚೀನರಿಗೂ ಇದೇ ಅಭಿಪ್ರಾಯವಿತ್ತೆಂದು ನನಗೆ ಭಾಸವಾಗುತ್ತದೆ. ಏಕೆಂದರೆ – ಸಂಗೀತಕ್ಕೂ ಸಾಹಿ-ತ್ಯಕ್ಕೂ ಸರಸ್ವತಿಯೊಬ್ಬಳೇ ಅಧಿದೇವಿ; ಅವಳು ವೀಣಾಪಾಣಿಯಾಗಿರುವಂತೆ ಪುಸ್ತಕಪಾಣಿಯೂ ಆಗಿರುತ್ತಾಳೆ – ಹೀಗೆ ಅವಳ ರೂಪವನ್ನು ಅವರು ಕಲ್ಪಿಸಿ-ರುತ್ತಾರೆ. "ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ ಸ್ತನದ್ವಯಂ" ಎಂಬ ಸುಭಾ-ಷಿತವೂ ಸುಪ್ರಸಿದ್ಧ. ಈ ರೂಪಕದಿಂದ – ಸಂಗೀತ ಸಾಹಿತ್ಯಗಳು ಏಕಾಶ್ರಯಿ-ಗಳಾಗಿ, ಏಕಕಾಲಿಕವಾಗಿ ಉದ್ಭವಿಸಿದವುಗಳೆಂಬರ್ಥವು ಧ್ವನಿತವಾಗುವಂತಿದೆ-ಯಲ್ಲವೇ? ಈ ಸಂದರ್ಭದಲ್ಲಿ 'ಸಾಹಿತ್ಯ'ವೆಂದರೆ 'ಪದ್ಯಸಾಹಿತ್ಯ'ವೆಂದೇ ತಿಳಿ-ಯುವುದು ಉಚಿತವಾಗಿದೆ. ಏಕೆಂದರೆ, ಎಲ್ಲಾ ಭಾಷೆಗಳಲ್ಲಿಯೂ ಆದಿಸಾಹಿತ್ಯವು ಪದ್ಯರೂಪವಾಗಿಯೇ ಇದ್ದುದು ಕಂಡುಬರುತ್ತದೆ. ಯಾವ ಭಾಷೆಯಲ್ಲಾದರೂ 'ಗದ್ಯ' ಎಂದರೆ 'ವಚನ'ವೂ (= ಆಡುವ ಮಾತು) 'ಸಾಹಿತ್ಯ'ವೆನಿಸಿಕೊಂಡದ್ದು ಆ ಭಾಷೆ ಪರಿಪುಷ್ಟವಾದ ಮೇಲೆಯೇ ಎಂಬುದು, ಅನೇಕ ಭಾಷೆಗಳ ಸಾಹಿತ್ಯದ ಇತಿಹಾಸವನ್ನು ಪರಾಮರ್ಶಿಸಿದರೆ ಗೊತ್ತಾಗುತ್ತದೆ. ಪದ್ಯವು ಹುಟ್ಟಿದ್ದು ಹಾಡು-ವುದಕ್ಕಾಗಿಯೇ ಎಂಬುದನ್ನು ಶ್ರೀಮದ್ರಾಮಾಯಣವೂ ಸಮರ್ಥಿಸುವಂತಿದೆ. ಆದಿಕಾವ್ಯವೆನಿಸಿರುವ ಅದನ್ನು ಕುಶಲವರು ಹಾಡಿದರೆಂದೇ ಅದರಲ್ಲಿ ಹೇಳ-ಲಾಗಿದೆ. ("ಕಾವ್ಯಮೇತದಗಾಯತಾಂ" – ಬಾಲಕಂಡ. IV – ೯.) ತಾತ್ಪರ್ಯ-ವೇನೆಂದರೆ, ಆದಿಕಾಲಗಳಲ್ಲಿ – ಇದು ಪದ್ಯ, ಇದು ಹಾಡು – ಎಂಬ ಭೇದ-ವಿದ್ದಿಲ್ಲ; ಅವೆರಡೂ ಒಂದೇ ಆಗಿದ್ದವು. ಈ 'ಪದ್ಯ' ಅಥವಾ 'ಹಾಡು' ಎಂಬುದು ಆದಿಕಾಲದ ಕನ್ನಡದಲ್ಲಿ ಹೇಗಿತ್ತು? ಅದು ಹೇಗೆ ಮುಂದೆ ಬೆಳೆಯಿತು? – ಎಂಬುದು ಈ ಉಪನ್ಯಾಸದ ವಿಷಯ.

*   *   *   *   *

{ಪುರಾತನ ಕನ್ನಡ 'ಜಾತಿ'ಗಳು}

ಕನ್ನಡದಲ್ಲಿ, ಪ್ರಾಯಶಃ ಇತರ ಭಾಷೆಗಳಲ್ಲಿ ಪ್ರಯುಕ್ತವಾಗದಿರುವಷ್ಟು ವಿಧದ ಛಂದೋಬಂಧಗಳು ಪ್ರಯೋಗಿಸಲ್ಪಟ್ಟಿವೆ. ಇವೆಲ್ಲವೂ ಕನ್ನಡದಲ್ಲಿಯೇ ಹುಟ್ಟಿ ಬೆಳೆದವುಗಳಲ್ಲ; ಸಂಸ್ಕೃತದ ಉದಾರನಿಧಿಯಿಂದ ನಾವು ಬೇಕಾದಂತೆ ಆಯ್ದುಕೊಂಡಿದ್ದೇವೆ. ಮತ್ತು ಸಂಸ್ಕೃತದಿಂದ ತಂದುಕೊಂಡವುಗಳಲ್ಲದೆ, ಆ ಮೂಲನಿಧಿಯಿಂದ ಬೆಳೆಯಿಸಿದವುಗಳೂ ಹಲವು ಇವೆ; ಅಂಥವುಗಳನ್ನು ಕನ್ನಡದ ಸ್ವತಂತ್ರ 'ಛಂದ'ಗಳೆಂದು ಹೇಳಲಾಗುವುದಿಲ್ಲ. ಹೀಗೆ ಶೋಧಿಸುತ್ತಾ ಹೋಗುವಾಗ, ಕನ್ನಡದಲ್ಲಿ ಸ್ವತಂತ್ರ ಛಂದಸ್ಸೇ ಇಲ್ಲವೋ ಎಂಬ ಶಂಕೆ ತಲೆದೋರುತ್ತದೆ; ಕೆಲವರು ವಿದ್ವಾಂಸರು ಹೀಗೆಯೇ ಸಿದ್ಧಾಂತಿಸುತ್ತಾರೆ. ಆದರೆ ನಿಜಸ್ಥಿತಿಯನ್ನು ಕಂಡುಹಿಡಿಯಬೇಕಾದರೆ ಕನ್ನಡದ ಆದಿಯ ಕಾವ್ಯಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಬೇಕು. ಕನ್ನಡಭಾಷೆ ಸಂಸ್ಕೃತದೊಡನೆ ಬೆರೆಯದೆ ಕೊಡಗೂಸಾಗಿದ್ದಾಗ ಆಡಿದ ನುಡಿಗಳನ್ನು ನಾವೀಗ ಕೇಳುವುದು ಸಾಧ್ಯವಿಲ್ಲ; ಅಂದಿನ ದಿನಗಳಲ್ಲಿ ಕನ್ನಡದಲ್ಲಿ ಪ್ರಯುಕ್ತವಾಗಿದ್ದ ಛಂದೋಬಂಧಗಳೆಂತಹ-ವೆಂದು ತಿಳಿಯಲು ನಮಗೆ ಮಾರ್ಗವೇ ಇಲ್ಲ. ಹಿಂದಿನ ಕಾಲದ ಎಷ್ಟೋ ದೊಡ್ಡ ದೊಡ್ಡ ಕಾವ್ಯಗಳೂ ನಾಮಾವಶೇಷವಾಗಿವೆ. ನಮಗೆ ದೊರೆಯುವ ಪ್ರಾಚೀನತಮ ಕನ್ನಡ ಗ್ರಂಥವೆಂದರೆ 'ಕವಿರಾಜಮಾರ್ಗ'. ಇದು ಮುಖ್ಯವಾಗಿ ಕಂದಗಳಿಂದಲೇ ತುಂಬಿದೆ; ಅಲ್ಲಲ್ಲಿ – ಕೆಲವು ವೃತ್ತಗಳೂ 'ಗೀತಿಕೆ' ಎಂಬ ಛಂದೋಬಂಧಗಳೂ ಇವೆ. ಈ 'ಗೀತಿಕೆ' ಎಂಬುದು ಸುಪ್ರಸಿದ್ಧವಾದ ಸಂಸ್ಕೃತದ 'ಗೀತಿಕೆ'ಯಲ್ಲ; ಇದು ಅದರಿಂದ ಭಿನ್ನವಾದೊಂದು ಛಂದೋಬಂಧವೆಂಬುದು ಸುಸ್ಪಷ್ಟ. ಇನ್ನುಳಿದ ಹಳೆಯ ಕಾವ್ಯಗಳಲ್ಲಿ 'ಅಕ್ಕರ' ಎಂಬ ಹೆಸರಿನ ಕೆಲವು ಬಂಧಗಳು ಸಿಕ್ಕುತ್ತವೆ. ನಾಗವರ್ಮನು 'ಛಂದೋಂಬುಧಿ'ಯಲ್ಲಿ ಅಕ್ಕರ, ಗೀತಿಕೆ ಮೊದಲಾದುವುಗಳ ಲಕ್ಷಣಗಳನ್ನು ಹೇಳುವಾಗ, ಅವುಗಳನ್ನು 'ಕರ್ಣಾಟಕ ವಿಷಯಜಾತಿ'ಗಳೆಂದು ಹೆಸರಿಸಿದ್ದಾನೆ. ಈ 'ಜಾತಿ'ಗಳನ್ನು ತತ್ಪೂರ್ವದ ಕನ್ನಡ ಕವಿಗಳು ಹೆಚ್ಚಾಗಿ ಬಳಸುತ್ತಿದ್ದರೆಂಬುದನ್ನು ಕವಿರಾಜಮಾರ್ಗವೂ ಸೂಚಿಸುವ ಹಾಗೆ ಕಾಣುತ್ತದೆ: ಪುರಾತನ ಕವಿಗಳ 'ಚತ್ತಾಣಮುಂ ಬೆದಂಡೆಯುಂ' ಎಂತಿದ್ದುವೆಂಬುದನ್ನು ಅದು ಹೀಗೆ ಹೇಳುತ್ತದೆ:-

ಕಂದಮುಮಮಳಿನ ವೃತ್ತಮು ।
ಮೊಂದೊಂದೆಡೆಗೊಂಡು, ಜಾತಿ ಜಾಣೆಸೆಯೆ ಬೆಡಂ- ॥
ಗೊಂದಿವಱೊಳಮರೆ, ಪೇೞಲ್ ।
ಸುಂದರರೂಪಿಂ ಬೆದಂಡೆಗಬ್ಬಮದಕ್ಕುಂ ॥ . ॥

ಕಂದಂಗಳ್ ಪಲವಾಗಿರೆ, ।
ಸುಂದರವೃತ್ತಂಗಳಕ್ಕರಂ ಚವುಪದಿ ಮ- ॥

ತ್ತಂ ದಲ್ ಗೀತಿಕೆ ತಿವದಿಗ- ।
ಳಂದಂಬೆತ್ತೆಸೆಯೆ, ಪೇೞ್ದೊಡದು ಚತ್ತಾಣಂ ॥ . ॥
(ಕವಿರಾಜಮಾರ್ಗ, ಪ್ರಥಮ ಪರಿಚ್ಛೇದ – ೩೪, ೩೫.)

ಇಲ್ಲಿ, 'ಚತ್ತಾಣ'ದ ಲಕ್ಷಣವನ್ನು ಹೇಳುವ ಸಂದರ್ಭದಲ್ಲಿ ಉಕ್ತವಾಗಿರುವ ಅಕ್ಕರ, ಚವುಪದಿ, ಗೀತಿಕೆ, ತಿವದಿ ಎಂಬವು – ನಾಗವರ್ಮನು ಹೇಳುವ 'ಕರ್ಣಾಟಕ ವಿಷಯಜಾತಿ'ಗಳೊಳಗಿನವೇ ಆಗಿವೆ. ಆದುದರಿಂದ 'ಬೆದಂಡೆ'ಯ ಲಕ್ಷಣವನ್ನು ಹೇಳುವ ಪದ್ಯದಲ್ಲಿರುವ 'ಜಾತಿ' ಎಂಬ ಪದವು 'ಕರ್ಣಾಟಕ ವಿಷಯಜಾತಿ'ಯನ್ನೇ ಸೂಚಿಸುತ್ತದೆಂಬುದು ನಿಶ್ಚಯ. ಈ 'ಜಾತಿ'ಗಳಿಗೆ ನೃಪ-ತುಂಗನ ಕಾಲದಲ್ಲಿಯೇ ಮಾನ್ಯತೆ ಕಡಮೆಯಾಗಿತ್ತೆಂಬುದು, ಈ ಮೇಲೆ ಉದಾಹರಿಸಿದ ಎರಡು ಪದ್ಯಗಳಲ್ಲಿಯೂ ಕಂದವೃತ್ತಗಳನ್ನು ಮೊದಲು ಹೆಸರಿಸಿ, ತದನಂತರ 'ಜಾತಿ'ಯ ಹೆಸರೆತ್ತಿದುದರಿಂದ ಧ್ವನಿತವಾಗುತ್ತದೆ. ತನ್ನ ಗ್ರಂಥ-ವನ್ನಂತೂ ಕವಿರಾಜಮಾರ್ಗಕಾರನು ಕಂದಗಳಿಂದಲೇ ಎಂಬಂತೆ ರಚಿಸಿರುತ್ತಾನಷ್ಟೆ. ಈ 'ಜಾತಿ'ಗಳನ್ನು ಅವನಂತೆಯೇ ಅವನ ಅನಂತರ ಕಾಲದ ಮಹಾಕವಿಗಳೂ ಅವಜ್ಞೆಗೆ ಗುರಿಮಾಡಿ, ತಮ್ಮ ಚಂಪೂಪ್ರಬಂಧಗಳಲ್ಲಿ ಎಲ್ಲಿಯೋ ಒಂದೊಂದನ್ನು ಮಾತ್ರ ಪ್ರಯೋಗಿಸಿರುತ್ತಾರೆ. ಹೀಗೆ ದಿನದಿನಕ್ಕೆ ಅವುಗಳ ಬಳಕೆ ತಪ್ಪುತ್ತಾ ಬಂದು, ಇಂದು ಅವುಗಳನ್ನು ಕ್ರಮವಾಗಿ ಓದಲೂ ಅರಿಯದ ಸ್ಥಿತಿಗೆ ನಾವು ಮುಟ್ಟಿರುತ್ತೇವೆ. ಕಂದವೃತ್ತಗಳು ಸಂಸ್ಕೃತಪ್ರಾಕೃತಗಳ ಸಂಸರ್ಗದಿಂದ ಕನ್ನಡಕ್ಕೆ ಬಂದುವೆಂಬುದು ನಿರ್ವಿವಾದ ವಿಷಯ. ಕಂದವೃತ್ತಗಳಲ್ಲದೆ ಪುರಾತನಕಾಲ-ದಿಂದಲೂ ಕನ್ನಡದಲ್ಲಿ ಇದ್ದುವೆಂದು ಹೇಳಬಹುದಾದ ಛಂದೋಬಂಧಗಳೆಂದರೆ ಈ 'ಜಾತಿ'ಗಳೇ ಸರಿ.

{ಕನ್ನಡ 'ಜಾತಿ'ಗಳು ಕನ್ನಡದಲ್ಲೇ ಹುಟ್ಟಿದುವೇ?}

ಈ 'ಜಾತಿ'ಗಳೂ ಸಂಸ್ಕೃತದಿಂದ ಬಂದವುಗಳೋ, ಅಥವಾ ಕನ್ನಡ-ದಲ್ಲಿಯೇ ಹುಟ್ಟಿದವುಗಳೋ ಎಂಬುದನ್ನೀಗ ವಿಚಾರಿಸೋಣ :- ಇವುಗಳ ಸ್ವಭಾವಲಕ್ಷಣಗಳನ್ನು ತಿಳಿದುಕೊಳ್ಳುವುದಕ್ಕೆ ನಾಗವರ್ಮನ ಛಂದೋಂಬುಧಿಯ ಹೊರತು ಬೇರಾವ ಸಾಧನವೂ ನಮಗೆ ದೊರೆತಿಲ್ಲ.[5] ಈ ಒಂದು ಸಾಧನ-ವಾದರೂ ಲಬ್ಧವಾಗಿರುವುದೇ ನಮ್ಮ ಭಾಗ್ಯವೆಂದು ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಏಕೆಂದರೆ, ಇದೂ ದೊರೆಯದೆ ಹೋಗಿದ್ದರೆ, ಅಲ್ಲೊಂದು ಇಲ್ಲೊಂದು ಎಂದು ಪಂಪಾದಿಗಳು ಪ್ರಯೋಗಿಸಿದ 'ಪಿರಿಯಕ್ಕರ'ದಂತಹ ಬಂಧಗಳನ್ನು ಓದಲ-ರಿಯದ ನಾವು, ಅವುಗಳನ್ನು ಛಂದೋಬಂಧಗಳೊಳಗೆ ಎಣಿಸುತ್ತಿದ್ದವೋ

5. ಜಯಕೀರ್ತಿಯ 'ಛಂದೋನುಶಾಸನ'ವು ಇದನ್ನು ಬರೆದ (೧೯೩೨) ಕಾಲದಲ್ಲಿ ಉಪಲಬ್ಧವಾಗಿರಲಿಲ್ಲ; ಅದರ ಅಸ್ತಿತ್ವವು ಪ್ರಕಟವಾದದ್ದೇ ೧೯೪೦ನೆಯ ಇಸವಿಯಲ್ಲಿ.

ಇಲ್ಲವೋ ! ಮತ್ತು ಕನ್ನಡದಲ್ಲಿ ಪದ್ಯರಚನೆ ಕಂದವೃತ್ತಗಳಿಂದಲೇ ಆರಂಭ-ವಾಯಿತೆಂದೂ ಬಗೆಯುತ್ತಿದ್ದೆವೋ ಏನೋ!

ನಾಗವರ್ಮನು ತನ್ನ 'ಛಂದೋಂಬುಧಿ'ಯ ಪಂಚಮಾಧಿಕಾರದಲ್ಲಿ, 'ಕರ್ಣಾಟಕ ವಿಷಯಜಾತಿಯಂ ಕೇಳ್ ಪೇೞ್ವೆಂ' ಎಂದು ಹೇಳಿ – ಮದನವತಿ, ಅಕ್ಕರ, ಚೌಪದಿ, ಗೀತಿಕೆ, ಏಳೆ, ತಿವದಿ, ಉತ್ಸಾಹ, ಷಟ್ಪದಿಕೆ, ಅಕ್ಕರಿಕೆ, ಛಂದೋ-ವತಂಸ ಎಂಬ ಹತ್ತು 'ಜಾತಿ'ಗಳ ಲಕ್ಷಣಗಳನ್ನೂ, ಅವುಗಳಿಗೆ ಆಧಾರವಾದ ಬ್ರಹ್ಮ, ವಿಷ್ಣು, ರುದ್ರ ಎಂದು ಮೂರು ವಿಧವಾಗಿರುವ – ಸಂಸ್ಕೃತ ಛಂದಃ ಶಾಸ್ತ್ರದಲ್ಲಿಲ್ಲದ – ಗಣಗಳ ಸ್ವರೂಪವನ್ನೂ ವಿವರಿಸಿದ್ದಾನೆ.[6] ನಾಗವರ್ಮನ ಅಭಿಪ್ರಾಯದಲ್ಲಿ, ಈ 'ಜಾತಿ'ಗಳು ಕನ್ನಡದಲ್ಲಿಯೇ ಹುಟ್ಟಿದವುಗಳು ಎಂದಾಗಿ-ರುವುದಾದರೂ, ಪರಾಮರ್ಶಿಸಿ ನೋಡದೆ ಇದನ್ನು ಒಪ್ಪಿಕೊಳ್ಳುವುದು ಯುಕ್ತ-ವೆನಿಸಲಾರದು. ಏಕೆಂದರೆ, ನಮ್ಮ ಪೂರ್ವಜರ ಎಷ್ಟೋ ಅಭಿಪ್ರಾಯಗಳನ್ನು – (ಉದಾ: 'ಕನ್ನಡ ಮೊದಲಾದ ನಮ್ಮ ದೇಶದ ಭಾಷೆಗಳೆಲ್ಲವೂ ಸಂಸ್ಕೃತದಿಂದಲೇ ಹುಟ್ಟಿದವು' ಇತ್ಯಾದಿ.) ಈ ಕಾಲದ ವಿದ್ವಾಂಸರು ಒಪ್ಪುವುದಿಲ್ಲ. ಅಲ್ಲದೆ, ಪ್ರಸ್ತುತ ವಿಷಯದಲ್ಲಿ ಸಂಶಯಕ್ಕೆ ಎಡೆಯಿಲ್ಲದೆಯೂ ಇಲ್ಲ. ಆ ಹತ್ತು 'ಜಾತಿ'ಗಳಲ್ಲಿ, ಸಂಶಯಾಸ್ಪದವಾದ 'ಏಳೆ'ಯೊಂದನ್ನು ಬಿಟ್ಟರೆ, ಉಳಿದೆಲ್ಲವುಗಳ ಹೆಸರು ಸಂಸ್ಕೃತವೋ ಸಂಸ್ಕೃತದ ಅಪಭ್ರಂಶವೋ ಆಗಿದೆಯೆಂಬುದು ಸ್ಪಷ್ಟ. ಅವುಗಳ ಘಟಕಗಳಾದ ಗಣಗಳಿಗೂ ಬ್ರಹ್ಮ ವಿಷ್ಣು ರುದ್ರ ಎಂಬ ಸಂಸ್ಕೃತದ ತ್ರಿಮೂರ್ತಿ ನಾಮಗಳೇ ಇರುವುದಾಗಿದೆ. ಆದುದರಿಂದ ನಾಗವರ್ಮನ ಅಭಿಪ್ರಾಯವು ಗ್ರಾಹ್ಯವೋ ಅಗ್ರಾಹ್ಯವೋ ಎಂಬುದನ್ನು ಪರಾಮರ್ಶಿಸಿ ನೋಡೋಣ.

ಯಾವುದೊಂದು ಭಾಷೆಯಾದರೂ ತಕ್ಕಮಟ್ಟಿಗೆ ಪುಷ್ಟವಾದ ಮೇಲೆಯೇ ಆ ಭಾಷೆಗೆ ಒಂದು ವ್ಯಾಕರಣವು ರಚಿತವಾಗುವುದು ಹೊರತು – ವ್ಯಾಕರಣವು

---

6. {**ಸಂಸ್ಕೃತದ ಶಾಸ್ತ್ರಕೃತಿಗಳಲ್ಲಿ ತ್ರಿಮೂರ್ತಿಗಣಗಳ ವಿವರ**} ಸಂಸ್ಕೃತ ಛಂದಃಶಾಸ್ತ್ರಗ್ರಂಥಗಳಲ್ಲಿ ಈ ಗಣಗಳ ಪ್ರಸ್ತಾವವೇನೂ ಕಂಡುಬರುವುದಿಲ್ಲವಾದರೂ, 'ಸಂಗೀತರತ್ನಾಕರ' ಮೊದಲಾದ ಸಂಸ್ಕೃತ ಸಂಗೀತಶಾಸ್ತ್ರಗ್ರಂಥಗಳಲ್ಲಿ ಇವುಗಳ ನಿರೂಪಣೆ ಇರುತ್ತದೆ; ಮತ್ತು ಈ ಗಣಗಳಿಗೆ ಅನುಕ್ರಮವಾಗಿ – ರತಿ, ಕಾಮ, ಬಾಣ -- ಎಂಬ ಹೆಸರುಗಳೂ ಆ ಗ್ರಂಥಗಳಲ್ಲಿ ಕಂಡುಬರುತ್ತವೆ. ಪ್ರಸ್ತುತ ನಿಬಂಧದ ರಚನಾಕಾಲದಲ್ಲಿ ಇದು ನನ್ನ ಅರಿವಿಗೆ ಬಂದಿರಲಿಲ್ಲ. [ಜಯಕೀರ್ತಿಯು ಕಟಪಯಾದಿ ಸಂಖ್ಯಾನಪದ್ಧತಿಯನ್ನವಲಂಬಿಸಿ, ಈ ಗಣಗಳನ್ನು ಅನುಕ್ರಮವಾಗಿ ರ, ಲ, ಫ ಎಂದೂ ಸಂಕೇತಿಸಿದ್ದಾನೆ. ಕಟಪಯಾದಿ ವಿಧಾನದಂತೆ – ರ = ಎರಡು, ಲ = ಮೂರು, ಫ = ನಾಲ್ಕು ಎಂದಾಗುತ್ತದೆ. ಇವು ಆ ಮೂರು ಗಣವರ್ಗಗಳ ಪ್ರಥಮ ಗಣಾಕ್ಷರ ಸಂಖ್ಯೆಗಳನ್ನವಲಂಬಿಸಿ ಕಲ್ಪಿತವಾದ ಸಂಜ್ಞೆಗಳಾಗಿವೆ. ಮುದ್ರಿತ ಪುಸ್ತಕದಲ್ಲಿ 'ಫ' ಎಂಬುದರ ಬದಲಾಗಿ 'ಧ' ಎಂದಿದೆ. ನಾಗರೀಲಿಪಿಯಲ್ಲಿ फ ध (ಫ ಧ)ಗಳೊಳಗೆ ಭೇದವು ಅತ್ಯಲ್ಪವಾಗಿರುವುದರಿಂದ (ಗ್ರಂಥದ ಪ್ರತಿ ಮಾಡಿದವರಿಂದಲೋ ಮುದ್ರಕ-ರಿಂದಲೋ) ಘಟಿಸಿದ ಪ್ರಮಾದವಿದು.]

ರಚಿತವಾದ ಮೇಲೆ ಆ ಭಾಷೆಯ ಜನನವಾಗುವುದಲ್ಲವಷ್ಟೆ? ಹಾಗೆಯೇ, ಹಲವು ಬಗೆಯ ಪದ್ಯಗಳ ರಚನೆಯಾದ ಮೇಲೆಯೇ ಛಂದಃಶಾಸ್ತ್ರವು ರಚಿತವಾಗುವು-ದೆಂಬುದರಲ್ಲಿ ಸಂದೇಹವಿರಲಾರದು. ತಥ್ಯವು ಹೀಗಿರುವುದರಿಂದ – ಕನ್ನಡದಲ್ಲಿ ರೂಪುಗೊಂಡಿದ್ದ ನಾನಾಛಂದೋಬಂಧಗಳಿಗೆ ಆದಿಕಾಲದ ಛಂದೋಭಿಜ್ಞರು ಹೆಸರುಕೊಟ್ಟು ಲಕ್ಷಣನಿರೂಪಣೆ ಮಾಡಿದ ಕಾಲದಲ್ಲಿ, ಕನ್ನಡ ನುಡಿಗೆ ಸಂಸ್ಕೃತದ ಹಾಗೂ ಪ್ರಾಕೃತಗಳ ಸಂಪರ್ಕವು ಸಾಕಷ್ಟು ಆಗಿದ್ದಿರಬಹುದಾದ ಕಾರಣ, ಈ 'ಜಾತಿ'ಗಳಿಗೂ ಇವುಗಳ ಘಟಕಗಳಾದ ಗಣಗಳಿಗೂ ಆ ಬಗೆಯ ಹೆಸರುಗಳು ಬಂದಿರಬೇಕೆಂದು ಭಾವಿಸಿದರೆ ಅದು ತಪ್ಪಾಗಲಾರದೆನ್ನಬಹುದು. ಆದಕಾರಣ, ಈ 'ಜಾತಿ'ಗಳ ಹೆಸರುಗಳಾಗಲಿ, ಆ ಗಣಗಳ ಹೆಸರುಗಳಾಗಲಿ ಸಂಸ್ಕೃತವೋ ಅಪಭ್ರಂಶವೋ ಆದ ಮಾತ್ರದಿಂದ, ಆ ಛಂದೋಬಂಧಗಳು ಕನ್ನಡದವಲ್ಲ-ವೆಂದಾಗಲಾರವು. ಆದರೆ ಇದರಿಂದ ನಿಷ್ಪನ್ನವಾಗುವ ತಥ್ಯವೇನೆಂದರೆ, ಸಂಸ್ಕೃತದ ಸಂಪರ್ಕವಾಗುವುದಕ್ಕೆ ಮೊದಲು ಕನ್ನಡದಲ್ಲಿ ಛಂದಃಶಾಸ್ತ್ರಪ್ರಯತ್ನ ಹೆಚ್ಚೇನೂ ಆಗಿದ್ದಿಲ್ಲವೆಂಬಂಶ ಮಾತ್ರ.

ಆ ಹೆಸರುಗಳಿಂದಾಗಿ ಆ 'ಜಾತಿ'ಗಳು ಸಂಸ್ಕತ ಮೂಲದವುಗಳೆಂದು ಹೇಳಲಾಗುವುದಿಲ್ಲವೆಂದ ಮಾತ್ರಕ್ಕೆ, ಅವು ಕನ್ನಡದವೆಂದೇ ಸಿದ್ಧಾಂತ ಮಾಡಿ-ದಂತಾಗಲಿಲ್ಲ. ಇದು ಸುಲಭಸಾಧ್ಯವೇನೂ ಅಲ್ಲ. ಏಕೆಂದರೆ, ಕೂಲಂಕಷ ಶೋಧಕರೆಂದು ಪ್ರಸಿದ್ಧರಾಗಿರುವ ವಿದ್ವಾಂಸರೊಬ್ಬರು – ಸಾಮಾನ್ಯವಾಗಿ ಕನ್ನಡದವೆಂದೇ ತಿಳಿಯಲ್ಪಟ್ಟಿರುವ ವಾರ್ಧಕಾದಿ ಷಟ್ಪದಿಗಳು ಸಂಸ್ಕೃತದ 'ಮಯರಸತಜಭನ'ಗಳಿಂದ ಹುಟ್ಟಿದುವೆಂದು ಹೇಳುತ್ತಿದ್ದಾರೆ! ಈ 'ಜಾತಿ'ಗಳನ್ನು ಕುರಿತು ಮಹನೀಯರಾದ ಆ ವಿದ್ವಾಂಸರ ಸಂಶೋಧಿತವಾದ ಅಭಿಪ್ರಾಯ-ವೇನೋ ನನಗೆ ತಿಳಿಯದು. ಈ ವಿಷಯವಾಗಿ ಹೆಚ್ಚಿನ ವಿಚಾರಗಳು ಪ್ರಕಟವಾಗಿ ಚರ್ಚೆಯಾಗಿರುವುದೂ ಇಲ್ಲ. ಇಂತಹ ಸಂದರ್ಭದಲ್ಲಿ ಯಾವುದೊಂದು ಖಚಿತವಾದ ಅಭಿಪ್ರಾಯವನ್ನು ಪ್ರಕಟಿಸುವುದು ಕಷ್ಟಸಾಧ್ಯವೇ ಸೈ. ಹೀಗಿದ್ದರೂ ನನ್ನ ಬುದ್ಧಿಗೆ ಕಂಡದ್ದನ್ನು ಕಂಡಂತೆ, ಧೈರ್ಯಮಾಡಿ ಹೇಳುತ್ತೇನೆ; ಸಾವಧಾನ-ವಾಗಿ ಪರಿಶೀಲಿಸಬೇಕು.

ಸಂಸ್ಕೃತದ ಸುಪ್ರಸಿದ್ಧ ಛಂದೋಬಂಧಗಳೆಲ್ಲ ಹೆಚ್ಚಾಗಿ ಅಕ್ಷರನಿಯಮ-ದಿಂದ, ಕ್ವಚಿತ್ ಮಾತ್ರಾನಿಯಮದಿಂದ ಸಿದ್ಧವಾಗುವವುಗಳಾಗಿವೆ. ಸಂಸ್ಕೃತದ ಆದಿಯ 'ಛಂದ'(ವೇದ)ಗಳನ್ನು ನೋಡಿದರೆ, ಅಲ್ಲಿ ಪಾದಕ್ಕೆ ಗಣನಿಯಮವಿಲ್ಲದೆ ಅಕ್ಷರಗಣನೆ ಮಾತ್ರ ಇರುವುದು ಕಂಡುಬರುತ್ತದೆ; ಮತ್ತು ಆ 'ಛಂದ'ಗಳಿಗೆ ಮಾತ್ರಾನಿಯಮವೂ ಇಲ್ಲವೆಂಬುದು ಗೊತ್ತಾಗುತ್ತದೆ. ಆದುದರಿಂದ ಸಂಸ್ಕೃತದಲ್ಲಿ ಮೊದಲು ಅಕ್ಷರಬಂಧಗಳು ಹುಟ್ಟಿದವೆಂದೂ, ಮಾತ್ರಾಬಂಧಗಳು ಅನಂತರ ಹುಟ್ಟಿದವೆಂದೂ ತಿಳಿಯಬೇಕಾಗುತ್ತದೆ. ಅದು ಹೇಗೂ ಇರಲಿ; ಆದಿಯ ಎಂದರೆ, ವೈದಿಕ ಬಂಧಗಳನ್ನು ಬಿಟ್ಟು, ಕಾವ್ಯಪುರಾಣಾದಿಗಳ ಛಂದೋ

ಬಂಧಗಳನ್ನು ನೋಡಿದರೆ, ಅಲ್ಲಿ ಸರ್ವತ್ರ ವಿರಾಜಿಸುವುದು ಮುಖ್ಯವಾಗಿ ಅನುಷ್ಟುಪ್ ಶ್ಲೋಕ. ಕಾವ್ಯಾದಿಗಳ ಛಂದಸ್ಸಿನಲ್ಲಿ ವೈದಿಕಪದ್ಧತಿಯ ಛಂದಸ್ಸಿನ ಅವಶೇಷವಿದೆಂದು ಹೇಳಬಹುದು. ಏಕೆಂದರೆ ಇದು ವೇದಗಳಲ್ಲಿಯೂ ಇದೆ. ಆದರೆ ಕಾವ್ಯಾದಿಗಳ 'ಶ್ಲೋಕ'ವು ವೇದಗಳ 'ಅನುಷ್ಟುಪ್ ಛಂದ'ದಷ್ಟು ಉಚ್ಛೃಂಖಲವಲ್ಲ. ಕಾಲಕಳೆದಂತೆ ಅದರ ಬಂಧವು ಬಿಗಿಯಾಗುತ್ತಾ ಬಂದಂತೆ ತೋರುತ್ತದೆ. ಆದರೆ ಕಾಳಿದಾಸಾದಿಗಳ ಕಾವ್ಯಗಳಲ್ಲಿ ಕಂಡುಬರುವಂತಹ ಅಚ್ಚು-ಕಟ್ಟಾದ ಅನುಷ್ಟುಪ್ ಶ್ಲೋಕಗಳಲ್ಲಾದರೂ, ಅಕ್ಷರಗಣನಿಯಮವಾಗಲಿ ಮಾತ್ರಾ ನಿಯಮವಾಗಲಿ ಇಲ್ಲದೆ, ಕೇವಲ ಅಕ್ಷರಸಂಖ್ಯಾನಿಯಮ, ಮತ್ತು ಪರಂಪರಾ-ಗತವೆಂದು ಹೇಳಬಹುದಾದ ಕೆಲವು ಗುರುಲಘುಸ್ಥಾನನಿಯಮ - ಇಷ್ಟೆ ಇರುತ್ತವೆ. ಅನುಷ್ಟುಪ್ ಶ್ಲೋಕವನ್ನು ಬಿಟ್ಟರೆ, ಕಾವ್ಯಾದಿಗಳಲ್ಲಿ ಹೆಚ್ಚಾಗಿ ಕಂಡು ಬರುವ ಇನ್ನೊಂದು ಛಂದೋಬಂಧವು 'ಉಪಜಾತಿ'ಯಾಗಿದೆ. ಪಂಚಮಹಾ-ಕಾವ್ಯಗಳ ಉಪಜಾತಿಯು 'ಇಂದ್ರವಜ್ರ' 'ಉಪೇಂದ್ರವಜ್ರ'ಗಳ ಮಿಶ್ರಣವಾಗಿರು-ವುದಾದರೂ, ಪುರಾಣಗಳ ಉಪಜಾತಿಗಳಲ್ಲಿ 'ಇಂದ್ರವಂಶ' 'ವಂಶಸ್ಥ'ಗಳ ಮಿಶ್ರಣವೂ ಇರುತ್ತದೆ. ಇನ್ನುಳಿದುವೆಲ್ಲ, ಕಟ್ಟುನಿಟ್ಟಾಗಿ 'ಮಯರಸತಜಭನ'ಗಳ ನಿಯಮವನ್ನು ಪಾಲಿಸುವವುಗಳೇ ಎನ್ನಬಹುದು. ಇವಲ್ಲದೆ, ಕೆಲಕೆಲವು ಮಾತ್ರಾ ಬಂಧಗಳೂ, ಮತ್ತೆ ಕೆಲವು ಅಕ್ಷರಗಣ ಮಾತ್ರಾಗಣಗಳ ಸಂಸೃಷ್ಟಿಗಳೂ ಸಂಸ್ಕೃತದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ತಾತ್ಪರ್ಯವೇನೆಂದರೆ - ಸಂಸ್ಕೃತದಲ್ಲಿ ಅಕ್ಷರಗಣನೆಗೇ ಪ್ರಾಧಾನ್ಯ ಹೊರತು, ಮಾತ್ರಾಗಣನೆಗೆ ಅಲ್ಲ. ಮಾತ್ರಾಗಣನೆಗೆ ಪ್ರಾಧಾನ್ಯವಿರುವ ಬಂಧಗಳು ಪ್ರಾಕೃತಗಳಲ್ಲಿಯೇ ಹೆಚ್ಚಿನ ಆಶ್ರಯವನ್ನು ಪಡೆದಿ-ರುತ್ತವೆ. ತಾಲಬದ್ಧವಾದ ಗಾಯನಕ್ಕೆ ಪ್ರಾಕೃತವೇ ಹೆಚ್ಚಾಗಿ ಬಳಸಲ್ಪಟ್ಟಿರುವುದು ಸಂಸ್ಕೃತನಾಟಕಗಳಿಂದ ಗೊತ್ತಾಗುತ್ತದೆ. ಮತ್ತು ಸಂಸ್ಕೃತವು ವಿತಾಲ (= ತಾಲಬದ್ಧವಲ್ಲದ) ಗಾಯನಕ್ಕೆ ಮೀಸಲಾಗಿದ್ದಂತೆಯೂ ಕಂಡುಬರುತ್ತದೆ. ಇದಕ್ಕೆ ಒಂದೊಂದು ಅಪವಾದವಿರಬಹುದು; ಇವೆ. ಉದಾ: 'ಗೀತಗೋವಿಂದ', ಭಾಗವತದ 'ಗೋಪಿಕಾಗೀತ' ಇತ್ಯಾದಿ. (ಇವುಗಳೊಳಗೆ ಕೆಲವು ರಚನೆಗಳು ಅಕ್ಷರನಿಯಮವನ್ನೂ ಪಾಲಿಸುವವುಗಳಾಗಿವೆ.) 'ರಘುವಂಶ' ಮಹಾಕಾವ್ಯದಲ್ಲಿ ಕಾಳಿದಾಸನೂ, 'ಶಿಶುಪಾಲವಧ' ಮಹಾಕಾವ್ಯದಲ್ಲಿ ಮಾಘನೂ 'ಉದಯರಾಗ'ಕ್ಕೆ ವಿಷಮಗತಿವೃತ್ತಗಳನ್ನೇ ಬಳಸಿರುವುದೂ ಇಲ್ಲಿ ಲಕ್ಷಿಸತಕ್ಕದ್ದಾಗಿದೆ. ವೈದಿಕ ಋಷಿಗಳು ಧ್ಯಾನಾಸಕ್ತರೂ ಈಶ್ವರಸ್ತೋತ್ರನಿರತರೂ ಆಗಿದ್ದು ಮೆಯ್ಮನಗಳನ್ನು ಕುಣಿಸುವ ಸತಾಲಗಾನಪ್ರವಣರಾಗಿರದೆ - ಮನಸ್ಸನ್ನು ತಣಿಸಿ ಆತ್ಮಾನಂದ-ವನ್ನೀಯುವ ವಿತಾಲಗಾನಪ್ರಿಯರಾಗಿದ್ದರೆಂಬುದು ಸಾಮಗಾನಸ್ವರೂಪದಿಂದ ಸುವ್ಯಕ್ತವಾಗುತ್ತದೆ. ವೈದಿಕಪರಂಪರೆಯಲ್ಲಿಯೇ ಬೆಳೆದ ಸಂಸ್ಕೃತಪದ್ಯವಾಙ್ಮಯವು - ಅಕ್ಷರದಿಂದ ಅಕ್ಷರಕ್ಕೆ ವ್ಯಕ್ತವಾಗುವ ಸೂಕ್ಷ್ಮವಾದ ಗತಿಸೌಂದರ್ಯಕ್ಕೆ ಮೀಸ-ಲಾದ, ಅಸಮಸ್ಥಾನಗಳಲ್ಲಿ ವಿಶ್ರಮಿಸುವ, ಒಮ್ಮೊಮ್ಮೆ ಮೃದಂಗ ವೀಣಾದಿಗಳಲ್ಲಿ

ವಿಜೃಂಭಿಸುವ ವಿಷಮುಸಂಚಾರದ 'ಗತ್ತು'ಗಳನ್ನು ಹೋಲುವ, ಗಂಭೀರವಾದ ವಿಷಮಗತಿಯನ್ನೇ ಹೆಚ್ಚಾಗಿ ಆಶ್ರಯಿಸಿತು. ಆದರೆ ಸಾಮಾನ್ಯ ಜನತೆಗೆ ಸತಾಲ-ಗಾನವೇ ಇಷ್ಟವಾಗಿರುವ ಕಾರಣ, ತಾಲೋಪಜೀವಿಯಾದ ಮಾತ್ರಾಬಂಧಕ್ಕೆ ಪ್ರಾಕೃತಗಳಲ್ಲಿ ಉದಾರಾಶ್ರಯವು ಲಭಿಸಿತು.[7]

* * * * *

ಸಂಸ್ಕೃತದ ಹಾಗೂ ಪ್ರಾಕೃತದ ಛಂದೋಬಂಧಗಳೆಲ್ಲವೂ ಅಕ್ಷರ ಸಂಖ್ಯಾನಿಯಮಕ್ಕೆ ಅಥವಾ ಮಾತ್ರಾಸಂಖ್ಯಾನಿಯಮಕ್ಕೆ ಒಳಪಟ್ಟಿರುತ್ತವೆ. ಆದರೆ 'ಕರ್ಣಾಟಕ ವಿಷಯಜಾತಿ'ಗಳು (ಒಂದೆರಡು ಹೊರತಾಗಿ) ಆ ಎರಡು ನಿಯಮಗಳಿಗೂ ಬಹಿರ್ಭೂತವಾಗಿವೆ. ಅವುಗಳ ಘಟಕಗಳಾದ ತ್ರಿಮೂರ್ತಿ-ಗಣಗಳನ್ನು ಪರೀಕ್ಷಿಸಿದರೆ ಅವು ಅಕ್ಷರಗಣಗಳೂ ಅಲ್ಲ, ಮಾತ್ರಾಗಣಗಳೂ ಅಲ್ಲವೆಂಬುದು ಗೊತ್ತಾಗದಿರದು. ಆದರೆ – ನಾಗವರ್ಮನ ಛಂದೋಂ-ಬುಧಿಯನ್ನು ಪ್ರಕಾಶಪಡಿಸಿದ ಕಿಟ್ಟೆಲ್ ಸಾಹೇಬರು ಅವುಗಳನ್ನು "ಕನ್ನಡ ಮಾತ್ರಾಗಣಂಗಳ್" ಎಂದು ಹೆಸರಿಸಿ ಮುದ್ರಿಸಿಬಿಟ್ಟುದನ್ನೇ ಇಂದೂ (೧೯೩೨) ಸಹ ವಿದ್ವಾಂಸರು ಅನುವದಿಸುತ್ತಿದ್ದಾರೆ! (ಉದಾ: ಪಂಪಭಾರತದ ಉಪೋದ್ಘಾತ.) ಅಲ್ಲದೆ, ಸಾಂಗತ್ಯಕ್ಕೂ ಕನ್ನಡದ ಅನೇಕಾನೇಕ ಹಾಡುಗಳಿಗೂ –ನಾನು ಮುಂದೆ ತೋರಿಸುವಂತೆ – ವಾರ್ಧಕಾದಿ ಷಟ್ಪದಿಗಳಿಗೂ ಮಾತೃಸ್ಥಾನದಲ್ಲಿರುವ ಈ ಛಂದೋಗಣಗಳ ನಿಜತ್ವವನ್ನು ಸರಿಯಾಗಿ ತಿಳಿಯುವುದಕ್ಕೆ ಮನಸ್ಸು ಮಾಡದೆ, ಸಾಂಗತ್ಯಕ್ಕೆ – ತ್ರಿಪದಿಗೆ ಸಹ – ಯದ್ವಾತದ್ವಾ ಲಕ್ಷಣಗಳನ್ನು ಬರೆಯುತ್ತಿರುವುದು (ಉದಾ: ಕನ್ನಡಕೈಪಿಡಿ – ೧೯೨೭) ನಮ್ಮ ದುರ್ದೈವವೆಂದೇ ಹೇಳಬೇಕು. 'ಈ ಗಣಗಳು ಮಾತ್ರಾಗಣಗಳೂ ಅಲ್ಲದಿದ್ದರೆ, ಅಕ್ಷರಗಣಗಳೂ ಅಲ್ಲದಿದ್ದರೆ, ಇವಿನ್ನು ಎಂತಹ ಗಣಗಳಪ್ಪಾ!' ಎಂದು ಯಾರಾದರೂ ಕೇಳಬಹುದು. ಆದರೆ ಯಾವು-ದೊಂದು ವಸ್ತುವಿಗೆ ವಿಶಿಷ್ಟವಾದ ಹೆಸರು ಕೊಡಲ್ಪಟ್ಟಿಲ್ಲವೆಂಬುದರಿಂದ, ಆ ವಸ್ತುವಿಗೆ ವಿಶಿಷ್ಟತೆಯಿಲ್ಲವೆಂದಾಗಲಾರದು. 'ಮಾತ್ರಾಗಣ' ಎನ್ನಬೇಕಾದರೆ ಆವೊಂದು ಗುಂಪಿನ ಗಣಗಳಿಗೆಲ್ಲ ಮಾತ್ರಾಸಂಖ್ಯೆ ಸಮಾನವಾಗಿರಬೇಕಾಗುತ್ತದೆ; 'ಅಕ್ಷರಗಣ' ಎನ್ನಬೇಕಾದರೆ ಆವೊಂದು ಗುಂಪಿನ ಗಣಗಳಿಗೆಲ್ಲ ಅಕ್ಷರಸಂಖ್ಯೆ ಸಮಾನವಾಗಿರಬೇಕಾಗುತ್ತದೆ. ಆದರೆ ಬ್ರಹ್ಮ, ವಿಷ್ಣು, ರುದ್ರ ಎಂಬ ಈ ತ್ರಿಮೂರ್ತಿಗಣಗಳಿಗೆ ಈ ಎರಡು ನಿಯಮಗಳೊಳಗೆ ಯಾವುದೂ ಅನ್ವಯಿಸು-ವುದಿಲ್ಲ. ಬ್ರಹ್ಮಗಣದಲ್ಲಿ ಎರಡು ಅಥವಾ ಮೂರು ಅಕ್ಷರಗಳಿರುತ್ತವೆ; ವಿಷ್ಣು ಗಣದಲ್ಲಿ ಮೂರು ಅಥವಾ ನಾಲ್ಕು ಅಕ್ಷರಗಳಿರುತ್ತವೆ; ರುದ್ರಗಣದಲ್ಲಿ ನಾಲ್ಕು

7. ಸತಾಲಗಾಯನಕ್ಕೆ ಪ್ರಾಕೃತವೇ ಹೆಚ್ಚಾಗಿ ಬಳಸಲ್ಪಡುತ್ತಿತ್ತೆಂಬುದು ಸಂಸ್ಕೃತನಾಟಕಗಳಿಂದ ಮಾತ್ರವಲ್ಲ, ಸಂಗೀತಶಾಸ್ತ್ರ ಗ್ರಂಥಗಳಿಂದಲೂ ವ್ಯಕ್ತವಾಗುತ್ತದೆ.

ಅಥವಾ ಐದು ಅಕ್ಷರಗಳಿರುತ್ತವೆ. ಹೀಗೆ ಇರುವ ಕಾರಣ ಇವು ಅಕ್ಷರಗಣಗಳಲ್ಲ. ಇನ್ನು ಅಕ್ಷರಗತವಾದ ಗುರುತ್ವಲಘುತ್ವಗಳಿಗನುಗುಣವಾಗಿ – ಬ್ರಹ್ಮಗಣದಲ್ಲಿ ಹೆಚ್ಚೆಂದರೆ ನಾಲ್ಕು, ಕಡಮೆಯೆಂದರೆ ಮೂರು ಮಾತ್ರೆಗಳೂ; ವಿಷ್ಣುಗಣದಲ್ಲಿ ಹೆಚ್ಚೆಂದರೆ ಆರು, ಕಡಮೆ ಎಂದರೆ ನಾಲ್ಕು ಮಾತ್ರೆಗಳೂ; ರುದ್ರಗಣದಲ್ಲಿ ಹೆಚ್ಚೆಂದರೆ ಎಂಟು, ಕಡಮೆಯೆಂದರೆ ಐದು ಮಾತ್ರೆಗಳೂ ಇರುತ್ತವೆ. ಹೀಗಿರು– ವುದರಿಂದ ಇವು ಮಾತ್ರಾಗಣಗಳಲ್ಲ. ಹಾಗಾದರೆ ಇವಕ್ಕೆ ಹೆಸರೇನೆಂದು ಕೇಳಿದರೆ – ಪೂರ್ವಾಚಾರ್ಯರು ಕೊಟ್ಟಿರುವ ತ್ರಿಮೂರ್ತಿಸಂಜ್ಞೆಯೇ ಇದೆಯಲ್ಲವೇ? – ಎನ್ನಬಹುದು. ಇದು ಸಾಲದಿದ್ದರೆ – ಇವು 'ಕರ್ಣಾಟಕ ಜಾತಿ'ಗಳ ಘಟಕ– ಗಳಾಗಿರುವ ಕಾರಣ – ಇವನ್ನು 'ಕನ್ನಡ ಜಾತಿಗಣ'ಗಳೆಂದೂ ಕರೆಯಬಹುದು.[8]

{ಕನ್ನಡಜಾತಿ ಗಣಗಳ ಸ್ವರೂಪಧರ್ಮ}

ಈಗ ಇಲ್ಲೊಂದು ಸಮಸ್ಯೆ ಉದ್ಭವಿಸುತ್ತದೆ :– ಈ ಗಣವರ್ಗಗಳೊಳಗೆ ಯಾವುದೊಂದು ಗಣವರ್ಗದ ಅಕ್ಷರಸಂಖ್ಯೆಯಾಗಲಿ ಮಾತ್ರಾಸಂಖ್ಯೆಯಾಗಲಿ ಸಮಾನವಾಗಿಲ್ಲದಿರುವಾಗ – ಬ್ರಹ್ಮಗಣ ನಾಲ್ಕು, ವಿಷ್ಣುಗಣ ಎಂಟು, ರುದ್ರಗಣ ಹದಿನಾರು – ಹೀಗೆ ವರ್ಗೀಕೃತವಾಗಿರುವುದಕ್ಕೆ ಆಧಾರವಾದ ಅವುಗಳ ಸಮಾನಧರ್ಮವೇನು? – ಇದೇ ನಾವಿಲ್ಲಿ ಕಂಡುಕೊಳ್ಳಬೇಕಾದ ತಥ್ಯ.

ಈ ಮೂರು ಗಣವರ್ಗಗಳಲ್ಲಿ ಪ್ರತಿಯೊಂದು ಗಣವರ್ಗದ ಎಲ್ಲಾ ಗಣಗಳೂ ತಾಳಬದ್ಧವಾದ ಒಂದೊಂದು ಛಂದೋಬಂಧದ ಒಂದೊಂದು ತಾಳಖಂಡ(ಆವರ್ತ)ಗಳೆಂದು ಭಾವಿಸಿಕೊಂಡು, ಗಣಸ್ವರೂಪದರ್ಶಕವಾಗಿ ಛಂದೋಂಬುಧಿಯಲ್ಲಿ ಕೊಟ್ಟಿರುವ ಆಯಾವರ್ಗದ "ಗಣವಾಚಕ"ಗಳನ್ನು[9]

---

8. {ತ್ರಿಮೂರ್ತಿಗಣಗಳಿಗೆ 'ಅಂಶಗಣ'ಗಳೆಂಬ ಹೊಸ ಹೆಸರು} 'ಕನ್ನಡ ಕೈಪಿಡಿ'ಯ ದ್ವಿತೀಯ ಮುದ್ರಣ(೧೯೩೬)ದಲ್ಲಿ ಈ ಗಣಗಳಿಗೆ – ತಮಿಳಿನ ಛಂದೋಗಣ(ಚೀರ್)ಗಳ ಮೂಲ– ಘಟಕಗಳ ಹೆಸರಾದ 'ಅಶೈ' ಎಂಬ ಸಂಜ್ಞೆಯಿಂದ ಪ್ರೇರಣೆಯನ್ನು ಪಡೆದು – 'ಅಂಶಗಣ' ಎಂಬ ಹೊಸತೊಂದು ಹೆಸರನ್ನು ಕೊಡಲಾಗಿದೆ. ಅಂದಿನಿಂದ ಮೊದಲ್ಗೊಂಡು, ಈ ಗಣಗಳಿಗೆ ಆ ಹೆಸರೂ ಬಳಸಲ್ಪಡುತ್ತಿದೆ.

9. {ತ್ರಿಮೂರ್ತಿಗಣಗಳ ಗಣವಾಚಕಗಳು} ಬ್ರಹ್ಮ ವಿಷ್ಣು ರುದ್ರ ಎಂಬೀ ಮೂರು ಗಣವರ್ಗಗಳ ಎಲ್ಲಾ ಗಣಗಳಿಗೂ ನಾಗವರ್ಮನಿಂದಲೋ ಅಥವಾ ಅವನಿಗಿಂತ ಹಿಂದಿನ ಕನ್ನಡ ಛಂದಃಶಾಸ್ತ್ರಕಾರರಿಂದಲೋ – ಆಯಾ ಗಣದ ಗುರುಲಘುವಿನ್ಯಾಸವನ್ನು ತಿಳಿಸುವ "ಗಣವಾಚಕ"ಗಳು ರಚಿತವಾಗಿದ್ದು, ಅವು ಹೀಗಿವೆ:– (ಛಂದೋಂಬುಧಿ –ಪಂಚಮಾಧಿಕಾರ)

| I ಬ್ರಹ್ಮಗಣವಾಚಕಗಳು; | II ವಿಷ್ಣುಗಣವಾಚಕಗಳು; |
|---|---|
| – – <br> ಬ್ರಹ್ಮಂ | – – – <br> ಗೋವಿಂದಂ |
| ∪ ∪ – <br> ದ್ರುಹಿಣಂ | ∪ ∪ – – <br> ಜಲಜಾಕ್ಷಂ |

ಪಠಿಸಬೇಕು; ಎಂದರೆ – ಆಯಾ ವರ್ಗದ ಮೊದಲನೆಯ ಅಥವಾ ಎರಡನೆಯ ಗಣವನ್ನು ಉಚ್ಚರಿಸುವುದಕ್ಕೆ ಎಷ್ಟು ಮಾತ್ರಾಕಾಲ ಬೇಕಾಗುತ್ತದೋ, ಉಳಿದು-ವನ್ನು ಉಚ್ಚರಿಸುವುದಕ್ಕೂ ಅಷ್ಟೇ ಮಾತ್ರಾಕಾಲವನ್ನು ವ್ಯಯಿಸಬೇಕು. ಹೀಗೆ ಮಾಡುವಾಗ, ಪ್ರತಿಯೊಂದು ವರ್ಗದ ಆರಂಭದ ಎರಡು ಗಣಗಳ ಪಠನವು ಯಥಾಕ್ಷರ ಗುರುಲಘುವಾಗಿಯೇ ಇದ್ದು, ಮೂರನೆಯ ಗಣದಿಂದ ಮೊದಲು-ಗೊಂಡು ಮುಂದಿನ ಗಣಗಳ – ಗಣಾರಂಭದ ಲಘುಯುಗ್ಮಗಳ ಹೊರತು – ಉಳಿದ ಲಘುಗಳೆಲ್ಲವೂ ಗುರೂಚ್ಚಾರವನ್ನು ಪಡೆಯುತ್ತವೆ.[10] ಹೀಗೆ ಮಾಡದೆ,

---

ಧಾತ

ಸುರಪ

ಮಾಧವಂ

ಸ್ಮರಪಿತಂ

ಕಂಸಾರಿ

ನರಕಾರಿ

ಶ್ರೀಪತಿ

ಮುರರಿಪು

III ರುದ್ರಗಣವಾಚಕಗಳು:

ಗಂಗಾಧೀಶಂ

ಗಿರಿಜಾಕಾಂತಂ

ನೀಲಕಂಠಂ

ವೃಷಭಲಕ್ಷ್ಮಂ

ಕಾಮಾಂತಕಂ

ಪ್ರಮಥಾಧಿಪಂ

ಶೂಲಧರಂ

ಪುರಮಥನಂ

ಕಂದರ್ಪಾರಿ

ಮದನಧ್ವಂಸಿ

ಚಂದ್ರಮೌಳಿ

ಭುಜಗಧಾರಿ

ಭೂತಾಗ್ರಣಿ

ತ್ರಿಜಗದ್ಗುರು

ಕಾಮರಿಪು

ಮದನರಿಪು

10. {ತ್ರಿಮೂರ್ತಿಗಣಗಳ ಶ್ರವ್ಯರೂಪಗಳು} ಹಾಗೆ ಪಠಿಸಿದಾಗ ಈ ಗಣವಾಚಕಗಳು ಪಡೆಯುವ ಶ್ರವ್ಯರೂಪಗಳು ಈ ಕೆಳಗಿನಂತಾಗುತ್ತವೆ:-

I ಬ್ರಹ್ಮಗಣಗಳ ಶ್ರವ್ಯರೂಪಗಳು:

೧. ಬ್ರಹ್ಮಂ

೨. ದ್ರುಹಿಣಂ

೩. ಧಾತಾ

೪. ಸುರಪಾ

II. ವಿಷ್ಣುಗಣಗಳ ಶ್ರವ್ಯರೂಪಗಳು:

೧. ಗೋವಿಂದಂ

೨. ಜಲಜಾಕ್ಷಂ

೩. ಮಾಧಾವಂ

೪. ಸ್ಮರಪೀತಂ

ಇಷ್ಟಬಂದ ಲಘ್ವಕ್ಷರವನ್ನು ಗುರುವಾಗಿ ಉಚ್ಚರಿಸಿ ಪ್ರಥಮ ದ್ವಿತೀಯ ಗಣಗಳ ಮಾತ್ರಾಸಂಖ್ಯೆಗೆ ಸರಿಮಾಡಬಾರದು. ಏಕೆಂದರೆ, ಹಾಗೆ ಮಾಡುವುದು ಈ ಗಣವ್ಯವಸ್ಥೆಗೆ ವಿರುದ್ಧವಾಗುತ್ತದೆ; ಈ ಗಣವ್ಯವಸ್ಥೆಯ ವಿಶಿಷ್ಟಲಕ್ಷಣವೇನೆಂಬು– ದನ್ನು ಪರೀಕ್ಷಿಸಿ ನೋಡಿದರೆ ಇದು ಮನವರಿಕೆಯಾಗುತ್ತದೆ: ಈ ಗಣಗಳೊಳಗೆ ಯಾವುದೊಂದು ಗಣದ ಆದಿಯಲ್ಲಿಯೂ ಒಂಟಿ ಲಘು ಇರುವುದಿಲ್ಲ! ಇದಕ್ಕೆ ಕಾರಣವೇನೆಂದರೆ, ಆ ಲಘುಯುಗ್ಮಗಳು ಆಯಾ ವರ್ಗದ ಪ್ರಥಮಗಣದ ಆದ್ಯಾಕ್ಷರವಾದ ಗುರುವಿನ ಪ್ರತಿರೂಪಗಳಾಗಿ ಅಲ್ಲಿ ಬಂದವುಗಳಾಗಿವೆ. ಮುಂದೆ ಬರುವ ಪ್ರತಿಯೊಂದು ಲಘುವೂ ಪ್ರಥಮಗಣದ ಇತರ ಒಂದೊಂದು ಗುರುವಿನ ಪ್ರತಿರೂಪವಾಗಿರುತ್ತದೆ; ಈ ಕಾರಣದಿಂದ ಇವು ಮಾತ್ರ ಪಠನದಲ್ಲಿ ಗುರೂಚ್ಚಾರವನ್ನು ಪಡೆಯತಕ್ಕವುಗಳಾಗಿವೆ; ಗಣಾದಿಯ ಲಘುಯುಗ್ಮವು ಒಂದು ಗುರ್ವಕ್ಷರದ ಪ್ರತಿರೂಪವಾಗಿರುವ ಕಾರಣ, ಆ ಯುಗ್ಮದ ಲಘುಗಳು ಗುರೂ– ಚ್ಚಾರಕ್ಕೆ ಅನರ್ಹವಾದವುಗಳಾಗಿರುತ್ತವೆ. ಇದೇ ಈ ಗಣವ್ಯವಸ್ಥೆಯ ವೈಶಿಷ್ಟ್ಯ. ಈ ರಹಸ್ಯವನ್ನರಿತರೆ – ಈ ಗಣಗಳಿಂದ ಘಟಿತವಾಗಿರುವ ಪಿರಿಯಕ್ಕರ ಮೊದಲಾದ

---

೫. ಕಂಸಾರೀ
೬. ನರಕಾರೀ
೭. ಶ್ರೀಪಾತೀ
೮. ಮುರರೀಪೂ

ರುದ್ರಗಣಗಳ ಶ್ರವ್ಯರೂಪಗಳು:

| | |
|---|---|
| ೧. ಗಂಗಾಧೀಶಂ | ೯. ಕಂದರ್ಪಾರೀ |
| ೨. ಗಿರಿಜಾಕಾಂತಂ | ೧೦. ಮದನಧ್ವಂಸೀ |
| ೩. ನೀಲಾಕಂಠಂ | ೧೧. ಚಂದ್ರಾಮೌಳೀ |
| ೪. ವೃಷಭಾಲಕ್ಷ್ಮಂ | ೧೨. ಭುಜಗಾಧಾರೀ |
| ೫. ಕಾಮಾಂತಾಕಂ | ೧೩. ಭೂತಾಗ್ರಾಣೀ |
| ೬. ಪ್ರಮಥಾಧೀಪಂ | ೧೪. ತ್ರಿಜಗದ್ಗೂಳೂ |
| ೭. ಶೂಲಾಧಾರಂ | ೧೫. ಕಾಮಾರೀಪೂ |
| ೮. ಪುರಮಾಥಾನಂ | ೧೬. ಮದನಾರೀಪೂ |

ವಿ.ಸೂ. – ಯಥಾಕ್ಷರವಾಗಿ – ಬ್ರಹ್ಮಗಣಗಳು ನಾಲ್ಕು, ವಿಷ್ಣು ಗಣಗಳು ಎಂಟು, ರುದ್ರ ಗಣಗಳು ಹದಿನಾರು ಆಗಿರುವವಾದರೂ – ಅವು ಶ್ರವ್ಯರೂಪಗಳನ್ನು ಪಡೆದಾಗ, (ಬ್ರಹ್ಮ ವಿಷ್ಣು ರುದ್ರ ಎಂಬೀ ಮೂರು ವರ್ಗಗಳಲ್ಲಿ) ಪ್ರತಿಯೊಂದು ವರ್ಗದ ಗಣಗಳಿಗೂ ಎರಡೆರಡೇ ರೂಪಭೇದಗಳುಂಟಾಗುವವೆಂಬ ತಥ್ಯವನ್ನು ಈ ಮೇಲಿನ ವಿವರಣೆಯಿಂದ ಕೊಂಡುಕೊಳ್ಳಬಹುದಾಗಿದೆ.

ಆ "ಜಾತಿ"ಗಳನ್ನೋದುವ ಕೆಲಸವು ಸುಸೂತ್ರವಾಗಿ ಕೈಗೂಡುತ್ತದೆ; ಮತ್ತು ಹಾಡಿನ ಪ್ರತಿಯೊಂದು ತಾಳಖಂಡದ ಆದಿಯಲ್ಲಿಯೂ ಲಗೋಚ್ಚಾರ (ಲಗಂ)ವನ್ನು ನಿಷೇಧಿಸುವುದಕ್ಕಾಗಿಯೇ, ಒಂದಿಷ್ಟು ವಿಚಿತ್ರವಾಗಿ ಕಾಣುವಂತಹ, ಈ ಗಣವರ್ಗಗಳ ನಿರ್ಮಾಣವಾಯಿತೆಂಬುದೂ ಗೊತ್ತಾಗುತ್ತದೆ.

ಯಥಾಕ್ಷರ ಮಾತ್ರಾಗಣನೆಯಂತೆ ಈ ಗಣಗಳು ಮಾತ್ರಾಗಣ-ಗಳೆನಿಸಲಾರವಾದರೂ – ಈ ಮೇಲೆ ನಿರೂಪಿಸಿದ ವಿಧಾನದಂತೆ ಪಠಿಸುವಾಗ ಇವು ನಿಯತವಾದ ಮಾತ್ರಾಕಾಲಾವಧಿಬದ್ಧವಾಗುವುದರಿಂದ, ಇವನ್ನೂ ಮಾತ್ರಾಗಣಗಳೆಂದೇ ಹೇಳಬಾರದೇಕೆಂಬ ಶಂಕೆ ಇಲ್ಲಿ ಹುಟ್ಟಬಹುದು. ಆದರೆ – ಹಾಗೆ ಹೆಸರಿಸಿದರೆ, ಯಥಾಕ್ಷರ ಮಾತ್ರಾಗಣನೆಯಿಂದ ಸಿದ್ಧವಾಗುವ ಸುಪ್ರಸಿದ್ಧ-ವಾದ ಮಾತ್ರಾಗಣಗಳ ಸ್ವಭಾವಕ್ಕೂ ಈ ಗಣಗಳ ಸ್ವಭಾವಕ್ಕೂ ಇರುವ ಭೇದವು ಕಣ್ಮರೆಯಾಗಿ ಹೋಗುತ್ತದೆ. (ಹಾಗೆ ಆಗಿರುವುದನ್ನು ಹಿಂದೆಯೇ ತಿಳಿಸಲಾಗಿದೆ.) ಇದಲ್ಲದೆ – ಹಾಡಿನ ಗತಿ(= ಧಾಟಿ)ಯನ್ನು ಇಷ್ಟಾನುಸಾರವಾಗಿ ಒಂದಿಷ್ಟು ಬದಲಾಯಿಸುವ ಅನುಕೂಲತೆ ಈ ಗಣಗಳಲ್ಲಿರುವುದರಿಂದ, ಆರು ಮಾತ್ರೆಯ ತಾಳದ ಒಂದು ಬಂಧವನ್ನು ಏಳು ಮಾತ್ರೆಯ ತಾಳದಲ್ಲಿ – ಯಾವ ಕೊರತೆಯೂ ಇಲ್ಲದೆ – ಹಾಡಲು ಸಾಧ್ಯವಾಗುತ್ತದೆ. (ತಾಳವನ್ನು ಹೀಗೆ ಮಾರ್ಪಡಿಸಿ ಹಾಡಿದಾಗ, ಯಕ್ಷಗಾನದ ಪರಿಭಾಷೆಯಲ್ಲಿ ಅದು 'ಕೋರೆ' ಎಂಬ ಹೆಸರನ್ನು ಪಡೆಯುತ್ತದೆ.) ಈ ಪ್ರಕಾರ, ಈ ಗಣಗಳಿಗೆ ಹಾಡುವಾಗಲೂ ಮಾತ್ರಾಸಂಖ್ಯೆ ಬೇರೆ ಬೇರಾಗುವ ಕಾರಣ, ಇವನ್ನು ಮಾತ್ರಾಗಣಗಳೆನ್ನುವುದು ಸರ್ವಥಾ ಅಯುಕ್ತವೂ ಅನುಚಿತವೂ ಆಗುತ್ತದೆ.

{ಲಗಾದಿಗಣನಿಷೇಧ ಕನ್ನಡಜಾತಿಗಣಗಳ ಮುಖ್ಯ ಲಕ್ಷಣ}

ಈ ಗಣಗಳು ಸಂಸ್ಕೃತಮೂಲದವೆಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಸಂಸ್ಕೃತದ ಛಂದಃಶಾಸ್ತ್ರದಲ್ಲಾಗಲಿ ಸಂಸ್ಕೃತಗ್ರಂಥಗಳಲ್ಲಾಗಲಿ, ತ್ರಿಮೂರ್ತಿಗಣಘಟಿತವಾದ 'ಕನ್ನಡಜಾತಿ'ಗಳನ್ನು ಹೋಲುವ ಬಂಧಗಳಿರುವುದು ಕಂಡುಬಂದಿಲ್ಲ. ಇದಲ್ಲದೆ, ಸಂಸ್ಕೃತಛಂದೋಬಂಧಗಳಲ್ಲಿ 'ಜಗಣ'ದ ಮತ್ತು 'ಯಗಣ'ದ ಪ್ರಭಾವವು ಹೆಚ್ಚು. ಲಘುಪ್ರಥಮವಾಗಿ ಗುರುದ್ವಿತೀಯವಾಗಿರುವು-ದೆಂದರೆ ಸಂಸ್ಕೃತಕವಿಗಳಿಗೆ ಬಹಳ ಇಷ್ಟ. ಪಂಚಮಹಾಕಾವ್ಯಗಳೊಳಗೆ ಮೂರು ಕಾವ್ಯಗಳು ಜಗಣದಿಂದಲೇ ಆರಂಭಗೊಂಡಿವೆ:

"ಶ್ರಿಯಃ ಕುರೂಣಾಮಧಿಪಸ್ಯ..." (ಭಾರವಿ, ಕಿರಾತಾರ್ಜುನೀಯ);

"ಶ್ರಿಯಃ ಪತಿಃ ಶ್ರೀಮತಿ..." (ಮಾಘ, ಶಿಶುಪಾಲವಧ);

"ನಿಪೀಯ ಯಸ್ಯ ಕ್ಷಿತಿರಕ್ಷಿಣಃ..." (ಶ್ರೀಹರ್ಷ, ನೈಷಧೀಯ ಚರಿತ).

ಅಲ್ಲದೆ, ಸಂಸ್ಕೃತದ ಅತಿಮನೋಹರವಾದ ವೃತ್ತಗಳಲ್ಲಿ ಹಲವು ಜಗಣದಿಂದ

ಅಥವಾ ಯಗಣದಿಂದ ಆರಂಭಗೊಳ್ಳುತ್ತವೆ. ಉದಾ: ಪೃಥ್ವೀವೃತ್ತ, ಶಿಖರಿಣೀ ವೃತ್ತ. ಈ ವೃತ್ತಗಳಲ್ಲಿ ವಿಕಟಬಂಧದ ಪರಮಾವಧಿಯ ಸೌಂದರ್ಯವನ್ನು ನೋಡಬಹುದು. ಒಟ್ಟಾರೆ ಹೇಳುವುದಾದರೆ, ಜಗಣಯಗಣಗಳು ಪದ್ಯಬಂಧ-ಕ್ಕೊಂದು ಭೂಷಣವೆಂದೇ ಸಂಸ್ಕೃತಕವಿಗಳು ತಿಳಿದಿದ್ದರೆನ್ನಬಹುದು. ಅವು ಬಂಧಕ್ಕೊಂದು ಕುಣಿತವನ್ನು ತರುತ್ತವೆಂಬುದರಲ್ಲಿ ಸಂದೇಹವಿಲ್ಲ. ಆದರೆ 'ಕನ್ನಡಜಾತಿ'ಗಳ ಜೀವವನ್ನೇ ಹೀರುವ ಗಣಗಳು ಅವಾಗಿವೆ. ನಾಗವರ್ಮನು ಹೇಳುವ ಹತ್ತು ಜಾತಿಗಳು ಮಾತ್ರ ಈ ನಿಯಮಕ್ಕೆ ಒಳಪಟ್ಟವುಗಳಲ್ಲ; ಯಾವ ಷಟ್ಪದಿಯ ಯಾವ ಗಣವನ್ನು ತೆಗೆದುಕೊಂಡರೂ ಈ ನಿಯಮಕ್ಕೆ ಒಂದೇ ಒಂದು ಅಪವಾದವಿಲ್ಲ. ಕನ್ನಡದಲ್ಲಿಯೇ ಹುಟ್ಟಿ ಬೆಳೆದ – ಎಂದರೆ ಅನ್ಯಭಾಷೆಯ ಸಾಹಚರ್ಯದ ಫಲವಾಗಿ ಅಲ್ಲದೆ ನಿರ್ಮಿತವಾದ – ಯಾವುದಾದರೂ ಒಂದು ಬಗೆಯ ಗಣಬಂಧವಾಗಿರುವ ಯಾವುದೊಂದು ಕನ್ನಡ ಹಾಡಿನಲ್ಲಿಯೂ ಇದೇ ನಿಯಮವಿರುವುದನ್ನು ಕಾಣಬಹುದು. ವಿಶುದ್ಧ ಕನ್ನಡ ಛಂದೋಬಂಧಗಳಾವು-ವೆಂಬುದನ್ನು ನಿರ್ಣಯಿಸುವುದಕ್ಕೆ ಇದೊಂದು ಒರೆಗಲ್ಲೆಂದು ಹೇಳಿದರೂ ಹೇಳಬಹುದು. ಈ ಗಣಗಳ ಸ್ವಭಾವದ ಪರಿಣಾಮವು ಎಷ್ಟರಮಟ್ಟಿಗೆ ಕನ್ನಡ ಹಾಡುಗಾರರಲ್ಲಿ ಆಗಿದೆಯೆಂದರೆ – 'ಸಾಮಾನ್ಯ' ಎನ್ನುವಷ್ಟು ತಾಳಜ್ಞಾನವಿರುವ ಯಕ್ಷಗಾನ ಭಾಗವತರೊಳಗೆ, 'ತನ್ನ ಹೆಂಡತೀ । ಗರೇತಿಯೆಂದುೀ । ತವರ್ಮನೆಯೊಳಗೆ । ಬಿಡಬಾರ್ದುೀ ॥' ಎಂದು ಹಾಸ್ಯಗಾರನು ಹಾಡಿ ಕುಣಿ-ಯುವಾಗ, "ಗರಾತಿ" ಎಂದು ಜಗಣಗತಿ ಬರುವಲ್ಲಿ ತಾಳತಪ್ಪಿ ಹೊಡೆಯು-ವವರೇ ಬಹಳಮಂದಿ. ಇದು ಅಂಥವರ ತಾಳಾಭ್ಯಾಸದ ಕೊರತೆಯನ್ನು ತೋರಿಸುತ್ತದಾದರೂ, ಕನ್ನಡಿಗ ಸಾಮಾನ್ಯರಿಗೆ ಹಾಡಿನ ತಾಳಖಂಡಗಳ (=ಆವರ್ತಗಳ ಅರ್ಥಾತ್ ಛಂದಃಖಂಡಗಳ) ಆದಿಯಲ್ಲಿ ಲಗೋಚ್ಚಾರವು ಎಷ್ಟು ಅಪರಿಚಿತವೆಂಬುದನ್ನು ತೋರ್ಪಡಿಸುತ್ತದೆ.

ಈ ನಿಯಮವು ಕನ್ನಡಕ್ಕೆ ಮಾತ್ರ ಇರುವುದಲ್ಲ; ತುಳು ಹಾಡು-ಗಳಲ್ಲಿಯೂ ಇದು ಇರುವಂತೆ ತೋರುತ್ತದೆ. ಮತ್ತು ಎಷ್ಟೋ ತುಳು 'ಕಬಿತ್ತ'-ಗಳಿಗೆ ತ್ರಿಮೂರ್ತಿಗಣಸಮನ್ವಯವಾಗುತ್ತದೆ. ಉದಾ:

ಕಜ್ರ್ಗೋಳೋ । ಕಜ್ರ್ಗೋಳೋ । ಮಾಯಿತಾ । ಪುಣ್ಣಮೆ ॥
ಕಜ್ರ್ಗೋಳು । ಪುಟ್ಟ್‌ನೆ । ಕರಿಯಬ । ಡೆಕ್ಕಾಯಿ ॥

ಇಲ್ಲಿ ಪ್ರತಿ ಪಾದದಲ್ಲಿಯೂ ನಾಲ್ಕು ಶುದ್ಧ ವಿಷ್ಣುಗಣಗಳಿರುವುದನ್ನು ನೋಡಬಹುದು. (ಕನ್ನಡ ಜಾತಿಗಳಲ್ಲಿ ಹೇಗೋ ಹಾಗೆ ತುಳು ಹಾಡುಗಳ-ಲ್ಲಿಯೂ ಲಗಾದಿಯಾದ ಛಂದಃಖಂಡಗಳಿಲ್ಲದಿರುವುದನ್ನು ಪರಿಭಾವಿಸುವಾಗ,

ಇದು ಎಲ್ಲಾ ದ್ರಾವಿಡಭಾಷೆಗಳ ಆದಿಕಾಲದ ಛಂದಃಸ್ವಭಾವವಾಗಿದ್ದಿರಬೇಕೆಂಬ ಅನುಮಾನ ಹುಟ್ಟುತ್ತದೆ.)[11]

* * * * *

{ಸಂಸ್ಕೃತ ಛಂದಸ್ಸಿನ ತ್ರಿಕಗಳು ಕನ್ನಡ ತ್ರಿಮೂರ್ತಿಗಣಗಳ ಜನಕಗಳಲ್ಲ}

ಸಂಸ್ಕೃತದ "ಮಯರಸತಜಭನ"ಗಳಿಗೆ ತಾಳವು ತಗಲುವುದಿಲ್ಲ. ಕಾರಣವೇನೆಂದರೆ ಅವುಗಳೊಳಗೆ ಮಾತ್ರಾಸಮತೆ ಇಲ್ಲ. ಅವುಗಳಿಂದಾದ ವೃತ್ತಗಳೊಳಗೆ ತಾಳಕ್ಕೆ ಅಳವಡದವುಗಳನ್ನು – ಅವುಗಳ ಅವಯವಗಳು ಮಾತ್ರಾಕಾಲದಲ್ಲಿ ಸಮನಾಗುವಂತೆ – ಎಳೆದೋದುವ ಪದ್ಧತಿಯೂ ಇಲ್ಲ. ಆದುದರಿಂದ ಆ ಗಣಗಳಿಂದ ತ್ರಿಮೂರ್ತಿಗಣಗಳ ಜನ್ಮವಾಯಿತೆಂದು ಹೇಳು-ವುದಕ್ಕೆ ಆಧಾರವೇ ಇಲ್ಲ. ಸಂಸ್ಕೃತದ ಮಾತ್ರಾಗಣಗಳು ನಾಲ್ಕು ಮಾತ್ರೆಯವು. ಇವುಗಳಲ್ಲಿ ಪ್ರಥಮಲಘುವಿನ ಮೇಲೆ ಗುರುವಿಗೆ ನಿಷೇಧವಿಲ್ಲ; ಮಾತ್ರವಲ್ಲ, ಆರ್ಯಾದಿ ಬಂಧಗಳ ವಿಶಿಷ್ಟ ಸ್ಥಾನಗಳಲ್ಲಿ ಅದು ಇರಲೇಬೇಕಾಗುವಂತಹದು. ಕಂದಪದ್ಯವು ಈ ವರ್ಗಕ್ಕೆ ಸೇರಿದುದು. ಅದರ ಯುಗ್ಮಗಣಸ್ಥಾನಗಳಲ್ಲಿ (ಎಂಟನೆಯದು ಹೊರತು) ಪುರಾರಿ ಎಂಬ ಜಗಣರೂಪವು ಬರಬಹುದು; ಮತ್ತು ಆರನೆಯ ಗಣವು ಸರ್ವಲಘುವಲ್ಲದಿದ್ದರೆ ಅದೇ ಬರಬೇಕು. ಕಂದದ ಪ್ರಸಾರವು ಕನ್ನಡದಲ್ಲಿ ನಿರರ್ಗಳವಾಗಿ ಆದ ಮೇಲೆಯೇ ಹುಟ್ಟಿದ 'ಕನ್ನಡ-ಬಂಧ'ಗಳಲ್ಲಿ ಸಹ (ಉದಾ: ವಾರ್ಧಕಾದಿ ಷಟ್ಪದಿಗಳು) ಜಗಣವು ಸೇರಿಕೊಳ್ಳುವುದು ಸಾಧ್ಯವಾಗಲಿಲ್ಲವೆಂಬುದನ್ನು ಪರಿಭಾವಿಸಿದರೆ, ಲಘುಪ್ರಥಮದ ಮೇಲಿನ ಗುರುನಿಷೇಧವು ಕನ್ನಡದ ಹುಟ್ಟುಗುಣವಾಗಿತ್ತೆಂಬುದು ಗೊತ್ತಾಗದಿರದು. ಸಂಸ್ಕೃತ ಮಾತ್ರಾಗಣಗಳ ಪ್ರಭಾವದಿಂದ ತ್ರಿಮೂರ್ತಿಗಣಗಳ ಜನ್ಮವಾಗಿರುತ್ತಿದ್ದರೆ, ಯಥಾಕ್ಷರವಾದ ಮಾತ್ರಾಗಣನೆಯಿಲ್ಲದೆ ಅವುಗಳ ರಚನೆ ಉಂಟಾಗುತ್ತಿರಲೇ ಇಲ್ಲ. ಮತ್ತು ಜಗಣಕ್ಕೆ ಬಹಿಷ್ಕಾರವೂ ಬರುತ್ತಿರಲಿಲ್ಲ. ತ್ರಿಮೂರ್ತಿಗಣಗಳು ವೈದಿಕಛಂದಸ್ಸಿನಿಂದ ಹುಟ್ಟಿರಬಹುದೆನ್ನುವಂತೆಯೂ ಇಲ್ಲ; ಏಕೆಂದರೆ ವೈದಿಕ ಬಂಧಗಳಲ್ಲಿಯೂ, ಲೌಕಿಕ ಸಂಸ್ಕೃತಬಂಧಗಳಲ್ಲಿ ಹೇಗೋ ಹಾಗೆ, ಜಗಣ ಯಗಣಗಳಿಗೆ ಬಹಳ ಪುರಸ್ಕಾರವಿದೆ.

---

11. ತಮಿಳಿನ ಚೀರ್(ಗಣ)ಗಳಲ್ಲಿ, ಯಥಾಕ್ಷರವಾಗಿ ಲಗಾದಿಯಾದವುಗಳೂ ಇರುವ-ವಾದರೂ – ಪಠನದಲ್ಲಿ ಅವು ತಮ್ಮ ಲಗಾದಿತ್ವವನ್ನು ಕಳೆದುಕೊಳ್ಳುವವೆಂಬುದನ್ನು ತಮಿಳಿನ 'ಗಣವಾಚಕ'ಗಳು (ವಾಯ್ಪಾಟ್) ತಿಳಿಸುತ್ತವೆ. ಉದಾ:– "ಏಟುತ್ತೆಲ್ಲಾಂ" ಎಂಬ ಚೀರಿನ ಗಣವಾಚಕರೂಪವು ಪುಳಿಮಾಂಗಾಯ್ ಎಂದೂ, "ಮುದಜ್ಜೇ" ಎಂಬುದರ ಗಣವಾಚಕ ರೂಪವು ಪುಳಿಮಾ ಎಂದೂ ಇರುವುದಾಗಿದೆ.

(ಉದಾ : ಹಿರಣ್ಯಗರ್ಭಃ ಸಮವರ್ತತಾಗ್ರೇ' ; 'ಸಹಸ್ರಶೀರ್ಷಾಪುರುಷಃ' ; 'ನಮಸ್ತೇ ರುದ್ರ ಮನ್ಯವ ಉತೋತ ಇಷವೇ ನಮಃ')

* * * * *

{ಕನ್ನಡಜಾತಿಗಳು ಸ್ವತಂತ್ರ ಛಂದೋಬಂಧಗಳು}

ಈ ಎಲ್ಲ ಕಾರಣಗಳಿಂದ, ತ್ರಿಮೂರ್ತಿಗಣಘಟಿತವಾದ 'ಕನ್ನಡಜಾತಿ'ಗಳು ಸ್ವತಂತ್ರ ಛಂದೋಬಂಧಗಳೆಂದು ಸಿದ್ಧವಾಗುತ್ತದೆ. ಆದುದರಿಂದ ನಾನು ಹೇಳು-ವುದೇನೆಂದರೆ – ಕನ್ನಡಿಗರ ಮೋರೆಯಲ್ಲಿ ಮೀಸೆ ಹೇಗೆ ಸ್ವಾಭಾವಿಕವಾಗಿ, ತಾನಾಗಿ ಮೊಳೆಯಿತೋ ಹಾಗೆಯೇ – ಕನ್ನಡನುಡಿಯಲ್ಲಿ 'ಕನ್ನಡಜಾತಿ'ಗಳು ಹುಟ್ಟಿದವು; ಮತ್ತು ಅವುಗಳ ರಚನಾವಿಧಾನದಲ್ಲಿ ಸ್ವಯಂಸಿದ್ಧವಾಗಿದ್ದ ನಿಯಮ-ವಿಶೇಷಗಳನ್ನು ಕಂಡುಕೊಂಡ ಛಂದೋಭಿಜ್ಞರು ತ್ರಿಮೂರ್ತಿಗಣಗಳನ್ನು ಅನು-ಗೊಳಿಸಿದರು ಎಂಬುದಾಗಿದೆ.

{ಚತುರಸ್ರತೆಯೆಂಬುದು ಹಾಡಿನ ಲಕ್ಷಣ}

ಸಂಸ್ಕೃತ ಪದ್ಯಗಳೆಲ್ಲವೂ (ಕೆಲವು ವೈದಿಕಛಂದೋಬಂಧಗಳ ಹೊರತು) ಚತುಷ್ಪದಿಗಳೇ – ಎಂದರೆ ನಾಲ್ಕು ಪಾದಗಳುಳ್ಳವುಗಳೇ – ಆಗಿರುತ್ತವೆಂದು ಹೇಳಿದರೆ ತಪ್ಪಾಗಲಾರದು. ನಾಗವರ್ಮನು ಹೇಳಿರುವ 'ಕನ್ನಡಜಾತಿ'ಗಳಲ್ಲಿ ತ್ರಿಪದಿ, ಏಳೆ, ಷಟ್ಪದಿಕೆ ಎಂಬ ಮೂರು ಹೊರತು – ಉಳಿದೆಲ್ಲವೂ ನಾಲ್ಕು ಪಾದಗಳವೇ ಆಗಿವೆ. ಇದರಿಂದಾಗಿ ಅವು ಸಂಸ್ಕೃತಮೂಲದವುಗಳೆಂದು ಹೇಳತೊಡಗಿದರೆ – ಇಂಗ್ಲಿಷ್ ಮೊದಲಾದ ಅನ್ಯಾನ್ಯ ಭಾಷೆಗಳ ಎಷ್ಟೆಷ್ಟೋ ಬಂಧಗಳನ್ನು ಸಂಸ್ಕೃತಜನ್ಯಗಳೆಂದು ಹೇಳಬೇಕಾದೀತು! ಹಿಂದೆ ಉದಾಹರಿಸಿದ 'ಕಜ್ಜೊರ್ಗಳೋ...' ಎಂಬ ತುಳು ಹಾಡಿಗೂ, ಲೀಲಾಶುಕನ–

> ಅಂಗನಾ । ಮಂಗನಾ । ಮಂತರೇ । ಮಾಧವೋ ।
> ಮಾಧವಂ । ಮಾಧವಂ । ಚಾಂತರೇ । ಣಾಂಗನಾ ॥
> ಇತ್ಥಮಾ । ಕಲ್ಪಿತೇ । ಮಂಡಲೇ । ಮಧ್ಯಗಃ ।
> ಸಂಜಗೌ । ವೇಣುನಾ । ದೇವಕೀ । ನಂದನಃ ॥ . ॥
>
> (ಶ್ರೀಕೃಷ್ಣಕರ್ಣಾಮೃತ)

ಎಂಬೀ ಪದ್ಯಕ್ಕೂ ಸಾಂಪ್ರದಾಯಿಕವಾದ ಧಾಟಿಯಲ್ಲಿರುವ ಸಾಮ್ಯವು ಸುಸ್ಪಷ್ಟ.[12] ಈ ಕಾರಣದಿಂದ, ಈ ಸಂಸ್ಕೃತವೃತ್ತ(ಸ್ರಗ್ವಿಣೀ)ದಿಂದ ತುಳು'ನಲಿಕೆ'(=ನೃತ್ಯ)ಯವರ

---

12. ಉದಾಹೃತವಾದ ಲೀಲಾಶುಕನ ಸ್ರಗ್ವಿಣೀವೃತ್ತವನ್ನು ಹಾಡುವಾಗ ಪ್ರತಿಯೊಂದು ಗಣಾಂತದಲ್ಲಿ (ಇದು ತಾಳಬದ್ಧವೂ ಆದ ವೃತ್ತವಾದುದರಿಂದ ಪ್ರತಿಯೊಂದು ಆವರ್ತದ ಕೊನೆಯಲ್ಲಿ ಎಂದರೂ ಸರಿ) ಒಂದು ಮಾತ್ರಾಕಾಲವನ್ನು ಹೆಚ್ಚಿಸಿ ಹಾಡುವುದು ಪದ್ಧತಿ.

(ಇವರು ಪಂಚಮರು) ಆ ಹಾಡು ಹುಟ್ಟಿತೆಂದೂ ಹೇಳಬೇಕಾದೀತು! ವಸ್ತುತಃ ಇಂತಹ ಸಾದೃಶ್ಯಗಳಿಗೆ ಕಾರಣವೇನೆಂದರೆ – ಪಾದವ್ಯವಸ್ಥೆ, ಧಾಟಿ, ತಾಳ, ಲಯ ಇವೆಲ್ಲ ಪ್ರಕೃತಿಯ ಸೊತ್ತು. ಅವು ಸಕಲದೇಶಗಳಲ್ಲಿಯೂ ಸಕಲಭಾಷೆ-ಗಳಲ್ಲಿಯೂ ತಮ್ಮ ಸಾಮಾನ್ಯರೂಪಗಳನ್ನು ಪ್ರದರ್ಶಿಸದಿರುವುದಿಲ್ಲ. 'ಚತುರಸ್ರತೆ' – ಎಂದರೆ 'ನಾಲ್ಕಾಗಿರುವಿಕೆ' – ಸಂಗೀತದ ಎಂದರೆ ಹಾಡಿನ ಪೂರ್ಣತೆಗೆ ಅವಶ್ಯ. ಆದುದರಿಂದ ಪದ್ಯಗಳಿಗೆ ಪಾದಸಂಖ್ಯೆ ನಾಲ್ಕಾಗಿರುವುದು ಎಲ್ಲಾ ಭಾಷೆಗಳಲ್ಲಿಯೂ ಸಾಮಾನ್ಯವಾಗಿ ಕಂಡುಬರುತ್ತದೆ.

**{ಪದ್ಯಗಳಲ್ಲಿ ಗಾನರಂಜನೆಗಾಗಿ ಅಪೂರ್ಣಖಂಡಗಳು}**

ಇದಲ್ಲದೆ, ತಾಳಕ್ಕೆ ಅಳವಡುವ ಛಂದೋಬಂಧಗಳ ಪಾದಾಂತ್ಯಖಂಡವು (ಹೆಚ್ಚಾಗಿ) ಅಪೂರ್ಣವಾಗಿರುವುದೂ ಎಲ್ಲಾ ಭಾಷೆಗಳಲ್ಲಿ ಕಂಡುಬರುವ ಇನ್ನೊಂದು ಲಕ್ಷಣವಾಗಿದೆ. ಉದಾ:-

(ಇಂಗ್ಲಿಷ್)

– ∪ – ∪ – ∪ – o
Twinkle | twinkle | little | star - |

– ∪ – ∪ – ∪ – o
How I | wonder | what you | are - |

– ∪ – ∪ – ∪ – o
Up a- | bove the | world so | high - |

– ∪ – ∪ – ∪ – o
Like a | diamond | in the | sky - |

(ತುಳು)

ಕೂಲಿಗ್ । ಮ–ಜಿ– । ಪಾಡೊಂ । ಡೊ– ।
ಕುದ್ಪೆತ । ತಂಞಣೊ । ಉಂಡೊಂ । ಡೊ– ।
ಹಾಂ– । ಹೂಂ – । ಪಂಡೊಂ । ಡೊ– ।
ದಂಡ್‌ಗ್ । ಕ–ಯಿ– । ಕೊ–ರೊಂ । ಡೊ– ॥[13]

---

"ಕಜ್ರ್ಗೊಲೋ ಕಜ್ರ್ಗೊಲೋ...." ಎಂಬೀ ಹಾಡನ್ನು ಪ್ರತಿಯೊಂದು ಆವರ್ತದಲ್ಲಿ ಒಂದು ಮಾತ್ರಾಕಾಲವನ್ನು ಹೆಚ್ಚಿಸಿಯೇ ಹಾಡುವುದು ರೂಢಿ. ಇದರಿಂದ ಇವೆರಡರ ಧಾಟಿಯೂ ಏಕಪ್ರಕಾರವಾಗಿ ಪರಿಣಮಿಸುತ್ತದೆ.

13. ಈ ಹಾಡಿನ ಪ್ರತಿಯೊಂದು ತಾಳಖಂಡವೂ ನಾಲ್ಕು ಮಾತ್ರೆಗಳ ಕಾಲದ್ದಾಗಿದ್ದು, ಅಡ್ಡಗೆರೆ ಹಾಕಿರುವಲ್ಲಿ ಯಥೋಚಿತವಾಗಿ ಎಳೆದು ಹಾಡಲ್ಪಡುತ್ತದೆ.

ನಡುಗನ್ನಡದಲ್ಲಿ ಪ್ರಸಿದ್ಧವಾಗಿರುವ 'ಚೌಪದಿ'ಯಲ್ಲಿಯೂ (ತದರ್ಧವೇ ಆಗಿರುವ 'ದ್ವಿಪದಿ'ಯಲ್ಲಿಯೂ) ಪಾದಾಂತ್ಯಖಂಡವು, ಈ ಮೇಲೆ ಉದಾ-ಹರಿಸಿದವುಗಳಲ್ಲಿ ಹೇಗೋ ಹಾಗೆ, ಅಪೂರ್ಣವೇ ಆಗಿರುತ್ತದೆ. ನಾಲ್ಕು ಸಮ-ಪಾದಗಳ ತಾಳಬದ್ಧಬಂಧಗಳಲ್ಲೆಲ್ಲ ಹೆಚ್ಚಾಗಿ ಹೀಗೆಯೇ ಇರುವುದನ್ನು ಕಾಣ-ಬಹುದು. ಅವುಗಳ ಪ್ರತಿಯೊಂದು ಪಾದದಲ್ಲಿ ಮೂರು ಪೂರ್ಣಖಂಡಗಳೂ ಕೊನೆಯದೊಂದು ಅಪೂರ್ಣಖಂಡವೂ ಇರುತ್ತದೆ. ಈ ಅಪೂರ್ಣಖಂಡದ ಪ್ರಯೋಜನವೇನೆಂದರೆ, – ಇಡಿಯ ಬಂಧವನ್ನು ತಾಳತಪ್ಪದೆ ಹಾಡುವಾಗ, ಬಂಧದಲ್ಲಿಯೇ 'ಉಸಿರ್ದಾಣ'ವೂ ಗಾನರಂಜನೆಗಾಗಿ ಅವಕಾಶವೂ ಇರಬೇ-ಕೆಂಬುದಾಗಿದೆ. ಪಾದಾಂತದಲ್ಲಿ ವಿರಾಮಕ್ಕಾಗಿ ಅಪೂರ್ಣಖಂಡವಿರುವುದು (ತಾಳಬದ್ಧವಾದ) ಹಾಡೆಂಬುದರ ಪ್ರಕೃತಿ. (ನಾಲ್ಕು ಪಾದಗಳುಳ್ಳ ಇಂತಹ ಕೆಲವು ಬಂಧಗಳಲ್ಲಿ ಎಂಟು ಖಂಡಗಳಿರುವುದುಂಟು. ಅವುಗಳಲ್ಲಿಯೂ ಪಾದಾಂತ್ಯ ಖಂಡವು ಅಪೂರ್ಣಾಕ್ಷರವಾಗಿಯೇ ಇರುತ್ತದೆ.)[14] ಹಾಡಿನ ಈ ಪ್ರಕೃತಿ ಅರ್ಧ ಸಮಬಂಧಗಳಲ್ಲಿ ಇನ್ನೊಂದು ರೂಪದಲ್ಲಿ ಗೋಚರವಾಗುತ್ತದೆ. ಅವುಗಳಲ್ಲೆಲ್ಲ ಸಾಮಾನ್ಯವಾಗಿ ಪದ್ಯಾರ್ಧದಲ್ಲಿ ಎಂಟು ತಾಳಖಂಡಗಳಿದ್ದು, ಎಂಟನೆಯ ಖಂಡವು ಅಪೂರ್ಣವಾಗಿರುತ್ತದೆ. ಅಲ್ಲಿ ಸ್ವರವೆಳೆದು ನಿಲ್ಲಿಸುವುದಕ್ಕಾಗಿಯೇ ಪ್ರಕೃತಿಪ್ರೇರಿತವಾಗಿ ಈ ನಿಯಮವು ಉಂಟಾದುದಾಗಿದೆ. ಕೆಲವು ಅರ್ಧಸಮ ಬಂಧಗಳ ಪದ್ಯಾರ್ಧದಲ್ಲಿ ಏಳೇ ಖಂಡಗಳಿರುವವಾದರೂ, ಎಂಟು ಖಂಡಗಳನ್ನು ಹಾಡುವುದಕ್ಕೆ ಬೇಕಾದಷ್ಟು ಕಾಲವನ್ನು – ಆಲಾಪದಿಂದ ಅಥವಾ ವಿರಾಮದಿಂದ – ಕಳೆದ ಮೇಲೆಯೇ ಮುಂದಿನ ಅರ್ಧವನ್ನು ತೊಡಗಬೇಕಾಗುತ್ತದೆ. ಇವುಗಳ ಕೆಲವು ಉದಾಹರಣಗಳು ಇಲ್ಲಿವೆ:

(ಸಂಸ್ಕೃತ)

೧ | ೨ | ೩

ಓಂಕಾ | ರ ಪಂಜ | ರ ಶುಕೀಂ |

೪ | ೫ | ೬ | ೭ | ೮

ಉಪನಿಷ | ದುದ್ಯಾ | ನಕೇಲಿ | ಕಲಕಂ | ಠೀಂ – ||

೧ | ೨ | ೩

ಆಗಮ | ವಿಪಿನ ಮ | ಯೂರೀಂ |

14. ಉದಾ: 'ಲಯಗ್ರಾಹಿ' ಎಂಬ ಹೆಸರೂ ಇರುವ "ಲಲಿತವೃತ್ತ". [ಈ ಅಕ್ಷರವೃತ್ತವನ್ನು 'ಕನ್ನಡ ಕೈಪಿಡಿ'ಯಲ್ಲಿ (ತೃತೀಯ ಮುದ್ರಣ – ಪುಟ ೯೪) ಮಾತ್ರಾಬಂಧವೆಂದು ಭ್ರಮಿಸಲಾಗಿದೆ.] ಲಯಗ್ರಾಹಿ ಎಂದರೆ 'ಲಯಸಮನ್ವಿತ' (=ತಾಳಬದ್ಧ)ವಾದುದು ಎಂದರ್ಥ.

೪ | ೫ | ೬ | ೭ | ೮
ಆರ್ಯಾ | ಮಂತ | ರ್ವಿಭಾವ | ಯೇ ಗೌ | ರೀಂ – ॥ . ॥

(ಶ್ಯಾಮಲಾಸ್ತೋತ್ರ ; ಇದು ಆರ್ಯಾವರ್ಗದ 'ಗೀತಿಕೆ')

(ಇಂಗ್ಲಿಷ್)

1 | 2 | 3 | 4 |
Tell me | not in | mournful | numbers |

5 | 6 | 7 | 8
Life is | but an | empty | dream - ||

1 | 2 | 3 | 4 |
For the | soul is | dead that | slumbers |

5 | 6 | 7 | 8
And things | are not | what they | seem - || . ||

(Psalm of life - Longfellow)

(ಕನ್ನಡ)

೧ | ೨ | ೩ | ೪ |
ಪರಮಪ | ರಂಜ್ಯೋತಿ | ಕೋಟಿ ಚಂ | ದ್ರಾದಿತ್ಯ |

೫ | ೬ | ೭ | ೮
ಕಿರಣಸು | ಜ್ಞಾನಪ್ರ | ಕಾಶ– | –– ॥

೧ | ೨ | ೩ | ೪ |
ಸುರರ ಮ | ಕುಟಮಣಿ | ರಂಜಿತ | ಚರಣಾಬ್ಜ |

೫ | ೬ | ೭ | ೮
ಶರಣಾಗು | ಪ್ರಥಮಜಿ | ನೇಶ– | –– ॥ . ॥

(ಭರತೇಶ ವೈಭವ – ಇದು ಸಾಂಗತ್ಯ)

ಶರಕುಸುಮಾದಿ ಷಟ್ಪದಿಗಳೂ ಈ ನಿಯಮಕ್ಕೆ ಒಳಪಟ್ಟವುಗಳೇ ಆಗಿವೆ. ತೋರಿಕೆಗೆ ಅವುಗಳಲ್ಲಿ ಆರು ಪಾದಗಳಿದ್ದರೂ, ಹಾಡಿನ ದೃಷ್ಟಿಯಿಂದ ಅವು ನಾಲ್ಕೇ ಆಗಿವೆ. ಅವುಗಳ ಪದ್ಯಾರ್ಧಗಳಲ್ಲಿಯೂ ಎಂಟೇ ಖಂಡಗಳಿದ್ದು, ಕೊನೆಯ ಖಂಡವು ಅಪೂರ್ಣವಾಗಿರುತ್ತದೆ. ಉದಾ:–

| ೧ | ೨ | ೩ | ೪ |
|---|---|---|---|
| ಪೊಳೆವ ಪಳು | ಕಿನ ಕಾದ | ಶಿಲೆಯೊಳಗೆ | ನಡೆಯುತಂ ॥ |
| ೫ | ೬ | ೭ | ೮ |
| ದಲಘುತರ | ತಪನ ತಾ | ಪದೆ ಬಳಲು | ವ– ॥ |
| ೧ | ೨ | ೩ | ೪ |
| ಸುಲಲಿತ ಲ | ತಾಂಗಿ ಕೋ | ಮಲೆ ಸೀತೆ | ರಾಘವನ ॥ |
| ೫ | ೬ | ೭ | ೮ |
| ಬಳುವಳಿಯ | ನೆಳಲಂತೆ | ಬರುತಿರ್ದ | ಳು– ॥ . ॥ |

(ಕುಮುದೇಂದು ರಾಮಾಯಣ – ಕುಸುಮ ಷಟ್ಪದಿ)[15]

ಹೀಗೆ ನಾನಾಭಾಷೆಗಳ ಪದ್ಯಗಳಲ್ಲಿ ಕಂಡು ಬರುವ ಸಾಮ್ಯಕ್ಕೆ 'ಪ್ರಕೃತಿ' ಎಂದಲ್ಲದೆ ಬೇರಾವ ಕಾರಣವನ್ನು ಹೇಳಲು ಸಾಧ್ಯ? ಈ ಪ್ರಕೃತಿಯೇ ನಮ್ಮ ಸಂಗೀತಸಂಪ್ರದಾಯದಲ್ಲಿ ತಾಳಸ್ವರೂಪವನ್ನೂ ನಿರ್ಣಯಿಸಿತು. ಅದು ಹೇಗೆಂದರೆ ಸಕಲರಿಗೂ ಸುಲಭಗ್ರಾಹ್ಯವಾದ ತಾಳವೆಂದರೆ ನಾಲ್ಕು ಮಾತ್ರೆಗಳ ಏಕತಾಳ. ಆದರೆ 'ಸರಿಗಮಪಧನಿಸ' ಎಂದು ಎಂಟು ಸ್ವರಗಳ ಉಚ್ಚಾರದಿಂದಲೇ ಸಂಗೀತಾಭ್ಯಾಸವು ಆರಂಭವಾಗಬೇಕಾಗುವುದರಿಂದ, ನಾಲ್ಕು ಮಾತ್ರೆಗಳ ತಾಳದ ಬದಲಾಗಿ, ಅದರ ಇಮ್ಮಡಿಯಾದ ಎಂಟು ಮಾತ್ರೆಗಳ ತಾಳವು "ಆದಿ ತಾಳ"ವೆನಿಸಿಕೊಂಡಿತು. ಸಂಗೀತದಲ್ಲಿ ಹೀಗೆ ನಾಲ್ಕು ಮಾತ್ರೆ ಅಥವಾ ಎಂಟು ಮಾತ್ರೆ ಎಂಬ 'ಚತುರಸ್ರತೆ'ಯನ್ನು ವಿಧಿಸಿದ ಪ್ರಕೃತಿಯೇ "ಪದ್ಯ" ಎಂಬುದಕ್ಕೆ ನಾಲ್ಕು ಪಾದಗಳನ್ನೂ ಪಾದವೊಂದಕ್ಕೆ ನಾಲ್ಕು (ಅಥವಾ ಎಂಟು) ಖಂಡಗಳನ್ನೂ ಸೃಷ್ಟಿಸಿತು. ಇದರಿಂದ, ಸಂಗೀತವೂ ಛಂದಸ್ಸೂ ಪದ್ಯವೆಂಬ ಬಟ್ಟೆಯ ಹಾಸುಹೊಕ್ಕುಗಳೆಂಬುದು ಸ್ಪಷ್ಟವಾಗುವುದು ಮಾತ್ರವಲ್ಲ ಸಮಾನವಾಗಿ ತೋರುವ ಪದ್ಯರೂಪಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ 'ನಕಲು' ತೆಗೆದೇ ಹೋದವುಗಳಾಗಿರಬೇಕೆಂದಿಲ್ಲವೆಂದೂ, ಅವು ಸ್ವತಂತ್ರವಾಗಿಯೇ ಹುಟ್ಟಿ ಬರುವುದು ಅಸ್ವಾಭಾವಿಕವೇನೂ ಅಲ್ಲವೆಂದೂ ಸಿದ್ಧವಾಗುತ್ತದೆ.



15. ಮೂಲಲೇಖನದಲ್ಲಿರುವುದು 'ಶರಷಟ್ಪದಿ'ಯ ಅರ್ಧ. ಇಲ್ಲಿ ಅದರ ಬದಲಾಗಿ ಒಂದು 'ಕುಸುಮ ಷಟ್ಪದಿ'ಯನ್ನು ಪೂರ್ಣವಾಗಿ ಉದಾಹರಿಸಲಾಗಿದೆ.

## ಉತ್ತರ ಭಾಗ

{ಪಿರಿಯಕ್ಕರದ ಲಕ್ಷಣವಿಚಾರ}

ಇನ್ನು – ಛಂದೋಂಬುಧಿಯಲ್ಲಿ ಲಕ್ಷಿತವಾದ ಆ ಹತ್ತು 'ಕನ್ನಡಜಾತಿ'ಗಳ ಸ್ವರೂಪವನ್ನು ಪರಾಮರ್ಶಿಸೋಣ :– ಅವುಗಳೊಳಗೆ ಮೊದಲನೆಯದಾಗಿ – "ಅಕ್ಕರ" ಎಂಬ ಜಾತಿಯ ಐದು ಭೇದಗಳನ್ನು ಲಕ್ಷ್ಯಲಕ್ಷಣಸಮವಾಯವಾಗಿ ನಾಗವರ್ಮನು ನಿರೂಪಿಸಿದ್ದಾನೆ. ಆ ಐದು ವಿಧದ ಅಕ್ಕರಗಳಲ್ಲಿ ಮೊದಲನೆಯದು "ಪಿರಿಯಕ್ಕರ". ಇದರಲ್ಲಿ, ಮೊದಲು ಒಂದು ಬ್ರಹ್ಮಗಣವೂ ಅನಂತರ ಐದು ವಿಷ್ಣುಗಣಗಳೂ ಕೊನೆಗೊಂದು ರುದ್ರಗುಣವೂ ಬರುವ ನಾಲ್ಕು ಪಾದಗಳಿರುತ್ತವೆ. ಪಾದಾದಿಯ ಗಣವು ಬ್ರಹ್ಮಗಣವಾದರೂ, ಕೊನೆಯದು ರುದ್ರಗಣವಾದರೂ – ಈ ಪದ್ಯದ 'ಧಾಟಿ'ಯನ್ನು ನಿರ್ಮಿಸುವುದು ವಿಷ್ಣುಗಣವೇ ಆಗಿದೆ; ಎಂದರೆ ಎಲ್ಲವೂ ವಿಷ್ಣುಗಣಗಳಾಗಿದ್ದರೆ ಹೇಗೋ ಹಾಗೆ ಈ ಪದ್ಯವು ಪಠಿಸಲ್ಪಡಬೇಕಾದುದಾಗಿದೆ. ಇದರ ಒಂದು ಪಾದವನ್ನು ಗಣಾನುಸಾರವಾಗಿ ಮತ್ತು ತಾಳಖಂಡಗಳಾಗಿ ಹೀಗೆ ಎರಡು ರೀತಿಯಲ್ಲಿ ವಿಭಜಿಸೋಣ:–

ಗಣವಿಭಾಗ :

| ಬ್ರ | ವಿ | ವಿ | ವಿ | ವಿ | ವಿ | ರು |
|---|---|---|---|---|---|---|
| ಮೊದಲೊ | ಳಜಗಣಂ | ಕುಂದದೆ | ಬರ್ಕತ್ತ | ಮಯ್ದುಗ | ಣಂಗಳೆ | ವಿಷ್ಣುವಕ್ಕುಂ ॥ |

ತಾಳಖಂಡಗಳು :

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ಮೊದಲೊ– | ಳಜಗಣಂ | ಕುಂದದೆ | ಬರ್ಕತ್ತ | ಮಯ್ದುಗ | ಣಂಗಳೆ | ವಿಷ್ಣುವ | ಕ್ಕುಂ–॥ |

ಈಗ ಇದರ ಲಕ್ಷಣವಿಶೇಷಗಳನ್ನು ನೋಡೋಣ:– ಹಾಡುಗಳ 'ಪ್ರಕೃತಿ' ಎಂದು ಹಿಂದೆ ಪ್ರತಿಪಾದಿಸಲಾದ 'ಚತುರಸ್ರತೆ' ಇದರಲ್ಲಿಯೂ ಇದ್ದು ತಾಳ ಖಂಡಗಳು ಎಂಟಾಗಿರುತ್ತವೆ; ಮತ್ತು ಹಿಂದೆ ಉದಾಹರಿಸಿದ ಕೆಲವು ಪದ್ಯಗಳಲ್ಲಿ ಹೇಗೋ ಹಾಗೆ ಕೊನೆಯ ಖಂಡವು ಊನಾಕ್ಷರಗಳದಾಗಿದೆ. ಇದಲ್ಲದೆ, ಪಾದದ ಪ್ರಥಮಖಂಡವೂ ಅಪೂರ್ಣಾಕ್ಷರದ್ದೇ ಆಗಿರುವುದು ಈ ಬಂಧದ ವಿಶಿಷ್ಟಲಕ್ಷಣ–ವಾಗಿರುತ್ತದೆ. ಕೊನೆಯ ಖಂಡದ ಹೊರತಾಗಿಯೂ – ನಿಯತವಾಗಿ ಅಥವಾ ಐಚ್ಛಿಕವಾಗಿ – ಊನಾಕ್ಷರಖಂಡಗಳನ್ನಿಡುವುದು ಸಹ ಗಾನದ ಶೋಭೆಗಾಗಿಯೇ ಆಗಿರುತ್ತದೆ.[16] [ಮಾತ್ರಾನಿಯಮಬದ್ಧವಾದ ಹಾಡುಗಳಲ್ಲಿಯೂ ಕವಿಗಳು

---

16. ಪಿರಿಯಕ್ಕರದಲ್ಲಿ ಪಾದದ ಎರಡನೆಯ ಮತ್ತು ಆರನೆಯ ಗಣಸ್ಥಾನಗಳಲ್ಲಿಯೂ ಬ್ರಹ್ಮಗಣವು ಐಚ್ಛಿಕವಾಗಿ ಬರುವುದುಂಟೆಂದು ನಾಗವರ್ಮನು ಹೇಳುತ್ತಾನೆ; ಮತ್ತು ನಾಲ್ಕನೆಯ ಸ್ಥಾನದಲ್ಲಿಯೂ ಬ್ರಹ್ಮಗಣ ಬರಬಹುದೆಂದು ಜಯಕೀರ್ತಿ ಹೇಳುತ್ತಾನೆ.

ಒಮ್ಮೊಮ್ಮೆ ಹೀಗೆ (ನಿಯಮೋಲ್ಲಂಘನ ಮಾಡಿ) ಊನಾಕ್ಷರಖಂಡಗಳನ್ನಿಡು-ವುದುಂಟು. ಉದಾ:-

॥ ಚರಣ ॥ ನಿಭೃತ ನಿಕುಂಜಗೃ । ಹಂ ಗತಯಾ ನಿಶಿ ।
ರಹಸಿ ನಿಲೀಯ ವ । ಸಂತಂ – ॥
ಚಕಿತ ವಿಲೋಕಿತ । ಸಕಲ ದಿಶಾ ರತಿ ।
ರಭಸಭರೇಣ ಹ । ಸಂತಂ ॥ . ॥

॥ ಪಲ್ಲವಿ ॥ ಸಖಿ ಹೇ – ಕೇಶಿ । ಮಥನಮುದಾರಂ ।
ರಮಯ ಮಯಾ ಸಹ । ಮದನ ಮನೋರಥ ।
ಭಾವಿತಯಾ ಸವಿ । ಕಾರಂ– ॥ . ॥ . ॥ . ॥

(ಗೀತಗೋವಿಂದ)

ಈ ಗೀತದ ಪಲ್ಲವಿ ಭಾಗದ 'ಸಖಿ ಹೇ ಕೇಶಿ' ಎಂಬ ಛಂದಃಖಂಡದಲ್ಲಿ ಯಥಾಕ್ಷರವಾಗಿ ಒಂದು ಮಾತ್ರೆ ಕಡಮೆಯಾಗಿದ್ದು, 'ಹೇ' ಎಂಬುದನ್ನು 'ಹೇ' ಎಂದು ಕರ್ಷಿಸಬೇಕಾಗುತ್ತದೆ. ಇದರಿಂದ ಇಲ್ಲಿ ಗಾನಕ್ಕೆ ಶೋಭಾತಿಶಯವೂ, ಅದು ಸಂಬೋಧನಶಬ್ದವಾಗಿರುವುದರಿಂದ ಅರ್ಥಕ್ಕೆ ಪುಷ್ಟಿಯೂ ಒದಗುತ್ತದೆ.]

ಪಿರಿಯಕ್ಕರದಲ್ಲಿ ಪಾದಾದಿಯ ಖಂಡವು ಬ್ರಹ್ಮಗಣವಾಗಿದ್ದು, ಅದು ಮುಂದಣ ಖಂಡಗಳಿಗಿಂತ ಅಕ್ಷರಪರಿಮಾಣದಲ್ಲಿ ಕಿರಿಯದಾಗಿರುವುದರಿಂದ – ಊನಾಕ್ಷರಗಣದ ಪ್ರಯೋಜನವು ಅವಗಾಹನೆಗೆ ಬಾರದೆ, ಅಲ್ಲಿ ನಿಯಮೋ-ಲ್ಲಂಘನವಾಗಿಬಿಡುವ ಸಂಭವವಿರುತ್ತದೆ; ಹೀಗಾಗಿದೆ. ನಾಗವರ್ಮನಿಗಿಂತ ಹಿಂದಿನವನೇ ಆದ ಪಂಪನ ಪಿರಿಯಕ್ಕರಗಳನ್ನು ನೋಡಿರಿ :-

ಆಡ । ಲಾಡಿಸಲ್ । ಪಾಳಿಯಂ । ನಿಱಿಸಲುಂ । ಪರಿಗೊಳಲ್ ।
ತೊವಲಿಕ್ಕ । ಲೊಳಗಂ ಬರಲ್ ॥
ಕಾಡ । ಬೇಲಿಯಂ । ಮಾರ್ಕಾಡ । ನಱಿಯಲುಂ । ಮೂಡಿಗೆ ।
ಕುಕ್ಕಂಬಂ । ಸುಳಿಸಿ ಜೊಂಪಂ ॥
ಬೀಡು । ಬಿಡುವಿಂಬು । ಕದಳಿ ತೆಂ । ಗಿನ ತಾಣಂ । ಜಾಣಿಂ ನೀ- ।
ರ್ದಾಣಮೆಂ । ದೆಡೆಯಱಿದುಂ ॥
ಮಾಡಲ್ । ಮಾಡಿಸಲ್ । ಪಡೆಮೆಚ್ಚೆ । ನೀಂ ಬಲ್ಲೆ । ನೀಂ ಮೆಚ್ಚೆ ।
ಹರಿಗ ಕೇ । ಳಾನೆ ಬಲ್ಲೆಂ ॥ . ॥[17]

---

17. {ತ್ರಿಮೂರ್ತಿಗಣಗಳನ್ನು ಆಧರಿಸಿದ ಮೂರು ಧಾಟಿಗಳು} ಮಾತ್ರಾನಿಯಮಬಾಹಿರವಾಗಿ, ಕೇವಲ ತ್ರಿಮೂರ್ತಿಗಣಘಟಿತವಾಗಿರುವ ಛಂದೋಬಂಧಗಳ ಪಠನಗಾಯನವಿಧಾನದಲ್ಲಿರುವ ಒಂದು ವೈಶಿಷ್ಟ್ಯವನ್ನು ಮನವರಿಕೆ ಮಾಡಿಕೊಂಡರೆ ಮಾತ್ರ ಆ ಬಂಧಗಳನ್ನು ಧಾಟಿ ತಪ್ಪದೆ ಸುಲಲಿತವಾಗಿ ಓದಲು ಸಾಧ್ಯ. ಆ ವೈಶಿಷ್ಟ್ಯವೇನೆಂದರೆ ವಿಶುದ್ಧ ತ್ರಿಮೂರ್ತಿಗಣಬಂಧಗಳಲ್ಲಿ ಯಾವುದೊಂದು ಬಂಧವೂ – ಬ್ರಹ್ಮ, ವಿಷ್ಣು, ರುದ್ರ ಎಂಬೀ ಮೂರು ವರ್ಗಗಳೊಳಗಿನ

ಇದರ ಎಲ್ಲಾ ಪಾದಗಳೂ ಪಿರಿಯಕ್ಕರದ ಮೂಲಲಕ್ಷಣಕ್ಕೆ ಸಂಪೂರ್ಣ ಸರಿಯಾಗಿ ಎಂದರೆ – ಬ್ರ, ವಿ, ವಿ, ವಿ, ವಿ, ವಿ, ರು – ಹೀಗೆ ರಚಿತವಾಗಿರು–ವವಾದರೂ, ಇನ್ನೊಂದು ಪಿರಿಯಕ್ಕರದ ಒಂದು ಪಾದವನ್ನು ಪಂಪನು –

| ವಿ | ವಿ | ವಿ | ವಿ | ವಿ |
|---|---|---|---|---|
| ಸಿಲೆಯಮೇ | ಲಾದೊಡಂ | ಶಕುನಮಂ | ನಿಱಿಪಂತೆ | ನಿಱಿಸುವೆಂ |

| ವಿ | ರು |
|---|---|
| ಪಂದಿಯಂ | ನೀಂ ಮೆಚ್ಚಲುಂ ॥ |

---

ಒಂದೇ ವರ್ಗದ ಗಣಗಳಿಂದ ಘಟಿತವಾಗಿರುವುದಿಲ್ಲವಾದರೂ, ಆ ಒಂದೊಂದು ಬಂಧದ 'ಧಾಟಿ'ಗೆ (ಆ ಮೂರು ಗಣವರ್ಗಗಳೊಳಗೆ) ಯಾವುದಾದರೂ ಒಂದೇ ವರ್ಗದ ಗಣಗಳು ಆಧಾರವಾಗಿರುತ್ತವೆ. ಈ ಕಾರಣದಿಂದ, ಆ ಎಲ್ಲಾ ಬಂಧಗಳು ಧಾಟಿಗನುಸಾರವಾಗಿ ಮೂರು ಬಗೆಯವಾಗಿ ಪರಿಣಮಿಸಿರುತ್ತವೆ; (೧) ಬ್ರಹ್ಮಧಾಟಿ ಬಂಧ (೨) ವಿಷ್ಣುಧಾಟಿ ಬಂಧ (೩) ರುದ್ರಧಾಟಿ ಬಂಧ. ಯಾವುದೊಂದು ಬಂಧದ ಮೂಲಲಕ್ಷಣದಲ್ಲಿ ಯಾವ ವರ್ಗದ ಗಣಗಳ ಆಧಿಕ್ಯವಿರುತ್ತದೆಯೋ, ಆ ಬಂಧದ ಧಾಟಿಯನ್ನು ಆ ವರ್ಗದ ಗಣವು ನಿಯಂತ್ರಿಸುತ್ತದೆ. ಇದರಿಂದಾಗಿ ಅದರಲ್ಲಿ ಬರುವ ಇತರ ವರ್ಗದ ಗಣಗಳನ್ನು ಆ ಬಂಧದ ಧಾಟಿಗೆ ಒಗ್ಗಿಸುವ ಮೂಲಕ ಅದರ ಪಠನಗಾಯನಗಳು ಸಾಗಬೇಕಾಗುತ್ತವೆ. (ವಿಷ್ಣು ಧಾಟಿಯ ಕೆಲವು ಬಂಧಗಳ ಪಾದಾಂತಗಳಲ್ಲಿ ಬರುವ ರುದ್ರಗಣವು ವಿಷ್ಣುಧಾಟಿಗೆ ಅಪ್ರಯತ್ನವಾಗಿ ಕೂಡಿಕೊಳ್ಳುತ್ತದೆ. ಏಕೆಂದರೆ ಅದು ಅಲ್ಲಿ ವಿಷ್ಣುಗಣದ ವಿಸ್ತರಣಸ್ವರೂಪವೇ ಆಗಿ ಪರಿಣಮಿಸುತ್ತದೆ.) ಪಿರಿಯಕ್ಕರದಲ್ಲಿ ವಿಷ್ಣುಗಣಗಳ ಆಧಿಕ್ಯವಿರುವುದರಿಂದ, ಅದು ವಿಷ್ಣುಧಾಟಿಯ ಬಂಧವಾಗಿದ್ದು, ಅದರಲ್ಲಿ ಕಡ್ಡಾಯವಾಗಿ (ಅಥವಾ ಐಚ್ಛಿಕವಾಗಿ) ಬರುವ ಬ್ರಹ್ಮಗಣವನ್ನು ಒಂದು ಗುರ್ವಕ್ಷರಕಾಲದಷ್ಟು ಕರ್ಷಿಸಿ ಓದಬೇಕು. ತ್ರಿಮೂರ್ತಿಗಣಗಳ ಸಾಮಾನ್ಯನಿಯಮದಂತೆ – ಕರ್ಷಣವನ್ನು ಪಡೆಯುವುದು ಗಣದ ಅಂತ್ಯಾಕ್ಷರವಾಗಿರುವು–ದಾದರೂ ಕೆಲವು ಸಂದರ್ಭಗಳಲ್ಲಿ (ಬ್ರಹ್ಮಗಣವಿಷಯದಲ್ಲಿ) ಈ ನಿಯಮವನ್ನು ಸ್ವಲ್ಪ ಸಡಿಲಿಸಿ ಗಣದ ಕೊನೆಯ ಅಕ್ಷರದ ಹಿಂದಿನ ಗುರ್ವಕ್ಷರವನ್ನು ಕರ್ಷಿಸಿ ಓದಬೇಕಾಗುತ್ತದೆ. ಹೀಗೆ ಮಾಡದಿದ್ದರೆ ಅರ್ಥವು ಸುವ್ಯಕ್ತವಾಗದೆ ಹೋಗಿಬಿಡುತ್ತದೆ. ಇಲ್ಲಿ ಉದಾಹರಿಸಿರುವ ಪಂಪನ ಪಿರಿಯಕ್ಕರವು ಈ ಮಾತನ್ನು ಸಮರ್ಥಿಸುವಂತಹದಾಗಿದೆ: ಈ ಪದ್ಯದ ನಾಲ್ಕನೆಯ ಪಾದವೊಂದನ್ನು ಬಿಟ್ಟು ಉಳಿದ ಮೂರು ಪಾದಗಳ ಆದಿಯ ಗಣಗಳನ್ನು ಪಠಿಸುವಲ್ಲಿ, ಗಣಾಂತ್ಯರದ ಅಕ್ಷರವನ್ನು ಕರ್ಷಿಸಿ ಓದಿದರೆ ಪದಸ್ವರೂಪವು ವಿಕೃತವಾಗಿ ಹೋಗುವು–ದರಿಂದ, ಅದರ ಹಿಂದಿನ ಗುರ್ವಕ್ಷರವನ್ನು ಕರ್ಷಿಸಿ ಓದಬೇಕು. ಆಗ ಪದಸ್ವರೂಪವ್ಯಕ್ತಿಗೆ ತೊಡಕಾಗುವುದಿಲ್ಲ; ಮತ್ತು ಅರ್ಥವು ಸ್ಫುಟವಾಗದಿರುವುದೂ ಇಲ್ಲ. [ಕೆಲವು ಸಂದರ್ಭಗಳಲ್ಲಿ ಈ ಬಗೆಯ ಕರ್ಷಣವು ಅರ್ಥಸ್ವರೂಪವನ್ನು ಉಜ್ವಲಗೊಳಿಸಲೂ ಸಮರ್ಥವಾಗುತ್ತದೆ. ಉದಾ:

"ಭೀಮ । ಕಾಯದ । ಬಿಲ್ಲರು । ಮದ್ಯದ । ಭಾಜನ । ಗಳನಪ್ಪಿ । ಮಲಗಿದರು ॥
ತಾಳೆ । ಕೆಡೆದಂತೆ ....." (ಪುಣ್ಯಲಹರಿ – ಪದ್ಯ ೧೩)

ಇಲ್ಲಿ ಬಂದಿರುವ 'ಭೀಮ' ಶಬ್ದದ ಅರ್ಥಕ್ಕೂ ಮತ್ತು 'ತಾಳೆ' ಎಂಬುದರ ಅರ್ಥಸ್ವರೂಪಕ್ಕೂ, 'ಭೀ' ಮತ್ತು 'ತಾ' ಎಂಬ ಕರ್ಷಣಗಳಿಂದ ಉಂಟಾಗುವ 'ಅತಿಶಯ'ವು ಸರ್ವಸಂವೇದ್ಯ.]

– ಹೀಗೆ ರಚಿಸಿದ್ದಾನೆ. ಲಕ್ಷಣಾನುಸಾರವಾಗಿ ಪಾದಾದಿಯ ಗಣವು ನಿರಪವಾದವಾಗಿ ಬ್ರಹ್ಮಗಣವಾಗಿರಬೇಕಾದರೂ, ಇಲ್ಲಿ ಅದು ವಿಷ್ಣುಗಣವಾಗಿ ಬಿಟ್ಟಿದೆ![18]

---

18. ಮಾತ್ರಾನಿಯಮದ ಬಿಗಿಯಾದ ಬಂಧನವಿಲ್ಲದಿರುವ ಈ ಬಗೆಯ ಛಂದೋಬಂಧಗಳಲ್ಲಿ ಕಾಲಾಂತರದಲ್ಲಿ ಇಂತಹ ಸಣ್ಣಪುಟ್ಟ ನಿಯಮೋಲ್ಲಂಘನಗಳಾಗುವುದರಲ್ಲಿ ಆಶ್ಚರ್ಯವಿಲ್ಲ. ಹೀಗಾಗಿದ್ದುದರಿಂದಲೇ – ಪಿರಿಯಕ್ಕರದ ಪಾದಗಳ ಪ್ರಥಮಗಣವೂ ವಿಷ್ಣುಗಣವಾಗ-ಬಹುದೆಂದು ಜಯಕೀರ್ತಿ ಲಕ್ಷಣನಿರೂಪಣೆ ಮಾಡಬೇಕಾಗಿ ಬಂತೆನ್ನಬಹುದು. (ಜಯ-ಕೀರ್ತಿಯ ಛಂದೋನುಶಾಸನ; ಸಪ್ತಮಾಧಿಕಾರ; ಪದ್ಯ ೮) [**{ಅಕ್ಕರಗಳಲ್ಲಿ ಪ್ರತಿಗಣಾಂತಯತಿ ವಿಚಾರ}** ಜಯಕೀರ್ತಿಯ ಅದೇ ಪದ್ಯದಲ್ಲಿ 'ಪಾದೇಪಾದೇತ್ರ ಪ್ರತಿಗಣಮಪಿ ಯತಿರ್ಲಕ್ಷ್ಯತೇ ಸರ್ವೇಷಾಮಕ್ಷರಾಣಾಂ" – ಎಂಬೊಂದು ವಾಕ್ಯವಿದೆ. ಅಕ್ಕರವೆಂಬ ಹೆಸರಿನ ಎಲ್ಲಾ ಬಂಧಗಳಲ್ಲಿ ಪ್ರತಿಯೊಂದು ಪಾದದಲ್ಲಿಯೂ ಪ್ರತಿಯೊಂದು ಗಣಾಂತದಲ್ಲಿ ಯತಿ ಕಂಡು ಬರುತ್ತದೆ – ಎಂಬುದು ಈ ಮೇಲಿನ ವಾಕ್ಯದ ಅರ್ಥವಾಗಿದೆ. ಆದರೆ ಜಯಕೀರ್ತಿಯಿಂದ ರಚಿತವಾದ ಅದೇ ಲಕ್ಷಣಪದ್ಯದ ಎರಡನೆಯ ಪಾದದಲ್ಲಿ ಈ ನಿಯಮವು ಪಾಲಿಸಲ್ಪಟ್ಟಿಲ್ಲ.

ಬ್ರ । ವಿ । ವಿ । ವಿ । ಬ್ರ । ವಿ । ರು ।
ಪಾದೇ । ಷ್ವಿಹ ರತಿ । ರ್ವಾದ್ವಿತೀ । ಯೇ ತುರ್ಯೇ । ಚ ಸ್ಥಾ । ನೇ ತನ್ಮ । ಹಾಕ್ಷರಾಖ್ಯಮ್ ।

ಈ ಪಾದದ ಐದನೇ ಬ್ರಹ್ಮಗಣಾಂತದಲ್ಲಿ ಯತಿಯಿಲ್ಲ. (ಜಯಕೀರ್ತಿ 'ಪ್ರತಿಗಣಮಪಿ ಯತಿರ್ಲಕ್ಷ್ಯತೇ ಸರ್ವೇಷಾಮಕ್ಷರಾಣಾಂ' – ಎಂದು ಹೇಳಿರುವನಾದರೂ ಅವನು ರಚಿಸಿದ ಪಿರಿಯಕ್ಕರ ಲಕ್ಷಣಪದ್ಯದಲ್ಲಿ ಇಲ್ಲಿ ಮೇಲೆ ತೋರಿಸಿರುವಂತೆ ಗಣಾಂತಯತಿಯಿಲ್ಲದಿರುವ ಹಾಗೆಯೇ ಇತರ ಅಕ್ಕರಗಳ ಅವನ ಲಕ್ಷಣಪದ್ಯಗಳಲ್ಲಿಯೂ ಗಣಾಂತಗಳಲ್ಲಿ ಅಲ್ಲಲ್ಲಿ ಯತಿಯಿಲ್ಲದಿರುವುದನ್ನು ನೋಡಬಹುದು.) ಆದುದರಿಂದ 'ಪ್ರತಿಗಣಮಪಿ ಯತಿರ್ಲಕ್ಷ್ಯತೇ' ಎಂಬ ಮಾತು ಅಕ್ಕರಗಳ ಅನುಲ್ಲಂಘನೀಯವಾದ ಲಕ್ಷಣವೆಂದು ಅವನ ಅಭಿಪ್ರಾಯವಲ್ಲ-ವೆಂಬುದು ಸ್ಪಷ್ಟ. ವಾಸ್ತವಿಕವಾಗಿ ನೋಡಿದರೆ ವಿಶುದ್ಧ ತ್ರಿಮೂರ್ತಿಗಣಬಂಧಗಳೆಲ್ಲಲ್ಲ ಪ್ರತಿಯೊಂದು ಗಣದ ಕೊನೆಯಲ್ಲಿ ಯತಿಯಿದ್ದರೆ ಪಠನವು ಸುಕರವಾಗುವುದೇನೋ ನಿಜ. ಆದರೆ ಇದರಿಂದಾಗಿ ಪದ್ಯಬಂಧವು ಅತೀವ ಸುಕುಮಾರವಾಗಿ ಪರಿಣಮಿಸುತ್ತದೆ. ಗಣಾಂ-ತಗಳಲ್ಲಿ ಪದಗಳು ಕೊನೆಗೊಳ್ಳದಿರುವವಾದರೆ ಬಂಧವು ನಿಬಿಡವಾಗಿ ಶ್ಲೇಷಗುಣಸಂಪನ್ನ-ವಾಗುತ್ತದೆ. ಕನ್ನಡದ ಹಳೆಯ ಕಾವ್ಯಸಂಪ್ರದಾಯವನ್ನು ಈ ದೃಷ್ಟಿಯಿಂದ ಪರಾಮರ್ಶಿಸಿ-ದೆವಾದರೆ, ಕನ್ನಡದ ಕವಿಗಳಿಗೆ ಸುಕುಮಾರಬಂಧಕ್ಕಿಂತ ನಿಬಿಡಬಂಧವು ಪ್ರಿಯತರ-ವಾಗಿತ್ತೆಂಬುದು ಸ್ಪಷ್ಟವಾಗಿ ಕಂಡುಬಾರದಿರದು. ಈ ನಿಬಿಡಬಂಧಪ್ರಿಯತೆಯೇ ಕನ್ನಡ ಕಾವ್ಯಗಳಲ್ಲಿ ಪಾದಾಂತಯತಿಭಂಗವು ಸರ್ವತ್ರವೆಂಬಂತೆ ಕಾಣಿಸಿಕೊಳ್ಳುವುದಕ್ಕೂ ಕಾರಣವಾ-ಗಿರುತ್ತದೆ. ಯತಿಸ್ಥಾನಗಳಲ್ಲಿ ಮುಖ್ಯತಮವಾದ ಪಾದಾಂತದಲ್ಲಿಯೇ ಯತಿಯ ಉಲ್ಲಂಘನೆ-ಯಾಗಿರುವಾಗ ಪಾದಾಂತರ್ಗತವಾದ ಯತಿಸ್ಥಾನದಲ್ಲಿ ಅದರ ಉಲ್ಲಂಘನೆಯಾದರೆ ಅದೊಂದು ಮಹತ್ತ್ವದ ಸಂಗತಿಯಲ್ಲ. ಆದರೂ ತ್ರಿಮೂರ್ತಿಬಂಧಗಳಲ್ಲಿ ಗಣಾಂತಗಳಲ್ಲಿ ಕರ್ಷಣಾಧಿಕ್ಯವು ಅನಿವಾರ್ಯವಾಗಿರುವಲ್ಲಿ ಯತಿಯಿಲ್ಲದಿದ್ದರೆ ಅರ್ಥಗ್ರಹಣಕ್ಕೆ ತೊಡಕಾಗ-ದಿರುವುದಿಲ್ಲ. ಆದುದರಿಂದ ಅಂತಹ ಸ್ಥಾನಗಳಲ್ಲಿ ಮಾತ್ರ ತ್ರಿಮೂರ್ತಿಬಂಧಗಳಲ್ಲಿ ಯತಿಯು ಕಡ್ಡಾಯವೆಂದು ಹೇಳಿದರೆ ಒಪ್ಪಬಹುದು ಹೊರತು, ಕೆಲವರು ಈಗ ಹೇಳತೊಡಗಿರುವಂತೆ, ಪಿರಿಯಕ್ಕರದ ಪ್ರತಿಯೊಂದು ಗಣದ ಕೊನೆಯಲ್ಲಿಯೂ ಯತಿಯಿರಲೇ ಬೇಕು, ಇಲ್ಲದಿದ್ದರೆ

ಪಿರಿಯಕ್ಕರವೆಂಬುದು ಕರ್ಣಾಟಕವಿಷಯಜಾತಿಗಳಲ್ಲಿ ಹಿರಿಯದು. ಸಾಮಾನ್ಯವಾದ, ಪಾದದಲ್ಲಿ ನಾಲ್ಕು ಖಂಡಗಳಿರುವ, ಇತರ ಗಾನಬಂಧ-ಗಳಂತಲ್ಲದೆ ಇದು, ಸಂಸ್ಕೃತದ ಮಾಲಾವೃತ್ತಗಳೊಳಗೆ ಸೇರಿರುವ ಲಲಿತವೃತ್ತ-ದಂತೆ ಪ್ರತಿಪಾದದಲ್ಲಿಯೂ ಎಂಟು ತಾಲಖಂಡಗಳಿಂದೊಡಗೂಡಿದೆ.

* * * * *

{ದೊರೆಯಕ್ಕರ ಮತ್ತು ಇತರ ಅಕ್ಕರಗಳು}

ಮುಂದಿನದು "ದೊರೆಯಕ್ಕರ": ಇದರಲ್ಲಿ ಪ್ರತಿಯೊಂದು ಪಾದದಲ್ಲಿ ಆರುಗಣಗಳು: ಎರಡು ವಿಷ್ಣು ಒಂದು ಬ್ರಹ್ಮ, ಎರಡು ವಿಷ್ಣು ಒಂದು ಬ್ರಹ್ಮ- ಹೀಗೆ ಅನುಕ್ರಮವಾಗಿ ಬರಬೇಕು. ಆದರೆ ಎಲ್ಲಾ ಗಣಗಳು ವಿಷ್ಣುಗಣಗಳಾದರೆ ಹೇಗೋ ಹಾಗೆ ಓದಬೇಕು.

---

ಅದು ಪಿರಿಯಕ್ಕರವೇ ಅಲ್ಲ – ಎನ್ನುವುದು ಸರಿಯಲ್ಲ. ಪಂಪಮಹಾಕವಿಯ ಪಿರಿಯಕ್ಕರ-ಗಳೊಳಗೂ ಗಣಾಂತಯತಿಭಂಗವು ಮಾತ್ರವಲ್ಲದೆ ಪಾದಾಂತಯತಿಭಂಗವೂ ಸಹ ಬಂದಿರುವುದೆಂಬುದನ್ನು ನೋಡಿರಿ. ಉದಾ:-

ನೆಲನಂ । ನಿರಿಗೆಯಂ । ನಡೆವೊಂದು । ಪದಮುಮಂ । ಸೋವಳಿ । ಮೇವಳಿ ।
ಬಿಸುವಳಿಯಂ ।
ಬಲಮಂ । ಶಕುನಮ । ನೊಳ್ಳಿತ್ತು । ಪಾಯಮಂ । ಪಿಡಿವಂದೀ । ತನೆವಂದಿ ।
ಕುರುಡು ಕುಂಟೆಂ ।
ದಲಸ । ದರಿದಂತು । ಬಲ್ಮೆಗೆ । ಬೆರಲೆತ್ತಿ । ಪಚ್ಚೆಯಂ । ನೆಲೆಗಳಂ । ಕಿಡಲೀಯದೆ ।
ಸಿಲೆಯ ಮೇ । ಲಾದೊಡಂ । ಶಕುನಮಂ । ನಿಱಪಂತೆ । ನಿಱಸುವೆಂ । ಪಂದಿಯಂ ।
ನೀಂ ಮೆಚ್ಚಲುಂ ॥ . ॥

(ಪಂಪಭಾರತ)

ಹೀಗಿರುವುದರಿಂದ ಇದನ್ನೂ ಪಿರಿಯಕ್ಕರವಲ್ಲವೆನ್ನುತ್ತೀರಾ? – ಎಂದು ನಾನು ಕೇಳುತ್ತೇನೆ. ಯತಿನಿಯಮವನ್ನು ಪಾಲಿಸದಿದ್ದರೂ ಛಂದೋಗತಿಗೂ ಪದಸ್ವರೂಪಕ್ಕೂ ಭಂಗ ಬಾರದಂತೆ ಓದುವುದು ಒಂದು ಕಲೆ. ಇತ್ತೀಚೆಯವರಿಗೆ ಕನ್ನಡಿಗರೆಲ್ಲರಿಗೆ ಈ ಕಲೆ ಕರಗತವಾಗಿತ್ತು. ಹಿಂದಿನ ಕಾಲದ ನಾನಾಛಂದೋಬಂಧಗಳನ್ನು ಓದುವ ಅಭ್ಯಾಸವು ಇಂದಿನವರಿಗೆ ಬಹುಧಾ ಇಲ್ಲದಿರುವುದರಿಂದ ಗಣಾಂತಗಳಲ್ಲಿ ಅಥವಾ ಆವರ್ತಗಳ ಕೊನೆಯಲ್ಲಿ ಯತಿಯಿಲ್ಲದಿದ್ದರೆ ಛಂದೋನುಗುಣವಾಗಿ ಪಠಿಸುವಾಗ ಪದಸ್ವರೂಪವೂ, ಪದಾನುಗುಣದಾಗಿ ಪಠಿಸುವಾಗ ಛಂದೋಗತಿಯೂ ಕೆಡದಂತೆ ಪಠಿಸುವುದು ಇವರಿಗೆ ಅಸಾಧ್ಯವೆಂಬಂತಾಗಿದೆ. ಇಂದಿನ ಹಾಡುಗಾರರು ಸಹ ವಿಷ್ಣುಗಣಬದ್ಧವಾದ ದಾಸರ ಪದಗಳನ್ನು ವಿಕೃತಿಗೊಳಿಸಿ ಛಂದೋ ಗತಿಯನ್ನು ಕೆಡಿಸಿ ಹಾಡುತ್ತಿರುವುದು ಆಕಾಶವಾಣಿಯಲ್ಲಿಯೂ ಕೇಳಿಬರುತ್ತಿದೆ. (ಈ ಮಾತಿಗೆ ಅಪವಾದರೂಪವಾಗಿರುವ ಗಾಯಕರು ಕೇವಲ ಕೆಲವರು.) ತ್ರಿಮೂರ್ತಿಗಣಘಟಿತಗಳಾದ ಹಾಡುಗಳನ್ನು ಪದಸ್ವರೂಪವೂ ಛಂದೋಗತಿಯೂ ಎರಡೂ ಕೆಡದಂತೆ ಹಾಡುವ ಸಂಪ್ರದಾಯವು ಇಂದು ತೆಂಕತಿಟ್ಟಿನ ಯಕ್ಷಗಾನದ ಹಾಡುಗಾರರಲ್ಲಿ ಮಾತ್ರ ಉಳಿದಿರುವಂತೆ ತೋರುತ್ತದೆ.

ಗಣವಿಭಾಗ :–

ಸರಸಿಜೋ । ದರಗಣ । ಮೆರಡ । ಜನುಮಲ್ಲಿ । ನೆರೆದಿರ್ಕೆ । ಮತ್ತಂ ॥

ಇದನ್ನು ತಾಲಖಂಡಗಳಾಗಿಸಿದರೆ ಬ್ರಹ್ಮಗಣಗಳೆರಡು ಸೌಂದರ್ಯಾವಾಪ್ತಿಗಾಗಿ ಅಪೂರ್ಣಖಂಡಗಳಾಗುತ್ತವೆ. ಅಲ್ಲಿ ಎಳೆದೇ ಓದಬೇಕು.

"ನಡುವಣಕ್ಕರ"ದಲ್ಲಿ ಐದು ಗಣಗಳೂ ಆರು ತಾಲಖಂಡಗಳೂ ಪ್ರತಿ ಪಾದದಲ್ಲಿವೆ. "ಎಡೆಯಕ್ಕರ"ದಲ್ಲಿ ಪಾದಕ್ಕೆ ನಾಲ್ಕು ಗಣಗಳೂ ಐದು ತಾಲ ಖಂಡಗಳೂ ಇವೆ. "ಕಿರಿಯಕ್ಕರ"ವು ಹೆಸರಿಗೆ ತಕ್ಕಂತೆ ಕಿರಿದಾಗಿ, ಪಿರಿಯಕ್ಕರದ ಪಾದದ ಉತ್ತರಾರ್ಧಸ್ವರೂಪದಲ್ಲಿರುತ್ತದೆ; ಎಂದರೆ, ಅದರಲ್ಲಿ ಮೂರು ಗಣಗಳೂ ನಾಲ್ಕು ತಾಲಖಂಡಗಳೂ ಇವೆ. (ಇವುಗಳ ಲಕ್ಷಣವನ್ನು ಛಂದೋಂಬುಧಿಯಲ್ಲಿ ನೋಡಿಕೊಳ್ಳಬಹುದು.)

ಪಿರಿಯಕ್ಕರದಲ್ಲಿ ಎಂಟು ತಾಲಖಂಡಗಳೂ, ಕಿರಿಯಕ್ಕರದಲ್ಲಿ ನಾಲ್ಕು ಖಂಡಗಳೂ ಇರುವುದರಿಂದ, ಹಿಂದೆ ಹೇಳಿದ ಸರ್ವಗೀತಗಳ ಸಾಮಾನ್ಯ ಲಕ್ಷಣಕ್ಕೆ, ಎಂದರೆ ಚತುರಸ್ರತೆಗೆ ಇವೆರಡೂ ಹೋಲುತ್ತವೆ; ಆದರೆ ದೊರೆಯಕ್ಕರ ನಡುವಣಕ್ಕರಗಳಲ್ಲಿ ಆರು ಖಂಡಗಳೂ, ಎಡೆಯಕ್ಕರದಲ್ಲಿ ಐದು ಖಂಡಗಳೂ ಇರುವುದರಿಂದ ನನ್ನ ಮಾತಿಗೆ ವಿರೋಧವು ತೋರಬಹುದು. ಆದರೆ ಇದು ನಿಜವಾದ ವಿರೋಧವಲ್ಲ, ಕೇವಲ ವಿರೋಧಾಭಾಸ. ಕ್ರಮವಾಗಿ ಓದುವಾಗ ಈ ವಿರೋಧವು ಕಾಣಲಾರದು. ದೊರೆಯಕ್ಕರ ನಡುವಣಕ್ಕರಗಳಲ್ಲಿ ಪಾದಕ್ಕೆ ಆರ-ರಂತೆ, ಇಡಿಯ ಪದ್ಯದಲ್ಲಿ ೨೪ ಖಂಡಗಳಾಗುತ್ತವೆ. ಆಗ ಅದಕ್ಕೆ ಚತುರಸ್ರತೆ ಬರುತ್ತದೆ. ಅಥವಾ, ಓದುವಾಗ ಎಂಟು ಖಂಡಕಾಲದವರೆಗೆ ವಿರಾಮವನ್ನೋ ಆಲಾಪವನ್ನೋ ಮಾಡಬೇಕು. ಎಡೆಯಕ್ಕರದಲ್ಲಿಯೂ ಹೀಗೆ ಐದು ಖಂಡಕ್ಕಿಂತ ಮುಂದೆ ಮೂರು ಖಂಡಗಳ ಕಾಲವನ್ನು ಕಳೆಯಬಹುದು; ಅಥವಾ, ಒಂದೇ ಖಂಡಕಾಲದಷ್ಟು ಕಳೆದು, ನಾಲ್ಕು ಪಾದಗಳ ಮೊತ್ತದಿಂದ ಚತುರಸ್ರತೆಯನ್ನು ಪಡೆಯಬಹುದು.[19]

---

19. {ಅಕ್ಕರವೆಂಬ ಹೆಸರಿಗೆ ಕಾರಣ} ಪಿರಿಯಕ್ಕರ ಮೊದಲಾದ ಈ ಕೆಲವು ಛಂದೋಬಂಧಗಳಿಗೆ "ಅಕ್ಕರ" ಎಂಬ ಹೆಸರು ಬರಲು ಕಾರಣವೇನೆಂಬುದನ್ನು ಊಹಿಸುವುದು ಇಲ್ಲಿ ಅಪ್ರಸ್ತುತವೆನಿಸಲಾರದು. 'ಅಕ್ಕರ' ಎಂಬ ಪದವು 'ಅಕ್ಷರ' ಎಂಬುದರ ತದ್ಭವವೆಂಬುದರಲ್ಲಿ ಯಾರಿಗೂ ಸಂದೇಹವಿರಲಿಕ್ಕಿಲ್ಲ. ಜಯಕೀರ್ತಿ ಇದನ್ನು ಅಕ್ಷರವೆಂದೇ ಕರೆದಿರುತ್ತಾನೆ. ಹಾಡಿ ಹೇಳಬೇಕಾದ ಈ ಛಂದೋಬಂಧಗಳಿಗೆ ಕೇವಲ 'ಅಕ್ಷರ' ಎಂಬ ಹೆಸರು ಬಂದುದು ಇಂದು ನಮಗೆ ವಿಚಿತ್ರವಾಗಿ ಕಂಡುಬರಬಹುದಾದರೂ ಪುರಾತನಕಾಲದ ಸಂಪ್ರದಾಯವನ್ನು ಪರಾಮರ್ಶಿಸಿದರೆ ಇದರಲ್ಲೇನೂ ಆಶ್ಚರ್ಯವು ತೋರಿಬರಲಾರದು. ಹಿಂದಿನ ಕಾಲದಲ್ಲಿ ಹಾಡುಗಳಿಗೆ 'ವರ್ಣ' ಎಂಬ ಹೆಸರು ರೂಢವಾಗಿತ್ತೆಂಬುದಕ್ಕೆ ಸಾಕ್ಷ್ಯಗಳು ದೊರಕುತ್ತವೆ. ಉದಾ:– ಶಾಕುಂತಲ ನಾಟಕದ ಪಂಚಮಾಂಕದಲ್ಲಿ ದುಷ್ಯಂತ ವಿದೂಷಕರ

ಸಂಭಾಷಣಪ್ರಸಂಗದಲ್ಲಿ ಹಾಡನ್ನು ವರ್ಣವೆಂದೇ ಕರೆದುದನ್ನು ನೋಡಬಹುದು. (ಜಾನೇ ತತ್ರ ಭವತೀ ಹಂಸಪದಿಕಾ ವರ್ಣಪರಿಚಯಂ ಕರೋತೀತಿ – ವಿದೂಷಕನ ಮಾತು) ಕರ್ಣಾಟಕ ಸಂಗೀತದಲ್ಲಿ ಇಂದೂ ಕೂಡ ಒಂದು ವರ್ಗದ ಗೀತಗಳು ವರ್ಣಗಳೆಂದೇ ಕರೆಯಲ್ಪಡುತ್ತವೆ. ವರ್ಣ ಮತ್ತು ಅಕ್ಷರ ಎಂಬಿವು ಮೂಲತಃ ಭಿನ್ನಾರ್ಥಕಗಳಾಗಿದ್ದರೂ (ಅನುಬಂಧ ೧ ನೋಡಿರಿ) ಪುರಾತನಕಾಲದಲ್ಲಿಯೇ ಪರ್ಯಾಯಪದಗಳಾಗಿ ಪರಿಣಮಿಸಿ-ದುದರಿಂದ ಕನ್ನಡದ ಈ ಕೆಲವು ಹಳೆಯ ಹಾಡುಗಳಿಗೆ ವರ್ಣ ಎಂಬರ್ಥವನ್ನೇ ಕೊಡುವ ಅಕ್ಷರ ಎಂಬ ಹೆಸರು ರೂಢವಾಯಿತೆಂದು ಊಹಿಸಬಹುದಾಗಿದೆ. ತಾತ್ಪರ್ಯವೇನೆಂದರೆ 'ಅಕ್ಕರ' ಎಂಬ ಪದಕ್ಕೆ ಇಲ್ಲಿ 'ಹಾಡು' ಎಂಬುದೇ ಅರ್ಥ.

'ವರ್ಣ' ಎಂಬುದಕ್ಕೆ 'ಹಾಡು' ಎಂಬರ್ಥ ಬರಲು ಕಾರಣವೇನೆಂದರೆ –'ಗೀತ' ಎಂಬುದರಲ್ಲಿ 'ಭಾಷೆ' ಮತ್ತು 'ಸರಿಗಮಾದಿ ಸ್ವರಗಳು' ಎಂಬ ಎರಡು ಅಂಶಗಳು ಸೇರಿರುತ್ತವೆ. ಸಂಸ್ಕೃತ ಸಂಗೀತಶಾಸ್ತ್ರಗ್ರಂಥಗಳಲ್ಲಿ ಇವುಗಳನ್ನು ಕ್ರಮವಾಗಿ 'ಮಾತು' ಮತ್ತು 'ಧಾತು' ಎಂದು ಹೆಸರಿಸುತ್ತಾರೆ. (ಇಲ್ಲಿ ಬಂದಿರುವ ಮಾತು ಎಂಬುದು ಶುದ್ಧ ಕನ್ನಡದ 'ಮಾತು' ಎಂಬುದೇ ಆಗಿದೆ. ಸಂಗೀತಶಾಸ್ತ್ರವು ವಿಕಸಿತವಾದುದು ಕರ್ಣಾಟಕದಲ್ಲಿಯೇ ಆಗಿದ್ದುದರಿಂದ ಈ ಶಬ್ದವು ಸಂಸ್ಕೃತದ ಸಂಗೀತಶಾಸ್ತ್ರಗ್ರಂಥಗಳಲ್ಲಿಯೂ ಪಾರಿಭಾಷಿಕ ಪದವಾಗಿ ಸೇರಿಕೊಂಡಿತು.) ಗೀತಗಳ ಅಭ್ಯಾಸಕ್ರಮದಲ್ಲಿ ಮಾತು ಧಾತುಗಳನ್ನು ಆರಂಭದಲ್ಲಿ ಬೇರೆ ಬೇರಾಗಿ ಕಲಿಸುವುದು ರೂಢಿ. ಮೊದಲು ಧಾತುವನ್ನು ಹೇಳಿಕೊಟ್ಟು ಅನಂತರದ ಅದರ 'ಮಾತು'ವನ್ನು ಕಲಿಸುತ್ತಾರೆ. 'ಮಾತು' ಎಂಬುದೆಲ್ಲವೂ ವರ್ಣಸಮುದಾಯವೇ ಆಗಿರುವುದರಿಂದ ಆ ಹೆಸರು ಗೀತಗಳ ವರ್ಣಸಮುದಾಯಕ್ಕೆ ಸಂಕ್ರಮಿಸಿ, ಗೀತವೆಂದರೂ ವರ್ಣವೆಂದರೂ ಒಂದೇ ಎಂದಾಯಿತು.

ಕನ್ನಡದಲ್ಲಿ ಹಾಡಿಯೇ ಓದುವಂತಹ ಕಾವ್ಯಗಳಿಗೆ 'ವರ್ಣಕ'ಗಳೆಂಬ ಹೆಸರಿದೆ. 'ವರ್ಣ' ಎಂದರೆ 'ಗೀತ' ಎಂಬ ಅರ್ಥವು ರೂಢವಾಗಿದ್ದುದರಿಂದಲೇ ಈ ಹೆಸರು ಬಂದಿರುವುದಾಗಿದೆ. (ಉದಾ:– ಭರತೇಶವೈಭವ – ಪೀಠಿಕಾಸಂಧಿ,

> ಕಬ್ಬಿಗರೋದುಗಬ್ಬವ ಹಾಡುಗಬ್ಬವ
> ಕಬ್ಬದೊಳೊರೆವರಿವೆರಡು ।
> ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
> ಕಬ್ಬೆ ಹೇಳೆಲೆ ಸರಸ್ವತಿಯೇ ॥ . ॥
>
> ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು
> ವಿಕಳವಾದರು ದೋಷವಿಲ್ಲ ।
> ಸಕಲ ಲಕ್ಷಣಕಾಗಿ ಬಿರುಸು ಮಾಡಿದರೆ ಪು-
> ಸ್ತಕದ ಬದನೆಕಾಯಹುದು ॥ . ॥

ವಸ್ತುಕವೆಂದರೆ ಓದುಗಬ್ಬವೆಂಬ, ವರ್ಣಕವೆಂದರೆ ಹಾಡುಗಬ್ಬವೆಂಬ ರೂಢಿ ಇದ್ದುದಕ್ಕೆ ರತ್ನಾಕರನ ಈ ಪದ್ಯಗಳು ಪ್ರಬಲಸಾಕ್ಷ್ಯಗಳಾಗಿವೆ. ಚಂದ್ರಪ್ರಭ ಪುರಾಣದಲ್ಲಿ ಅಗ್ಗಳನು ಹಾಡುಗಬ್ಬಗಳನ್ನು ರಚಿಸುವ ಕವಿಗಳನ್ನು 'ವರ್ಣಕಕವಿ'ಗಳೆಂದು ಹೆಸರಿಸಿದ್ದಾನೆ. ಇದರಿಂದ ಈ ರೂಢಿಯ ಪುರಾತನತ್ವವು ಗಮ್ಯವಾಗುತ್ತದೆ.)

{ತ್ರಿಪದಿಯ ಲಕ್ಷಣವಿಚಾರ}

ಅಕ್ಕರಗಳ ಅನಂತರ ನಾಗವರ್ಮನು "ತ್ರಿಪದಿ'ಯನ್ನು ವಿವೇಚಿಸಿದ್ದಾನೆ. ಅಕ್ಕರಗಳಂತೆ ತ್ರಿಪದಿಯೂ ಮಾತ್ರಾನಿಯಮವಿಲ್ಲದೆ ವಿಶುದ್ಧ ತ್ರಿಮೂರ್ತಿಗಣ-ಘಟಿತವಾದುದಾದರೂ, ಇಲ್ಲಿ ನಾಗವರ್ಮನು ಗಣಾಂತಯತಿಯುಕ್ತವಾಗಿ ಚೊಕ್ಕವಾಗಿ ಹೇಳಿದ್ದಾನೆ.[20] ಇತ್ತಿತ್ತಲಾಗಿನವರೆಗೂ ಇದರಲ್ಲಿ ಕವಿತಾರಚನೆ-ಯಾಗುತ್ತಿತ್ತು. ದಕ್ಷಿಣ ಕನ್ನಡದಲ್ಲಿ ಕನ್ನಡವು ಮನೆಮಾತಾಗಿರುವ ಹೆಂಗುಸರ ತೊಟ್ಟಿಲ ಹಾಡುಗಳೆಲ್ಲ ಈ ಬಂಧದಲ್ಲಿಯೇ ಇಂದಿನವರೆಗೂ ಇವೆ. ಸರ್ವಜ್ಞನ 'ವಚನ'ಗಳಂತೂ ತ್ರಿಪದಿಗಳಲ್ಲಿಯೇ ಇವೆಯಷ್ಟೆ. ಆದರೆ ಈಗ ತ್ರಿಪದಿಯನ್ನು ಸಂಪ್ರದಾಯಾನುಗುಣವಾಗಿ ಓದಬಲ್ಲವರು ಸುಶಿಕ್ಷಿತರಲ್ಲಿ ಬಹು ಕಡಮೆ. ಮುದ್ರಿತವಾದ ಸರ್ವಜ್ಞನ ಪದಗಳು ತ್ರಿಪದಿಯ ಲಕ್ಷಣಕ್ಕೆ ಅಲ್ಲಲ್ಲಿ ಬಹಳ ಬಿಡು-ತ್ತವೆ. ಅಕ್ಷರಬಂಧ ಅಥವಾ ಮಾತ್ರಾಬಂಧಗಳನ್ನು ಹಾಡದೆ ಓದಿದರೂ ಅವುಗಳ

---

ಪಂಪಭಾರತದ ಪ್ರಥಮಾಶ್ವಾಸದಲ್ಲಿರುವ 'ವರ್ಣಕಮೊಡಂಬಡೆ ಪಂಪನೆ ಪೇೞ್ಗುಂ' ಎಂಬ ಮಾತಿನಲ್ಲಿ ಬಂದಿರುವ 'ವರ್ಣಕ' ಎಂಬ ಪದಕ್ಕೂ 'ಗೀತ' ಎಂಬುದೇ ಅರ್ಥವಾಗಿದೆ. ಆ ಕಾವ್ಯದೊಳಗೆ ಹಲವು ಪಿರಿಯಕ್ಕರಗಳು, ನಾನಾವಿಧದ ರಗಳೆಗಳು ಮತ್ತು ಉತ್ಸಾಹ ಜಾತಿ ಸಹ ಇರುವುದು 'ವರ್ಣಕಮೊಡಂಬಡೆ' ಎಂಬ ಮಾತಿನ ಲಕ್ಷ್ಯವಾಗಿರುತ್ತದೆ. ಇದನ್ನು ಪರಿಭಾವಿಸದೆ ವರ್ಣಕಕಾವ್ಯವೆಂಬುದು ಇಂಗ್ಲಿಷಿನ Romantic Poetry ಎಂಬ ಕಾವ್ಯವರ್ಗಕ್ಕೆ ಸಮನಾದ ವರ್ಗೀಕರಣವೆಂದು ಪ್ರತಿಪಾದಿಸುವುದು ಅವಾಸ್ತವವೆನ್ನಲಡ್ಡಿಯಿಲ್ಲ. ತೊರವೆ ರಾಮಾಯಣದ ಕೊನೆಯಲ್ಲಿ ಭಾಮಿನೀಷಟ್ಪದಿ ಕಾವ್ಯಗಳ ಕರ್ತೃಗಳಿಗೆ ವರ್ಣಕ ಕವಿಗಳೆಂಬ ಹೆಸರು ಕೊಡಲಾಗಿದೆ – 'ಸರಸ ವರ್ಣಕಕವಿಗಳೊಳು ಭಾಸುರ ಕುಮಾರ-ವ್ಯಾಸನೊಬ್ಬನು ಪರಿಕಿಸಲಿಕಾನೊಬ್ಬನು". ಭಾಮಿನೀಷಟ್ಪದಿಯು ತಾಳಬದ್ಧವಾದ ರಚನೆ-ಯಾಗಿದ್ದು ಹಾಡಿ ಓದುವಂತಹದಾಗಿದೆ. ಗದುಗಿನ ಭಾರತದ ಕೆಲವು ಹಳೆಯ ಹಸ್ತಪ್ರತಿಗಳಲ್ಲಿ ವಾಚಕರಿಗೆ ಕೊಡುವ ಸೂಚನೆಯಾಗಿ ಅಲ್ಲಲ್ಲಿ ಬೇರೆ ಬೇರೆ ರಾಗಗಳನ್ನು ಸಹ ನಮೂದಿಸ-ಲಾಗಿದೆಯೆಂದು ತಿಳಿದುಬರುತ್ತದೆ. ಇವೆಲ್ಲವನ್ನು ಪರಾಮರ್ಶಿಸಿದರೆ ವರ್ಣಕಕಾವ್ಯವೆಂದರೆ ಹಾಡುಗಬ್ಬ, ಬೇರೇನೂ ಅಲ್ಲ – ಎಂಬುದರಲ್ಲಿ ಯಾವ ಸಂದೇಹವೂ ಉಳಿಯಲಾರದು.

20. {ತ್ರಿಪದಿಯ ಗಣಾಂತಯತಿ} ನಾಗವರ್ಮನು ಲಕ್ಷ್ಯಲಕ್ಷಣಸಮನ್ವಯವಾಗಿ ನಿರೂಪಿಸಿ-ರುವ ತ್ರಿಮೂರ್ತಿಗಣಬಂಧಗಳೊಳಗೆ ಹೆಚ್ಚಿನವುಗಳಲ್ಲಿ ಗಣಾಂತಯತಿ ದುರ್ಲಭವೆಂಬಂತಿ-ರುವುದಾದರೂ ತ್ರಿಪದಿಯ ಗಣಾಂತಗಳಲ್ಲಿ ಯತಿ ಕಂಡುಬರುವುದು ಒಂದು ವಿಶೇಷವಾಗಿದೆ. ಪುರಾತನಕಾಲದಿಂದ ಮೊದಲ್ಗೊಂಡು ಮೊನ್ನೆ ಮೊನ್ನೆಯವರೆಗೂ ತ್ರಿಪದಿ ಹೆಣ್ಣುಮಕ್ಕಳ ಹಾಡಾಗಿ ಅನಕ್ಷರಸ್ಥರ ಬಾಯಲ್ಲಿಯೂ ನಲಿಯುತ್ತಿದ್ದುದೇ ನಾಗವರ್ಮನ ತ್ರಿಪದಿಗೂ ಲಲಿತವಾದ ಸ್ವರೂಪವನ್ನು ಕೊಡುವುದಕ್ಕೆ ಕಾರಣವೆಂದು ಹೇಳಬಹುದು. ಇತರ ಕೆಲವು ತ್ರಿಮೂರ್ತಿಗಣಬಂಧಗಳು ನಾಗವರ್ಮನಿಗಿಂತ ಹಿಂದಣ ಕಾವ್ಯಾದಿಗಳಲ್ಲಿ ಮಾತ್ರ ಕಂಡು ಬರುವ ಬಂಧಗಳಾಗಿದ್ದು ಅವನ ಕಾಲದಲ್ಲಿ ಲುಪ್ತಪ್ರಾಯವೆಂಬಂತಾಗಿದ್ದವು. (ಜಯಕೀರ್ತಿಯ ಛಂದೋನುಶಾಸನವು ಈ ಮಾತನ್ನು ಸಮರ್ಥಿಸುತ್ತದೆ. ಆ ಕೆಲವು ಬಂಧಗಳ ಆಕರಗಳನ್ನು ಜಯಕೀರ್ತಿ ಹುಡುಕಿ ಹುಡುಕಿ ಸೂಚಿಸಿರುತ್ತಾನೆ. ಅವನು ಸೂಚಿಸಿರುವ ಗ್ರಂಥಗಳಾದರೂ ಇಂದು ನಮಗೆ ಉಪಲಬ್ಧವಾಗಿಲ್ಲ.

ರೂಪವು ನಷ್ಟವಾಗಲಾರದು. ಅಂತಹ ನಿರ್ಬಂಧವಿಲ್ಲದ ಛಂದೋಬಂಧಗಳನ್ನು ಹಾಡದೆ ಓದಿದರೆ ಅವುಗಳಲ್ಲಿ ಕ್ರಮೇಣ ಅಪಪಾಠಗಳು ಉಂಟಾಗುವುದು ಸ್ವಾಭಾವಿಕ. (ಆ ದೃಷ್ಟಿಯಿಂದ ಸರ್ವಜ್ಞನ ವಚನಗಳನ್ನು ಶೋಧಿಸಿದರೆ ಸರಿ-ಯಾದ ಪಾಠಗಳು ದೊರೆಯದಿರವು.)

* * * * *

ನಾಗವರ್ಮನು ಸಾಮಾನ್ಯವಾದ ಮೂಲತ್ರಿಪದಿಯ ಆದಿಯ ಮತ್ತು ಅಂತ್ಯದ ಗಣಗಳಲ್ಲಿ ರುದ್ರಗಣಗಳನ್ನಿಡುವುದರಿಂದುಂಟಾಗುವ ಚಿತ್ರ ಮತ್ತು ಚಿತ್ರಲತೆಯೆಂಬೆರಡು ಭೇದಗಳನ್ನು ಉದಾಹರಿಸಿದ್ದಾನೆ. ಮಾತ್ರಾನಿಯಮವಿಲ್ಲದೆ ಶಿಥಿಲವಾಗಿರುವೀ ಬಂಧದಲ್ಲಿ, ಪಂಪನು ಪಿರಿಯಕ್ಕರದಲ್ಲಿ ಮಾಡಿದಂತೆ, ಮಹಾಕವಿಗಳು ಮಾಡಿದ ತಪ್ಪುಗಳಿಗೆ ಶುದ್ಧಿಪತ್ರವನ್ನು ಕೊಟ್ಟಂತೆಯೇ ಆಯೆರಡು ಬಂಧಗಳು ತೋರುವವಲ್ಲದೆ ಅವು ಬೇರೆಯೇ ಆದ ಛಂದೋಬಂಧಗಳೆಂದು ಹೇಳುವಂತಿಲ್ಲ.[21]

* * * * *

---

21. {**ತ್ರಿಪದಿಗೆ ಪಾದಗಳೆಷ್ಟು?**} ಇಲ್ಲೊಂದು ವಿಚಾರ: ಜಯಕೀರ್ತಿಯ ಛಂದೋನು-ಶಾಸನದಲ್ಲಿಯೂ ಸಂಸ್ಕೃತದಲ್ಲಿರುವ ಸಂಗೀತಶಾಸ್ತ್ರಗ್ರಂಥಗಳಲ್ಲಿಯೂ ತ್ರಿಪದಿಗೆ ಪಾದಗಳು ನಾಲ್ಕು ಎಂದು ಹೇಳಲಾಗಿದೆ. 'ತ್ರಿಪದಿ' ಎಂಬ ಹೆಸರೇ ಸೂಚಿಸುವಂತೆ ಅದು ಮೂರು ಪಾದಗಳ ಬಂಧವಾಗಿ ಸರ್ವತ್ರ ದೃಶ್ಯವಾಗುತ್ತಿರುವಾಗ ಅದಕ್ಕೆ ಪಾದಗಳು ನಾಲ್ಕು ಎಂದು ಹೇಳುವುದು ವಿಚಿತ್ರವಲ್ಲವೆ ಎಂಬೊಂದು ಸಮಸ್ಯೆ ಇಲ್ಲಿ ತಲೆದೋರುತ್ತದೆ. ನಮಗೆ ಉಪಲಬ್ಧವಾಗಿರುವ ಪುರಾತನತ್ರಿಪದಿಗಳೊಳಗೆ – ಎಲ್ಲವುಗಳಲ್ಲಿ ಅಲ್ಲದಿದ್ದರೂ – ಹೆಚ್ಚಿನವುಗಳಲ್ಲಿ ಅವುಗಳ ಮೂರು ಪಾದಗಳೊಳಗೆ ಒಂದನೇ ಪಾದದ ಮೂರನೆಯ ಗಣದ ಪ್ರಾರಂಭದಲ್ಲಿ ಪ್ರಾಸನಿಯಮವು ಕಂಡುಬರುತ್ತದೆ. ಪ್ರಾಸವೆಂಬುದು ಕನ್ನಡದಲ್ಲಿ ಅನುಲ್ಲಂಘನೀಯವಾದ ನಿಯಮವಾಗಿತ್ತಷ್ಟೆ. ತ್ರಿಪದಿಯ ಆ ಸ್ಥಾನಗಳಲ್ಲಿ ಪ್ರಾಸವು ಗೋಚರಿಸುತ್ತಿರುವುದರಿಂದ ಅಲ್ಲಿ ಬೇರೊಂದು ಪಾದದ ಆರಂಭವಾದಂತಾಗುತ್ತದೆ. ಈ ಅಭಿಪ್ರಾಯವನ್ನು ಅವಲಂಬಿಸಿದಾಗ ತ್ರಿಪದಿಗೆ ನಾಲ್ಕು ಪಾದಗಳೆನ್ನಬಹುದಾಗುತ್ತದೆ. ಸಂಸ್ಕೃತ ಲಾಕ್ಷಣಿಕರು ಈ ಅಭಿಪ್ರಾಯವನ್ನು ಎತ್ತಿಹಿಡಿಯುವುದಕ್ಕೆ ಬೇರೊಂದು ಕಾರಣವೂ ಇದ್ದಿರಬಹುದು :– "ಪದ್ಯಂ ಚತುಷ್ಪದಂ" – ಎಂಬುದು ಎಲ್ಲಾ ಪದ್ಯಗಳಿಗೂ ಅನ್ವಯಿಸುವ ನಿಯಮವಾಗಿ ಶಾಸ್ತ್ರಗಳಲ್ಲಿ ಪ್ರೋಕ್ತವಾಗಿದೆ. [ಪದ್ಯದ ಒಂದು ಸಾಲಿಗೆ 'ಪಾದ' (= ಕಾಲು = ೧/೪) ವೆಂಬ ಹೆಸರು ಬರುವುದಕ್ಕೆ ಸಹ ಇದೇ ಕಾರಣವಾಗಿದೆ.] ಹಿಂದೆ ಈ ನಿಬಂಧದಲ್ಲಿ ಪ್ರತಿಪಾದಿಸಿರುವ ಚತುರಸ್ರತೆ ಎಂಬ ತತ್ತ್ವವೇ ಪದ್ಯವೆಂಬುದಕ್ಕೆ ನಾಲ್ಕು ಪಾದಗಳನ್ನು ಉಂಟುಮಾಡಿದುದಾಗಿದೆ. 'ತ್ರಿಪದಿ' ಎಂಬುದೂ ಒಂದು 'ಪದ್ಯ'ವಾಗಿರುವುದರಿಂದ ಅದರಲ್ಲಿ ಮೂರೇ ಪಾದಗಳಿವೆಯೆಂದು ಹೇಳಿದರೆ ಈ ಲಕ್ಷಣಕ್ಕೆ ವ್ಯಾಪ್ತಿದೋಷ ಬಂದಂತಾಗು-ವುದರಿಂದ ಸಂಸ್ಕೃತ ಲಾಕ್ಷಣಿಕರು ತ್ರಿಪದಿಗೆ ನಾಲ್ಕು ಪಾದಗಳೆಂದು ಸಾಧಿಸುವುದಕ್ಕಾಗಿ ಅದರ ಪ್ರಥಮಪಾದವನ್ನು ಪಾದದ್ವಂದ್ವವಾಗಿ ಪರಿಗಣಿಸಿದ್ದಾಗಿರಬೇಕು. ಇದನ್ನು ಒಪ್ಪಿದರೆ 'ತ್ರಿಪದಿ'

ಎಂಬ ಹೆಸರು ಹೇಗೆ ಹುಟ್ಟಿತು ಎಂಬೊಂದು ಸಮಸ್ಯೆ ನಮ್ಮ ಬೆನ್ನು ಬಿಡುವುದಿಲ್ಲ. ಆದರೆ ತ್ರಿಪದಿಯ ಹಾಡುಗಾರಿಕೆಯ ಪುರಾತನ ನಿಯಮವನ್ನು ಪರಾಮರ್ಶಿಸಿದ ಪಕ್ಷದಲ್ಲಿ ಈ ಸಮಸ್ಯೆಗೆ ಪರಿಹಾರದೊರಕುತ್ತದೆ. ಆ ಹಾಡುಗಾರಿಕೆಯ ವಿಧಾನವನ್ನು ಶಾರ್ಙ್ಗದೇವನು ಹೀಗೆ ನಿರೂಪಿಸಿದ್ದಾನೆ:

ಗೀತ್ವಾದ್ಯಪಾದೌ ತದನು ಕಿಂಚಿಚ್ಛೇಷಂ ತೃತೀಯಕಂ ।
ತತಃ ಸಮಗ್ರಂ ತಂ ಗೀತ್ವಾ ಚತುರ್ಥೋ಼ ಯದಿ ಗೀಯತೇ ।
ತದಾ ಸ್ಯಾತ್ ತ್ರಿಪದೀ..... (ಸಂಗೀತ ರತ್ನಾಕರ)

ಇದರ ತಾತ್ಪರ್ಯ ಹೀಗೆ: 'ತ್ರಿಪದಿಯ ನಾಲ್ಕು ಪಾದಗಳೊಳಗೆ ಮೊದಲಿನ ಎರಡು ಪಾದಗಳನ್ನು ಹಾಡಿ ಅನಂತರ ಮೂರನೆಯ ಪಾದದ ಕೊನೆಯ ಭಾಗವನ್ನು ಬಿಟ್ಟು ಉಳಿದುದನ್ನು ಹಾಡಬೇಕು; ತದನಂತರ ಮೂರನೆಯ ಪಾದವನ್ನು ಸಂಪೂರ್ಣವಾಗಿ ಹಾಡಿ ಮತ್ತೆ ನಾಲ್ಕನೆಯ ಪಾದವನ್ನು ಹಾಡಿ ಮುಗಿಸಬೇಕು.' ಹೀಗೆ ಹಾಡಿದಾಗ ಮೊದಲಿನ ಎರಡು ಪಾದಗಳೆಂದು ಶಾರ್ಙ್ಗದೇವನು ಹೇಳುವ ಭಾಗವು ಪದ್ಯದ ಒಂದನೆಯ ಪಾದವಾಗಿಯೂ ಕೊನೆಯ ಭಾಗವನ್ನು ಬಿಟ್ಟು ಮೂರನೆಯ ಪಾದದ ಉಳಿದ ಭಾಗವು ಎರಡನೆಯ ಪಾದವಾಗಿಯೂ ಮತ್ತು ಶಾರ್ಙ್ಗದೇವನು ಹೇಳುವ ಮೂರನೆಯ ಪಾದವನ್ನು ಸಂಪೂರ್ಣ-ವಾಗಿ ಹಾಡಿದಾಗ ಅದು ಪದ್ಯದ ಮೂರನೆಯ ಪಾದವಾಗಿಯೂ ಅವನು ಹೇಳುವ ನಾಲ್ಕನೆಯ ಪಾದವು ಪದ್ಯದ ನಾಲ್ಕನೆಯ ಪಾದವಾಗಿಯೂ ಪರಿಣಮಿಸುತ್ತದೆ. ಈ ವಿಧಾನದ ಹಾಡುಗಾರಿಕೆಯು ತ್ರಿಪದಿಗೆ ಚತುರಸ್ರತೆಯನ್ನು ಯಾವ ಕೊರತೆಯೂ ಇಲ್ಲದೆ ಒದಗಿಸಿ-ಕೊಡುತ್ತದೆ. ಇದರಿಂದ ಈ ಪದ್ಯವಿಶೇಷಕ್ಕೆ ಶ್ರಾವಣರೂಪದಲ್ಲಿ ಪಾದಗಳು ನಾಲ್ಕಾಗುವ-ವಾದರೂ ದೃಶ್ಯರೂಪದಲ್ಲಿ ಮೂರೇ ಆಗುತ್ತವೆ. ಆದುದರಿಂದ ಪದ್ಯವೆಂಬುದಕ್ಕೆ ನಾಲ್ಕು ಪಾದಗಳಿರಲೇಬೇಕು – ಎಂಬ ಲಕ್ಷಣವನ್ನು ತ್ರಿಪದಿಗೆ ಅನ್ವಯಿಸುವುದಕ್ಕಾಗಿ ಅದರ ಮೊದಲನೆಯ ಪಾದವನ್ನು ಎರಡು ಪಾದಗಳೆಂದು ಸಾಧಿಸುವ ಅವಶ್ಯಕತೆ ಏನೂ ಉಂಟಾಗುವುದಿಲ್ಲ. ಸಾರಾಂಶ: 'ತ್ರಿಪದಿ' ಎಂಬ ಪದ್ಯದ ವಿಶೇಷಕ್ಕೆ ಈ ಹೆಸರು ಅನ್ವರ್ಥ. ಅದಕ್ಕೆ ಪಾದಗಳು ಮೂರೇ; ನಾಲ್ಕಲ್ಲ. ಅದನ್ನು ಹಾಡುವ ವಿಧಾನದ ವೈಶಿಷ್ಟ್ಯದಿಂದಾಗಿ ಅದಕ್ಕೆ ಚತುರಸ್ರತೆಯೂ ಸಿದ್ಧಿಸುತ್ತದೆ. ಇದಕ್ಕೊಂದು ಉದಾಹರಣೆ:

ವಜ್ರದ ಹರಳೆ ಬಾ ಮುದ್ದು ಬಾ ಮುಗುಳೆ ಬಾ
ಅಜ್ಜನ ಕೊರಳ ಪದಕವೆ ಬಾರೆಂದು
ಅಜ್ಜಿ ಮೊಮ್ಮಗನ ಕರೆದಳು. ॥ . ॥

ಇದು ತ್ರಿಪದಿಯ ಚಾಕ್ಷುಷರೂಪ. ಇದನ್ನು ಶಾರ್ಙ್ಗದೇವನ ಉಕ್ತಿಗನುಸಾರವಾಗಿ ಹಾಡುವಾಗ ಉಂಟಾಗುವ ಇದರ ಶ್ರಾವಣರೂಪವು ಈ ಕೆಳಗಿನಂತೆ–

ವಿ । ವಿ । ವಿ । ವಿ
ವಜ್ರ . ದ . । ಹರಳೆ . ಬಾ । ಮುದ್ದು . ಬಾ । ಮುಗುಳೆ . ಬಾ ।
ವಿ । ವಿ । ವಿ
ಅಜ್ಜ . ನ . । ಕೊರಳ... । ಪದಕ . ವೆ . ।
ವಿ । ವಿ । ವಿ । ವಿ
ಅಜ್ಜ . ನ . । ಕೊರಳ... । ಪದಕ. ವೆ . । ಬಾರೆಂದು. ।

ವಿ । ವಿ । ವಿ

ಅಜ್ಜಿ . ಮೊ । ಮ್ಮಗನ... । ಕರೆದ . ಳು. ॥ . ॥

[ತ್ರಿಪದಿಯ ಪ್ರಥಮಪಾದದ ದ್ವಿತೀಯಖಂಡದ ಆರಂಭದಲ್ಲಿ ಪ್ರಾಸವಿಲ್ಲವೆಂಬುದನ್ನು ನೋಡಿರಿ. ಇದರ ಎರಡನೆಯ ಪಾದದಲ್ಲಿರುವ "ಅಜ್ಜನ ಕೊರಳ ಪದಕವೆ" ಎಂಬುದರ ಬದಲಾಗಿ "ಅರ್ಜುನನ ಕೊರಳ ಪದಕವೆ" ಎಂಬ ಪಾಠವು ಮುದ್ರಿತವಾದ ಪುಸ್ತಕಗಳಲ್ಲಿ ಕಂಡು-ಬರುವುದಾದರೂ ಅದು ಅಶುದ್ಧಪಾಠವೆಂಬುದರಲ್ಲಿ ಸಂದೇಹವಿಲ್ಲ. ಈ ಪಾಠದಲ್ಲಿ ಛಂದೋ-ಭಂಗವಿರುವುದು ಮಾತ್ರವಲ್ಲ 'ಅರ್ಜುನನ ಕೊರಳ ಪದಕ' ಎಂಬ ಮಾತಿಗೆ ಔಚಿತ್ಯವೂ ಇಲ್ಲ. ಸಮರ್ಥನೀಯವಾದ ಅರ್ಥವೂ ಇಲ್ಲವೆಂಬುದನ್ನು ಲಕ್ಷಿಸಬೇಕು.]

ಆನುಷಂಗಿಕವಾಗಿ ಇನ್ನೂ ಎರಡು ಮಾತುಗಳನ್ನು ಇಲ್ಲಿ ಹೇಳುವುದು ವಿಹಿತ-ವೆಂದು ಭಾವಿಸುತ್ತೇನೆ. ಜಯಕೀರ್ತಿಯು ತ್ರಿಪದಿಯಲ್ಲಿ ಚಿತ್ರಾ ವಿಚಿತ್ರಾ ಎಂದು ಎರಡು ಭೇದಗಳನ್ನು ಹೇಳಿರುತ್ತಾನೆ. ನಾಗವರ್ಮನು ಮೂರು ಭೇದಗಳನ್ನು ಹೇಳಿರುವಂತೆ ತೋರು-ತ್ತದೆ. ಆದರೆ ಇವುಗಳೊಳಗಿನ ಭೇದವೆಲ್ಲ ವಿಷ್ಣುಗಣಸ್ಥಾನದಲ್ಲಿ ಕ್ವಚಿತ್ ರುದ್ರಗಣ ಪ್ರಯೋಗ-ವಾಗುವಷ್ಟರ ಮಟ್ಟಿಗೆ ಸೀಮಿತವಾಗಿರುತ್ತದೆ. ಇಷ್ಟರಿಂದಾಗಿ ಅವು ಬೇರೆ ಬೇರೆ ಛಂದೋ-ಬಂಧಗಳೆಂದಾಗುವುದಿಲ್ಲ. ಏಕೆಂದರೆ, ವಸ್ತುತಃ ತ್ರಿಮೂರ್ತಿಗಣಗಳು ಮಾತ್ರಾವಿಷಯದಲ್ಲಿ ಶಿಥಿಲಸ್ವಭಾವದವುಗಳಾದುದರಿಂದ, ಮತ್ತು ತ್ರಿಪದಿ ಎಂಬುದು ಬಹುಧಾ ಸ್ತ್ರೀಗೀತವಾಗಿದ್ದು-ದರಿಂದ ಗಣವಿಷಯದಲ್ಲಿ ಅಷ್ಟಿಷ್ಟು ಬದಲಾವಣೆಯಾದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಹಾಗೆ ಆದ ಉದಾಹರಣೆಗಳು ಅನಲ್ಪಸಂಖ್ಯೆಯಲ್ಲಿ ದೊರಕುತ್ತವೆ. ಪ್ರಾಸವಿಷಯದಲ್ಲಿಯೂ ನಿಯಮೋಲ್ಲಂಘನವಾದುದಕ್ಕೆ ಉದಾಹರಣೆಗಳು ಅಪೂರ್ವವೇನೂ ಅಲ್ಲ. ಕಾವ್ಯಗುಣದಿಂದ ಪ್ರಥಮಶ್ರೇಣಿಗೆ ಸೇರತಕ್ಕ ಈ ಕೆಳಗಿನ ಒಂದು ತ್ರಿಪದಿಯನ್ನು ನೋಡಿರಿ–

ರು । ವಿ । ವಿ । ವಿ ।

ಬಡತನವೆ । ನೀಯೆನ್ನ । ಬಿಡದೆ ಬೆ । ನ್ನಲಿ ಬಂದೆ ।

ವಿ । ಬ್ರ । ವಿ । ವಿ ।

ಕಡುಕಷ್ಟ । ಗೊಳಿಸಿ । ದಣಿಸಿದೆ । ಹೊನ್ನುಳ್ಳ ।

ವಿ । ಬ್ರ । ವಿ ।

ಹೊಲೆಯಂಗೆ । ಕೈಯ । ಮುಗಿಸಿದೆ ॥ . ॥

{**ಶಾಸನದಲ್ಲಿ ದೊರಕುವ ಪುರಾತನ ತ್ರಿಪದಿಗಳು**} ಇಲ್ಲಿ ಉದಾಹರಿಸಿದ ಸ್ತ್ರೀಗೀತದಂತಹ ಪರಂಪರಾಗತ ತ್ರಿಪದಿಗಳಲ್ಲಿ ಮಾತ್ರವಲ್ಲ, ವ್ಯುತ್ಪನ್ನರು ರಚಿಸಿದ್ದಿರಬಹುದಾದ ಶಾಸನಾದಿಗಳ ತ್ರಿಪದಿಗಳಲ್ಲಿಯೂ ಪ್ರಾಸವನ್ನುಲ್ಲಂಘಿಸಿರುವುದಕ್ಕೆ ಮತ್ತು ವಿಷ್ಣುಗಣಸ್ಥಾನಗಳಲ್ಲಿ ರುದ್ರಗಣಗಳು ಬಂದಿರುವುದಕ್ಕೆ ಉದಾಹರಣೆಗಳು ಇವೆ. ನಮಗೆ ಲಬ್ಧವಾಗಿರುವ ತ್ರಿಪದಿಗಳೊಳಗೆ ಪುರಾತನತಮವೆಂದು ಕಂಡುಬರುವ ಈ ಕೆಳಗಿನ ತ್ರಿಪದಗಳಲ್ಲಿ ಇದಕ್ಕೆ ಸಾಕ್ಷ್ಯಗಳಿರುವುದುನ್ನು ನೋಡಿರಿ –

ಸಾಧುಗೆ ಸಾಧು ಮಾಧೂರ್ಯನ್ಗೆ ಮಾಧೂರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತ
ನ್ಮಾಧವನೀತನ್ಪೆಱನಲ್ಲ ॥ . ॥

ಒಳ್ಳಿತ್ತ ಕೆಯ್ವೊರಾರ್ಪ್ಪೊಲ್ಲದುಮದಱಿನ್ತೆ
ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ
ಮಿಲ್ಲಿ ಸಂಧಿಕ್ಕುಮದು ಬಂದು ॥ . ॥

ಕಟ್ಟಿದ ಸಿಂಘಮನ್ಕೆಟ್ಟೊಡೇನೆಮಗೆನ್ದು
ಬಿಟ್ಟವೊಲ್ಕಲಿಗೆ ವಿಪರೀತಂಗಹಿತರ್ಕ್ಕ
ಳ್ಕೆಟ್ಟಮ್ಮೆರ್ಣ್ಣಸ್ತರವಿಚಾರಮ್ ॥ . ॥

ಶಾಸನಗತವಾದ ಈ ಪದ್ಯಗಳೊಳಗೆ ಮೊದಲನೆಯದರ ಪಾಠದಲ್ಲಿ ಅಶುದ್ಧಿಯಿರುವುದು ಸ್ಫುಟವಾಗಿ ಕಂಡುಬರುತ್ತದೆ; ಎರಡನೇ ಮತ್ತು ಮೂರನೇ ಪದ್ಯಗಳಲ್ಲಿ ಪ್ರಸ್ತುತನಾದ ವೀರಪುರುಷನನ್ನು 'ಕಲಿಗೆ ವಿಪರೀತ'ನೆಂದು ವಿಶೇಷಿಸಲಾಗಿದೆ. ಮತ್ತು ಅವುಗಳಲ್ಲಿ ಅರ್ಥಸಾಮಂಜಸ್ಯವೂ ಕಂಡುಬರುತ್ತದೆ. ಆದರೆ ಮೊದಲನೆಯ ಪದ್ಯದಲ್ಲಿ 'ಕಲಿಗೆ ಕಲಿಯುಗ ವಿಪರೀತಂ' ಎಂಬ ಪಾಠವಿದೆ. ಈ ಪಾಠಕ್ಕೆ ಸಮಂಜಸವಾದ ಅರ್ಥವನ್ನು ಹೇಳುವುದು ಅಸಾಧ್ಯವೆನ್ನಲಡ್ಡಿಯಿಲ್ಲ. ಮತ್ತು ಅಪಪಾಠವಾಗಿ ಪರಿಣಮಿಸಲು ಕಲಿಯುಗ ಎಂಬ ಪದವು ಸ್ವಸ್ಥಾನಚ್ಯುತವಾದುದು ಕಾರಣವಾಗಿದೆ. ಆದುದಿರಂದ ಈ ಪದ್ಯದ ಪಾಠವನ್ನು ಕೆಳಗಿನಂತೆ ಪರಿಷ್ಕರಿಸಿಕೊಳ್ಳುವುದು ಅಪೇಕ್ಷಣೀಯವೂ ನ್ಯಾಯ್ಯವೂ ಆಗಿದೆ.

ವಿ । ವಿ । ವಿ । ವಿ ।
ಸಾಧುಗೆ । ಸಾಧು ಮಾ । ಧೂರ್ಯಂಗೆ । ಮಾಧೂರ್ಯಂ ।

ವಿ । ಬ್ರ । ವಿ । ವಿ ।
ಬಾಧಿಪ್ಪ । ಕಲಿಗೆ । ವಿಪರೀತನ್ । ಕಲಿಯುಗ ।

ವಿ । ಬ್ರ । ವಿ
ಮಾಧವ । ನೀತನ್ । ಪೆಱನಲ್ಲ ॥ . ॥

(ಇಲ್ಲಿ 'ಮಾಧೂರ್ಯ' ಎಂಬ ಅಪೂರ್ವ ಪದಪ್ರಯೋಗವು ಕಂಡುಬರುವುದರಿಂದ ಈ ಶಾಸನವನ್ನು ಪರಾಮರ್ಶಿಸಿದವರಲ್ಲಿ ಕೆಲವರು 'ಮಾಧೂರ್ಯ' ಎಂಬುದು ಅಕ್ಷರಸ್ಖಾಲಿತ್ಯ-ವೆಂದು ನಿಶ್ಚಯಿಸಿಕೊಂಡು 'ಮಾಧುರ್ಯ' ಎಂದು ತಿದ್ದಿಕೊಂಡಿದ್ದಾರೆ. ಮತ್ತು ಈ ಪದ್ಯವನ್ನು ವಿಮರ್ಶಿಸಿದ ಹಲವರು 'ಮಾಧುರ್ಯಂ' ಎಂಬುದಕ್ಕೆ 'ಮಧುರನು' ಎಂಬರ್ಥವನ್ನು ಕಲ್ಪಿಸಿಕೊಂಡು ಪದ್ಯದ ಅರ್ಥವನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಇದು ಮಧುರಗುಣಾರ್ಥಕವಾದ ಶಬ್ದವಾಗಿರದೆ 'ಧುರೀಣಾಗ್ರೇಸರನು' ಎಂಬರ್ಥದ ಪ್ರಯೋಗ-ವೆಂಬುದನ್ನು ಈವರೆಗೆ ಯಾರೂ ಲಕ್ಷಿಸಿದಂತೆ ತೋರುವುದಿಲ್ಲ. ಇನ್ನು 'ಧೂರ್ಯ' ಎಂಬ ಶಬ್ದರೂಪವೂ ಒಂದು ಕಾಲದಲ್ಲಿ 'ಧುರ್ಯ' ಎಂಬುದರ ಬದಲಾಗಿ ಪ್ರಯುಕ್ತವಾಗುತ್ತಿತ್ತು ಎಂಬುದೂ ಕೋಶಗಳಿಂದ ತಿಳಿದುಬರುತ್ತದೆ.)

[{**ಶಾಸನಗತವಾದ ಪ್ರಾಚೀನ ತ್ರಿಪದಿಗಳ ಪಾಠ ಮತ್ತು ಅರ್ಥವಿಚಾರ**} ನಮ್ಮ ಪುರಾತನ ಶಿಲಾಶಾಸನಗಳಲ್ಲಿ ಅಕ್ಷರಸ್ಖಾಲಿತ್ಯಗಳು ಕಂಡುಬರುವುದು ಅಪೂರ್ವವೇನೂ ಅಲ್ಲ. ಸಂಪೂರ್ಣ ಶುದ್ಧವಾಗಿ ಕೆತ್ತಲ್ಪಟ್ಟಿರುವ ಶಿಲಾಶಾಸನಗಳು ದುರ್ಲಭವೆಂಬಷ್ಟು ಕಡಮೆಯಾಗಿವೆ. ಆ ಕಾಲದಲ್ಲಿ ಸಾಮಾನ್ಯವಾಗಿ ಇದ್ದುದು ಏಕವಿದ್ಯಾನಿಷ್ಠೆ: ಒಬ್ಬೊಬ್ಬನು ಒಂದೊಂದೇ ವಿದ್ಯೆ ಅಥವಾ ಶಾಸ್ತ್ರದಲ್ಲಿ ಪಾರಂಗತನಾಗುತ್ತಿದ್ದನು. ಸಾಹಿತ್ಯಪಂಡಿತರಿಗೆ ಶಿಲಾಲೇಖನ ಬರೆಯುವ ಅಭ್ಯಾಸವಿರುವ

ಹಾಗಿಲ್ಲ; ಅತಿಸುಂದರವಾದ ವಿಗ್ರಹಗಳ ನಿರ್ಮಾಣದಲ್ಲಿ ಸಮರ್ಥನಾದ ಶಿಲ್ಪಿಗೂ ಆ ಕಾಲ-ದಲ್ಲಿ ಸಾಕಷ್ಟು ಅಕ್ಷರಜ್ಞಾನವಿದ್ದಿಲ್ಲ – ಇರಬೇಕಾದಷ್ಟು ಭಾಷಾಜ್ಞಾನವೂ ಇದ್ದಿಲ್ಲ. ಶಾಸನಗಳಲ್ಲಿ ತಪ್ಪುಗಳು ವಿಜೃಂಭಿಸುತ್ತಿರುವುದಕ್ಕೆ ಇದುವೇ ಕಾರಣವಾಗಿದೆ.

ಇದೇ ಶಾಸನದ ಆರಂಭದಲ್ಲಿ –

ಕಪ್ಪೆ ಅರಭಟ್ಟನ್ ಶಿಷ್ಟಜನಪ್ರಿಯನ್
ಕಷ್ಟಜನವರ್ಜಿತನ್ ಕಲಿಯುಗ ವಿಪರೀತನ್

– ಎಂಬ ಕನ್ನಡ ನುಡಿಯ ಎರಡು ಸಾಲುಗಳೂ ಮತ್ತೆ ಒಂದು ಸಂಸ್ಕೃತ ಶ್ಲೋಕವೂ ಕೆತ್ತಲ್ಪಟ್ಟಿದೆಯೆಂದು ಶಾಸನಸಂಗ್ರಹಗಳಿಂದ ತಿಳಿದುಬರುತ್ತದೆ. ಇಲ್ಲಿರುವ ಕನ್ನಡನುಡಿಯ ಎರಡು ಸಾಲುಗಳು ನಮಗೀಗ ಗೊತ್ತಾಗಿರುವ ಯಾವ ಛಂದೋಬಂಧಕ್ಕೂ ಸೇರುವಂತಹ-ದಲ್ಲವಾಗಿರುವುದರಿಂದ ಇದು ಗದ್ಯಭಾಗವೆಂದು ಶಾಸನಸಂಗ್ರಹಕಾರರು ಭಾವಿಸಿದಂತೆ ತೋರುತ್ತದೆ. ಆದರೆ, 'ಶಿಷ್ಟಜನಪ್ರಿಯನ್, ಕಷ್ಟಜನವರ್ಜಿತನ್' ಎಂಬಲ್ಲಿ ಪ್ರಾಸನಿಯಮವನ್ನು ಅನುಸರಿಸಿದಂತೆ ತೋರುವುದರಿಂದಲೂ ಆ ಎರಡು ಸಾಲುಗಳಲ್ಲಿರುವ ಪದಪರಿಣಾಮ ಹಾಗೂ ಪದಸ್ವಭಾವಗಳನ್ನು ಪರಾಮರ್ಶಿಸಿದರೆ ಸಾಲಿಗೆ ನಾಲ್ಕರಂತೆ ಒಟ್ಟು ಕರ್ಣಾಟಕ ಜಾತಿಯ ಎಂಟು ಗಣಗಳು ಉನ್ಮೀಲಿಸುವುದರಿಂದಲೂ ಈ ಭಾಗವು ಗದ್ಯವಾಗಿರದೆ ಪದ್ಯವೇ ಆಗಿರಬೇಕೆಂದು ಊಹಿಸುವುದಕ್ಕೆ ಅವಕಾಶವಿದೆ. ಈ ಊಹೆ ಸಾಧುವೆಂದಾದ ಪಕ್ಷದಲ್ಲಿ ಇದರ ಆದಿಯ 'ಕಪ್ಪೆ' ಎಂಬ ಪದದ ಸಾಧುತ್ವದಲ್ಲಿ ಸಂದೇಹ ಹುಟ್ಟಿ, ಶಿಷ್ಟ, ಕಷ್ಟ – ಎಂಬವುಗಳಿಗೆ ಸಂವಾದಿಯಾಗಿದ್ದೊಂದು ಪದ ಅಲ್ಲಿದ್ದಿರಬೇಕೆಂಬ ಭಾವನೆ ಉಂಟಾಗುತ್ತದೆ. ಹಾಗಾದರೆ ಪ್ರಸ್ತುತ ಶಾಸನವಿಷಯನಾದ ವೀರನ ಹೆಸರು 'ಕಪ್ಪೆ ಅರಭಟ್ಟ' ಎಂದಾಗಿದ್ದಿರದೆ ಬೇರೇನೋ ಆಗಿದ್ದಿರಬೇಕು – ಎಂಬ ಶಂಕೆಯೂ ಮೂಡುತ್ತದೆ. ಮತ್ತು 'ಅರಭಟ್ಟ' ಎಂಬ ಪದಕ್ಕೆ ಅರ್ಥವೇನೆಂಬುದು ಗಮ್ಯವಾಗುವುದಿಲ್ಲ. ಅಲ್ಲದೆ ಭಟ್ಟನೊಬ್ಬನು ವೀರಪುರುಷನಾಗುವ ಸಂಭಾವ್ಯತೆಯೂ ಆ ಕಾಲದಲ್ಲಿ ಇದ್ದಿರುವುದು ಸಂಶಯಾಸ್ಪದ. ಬಹುಶಃ ಅದು 'ಆರಭಟ' ಎಂದಾಗಿದ್ದಿರಬಹುದೋ ಏನೋ, ಏಕೆಂದರೆ 'ಆರಭಟ' ಎಂಬ ಪದಕ್ಕೆ ಸಾಹಸಿ ಎಂದೂ ಶೂರನೆಂದು ಅರ್ಥಗಳಿವೆ. (An enterpraising man, courageous man - *Monier Williams Dictomary*)

ಶಾಸನದ ಈ ಪ್ರಸ್ತಾವನಾಭಾಗದಲ್ಲಿಯೂ ಮುಂದಿನ ಮೂರು ಕನ್ನಡ ಪದ್ಯಗ-ಳೊಳಗೆ ಮೊದಲನೆಯದರಲ್ಲಿಯೂ 'ಕಲಿಯುಗ ವಿಪರೀತನ್' ಎಂಬ ಪಾಠವಿರುವುದರಿಂದ ಅದುವೇ ಸರಿಯೆಂದು ಸಕೃದ್ದರ್ಶನಕ್ಕೆ ಕಂಡುಬರಬಹುದಾದರೂ ಅರ್ಥಸಾಮಂಜಸ್ಯವಿಲ್ಲದ ಈ ಪಾಠವನ್ನು ಸ್ವೀಕರಿಸಬೇಕಾಗಿಲ್ಲವೆಂದು ನನಗೆ ತೋರುತ್ತದೆ. ಆದುದರಿಂದ ಮುಂದಿನ ಎರಡು ಪದ್ಯಗಳಲ್ಲಿರುವ 'ಕಲಿಗೆ ವಿಪರೀತನ್' ಎಂಬ ಪಾಠವೇ ಸ್ವೀಕಾರಕ್ಕೆ ಯೋಗ್ಯವಾಗಿದೆ. ಪ್ರಸ್ತಾವನಾಭಾಗಕ್ಕೆ ಈ ಪಾಠವನ್ನು ಅಳವಡಿಸಿದಾಗ ಆ ಭಾಗದ ಎರಡನೆಯ ಸಾಲು 'ಕಷ್ಟ-ಜನವರ್ಜಿತನ್ ಕಲಿಗೆ ವಿಪರೀತನ್' ಎಂದಾಗುತ್ತದೆ. ಛಂದೋಬಂಧದ ಕೊನೆಯ ಸಾಲಿನ ಕೊನೆಯ ಗಣದ ಉಪಾಂತ್ಯವು ಬ್ರಹ್ಮಗಣವಾಗಿರುವುದು ಕರ್ಣಾಟಕಜಾತಿಯ ಅನೇಕ ಛಂದೋಬಂಧಗಳ ವಿಶಿಷ್ಟ ಲಕ್ಷಣವಾಗಿದೆ. ಉದಾ:– ತ್ರಿಪದಿ, ಏಳೆ, ಗೀತಿಕೆ. ಆದುದರಿಂದ ಪದ್ಯವೇ ಆಗಿದ್ದಿರಬಹುದಾದ ಪ್ರಸ್ತಾವನಾಭಾಗವು ಯಾವುದೋ ಒಂದು ಕರ್ಣಾಟಕಜಾತಿಯ ಛಂದೋಬಂಧವಾಗಿದ್ದಿರಬೇಕೆಂಬ ಈ ಮೇಲೆ ಮಾಡಿದ ಊಹೆಗೆ ಪುಷ್ಟಿಯೂ ದೊರಕುತ್ತದೆ. ಸಾರಾಂಶ – ಪ್ರಸ್ತುತ ಶಾಸನವಿಷಯನಾದ ವೀರಪುರುಷನ ಹೆಸರು 'ಆರಭಟ'ನೆಂದೂ

'ಕಲಿಗೆ ವಿಪರೀತನ್' ಎಂಬುದು ಅವನ ಬಿರುದೆಂದೂ ತಿಳಿಯುವುದು ಯುಕ್ತಿಯುಕ್ತವಾಗಿ ಕಂಡುಬರುತ್ತದೆ.

ಈ ಮೇಲೆ ಮಾಡಿದ ವಿಚಾರಕ್ಕನುಗುಣವಾಗಿ ಶಾಸನದ ಮೂರು ತ್ರಿಪದಿಗಳೊಳಗೆ ಮೊದಲನೆಯದರ ಅರ್ಥವು ಈ ಕೆಳಗಿನಂತಾಗುತ್ತದೆ;

ಇದರಲ್ಲಿ ಪ್ರಸ್ತುತನಾದ ವೀರಪುರುಷನನ್ನು ಶ್ರೀಕೃಷ್ಣನಿಗೆ ಹೋಲಿಸಲಾಗಿದೆ. ಮತ್ತು ಆ ಹೋಲಿಕೆಯ ಸಮರ್ಥನೆಗಾಗಿ ಶ್ರೀಕೃಷ್ಣನ ಗುಣವಿಶೇಷಗಳನ್ನೂ ನಿರೂಪಿಸಲಾಗಿದೆ. ದ್ವಾಪರಯುಗದ ಶ್ರೀಕೃಷ್ಣನು (ಸಾಧುಗೆ ಸಾಧು) ಸಜ್ಜನರಿಗೆ ಸಜ್ಜನನಾಗಿಯೂ (ಮಾಧೂ-ರ್ಯ್ಯಂಗೆ ಮಾಧೂರ್ಯ್ಯಂ) ಶೂರಾಗ್ರೇಸರನಿಗೆ ಶೂರಾಗ್ರೇಸರನಾಗಿಯೂ (ಬಾಧಿಪ್ಪ ಕಲಿಗೆ ವಿಪರೀತನ್) ಪರಪೀಡಕನಾದ ದುಃಸಾಹಸಿಗೆ ಬದ್ಧವಿರೋಧಿಯಾಗಿಯೂ ಇದ್ದನು. ಪ್ರಸ್ತುತ ವೀರನ ಗುಣಗಳೂ ಹೀಗೆಯೇ ಇರುವ ಕಾರಣ (ಕಲಿಯುಗ ಮಾಧವನೀತನ್ ಪೆಱನಲ್ಲ) ಇವನು ಕಲಿಯುಗದ ಶ್ರೀಕೃಷ್ಣನೇ ಹೊರತು ಬೇರಾರೂ ಅಲ್ಲ – ಎಂಬುದು ಇದರ ಸರಳ-ವಾದ ಅರ್ಥ. (ಕನ್ನಡದಲ್ಲಿ ಯುದ್ಧ ಎಂಬರ್ಥದಲ್ಲಿ 'ಧುರ' ಎಂಬುದು ಪುರಾತನ ಕಾಲ-ದಿಂದಲೂ ರೂಢವಾಗಿರುತ್ತದೆ. ಇದು ಸಂಸ್ಕೃತ ಶಬ್ದವೆಂಬಂತೆ ಕಾಣುವುದಾದರೂ ಸಂಸ್ಕೃತ ಭಾಷೆಯಲ್ಲಿ ಇದರ ಪ್ರಯೋಗವು ಯುದ್ಧವೆಂಬರ್ಥದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಧುರೀಣ ಅಥವಾ ಅಗ್ರೇಸರ ಎಂಬರ್ಥದ 'ಧುರ್ಯ' ಎಂಬ ಸಂಸ್ಕೃತ ಶಬ್ದವು 'ಧುರ' ಎಂಬ ಶಬ್ದದಿಂದ ಹುಟ್ಟಿತೆಂಬ ಭ್ರಾಂತಿಯನ್ನುಂಟುಮಾಡಲು ಸಮರ್ಥವಾಗಿರುವುದರಿಂದ ಧುರ್ಯಶಬ್ದಕ್ಕೆ 'ಶೂರಾಗ್ರೇಸರ' ಎಂಬರ್ಥವೂ ಕನ್ನಡದಲ್ಲಿ ರೂಢವಾದಂತೆ ಕಾಣುತ್ತದೆ. ಆದುದರಿಂದ 'ಮಾಧುರ್ಯ್ಯಂ' ಅಥವಾ 'ಮಾಧೂರ್ಯ್ಯಂ' ಎಂಬ ಪದಕ್ಕೆ ಮಹಾವೀರನೆಂಬ ಅರ್ಥವು ಇಲ್ಲಿ ಗ್ರಾಹ್ಯವಾಗಿದೆ. ಕೆಲವರು ವಿವರಿಸಿರುವಂತೆ –'ಮಾಧುರ್ಯ್ಯಂ' ಎಂಬುದು ಪ್ರಸ್ತುತ ವೀರನ ಮಧುರಗುಣಗಳನ್ನು ಹೇಳುವ ಶಬ್ದವೆಂದು ಭಾವಿಸುವುದು, ವಿಚಾರ ಮಾಡಿದರೆ, ಅನುಚಿತನೆಂದು ಸ್ಪಷ್ಟವಾಗದಿರದು. ಮೊದಲನೆಯದಾಗಿ 'ಮಾಧುರ್ಯ' ಎಂಬ ಭಾವಾರ್ಥಕ ಶಬ್ದಕ್ಕೆ ಮಧುರನೆಂಬ ಅರ್ಥವು ಬರುವಂತಿಲ್ಲ. ಎರಡನೆಯದಾಗಿ 'ಸಾಧುಗೆ ಸಾಧು' ಎಂದು ಹೇಳಿದ ಮೇಲೆ 'ಮಧುರನಿಗೆ ಮಧುರನು' ಎಂದು ವರ್ಣಿಸುವುದರಲ್ಲಿ ಯಾವ ಅರ್ಥವಿಶೇಷವೂ ಕಾಣಿಸಿಕೊಳ್ಳದೆ ಹೇಳಿದ್ದನ್ನೇ ಹೇಳಿದ ಹಾಗೆ ಆಗಿಬಿಡುತ್ತದೆ.) ಇಲ್ಲಿರುವ 'ಕಲಿಗೆ ವಿಪರೀತನ್' ಎಂಬುದು 'ಪಡೆಮೆಚ್ಚೆ ಗಂಡಂ' ಇತ್ಯಾದಿ ಬಿರುದಾವಳಿ ಪದಗಳಂತೆ ಒಂದು ಅಲುಕ್‌ಸಮಾಸರೂಪದ ಬಿರುದೆಂದು ತಿಳಿಯಬೇಕು.]

ಈ ಮೊದಲು ಈ ಪದ್ಯವನ್ನು ವಿಮರ್ಶಿಸಿದ ಮಹನೀಯರು ಇದರ ಪ್ರಥಮ ಪಾದದ ಗಣವಿಭಾಗವನ್ನು

ವಿ । ಬ್ರ । ರು । ವಿ ।
ಸಾಧುಗೆ । ಸಾಧು । ಮಾಧುರ್ಯ್ಯಂಗೆ । ಮಾಧುರ್ಯ್ಯಂ ।

– ಎಂದು ಮಾಡಿಕೊಂಡು ತ್ರಿಪದಿಯ ಲಕ್ಷಣಕ್ಕೆ ವಿರುದ್ಧವಾಗಿ 'ಮಾಧುರ್ಯ್ಯಂಗೆ' ಎಂಬ ರುದ್ರಗಣ ಇಲ್ಲಿ ಬಂದಿರುವುದೆಂದು ಹೇಳಿರುತ್ತಾರೆ. (ಹಾಗೆ ಮಾಡಿದಾಗ ಈ ಪಾದದ ಎರಡನೆಯ ಗಣವೂ ಲಕ್ಷಣವಿರುದ್ಧವಾಗಿ ಬ್ರಹ್ಮವಾಗುತ್ತದೆ.) ತ್ರಿಪದಿಗಳ ಪ್ರಥಮಪಾದದಲ್ಲಿ ಸರ್ವಸಾಧಾರಣವಾಗಿ ಕಾಣಿಸಿಕೊಳ್ಳುವ ಪಾದಮಧ್ಯಪ್ರಾಸವು ಸರ್ವಥಾ ಅನಿವಾರ್ಯವೆಂಬ ಅವರ ಭಾವನೆಯೇ ಅವರಿಂದ ಈ ರೀತಿ ಗಣವಿಭಾಗ ಮಾಡಿಸಿದುದಾಗಿದೆ. ಆದರೆ ಪ್ರಥಮ ಪಾದದ ಮಧ್ಯದಲ್ಲಿ ಪ್ರಾಸವಿಲ್ಲದಿರುವ ತ್ರಿಪದಿಗಳು ಎಷ್ಟೋ ಇವೆ. (ಇವುಗಳಲ್ಲೊಂದನ್ನು ಈ

ಹಿಂದೆಯೇ ನಿದರ್ಶಿಸಲಾಗಿದೆ – ವಜ್ರದ ಹರಳೆ ಬಾ....) ವಾಸ್ತವವಾಗಿ ಹೇಳುವುದಾದರೆ ಈ ಪಾದದ ಗಣಗಳೆಲ್ಲವೂ ಲಕ್ಷಣಸಮ್ಮತವಾಗಿಯೇ ಹೀಗೆ ಇವೆ:–

ವಿ । ವಿ । ವಿ । ವಿ ।
ಸಾಧುಗೆ । ಸಾಧು ಮಾ । ಧುರ್ಯಂಗೆ । ಮಾಧುರ್ಯಂ । –

ಆದರೂ ಇದರ ಮುಂದಿನ ಪದ್ಯದಲ್ಲಿ ತ್ರಿಪದಿಗಳ ಸಾಮಾನ್ಯಲಕ್ಷಣಕ್ಕೆ ವಿರುದ್ಧವಾದ ರುದ್ರಗಣವೊಂದು ಕಾಣಿಸಿಕೊಂಡಿದೆ. (ಹೀಗೆ ರುದ್ರಗಣ ಸೇರಿಕೊಂಡ ಉದಾಹರಣಗಳು ಎಷ್ಟೋ ಇವೆ. ಒಂದನ್ನು ಹಿಂದೆಯೇ ಉದಾಹರಿಸಲಾಗಿದೆ. – ಬಡತನವೆ..)

ವಿ । ವಿ । ವಿ । ವಿ ।
ಒಳ್ಳಿತ್ತ । ಕೆಯ್ವೊರಾ । ಪೊರ್ಲ್ಲದು । ಮದಬಿಂತೆ ।

ವಿ । ಬ್ರ । ರು । ವಿ ।
ಬಲ್ಲಿತ್ತು । ಕಲಿಗೆ । ವಿಪರೀತ ಪು । ರಾಕೃತ ।

ವಿ । ಬ್ರ । ವಿ
ಮಿಲ್ಲಿಸಂ । ಧಿಕ್ಕು । ಮದು ಬಂದು ॥ . ॥

ಈ ಪದ್ಯದ ಛಂದೋವಿಷಯದಲ್ಲಿಯೂ ವಿಮರ್ಶಕರಲ್ಲಿ ಕೆಲವರು ಗಣರೂಪದೋಷವನ್ನು ಕಾಣಿಸಿದ್ದಾರೆ. ಅವರ ಅಭಿಪ್ರಾಯದಂತೆ ಇದರ ಎರಡನೆಯಪಾದದ ಗಣವಿಭಾಗವು ಈ ಕೆಳಗಿನಂತೆ –

ಬಲ್ಲಿತ್ತು । ಕಲಿಗೆ । ವಿಪರೀತಾ । ಪುರಾಕೃತ ।

(ಪುರಾಕೃತ ಎಂಬ ಪದರೂಪವು ತ್ರಿಮೂರ್ತಿಗಣನಿಯಮಕ್ಕೆ ಬಾಹಿರ.) ತ್ರಿಪದಿಗಳಲ್ಲಿ ಸಾಮಾನ್ಯವಾಗಿ ಎರಡನೆಯ ಪಾದದ ಮೂರನೆಯ ಗಣಾಂತದಲ್ಲಿ ವಾಕ್ಯಯತಿಯಿರುತ್ತದೆ. ಅದು ಇಲ್ಲಿಯೂ ಇರತಕ್ಕದ್ದು ಎಂಬ ಭಾವನೆಯಿಂದ ಅವರು ಈ ರೀತಿ ಗಣವಿಭಾಗ ಮಾಡಿದ್ದಾಗಿರಲೂಬಹುದು. ತ್ರಿಪದಿಯ ದ್ವಿತೀಯಪಾದದ ಮೂರನೆಯ ಗಣದ ಕೊನೆಯಲ್ಲಿ ಪಠನವು ಒಮ್ಮೆ ನಿಂತು ಆ ಭಾಗವು ಪುನರಾವರ್ತಿತವಾಗುವುದು ಸಂಪ್ರದಾಯವೆಂದು ಶಾರ್ಙ್ಗದೇವನು ಹೇಳಿರುವನಾದರೂ ಆ ಸಂಪ್ರದಾಯವು ಸಾರ್ವತ್ರಿಕವೇನೂ ಅಲ್ಲ. ಉದಾ:– ದಕ್ಷಿಣ ಕ್ನಡನದ ಕನ್ನಡಿತಿಯರು ಹಾಡುವ ತ್ರಿಪದಿ ಛಂದಸ್ಸಿನ ತೊಟ್ಟಿಲ ಹಾಡುಗಳಲ್ಲಿ ಪುನರಾವರ್ತನಸಂಪ್ರದಾಯವಿಲ್ಲವೇ ಇಲ್ಲ. ಆದುದರಿಂದ ಈ ಶಾಸನಗತವಾದ ತ್ರಿಪದಿಯ ಕರ್ತನು ಪುನರಾವರ್ತನಸಂಪ್ರದಾಯವನ್ನು ಅನುಸರಿಸಿದವನಲ್ಲವೆಂದು ತಿಳಿಯಬೇಕಾಗಿದೆ. (ಶಾಸನದ ಪಾಠದಲ್ಲಿ 'ವಿಪರೀತಾ' ಎಂದಿದೆ. ಆದರೆ ಅಲ್ಲಿ ತಕಾರವು ದೀರ್ಘವಾಗಿದ್ದರೆ ಪದ್ಯಗತವಾದ ವಾಕ್ಯಕ್ಕೆ ಸಮಂಜಸವಾದ ಅನ್ವಯವಾಗಲಿ, ಅರ್ಥವಾಗಲಿ ಇಲ್ಲವಾಗುತ್ತದೆ. 'ಕಲಿಗೆ ವಿಪರೀತ ಪುರಾಕೃತ' ಎಂಬಿಷ್ಟೂ ಕೂಡಿ ಒಂದು ಸಮಾಸಪದವೆಂದು ಗ್ರಹಿಸಿಕೊಂಡರೆ ಮಾತ್ರ ಈ ಪದ್ಯಕ್ಕೆ ಸಮಂಜಸವಾದ ಅರ್ಥವು ಸ್ಫುರಿಸುತ್ತದೆ. 'ಕಲಿಗೆವಿಪರೀತಪುರಾಕೃತಂ ಅದು ಬಂದು ಇಲ್ಲಿ ಸಂಧಿಕ್ಕುಂ'. ಇದರ ಅರ್ಥ – ಕಲಿಗೆ ವಿಪರೀತನ ಪುರಾಕೃತ ಕರ್ಮದೋಷವು ಇಲ್ಲಿ ಬಂದು ಸಂಧಿಸಿತು – ಎಂದಾಗಿದೆ. ಆದುದರಿಂದ 'ವಿಪರೀತಾ' ಎಂಬುದು ಶಾಸನದಲ್ಲಾದ ಅಕ್ಷರಸ್ಖಾಲಿತ್ಯವೆಂದು ತಿಳಿಯಬೇಕು.)

ತ್ರಿಪದಿಯ ಪಠನದಲ್ಲಿ ದ್ವಿತೀಯಪಾದಾಂಶದ ಪುನರಾವರ್ತನಸಂಪ್ರದಾಯಕ್ಕೆ ಈ ಪದ್ಯಗಳ ಕರ್ತನು ಬದ್ಧನಾಗಿದ್ದಿಲ್ಲವೆಂಬುದನ್ನು ಪ್ರಸ್ತುತ ಶಾಸನದ ಮುಂದಿನ ಎಂದರೆ ಕೊನೆಯ ಪದ್ಯವೂ ಸಮರ್ಥಿಸುತ್ತದೆ-

ವಿ । ವಿ । ವಿ । ವಿ ।
ಕಟ್ಟಿದ । ಸಿಂಘಮನ್ । ಕೆಟ್ಟೊಡೇ । ನೆಮಗೆಂದು ।
ವಿ । ಬ್ರ । ವಿ । ವಿ ।
ಬಿಟ್ಟವೋಲ್ । ಕಲಿಗೆ । ವಿಪರೀತಂ । ಗಹಿತರ್ಕಳ್ ।
ವಿ । ಬ್ರ । ವಿ
ಕೆಟ್ಟಮೆರ್ಣ್ । ಸತ್ತ । ರವಿಚಾರಂ ॥ . ॥

ತ್ರಿಪದಿಗೆ ಛಂದಃಶಾಸ್ತ್ರಗ್ರಂಥಗಳಲ್ಲಿ ಪ್ರೋಕ್ತವಾದ ಲಕ್ಷಣಕ್ಕೆ ಈ ಪದ್ಯವು ಸಂಪೂರ್ಣ ಸಮ್ಮತವಾಗಿಯೇ ಇದೆಯಾದರೂ ಪುನರಾವರ್ತನ ಸಂಪ್ರದಾಯಕ್ಕನುಗುಣವಾಗಿ ಪಠಿಸಲು ಬೇಕಾಗಿರುವ ಸೌಕರ್ಯವು (ವಾಕ್ಯಯತಿ) ಇದರಲ್ಲೂ ಇಲ್ಲ. ವಾಸ್ತವಿಕವಾಗಿ ಹೇಳುವುದಾದರೆ ದ್ವಿತೀಯಪಾದದ ತೃತೀಯಗಣಾಂತದಲ್ಲಿ ವಾಕ್ಯಯತಿಯಿರಬೇಕೆಂಬ ಲಕ್ಷಣವನ್ನು ನಾಗವರ್ಮನಾಗಲಿ, ತ್ರಿಪದೀಬಂಧದ ಸೂಕ್ಷ್ಮವಿಚಾರ ಮಾಡಿದ ಜಯಕೀರ್ತಿಯಾಗಲಿ ಹೇಳಿರುವುದಿಲ್ಲ; ಶಾರ್ಙ್ಗದೇವನು ಕೂಡ ಈ ವಿಶೇಷಲಕ್ಷಣವಿಚಾರವನ್ನು ಎತ್ತಿಲ್ಲ. ಇದರಿಂದ ಪುನರಾವರ್ತನಸಂಪ್ರದಾಯವು ಎಂದೂ ಸಾರ್ವತ್ರಿಕವಾಗಿದ್ದಿರಲಿಲ್ಲವೆಂಬುದು ಸಿದ್ಧವಾಗುತ್ತದೆ. (೧೯೫೦ನೇ ಇಸವಿಯಲ್ಲಿ 'ಸಮರ್ಪಣೆ' ಎಂಬ ಲೇಖನಸಮುಚ್ಚಯದಲ್ಲಿ ಪ್ರಕಟವಾಗಿರುವ 'ತ್ರಿಪದಿಯ ಲಕ್ಷಣ' ಎಂಬ ನನ್ನದೊಂದು ನಿಬಂಧವು ಪ್ರಸ್ತುತ ನಿಬಂಧಕ್ಕೆ ಎರಡನೆಯ ಅನುಬಂಧವಾಗಿ ಸೇರಿಸಲ್ಪಟ್ಟಿರುತ್ತದೆ.)

ತ್ರಿಪದಿಯ ವಿಚಾರವನ್ನು ಉಪಸಂಹರಿಸುವ ಮೊದಲು ಇನ್ನೂ ಕೆಲವು ಮಾತುಗಳನ್ನು ಹೇಳುವುದು ಅವಶ್ಯವಾಗಿದೆ:-

ತ್ರಿಮೂರ್ತಿಗಣಬದ್ಧವಾದ ದೇಶೀಯ ಛಂದಸ್ಸನ್ನು ತ್ಯಜಿಸಿ, ದೇಶಿಯವೇ ಆದ ಮಾತ್ರಾಬಂಧಗಳನ್ನು ನಿರ್ಮಿಸಿ (ಉದಾ:- ವಾರ್ಧಕಾದಿ ಷಟ್ಪದಿಗಳು) ಕನ್ನಡ ಪದ್ಯರಚನೆಗೆ ಹೊಸ ರೂಪವನ್ನು ಕೊಟ್ಟವರು (ಹೆಚ್ಚಾಗಿ) ಶೈವಕವಿಗಳೆಂಬುದು ಐತಿಹಾಸಿಕ ಸತ್ಯ. ತ್ರಿಪದಿಯ ವಿಷಯದಲ್ಲೂ ಶೈವಕವಿಗಳು ಇಂತಹದೊಂದು ಬದಲಾವಣೆಯನ್ನು ಮಾಡಿ ಅದಕ್ಕೆ 'ತ್ರಿವಿಧಿ' ಎಂಬ ಹೆಸರನ್ನು ಕೊಟ್ಟರು. ಅವರು ನಿರ್ಮಿಸಿದ ತ್ರಿವಿಧಿ ಎಂಬ ಛಂದೋ ಬಂಧವು ತ್ರಿಪದಿಯ ಚೌಕಟ್ಟಿನಲ್ಲಿ ರಚಿತವಾದ ವಿಶುದ್ಧ ಮಾತ್ರಾಬಂಧವಾಗಿದೆ. ತ್ರಿಪದಿಯ ಹನ್ನೊಂದು ಗಣಗಳಲ್ಲಿ ಒಂಬತ್ತು ಗಣಗಳು ವಿಷ್ಣುಗಣಗಳಾಗಿರುವುದರಿಂದ, ಯಥಾಕ್ಷರವಾಗಿ ಐದುಮಾತ್ರೆಗಳುಳ್ಳ ಮಾಧವಂ, ಸ್ಮರಪಿತಂ, ಕಂಸಾರಿ, ನರಕಾರಿ – ಎಂಬೀ ನಾಲ್ಕು ಗಣಗಳೇ ಇರುವ ತ್ರಿಪದಿ ಅದೊಂದು ಮಾತ್ರಾಬಂಧವೆಂಬ ಭ್ರಾಂತಿಯನ್ನು ಹುಟ್ಟಿಸುವುದಕ್ಕೆ ಸಮರ್ಥ-ವಾಗಿರುತ್ತದೆ. ತಾವು ನಿರ್ಮಿಸಿದ ಮಾತ್ರಾಬಂಧವು ತ್ರಿಪದಿಯ ಆಕೃತಿಯದಾದರೂ ಅದು ತ್ರಿಪದಿಯಲ್ಲ – ಎಂಬುದನ್ನು ಸೂಚಿಸುವುದಕ್ಕಾಗಿ ಆ ಹೊಸ ಛಂದೋಬಂಧಕ್ಕೆ ಅದರ ನಿರ್ಮಾಪಕರು 'ತ್ರಿವಿಧಿ' ಎಂಬ ಹೆಸರನ್ನು ಕೊಟ್ಟದೆಂದು ಊಹಿಸುವುದು ಯುಕ್ತಿಯುಕ್ತ-ವಾಗಿದೆ. ಆದರೆ ತ್ರಿಪದಿ ತ್ರಿವಿಧಿಗಳೊಳಗೆ ಇರುವ ಭೇದವನ್ನು ಅರಿಯಲಾರದ ಲಿಪಿಕಾರರು ಎಷ್ಟೋ ವೇಳೆ ತ್ರಿವಿಧಿಯನ್ನು ತ್ರಿಪದಿಯೆಂದೂ ತ್ರಿಪದಿಯನ್ನು ತ್ರಿವಿಧಿಯೆಂದೂ ಬರೆದು ಬಿಟ್ಟಿದ್ದಾರೆಂಬುದು ಹಳೆಯ ಹಸ್ತಪ್ರತಿಗಳನ್ನು ಈ ದೃಷ್ಟಿಯಿಂದ ಪರೀಕ್ಷಿಸಿದವರಿಗೆ ಗೊತ್ತಾಗದಿರದು.

ಆದರೆ, ಕೆಲವು ಮಂದಿ ವಿದ್ವಾಂಸರು ತ್ರಿಪದಿ ತ್ರಿವಿಧಿಗಳು ಒಂದೇ ಛಂದೋಬಂಧದ ಹೆಸರುಗಳೆಂದೂ ತ್ರಿಪದಿ ಎಂಬ ಸಂಸ್ಕೃತ ಶಬ್ದವು ತದ್ಭವವಾಗಿ ತಿವದಿ ಎಂಬ ರೂಪವನ್ನು ಪಡೆದಿರುವುದರಿಂದ ಆ ತಿವದಿ ಎಂಬ ರೂಪವೇ 'ತ್ರಿವಿಧಿ'ಯೆಂಬ ರೂಪಾಂತರವನ್ನು ಪಡೆಯಿತೆಂದೂ ಹೇಳುತ್ತಿದ್ದಾರೆ. 'ತ್ರಿಪದಿ' ಎಂಬ ಸಂಸ್ಕೃತ ಪದವು 'ತಿವದಿ' ಎಂಬ ರೂಪವನ್ನು ಪಡೆಯುವುದು ಸಹಜವಾದರೂ ಆ ತದ್ಭವ ರೂಪವು ತ್ರಿಪದಿ ಎಂಬ ಪದಕ್ಕಿಂ-ತಲೂ ಕನ್ನಡ ಜನಕ್ಕೆ ಉಚ್ಚಾರದಲ್ಲಿ ಕ್ಲೇಶಾಧಿಕ್ಯವನ್ನು ಉಂಟುಮಾಡುವ 'ತ್ರಿವಿಧಿ' ಎಂಬ ರೂಪವನ್ನು ಪಡೆಯುವುದು ಸರ್ವಥಾ ಅಸಂಭವ. ಅನ್ಯಭಾಷಾಶಬ್ದಗಳು ಸ್ವಭಾಷಾಶಬ್ದಗಳ ಸ್ವರೂಪಕ್ಕೆ ಹೊಂದಿಕೊಳ್ಳಲಾರದ ಸಂದರ್ಭಗಳಲ್ಲಿ ತದ್ಭವಗಳ ಸೃಷ್ಟಿಯಾಗುವುದಾಗಿದೆ – ಹೊರತು (ಒಮ್ಮೊಮ್ಮೆ) ತದ್ಭವಗಳು ವಿಕೃತಿಯನ್ನು ಪಡೆದಾಗ ಅವುಗಳ ಮೂಲಕ್ಕಿಂತಲೂ ಕ್ಲಿಷ್ಟವಾದ ಸ್ವರೂಪವನ್ನು ಪಡೆಯಲಾರವು. ಆದುದರಿಂದ 'ತಿವದಿ' ತ್ರಿವಿಧಿಯಾಯಿತೆನ್ನುವುದು ಯುಕ್ತಿರಹಿತವಾಗಿದೆ. ಒಂದು ವೇಳೆ ಪಾಮರರು ಔಜ್ಜ್ವಲ್ಯಕ್ಕಾಗಿ ಅಂತಹದೊಂದು ರೂಪವನ್ನು ಸೃಷ್ಟಿಸಿದರೂ ಪ್ರಾಜ್ಞರು ಅದನ್ನು ಅನುಸರಿಸರು. ತ್ರಿವಿಧಿಯೆಂಬುದು ತಿವದಿಯ ವಿಕೃತಿ–ಯಾಗಿರುತ್ತಿದ್ದ ಪಕ್ಷದಲ್ಲಿ ನಿಜಗುಣಶಿವಯೋಗಿಯಂತಹ ವಿದ್ವತ್ಕವಿಗಳು ತಮ್ಮ ರಚನೆಗೆ ತ್ರಿವಿಧಿಯೆಂಬ ಆ ಹೆಸರನ್ನು ಸರ್ವಥಾ ಕೊಡುತ್ತಿರಲಿಲ್ಲ. [ಈ ಮೇಲೆ ಸೂಚಿಸಿದ ಎರಡನೆಯ ಅನುಬಂಧವಾಗಿರುವ 'ತ್ರಿಪದಿಯ ಲಕ್ಷಣ' ಎಂಬ ನನ್ನ ಲೇಖನದಲ್ಲಿ ತ್ರಿಪದಿ ಮತ್ತು ತ್ರಿವಿಧಿ ಇವುಗಳ ಭೇದವನ್ನು ನಿರೂಪಿಸದೆ ಒಟ್ಟಾಗಿ ವಿಚಾರ ಮಾಡಲಾಗಿದೆ. ಆ ಕಾಲದಲ್ಲಿ ಎಂದರೆ ೧೯೫೦ರಲ್ಲಿ – ಈ ಭೇದದ ಅಸ್ತಿತ್ವವಿಚಾರವು ನನಗೆ ಸ್ಪಷ್ಟವಾಗಿ ಹೊಳೆಯದಿದ್ದುದೇ ಇದಕ್ಕೆ ಕಾರಣ. ಕಾಲಾಂತರದಲ್ಲಿ ನಿಜಗುಣಶಿವಯೋಗಿಯ ರಚನೆಗಳನ್ನು ಸೂಕ್ಷ್ಮವಾಗಿ ಪರಾಮ-ರ್ಶಿಸಿದಾಗ ತ್ರಿಪದಿಯೂ ತ್ರಿವಿಧಿಯೂ ಮೂಲತಃ ಭಿನ್ನಲಕ್ಷಣದ ಛಂದೋರೂಪಗಳೆಂಬುದರ ಅರಿವು ನನ್ನಲ್ಲಿ ಸ್ಪಷ್ಟವಾಗಿ ಮೂಡಿತು. (ನಿಜಗುಣ ಶಿವಯೋಗಿಯ ತ್ರಿವಿಧಿಗಳಿಗಿಂತ ಮೊದಲೇ ರಚಿತವಾಗಿದ್ದ ತ್ರಿವಿಧಿಗಳ ಪರಿಚಯ ನನಗಾದುದು ಇತ್ತೀಚೆ. ಅವನೇ ತ್ರಿವಿಧಿಗೆ ಆದಿಪುರುಷನೆಂದೂ ಒಮ್ಮೆ ನಾನು ಭಾವಿಸಿದ್ದೆ. ಮತ್ತು ಇಂದಿಗೆ ಸುಮಾರು ಮೂರು ವರ್ಷಗಳ ಮೊದಲು – ಎಂದರೆ ೧೯೮೪ರಲ್ಲಿ ಪೂರ್ಣಗೊಂಡು ೧೯೮೫ರಲ್ಲಿ ಪ್ರಕಟವಾದ ಛಂದೋಗತಿ ಎಂಬ ನನ್ನ ಇನ್ನೊಂದು ನಿಬಂಧದಲ್ಲಿ ಹಾಗೆ ಸೂಚಿಸಿಯೂ ಇದ್ದೆ. ನನ್ನಿಂದ ಘಟಿಸಿ ಹೋದ ಈ ತಪ್ಪನ್ನು ವಾಚಕರು ತಿದ್ದಿಕೊಳ್ಳಬೇಕಾಗಿ ಪ್ರಾರ್ಥನೆ – ೧೯೮೭) {'ಛಂದೋಗತಿ' ನಿಬಂಧದ 97ನೆಯ ಟಿಪ್ಪಣಿಯಲ್ಲಿ ಈ ವಿಷಯವು ಆನುಷಂಗಿಕವಾಗಿ ಬಂದಿದೆ. ಛಂದೋಬಂಧಗಳು ಕಾಲಾಂತರದಲ್ಲಿ ಅವು ಹುಟ್ಟಿದ ಉದ್ದೇಶಗಳಿಗಿಂತ ಭಿನ್ನ ಸಂದರ್ಭಗಳಲ್ಲಿ ಉಪಯುಕ್ತವಾಗುವಾಗ ಅವುಗಳ ಛಂದೋರೂಪದಲ್ಲಿಯೂ ಅಷ್ಟಿಷ್ಟು ಬದ-ಲಾವಣೆಗಳುಂಟಾಗುತ್ತವೆಯೆಂಬುದನ್ನು ಸೂಚಿಸುವಾಗ ನಿಜಗುಣಶಿವಯೋಗಿಯು ತ್ರಿಪದಿ-ಯನ್ನು ತ್ರಿವಿಧಿಯಾಗಿ ಮಾರ್ಪಡಿಸಿದನೆಂಬ ಉಲ್ಲೇಖವಿದೆ. ಈ ಮಾಹಿತಿ ತಪ್ಪೆಂದು ತಿಳಿದಾಗ ಈ ತಿದ್ದುಪಡಿಯನ್ನು ಹೇಳಲಾಗಿದೆ. –ಸಂ.} ಹಾಗಾಗಿ, 'ತ್ರಿಪದಿಯ ಲಕ್ಷಣ' ಎಂಬ ಆ ಲೇಖನದ ಕೊನೆಯಲ್ಲಿ ತ್ರಿಪದಿ ತ್ರಿವಿಧಿಗಳು ಅಭಿನ್ನವೆಂದು ಭಾವಿಸಿ ಮಾಡಿದ ವಿಚಾರಗಳುಳ್ಳ ಭಾಗವನ್ನು ಕಳೆದುಹಾಕಿ ಪ್ರಸ್ತುತ ನಿಬಂಧದ ಎರಡನೆಯ ಅನುಬಂಧವಾಗಿ ಸೇರಿಸಲಾಗಿದೆ.]

ತ್ರಿಪದಿಗೂ ತ್ರಿವಿಧಿಗೂ ಇರುವ ಅಂತರವು ವಾಚಕರಿಗೆ ಸ್ಪಷ್ಟವಾಗಲಿ ಎಂಬ ಉದ್ದೇಶದಿಂದ, ಮಾತ್ರಾಬಂಧಗಳ ವಿಚಾರವು ಪ್ರಸ್ತುತ ವಿಷಯವಲ್ಲವಾದರೂ ಒಂದೆರಡು ತ್ರಿವಿಧಿಗಳನ್ನು ಉದಾಹರಿಸಿ, ಆ ಬಂಧದ ಛಂದೋಲಕ್ಷಣವನ್ನು ಇಲ್ಲಿ ಯತ್ಕಿಂಚಿತ್ ನಿರೂಪಿಸುತ್ತೇನೆ.

೫ ೫ ೫ ೫
ಆಱುಮುಖ । ಮುತ್ತನ್ನು । ನೀರಲ್ಲಿ । ಇರಿಸಲಿಕೆ । –೨೦
೫ ೩+೨ ೫ ೫
ನೀರಳಿದು । ಮುತ್ತು– । ಉಳಿಯಿತ್ತು । ಆ ಮುತ್ತ । –೨೦
೫ ೫ ೩+೨
ಸೇರಿಸಿದೆ । ಎನ್ನ ಉರ । ದಲ್ಲಿ । –೧೫
(ಅಕ್ಕಮಹಾದೇವಿ)

೫ ೫ ೫ * ೫
ಮೊರೆವ ನಾ । ದವ ಕೇಳಿ । ಉರಿವ ಜ್ಯೋ । ತಿಯ ನೋಡಿ । –೨೦
೫ ೩+೨ ೫ ೫
ಸುರಿವ ಅಮೃ । ತವನು– । ಸವಿದುಂಡ । ಕಾರಣದಿ । –೨೦
೫ ೫ ೩+೨
ತೊರೆದಿಹೆನು । ಜನನ ಮರ । ಣಗಳ । –೧೫
(ಅಕ್ಕಮಹಾದೇವಿ)

೫ ೫ ೫ ೫
ಬೇಱ್ ದೇ । ಶವು ಇಲ್ಲ । ಬೇಱ್ ಕಾ । ಲವು ಇಲ್ಲ । –೨೦
೫ ೩+೨ ೫ ೫
ಬೇಱಿಲ್ಲ । ವಸ್ತು – । ವೆನಲನಂ । ತತೆ ಯುಕ್ತಿ । –೨೦
೫ ೫ ೩+೨
ಬೇಱಿನಂ । ತತ್ವ ನಿಜ । ಕಿಲ್ಲ । –೧೫
(ಪರಂಜ್ಯೋತಿ ಯತಿ)

೫ ೫ ೫ ೫
ಮುದವಲರೆ । ಹೃದಯಾಂಬು । ಜದೊಳು ಶಿವ । ಭಕ್ತಿಯಿಂ । –೨೦
೫ ೩+೨ ೫ ೫
ಸದಮಲಾ । ನಂದ– । ಮಯರಾದ । ಶರಣಾಳಿ । –೨೦
೫ ೫ ೩+೨
ಪದವ ಮನ । ವೊಲಿದು ನುತಿ । ಸುವೆನು । –೧೫
(ನಿಜಗುಣ ಶಿವಯೋಗಿ)

೫ ೫ ೫ ೫
ಇಂಗಡಲೊ । ಳಿಂಪು ಬೆಳು । ದಿಂಗಳೊಳು । ತಂಪು ಕುಸು । –೨೦
೫ ೩+೨ ೫ ೫
ಮಂಗಳೊಳು । ಕಂಪು – । ಬೆರೆದಂತೆ । ಪರಮನೊಳು । –೨೦
೫ ೫ ೩+೨
ಪಿಂಗದಗ । ಸುತೆಗೆ ನತ । ನಪ್ಪೆ । –೧೫

(ನಿಜಗುಣ ಶಿವಯೋಗಿ)

ಈ ಮೇಲೆ ತೋರಿಸಿರುವಂತೆ ತ್ರಿವಿಧಿ ಎಂಬುದು ಐದು ಮಾತ್ರೆಗಳ ಆವರ್ತ (=ಗಣ)ದ ಬಂಧವಾಗಿರುತ್ತದೆ. ಇದರ ದ್ವಿತೀಯಪಾದದ ಎರಡನೆಯ ಗಣವು 'ಕುಬ್ಜಗಣ'- ವಾಗಿದ್ದು ಅಲ್ಲಿ ಎರಡು ಮಾತ್ರೆಗಳ ವಿರಾಮಾವಕಾಶವಿರುತ್ತದೆ. ಮತ್ತು ಪದ್ಯದ ಕೊನೆಯಲ್ಲಿ, ಎಂದರೆ ತೃತೀಯಪಾದಾಂತ್ಯದಲ್ಲಿಯೂ ಕುಬ್ಜಗಣವಿದ್ದು ಅಲ್ಲಿ ಎರಡು ಮಾತ್ರೆಗಳ ವಿರಾಮಾವಕಾಶವಿರುತ್ತದೆ. ಕರ್ಣಾಟಕವಿಷಯಜಾತಿಯ ಬಂಧಗಳಲ್ಲಿ ಹೇಗೋ ಹಾಗೆ ಈ ಮಾತ್ರಾಬಂಧದಲ್ಲಿಯೂ ಲಗಾದಿ ಗಣವು ನಿಷಿದ್ಧವಾಗಿದೆ. ದ್ವಿತೀಯಪಾದದ ಎರಡನೆಯ ಗಣದ ಕೊನೆಯಲ್ಲಿ ವಿರಾಮಾವಕಾಶವಿರುವುದರಿಂದ ಅಲ್ಲಿ ಯತಿಯಿರುವುದು ಅವಶ್ಯ, ಆದರೆ ಒಮ್ಮೊಮ್ಮೆ ಕವಿಗಳು ಅದನ್ನು ಉಲ್ಲಂಘಿಸಿದ ಉದಾಹರಣಗಳೂ ದೊರೆಯುತ್ತವೆ. ತ್ರಿವಿಧಿಯ ನಡೆಯೂ ವಾರ್ಧಕಷಟ್ಪದಿಯ ನಡೆಯೂ ಸಮಾನವಾಗಿದೆ. ಇವಿಷ್ಟು ತ್ರಿವಿಧಿಯ ಲಕ್ಷಣಗಳು.

ಹಿಂದೊಮ್ಮೆ ಸೂಚಿಸಿರುವಂತೆ, ಯಥಾಕ್ಷರವಾಗಿ ಐದು ಮಾತ್ರೆಗಳ ವಿಷ್ಣುಗಣಗಳು ತುಂಬಿರುವ ತ್ರಿಪದಿಯು ತಾನೊಂದು ಮಾತ್ರಾಬಂಧವೆಂಬ ಭ್ರಾಂತಿಯನ್ನು ಹುಟ್ಟಿಸಲು ಸಮರ್ಥವಾಗಿರುವಂತೆಯೇ – ಕುಬ್ಜಗಣಗಳ ಹೊರತು, ನಾಲ್ಕು ಅಕ್ಷರಗಳ ಪಂಚಮಾತ್ರಾ- ಗಣಗಳು ತುಂಬಿರುವ ತ್ರಿವಿಧಿಯನ್ನು ತ್ರಿಪದಿಯ ಧಾಟಿಯಲ್ಲಿ, ಎಂದರೆ ಆರು ಮಾತ್ರೆಗಳ (ಅಥವಾ ಏಳು ಮಾತ್ರೆಗಳ) ಧಾಟಿಯಲ್ಲಿ ಸುಲಲಿತವಾಗಿ ಪಠಿಸಬಹುದಾದುದರಿಂದ, ಅಂತಹ ತ್ರಿವಿಧಿ ತ್ರಿಪದಿಯೆಂದೇ ಭಾವಿಸಲ್ಪಡಬಹುದಾಗಿದೆ. ಕುಬ್ಜಗಣಗಳು ಸಹ ಲಗಾದಿಗಳಾಗಿ- ರುವುದಿಲ್ಲವಾದುದರಿಂದ ಅವು ಬ್ರಹ್ಮಗಣಗಳೆಂಬ ಭ್ರಾಂತಿಯನ್ನು ಹುಟ್ಟಿಸಬಲ್ಲವಾಗಿವೆ. ಈಯೆಲ್ಲ ಕಾರಣಗಳಿಂದ, ತ್ರಿವಿಧಿಯೂ ತ್ರಿಪದಿಯೂ ಅಭಿನ್ನವಾದ ಛಂದೋಬಂಧಗಳೆಂಬ ಭಾವನೆಯನ್ನು ಹುಟ್ಟಿಸುವ ಮೂಲಕ ತ್ರಿಪದಿಯೆಂಬುದು ಒಂದು ಮಾತ್ರಾಬಂಧವೆಂಬ ತಥ್ಯವಲ್ಲದ ಪ್ರತಿಪಾದನೆಗೆ ಅವಕಾಶ ಉಂಟಾದುದಾಗಿದೆ.

ಕೆಲವು ಮಂದಿ ವಿದ್ವಾಂಸರು ತ್ರಿಪದಿ ಎಂಬ ಛಂದೋಬಂಧದಲ್ಲಿ ಅಂಶಗಣಬದ್ಧ ತ್ರಿಪದಿ, ಮಾತ್ರಾಗಣಬದ್ಧ ತ್ರಿಪದಿ – ಎಂಬ ಎರಡು ಭೇದಗಳನ್ನು ಕಲ್ಪಿಸಿಕೊಂಡು ಅವುಗಳಿಗೆ ಅನುಕ್ರಮವಾಗಿ ಅಂಶತ್ರಿಪದಿ, ಮಾತ್ರಾತ್ರಿಪದಿ – ಎಂಬ ಹೆಸರುಗಳನ್ನು ಕೊಡುತ್ತಿದ್ದಾರೆ. ಇನ್ನು ಕೆಲವರು – ವಸ್ತುತಃ ಅಪಪಾಠಾದಿ ದೋಷಗಳಿಂದಾಗಿ ಶುದ್ಧ ತ್ರಿಮೂರ್ತಿಬಂಧವೆಂದಾಗಲಿ ವಿಶುದ್ಧವಾದ ಮಾತ್ರಾಬಂಧವೆಂದಾಗಲಿ ಹೇಳುವುದಕ್ಕೆ ಎಡೆಯಿಲ್ಲದುದಾಗಿ ಪರಿಣಮಿಸಿರುವ ತ್ರಿಪದಿಯಲ್ಲಿ – ಕೆಲವು ಭಾಗಗಳು ಅಂಶಗಣಬದ್ಧವೆಂಬ, ಉಳಿದ ಭಾಗಗಳು ಮಾತ್ರಾಬದ್ಧ- ವೆಂಬ ವಿಚಿತ್ರವಾದೊಂದು ಪ್ರತಿಪಾದನೆಯನ್ನು ಮಾಡುತ್ತಿದ್ದಾರೆ! ಇವರ ಮಾರ್ಗವನ್ನು ಅನುಸರಿಸಿ ಛಂದೋಲಕ್ಷಣಗಳನ್ನು ಹೇಳುತ್ತಾ ಹೋದರೆ ಯಾವುದೊಂದು ಪದ್ಯಸ್ವರೂಪವು ಹೇಗಿದ್ದರೂ ಛಂದೋಭಂಗವೆಂಬುದೇ ಇಲ್ಲವೆಂದು ಸಾಧಿಸಬಹುದಾಗಿದೆ. ವಾಸ್ತವಿಕವಾಗಿ ಹೇಳುವುದಾದರೆ ತ್ರಿವಿಧಿಯನ್ನು ಮಾತ್ರಾತ್ರಿಪದಿಯೆಂದು ಕರೆಯುವುದರಲ್ಲಿ ದೋಷವೇನೂ ಕಾಣಲಾರದಾದರೂ ತ್ರಿವಿಧಿಯನ್ನು ಅಷ್ಟಿಷ್ಟು ಹೋಲುವ ಸರ್ವಜ್ಞನ ಕೆಲವು ತ್ರಿಪದಿಗಳನ್ನು ಮಾತ್ರಾತ್ರಿಪದಿಗಳೆಂದು ಕರೆಯುವುದು ಅನುಚಿತವಾಗುತ್ತದೆ. ಏಕೆಂದರೆ, ತ್ರಿಪದಿ ಎಂಬುದು ಕರ್ಷಣಯುಕ್ತವಾದ ತ್ರಿಮೂರ್ತಿಗಣಬಂಧ. ತ್ರಿವಿಧಿ ಎಂಬುದು (ವಿರಾಮಾವಕಾಶಗಳ ಹೊರತು ಬೇರೆಲ್ಲಿಯೂ) ಕರ್ಷಣವಿರದ ಮಾತ್ರಾಗಣಬಂಧ. ಮಾತ್ರಾತ್ರಿಪದಿಯೆಂಬ ಪದವನ್ನು ರೂಢಿಗೆ ತಂದರೆ ಮಾತ್ರಾಗಣಬದ್ಧವೋ ಎಂಬ ಭ್ರಾಂತಿಯನ್ನು ಹುಟ್ಟಿಸಬಲ್ಲ ತ್ರಿಪದಿಗಳಿಗೂ ಅಂತಹ ಭ್ರಾಂತಿಯನ್ನು ಹುಟ್ಟಿಸಲಾರದ ತ್ರಿಪದಿಗಳಿಗೂ, ವಸ್ತುತಃ ಇಲ್ಲದಿರುವೊಂದು ಭೇದವನ್ನು ಕಲ್ಪಿಸಿದಂತಾಗಿ ಗೊಂದಲವುಂಟಾಗದಿರಲಾರದು. ಆದುದರಿಂದ ತ್ರಿಪದಿ ತ್ರಿವಿಧಿಗಳೆಂಬ ಎರಡು ಬೇರೆ ಬೇರೆ ಸಂಜ್ಞೆಗಳು ಅವಶ್ಯವೇ ಸರಿ.

ಆದಿಯಲ್ಲಿ ತ್ರಿಮೂರ್ತಿಬಂಧವಾಗಿದ್ದ ತ್ರಿಪದಿ ಬರಬರುತ್ತಾ ಮಾತ್ರಾಬಂಧವಾಗಿ ಪರಿಣಮಿಸಿತು – ಎಂಬ ಅಭಿಪ್ರಾಯವೊಂದಿದೆ. ಆದರೆ ತ್ರಿವಿಧಿ ಎಂಬ ಮಾತ್ರಾಬಂಧವು ಬಸವಾದಿಗಳ ಕಾಲದಲ್ಲಿಯೇ ಹುಟ್ಟಿತೆಂಬುದನ್ನೂ ಆ ಕಾಲದ ತ್ರಿಪದಿಗಳು ವಿಶುದ್ಧ ತ್ರಿಮೂರ್ತಿಗಣ ಬಂಧಗಳಾಗಿಯೇ ಇದ್ದವೆಂಬುದನ್ನೂ ಮುಂದೆಯೂ ತ್ರಿಪದಿ ತ್ರಿಪದಿಯಾ-ಗಿಯೇ ಉಳಿಯಿತೆಂಬುದನ್ನೂ ಆಯಾ ಕಾಲದ ಗ್ರಂಥಗಳು ತಿಳಿಸಬಲ್ಲವಾಗಿವೆ. ಆದುದರಿಂದ ತ್ರಿಪದಿ ಬರಬರುತ್ತಾ ಮಾತ್ರಾಬಂಧವಾಯಿತೆಂದು ಹೇಳುವ ಮಾತಿನಲ್ಲಿ ಹುರುಳಿಲ್ಲವೆನ್ನ-ಬೇಕಾಗುತ್ತದೆ. ತ್ರಿಪದಿಯೆಂಬುದು ಒಂದು ಗೀತಚ್ಛಂದ: ಎಂದರೆ ಅವಶ್ಯಕತಾನುಸಾರವಾಗಿ ಕರ್ಷಿಸಬೇಕಾದ ಒಂದು ಹಾಡು, ತ್ರಿವಿಧಿಯಾದರೋ ಯಥಾಕ್ಷರಗುರುಲಘುವಾಗಿ ಪಠಿಸ-ಬೇಕಾದ ಸುಸಂಘಟಿತ ಮಾತ್ರಾಬಂಧ. ತ್ರಿವಿಧಿಯ ಉದ್ಗಮವನ್ನು ಮತ್ತು ಅದರ ಬೆಳವ-ಣಿಗೆಯನ್ನು ಪರಾಮರ್ಶಿಸಿದರೆ ತತ್ತ್ವಪ್ರತಿಪಾದನೆಗಾಗಿಯೇ ಅದು ಹುಟ್ಟಿ ಬೆಳೆಯಿತೆಂಬುದು ವೇದ್ಯವಾಗದಿರದು. ನಿಶ್ಚಿತವಾದ ಅರ್ಥವನ್ನು ಕೊಡಬೇಕಾದ ಪ್ರತಿಪಾದನೆಗೆ ಗೀತಚ್ಛಂದವು ಅನುಪಯುಕ್ತವೆಂಬುದರಲ್ಲಿ ಸಂದೇಹವಿರಲಾರದು. ಗೀತಚ್ಛಂದವು ಜನರ ಬಾಯಲ್ಲಿ ಬಹು ಬೇಗ ಅಪಪಾಠಗಳನ್ನು ಹುಟ್ಟಿಸಬಲ್ಲಂತಹದಾಗಿದೆ. ಆದುದರಿಂದ ತತ್ತ್ವಪ್ರತಿಪಾದನೆಗೆ ಎಂದರೆ ಅರ್ಥಪ್ರಧಾನವಾದ ನಿರೂಪಣೆಗೆ ಯಥಾಕ್ಷರಗುರುಲಘುವಾಗಿ ಪಠಿಸತಕ್ಕ ಬಂಧದ ಅವಶ್ಯ-ಕತೆಯಿದೆಯೆಂಬುದನ್ನು ಕಂಡುಕೊಂಡ ವೀರಶೈವ ಕವಿಗಳು ತ್ರಿವಿಧಿಯನ್ನು ಸೃಷ್ಟಿಸಿಕೊಂಡರು – ಎಂದು ಊಹಿಸುವುದು ಸಾಧುವಾಗಿದೆ ಎಂದು ನನ್ನ ಅಲ್ಪಮತಿಗೆ ತೋರುತ್ತದೆ. ತ್ರಿವಿಧಿಗಳಲ್ಲಿ ಪ್ರತಿಪಾದಿತವಾದ ವಿಷಯಗಳನ್ನು ಪರಾಮರ್ಶಿಸಿದರೆ ಈ ನನ್ನ ಊಹೆ ಸಮಂಜಸವೆಂದು ತೋರದಿರಲಾರದೆಂದು ನಂಬುತ್ತೇನೆ.

[{ಏಳೆಯ ವಿಚಾರ} ತ್ರಿಪದಿಯ ಅನಂತರ ನಾಗವರ್ಮನು ಏಳೆಯ ಲಕ್ಷಣವನ್ನು ನಿರೂಪಿಸಿದ್ದಾನೆ. ಆದರೆ ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ ಈ ನಿಬಂಧದ ಮೂಲವನ್ನು ನಾನು ಬರೆದಾಗ, ನನಗೆ ಲಬ್ಧವಾಗಿದ್ದ ಯಾವ ಪಾಠದಿಂದಲೂ ಏಳೆಯ ಸಹಜವಾದ ಲಕ್ಷಣವನ್ನು ಊಹಿಸುವುದು ನನ್ನಿಂದ ಸಾಧ್ಯವಾಗಲಿಲ್ಲ. ಮತ್ತೆ ಜಯಕೀರ್ತಿಯ ಗ್ರಂಥವನ್ನು ನೋಡಿದಾಗ ಏಳೆಯ ಲಕ್ಷಣವು ಸುಲಲಿತವಾಗಿ ಅವಗತವಾಗುವಂತಾಯಿತು. (ಜಯಕೀರ್ತಿಯು ವಿವರಿಸಿದ ಲಕ್ಷಣವನ್ನನುಸರಿಸಿ, ಛಂದೋಂಬುಧಿಯ ಮುದ್ರಿತಪ್ರತಿ-ಗಳಲ್ಲಿರುವ ಅಶುದ್ಧಪಾಠವನ್ನು ಇತ್ತೀಚೆಗೆ ಹಲವು ವಿದ್ವಾಂಸರು ತಿದ್ದಿ ಶುದ್ಧಪಾಠವೊಂದನ್ನು ನಿರ್ಮಿಸಿಕೊಂಡಿರುತ್ತಾರೆ. ಉದಾ:– ನನ್ನ ವಿದ್ವದ್ಬಂಧುಗಳಾದ ಶ್ರೀ ಕುಕ್ಕಿಲ ಕೃಷ್ಣ ಭಟ್ಟರಿಂದ ಸಂಪಾದಿಸಲ್ಪಟ್ಟ ಡಿ.ವಿ.ಕೆ. ಮೂರ್ತಿಯವರಿಂದ ಪ್ರಕಾಶಿತವಾದ ಛಂದೋಂಬುಧಿ.)

ಜಯಕೀರ್ತಿ ಏಳೆಯ ಲಕ್ಷಣವನ್ನು ಲಕ್ಷ್ಯಲಕ್ಷಣಸಮನ್ವಯ ರೂಪದಲ್ಲಿ ಸ್ಪಷ್ಟವಾಗಿ ಹೀಗೆ ನಿರೂಪಿಸಿದ್ದಾನೆ–

ತ್ರಿಪದೀ ತೃತೀಯಾಂಘ್ರಾವಪಮುಂಚತ್ಯೇಲೇತಿ
ಸುಪಠಿತಾ ಗೇಯವಿದಜನ್ಯೈಃ ॥

– ಇದರ ತಾತ್ಪರ್ಯ – ತ್ರಿಪದಿಯ ಮೂರನೆಯ ಪಾದವನ್ನು ಕಳೆದು ಹಾಕಿದರೆ ಉಳಿಯುವ ಪದ್ಯಸ್ವರೂಪವು ಏಳೆ ಎನಿಸಿಕೊಳ್ಳುತ್ತದೆ. (ಜಯಕೀರ್ತಿ ತ್ರಿಪದಿಗೆ ನಾಲ್ಕು ಪಾದಗಳೆಂಬ ಪಕ್ಷದ ಅನುಯಾಯಿಯಾದುದರಿಂದ ಅವನು ಈ ರೀತಿ ಹೇಳಿರುವುದಾಗಿದೆ. ನಾವು ತ್ರಿಪದಿಗೆ ಮೂರೇ ಪಾದಗಳೆಂದು ತಿಳಿದುಕೊಂಡಾಗ "ತ್ರಿಪದಿಯ ಎರಡನೆಯ ಪಾದವನ್ನು ಕಳೆದು ಹಾಕಿದರೆ ಉಳಿಯುವ ಪದ್ಯಸ್ವರೂಪವು ಏಳೆ ಎನಿಸಿಕೊಳ್ಳುತ್ತದೆ" – ಎನ್ನಬೇಕಾಗುತ್ತದೆ.)

ಏಳೆಯ ಲಕ್ಷಣವನ್ನು ಹೇಳುವಾಗ ಜಯಕೀರ್ತಿ "ಇತಿ ಸುಪಠಿತಾ ಗೇಯ ವಿದಜನ್ಯೈಃ" - ಎನ್ನುತ್ತಾನೆ. ಅವನ ಈ ಮಾತನ್ನು ಪರಾಮರ್ಶಿಸಿದರೆ ಏಳೆಯೆಂಬ ಈ ಛಂದೋಬಂಧವು ಅಂದಿನ ಗಾಯಕರಿಗೆ ಪ್ರಿಯತರವಾಗಿತ್ತೆಂದು ತಿಳಿಯುತ್ತದೆ. ತ್ರಿಪದಿ-ಯೊಂದನ್ನು ಬಿಟ್ಟರೆ ಉಳಿದ ತ್ರಿಮೂರ್ತಿಬಂಧಗಳಾವುವೂ ನಡುಗನ್ನಡ ಕಾಲದಲ್ಲಿ ಉಳಿ-ದಂತಿಲ್ಲ. ಗಾಯಕರಿಗೆ ಪ್ರಿಯವೆನಿಸಿದ್ದ ಏಳೆಯೂ ಉಳಿಯಲಿಲ್ಲ. ಆದರೆ ಏಳೆಗಳೆರಡರ ಜೋಡಿಯಿಂದ ಸಾಂಗತ್ಯವು ಆವಿರ್ಭವಿಸಿ ಜನಪ್ರಿಯವಾಗಿ ಪರಿಣಮಿಸಿತು; ಮತ್ತು ಆ ಬಂಧವು 'ಚರಿತೆ' 'ಸಂಗತಿ' ಎಂಬ ನಾಮಾಂತರಗಳನ್ನು ಪಡೆದು ಅನೇಕಾನೇಕ ಚಿಕ್ಕ ದೊಡ್ಡ ಗ್ರಂಥಗಳು ಅದರಲ್ಲಿ ನಿರ್ಮಿತವಾದುವು; 'ಭರತೇಶವೈಭವ'ದಂತಹ ಮಹಾಗ್ರಂಥಗಳೂ ಆ ಬಂಧದಲ್ಲಿ ಹುಟ್ಟಿದುವು. ಸಾಂಗತ್ಯಬಂಧವನ್ನು ಹೆಣ್ಣುಮಕ್ಕಳು ವಿಶೇಷವಾಗಿ ಮೆಚ್ಚಿಕೊಂಡು ಹಾಡುತ್ತಿದ್ದರೆಂಬುದಕ್ಕೆ ಸಂಚಿಯ ಹೊನ್ನಮ್ಮನ 'ಹದಿಬದೆಯ ಧರ್ಮ'ವು ಆ ಬಂಧದಲ್ಲಿ ರಚಿತವಾದುದು ಒಂದು ಪ್ರಬಲವಾದ ಸಾಕ್ಷಿಯಾಗಿದೆ. ಏಳೆಯು ಸಾಂಗತ್ಯವಾಗಿ ಪರಿಣಮಿಸಿ-ದುದರ ಕೂಲಂಕಷವಾದ ವಿವರಣೆಯು 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ನನ್ನ ಇನ್ನೊಂದು ನಿಬಂಧದಲ್ಲಿ ಮಾಡಲ್ಪಟ್ಟಿದ್ದು ಅದು ಪ್ರಸ್ತುತ ನಿಬಂಧದ ಮೂರನೆಯ ಅನುಬಂಧವಾಗಿ ಇದಕ್ಕೆ ಸೇರಿರುತ್ತದೆ.

{ಏಳೆ ಮತ್ತು ಓವಿ} ಕೆಲವರು ಮಹನೀಯರು ಕನ್ನಡದ ಏಳೆಗೂ ಮರಾಠಿಯ ಓವಿಗೂ ಸಂಬಂಧವನ್ನು ಕಲ್ಪಿಸುತ್ತಾರೆ. ಈಯೆರಡು ಬಗೆಯ ಛಂದೋಬಂಧಗಳೂ ಆಕೃತಿಯಲ್ಲಿ ಕಿರಿಯವು; ಮತ್ತು ಇವುಗಳ ಕೊನೆಯ ಪಾದವು ಉಳಿದ ಪಾದಗಳಿಗಿಂತ ಕಿರಿಯದು ಎಂಬಿಷ್ಟು ಮಾತ್ರ ಇವುಗಳೆರಡರೊಳಗಿರುವ ಹೋಲಿಕೆಯಾಗಿದೆ. ಇಷ್ಟರಿಂದ ಇವುಗಳಿಗೆ ಜನ್ಯಜನಕಭಾವವನ್ನು ಕಲ್ಪಿಸುವುದು ಸಾಧ್ಯವೆಂದಾಗಲಾರದು. ಕನ್ನಡದ ಏಳೆ ಎಂಬುದು ತ್ರಿಮೂರ್ತಿಗಣಬದ್ಧವಾದ ಒಂದು ಛಂದೋಬಂಧ. (ಸಂಸ್ಕೃತದ ಸಂಗೀತ ಶಾಸ್ತ್ರಗ್ರಂಥಗಳಲ್ಲಿ 'ಏಲಾ' ಎಂಬ ಹೆಸರಿನ ಬೇರೆ ಬೇರೆ ಬಂಧಗಳು ಪ್ರೋಕ್ತವಾಗಿವೆ. ಅವುಗಳೊಳಗೆ ಒಂದಕ್ಕೆ 'ಛಂದಸ್ವತೀ' ಎಂಬ ಹೆಸರು ಕೊಡಲಾಗಿದೆ. ಛಂದಸ್ವತಿಯೆಂಬುದು ತ್ರಿಮೂರ್ತಿಗಣಬದ್ಧವಾದ ಕನ್ನಡದ ಏಳೆಯೇ ಆಗಿದೆ. ಮಿಕ್ಕ ಏಲಾಬಂಧಗಳಿಗೂ ಕನ್ನಡದ ಏಳೆಗೂ ಸಂಬಂಧವಿರು-ವಂತೆ ತೋರುವುದಿಲ್ಲ.) ಓವಿಯಾದರೋ ಯಾವ ಗಣನಿಯಮವೂ ಇಲ್ಲದ ಹಾಗೂ ಹಾಡಿಗೆ ಬೇಕಾದಂತೆ ಅಕ್ಷರಗಳು ಕರ್ಷಿಸಲ್ಪಡುವ ಮತ್ತು ಎಷ್ಟೋ ವೇಳೆ ಅಕ್ಷರಸಂಖ್ಯಾನಿಯಮವೂ ಇಲ್ಲದ ಮೂರೂವರೆ ಪಾದಗಳ ಒಂದು ಶಿಥಿಲಬಂಧವಾಗಿದೆ. ತ್ರಿಪದಿಗೆ ನಾಲ್ಕು ಪಾದಗಳೆಂಬ ಪಕ್ಷವನ್ನವಲಂಬಿಸಿ ಏಳೆಯ ಪಾದಗಳನ್ನು ಲೆಕ್ಕಿಸಿದರೂ ಅದರಲ್ಲಿರುವುದು ಮೂರೇ ಪಾದಗ-ಳೆಂದಾಗುತ್ತದೆ. ಮತ್ತು ಆ ಮೂರನೆಯ ಪಾದದಲ್ಲಿ ಗಣಸಂಖ್ಯೆಯೂ ಒಂದು ಅಧಿಕವಾಗಿದ್ದು ಅದು ಉಳಿದವುಗಳಿಗಿಂತ ದೀರ್ಘತರವಾಗಿದೆ. ಹೀಗಿರುವಾಗ ಈಯೆರಡು ಬಂಧಗಳೊಳಗೆ ಜನ್ಯಜನಕಸಂಬಂಧವು ಆ ಮಹನೀಯರ ಕಲ್ಪನೆಗೆ ಹೊಳೆದುದು ಆಶ್ಚರ್ಯಕರ.

ಓವಿಯ ಯತ್ಕಿಂಚಿತ್ ಪರಿಚಯಕ್ಕಾಗಿ, ಅತಿಪುರಾತನ ರಚನೆಯೆಂದು ಮರಾಠಿ ವಿದ್ವಾಂಸರು ಹೇಳುತ್ತಿರುವ ಒಂದು ಓವೀ ಬಂಧವನ್ನು ಇಲ್ಲಿ ಉದಾಹರಿಸುತ್ತೇನೆ-

ಪಹಲೀ ಮಾಝೀ ಓವೀ ।<br>
ಪಹಿಲಾ ಮಾಝಾ ನೇಮ ।<br>
ತುಳಶೀ ಖಾಲಿ ರಾಮ ।<br>
ಬಸತಸೇ ॥ (ಓವೀ) ॥

ಓವಿಯನ್ನು ಹಾಡುವ ವಿಧಾನವು ಶಾರ್ಙ್ಗದೇವನ ಸಂಗೀತರತ್ನಾಕರದಲ್ಲಿ ಹೇಳಲ್ಪಟ್ಟಿದೆ :

ಖಂಡತ್ರಯಂ ಪ್ರಾಸಯುತಂ ಗೀಯತೇ ದೇಶಭಾಷಯಾ ।
ಓವೀಪದಂ ತದಂತ್ಯೇಚೇತ್ ಓವೀ ತಜ್ಞೈಸ್ತದೋದಿತಾ ॥

ಇದರ ತಾತ್ಪರ್ಯ – ಅಂತ್ಯಪ್ರಾಸಯುಕ್ತವಾದ ಮೂರು ಪಾದಗಳನ್ನು ಹಾಡಿ ನಾಲ್ಕನೆಯ ಪಾದದ ಕೊನೆಯಲ್ಲಿ 'ಓವೀ' ಎಂದು ಹಾಡಿ ಮುಗಿಸಿದರೆ ಅದು 'ಓವೀ' ಎಂದು ಕರೆಯಲ್ಪಡುತ್ತದೆ. (ಈ ಓವಿಯೆಂಬುದು ಆರಂಭದಲ್ಲಿ ಕೇವಲ ಹೆಣ್ಣುಮಕ್ಕಳ ಹಾಡಾಗಿತ್ತು. ತಮ್ಮ ಶಿಶುಗಳನ್ನು ಸಮಾಧಾನಪಡಿಸುವುದಕ್ಕಾಗಿ ಇದನ್ನು ಹಾಡುತ್ತಿದ್ದುದರಿಂದ ಇದರ ಕೊನೆಯಲ್ಲಿ ಓವೀ ಎಂಬ ಕರ್ಣಮಧುರವಾದ ಅರ್ಥಶೂನ್ಯ ಪದವನ್ನು ಸೇರಿಸುತ್ತಿದ್ದರು. ಮತ್ತು ಇದರಿಂದಾಗಿ ಈ ಗೀತಬಂಧಕ್ಕೆ 'ಓವೀ' ಎಂಬ ಹೆಸರೂ ನೆಲೆಗೊಂಡಿತು. ಆದರೆ ಮುಂದೆ ಸಾಧುಸಂತರಿಂದ ಓವೀಬಂಧಗಳು ವಿಪುಲವಾಗಿ ರಚಿತವಾಗತೊಡಗಿದಾಗ ಇದು ಸ್ತ್ರೀಗೀತವಾಗಿ ಉಳಿಯಲಿಲ್ಲ. ಈ ಕಾರಣದಿಂದ ಗೀತದ ಕೊನೆಯಲ್ಲಿ 'ಓವೀ' ಎಂದು ಹೇಳುವ ಸಂಪ್ರದಾಯವೂ ಉಳಿಯಲಿಲ್ಲ. ಆದರೂ ನಾಲ್ಕನೆಯ ಪಾದವು ಕುಬ್ಜತರವಾಗಿಯೇ ಉಳಿಯಿತು. ಈ ಬಂಧದ ಇನ್ನೊಂದು ವಿಶೇಷಲಕ್ಷಣವೇನೆಂದರೆ ಇದರ ಮೊದಲ ಮೂರು ಪಾದಗಳ ಕೊನೆಯಲ್ಲಿ ಸಾಮಾನ್ಯವಾಗಿ ಪ್ರಾಸವಿರುತ್ತದೆ. ಆದರೆ ನಾಲ್ಕನೆಯದಾದ ಕುಬ್ಜಪಾದದ ಕೊನೆಯಲ್ಲಿ ಆ ಪ್ರಾಸವಿರುವುದೇ ಇಲ್ಲ. ಇದಕ್ಕೆ ಈ ಲಕ್ಷಣವಿಶೇಷವು ಬರಲು ಆದಿಯಲ್ಲಿ ಅಲ್ಲಿ ಓವೀ ಎಂಬ ಅರ್ಥರಹಿತ ಪದವನ್ನು ತಪ್ಪದೆ ಹಾಡುತ್ತಿದ್ದುದೇ ಕಾರಣವಾಗಿರುತ್ತದೆ. ಹೀಗೆ ಈ ಬಂಧದ ಕೊನೆಯಲ್ಲಿ ತಪ್ಪದೆ ಇರುತ್ತಿದ್ದ ಓವೀ ಪದವು ಕಣ್ಮರೆಯಾದರೂ ಆ ಪದವು ಈ ಬಂಧದ ನಾಮಧೇಯವಾಗಿಯೇ ಉಳಿಯಿತು. ಏಳೆಯಲ್ಲಾದರೆ ಇಲ್ಲಿ ಹೇಳಿದ ಯಾವ ಲಕ್ಷಣವೂ ಇರುವುದಿಲ್ಲ. ಇಷ್ಟು ಮಾತ್ರವಲ್ಲದೆ ಪ್ರಾಸಸ್ಥಾನವಿಷಯದಲ್ಲಿಯೂ ಅವೆರಡೂ ಪರಸ್ಪರ ಸಂಪೂರ್ಣ ಭಿನ್ನವಾಗಿವೆ. ಆದುದರಿಂದ ಏಳೆಯೂ ಓವಿಯೂ ಅನ್ಯೋನ್ಯ ಸಂಬಂಧವೇನೂ ಇಲ್ಲದ ಸ್ವತಂತ್ರ ಬಂಧಗಳಾಗಿವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.)

**{ಏಳೆ ಮತ್ತು ಕುರಳ್}** ಇನ್ನು ಕೆಲವರು ತಮಿಳಿನ 'ಕುರುಳ್' ಬಂಧಕ್ಕೂ ಏಳೆಗೂ ಸಂಬಂಧವನ್ನು ಕಲ್ಪಿಸುತ್ತಿದ್ದಾರೆ. ಆದರೆ ಕುರುಳ್ ಮತ್ತು ಏಳೆ ಎಂಬೀ ಎರಡು ಛಂದೋಬಂಧಗಳೊಳಗಿರುವ ಸಾಮ್ಯವೆಂದರೆ ಅವುಗಳ ಗಣಸಂಖ್ಯೆ ಮಾತ್ರವಾಗಿದೆ. ಕುರಳ್ ಬಂಧದ ಗಣಸ್ವಭಾವವಾಗಲಿ ಧಾಟಿಯಾಗಲಿ ಏಳೆಯ ಗಣಸ್ವಭಾವ ಹಾಗೂ ಧಾಟಿಗಿಂತ ಸಂಪೂರ್ಣ ಭಿನ್ನ. ಈ ಭೇದದ ಪರಿಚಯಕ್ಕಾಗಿ ಒಂದು ಕುರಳ್ ಬಂಧವನ್ನು ಇಲ್ಲಿ ಉದಾಹರಿಸೋಣ:–

ಅಗರ । ಮುದಲ । ಎಟುತ್ತೆಲ್ಲಾಂ । ಆದಿ ।
ಭಗವನ್ । ಮುದಱ್ಱೇ । ಉಲಗು ॥

(ತಿರುಕ್ಕುರಳ್)

ಯಥಾಕ್ಷರಗುರುಲಘುವಾಗಿ ಓದಲು ಸಾಧ್ಯವಿಲ್ಲದಿರುವ ತಮಿಳಿನ ಪುರಾತನ ಛಂದೋಗಣಗಳ ವಾಚನರೂಪವನ್ನು ತಿಳಿಸುವುದಕ್ಕಾಗಿ ಯಾಪ್ಪರುಂಗಲ್ ಮೊದಲಾದ ಪ್ರಾಚೀನ ತಮಿಳು ಛಂದೋಗ್ರಂಥಗಳಲ್ಲಿ 'ವಾಯ್ಪಾಟ್' ಎಂಬ ಹೆಸರಿನ ಗಣವಾಚಕಗಳು ಪ್ರೋಕ್ತವಾಗಿರುತ್ತವೆ. ಈ ಮೇಲೆ ಉದಾಹರಿಸಿದ ಕುರಳ್ ಪದ್ಯವನ್ನು ಗಣವಾಚಕ ರೂಪದಲ್ಲಿ ಬರೆದರೆ ಅದು ಹೀಗಾಗುತ್ತದೆ.

ಪುಳಿಮಾ । ಪುಳಿಮಾ । ಪುಳಿಮಾಂಗಾಯ್ । ತೇಮಾ ।
ಪುಳಿಮಾ । ಪುಳಿಮಾ । ಪುಳಿಮಾ ॥

ಇಲ್ಲಿ ಬಂದಿರುವ 'ಪುಳಿಮಾಂಗಾಯ್' ಎಂಬ ಒಂದು ಗಣದ ಹೊರತು ಉಳಿದೆಲ್ಲವೂ ನಾಲ್ಕು ಮಾತ್ರೆಯವು; 'ಪುಳಿಮಾಂಗಾಯ್' ಎಂಬುದೊಂದು ಮಾತ್ರ ಆರು ಮಾತ್ರೆಯದು. ಕುರಳ್ ಪದ್ಯದ ಧಾಟಿ ನಾಲ್ಕು ಮಾತ್ರೆಯ ಆವರ್ತಗಳದಾಗಿರುವುದರಿಂದ ನಾಲ್ಕಕ್ಕಿಂತ ಹೆಚ್ಚು ಮಾತ್ರೆಗಳುಳ್ಳ ಗಣವನ್ನು ಉಳಿದ ಗಣಗಳ ಪರಿಮಾಣಕ್ಕೆ ಕುಗ್ಗಿಸಿ ಪಠಿಸಬೇಕಾಗುತ್ತದೆ. ಹೀಗೆ ಮಾಡುವುದು ತಮಿಳಿನಲ್ಲಿ ಶಾಸ್ತ್ರಸಮ್ಮತವೇ ಆಗಿದೆ. ಆದುದರಿಂದ ಇಲ್ಲಿ ಬಂದಿರುವ 'ಎಟು-ತ್ತೆಲ್ಲಾಂ' ಎಂಬ ಗಣದ ನಾಲ್ಕು ಅಕ್ಷರಗಳೊಳಗೆ ಗುರುಸ್ವಭಾವವನ್ನು ಪಡೆದಿರುವ ಮೂರು ಅಕ್ಷರಗಳ ಪರಿಮಾಣವನ್ನು ಕುಗ್ಗಿಸಿ ಆ ಗಣವನ್ನು ನಾಲ್ಕು ಮಾತ್ರೆಗಳ ಕಾಲದಲ್ಲಿ ಪಠಿಸ-ಬೇಕಾಗುತ್ತದೆ. ಹೀಗೆ ಗುರುವನ್ನು ಕುಬ್ಜೀಕರಿಸಿ ಲಘುವಾಗಿ ಮಾಡುವುದು ಕನ್ನಡ ತ್ರಿಮೂರ್ತಿ-ಗಣನಿಯಮಕ್ಕೆ ಸರ್ವಥಾ ಬಹಿರ್ಭೂತವಾದ ವಿಷಯ. ಈಗ ಕುರಳ್ ಬಂಧದ ಮತ್ತು ಏಳೆಯ ಗಣಗಳ ಸ್ವಭಾವದಲ್ಲಿ ಯಾವ ಸಾಮ್ಯವೂ ಇಲ್ಲವೆಂಬುದು ವಾಚಕರಿಗೆ ಸ್ಪಷ್ಟವಾಗ-ದಿರದು. ಇದೂ ಅಲ್ಲದೆ, ಇವೆರಡು ಬಂಧಗಳ ಧಾಟಿಯಲ್ಲಿ ಸಹ ಸಾಮ್ಯದ ಲೇಶವೂ ಇಲ್ಲ. ಕುರಳ್ ಬಂಧವು ನಾಲ್ಕು ಮಾತ್ರೆಗಳ ನಡೆಯದು; ಏಳೆಯಾದರೋ ಆರು ಮಾತ್ರೆಗಳ (ಅಥವಾ ಏಳು ಮಾತ್ರೆಗಳ) ನಡೆಯ ಛಂದೋಬಂಧ. ವಸ್ತುಸ್ಥಿತಿ ಹೀಗಿರುವಾಗ ಈ ಎರಡು ಛಂದೋಬಂಧಗಳೊಳಗೆ ನಂಟನ್ನು ಆ ಮಹನೀಯರು ಎಲ್ಲಿ ಕಂಡರೆಂಬುದು ನನ್ನ ಊಹೆಗೆ ಮೀರಿದುದಾಗಿದೆ.

{'ಏಳೆ' ಎಂಬ ಹೆಸರಿನ ಮೂಲವಿಚಾರ} ಏಳೆ ಎಂಬ ಹೆಸರು ಈ ಬಂಧಕ್ಕೆ ಏಕೆ ಬಂತೆಂಬುದು ಒಂದು ಬಗೆಹರಿಯಲಾರದ ಸಮಸ್ಯೆಯಾಗಿದೆ. ತ್ರಿಪದಿಗೂ ಏಳೆಗೂ ಇರುವ ಭೇದವು ಕೇವಲ ಗಣಸಂಖ್ಯೆಯಲ್ಲಿ ಎಂದು ಹೇಳಿದರೂ ತಪ್ಪಾಗಲಾರದೆಂದು ತೋರುತ್ತದೆ. ತ್ರಿಪದಿಯಲ್ಲಿ ಹನ್ನೊಂದು ಗಣಗಳಿದ್ದರೆ ಏಳೆಯಲ್ಲಿ ಏಳೇ ಗಣಗಳು ಇರುತ್ತವೆ. ಈ ಕಾರಣದಿಂದ ಏಳೇ ಗಣಗಳಿರುವ ಪದ್ಯ ಎಂಬರ್ಥದಲ್ಲಿ ಏಳೆಯೆಂಬ ಹೆಸರು ಇದಕ್ಕೆ ಕೊಡಲ್ಪಟ್ಟಿತೆಂದು ಕೆಲವರು ಮಹನೀಯರು ಹೇಳುತ್ತಿದ್ದಾರೆ. ಆದರೆ ಸಂಖ್ಯಾವಾಚಕವಾದ 'ಏಳು' ಎಂಬ ಪದದಲ್ಲಿರುವುದು ಱ ಹೊರತು ಳವಲ್ಲ. ಏಳೆಯೆಂಬ ಪದ್ಯನಾಮದಲ್ಲಿ ಇರುವುದು ಳವೇ ಹೊರತು ಱವಲ್ಲ. ಇದು ಉಚ್ಚಾರದೋಷದಿಂದ ಳವಾಗಿ ಪರಿಣ-ಮಿಸಿತು ಎಂದು ಹೇಳುವುದಕ್ಕೂ ಆಸ್ಪದವಿಲ್ಲ. ಏಕೆಂದರೆ, ಜಯಕೀರ್ತಿಯ ಛಂದೋನು ಶಾಸನ, ಶಾರ್ಙ್ಗದೇವನ ಸಂಗೀತರತ್ನಾಕರ ಮೊದಲಾದ ಪುರಾತನ ಸಂಸ್ಕೃತ ಶಾಸ್ತ್ರ ಗ್ರಂಥ-ಗಳಲ್ಲಿ ಈ ಪದ್ಯದ ಹೆಸರು 'ಏಲಾ' ಎಂದೇ ಇರುವುದಾಗಿದೆ. ಕನ್ನಡದ ಳವನ್ನು ಸಂಸ್ಕೃತೀಕರಿಸಿದಾಗ ಅದು ಲಕಾರವಾಗಿ ಪರಿಣಮಿಸುವುದು ಸ್ವಾಭಾವಿಕವೇ ಹೊರತು ಱವನ್ನು ಸಂಸ್ಕೃತೀಕರಿಸಿದಾಗ ಅದು ಲಕಾರವಾಗುವಂತಿಲ್ಲ; ಅದು ಡಕಾರವಾಗಿ ಪರಿಣಮಿಸುತ್ತದೆ. (ಉದಾ:- ಚೋಱ - ಚೋಡ (ಸಂ.) ಇತ್ಯಾದಿ) ಹಾಗೆ ಏಳೆಯೆಂಬುದು ಗಣಸಂಖ್ಯಾಚವಾಕವಾಗಿರುತ್ತಿದ್ದರೆ ಸಂಸ್ಕೃತದಲ್ಲಿ ಅದು 'ಏಡಾ' ಎಂದಾಗಬೇಕಿತ್ತು ಹೊರತು 'ಏಲಾ' ಎಂದಲ್ಲ. ಆದುದರಿಂದ ಏಳೆಯೆಂಬೀ ಹೆಸರು ಗಣಸಂಖ್ಯೆಯಿಂದುಂಟಾಯಿತೆಂದು ಹೇಳುವುದು ತಪ್ಪೇ ಆಗುತ್ತದೆ. ಇನ್ನು ಇದು ಬೇರೆ ಯಾವ ಕಾರಣದಿಂದ ಹುಟ್ಟಿತು ಎಂಬುದು ನನ್ನ ಊಹೆಗೆ ನಿಲುಕುವುದಿಲ್ಲ.

ಛಂದೋಂಬುಧಿಯಲ್ಲಿ ಏಳೆಯ ಅನಂತರ 'ಚೌಪದಿ' ಮತ್ತು 'ಛಂದೋವತಂಸ' ಎಂಬ ಎರಡು ಜಾತಿಗಳ ಲಕ್ಷಣವು ನಿರೂಪಿತವಾಗಿವೆ. ಈ ಲೇಖನದ ಮೂಲನಿಬಂಧದಲ್ಲಿ ಅವುಗಳ ವಿಚಾರವಾಗಿ ನಾನು ಮಾಡಿದ್ದ ಪ್ರಯತ್ನವು ಸಮರ್ಪಕವಾಗಿದ್ದಿಲ್ಲವೆಂಬುದು ಕಾಲಾಂತರದಲ್ಲಿ ಪ್ರಕಟವಾದ ಜಯಕೀರ್ತಿಯ ಗ್ರಂಥವನ್ನು ನೋಡಿದಾಗ ನನಗೆ ತಿಳಿದು

{ಅಕ್ಕರಿಕೆ – ಮಾತ್ರಾನಿಯಮದ ಪ್ರಭಾವ}

ಛಂದೋವತಂಸದ ಬಳಿಕ ಉಕ್ತವಾಗಿರುವ ಅಕ್ಕರಿಕೆಗೆ, ಮಾತ್ರಾನಿಯಮಕ್ಕೆ ತಪ್ಪದಂತೆ ತ್ರಿಮೂರ್ತಿಗಣಗಳು ಬರಬೇಕೆಂದು ನಾಗವರ್ಮನು ಸ್ಪಷ್ಟವಾಗಿ ಹೇಳಿದ್ದಾನೆ. ಇದರಿಂದ ಇದು, ಮಾತ್ರಾಗಣಗಳ ಪರಿಚಯದಿಂದ, ವಿಶುದ್ಧ ತ್ರಿಮೂರ್ತಿಜಾತಿಗಳಲ್ಲುಂಟಾದ ಸಂಸ್ಕಾರದ ಫಲಸ್ವರೂಪವಾಗಿದೆಯೆಂದು ಬೋಧೆಯಾಗುತ್ತದೆ. 'ಅಕ್ಕರಿಕೆ' ಮತ್ತು 'ಅಕ್ಕರ' ಎಂಬ ಪದಗಳಲ್ಲಿ ಜನ್ಯಜನಕಭಾವವು ಹೊಳೆಯುವುದರಿಂದಲೂ, ಅಕ್ಕರಗಳಿಗಿಂತ ಇದು ಆಧುನಿಕವೆಂಬುದರಲ್ಲಿ ಸಂದೇಹವಿಲ್ಲ. ಸಮಾನಮಾತ್ರೆಗಳ ತ್ರಿಮೂರ್ತಿಗಣಗಳಿಂದಲೇ ವಾರ್ಧಕಾದಿ ಷಟ್ಪದಿಗಳ ೫, ೪, ೩ ಮಾತ್ರೆಗಳ ಗಣಗಳ ಸೃಷ್ಟಿಯಾದ ಬಗೆಯನ್ನು ತೋರಿಸುವುದಕ್ಕೆ ಇದು ಬಲವಾದ ಆಧಾರವಾಗಿದೆ.

{ಮದನವತಿಯ ವಿಚಾರ}

ಇದರ ಮುಂದೆ ಮೂರು ವಿಧವಾದ ಲಕ್ಷಣಗಳನ್ನು ಕೊಟ್ಟು ವಿವರಿಸಿದ ಮದನವತಿ ಬರುತ್ತದೆ. ಅಕ್ಕರಿಕೆಯಂತೆ ಇದಕ್ಕೂ ಮಾತ್ರಾನಿಯಮವು ಅವಶ್ಯ-ವೆಂದು ನಾಗವರ್ಮನು ಹೇಳದಿದ್ದರೂ, ಇದರ ಅಚ್ಚುಗಟ್ಟಾದ ಸ್ವರೂಪದಿಂದ ಹಾಗೆಯೇ ಬೋಧೆಯಾಗುತ್ತದೆ. ಅಲ್ಲದೆ, ಇದು ವಿಶುದ್ಧ ತ್ರಿಮೂರ್ತಿಘಟಿತ-ವೆಂದು ಬಗೆಯುವುದಾದರೆ, ಅಕ್ಕರದ ಭೇದಗಳಲ್ಲೇ ಒಂದಾಗಬೇಕಾಗುತ್ತದೆ; ಏಕೆಂದರೆ, ಆಗ ಇದಕ್ಕೂ ನಡುವಣಕ್ಕರಕ್ಕೂ ಪಾದಾದಿಯ ಗಣದಲ್ಲಿ ಹೊರತು ಅನ್ಯಥಾ ಭೇದವುಳಿಯುವುದಿಲ್ಲ. ಆದುದರಿಂದ ನಡುವಣಕ್ಕರವೇ ಮಾತ್ರಾ-ನಿಯಮಕ್ಕೆ ಅಳವಟ್ಟು 'ಮದನವತಿ'ಯಾಯಿತೆಂದು ಹೇಳಬೇಕಾಗುತ್ತದೆ. ಮತ್ತು ಇಲ್ಲಿ ನಾಗವರ್ಮನು ಹೇಳಿದ ಲಕ್ಷಣಕ್ಕೂ ಲಕ್ಷ್ಯಕ್ಕೂ ಪೂರ್ಣವಾಗಿ ಮೇಳಗೂಡುವುದಿಲ್ಲ. ಕೊಟ್ಟ ಮೂರು ಲಕ್ಷಣಗಳಲ್ಲಿ ಇದೊಂದು:–

ಗಣವಿಭಾಗ – ಮದನಹರ । ತ್ರಯದಿಂ ಹರಿ । ಕಡೆಪಡೆ ಮ । ದನವತೀ ॥
ತಾಲಖಂಡ – ಮದನಹರ । ತ್ರಯದಿಂ ಹರಿ । ಕಡೆಪಡೆ ಮದ । ನವತೀ ।

ಇಲ್ಲಿ ತಾಲಖಂಡಕ್ಕೂ ಗಣವಿಭಾಗಕ್ಕೂ ಜಗಳವುಂಟಾಗುತ್ತದೆ. ಇದು ತ್ರಿಮೂರ್ತಿಜಾತಿಗಳ ಮುಖ್ಯಲಕ್ಷಣಕ್ಕೆ ವಿರುದ್ಧ. ಅಲ್ಲದೆ ಅದೇ ಪದ್ಯದ ಮೊದಲನೆಯ ಪಾದವೂ ಉಕ್ತಲಕ್ಷಣಕ್ಕೆ ವಿರುದ್ಧವಾಗಿದೆ:–

ಗಣವಿಭಾಗ – ಮದನನತಂ । ದೆಯ ಗಣಮವು । ವಿಷಯದೊಳಿರೆ । ಗುರುಮುಂ ॥

---

ಬಂತು. ನಾನು ಇತ್ತೀಚೆ ಬರೆದ 'ಛಂದೋವತಂಸ' ಎಂಬ ಲೇಖನದಲ್ಲಿ ಆಯೆರಡೂ ಬಂಧಗಳ ಲಕ್ಷಣ ಹಾಗೂ ಧಾಟಿಯ ವಿವರಗಳು ನಿರೂಪಿಸಲ್ಪಟ್ಟಿವೆ. 'ಲೋಚನ' ಪತ್ರಿಕೆಯಲ್ಲಿ ಪ್ರಕಟವಾದ ಆ ಲೇಖನವು ಈ ನಿಬಂಧಕ್ಕೆ ನಾಲ್ಕನೆಯ ಅನುಬಂಧವಾಗಿ ಸೇರಿಸಲ್ಪಟ್ಟಿರುತ್ತದೆ.]

ಇಲ್ಲಿ ಎರಡನೆಯ ಮೂರನೆಯ ಗಣಗಳು ರುದ್ರಗಣವನ್ನು ಮೀರಿ ಆರು ಅಕ್ಷರದವಾಗಿವೆ. ಆದರೆ ಕೊಟ್ಟ ಮೂರು ಲಕ್ಷಣಗಳಲ್ಲಿ ಯಾವುದಾದ-ರೊಂದು ಅನ್ವಯಿಸಿದರೆ ಸಾಕೆಂಬ ಅಭಿಪ್ರಾಯವಿದ್ದರೆ, ನಾಲ್ಕು ಪಾದಗಳನ್ನೂ ಆಗ ಒಂದೇ ಪದ್ಯದ ಸಮಪಾದಗಳೆಂದು ಹೇಳಬೇಕಾದರೆ ಮಾತ್ರಾನಿಯಮವು ಅವಶ್ಯವಾಗುತ್ತದೆ.[22]

ಇದಾದ ಮೇಲೆ ಗೀತಿಕೆಯ ಲಕ್ಷಣವು ಉಕ್ತವಾಗಿದೆ.[23]

* * * * * *

**{ಮಾತ್ರಾನಿಯಮಕ್ಕೂ ಅಳವಡುವ ಉತ್ಸಾಹ}**

ಅನಂತರ ವಿವೃತವಾದ ಉತ್ಸಾಹಕ್ಕೂ ಮಾತ್ರಾನಿಯಮವಿದೆಯೋ ಇಲ್ಲವೋ ನಾಗವರ್ಮನು ಹೇಳಲಿಲ್ಲ; ಕೊಟ್ಟ ಉದಾಹರಣೆಯಲ್ಲಿ ಮಾತ್ರಾ-ನಿಯಮವು ಲಕ್ಷಿತವಾಗುತ್ತದೆ. ತ್ರಿಮೂರ್ತಿಗಣದಿಂದ ಕನ್ನಡ 'ಜಾತಿ'ಗಳ ಲಕ್ಷಣ-ವನ್ನು ಹೇಳುವಾಗ 'ಗುರು' ಇತ್ಯಾದಿ ಅಕ್ಷರಸಂಜ್ಞೆಗಳ ಪ್ರಯೋಗದ ಅವಶ್ಯ-ಕತೆಯಿಲ್ಲ. ಹಾಗೆ ಉತ್ಸಾಹದ ಲಕ್ಷಣವನ್ನು ಹೇಳುವುದಾಗಿದ್ದರೆ ಆರು ಬ್ರಹ್ಮಗಣ-ಗಳ ಅನಂತರ ಒಂದು ವಿಷ್ಣುಗಣ ಎಂದು ಹೇಳಬೇಕಾಗಿತ್ತು. ಇಲ್ಲಿ, ಏಳು

---

22. **{ಮದನವತಿಯ ಲಕ್ಷಣ}** ನಾಗವರ್ಮನಂತೆಯೇ ಲಕ್ಷ್ಯಲಕ್ಷಣಸಮವಾಯರೂಪವಾಗಿ ಜಯಕೀರ್ತಿಯೂ ಮದನವತಿಯನ್ನು ನಿರೂಪಿಸಿದ್ದಾನೆ. ಆದರೆ ಅವನು ಅದು ಮಾತ್ರಾ-ನಿಯಮಕ್ಕೆ ಒಳಪಟ್ಟಿರಬೇಕೆಂಬುದನ್ನು "...ಮದನವತೀ । ಪ್ರಥಿತಯತಿಃ ಪ್ರತಿಚರಣಂ ದ್ವಾವಿಂಶತಿ ಮಾತ್ರಾ ॥" – ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

ಈ ಬಂಧದ ಧಾಟಿಯಲ್ಲಿ ಒಂದು ವಿಶೇಷವಿರುವುದು ಕಂಡುಬರುತ್ತದೆ. ಅದೇನೆಂದರೆ ನಾಗವರ್ಮನಿಂದ ನಿರೂಪಿತವಾಗಿರುವಂತೆ ಈ ಬಂಧದ ಲಕ್ಷಣವು (ಮಾತ್ರಾನಿಯಮಕ್ಕೊಳಪಟ್ಟು) ಈ ಕೆಳಗಿನಂತೆ ಮೂರು ವಿಧವಾಗಿದೆ.

(೧) ಪಾದವೊಂದಕ್ಕೆ ಐದು ವಿಷ್ಣುಗಣ ಮತ್ತು ಒಂದು ಗುರು ಅಥವಾ
(೨) ನಾಲ್ಕು ವಿಷ್ಣುಗಣ ಮತ್ತು ಒಂದು ರುದ್ರಗಣ ಅಥವಾ
(೩) ಮೂರು ರುದ್ರಗಣ ಮತ್ತು ಒಂದು ವಿಷ್ಣುಗಣ

ಇವುಗಳೊಳಗೆ ಮೊದಲಿನ ಎರಡು ಲಕ್ಷಣಗಳಿಗನುಸಾರವಾಗಿ ಪಠಿಸಿದಾಗ ಈ ಪದ್ಯವು ನಾಲ್ಕು ಮಾತ್ರೆಯ ಆವರ್ತಗಳ ಬಂಧವಾಗುತ್ತದೆ. ಆದರೆ ಮೂರನೆಯ ಲಕ್ಷಣಾನುಸಾರವಾಗಿ ಪಠಿಸಿದಾಗ ಇದು ಆರು ಮಾತ್ರೆಗಳ ಆವರ್ತಗಳ ಬಂಧವಾಗಿ ಪರಿಣಮಿಸುತ್ತದೆ. ಹೀಗೆ ಇದು ಎರಡು ಬಗೆಯ ತಾಳಗಳಿಗೆ ಅಳವಡುವ ಒಂದು ಬಂಧವಾಗಿದೆ. ಅಕ್ಕರಿಕೆಯಲ್ಲಿ ಮತ್ತು ವಾರ್ಧಕಾದಿ ಷಟ್ಪದಿಗಳಲ್ಲಿ ಹೇಗೋ ಹಾಗೆ ಇದರಲ್ಲಿಯೂ ತ್ರಿಮೂರ್ತಿಗಣಗಳಿಗೆ ಬಹಿರ್ಭೂತವಾದ ಯಾವ ಗಣಕ್ಕೂ ಪ್ರವೇಶವಿರುವುದಿಲ್ಲ.

23. ಪ್ರಸ್ತುತ ನಿಬಂಧಕ್ಕೆ ಮೂರನೆಯ ಅನುಬಂಧವಾಗಿ ಸೇರಿಸಲ್ಪಟ್ಟಿರುವ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ಲೇಖನದಲ್ಲಿ ಈ ಬಂಧದ ಕೂಲಂಕಷ ವಿಚಾರವನ್ನು ಮಾಡಲಾಗಿದೆ.

ಬ್ರಹ್ಮಗಣ, ಅನಂತರ ಒಂದು ಗುರು ಎಂದು ಹೇಳಿದ್ದಾನೆ; ಮದನವತಿ-ಯಲ್ಲಿಯೂ ಒಮ್ಮೆ ಗುರುವೆಂದು ಪಠಿಸಿದ್ದಾನೆ. ಇದರಿಂದ ಇದು ಅಕ್ಕರಿಕೆಯ ವರ್ಗಕ್ಕೆ ಎಂದರೆ ಮಾತ್ರಾನಿಯಮಕ್ಕೂ ತ್ರಿಪುರುಷಗಣನಿಯಮಕ್ಕೂ ಅನ್ವಯಿಸುವ ಬಂಧಗಳ ಸಾಲಿಗೆ ಸೇರತಕ್ಕುದಾಗಿದೆ.[24]

{ಉತ್ಸಾಹ ಮತ್ತು ಲಯಗ್ರಾಹಿ ವಿಭಿನ್ನವಾದುವು}

ಆನುಷಂಗಿಕವಾಗಿ ಇಲ್ಲೊಂದು ವಿಚಾರ – ಇದಕ್ಕೆ ಟಿಪ್ಪಣಿ ಬರೆಯು-ವಾಗ, ಟಿಪ್ಪಣಿಕಾರರು – 'ಚಿಕದೇವರಾಜ ವಿಜಯ' ಮೊದಲಾದ ಪ್ರಬಂಧ-ಗಳಲ್ಲಿ ಲಯಗ್ರಾಹಿ ಎಂದು ನಿರ್ದಿಷ್ಟವಾದ ವೃತ್ತಗಳು ಉತ್ಸಾಹದಂಡಕದ ಲಕ್ಷಣ-ವುಳ್ಳವಾಗಿರುವುವು; ಹಾಗೆ ಲಯಗ್ರಾಹಿಯೆಂದು ಹೆಸರು ಬರೆದವರಿಗೆ ಭ್ರಾಂತಿ-ಯುಂಟಾಗಿದೆ – ಎಂಬರ್ಥದ ಮಾತನ್ನು ಹೇಳುತ್ತಾರೆ. ಆದರೆ ಭ್ರಾಂತಿಗೆ ಗುರಿ-ಯಾದವರು ನಿಜವಾಗಿಯೂ ಛಂದೋಂಬುಧಿಯ ಟಿಪ್ಪಣಕಾರರೇ ! ಆ ವೃತ್ತ-ಗಳಿಗೆ ಲಯಗ್ರಾಹಿಯೆಂಬ ಹೆಸರು ಇದೆಯೋ? ಇದ್ದರೆ ಹೇಗೆ ಬಂತೆಂಬ ಚರ್ಚೆ ಇಲ್ಲಿ ಅಪ್ರಕೃತ. ಆದರೆ ಉತ್ಸಾಹಜಾತಿಯ ಅಥವಾ ತಜ್ಜನ್ಯವಾದ ಉತ್ಸಾಹ ದಂಡಕದ ಲಕ್ಷಣದ ಲೇಶವೂ ಅದರಲ್ಲಿಲ್ಲ. ನಾಲ್ಕು ಬ್ರಹ್ಮ ಗಣಗಳಲ್ಲಿ ಯಾವುದ-ರಿಂದ ನಿರ್ಮಿಸಿದ ಉತ್ಸಾಹವಾದರೂ 'ಲಯಗ್ರಾಹಿ' ಎಂದು ನಿರ್ದಿಷ್ಟವಾದ ವೃತ್ತ ಜಾತಿಯಾಗಲಾರದು. ಅದು ಮಾಲಾವೃತ್ತಗಳಲ್ಲೊಂದಾದ ಲಲಿತವೃತ್ತದ ಲಕ್ಷಣ-ವನ್ನು ಸರಿಯಾಗಿ ಹೊಂದಿರುತ್ತದೆ. ಅದರಲ್ಲಿ ಅಕ್ಷರನಿಯಮವನ್ನು ಪಾಲಿಸದೆ, ಕೇವಲ ಮಾತ್ರಾನಿಯಮವನ್ನು ಅಳವಡಿಸಿದರೆ, ಆಗಲದು ಐದು ಮಾತ್ರೆಯ ಗಣಗಳಿಂದ ಘಟಿತವೆಂದಾಗುವುದು. ಲಲಿತವೃತ್ತವು ಛಂದೋಂಬುಧಿಯಲ್ಲಿಯೇ ಉದಾಹೃತವಾಗಿದೆ. 'ಚಿಕ್ಕದೇವರಾಜವಿಜಯ'ದ ಲಯಗ್ರಾಹಿ ಇದು:-

ಕಾರುಗನ ಹಳ್ಳಿಯವನಾರುಬಟೆಯಿಂ ನೆರೆಯೆ ಭೂರಮಣರಂ ಸದೆದು
ಬೀರತನದೊಳ್ಪಿಂ ॥ – ಇತ್ಯಾದಿ.[25]

---

24. 'ಉತ್ಸಾಹ' ಎಂಬ ಈ ಜಾತಿಯನ್ನು ಜಯಕೀರ್ತಿ ತ್ರಿಮೂರ್ತಿಬಂಧಗಳೊಂದಿಗೆ ಸೇರಿಸಿಲ್ಲ; ಅದು ಶುದ್ಧ ಮಾತ್ರಾಬಂಧವೆಂದೇ ಬಗೆದಿದ್ದಾನೆ. ಮತ್ತು ಲಯೋತ್ತರ ಇತ್ಯಾದಿ ಮಾತ್ರಾಬಂಧಗಳೊಂದಿಗೆ ಅದರ ಲಕ್ಷಣವನ್ನು ನಿರೂಪಿಸಿದ್ದಾನೆ. ಆದರೆ ಲಯೋತ್ತರದಂತೆ ಇದರಲ್ಲಿ ಲಗಾದಿಗಣಕ್ಕೆ ಪ್ರವೇಶವಿರುವುದಿಲ್ಲ. ಆದ ಕಾರಣ ಉತ್ಸಾಹವೆಂಬೀ ಬಂಧವು ಮಾತ್ರಾಬಂಧಗಳೇ ಆಗಿರುವ ವಾರ್ಧಕಾದಿ ಷಟ್ಪದಿಗಳ ವರ್ಗಕ್ಕೆ ಸೇರತಕ್ಕುದಾಗಿದೆ. ಉತ್ಸಾಹವೆಂಬ ಈ ಜಾತಿಬಂಧಕ್ಕೂ ಉತ್ಸಾಹದಂಡಕವೆಂದು ನಾಗವರ್ಮನು ಹೇಳುವ ಅದೊಂದು ಛಂದೋಬಂಧಕ್ಕೂ ಪಾದಪರಿಮಾಣದಲ್ಲಿ ಹೊರತು ಬೇರಾವ ಭೇದವೂ ಇರುವಂತೆ ತೋರುವುದಿಲ್ಲ.

25. ನಾಗವರ್ಮಾದಿಗಳು ನಿರೂಪಿಸಿದ ಮಾಲಾವೃತ್ತಗಳಲ್ಲೊಂದಾದ ಲಲಿತವೃತ್ತಕ್ಕೆ ತೆಲುಗು ಛಂದೋಗ್ರಂಥಗಳಲ್ಲಿ ಲಯಗ್ರಾಹಿ ಎಂಬ ಹೆಸರು ಇದೆಯೆಂದು ತಿಳಿದುಬರುತ್ತದೆ.

**{ಷಟ್ಪದಿಯ ಲಕ್ಷಣನಿರೂಪಣೆ}**

ಇನ್ನುಳಿದುದು ಷಟ್ಪದಿ. ಮೈಸೂರು ಪುಸ್ತಕದಲ್ಲಿ ಇದು ಹೀಗಿದೆ:-

ಮಂದರ । ಧರಗಣ ।
ಮೊಂದಿರೆ । ಕಡೆಯೊಳ್ ।
ಕುಂದದೆ । ನೆಲಸುಗೆ । ಮದನಹರಂ ॥
ಇಂದು ನಿ । ಭಾನನೆ ।
ಮುಂದಣ । ತೆರನೀ ।
ಯಂದಮೆ । ಯಾಗಲೆ । ಷಟ್ಪದಿ ಕೇಳ್ ॥ . ॥[26]

---

ತಿರುಮಲಾರ್ಯನು ತನ್ನ ಗ್ರಂಥಗಳಲ್ಲಿ ಈ ವೃತ್ತಕ್ಕೆ ಲಯಗ್ರಾಹಿಯೆಂಬ ಹೆಸರನ್ನೇ ಕೊಟ್ಟಿರು-ವುದರಿಂದ ಒಂದು ಕಾಲದಲ್ಲಿ ಈ ಹೆಸರು ಕನ್ನಡದಲ್ಲಿಯೂ ರೂಢವಾಗಿತ್ತು ಎಂದು ತೋರುತ್ತದೆ. ಕನ್ನಡ ಕೈಪಿಡಿಯಲ್ಲಾದರೋ ಲಯಗ್ರಾಹಿ ವೃತ್ತವನ್ನು ಮಾತ್ರಾಬಂಧಗಳೊಳಗೇ ಸೇರಿಸಿಬಿಟ್ಟಿದಾರೆ!

26. **{ಷಟ್ಪದಿಯ ಲಕ್ಷಣಪದ್ಯ}** ಈ ಪಾಠದಂತೆ ಇಲ್ಲಿ ಲಕ್ಷ್ಯಲಕ್ಷಣಗಳ ಸಮನ್ವಯವಾಗುವುದಿಲ್ಲ. ಲಕ್ಷಣೋಕ್ತವಾಗಿರುವಂತೆ ಮೂರನೆಯ ಮತ್ತು ಆರನೆಯ ಪಾದದ ಕೊನೆಯ ಗಣ ಮಾತ್ರ ರುದ್ರಗಣವಾಗಿದ್ದು ಉಳಿದುವೆಲ್ಲವೂ ವಿಷ್ಣುಗಣಗಳೇ ಆಗಿರಬೇಕು. ಆದರೆ ಇಲ್ಲಿ ಕಾಣುವಂತೆ ಎರಡನೆಯ ಪಾದದ ಎರಡನೆಯ ಗಣವೂ ಐದನೆಯ ಪಾದದ ಎರಡನೆಯ ಗಣವೂ ವಿಷ್ಣುಗಣಗಳಾಗಿರದೆ ಬ್ರಹ್ಮಗಣಗಳಾಗಿವೆ. ಹೀಗಾದುದು ಪಾಠದೋಷವೆಂಬುದರಲ್ಲಿ ಸಂದೇಹ-ವಿಲ್ಲವಾದರೂ ಇದರ ಶುದ್ಧಪಾಠವು ಲಭ್ಯವಾಗಿದೆ. ಮತ್ತು ಛಂದೋಂಬುಧಿಯಲ್ಲಿ ಕಾಣುವ ಈ ಪದ್ಯವನ್ನು ಯಥಾಕ್ಷರಗುರುಲಘುವಾಗಿ ಪಠಿಸಿದಾಗ ಇದು ಶರಷಟ್ಪದಿಯ ಹಾಗೆ ಭಾಸವಾಗುವುದರಿಂದ ಮದನವತಿ ಮೊದಲಾದುವುಗಳಂತೆ ಇದಕ್ಕೂ ಮಾತ್ರಾನಿಯಮವು ಅವಶ್ಯವೆಂಬ ಭಾವನೆಯನ್ನು ಹುಟ್ಟಿಸುತ್ತದೆ; ಇದರಿಂದಾಗಿ ಜಯಕೀರ್ತಿಯ ಗ್ರಂಥವು ಪ್ರಕಾ-ಶಿತವಾಗುವುದಕ್ಕೆ ಮೊದಲು ಹಲವರು ವಿದ್ವಾಂಸರು ಇದು ಮಾತ್ರಾನಿಯಮಬದ್ಧವಾದ ಪದ್ಯವೆಂದೇ ಬಗೆದಿದ್ದರು. ಆದರೆ ಜಯಕೀರ್ತಿಯ ಗ್ರಂಥವನ್ನು ನೋಡಿದಾಗ ಈ ಭ್ರಾಂತಿ ತೊಲಗುತ್ತದೆ. ಅದರಲ್ಲಿ ಈ ಛಂದೋಬಂಧದ ಲಕ್ಷ್ಯದ ಶುದ್ಧರೂಪವು ದೊರಕುತ್ತದೆ. ಅದು ಹೀಗಿದೆ:-

ಸ್ಮರಗಣಃ । ಪರಿತೋತ್ರ ।
ಶರಗಣಃ । ಪುರಷಷ್ಠ ।
ಚರಣಾಂತ । ಯೋಸ್ತದಂ । ತೇ ವಿರಾಮಃ ॥
ಕರಕರ । ಪುರಗಣಾಃ ।
ದ್ವಿರಿಹತ್ಯಾ । ಶ್ಚರಣಾಶ್ಚೇತ್ ।
ಸ್ಫುರತಿ ಷ । ಟ್ಚರಣವ । ಚ್ಛಟ್ಪದಿಕಾ ॥ . ॥

(ಛಂದೋನುಶಾಸನ-೭-೧೭)

ಲಕ್ಷ್ಯಲಕ್ಷಣಸಮವಾಯರೂಪದಲ್ಲಿ ಇಲ್ಲಿ ಹೇಳಲ್ಪಟ್ಟ ಲಕ್ಷಣವೂ ನಾಗವರ್ಮನು ಹೇಳಿರುವ ಲಕ್ಷಣವೂ ಸಮಾನವೇ ಆಗಿದೆ. ಆದುದರಿಂದ ಛಂದೋಂಬುಧಿಯ ಪೂರ್ವೋಕ್ತ ಮುದ್ರಿತ ಪುಸ್ತಕದಲ್ಲಿ ಕಂಡುಬರುವ ಪಾಠವು ಅಶುದ್ಧವೆಂಬುದರಲ್ಲಿ ಸಂದೇಹವಿಲ್ಲ. (ಜಯಕೀರ್ತಿಯ

* * * * *

ನಾಗವರ್ಮನು ಹೇಳಿದುದು ಒಂದೇ ಷಟ್ಪದಿಯನ್ನು. ಈಗ ಆರು ಷಟ್ಪದಿಗಳಿವೆ. ಈ ಷಟ್ಪದಿಗಳು ಇಷ್ಟೇ ಏಕೆ? ಇವು ಎಲ್ಲಿಂದ ಹುಟ್ಟಿದುವು? – ಇತ್ಯಾದಿ ಬಹಳವಾಗಿ ಚರ್ಚೆ ನಡೆಯುತ್ತಿದೆ. ಆ ವಿಷಯವಾಗಿ ನನಗೆ ಕಂಡು ಬಂದ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ಇಲ್ಲಿ ಹೇಳುತ್ತೇನೆ –

ಸಂಸ್ಕೃತದ 'ಮಯರಸತಜಭನ'ಗಳಿಗೆ ಮಾತ್ರೆಗಳನ್ನು ಲೆಕ್ಕಿಸಿ ಕನ್ನಡ ಷಟ್ಪದಿಗಳನ್ನು ಹುಟ್ಟಿಸಿದರೆಂದು ಕೆಲವರ ಸಮರ್ಥನೆ. ನನ್ನ ನಮ್ರ ಸೂಚನೆಯೇನೆಂದರೆ, ಗಣಗಳನ್ನು ನೋಡಿ ಲೆಕ್ಕಿಸಿ, ಅವುಗಳನ್ನು ಸುರಿದು ಮಾಲೆಮಾಡಿ ಛಂದೋಬಂಧಗಳನ್ನು ಆದಿಯಲ್ಲಿ ರಚಿಸಿದರೆಂಬುದು ಪ್ರಕೃತಿಗೆ ವಿರೋಧ. ಪದ್ಯದ ರಚನೆಯಾದ ಮೇಲೆಯೇ ಗಣನಿಯಮವನ್ನು ತಿಳಿದರು. ಅನಂತರಕಾಲೀನರು, ಅದೇ ಜಾತಿಯ ಪದ್ಯಗಳಲ್ಲಿ ಹೊಸತೊಂದು ಭೇದವನ್ನು, ಬೇಕಾದರೆ ಗಣದ ನಿಯಮಗಳನ್ನು ಅನುಲಕ್ಷಿಸಿ, ನಿರ್ಮಿಸಿರಬಹುದು; ಹೊರತು ಯಾವುದಾದರೊಂದು ಜಾತಿಯ ಮೊತ್ತಮೊದಲಿನ ಬಂಧವು ಗಣಗಣನೆಯಿಂದ ಹುಟ್ಟಿರಲಾರದು. ಅಲ್ಲದೆ, ಕವಿಯು ಸ್ವಭಾವಸಿದ್ಧವಾದ ಪ್ರಜ್ಞೆಯಿಂದ ಅಥವಾ ಯಾವುದಾದರೊಂದು ಬೇರೆ ಬಂಧದ ಧಾಟಿಯಿಂದ ಪ್ರೇರಿತನಾಗಿ ಹೊಸ ಬಂಧವನ್ನು ಕಲ್ಪಿಸುವನೇ ಹೊರತು ಗಣಗಳಿಂದ ಪ್ರೇರಿತನಾಗುವುದಿಲ್ಲ. ತಾನು ಬರೆದ ಪದ್ಯದ ಗಣನಿಯಮವು ಕವಿಗೆ ತಿಳಿದಿರಲೇಬೇಕೆಂದೂ ಇಲ್ಲ. ಕೇವಲ ಒಂದು ಪ್ರಕೃತಿ ಅವನ ಹಾದಿಯನ್ನು ತಪ್ಪಿಸದೆ ಕೈಹಿಡಿದು ನಡೆಯಿಸುವುದು.

* * * * * *

**{ವಾರ್ಧಕಾದಿ ಷಟ್ಪದಿಗಳ ಗಣಸ್ವರೂಪವಿಚಾರ}**

ವಾರ್ಧಕಾದಿ ಷಟ್ಪದಿಗಳ ಗಣಸ್ವರೂಪವನ್ನಿಲ್ಲಿ ವಿಮರ್ಶಿಸೋಣ. ಈಗ ಪ್ರಚಾರದಲ್ಲಿರುವ ಷಟ್ಪದಿಗಳೆಲ್ಲ, ೩, ೪, ೫ ಮಾತ್ರೆಗಳ ಗಣಗಳಿಂದ

---

ಗ್ರಂಥದಲ್ಲಿ ಕಾಣುವ ಷಟ್ಪದಿಯ ಸ್ವರೂಪವನ್ನು ಅವಲಂಬಿಸಿ ಕೆಲವರು ಈ ಮೇಲೆ ತೋರಿಸಿರುವ ಛಂದೋಂಬುಧಿಯಲ್ಲಿ ಕಾಣುವ ಷಟ್ಪದೀರೂಪವನ್ನು ಇತ್ತೀಚೆ ಒಬ್ಬೊಬ್ಬರು ಒಂದೊಂದು ವಿಧವಾಗಿ ರೂಪಾಂತರಿಸಿ ಶುದ್ಧೀಕರಿಸಿಕೊಂಡಿರುತ್ತಾರೆ.)

ಒಂದು ಕಾಲದಲ್ಲಿ ಈ ಛಂದೋಬಂಧವು ಬಹಳವಾಗಿ ಹಾಡಲ್ಪಡುತ್ತಿತ್ತು ಎಂದು ತೋರುತ್ತದೆ. ಏಕೆಂದರೆ, ಸಂಗೀತರತ್ನಾಕರದಲ್ಲಿ ಶಾರ್ಙ್ಗದೇವನು ಇದರ ಲಕ್ಷಣವನ್ನು ಹೇಳಿ ಇದನ್ನು ಹಾಡುವ ವಿಧಾನವನ್ನೂ ಸೂಚಿಸಿರುತ್ತಾನೆ. ಅದು ಹೇಗಿದ್ದರೂ ಇದರ ಪಠನದ ಧಾಟಿಯೂ ಪಿರಿಯಕ್ಕರದ ಪಠನದ ಧಾಟಿಯೂ ಏಕರೂಪವಾಗಿರುವುದು ಪರೀಕ್ಷಿಸಿದರೆ ಗೊತ್ತಾಗದಿರದು. ಇಷ್ಟು ಮಾತ್ರವಲ್ಲ – ಪಿರಿಯಕ್ಕರದ ಪಾದಾದಿಯಲ್ಲಿ ಮತ್ತು ಐಚ್ಛಿಕವಾಗಿ ಬೇರೆಡೆಗಳಲ್ಲಿ ಬ್ರಹ್ಮಗಣಗಳು ಬರುವವೆಂಬ ಒಂದು ವಿಶೇಷತೆಯನ್ನು ಬಿಟ್ಟರೆ ಈ ಷಟ್ಪದಿಗೂ ಪಿರಿಯಕ್ಕರದ ಅರ್ಧಕ್ಕೂ ಯಾವ ವ್ಯತ್ಯಾಸವೂ ಇಲ್ಲವಾಗುತ್ತದೆ. ಆದುದರಿಂದ ಇದು ಪಿರಿಯಕ್ಕದ ಮರಿ ಎಂದು ಹೇಳಿದರೆ ತಪ್ಪಾಗಲಾರದೆಂದು ತೋರುತ್ತದೆ.

ಘಟಿತವಾಗಿವೆ. ತ್ರಿಮೂರ್ತಿಗಣಗಳ ಒರೆಯಲ್ಲಿ ಈ ಗಣಗಳನ್ನು ತಿಕ್ಕಿ ನೋಡಿದರೆ, ಷಟ್ಪದಿಯ ಮೂರು ಮಾತ್ರೆಯ ಗಣಗಳೆಲ್ಲ ಯಾವುದಾದರೊಂದು ಬ್ರಹ್ಮಗಣ, ನಾಲ್ಕು ಮಾತ್ರೆಯವೆಲ್ಲ ಯಾವುದಾದರೊಂದು ಬ್ರಹ್ಮ ಅಥವಾ ವಿಷ್ಣುಗಣ, ಐದು ಮಾತ್ರೆಯವೆಲ್ಲ ಯಾವುದಾದರೊಂದು ವಿಷ್ಣು ಅಥವಾ ರುದ್ರಗಣ ಎಂದು ಸ್ಪಷ್ಟವಾಗುವುದು. ತ್ರಿಮೂರ್ತಿಗಣಗಳಿಗೆ ಬಾಹಿರವಾದ ಯಾವ ಗಣವೂ ಯಾವ ಷಟ್ಪದಿಯಲ್ಲಿಯೂ ಇಲ್ಲ. ಇದೇನೋ ಕಾಕತಾಲೀಯವಾಗಿ ಬಂದಿರಬಹುದೆಂದು ಹೇಳುವವರಿಗೆ, ಆ ಗಣಗಳ ಸ್ವರೂಪವನ್ನು ಚೆನ್ನಾಗಿ ವಿಮರ್ಶಿಸಬೇಕೆಂದು ನಾನು ಬಿನ್ನಯಿಸಿಕೊಳ್ಳುತ್ತೇನೆ. ತ್ರಿಮೂರ್ತಿಗಣಗಳ ಜೀವವೇ ಈ ೩, ೪, ೫ ಮಾತ್ರೆಯ ಗಣಗಳಿಗೂ ಜೀವವಾಗಿದೆ. ಗಣದ ಪ್ರಥಮ ಲಘ್ವನಂತರ ಗುರುನಿಷೇಧವೇ ಈ ಜೀವ. ಅಲ್ಲದೆ ಯಥಾಕ್ಷರವಾಗಿ ಬ್ರಹ್ಮ ವಿಷ್ಣು ರುದ್ರಗಳ ಆದಿಗಣಗಳಲ್ಲಿ ಅನುಕ್ರಮವಾಗಿ ೪, ೬, ೮ ಮಾತ್ರೆಗಳು ಬಂದರೂ, ಅಂತ್ಯಗಣಗಳಲ್ಲಿ ಅನುಕ್ರಮವಾಗಿ ೩, ೪, ೫ ಮಾತ್ರೆಗಳೇ ಇರುತ್ತವೆ. ಇದರಿಂದ ಷಟ್ಪದೀಗಣಗಳ ಮೂಲವನ್ನು ಬೇರೆಡೆಯಲ್ಲಿ ಹುಡುಕುವ ಅವಶ್ಯಕತೆಯೆಲ್ಲಿದೆ?

ಆದರೆ ಕನ್ನಡ ಕವಿಗಳ ಒಲವು ವಿಶುದ್ಧ ತ್ರಿಮೂರ್ತಿಗಣಗಳನ್ನು ಬಿಟ್ಟು ವಿಶುದ್ಧ ಮಾತ್ರಾಗಣಗಳ ಕಡೆಗೆ ಹರಿಯತೊಡಗಿದ ಕಾರಣವನ್ನು ತಿಳಿಯ-ಬೇಕಾದರೆ, ಆ ಕಾಲದ ಕನ್ನಡ ಸಾಹಿತ್ಯದ ಅವಸ್ಥೆಯನ್ನು ಪರಿಶೀಲಿಸಬೇಕು. ಮೊದಮೊದಲು ಕನ್ನಡದಲ್ಲಿ ಸಂಸ್ಕೃತದ ಪ್ರಭಾವಕ್ಕಿಂತ ಪ್ರಾಕೃತದ ಪ್ರಭಾವವೇ ಹೆಚ್ಚಾಗಿತ್ತೆಂಬುದಕ್ಕೆ, ಅಪಾರವಾಗಿ ಬಳಕೆಗೆ ಬಂದ ಅಪಭ್ರಂಶ ಪದಗಳೂ, ಪ್ರಾಕೃತದಲ್ಲಿ ಮುಖ್ಯವಾದ 'ಸ್ಕಂದ' ಜಾತಿಯ ಪ್ರಾಬಲ್ಯವೂ ನಿದರ್ಶನ. ಅಲ್ಲದೆ, ಆ ಕಾಲದಲ್ಲಿ ಕನ್ನಡ ನಾಡಿನಲ್ಲಿ ಜೈನರ ಪ್ರಾಬಲ್ಯವು ವಿಶೇಷವಾಗಿತ್ತು. ಅವರಿಗೆ ಸಂಸ್ಕೃತಕ್ಕಿಂತ ಹೆಚ್ಚಾಗಿ ಪಾಕೃತವೇ ಆದರಣೀಯವಾಗಿತ್ತು. ಇದರಿಂದ, ಎಂದರೆ ಪ್ರಾಕೃತದ ಸಂಸರ್ಗದಿಂದ, ಕನ್ನಡಿಗರಿಗೆ ವಿಶುದ್ಧ ಮಾತ್ರಾಗಣಗಳ ಸುದೃಢತೆಯು ವ್ಯಕ್ತವಾಗತೊಡಗಿ, ಶಿಥಿಲವಾದ ತ್ರಿಮೂರ್ತಿಗಣಗಳನ್ನು ಸುದೃಢಬಂಧಕ್ಕೇ ಅಳವಡಿಸುವ ಪ್ರವೃತ್ತಿಯುಂಟಾಗಿರಬೇಕು. ಇದಕ್ಕೆ ಅಕ್ಕರಿಕೆಯೇ ಸಾಕ್ಷಿ.

* * * * *

ತಾತ್ಪರ್ಯವೇನೆಂದರೆ, ಷಟ್ಪದೀಗಣಗಳಿಗೆ ತ್ರಿಮೂರ್ತಿಗಣಗಳೇ ಮೂಲ: ತ್ರಿಮೂರ್ತಿಗಣಗಳನ್ನು ಸಂಸ್ಕೃತದವೆಂದು ಸಿದ್ಧಪಡಿಸದೆ, ಷಟ್ಪದಿಗಳು ಸಂಸ್ಕೃತ ಗಣಗಳಿಂದ ಬಂದುವೆಂದು ಹೇಳುವುದು ತಪ್ಪಾಗುವುದು.

ಬಳಕೆಯಲ್ಲಿರುವ ಆರು ಷಟ್ಪದಿಗಳ ಪ್ರಥಮ ಪಾದಗಳಲ್ಲಿ ಅನುಕ್ರಮವಾಗಿ ೮, ೧೦, ೧೨, ೧೪, ೧೬, ೨೦ ಮಾತ್ರೆಗಳಿರುವುವು. ಅವುಗಳಲ್ಲಿ ಐದನೆಯದರ ವರೆಗೆ ಒಂದರಿಂದ ಒಂದಕ್ಕೆ ಎರಡೆರಡೇ ಮಾತ್ರೆಗಳ ವ್ಯತ್ಯಾಸವಿರುವಾಗ, ಆರನೆಯ ಷಟ್ಪದಿಗೆ ೧೮ ಮಾತ್ರೆಯಿದ್ದು ೨೦ ಮಾತ್ರೆಯ ಷಟ್ಪದಿ ಏಳನೆಯ-

ದಾಗಬೇಕಿತ್ತು; ಹೀಗೇಕಾಯಿತು? ಎಂಬುದೊಂದು ಪ್ರಚಲಿತ ಪ್ರಶ್ನೆ. ಆದರೆ ಷಟ್ಪದಿಗಳನ್ನು ಒಂದರಿಂದೊಂದಕ್ಕೆ ಇರುವ ಮಾತ್ರಾಧಿಕ್ಯದ ದೃಷ್ಟಿಯಿಂದ ಬೇರ್ಪಡಿಸಿ ರಚಿಸಿದುದಲ್ಲ. ಗಣಗಳ ದೃಷ್ಟಿಯಿಂದಲೇ ಅವುಗಳನ್ನು ವಿಭಾಗಿಸಿದರು. ಆದರೆ, ಈಯೊಂದು ಶಂಕೆಯು ನಮ್ಮಲ್ಲಿ ಹುಟ್ಟಲು ಕಾರಣವೇನೆಂದರೆ, ಸಂಸ್ಕೃತದ ಅಕ್ಷರವೃತ್ತಗಳಲ್ಲಿ ಹೀಗೆ ಒಂದರಿಂದ ೨೬ರವರೆಗೆ ಒಂದೇ ಒಂದು ಸಂಖ್ಯೆಯನ್ನು ಬಿಡದೆ ವೃತ್ತನಿರ್ಮಾಣ ಮಾಡಿದುದನ್ನು ಛಂದಃಶಾಸ್ತ್ರದಲ್ಲಿ ಓದಿದುದೇ ಆಗಿದೆ. ಆದರೆ ಈ ಪ್ರಕ್ರಮವು ಮಾತ್ರಾಬಂಧಗಳಿಗೆ ಹೊಂದ-ಬೇಕೆಂದಿಲ್ಲ. ಸಂಸ್ಕೃತದ ಮಾತ್ರಾಬಂಧಗಳಲ್ಲಾದರೂ ಹೀಗೆ ಅನುಕ್ರಮವಾದ ಮಾತ್ರಾವೃದ್ಧಿ ನಮಗೆ ತೋರುತ್ತದೆಯೆ? ಆದುದರಿಂದ ಈ ಶಂಕೆಗೆ ಈ ದೃಷ್ಟಿಯಿಂದ ಆಧಾರವೇ ಇಲ್ಲವಾಗುತ್ತದೆ. ಅಲ್ಲದೆ, ಭಾಮಿನಿಯೊಂದನ್ನು ಬಿಟ್ಟರೆ ಉಳಿದ ಐದು ಷಟ್ಪದಿಗಳೂ ಯಾವುದಾದರೊಂದೇ ವರ್ಗದ ಮಾತ್ರಾಗಣ-ವುಳ್ಳವು. ಭಾಮಿನಿಯಲ್ಲಿ ಮಾತ್ರ ೩+೪ರ ಮಿಶ್ರಬಂಧವಿದೆ. ಹೀಗೆ ಪರಸ್ಪರ ಮಿಶ್ರಮಾಡಿ ನೋಡಿದರೆ, ಮೂರು ಮಿಶ್ರಷಟ್ಪದಿಗಳಾಗಬೇಕಿತ್ತೆಂದು ತೋರುವುದು. ಇರುವ ಒಂದನ್ನು (ಭಾಮಿನಿ) ಬಿಟ್ಟು ಉಳಿದ ಎರಡು ೩+೫ (ಅಥವಾ ೫+೩); ೪+೫(ಅಥವಾ ೫+೪). ಇವುಗಳಲ್ಲಿ ಮೊದಲನೆಯದು ೪+೪ ಜಾತಿಗೆ ಗತಾರ್ಥ-ವನ್ನು ತರುವುದರಿಂದ ಹುಟ್ಟಲಿಲ್ಲವೆಂಬುದು ಸ್ಪಷ್ಟ. ಆದರೆ, ೫+೪ರ ಷಟ್ಪದಿಯೇಕೆ ಹುಟ್ಟಲಿಲ್ಲವೆಂಬ ಪ್ರಶ್ನೆ ಮಾತ್ರ ಉಳಿಯುತ್ತದೆ. ಈಗಲಿದು ೧೮ ಮಾತ್ರೆಯ ಷಟ್ಪದಿಯೇಕೆ ಹುಟ್ಟಲಿಲ್ಲವೆಂಬ ಪ್ರಶ್ನೆಯೇ ಆಗಿಬಿಡುವುದೆಂದು ತಿಳಿದುಬಾರ-ದಿರದು. ಇಂತಹ ಒಂದು ಷಟ್ಪದಿ ಆಗಲು ಸಾಧ್ಯವಿದೆಯೆಂದೂ, ಅದು ಖಂಡ ಜಾತಿ ತ್ರಿಪುಟತಾಳಕ್ಕೆ ಸೇರುತ್ತದೆಂದೂ, ಮಹನೀಯರೊಬ್ಬರು ಒಂದು ಷಟ್ಪದಿಯ ರಚನೆ ಮಾಡಿ ಪ್ರಸಿದ್ಧಿಸಿರುವರು. ಆದರೆ, ಖಂಡಜಾತಿ ತ್ರಿಪುಟವು ರೂಢಿಗೆ ಬರ-ಬಹುದಾದ ತಾಳವಲ್ಲ. ಕಾರಣವೇನೆಂದರೆ, ಅದರ ಗತಿ ಬಹಳ ಕ್ಲಿಷ್ಟವಾಗಿರುವು-ದರಿಂದ ಅದು ಸಾಮಾನ್ಯಜನತೆಯ ಸ್ವಾಧೀನಕ್ಕೆ ಬರುವಂತಹದಲ್ಲ. ಅರ್ಥ ಪ್ರಧಾನವಾದ ಸಾಹಿತ್ಯದಲ್ಲಿ ಸುಲಭತಾಳಗಳು ಮಾತ್ರ ಗ್ರಾಹ್ಯವಾದುವುಗಳು.[27]

---

27. ಕವಿರಾಜಮಾರ್ಗಕಾರನು ನ್ಯಾಯ್ಯವಾಗಿ ಹೇಳುವಂತೆ "ಪದ್ಯಂ ಸಮಸ್ತಜನತಾಹೃದ್ಯಂ" ಆಗಿರುತ್ತದೆ. ಸಂಗೀತಕ್ಕೆ ಮೀಸಲಾದ ರಚನೆಗಳಲ್ಲಿ ನಾನಾರೂಪದಲ್ಲಿ ತಾಳಗಳು ಬರಬಹು-ದಾಗಿದೆ ಹೊರತು ಕಾವ್ಯಗಳಲ್ಲಿ ಪ್ರಯುಕ್ತವಾಗುವ ಛಂದೋಬಂಧಗಳು 'ಸಮಸ್ತಜನತಾ ಹೃದ್ಯ'ವಾಗಬೇಕಿದ್ದರೆ ಅವು ಸಂಗೀತಾಭ್ಯಾಸದಿಂದ ಮಾತ್ರ ಮನವರಿಕೆಯಾಗಬಲ್ಲ ಪ್ರೌಢ-ತಾಳಗಳಿಂದ ಬದ್ಧವಾಗಿರಬಾರದು. ಆದುದರಿಂದ ಖಂಡಜಾತಿ ತ್ರಿಪುಟದಂತಹ ಕ್ಲಿಷ್ಟ ತಾಳಗಳು ಕಾವ್ಯೋಪಯುಕ್ತವಾದ ಛಂದೋಬಂಧಗಳಿಗೆ ಸರ್ವಥಾ ಒಪ್ಪಲಾರವು. ಪ್ರಚಲಿತ ಕನ್ನಡ ಷಟ್ಪದಿಗಳು ಆರೇ ಏಕಾಗಿವೆ ಎಂಬುದರ ಬಗೆಗೆ ಇನ್ನಷ್ಟು ವಿವರಗಳನ್ನು ತಿಳಿಯ-ಲೆಳಸುವವರು 'ಛಂದೋಗತಿ' ಎಂಬ ನನ್ನ ನಿಬಂಧದ ಆರನೇ ಪರಿಚ್ಛೇದವನ್ನು ಅವಲೋ-ಕಿಸಬಹುದು. {'ಛಂದೋಗತಿ' ನಿಬಂಧದ ಆರನೇ ಪರಿಚ್ಛೇದದ 'ಆವರ್ತಭೇದಗಳಿಂದಾಗಿ

* * * * *

{ಅಪೂರ್ಣ ತಾಲಖಂಡವಿಲ್ಲದ 'ರಗಳೆ' ಛಂದೋಬಂಧ}

ಕನ್ನಡದ ಹಳೆಯ ಬಂಧದಲ್ಲಿ 'ರಗಳೆ' ಎಂಬ ಹೆಸರುಳ್ಳವೂ ಕೆಲವಿವೆ. ಪಾದವಿಂತಿಷ್ಟೇ ಎಂಬ ನಿಯಮವಿಲ್ಲದಿರುವುದು ಮಾತ್ರ ಇದರ ಮುಖ್ಯ ಲಕ್ಷಣವಲ್ಲ; ಉಳಿದ ಹಾಡುಗಳಂತೆ ಪಾದದ ಕೊನೆಯಲ್ಲಿ ಅಪೂರ್ಣವಾದ ತಾಲ ಖಂಡವಿಲ್ಲದೆ ಪೂರ್ಣಖಂಡವಿರುವುದೂ ಇದರ ಸ್ವಭಾವ. ಆದುದರಿಂದ, ವಿರಾಮವಿಲ್ಲದೆ ಪಾದಾಂತದಲ್ಲಿ ಆಲಾಪ ಮಾಡದೆ ಇದನ್ನು ಹಾಡಬೇಕಾಗುತ್ತದೆ. ಮಾತ್ರೆಗಳ ಲೆಕ್ಕವು ಕನ್ನಡದಲ್ಲಿ ಆರಂಭವಾದ ಮೇಲೆಯೇ ಇದರ ಸೃಷ್ಟಿಯಾಯಿತೆಂಬುದು ಸ್ಪಷ್ಟ.[28]

---

ಆರು ವಿಧದ ಗತಿಭೇದಗಳು' ಎಂಬ ಖಂಡವನ್ನೂ ಟಿಪ್ಪಣಿ ಸಂಖ್ಯೆ 60 ಮತ್ತು 51ನ್ನು ವಿವರಗಳಿಗಾಗಿ ಪರಿಶೀಲಿಸಬಹುದು. – ಸಂ.}

28. {ರಗಳೆಯ ವಿಚಾರ} ಜಯಕೀರ್ತಿಯ ಛಂದೋನುಶಾಸನದಲ್ಲಿ ರಗಳೆಯ ಹುಟ್ಟು ಹೇಗಾಯಿತೆಂಬುದು ಸೂಕ್ಷ್ಮವಾಗಿ ಹೇಳಲ್ಪಟ್ಟಿದೆ. ಅದರ ಆಶಯ ಈ ಮುಂದಿನಂತಿದೆ – ಸಂಸ್ಕೃತದಲ್ಲಿ ಪ್ರಸಿದ್ಧವಾದ ದಂಡಕಗಳೆಂಬುವು ಮೂಲತಃ ಒಂದು ಬಗೆಯ ಮಾಲಾವೃತ್ತಗಳೇ ಆಗಿದ್ದು ಪಾದನಿಯಮವುಳ್ಳ ರಚನೆಗಳಾಗಿದ್ದುವು. ತದನಂತರ ಪಾದನಿಯಮರಹಿತವಾದ ದಂಡಕಗಳು ಹುಟ್ಟಿಬಂದುವು; ಅವುಗಳನ್ನು ಜಯಕೀರ್ತಿ ಗದ್ಯದಂಡಕಗಳೆಂದು ಕರೆದಿದ್ದಾನೆ. ಕಾಲಾಂತರದಲ್ಲಿ ಇತರ ಅಕ್ಷರಗಣಗಳಿಂದ ಘಟಿತವಾದ ದಂಡಕಗಳು ಹುಟ್ಟಿದುವಾದರೂ ಮೂಲತಃ ರಗಣವೇ ಅವುಗಳ ಘಟಕವಾಗಿತ್ತು. ರಗಣಬದ್ಧವಾದ ಗದ್ಯದಂಡಕಗಳು ರಗಣಸಮಪರಿಮಾಣದ ಮಾತ್ರಾಗಣಗಳಿಂದಲೂ ನಿರ್ಮಿತವಾಗತೊಡಗಿದುವು. ಆದರೂ ಅವುಗಳ ಮೂಲವಾದ 'ರಗಣಬದ್ಧ ಪದ್ಯ'ವೆಂಬ ನಾಮಧೇಯವನ್ನು ಅವು ಉಳಿಸಿಕೊಂಡುವು. 'ರಘಟಾ' ಎಂದರೆ ರಗಣಘಟಿತವಾದ ಗೀತವೆಂದೇ ಅರ್ಥ. ಈ ಪದದ ತದ್ಭವ ರೂಪವೇ 'ರಗಳೆ' ಎಂಬುದಾಗಿದೆ. ರಗಣೇತರ ಗಣಗಳ ಸಮಪರಿಮಾಣದ ಮಾತ್ರಾ ಗಣಗಳಿಂದ ಬದ್ಧವಾದ ರಗಳೆಗಳು ಸಹ ಅದೇ ಮೂಲನಾಮದಿಂದ ಪ್ರಸಿದ್ಧವಾಗುವಂತಾಯಿತು. (ಜಯಕೀರ್ತಿಯ ಗ್ರಂಥದ ಆ ಭಾಗದ ಉದ್ಧರಣವನ್ನು ಮತ್ತು ಅದರ ವಿವೃತಿಯನ್ನು ನನ್ನ 'ಛಂದೋಗತಿ' ಎಂಬ ನಿಬಂಧದ ನಾಲ್ಕನೆಯ ಪರಿಚ್ಛೇದದಲ್ಲಿ ನೋಡಬಹುದು. {ನಾಲ್ಕನೆಯ ಪರಿಚ್ಛೇದದಲ್ಲಿ 'ಛಂದಸ್ಸು – ಭರತಜಯಕೀರ್ತಿಯರ ಏಕಾಭಿಪ್ರಾಯ' ಎಂಬ ಖಂಡವನ್ನೂ 'ರಗಳೆ (ರಘಟಾ) ಬಂಧದ ವಿಚಾರ' ಎಂಬ 32ನೆಯ ಟಿಪ್ಪಣಿಯನ್ನೂ ಅವಲೋಕಿಸಬಹುದು. – ಸಂ.} ಆದರೂ ರಗಳೆಗಳೆಲ್ಲವೂ ಕನ್ನಡದ ಅನಾದಿಪರಂಪರೆಗನುಗುಣವಾಗಿ ಲಗಾದಿಗಣನಿಷೇಧವನ್ನು ಪ್ರಾಯಃ ಉಳಿಸಿಕೊಂಡಿರುವುದು ಲಕ್ಷಿಸತಕ್ಕ ವಿಷಯವಾಗಿದೆ. [ಉಪರ್ಯುಕ್ತ ರಗಳೆಗಳಲ್ಲದೆ ಪ್ರಾಕೃತಮೂಲದ ಪಜ್ಝಟಿಕಾ ಬಂಧದ ಅನುಕರಣೆಯಾಗಿ ಹುಟ್ಟಿದ ಒಂದು ಬಂಧವಿಶೇಷಕ್ಕೂ ರಗಳೆಯೆಂಬ ಹೆಸರನ್ನೇ ಬಳಸಿರುವುದು ಪಂಪಭಾರತದಲ್ಲಿ ಕಂಡುಬರುತ್ತದೆ. (ಪಜ್ಝಟಿಕಾ ಬಂಧಕ್ಕೂ ಕನ್ನಡದಲ್ಲಿ ರಗಳೆಯೆಂಬ ಹೆಸರನ್ನು ಕೊಟ್ಟಿರುವುದಕ್ಕೆ ಕಾರಣವೇನೆಂದರೆ – ರಗಳೆಗಳ ಒಂದು ವಿಶಿಷ್ಟ ಲಕ್ಷಣವು ಪಜ್ಝಟಿಕಾ ಬಂಧದಲ್ಲಿಯೂ ಇರುವುದಾಗಿದೆ. ಪಾದಾಂತಗಳಲ್ಲಿ ವಿರಾಮಾಕಾಶವಿಲ್ಲದಿರುವುದೇ ರಗಳೆಗಳ ವಿಶಿಷ್ಟಲಕ್ಷಣ. ಪಜ್ಝಟಿಕಾ ಬಂಧದಲ್ಲಿಯೂ ಆ ಲಕ್ಷಣ–

* * * * *

{ಸಾಂಗತ್ಯ ಬಂಧದ ಲಕ್ಷಣನಿರೂಪಣೆ}

ಇವುಗಳಲ್ಲದೆ 'ಸಾಂಗತ್ಯ' ಎಂಬ ಹೆಸರಿನ ಬಂಧಗಳಲ್ಲಿ ಹೇರಳ ಕಾವ್ಯಗಳು ಕನ್ನಡದಲ್ಲಿವೆ. ನಾಗವರ್ಮನ ಕೃತಿಯಲ್ಲಿ ಈ ಬಂಧದ ಉಲ್ಲೇಖ-ವಿಲ್ಲದಿದ್ದರೂ ಇದರ ರಚನೆ ತ್ರಿಮೂರ್ತಿಗಣಗಳಿಂದಲೇ ಆಗಿದೆ. ಉದಾ:-

ಸಿದ್ಧರ । ಸತತ ವಿ । ಶುದ್ಧರ । ಬೋಧ ಸ ।
ಮೃದ್ಧರ । ನೆನೆದು ನಾ । ನೀಗ ॥

---

ವಿರುವುದರಿಂದ ಅದನ್ನೂ ರಗಳೆಯೆಂದು ಹೆಸರಿಸಲಾಯಿತೆಂದು ತಿಳಿಯಬೇಕು.) ಇದಕ್ಕೆ ಅಲ್ಲಿ 'ಮಟ್ಟರಗಳೆ' ಎಂದು ಹೆಸರನ್ನು ಕೊಡಲಾಗಿದೆ. ಈ ಬಂಧದ ಪಾದಗಳ ಕೊನೆಯಲ್ಲಿ ಜಗಣವಿದ್ದೇ ಇರುತ್ತದೆ. ಇದಲ್ಲದೆ 'ಲಯೋತ್ತರ'ವೆಂಬ ಒಂದು ಮಾತ್ರಾಬಂಧವೂ ಹಳಗನ್ನಡ ಕಾವ್ಯಗಳಲ್ಲಿ ಇದೆ. ಈ ಬಂಧದಲ್ಲಿ ಐದು ಪ್ರಭೇದಗಳಿರುವುದನ್ನು ಜಯಕೀರ್ತಿ ನಿರೂಪಿಸಿರುತ್ತಾನೆ. ಇವುಗಳ ಪಾದಮಧ್ಯಗಳಲ್ಲಿ ಜಗಣಗಳಿರಲೇಬೇಕಾಗುತ್ತದೆ. ಪಂಪಭಾರತ-ದಲ್ಲಿ ಒಂದು ಲಯೋತ್ತರವು ಪ್ರಯುಕ್ತವಾಗಿದೆಯಾದರೂ ಮುದ್ರಿತ ಪುಸ್ತಕಗಳಲ್ಲಿ ಅದನ್ನೂ 'ರಗಳೆ' ಎಂದು ಹೆಸರಿಸಲಾಗಿದೆ. (ಲಯೋತ್ತರದ ಪಾದಾಂತಗಳಲ್ಲಿ ವಿರಾಮಾವಕಾಶ-ವಿರುವುದರಿಂದ ಅದನ್ನು ರಗಳೆಯೆಂದು ಹೆಸರಿಸಿದುದು ಉಚಿತವಾಗಿ ತೋರುವುದಿಲ್ಲ) ಪಂಪಭಾರತದ ಲಯೋತ್ತರವು ಪಂಚವಿಧ ಲಯೋತ್ತರಗಳಲ್ಲಿ ಮೊದಲನೆಯ ಪ್ರಭೇದ-ವಾಗಿರುತ್ತದೆ. ನೇಮಿಚಂದ್ರನ ಲೀಲಾವತಿಯಲ್ಲಿರುವ ಲಯೋತ್ತರವು ಎರಡನೆಯ ಪ್ರಭೇದ-ವಾಗಿರುತ್ತದೆ. ಆನುಷಂಗಿಕವಾಗಿ ರಗಳೆಗಳ ಕುರಿತು ಇನ್ನೂ ಒಂದೆರಡು ಮಾತುಗಳನ್ನು ಹೇಳಬಹುದು:- ಕನ್ನಡದಲ್ಲಿ ಪ್ರಸಿದ್ಧವಾದ ರಗಳೆಗಳು - ಲಲಿತ, ಮಂದಾನಿಲ, ಉತ್ಸಾಹ ಎಂಬೀ ಮೂರು. ಲಲಿತವೃತ್ತ, ಮಂದಾನಿಲವೃತ್ತ ಮತ್ತು ಈ ನಿಬಂಧದಲ್ಲಿ ಈ ಮೊದಲೇ ನಿರೂಪಿಸಿರುವ ಉತ್ಸಾಹವೆಂಬ ಜಾತಿ - ಈ ಹೆಸರುಗಳಿಗೆ ಅನುಕ್ರಮವಾಗಿ ಆಧಾರಗಳಾಗಿವೆ. ಆದರೆ ಮಟ್ಟರಗಳೆಯೆಂಬ ಹೆಸರಿನ ಭಾಗವಾಗಿರುವ 'ಮಟ್ಟ' ಎಂಬುದಕ್ಕೆ ಅರ್ಥವೇನೋ ನನಗೆ ತಿಳಿಯುವುದಿಲ್ಲ. ರೂಢಿಯಲ್ಲಿರುವ 'ಮಟ್ಟೆ' ಎಂಬ ಹೆಸರಿನ ತಾಳಕ್ಕೂ ಆ ಬಂಧದ ತಾಳಕ್ಕೂ ಸಾಮ್ಯವು ಕಂಡುಬರುವುದಿಲ್ಲ. ಇದು ನಾಲ್ಕು ಮಾತ್ರೆಗಳ ಆವರ್ತದ ಏಕತಾಳಕ್ಕೆ ಅಳವಡುತ್ತದೆ. ಮುದ್ರಿತ ಗ್ರಂಥದಲ್ಲಿ ಇದಕ್ಕೆ ಮಟ್ಟರಗಳೆಯೆಂಬ ಹೆಸರನ್ನು ಕೊಟ್ಟಿರುವ-ರಾದರೂ ಇದು ಪ್ರಾಕೃತಾದಿಗಳಲ್ಲಿ ಪ್ರಸಿದ್ಧವಾಗಿರುವ ಪಜ್ಝಟಿಕಾ ಬಂಧವೇ ಆಗಿರುವು-ದೆಂಬುದು ಆಯೆರಡು ಬಂಧಗಳನ್ನೂ ಹೋಲಿಸಿದರೆ ಗೊತ್ತಾಗದಿರದು. ಪೊನ್ನನ ಶಾಂತಿ ಪುರಾಣದಲ್ಲಿಯೂ ಇದೇ ಛಂದೋಬಂಧವಿರುವುದು ಕಂಡುಬರುತ್ತದೆ. ಆದರೂ ಅಲ್ಲಿ ಇದಕ್ಕೆ 'ತ್ವರಿತರಗಳೆ'ಯೆಂಬ ಹೆಸರನ್ನು ಕೊಟ್ಟಿರುತ್ತಾರೆ. ಪಂಚಮಾತ್ರಾಗಣಗಳಿಂದ ಬದ್ಧವಾದ ರಗಳೆಯ ಗತಿಗಿಂತ ಈ ಬಂಧದ ಗತಿಯು ಒಂದಿಷ್ಟು ದ್ರುತವಾಗಿ ಇರುವುದರಿಂದ ಇದನ್ನು ತ್ವರಿತ ರಗಳೆಯೆಂದು ಹೆಸರಿಸಬೇಕೆಂಬುದು ಸ್ಪಷ್ಟ. ತಾತ್ಪರ್ಯವಾಗಿ ಹೇಳುವುದಾದರೆ, ರಗಳೆಯೆಂಬ ಹೆಸರಿನ ನಾನಾರೂಪದ ಛಂದೋಬಂಧಗಳು ಮೂಲತಃ ಕನ್ನಡದ ಬಂಧ-ಗಳಾಗಿರದೆ ಪ್ರಾಕೃತಾದಿಗಳ ಅನುಕರಣೆಯಿಂದ ಹುಟ್ಟಿಬಂದವುಗಳೆಂಬುದರಲ್ಲಿ ಸಂದೇಹ-ವಿಲ್ಲವೆಂದು ಹೇಳಬಹುದು.]

ಸಿದ್ಧ ರ । ಸದೊಳು ಲೋ । ಹವನದ್ದಿ । ದಂತಾತ್ಮ ।
ಸಿದ್ಧಿಯ । ಪಡೆವೆನಿ । ನ್ನೇನು ॥

(ಭರತೇಶ ವೈಭವ)

ವಿಷಮಪಾದಗಳಲ್ಲಿ ನಾಲ್ಕು ವಿಷ್ಣುಗಣಗಳೂ, ಸಮಪಾದಗಳಲ್ಲಿ ಎರಡು ವಿಷ್ಣುಗಣಗಳ ಅನಂತರ ಒಂದು ಬ್ರಹ್ಮಗಣವೂ ಇದ್ದರೆ ಸಾಂಗತ್ಯವಾಗುತ್ತದೆ. ತ್ರಿಮೂರ್ತಿಗಣಗಳನ್ನು ಬಿಟ್ಟರೆ ಇದಕ್ಕೆ ಸಮಂಜಸವಾದ ಲಕ್ಷಣವನ್ನು ಹೇಳಲು ಸಾಧ್ಯವೇ ಇಲ್ಲ. 'ಕನ್ನಡ ಕೈಪಿಡಿ'ಯಲ್ಲಿ ಮಾತ್ರೆಗಳ ಲೆಕ್ಕದಿಂದ ಇದರ ಲಕ್ಷಣವನ್ನು ಹೇಳುವ ಪ್ರಯತ್ನಮಾಡಲಾಗಿದೆ; ಆದರೆ ಅದು ಸಿದ್ಧಿಸಲಿಲ್ಲ, ಸಿದ್ಧಿಸುವಂತೆಯೂ ಇಲ್ಲ.[29]

ಮೇಲಿನ ಲಕ್ಷಣವೇ ಇದಕ್ಕೆ ಸಮಂಜಸವಾದುದಾದರೂ ಕವಿಗಳು ಕೆಲವೆಡೆ ವಿಷ್ಣುವಿನ ಬದಲಾಗಿ ಬ್ರಹ್ಮಗಣವನ್ನಿಟ್ಟಿರುವುದು ಕಂಡುಬರುತ್ತದೆ. ಆಗ ಅಲ್ಲಿ ವಿಷ್ಣುಗಣದಷ್ಟೇ ಕಾಲಯಾಪನೆ ಮಾಡಿ ಓದಬೇಕಾಗುತ್ತದೆ. ಆದರೆ ಇಂತಹ ವೈಚಿತ್ರ್ಯಗಳು 'ಭರತೇಶವೈಭವ'ದಂತಹ ಹಳೆಯ ಸಾಂಗತ್ಯಗ್ರಂಥಗಳಲ್ಲಿ ಅಲ್ಲಲ್ಲಿ ಒಂದೊಂದಿದ್ದರೆ, ಹೊನ್ನಮ್ಮನ 'ಹದಿಬದೆಯ ಧರ್ಮ'ದಂತಹ ಅನಂತರಕಾಲೀನ ಸಾಂಗತ್ಯಕಾವ್ಯಗಳಲ್ಲಿ ಮೆಟ್ಟು ಮೆಟ್ಟಿಗೆ ಇವೆ. ತ್ರಿಮೂರ್ತಿಗಣದ ಸ್ವರೂಪವಿಸ್ಮೃತಿ ದಿನ ದಿನಕ್ಕಾಗಿ, ಕೊನೆಗೆ ಸಾಂಗತ್ಯಬಂಧವನ್ನು ತಾಳಕ್ಕೆ ತಕ್ಕಂತೆ, ಬೇಕಾದಲ್ಲಿ ಎಳೆಯಬಹುದೆಂಬ ಅಭಿಪ್ರಾಯ ನೆಲೆಗೊಂಡಂತೆ ತೋರುತ್ತದೆ.

ಸಾಂಗತ್ಯದಲ್ಲಿ ಇನ್ನೊಂದು ಜಾತಿ ಇದೆ. ಇದರಲ್ಲಿ ಸಮಪಾದಗಳ ಕೊನೆಯ ಬ್ರಹ್ಮಗಣಕ್ಕೆ ಬದಲಾಗಿ ವಿಷ್ಣುಗಣ ಬರುತ್ತದೆ. ಉದಾ:- ದೇಪರಾಜನ ಪದ್ಯ-

ಹರಿಯೆನೆ । ಶಂಖ ಚ । ಕ್ರಾಂಕಿತ । ಶಿವನೆನೆ ।
ಸುರಸಿಂಧು । ವಹವಬ್ಜ । ಭವನೆನೆ ॥
ಸರಸತಿ । ಯಾಣ್ಮನಿಂ । ದ್ರನೆನೆ ಬ । ಲಾಹಕ ।
ಪರಿವೃತ । ಮುದ್ರ ಪೂ । ರ್ವ ಸಮುದ್ರ ॥ . ॥

ಇದರಲ್ಲಿ ಕೊನೆಗೆ ನ್ಯೂನಖಂಡವಿಲ್ಲದುದರಿಂದ ಹಾಡಿಗೆ ಮೊದಲಿನ ರೀತಿಯದರಷ್ಟು ಸುಗಮವಲ್ಲದುದರಿಂದಲೇ ಇದು ಅಷ್ಟು ಪ್ರಚಾರಕ್ಕೆ ಬರಲಿಲ್ಲ-ವೆಂದು ತೋರುತ್ತದೆ.[30]

---

29. ೧೯೨೮ರಲ್ಲಿ ಪ್ರಕಟವಾದ ಕನ್ನಡ ಕೈಪಿಡಿಯ ಪ್ರಥಮಮುದ್ರಣದಲ್ಲಿ ಸಾಂಗತ್ಯದ ಲಕ್ಷಣವನ್ನು ಮಾತ್ರೆಗಳ ಗಣನೆಯಿಂದ ಹೇಳುವ ಪ್ರಯತ್ನ ಮಾಡಿದ್ದು ಸರಿಯಲ್ಲವೆಂಬುದನ್ನು ಈ ನನ್ನ ನಿಬಂಧದಲ್ಲಿ ತೋರಿಸಿದ ಮೇಲೆ ೧೯೩೮ರಲ್ಲಿ ಪ್ರಕಟವಾದ ಅದರ ದ್ವಿತೀಯ-ಮುದ್ರಣದಲ್ಲಿ ಕೈಪಿಡಿಕಾರರು ಆ ತಪ್ಪನ್ನು ತಿದ್ದಿಕೊಂಡು ನನ್ನೀ ನಿಬಂಧದಲ್ಲಿ ಹೇಳಲ್ಪ-ಟ್ಟಂತೆಯೇ ಲಕ್ಷಣನಿರೂಪಣೆ ಮಾಡಿರುವುದು ಮತ್ತು ಸಾಂಗತ್ಯವು ತ್ರಿಮೂರ್ತಿಗಣ-ಬಂಧವೆಂದೇ ಸರ್ವತ್ರ ಸ್ವೀಕೃತವಾಗಿರುವುದು ಸಂತೋಷಾಸ್ಪದವಾದ ಸಂಗತಿಯಾಗಿದೆ.

30. ಸಾಂಗತ್ಯದ ಈ ಸ್ವರೂಪಕ್ಕೆ 'ಸೊಬಗಿನ ಸೋನೆ' ಎಂಬ ಹೆಸರೂ ಪ್ರಸಿದ್ಧವಾಗಿದೆ.

ಕನ್ನಡದಲ್ಲಿ ಪ್ರಚಾರದಲ್ಲಿರುವ ಎಷ್ಟೆಷ್ಟೋ ಹಾಡುಗಳು ಈ ಗ್ಗಣ ಗಳಿಂದಲೇ ಘಟಿತವಾಗಿವೆ. ಕೆಲವು ಹಾಡುಗಳು ಷಟ್ಪದಿಗಳಲ್ಲಿರುವ (೩, ೪, ೫) ಮಾತ್ರಾಗಣಬದ್ಧವಾಗಿ ರಚಿತವಾಗಿದೆ; ಇನ್ನು ಕೆಲವು ಇವೆರಡರ ಸಂಕರವಾಗಿವೆ: ಗೋವಿನ ಕಥೆಯ ಬಂಧವು ಈ ಸಂಕರಜಾತಿಗೆ ಸೇರಿದುದು.[31]

*     *     *     *     *

{ಯತಿಯೆಂದರೇನು?}

ಇಲ್ಲಿಗೆ ಕನ್ನಡಬಂಧಗಳ ನನ್ನ ವಿವೇಚನೆಯನ್ನು ಮುಗಿಸಿ, ಯತಿಯ ವಿಷಯವಾಗಿ ನಾಲ್ಕು ಮಾತುಗಳನ್ನು ಹೇಳಿ, ಬಹಳ ಬೆಳೆದ ಈ

---

31. ಗೋವಿನ ಕಥೆಯ ಮೊದಲನೆಯ ಪದ್ಯವು ಇಂತಿದೆ:-

ಧರಣಿ । ಮಂಡಲ । ಮಧ್ಯ । ದೊಳಗೆ .
ಮೆರೆಯು । ತಿಹ ಕ । ರ್ಣಾಟ । ದೇಶದಿ
ಇರುವ । ಕಾಳಿಂಗ । ನೆಂಬ । ಗೊಲ್ಲನ
ಪರಿಯ । ನಾನೆಂತು । ಪೇಳ್ವೆನು । . ।

ಇದು ಗಣನಿಯಮವನ್ನು ಅಲಕ್ಷಿಸಿ ಕೇವಲ ತಾಳದ ಆಧಾರದಿಂದ ರಚಿಸಿದ ಬಂಧ-ವಾಗಿರುತ್ತದೆ. ತಾಳದ ದೃಷ್ಟಿಯಿಂದ ಹೇಳುವುದಾದರೆ ಇದು ಏಳು ಮಾತ್ರೆಗಳ ಆವರ್ತದ ತ್ರಿವುಡೆ ತಾಳದ ಬಂಧವಾಗಿದೆ. ಈ ಗೋವಿನ ಕಥೆಯ ಸ್ವರೂಪವನ್ನು ಅವಲಂಬಿಸಿ ಕೀ. ಶೇ. ಪಂಜೆ ಮಂಗೇಶರಾಯರು ವಿಶುದ್ಧವಾದೊಂದು ಮಾತ್ರಾಬಂಧವನ್ನು ನಿರ್ಮಿಸಿಕೊಂಡು ಅದರಲ್ಲಿ ಹಲವು ರಚನೆಗಳನ್ನು ಮಾಡಿದ್ದಾರೆ. ಉದಾ:- ಡೊಂಬರ ಚೆನ್ನೆ, ಕಡೆಕಂಜಿ - ಇತ್ಯಾದಿ. ಅವರು ನಿರ್ಮಿಸಿದ ಪದ್ಯಸ್ವರೂಪ ಹೀಗಿದೆ-

ಬೆರಗು । ಕಣ್ಣಿನ । ಬೆರಳ । ಮೀಸೆಯ ।
ಬೆರಸಿ । ದಾನಗು । ಮೋರೆಯ ॥
ಅರಸ । ನಿದ್ದನು । ಡೊಂಬ । ರಾಟಕೆ ।
ಸೆರೆಯ । ಸಿಕ್ಕಿದ । ಮನದಲಿ ॥ . ॥

ಇದೊಂದು ಅಚ್ಚುಕಟ್ಟಾದ ಅರ್ಧಸಮ ಮಾತ್ರಾಬಂಧವೆಂಬುದು ಸ್ಪಷ್ಟ.
ವಿ. ಸೂ:- ದಾಸರ ಪದಗಳೆಂದು ಪ್ರಸಿದ್ಧವಾಗಿರುವ 'ಪದ'(ಗೇಯಬಂಧ)ಗಳನ್ನು ಮತ್ತು ಯಕ್ಷಗಾನದ ನಾನಾಸ್ವರೂಪದ 'ಪದ'ಗಳನ್ನು ತ್ರಿಮೂರ್ತಿಗಣ ದೃಷ್ಟಿಯಿಂದ ಪರೀಕ್ಷಿಸಿದರೆ ಈ ಗಣಗಳ ಪ್ರಭಾವವು ಕನ್ನಡದ ಹಾಡುಗಳಲ್ಲೆಲ್ಲ ಎಷ್ಟರ ಮಟ್ಟಿಗೆ ವ್ಯಾಪಿಸಿಕೊಂಡಿದೆ ಎಂಬುದು ಪ್ರತ್ಯಕ್ಷವಾಗುತ್ತದೆ.

ಉಪನ್ಯಾಸವನ್ನು ಮುಗಿಸುವೆನು. ಕನ್ನಡದಲ್ಲಿ 'ಯತಿ' ಇದೆಯೋ ಇಲ್ಲವೋ, ಇದ್ದರೆ ಅವಶ್ಯವೋ ಅಲ್ಲವೋ, ಅದನ್ನು ಪೂರ್ವಕವಿಗಳು ಉಲ್ಲಂಘಿಸಿರುವರೋ ಇಲ್ಲವೋ ಎಂಬುದೊಂದು ವಿವಾದಗ್ರಸ್ತ ವಿಷಯ. ನಾಗವರ್ಮನು ಆ ವಿಷಯದಲ್ಲಿ ಎರಡು ಮಾತುಗಳನ್ನು ಹೇಳಿದ್ದಾನೆ; –

ಯತಿಯೆಂಬುದು ಗಣನಿಯತಂ
ಪ್ರತೀತಮುಸಿರ್ದಾಣಮಂತದಂ ದಾಂಟಲ್ಕಾ ॥
ಯತಿ ಕೆಡುಗುಂ ದಾಂಟಿದೊಡಾ
ಯತಿ ಕಿಡೆ ಕವಿತಾಭಿಧಾನಮೇನೆಸೆದಪುದೇ ॥ . ॥

ಯತಿಯೆಂಬುದು ಗಣನಿಯಮ
ಪ್ರತೀತಮೆಂದರೆಬರೊಲ್ವರಂತದನೆ ಕೆಲರ್ ॥
ಶ್ರುತಿಸುಭಗಂ ಸ್ವಚ್ಛಂದಂ
ಯತಿಯೆಂದರ್ ಕಪಿಳ ಪಿಂಗಳಾದಿಗಳೊಲ್ಲರ್ ॥ . ॥[32]

---

32. {ಯತಿ ವಿಚಾರ :} ನಾಗವರ್ಮನ ಈ ಎರಡು ಪದ್ಯಗಳ ಆಶಯವು ನಮ್ಮ ಮನದಟ್ಟಾಗ ಬೇಕಾದರೆ, ಯತಿಯೆಂದರೇನು? ಅದರ ಕುರಿತು ಪುರಾತನ ಛಂದಃಶಾಸ್ತ್ರಕಾರರೊಳಗೆ ಇದ್ದ ಮತಭೇದವೇನು? ಎಂಬುದರ ಅರಿವು ನಮಗೆ ಬೇಕಾಗುತ್ತದೆ. ಆದುದರಿಂದ ಅದರ ವಿವರಣವನ್ನು ಇಲ್ಲಿ ಮಾಡುವುದು ಅವಶ್ಯವೆಂದು ನನಗೆ ಕಾಣುತ್ತದೆ:–

ಸಂಸ್ಕೃತ ಛಂದಃಶಾಸ್ತ್ರಗ್ರಂಥಗಳಲ್ಲಿ 'ಯತಿ' ಎಂಬ ಸಂಜ್ಞೆ ಪ್ರಯುಕ್ತವಾಗಿರುವುದು ವೃತ್ತಗಳ – ಎಂದರೆ ಗುರುಲಘುಸ್ಥಿರವಾದ ಪದ್ಯಗಳ – ಲಕ್ಷಣನಿರೂಪಣೆಯ ಸಂದರ್ಭ-ಗಳಲ್ಲಿ ಮಾತ್ರ. ಯತಿಯೆಂಬ ಸಂಜ್ಞೆಯ ಅರ್ಥವು ತಡೆ (= check), ಎಂದರೆ ನಿಲುಗಡೆ ಎಂದಾಗಿರುವುದರಿಂದ, ವೃತ್ತಗಳನ್ನು ಪಠಿಸುವಾಗ ಅವುಗಳ ಗತಿಗೆ – ಎಂದರೆ ಧಾಟಿಗೆ ಅನುಗುಣವಾಗಿ ಉಂಟಾಗುವ ನಿಲುಗಡೆಯ ಸ್ಥಾನಗಳಿಗೆ ಆದಿಯಲ್ಲಿ ಆ ಹೆಸರು ಕೊಡ-ಲ್ಪಟ್ಟಿತು. ಪ್ರತಿಯೊಂದು ವೃತ್ತವೂ ಪಾದಾಂತದಲ್ಲಿ ನಿಲುಗಡೆಯನ್ನು ಪಡೆಯುತ್ತದೆ. ಮಾತ್ರವಲ್ಲ, ದೀರ್ಘ ಪರಿಮಾಣದ ವೃತ್ತಗಳಲ್ಲಿ ಪಾದಮಧ್ಯಗಳಲ್ಲಿಯೂ ನಿಲುಗಡೆಗಳೊದಗುತ್ತವೆ. ಆ ನಿಲುಗಡೆಗಳು ಆ ಛಂದೋರೂಪದ ಸಹಜಲಕ್ಷಣಗಳಾಗಿರುವುದರಿಂದ ಪದ್ಯಲಕ್ಷಣನಿರೂಪಣೆ ಮಾಡುವಾಗ ಆ ನಿಲುಗಡೆಯ ಸ್ಥಾನಗಳನ್ನು ಗುರುತಿಸಿ ಹೇಳದಿದ್ದರೂ ಉಕ್ತ ಲಕ್ಷಣವು ಅಪೂರ್ಣವೆನಿಸಲಾರದುದರಿಂದ ಛಂದಃಶಾಸ್ತ್ರದಲ್ಲಿ ಆ ಸ್ಥಾನಗಳನ್ನು ನಿರ್ದೇಶಿಸುವ ಅವಶ್ಯ-ಕತೆಯಿಲ್ಲವೆಂಬುದು ಛಂದಃಶಾಸ್ತ್ರಕಾರರಲ್ಲಿ ಕೆಲವರ ಅಭಿಮತವಾಗಿತ್ತು. ಆದರೆ ಪಠನ ಕಾಲದಲ್ಲಿ ಆ ಸ್ಥಾನಗಳಲ್ಲಿ ಒಂದಿಷ್ಟು ವಿರಮಿಸಬೇಕಾಗಿರುವ ಕಾರಣ ಆ ನಿಲುಗಡೆಯ ಸ್ಥಾನಗಳಲ್ಲಿ ಒಂದು ಪದವು (= word) ಕೊನೆಗೊಳ್ಳದಿದ್ದರೆ ಪದ್ಯಾರ್ಥವನ್ನು ಗ್ರಹಿಸುವುದು ಕ್ಲೇಶದಾಯವಾಗುವುದರಿಂದ ಅಲ್ಲಿ ಪದಗಳು ಬೇರೆ ಬೇರಾಗಿರಬೇಕೆಂಬ ಸೂಚನೆಯನ್ನು ಕವಿಗಳಿಗೆ ಕೊಡುವುದು ಅವಶ್ಯವೆಂದೂ ಆದ ಕಾರಣ ವೃತ್ತಲಕ್ಷಣವನ್ನು ಹೇಳುವಾಗ ಆ ಸ್ಥಾನಗಳನ್ನು ನಿರ್ದೇಶಿಸಲೇಬೇಕಾಗುತ್ತದೆಂದೂ ಮತ್ತೆ ಕೆಲವರು ಛಂದಃಶಾಸ್ತ್ರಕಾರರ ಅಭಿಪ್ರಾಯವಾಗಿತ್ತು. ಹೀಗೆ ಪುರಾತನ ಛಂದಃಶಾಸ್ತ್ರಕಾರರಲ್ಲಿ ಎರಡು ಪಕ್ಷಗಳುಂಟಾದುವು.

ನಾಗವರ್ಮನು ಇಲ್ಲಿ ಹೇಳಿರುವುದು ಆ ಎರಡು ಅಭಿಪ್ರಾಯಗಳ ಸಂಗ್ರಹವಾಗಿದೆ. ಆ ಸಂಗ್ರಹದ ತಾತ್ಪರ್ಯ ಹೀಗೆ:-

"ಯಾವುದೊಂದು ವೃತ್ತವನ್ನು ಅದಕ್ಕೆ ನಿಯಮಿತವಾದ ಗಣಗಳಿಂದ ರಚಿಸಿದರೆ ಅದನ್ನು ಪಠಿಸುವಾಗ ಸಹಜವಾಗಿ ಅದರಲ್ಲಿ ಕೆಲವು ಕಡೆಗಳಲ್ಲಿ ವಿರಾಮವುಂಟಾಗುತ್ತದೆ. ಅಂತಹ ವಿರಾಮಕ್ಕೆ ಯತಿಯೆಂಬ ಹೆಸರು ಪ್ರಸಿದ್ಧವಾಗಿದೆ. ಅದನ್ನು ಉಲ್ಲಂಘಿಸುವುದು, ಎಂದರೆ, ಅಲ್ಲಿ ವಿರಮಿಸುವುದಕ್ಕೆ ಎಡೆಯಿಲ್ಲದಾಗುವಂತೆ ಪದರಚನೆ ಮಾಡುವುದು ಅನುಚಿತ. ಗಣನಿಯಮಾನುಸಾರವಾಗಿ ಪದರಚನೆ ಮಾಡಿದೊಡನೆ ಆ ಯತಿಸ್ಥಾನಗಳು ಗೋಚರಿಸುತ್ತವೆ. ಹೀಗೆ ಅವು ಸಹಜವಾಗಿ ಉದ್ಭವಿಸುವುದರಿಂದ ಪದರಚನೆ ಅಲ್ಲಿ ಕಿವಿಗೆ ಹಿತವಾಗಿದ್ದರೆ ಸಾಕು, ಅದನ್ನು ಗುರುತಿಸಿ ಲಕ್ಷಣ ಹೇಳುವ ಅವಶ್ಯಕತೆಯಿಲ್ಲ – ಎಂಬುದು ಕೆಲವರ ಮತ. ಆದರೆ ಕಪಿಳ ಪಿಂಗಳ ಮೊದಲಾದ ಛಂದಃಶಾಸ್ತ್ರಕಾರರು ಇದನ್ನೊಪ್ಪುವುದಿಲ್ಲ; ಲಕ್ಷಣ ನಿರೂಪಣೆ-ಯಲ್ಲಿ ಆ ಸ್ಥಾನಗಳನ್ನು ನಿರ್ದೇಶಿಸುವುದು ಅವಶ್ಯವೆಂಬುದು ಅವರ ಅಭಿಮತವಾಗಿದೆ."

ಮೇಲೆ ಹೇಳಲಾದ ಪಕ್ಷಗಳೊಳಗೆ ಪಿಂಗಲಾಚಾರ್ಯನು ಎರಡನೆಯ ಪಕ್ಷದವ-ನಾಗಿದ್ದುದರಿಂದ ಅವನು ತನ್ನ ಗ್ರಂಥದಲ್ಲಿ 'ಯತಿರ್ವಿಚ್ಛೇದಃ' ಎಂದು ಸೂತ್ರಿಸಿ 'ಯತಿ' ಎಂಬ ಸಂಜ್ಞೆಗೆ 'ವಿಚ್ಛೇದ' – ಎಂದರೆ ಬೇರಾಗುವಿಕೆ – ಎಂಬ ಹೊಸ ಅರ್ಥವನ್ನು ಕೊಟ್ಟನು. ಇದರ ಪರಿಣಾಮವಾಗಿ ಯತಿಯೆಂದರೆ ನಿಲುಗಡೆಯೆಂಬ ಹಳೆಯ ಅರ್ಥವು ಮಸುಕಾಗಿ 'ಪದಗಳು ಬೇರಾಗುವಿಕೆ' ಎಂಬರ್ಥವೇ ರೂಢವಾಗಿಬಿಟ್ಟಿತು. ಪಿಂಗಲಾ-ಚಾರ್ಯನು ವೃತ್ತಲಕ್ಷಣನಿರೂಪಣೆ ಮಾಡುವಲ್ಲೆಲ್ಲ ಅವುಗಳ ಗತಿಗೆ ಎಲ್ಲೆಲ್ಲಿ ನಿಲುಗಡೆ-ಗಳೊದಗುತ್ತವೆಯೋ ಆ ಸ್ಥಾನಗಳಲ್ಲಿ ಮಾತ್ರ ಯತಿನಿರ್ದೇಶ ಮಾಡಿರುತ್ತಾನೆ. ಇದರಿಂದ ಯತಿಸ್ಥಾನಗಳಲ್ಲಿ ಬರತಕ್ಕ ವಿಚ್ಛೇದಗಳು ಮಾತ್ರ 'ಯತಿ' ಎಂಬ ಸಂಜ್ಞೆಗೆ ಅರ್ಹಗಳೆಂಬುದು ಅವನ ಅಭಿಪ್ರಾಯವಾಗಿತ್ತೆಂದು ಸ್ಪಷ್ಟವಾಗುತ್ತದೆ. ಆದರೆ ಇಂದು ಯತಿ ಎಂಬ ಸಂಜ್ಞೆ ಅಷ್ಟೇ ಅರ್ಥವನ್ನು ಕೊಡುವ ಪದವಾಗಿ ಉಳಿಯದೆ ಒಂದು ಪದ್ಯದೊಳಗೆ ಬರುವ ಪ್ರತಿಯೊಂದು ಪದದ ಕೊನೆಯಲ್ಲೂ ಬರುವ ವಿಚ್ಛೇದವನ್ನು ತಿಳಿಸುವ ಸಂಜ್ಞೆಯಾಗಿ ಪರಿಣಮಿಸಿರುತ್ತದೆ. ಈ ಪರಿಣಾಮಕ್ಕೆ ಕಾರಣಭೂತರಾದವರಲ್ಲಿ ಆಧುನಿಕರು ಮಾತ್ರವಲ್ಲ; ಪುರಾತನರೂ ಹಲವರು ಇರುವರು. ಯತಿಸ್ಥಾನಗಳಲ್ಲಿ ಪದಗಳಿಗೆ ಬರಬೇಕಾದ ವಿಚ್ಛೇದವನ್ನು ಮಾತ್ರ ಪಿಂಗಲಾಚಾರ್ಯನು 'ಯತಿ' ಎಂದು ಹೇಳಿದ್ದೆಂಬುದನ್ನು ಸಾಕಷ್ಟು ಗ್ರಹಿಸದೆಯೋ ಏನೋ ಪಿಂಗಲೋತ್ತರ ಕಾಲದ ಶಾಸ್ತ್ರಕಾರರು, 'ವಿರಾಮೋ ಯತಿಃ', 'ಯತಿರ್ವಿಚ್ಛೇದಸಂಜ್ಞಿತಾ' – ಇತ್ಯಾದಿಯಾಗಿ ಯತಿಗೆ ಇಷ್ಟನ್ನೇ ಲಕ್ಷಣವ್ಯಾಖ್ಯೆಯಾಗಿ ಹೇಳಿಬಿಟ್ಟುದರಿಂದ, ಪದ್ಯದೊಳಗಿನ ಪದಗಳು ವಿಚ್ಛೇದಗೊಂಡಲ್ಲೆಲ್ಲ ಯತಿಯಿರುವುದೆಂಬ ಅಭಿಪ್ರಾಯವು ಮುಂದೆ ನೆಲೆಗೊಳ್ಳು-ವಂತಾಯಿತು. ಇದೂ ಅಲ್ಲದೆ "ಯತಿಯೆಂಬುದು... ಉಸಿರ್ದಾಣಂ" ಎಂದು ನಾಗವರ್ಮನು ಯತಿಗೆ ಲಕ್ಷಣವ್ಯಾಖ್ಯೆಯನ್ನು ಮಾಡಿದುದರ ಪರಿಣಾಮವಾಗಿ ಯತಿಯೆಂಬುದು ಪದ್ಯ-ಪಠನದಲ್ಲಿ ಉಸಿರು ನಿಲ್ಲಿಸಬೇಕಾದ ಅಥವಾ ನಿಲ್ಲಿಸಬಹುದಾದ ಸ್ಥಾನವೆಂಬ ಒಂದಿಷ್ಟು ಹೊಸತಾದ ಅರ್ಥವೂ ಕನ್ನಡಿಗರಲ್ಲಿ ರೂಢಮೂಲವಾಯಿತು. [ನಾಗವರ್ಮನು ಯತಿಗೆ ಲಕ್ಷಣವನ್ನು "ಯತಿಯೆಂಬುದು... ಉಸಿರ್ದಾಣಂ (ಉಸಿರ್ + ತಾಣ – ಉಸಿರತಾಣ; ಎಂದರೆ ಶ್ವಾಸದ ಸ್ಥಾನ) ಎಂದು ಹೇಳಿರುತ್ತಾನೆ. ಆಧುನಿಕ ಕನ್ನಡ ವಿದ್ವಾಂಸರೆಲ್ಲರೂ ನಾಗವರ್ಮನು ಹೇಳಿದ ಈ ಯತಿಲಕ್ಷಣವನ್ನೇ (=ಯತಿಯೆಂದರೆ ಪದ್ಯವನ್ನು ಪಠಿಸುವಾಗ ಉಸಿರು ನಿಲ್ಲಿಸುವ ಅಥವಾ ಉಸಿರೆಳೆದುಕೊಳ್ಳುವ ಸ್ಥಾನ) ಸ್ವೀಕರಿಸಿರುತ್ತಾರೆ. ಅಷ್ಟು ಮಾತ್ರವಲ್ಲ ಕವಿರಾಜಮಾರ್ಗದ 'ಯತಿಯೆಂಬುದುಸಿರ್ವ ತಾಣಂ' ಎಂಬ ಉಕ್ತಿಯೂ

ನಾಗವರ್ಮನು ಹೇಳಿರುವ ಯತಿಲಕ್ಷಣವೂ ಸಮಾನಾರ್ಥಕಗಳೆಂದು ಭಾವಿಸಿರುತ್ತಾರೆ. (ನಾನೂ ಹಿಂದೆ ಹೀಗೆಯೇ ಭಾವಿಸಿದ್ದೆ. ಮತ್ತು ೧೯೮೫ರಲ್ಲಿ ಪ್ರಕಟವಾದ 'ಛಂದೋಗತಿ' ಎಂಬ ನನ್ನ ಗ್ರಂಥದಲ್ಲಿಯೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೆ. {'ಛಂದೋಗತಿ' ನಿಬಂಧದ ಎಂಟನೆಯ ಪರಿಚ್ಛೇದದ 74ನೆಯ ಟಿಪ್ಪಣಿಯಲ್ಲಿ ಈ ವಿಚಾರವಿದೆ. – ಸಂ.} ಆದರೆ ಇತ್ತೀಚೆ ಈ ವಿಷಯದಲ್ಲಿ ಹೆಚ್ಚಿನ ಚಿಂತನ ಮಾಡಿದಾಗ 'ಉಸಿರ್ವ ತಾಣಂ' ಎಂಬುದೂ 'ಉಸಿರ್ದಾಣಂ' ಎಂಬುದೂ ಒಂದೇ ಅರ್ಥವನ್ನು ಹೇಳುವಂಥವುಗಳಲ್ಲ ಎಂಬುದು ಮನವರಿಕೆಯಾಯಿತು.) ಉಸಿರ್ವತಾಣಂ – ಎಂದರೆ 'ಹೇಳುವ ಸ್ಥಾನ' ಎಂಬರ್ಥವಾಗಬಹುದೇ ಹೊರತು 'ಉಸಿರಿನ ಸ್ಥಾನ' (= ಉಸಿರ್ದಾಣ) ಎಂದಾಗುವುದು ಅಸಂಭವ. ಶಬ್ದಮಣಿದರ್ಪಣಕಾರನು ತನ್ನ ಧಾತು ಪಾಠದಲ್ಲಿ "ಉಸಿರ್ – ಭಾಷಣೇ" ಎಂದು ಉಸಿರ್ ಎಂಬುದಕ್ಕೆ ಒಂದೇ ಅರ್ಥವನ್ನು ಕೊಟ್ಟಿರುತ್ತಾನೆ. ಹಳೆಯ ಕವಿ ಪ್ರಯೋಗಗಳಲ್ಲಿಯೂ ಉಸಿರ್ ಎಂಬ ಕ್ರಿಯಾವಾಚಕಕ್ಕೆ (verb) 'ಹೇಳು' ಎಂಬರ್ಥವೇ ಸರ್ವತ್ರ ಕಂಡು ಬರುತ್ತದಲ್ಲದೆ 'ಉಸಿರು ಬಿಡು' ಎಂಬರ್ಥದ ಪ್ರಯೋಗವನ್ನು ನಾನೆಲ್ಲಿಯೂ ಕಂಡಿಲ್ಲ ('ಉಸಿರ್' ಎಂಬುದು ನಾಮವಾಚಕವಾದಾಗ ಅದಕ್ಕೆ ಶ್ವಾಸ ಎಂಬರ್ಥ ಬರುವು-ದರಿಂದ ಉಸಿರ್ ಎಂಬ ಧಾತುವಿಗೆ ಮೂಲತಃ 'ಉಸಿರಾಡು' ಎಂಬರ್ಥವಿದ್ದಿರಬೇಕೆಂಬುದು ಕಿಟ್ಟೆಲ್ ಸಾಹೇಬರ ಊಹೆಯಿದ್ದಂತೆ ತೋರುತ್ತದೆ. ಅವರು ತಮ್ಮ ನಿಘಂಟುವಿನಲ್ಲಿ ಉಸಿರ್ ಎಂಬುದಕ್ಕೆ ಅರ್ಥವನ್ನು ಕೊಡುವುದಕ್ಕಿಂತ ಮೊದಲು 'To Breathe' ಎಂಬುದಾಗಿ ಆವರಣದೊಳಗೆ ಕೊಟ್ಟು ತದನಂತರ ಆ ಶಬ್ದದ ಬೇರೆ ಬೇರೆ ಅರ್ಥಗಳನ್ನೂ ಆಯಾ ಅರ್ಥದ ಪ್ರಯೋಗಸಂದರ್ಭಗಳನ್ನೂ ಉದಾಹರಿಸಿರುತ್ತಾರೆ ಹೊರತು 'ಉಸಿರಾಡು' ಎಂಬ-ರ್ಥದಲ್ಲಿ ಆ ಪದವು ಪ್ರಯುಕ್ತವಾದ ಒಂದೇ ಒಂದು ಸಂದರ್ಭವನ್ನೂ ಉದಾಹರಿಸಲು ಅವರಿಗೆ ಸಾಧ್ಯವಾಗಲಿಲ್ಲ. ಇದರಿಂದ ಅವರಿಗೆ ಅಂತಹ ಪ್ರಯೋಗವೆಲ್ಲಿಯೂ ಲಭಿಸಲಿಲ್ಲ-ವೆಂಬುದು ಸ್ಪಷ್ಟ.) ಇದರಿಂದ 'ಉಸಿರ್ವ ತಾಣಂ' ಎಂಬ ಮಾತಿಗೆ 'ಉಸಿರು ಬಿಡುವ ಅಥವಾ ಉಸಿರೆಳೆದುಕೊಳ್ಳುವ ಸ್ಥಾನ' ಎಂದು ಅರ್ಥಮಾಡುವುದು ಸರಿಯಾಗುವಂತಿಲ್ಲ; ಆ ಮಾತಿಗೆ 'ಹೇಳುವ ಸ್ಥಾನ' ಎಂಬರ್ಥವನ್ನೇ ಮಾಡಬೇಕಾಗಿದೆ. ಯತಿಯೆಂಬುದು ಉಸಿರಾಡುವ ಸ್ಥಾನ ಎಂಬುದೇ ಕವಿರಾಜಮಾರ್ಗಕಾರನ ಆಶಯವಾಗಿರುತ್ತಿದ್ದರೆ 'ಯತಿ-ಯೆಂಬುದುಸಿರ ತಾಣಂ' ಎಂದು ನೇರವಾಗಿ ಅವನು ಹೇಳಬಹುದಾಗಿತ್ತು. ಹಾಗೆ ಹೇಳದೆ ಭಾಷೆಯಲ್ಲಿ ಬೇರೆಲ್ಲಿಯೂ ಪ್ರಯುಕ್ತವಾಗಿರುವುದು ಕಂಡುಬಾರದ ಅರ್ಥದಲ್ಲಿ 'ಉಸಿರ್ವ' ಎಂಬ ಪದಪ್ರಯೋಗವನ್ನು ಅವನೇಕೆ ಮಾಡಬೇಕಿತ್ತು? ಇದು ನಾವು ಚಿಂತಿಸಬೇಕಾದ ವಿಷಯವಾಗಿದೆ. ಮತ್ತು 'ಉಸಿರ್ವ ತಾಣಂ' ಎಂಬುದಕ್ಕೆ 'ಉಸಿರ ತಾಣಂ' ಎಂಬ ಪಾಠಾಂ-ತರವಾದರೂ ದೊರಕಿಲ್ಲವಾದುದರಿಂದ ಗ್ರಂಥಕಾರನು 'ಉಸಿರ್ವ ತಾಣಂ' ಎಂದೇ ಹೇಳಿ-ರುವನೆಂದು ನಿಶ್ಚಯಿಸಬೇಕಾಗುತ್ತದೆ. ಕವಿರಾಜಮಾರ್ಗದ ಆ ಸಂದರ್ಭದ ಪದ್ಯ ಹೀಗಿದೆ:-

> ಯತಿಯೆಂಬುದುಸಿರ್ವ ತಾಣಂ
> ಕೃತಾಸ್ಪದಂ ವೃತ್ತಜಾತಿ ಪದಪದ್ಧತಿಯೊಳ್ ।
> ಸತತಂ ಛಂದೋವಿದಿತ
> ಪ್ರತೀತ ಶಾಸ್ತ್ರೋಕ್ತಮಾರ್ಗದಿಂದಱಿವುದದಂ ॥ . ॥

(ಕ.ರಾ.ಮಾ. ಪ್ರಥಮ ಪರಿಚ್ಛೇದ-೭೧)

ಇದರ ಪೂರ್ವಾರ್ಧದ ಅನ್ವಯವನ್ನು ಎರಡು ರೀತಿಯಲ್ಲಿ ಮಾಡಬಹುದು:

೧) ಯತಿಯೆಂಬುದು ವೃತ್ತ ಜಾತಿ ಪದಪದ್ಧತಿಯೊಳ್ ಉಸಿರ್ವ ಕೃತಾಸ್ಪದಂ ತಾಣಂ. (ಪದ್ಧತಿ = ಸರಣಿ, line, row – ಆಪಟೆ ನಿಘಂಟು. ಇಲ್ಲಿ ಉಸಿರ್ವ ತಾಣಂ ಎಂಬುದು ಸಮಾಸಪದವೆಂದು ಗ್ರಹಿಸಬೇಕಾಗಿಲ್ಲ. ಕೃಲ್ಲಿಂಗವು ವ್ಯಸ್ತವಾಗಿಯೂ ಭಾಷೆಯಲ್ಲಿ ಪ್ರಯುಕ್ತ-ವಾಗುತ್ತದೆ. ಉದಾ:– ಹಿಮಾಲಯದಿಂದ ಇಳಿದು ಬರುವ ಉತ್ತರ ಭಾರತದ ನದಿಗಳೊಳಗೆ ಶತದ್ರು(ಸಟ್ಲೆಜ್)ವಿಗೆ ಕಡಿದಷ್ಟು ದೀರ್ಘವಾದ ಕಾಲುವೆಗಳನ್ನು ಬೇರಾವ ನದಿಗೂ ಕಡಿದಿರು-ವುದಿಲ್ಲ. ಈ ವಾಕ್ಯದಲ್ಲಿ 'ಇಳಿದು ಬರುವ' ಎಂಬ ಕೃಲ್ಲಿಂಗದ ವಿಶೇಷ್ಯವು 'ನದಿಗಳೊಳಗೆ' ಎಂಬುದಾಗಿದೆ ಹೊರತು ಅದರ ಸಮೀಪಪದದಲ್ಲಿರುವ 'ಉತ್ತರ ಭಾರತದ' ಎಂಬುದಲ್ಲ. ಇಂತಹ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುವ ಕೃಲ್ಲಿಂಗಗಳನ್ನು ಅವ್ಯಯಗಳೆಂದು ತಿಳಿಯಬೇಕಾಗಿ ಭಟ್ಟಾಕಳಂಕನು ತನ್ನ ಶಬ್ದಾನುಶಾಸನದಲ್ಲಿ ಸೋದಾಹರಣವಾಗಿ ನಿರೂಪಿಸಿರುತ್ತಾನೆ. ಆಸಕ್ತರು ಅದನ್ನು ಪರಾಮರ್ಶಿಸಲಿ.) ಈ ಅನ್ವಯಕ್ಕನುಗುಣವಾಗಿ ಅದರ ಅರ್ಥ ಹೀಗೆ:– ವೃತ್ತಗಳ ಮತ್ತು ಜಾತಿಗಳ ಪದಸರಣಿಯಲ್ಲಿ (ಛಂದಃಶಾಸ್ತ್ರದಲ್ಲಿ) ಹೇಳುವ (=ಹೇಳಲ್ಪಡುವ) ಎಂದರೆ ಪ್ರೋಕ್ತವಾಗಿರುವ, ಕೃತಾಸ್ಪದವಾದ ಎಂದರೆ ಎಡೆಯನ್ನು ಪಡೆದಿರುವ ಅರ್ಥಾತ್ ಪದವಿ-ಚ್ಛೇದವುಳ್ಳ ಸ್ಥಾನವು ಯತಿಯೆನ್ನಿಸಿಕೊಳ್ಳುತ್ತದೆ. (ಕನ್ನಡದ ಸಕರ್ಮಕ ಕೃದಂತಪದಗಳು ಕರ್ತರಿ ಕರ್ಮಣಿ ಎಂಬ ಭೇದವಿಲ್ಲದೆ ಏಕರೂಪದಲ್ಲಿ ಧಾರಾಳವಾಗಿ ಪ್ರಯುಕ್ತವಾಗುತ್ತವೆ. ಉದಾ:– ಕುಡಿಯುವ ನೀರು, ಬರೆಯುವ ಕಾಗದ – ಇಲ್ಲಿ ಕುಡಿಯುವ ಮತ್ತು ಬರೆಯುವ ಎಂಬ ಕೃದಂತಪದಗಳು ಕುಡಿಯಲ್ಪಡುವ ಮತ್ತು ಬರೆಯಲ್ಪಡುವ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಸುಸ್ಪಷ್ಟ.) (೨) ಉಸಿರ್ವ ತಾಣಂ ಎಂಬುದನ್ನು (ಗಮಕ) ಸಮಾಸಪದವೆಂದೇ ಗ್ರಹಿಸುವುದಾದರೆ ಪ್ರಸ್ತುತವಾದ ಪದ್ಯಾಂಶದ ಅನ್ವಯವು ಈ ಕೆಳಗಿನಂತಾಗಬಹುದು–

'ಯತಿಯೆಂಬುದು ವೃತ್ತ ಜಾತಿ ಪದಪದ್ಧತಿಯೊಳ್ ಉಸಿರ್ವತಾಣಂ; (ಅದು) ಕೃತಾಸ್ಪದಂ' (ಇಲ್ಲಿ 'ಅದು' ಎಂಬುದು ಅಧ್ಯಾಹಾರ್ಯ.) ಈ ಅನ್ವಯಕ್ಕನುಗುಣವಾಗಿ ಅದರ ಅರ್ಥ ಹೀಗಾಗುತ್ತದೆ: 'ಯತಿಯೆಂದರೆ ವೃತ್ತಗಳ ಮತ್ತು ಜಾತಿಗಳ ಪದಸರಣಿಯಲ್ಲಿ 'ಉಸಿರ್ವ' ಅರ್ಥಾತ್ ನಿರ್ದೇಶಿಸಲ್ಪಡುವ ಸ್ಥಾನ; ಅದು ವಿಚ್ಛೇದವುಳ್ಳದ್ದು.' ಪದ್ಯದ ಉತ್ತರಾರ್ಧದಲ್ಲಿ ಆ ಸ್ಥಾನಗಳನ್ನು ಛಂದಃಶಾಸ್ತ್ರದಿಂದ ತಿಳಿದುಕೊಳ್ಳಬೇಕೆಂದು ಸ್ಪಷ್ಟವಾಗಿ ಸೂಚಿಸಲಾಗಿದೆ.

ಈ ಪದ್ಯದ ಅರ್ಥವನ್ನು ಈ ಬಗೆಯಾಗಿ ತಿಳಿದುಕೊಂಡಾಗ ದಂಡಿಯು ಹೇಳಿರುವ ಯತಿಲಕ್ಷಣವಾಕ್ಯವೂ ಕವಿರಾಜಮಾರ್ಗಕಾರನ ವಾಕ್ಯವೂ ಏಕಾಭಿಪ್ರಾಯದವುಗಳೆಂಬುದು ಗೊತ್ತಾಗದಿರದು. ದಂಡಿಯ ವಾಕ್ಯ – ಶ್ಲೋಕೇಷು ನಿಯತಸ್ಥಾನಂ ಪದಚ್ಛೇದಂ ಯತಿಂ ವಿದುಃ (ಯತಿಯೆಂದರೆ ಪದ್ಯಗಳ ನಿರ್ದಿಷ್ಟಸ್ಥಾನದಲ್ಲಿರಬೇಕಾದ ಪದಚ್ಛೇದವಾಗಿದೆ. ನಿಯತ ಸ್ಥಾನಂ – ನಿಯತಂ ಸ್ಥಾನಂ ಯಸ್ಯ ತಂ – ಯಾವುದರ ಸ್ಥಾನವು ನಿಯತವಾಗಿದೆಯೋ ಅದು – ಬಹುವ್ರೀಹಿ. ದಂಡಿಯ ಯತಿಲಕ್ಷಣವಾಕ್ಯವು ಪಿಂಗಳನ ಯತಿವಿಷಯಕವಾದ ಆಶಯವನ್ನು ಸಂಪೂರ್ಣವಾಗಿ ಪ್ರಕಾಶಪಡಿಸುವಂತಹದಾಗಿದೆ.) ಕವಿರಾಜಮಾರ್ಗಕಾರನು ತನ್ನ ಗ್ರಂಥದಲ್ಲಿ ದಂಡಿಯ ಅಭಿಪ್ರಾಯಗಳನ್ನು ಧಾರಾಳವಾಗಿ ಸ್ವೀಕರಿಸಿರುವನೆಂಬುದು ಸರ್ವವಿದಿತ. ಈ ಮೇಲಿನ ಸಂದರ್ಭವೂ ಅಂತಹದೇ ಆಗಿದೆಯೆಂದು ತಿಳಿಯುವುದು ಉಚಿತವೆನ್ನಲಡ್ಡಿಯಿಲ್ಲ. (ಉಸಿರ್ವ ತಾಣಂ – ಎಂಬ ಕವಿರಾಜಮಾರ್ಗಕಾರನ ಮಾತಿಗೆ ಉಸಿರೆಳೆದುಕೊಳ್ಳುವ ಸ್ಥಾನ ಎಂಬರ್ಥವನ್ನೇ ಕನ್ನಡದ ಆಧುನಿಕ ವಿದ್ವಾಂಸರೆಲ್ಲರೂ – ಈ ಮೊದಲು ಪ್ರಸ್ತುತ ಲೇಖಕನು ಸಹಿತ ಸ್ವೀಕರಿಸಿರುವುದಕ್ಕೆ 'ಯತಿಯೆಂಬುದು....

ಉಸಿರ್ದಾಣಂ' ಎಂಬ ಛಂದೋಂಬುಧಿಯ ಮಾತೇ ಕಾರಣವಾಗಿರಬೇಕೆಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ನಾಗವರ್ಮನಿಗಿಂತ ಹಿಂದಿನ ಯಾವ ಛಂದಃಶಾಸ್ತ್ರಕಾರನೂ ಯತಿಯೆಂದರೆ 'ಶ್ವಸನಕ್ರಿಯಾಸ್ಥಾನ' ಎಂದು ಹೇಳಿದಂತಿಲ್ಲ.)

ಯತಿಯೆಂದರೆ 'ಉಸಿರ್ದಾಣ' ಎಂದರೆ ಶ್ವಸನಕ್ರಿಯಾಸ್ಥಾನ ಎಂದು ನಾಗವರ್ಮನು ಹೇಳುವ ಯತಿಲಕ್ಷಣವನ್ನು ಸ್ವೀಕರಿಸಿದರೆ 'ಸ್ವರಸಂಧ್ಯಾಪ್ತ ಸೌಂದರ್ಯಾತ್ ತದ್ಭೇದೇಪೀಷ್ಯತೇ ಕ್ವಚಿತ್' ಎಂದು ಪೂರ್ವಾಚಾರ್ಯರು ಹೇಳಿರುವ ಮಾತನ್ನು ಸರಿಯಲ್ಲವೆಂದು ಹೇಳಬೇಕಾಗುತ್ತದೆ. ಮತ್ತು ಅವರು ಯತಿಭಂಗದೋಷವಿಲ್ಲವೆಂದು ಉದಾಹರಿಸಿರುವ ಮೇಘದೂತದ 'ಇತ್ಯೌತ್ಸುಕ್ಯಾದಪರಿಗಣಯನ್ ಗುಹ್ಯಕಸ್ತಂ ಯಯಾಚೇ' ಎಂಬ ಮತ್ತು 'ಶೋಭಾಂ ಪುಷ್ಯತ್ಯಧಿಕ...' ಎಂಬ – ಮಾಂದಾಕ್ರಾಂತಾ ವೃತ್ತಗಳ ಪಾದಮಧ್ಯದಲ್ಲಿಯೂ 'ದಿಕ್ಕಾಲಾದ್ಯನವಚ್ಛಿನ್ನಾನಂತಚಿನ್ಮಾತ್ರಮೂರ್ತಯೇ' ಎಂಬ ಭರ್ತೃಹರಿಯ ಶ್ಲೋಕದ ಪ್ರಥಮಪಾದಾಂತದಲ್ಲಿಯೂ ಯತಿಭಂಗವಿದೆಯೆಂದು ಹೇಳಬೇಕಾಗುತ್ತದೆ. ಏಕೆಂದರೆ ಅಲ್ಲಿ ಶ್ವಸನಕ್ರಿಯಾವಕಾಶವಿಲ್ಲವೇ ಇಲ್ಲ ಎಂಬುದು ಸರ್ವಸಂವೇದ್ಯ. ಆದುದರಿಂದ ಯತಿಯನ್ನು ಉಸಿರ್ದಾಣವೆಂದು ಹೇಳಿದರೆ ಇಂತಹ ಅಸಂಗತಗಳೊದಗುವುದರಿಂದ ನಾಗವರ್ಮನು ಹೇಳುವ ಯತಿಲಕ್ಷಣವು ಸಮಂಜಸವೆಂದು ಹೇಳುವಂತಿಲ್ಲ. ಆದರೆ ಕನ್ನಡದ ಆಧುನಿಕ ವಿದ್ವಾಂಸರ ಯತಿವಿಷಯಕವಾದ ಅಭಿಪ್ರಾಯವನ್ನು ರೂಪಿಸುವಲ್ಲಿ ನಾಗವರ್ಮನ ಈ ಮಾತು ಬಹಳ ಮುಖ್ಯ ಭೂಮಿಕೆಯನ್ನು ವಹಿಸಿರುತ್ತದೆ.]

ಸಂಸ್ಕೃತ ಛಂದೋಗ್ರಂಥಗಳಲ್ಲಿ ಯತಿವಿಚಾರವು ವೃತ್ತವಿಷಯಕವಾಗಿ ಮಾತ್ರ ಬಂದಿರುತ್ತದೆ; ಮಾತ್ರಾಬಂಧಗಳ ವಿಷಯದಲ್ಲಿ ಯತಿಯ ಪ್ರಸ್ತಾವವು ಅವುಗಳಲ್ಲಿ ಕಾಣುವುದಿಲ್ಲ. ಮಾತ್ರಾಬಂಧಗಳಾದ ಆರ್ಯಾವರ್ಗದ ಛಂದೋರೂಪಗಳಲ್ಲಿ ಯತಿಸ್ಥಾನನಿರ್ದೇಶವು ಅವಶ್ಯವಾಗಿರುವುದಾದರೂ, ಅಲ್ಲಿ ಯತಿಯೆಂಬ ಸಂಜ್ಞೆಯನ್ನು ಬಳಸದೆ ಪ್ರಕಾರಾಂತರದಿಂದ ಪಿಂಗಲಾದಿಗಳು ಅದರ ನಿರೂಪಣೆ ಮಾಡಿರುತ್ತಾರೆ. ಕವಿರಾಜಮಾರ್ಗದಲ್ಲಾದರೆ ಆರ್ಯಾವರ್ಗದ ಬಂಧಗಳ ವಿಷಯದಲ್ಲಿಯೂ ಯತಿಯೆಂಬ ಸಂಜ್ಞೆ ನ್ಯಾಯ್ಯವಾಗಿಯೇ ಪ್ರಯುಕ್ತವಾಗಿರುತ್ತದೆ. (ಯತಿಯೆಂಬುದುಸಿರ್ವ ತಾಣಂ ಕೃತಾಸ್ಪದಂ ವೃತ್ತಜಾತಿ ಪದ ಪದ್ಧತಿಯೊಳ್) ಕನ್ನಡದಲ್ಲಿ ಅತ್ಯಂತ ಪ್ರಸಿದ್ಧವಾದ ಕಂದಪದ್ಯಕ್ಕೆ ಯತಿನಿರ್ದೇಶರಹಿತವಾಗಿ ಲಕ್ಷಣ ಹೇಳಿದರೆ ಅದು ಅಪೂರ್ಣವೇ ಆಗುತ್ತದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಎಲ್ಲಾ ವೃತ್ತಗಳಲ್ಲಿಯೂ ಪಾದಾಂತವು ಅತಿಮುಖ್ಯವಾದ ಯತಿಸ್ಥಾನ. ಹೀಗಿದ್ದರೂ ಕನ್ನಡದಲ್ಲಿ ರಚಿತವಾಗಿರುವ ವೃತ್ತಗಳಲ್ಲಿ (ಮತ್ತು ಕಂದಪದ್ಯಗಳ ಹ್ರಸ್ವಪಾದಾಂತಗಳಲ್ಲಿ ಹಾಗೂ ಕೆಲವೆಡೆ ಪದ್ಯಾರ್ಧಗಳಲ್ಲಿ ಸಹ) ಪಾದಾಂತಯತಿಯನ್ನು ಉಲ್ಲಂಘಿಸಿದ ಸಂದರ್ಭಗಳೇ ಬಹಳ; ಅನುಸರಿಸಿದ ಸಂದರ್ಭಗಳು ವಿರಳ. ಇದಕ್ಕೆ ಕನ್ನಡದಲ್ಲಿ ಆದಿಯಿಂದಲೂ ರೂಢವಾಗಿದ್ದ ಪಾದದ್ವಿತೀಯಾಕ್ಷರಪ್ರಾಸವು ಕಾರಣವೆಂದು ಸಾಮಾನ್ಯವಾಗಿ ತಿಳಿಯಲ್ಪಟ್ಟಿದೆ. ಆದರೆ ಇದು ಯಥಾರ್ಥವಲ್ಲವೆಂದೂ ಆದಿಕಾಲದಿಂದಲೂ ಕನ್ನಡದಲ್ಲಿ ರೂಢವಾಗಿದ್ದ ದೇಶೀಯ ಛಂದಗಳ ಪಠನವಿಧಾನವು ಇದಕ್ಕೆ ನಿಜವಾದ ಕಾರಣವೆಂದೂ 'ಛಂದೋಗತಿ' ಎಂಬ ನನ್ನ ಗ್ರಂಥದ ೩1ನೇ ಟಿಪ್ಪಣಿಯಲ್ಲಿ ವಿಶದವಾಗಿ ನಿರೂಪಿಸಿರುತ್ತೇನೆ. ಆಸಕ್ತರು ಅಲ್ಲಿ ಅದನ್ನು ನೋಡಿಕೊಳ್ಳಬಹುದು. [ಜಯಕೀರ್ತಿಯು 'ಪಿಂಗಲವಸಿಷ್ಠಕೌಂಡಿನ್ಯಾದಿ ಶಾಸ್ತ್ರಕಾರರು ವೃತ್ತಗಳಲ್ಲಿ ಯತಿ ಅವಶ್ಯವೆಂದೂ ಭರತ ಕೋಹಲ ಮಾಂಡವ್ಯ ಸೈತವಾದಿಗಳು ಅದು ಅನವಶ್ಯವೆಂದೂ ಹೇಳಿರುತ್ತಾರೆ' – ಎಂದು ತನ್ನ ಗ್ರಂಥದಲ್ಲಿ ಬರೆದಿರುವುದರ ಅರ್ಥವು ಯತಿಸ್ಥಾನಗಳಲ್ಲಿ ಪದವಿಚ್ಛೇದವು ಅನವಶ್ಯವೆಂಬುದು ಭರತಾದಿ ಮಹನೀಯರ ಅಭಿಪ್ರಾಯವಾಗಿತ್ತೆಂದು

ಭಾವಿಸುವುದು ಸರಿಯಲ್ಲ. ಏಕೆಂದರೆ ಭರತಾದಿಗಳು ಅಸಾಮಾನ್ಯರಾದ ಶಾಸ್ತ್ರಕಾರರಾಗಿದ್ದರು. ಅವರೊಳಗೆ ಸೈತವ ಮಾಂಡವ್ಯರನ್ನು ಪಿಂಗಲಾಚಾರ್ಯನೇ ತನ್ನ ಗ್ರಂಥದಲ್ಲಿ ಗೌರವಪೂರ್ವಕವಾಗಿ ಸ್ಮರಿಸಿದ್ದಾನೆ. ಅಂತಹ ಮಹನೀಯರಿಗೆ ಹಲವರು ಅನು-ಯಾಯಿಗಳು ಇದ್ದಿರಲೇಬೇಕಲ್ಲವೆ? ಯತಿಸ್ಥಾನಗಳಲ್ಲಿ ಪದವಿಚ್ಛೇದವು ಅನವಶ್ಯವೆಂದು ಅವರ ಅಭಿಪ್ರಾಯವಾಗಿರುತ್ತಿದ್ದ ಪಕ್ಷದಲ್ಲಿ ಅವರ ಅನುಯಾಯಿಗಳು ಆ ಮಾರ್ಗವನ್ನು ಖಂಡಿತ-ವಾಗಿಯೂ – ಬೇರಾವ ಕಾರಣಕ್ಕಲ್ಲದಿದ್ದರೂ ರಚನಾಸೌಲಭ್ಯಕ್ಕಾಗಿಯಾದರೂ – ಅನುಸರಿ-ಸುತ್ತಿದ್ದರೆಂಬುದರಲ್ಲಿ ಸಂದೇಹವಿದೆಯೆ? ಆದರೆ ಸಂಸ್ಕೃತದಲ್ಲಿ ರಚಿತವಾದ ಯಾವುದೊಂದು ವೃತ್ತದಲ್ಲಿಯೂ – ಪಾದಮಧ್ಯ ಯತಿಸ್ಥಾನದಲ್ಲಿ ಎಲ್ಲಿಯಾದರೊಮ್ಮೊಮ್ಮೆ ವಿಚ್ಛೇದವಾಗ-ದಿರುವುದು ಕಂಡುಬರಬಹುದಾದರೂ – ಯತಿಸ್ಥಾನಗಳಲ್ಲಿ ಮುಖ್ಯತಮವಾದ ಪಾದಾಂತ-ಗಳಲ್ಲಿ ಯತಿಭಂಗವಾಗಿರುವುದನ್ನು ಕಾಣುವುದು ಸರ್ವಥಾ ದುರ್ಲಭ. ವಸ್ತುಸ್ಥಿತಿ ಹೀಗಿರು-ವುದರಿಂದ ಭರತಾದಿಗಳು ಹೇಳಿದ್ದು ಛಂದೋಗ್ರಂಥಗಳಲ್ಲಿ ವೃತ್ತಗಳ ಯತಿಸ್ಥಾನನಿರ್ದೇಶವು ಅನವಶ್ಯವೆಂದು ಮಾತ್ರ ಆಗಿತ್ತೆಂದು ತಿಳಿಯುವುದು ಯುಕ್ತವಾಗಿದೆ. ಪದಸ್ವರೂಪದ ಔಚಿತ್ಯ ವಿಚಾರವು ಛಂದಸ್ತತ್ತ್ವಕ್ಕೆ ಬಹಿರ್ಭೂತವಾಗಿದ್ದು ಅದು ಅಲಂಕಾರಾದಿ ಶಾಸ್ತ್ರಾಂತರವಿಷಯ-ವಾಗಿರುವುದರಿಂದ ಛಂದಃಶಾಸ್ತ್ರದಲ್ಲಿ ಅದರ ಪ್ರಸ್ತಾವವು ಅಪ್ರಸ್ತುತವೆನಿಸುತ್ತದೆ – ಎಂಬುದು ಆ ಮಹನೀಯರ ಅಭಿಪ್ರಾಯವಾಗಿದ್ದಿರಬೇಕೆಂದು ನನ್ನ ಅಲ್ಪಮತಿಗೆ ತೋರುತ್ತದೆ.]

ಯತಿಸಂಜ್ಞೆಯ ಅರ್ಥದಲ್ಲಿ ಕಾಲ ಕಾಲಕ್ಕೆ ಬೆಳವಣಿಗೆಯಾಗುತ್ತಾ ಹೋಗಿ ಇಂದು ಯತಿಯೆಂಬ ಸಂಜ್ಞೆಗೆ ಹಲವು ಅರ್ಥಗಳು ಬಂದಿರುತ್ತವೆ. (೧) ಯಾವುದೊಂದು ಪದ್ಯದ ಪಠನದಲ್ಲಿ ಧಾಟಿಗನುಗುಣವಾಗಿ ಉಂಟಾಗುವ ವಿಶ್ರಾಮ ಸ್ಥಾನ ಎಂಬ ಪುರಾತನತಮವಾದ ಅರ್ಥ. (ಇದೇ ಯತಿಸ್ಥಾನ) (೨) ಯತಿಸ್ಥಾನಗಳಲ್ಲಿ ಇರಲೇಬೇಕಾದ ಪದಗಳ ವಿಚ್ಛೇದ (ಈ ವಿಚ್ಛೇದವಿಲ್ಲದಿದ್ದಲ್ಲಿ ಅದು ಯತಿಭಂಗವೆನ್ನಿಸಿಕೊಳ್ಳುತ್ತದೆ.) (೩) ಯತಿಸ್ಥಾನದಲ್ಲಾಗಲಿ ಒಂದು ಪದ್ಯದ ಬೇರೆಡೆಗಳಲ್ಲಾಗಲಿ ಕಂಡುಬರುವ ಪದವಿಚ್ಛೇದ – ಇದನ್ನು ಮತ್ತು ಮೇಲೆ ತೋರಿಸಿದ ಎರಡನೆಯ ಯತಿಸ್ವರೂಪವನ್ನು 'ಪದಯತಿ' ಎನ್ನಬಹುದು. (೪) ಪದ-ಯತಿಯು ಪದ್ಯದಲ್ಲಿರುವ ಯಾವುದೊಂದು ವಾಕ್ಯದ ಅಥವಾ ವಾಕ್ಯಶಾಖೆಯ ಕೊನೆಯಲ್ಲಿ ಕಾಣಿಸಿಕೊಂಡರೆ ಅದನ್ನು 'ವಾಕ್ಯಯತಿ' ಎಂದು ಕರೆಯಬಹುದಾಗಿದೆ. ಈ ನಾಲ್ಕು ಅರ್ಥ-ಗಳಲ್ಲದೆ ಯತಿತತ್ತ್ವವನ್ನೇ 'ಯತಿ' ಎಂದು ಹೇಳುವುದು ಪುರಾತನಕಾಲದಿಂದ ಬಂದಿರುವ ರೂಢಿ. (ಉದಾ:– 'ಕನ್ನಡದಲ್ಲಿ ಯತಿಯಿದೆಯೋ ಇಲ್ಲವೋ ಎಂಬುದು ವಿವಾದಗ್ರಸ್ತ ವಿಷಯ' – ಇತ್ಯಾದಿ.)

ಪದವಿಚ್ಛೇದವನ್ನು ಮಾತ್ರ ಯತಿಯೆಂದು ಕರೆಯುತ್ತಾ ಬಂದಿರುವುದರ ಫಲವಾಗಿ ಪದ್ಯದ ಗತಿಗೂ ಯತಿಗೂ ಇರಲೇಬೇಕಾದ ಸಂಬಂಧವು ಶಿಥಿಲವಾಗಿ ಆಧುನಿಕ ವಿಮರ್ಶಕರ ಕೈಯಲ್ಲಿ ಅದು ಪೂರ್ಣವಾಗಿ ಕಳಚಿ ಹೋಗಿದೆಯೆಂದರೂ ತಪ್ಪಾಗಲಾರದು. ಪದ್ಯದ ಗತಿಗೆ – ಎಂದರೆ ಧಾಟಿಗೆ – ಸಂಬಂಧಿಸಿರದ ಪದವಿಚ್ಛೇದವು ಕೇವಲ ಪದ್ಯಶೈಲಿಯ ವಿಮರ್ಶೆಯಾಗಿ ಪರಿಣಮಿಸದಿರುವುದಿಲ್ಲ. ನಮ್ಮ ಶಾಸ್ತ್ರಪರಂಪರಾನುಗುಣವಾಗಿ ಅದು ಕಾವ್ಯ ವಿಮರ್ಶೆಯ ಅಂಶವಾಗಬಹುದೇ ಹೊರತು ಛಂದಃಶಾಸ್ತ್ರದ ಪರಿಧಿಗೆ ಒಳಪಟ್ಟ ವಿವೇಚನೆ-ಯೆಂದಾಗಲಾರದು. ಆಂಗ್ಲಸಂಪ್ರದಾಯದಲ್ಲಾದರೆ ಪದ್ಯವೆಂದರೂ ಕಾವ್ಯವೆಂದೂ ಒಂದೇ ಆಗಿದ್ದು 'Poetry' ಎಂಬ ಒಂದೇ ಹೆಸರು ಅವೆರಡಕ್ಕೂ ಸಲ್ಲುತ್ತದೆ. ಮತ್ತು ಕಾವ್ಯವೆಂಬುದು ಪದ್ಯರೂಪದಲ್ಲಿಯೇ ಪ್ರಕಟವಾಗುತ್ತದೆಂಬುದೂ ಪಾಶ್ಚಾತ್ಯರ ನಂಬುಗೆಯಾಗಿದೆ. ಆದುದ-ರಿಂದ ಅಲ್ಲಿ ಛಂದಃಸ್ವರೂಪವಿಮರ್ಶೆಯಲ್ಲಿ ಕಾವ್ಯವಿಮರ್ಶೆಯೂ ಸೇರಿಕೊಂಡರೆ ಆಶ್ಚರ್ಯ-

*  *  *  *  *

ಈ ವಿಷಯದಲ್ಲಿ ಛಂದೋಂಬುಧಿಯ (ಕರ್ಣಾಟಕ ಕಾವ್ಯಕಲಾನಿಧಿ, ಮೈಸೂರು) ಟಿಪ್ಪಣಿಯಲ್ಲಿ ವಿಸ್ತಾರವಾದ ಚರ್ಚೆಯ ಅಂತದಲ್ಲಿ ಯತಿ ಕನ್ನಡಕ್ಕೆ ಬೇಡವೆಂಬರ್ಥವು ಸೂಚಿಸಲ್ಪಟ್ಟಿದೆ; ಇದು ಮಾತ್ರವಲ್ಲ, 'ದಾಂಟಿದೊಡಾ ಯತಿ ಕೆಡುಗುಂ' ಎಂಬ ಮಾತಿಗೆ ಟಿಪ್ಪಣಕಾರರು ವ್ಯಾಖ್ಯಾನವಾಗಿ–

ಗಂಡನನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟಳೆಂದೊಡಾ ।

– ಇದರಲ್ಲಿ 'ಗಂಗೆಗೆ' ಎಂಬುದಕ್ಕೆ ಬದಲಾಗಿ 'ಜಾಹ್ನವಿಗೆ' ಎಂದು ಬರೆದರೆ ಉಸಿರ್ದಾಣವು ಕೆಟ್ಟುಹೋಗುವುದು – ಎಂದು ಬರೆದಿದ್ದಾರೆ. ಯತಿಯೆಂಬುದಕ್ಕೆ ಅವರಿಲ್ಲಿ ಏನರ್ಥವನ್ನು ಕಲ್ಪಿಸಿರುವರೋ ನಾನರಿಯೆ. ಅಕ್ಷರ, ಗಣ, ಯತಿ ಎಂಬುವು ಎಂದೂ ಸಮಾನಾರ್ಥಕಗಳಲ್ಲ. ಅವರು ಕೊಟ್ಟ ನಿದರ್ಶನದಲ್ಲಿ ಕೆಡುವುದು ಯತಿಯಲ್ಲ; ಗಣನಿಯಮವೇ ಕೆಟ್ಟುಹೋಗುತ್ತದೆ; ಅಲ್ಲದೆ, ಒಂದಕ್ಷರ ಹೆಚ್ಚಾಗಿ ಛಂದೋವರ್ಗವೇ ಬೇರಾಗುತ್ತದೆ. ಗಣನಿಯಮವನ್ನು ಹೇಳಿದೊಡನೆ ಅದನ್ನು ಉಲ್ಲಂಘಿಸಬಾರದೆಂದು ಬೇರೆ ಹೇಳಬೇಕಾಗಿಲ್ಲ. ಯತಿಭಂಗವೆಂದರೆ, ಗಣವು ಸರಿಯಾಗಿದ್ದು, ಓದುವಾಗ ಅರ್ಥವು ಕೆಡುವ ರೀತಿಯಲ್ಲಿ ವಿರಾಮ

---

ವಿಲ್ಲ. ಭಾರತೀಯ ಸಂಪ್ರದಾಯವಾದರೋ ಇದಕ್ಕೆ ಭಿನ್ನವಾಗಿದೆ. ಪದ್ಯವಾದೊಡನೆ ಅದು ಕಾವ್ಯವೆಂದಾಗುವುದಿಲ್ಲವೆಂದೂ ಕಾವ್ಯವೆಂದೊಡನೆ ಅದು ಪದ್ಯವೇ ಆಗಿರಬೇಕೆಂದಿಲ್ಲವೆಂದೂ ಪದ್ಯತ್ವ ಮತ್ತು ಕಾವ್ಯತ್ವ ಎಂಬೆರಡು ಗುಣಗಳು ಭಿನ್ನಗಳೆಂದೂ ಪುರಾತನಕಾಲದಲ್ಲಿಯೇ ಭಾರತೀಯ ವಿಮರ್ಶಕರು ಯಥಾರ್ಥವಿಚಾರದ ಫಲವಾಗಿ ನಿರ್ಣಯಿಸಿರುವರು. ನಮ್ಮ ದೇಶದ ಶಾಸ್ತ್ರಗ್ರಂಥಗಳಲ್ಲಿ ಹೆಚ್ಚಿನವು ಪದ್ಯರೂಪದಲ್ಲಿಯೇ ಇವೆ ಎಂಬುದರಿಂದ ಅವೂ ಕಾವ್ಯಗಳೆಂದಾಗುವವೆ? ಮತ್ತು ಬಾಣಮುದ್ದಣಾದಿ ಕವಿಗಳ ರಸನಿಷ್ಯಂದಿಗಳಾದ ಗದ್ಯಗಳು ಕಾವ್ಯವಲ್ಲವೆಂದಾಗಬಲ್ಲವೆ? ಇದನ್ನು ಪರಿಭಾವಿಸಿದರೆ ಪದ್ಯತ್ವವೂ ಕಾವ್ಯತ್ವವೂ ಬೇರೆ ಬೇರೆಂಬುದು ಯಾರಿಗಾದರೂ ಮನದಟ್ಟಾಗದಿರದು. ಆದುದರಿಂದ ಛಂದೋಗತಿಗೆ – ಎಂದರೆ ಧಾಟಿಗೆ – ಬಹಿರ್ಭೂತವಾದ ಯತಿವಿಚಾರವು ಛಂದೋವಿಚಾರವೆನ್ನಿಸಲಾರದು. ವಸ್ತುತಃ ಯತಿಯೆಂಬುದು ಛಂದೋಗತಿಯ – ಎಂದರೆ ಧಾಟಿಯ – ಒಂದು ಅಂಶವೇ ಆಗಿದೆ. ಛಂದೋಗತಿಯ ಸಂಬಂಧವನ್ನು ತೊರೆದ ಪದವಿಚ್ಛೇದವೆಂಬುದು ಪದ್ಯದಲ್ಲಿರುವಂತೆಯೇ ಗದ್ಯದಲ್ಲಿಯೂ ಇರುವ ವಸ್ತುವಲ್ಲವೇ? ಇವನ್ನೆಲ್ಲ ಮುಕ್ತಮನಸ್ಸಿನಿಂದ ಪರಾಮರ್ಶಿಸುವವರಿಗೆ ಕೆಲವರು ಆಧುನಿಕ ವಿಮರ್ಶಕರು ಮಾಡುತ್ತಿರುವ ಛಂದೋರೂಪಗಳ ವಿಮರ್ಶೆಯಲ್ಲಿ ಅನಲ್ಪಭಾಗವು ಕವಿಯ ಶೈಲಿಯ ವಿಮರ್ಶೆಯೇ ಆಗಿರುವುದೆಂಬ ತಥ್ಯವು ಹೊಳೆಯದಿರದು. ಆದರೆ ಕಾವ್ಯವಿಮರ್ಶೆಯಲ್ಲಿ ಅದರ ಛಂದೋವಿಮರ್ಶೆಗೂ ಆಸ್ಪದವಿದ್ದೇ ಇದೆ; ಏಕೆಂದರೆ ಛಂದಸ್ಸೆಂಬುದು ಅಲ್ಲಿ ಕಾವ್ಯದ ಒಂದು ಅಂಶವೇ ಆಗಿರುತ್ತದೆ. ಪದ್ಯದಲ್ಲಿ ಪ್ರತಿಪಾದಿತವಾದ ಅರ್ಥವಾಗಲಿ ಪದ್ಯದ ಭಾಷಾಶೈಲಿಯಾಗಲಿ ಛಂದಸ್ಸಿನಲ್ಲಿ ಅಂತರ್ಗತವಾಗುವ ವಿಷಯಗಳಲ್ಲವಾದುದರಿಂದ ಛಂದೋಮೀಮಾಂಸೆಯಲ್ಲಿ ಕಾವ್ಯವಿಮರ್ಶೆಯು ಅನಪೇಕ್ಷಿತವಾಗುತ್ತದೆ. ಆದುದರಿಂದ ಅಲ್ಲಿ ಆ ವಿಚಾರವು ಅಪ್ರಸ್ತುತ ಮಾತ್ರವಲ್ಲ ಅದು ವಿಚಾರಸಾಂಕರ್ಯಕ್ಕೂ ಎಡೆ ಮಾಡಿಕೊಡುತ್ತದೆ.

ತೆಗೆದುಕೊಳ್ಳಬೇಕಾಗಿ ಬರುವ ಸಂದರ್ಭ. ಒಂದು ಗಣಕ್ಕೆ ಬದಲಾಗಿ ಮತ್ತೊಂದು ಗಣವನ್ನಿಡುವುದೇ, ಅಥವಾ ಒಂದಕ್ಷರವನ್ನು ಹೆಚ್ಚಿಸುವುದೇ ಯತಿಭಂಗವೆಂಬೀ ವ್ಯಾಖ್ಯೆ ಅತ್ಯಪೂರ್ವ.[33]

*  *  *  *  *  *

ನಿಜವಾಗಿ ನೋಡಿದರೆ, ಯತಿಯೆಂಬುದು, ಓದುವಾಗ ಅರ್ಥಕ್ಕೆ ಹೊಂದಿಕೆಯಾಗುವಂತೆ ನಿಲ್ಲಿಸಲು ಎಡೆಯಿರಬೇಕೆಂಬುದಕ್ಕಾಗಿ ನಿಯಮಿತವಾಗಿದೆ. ಆದುದರಿಂದ ಅದು ಕೇವಲ ಅಕ್ಷರವಿಷಯವಲ್ಲ; ಪದಸ್ವರೂಪಕ್ಕೂ ಸಂಬಂಧಿಸಿದ ವಿಷಯ. ಯತಿಯ ಈ ಅರ್ಥದಿಂದಲೇ ಯತಿಭಂಗವಿಚಾರ ಮಾಡಬೇಕು. ಛಂದಃಶಾಸ್ತ್ರಕಾರರ ಅಭಿಪ್ರಾಯವು –'ಸ್ವರಸಂಧಿಗಳಿಂದ ಉಂಟಾದ ಸೌಂದರ್ಯ ಬಲವಿದ್ದಲ್ಲಿ, ತೋರಿಕೆಯ ಮಟ್ಟಿಗೆ ಅಕ್ಷರವಿಚ್ಛೇದವಾಗದಿದ್ದರೂ ದೋಷವಿಲ್ಲ' ಎಂದಾಗಿರುತ್ತದೆ. (ಸ್ವರಸಂಧ್ಯಾಪ್ತ ಸೌಂದರ್ಯಾತ್ ತದ್ಭೇದೇಪೀಷ್ಯತೇ ಕ್ವಚಿತ್) ಇದಕ್ಕೆ, 'ಶೋಭಾಂ ಪುಷ್ಯ । ತ್ಯಧಿಕ', 'ಮೇಘಾಲೋಕೇ ಭವತಿ ಸುಖಿನೋ । ಪ್ಯನ್ಯಥಾವೃತ್ತಿ ಚೇತಃ' – ಇತ್ಯಾದಿ ದೃಷ್ಟಾಂತಗಳನ್ನು ಪಿಂಗಳಸೂತ್ರವ್ಯಾಖ್ಯಾನ ಕಾರರು ಕೊಟ್ಟಿದ್ದಾರೆಂದೂ ಮೇಲೆ ಹೇಳಿದ ಛಂದೋಂಬುಧಿಯ ಟಿಪ್ಪಣಿಯಲ್ಲಿದೆ. ಇಲ್ಲಿ ಯತಿಭಂಗವಾಗಿದೆಯೆಂದು ಯಾರಿಗೂ ಭಾಸವಾಗಲಾರದು. ಕಾರಣ–ವೇನೆಂದರೆ, 'ಅಧಿಕ', 'ಅನ್ಯಥಾ' ಎಂಬ ಯತ್ಯನಂತರ ಪದಗಳ ಸ್ವರೂಪವು ನಾಶವಾಗುವುದಿಲ್ಲ. ಇದರಿಂದ ನಾವು ತಿಳಿಯತಕ್ಕುದೇನೆಂದರೆ, ವಿಶ್ರಾಮಸ್ಥಾನಾ ನಂತರ ಬರುವ ಪದದ ಸ್ವರೂಪವು ಕೆಡದಿದ್ದರೆ ಯತಿಭಂಗವಾಗುವುದಿಲ್ಲ. ಇದು ಕನ್ನಡದ ಲೋಪಸಂಧಿಯ ನಿಯಮವನ್ನು ಹೋಲುತ್ತದೆ. 'ನಾಮರೂಢಿಯಳಿ–ಯದ ಪಕ್ಷಂ' ಪೂರ್ವಪದದ ಕೊನೆಯ ಸ್ವರವು ಲೋಪವಾಗುತ್ತದೆಯೇ ಹೊರತು ಉತ್ತರ ಪದದಾದಿಗೆ ವಿಘಾತವಾಗುವುದಿಲ್ಲ. ಈ ಲೋಪಸಂಧಿಗೆ ಯಾವುದೊಂದು ಪ್ರಕೃತಿಯು ಶುದ್ಧಿಪತ್ರವನ್ನು ಕೊಟ್ಟಿತೋ, ಅದೇ ಪ್ರಕೃತಿ ಮೇಲೆ ಉಧಾಹರಿಸಿದ ಸಂದರ್ಭಗಳಲ್ಲಿ ಯತಿಯನ್ನು ಕೆಡಿಸದೆ ಉಳಿಸುತ್ತದೆ.

*  *  *  *  *

ಇಲ್ಲಿ ಕೊಟ್ಟ ಉದಾಹರಣೆಯೆಲ್ಲ ಸಂಸ್ಕೃತ ಭಾಷೆಯದು. ಕನ್ನಡದ ಮಟ್ಟಿಗೆ ನೋಡಿದರೆ, 'ಯತಿಯಂ ಮಿಕ್ಕರ್' ಎಂದು ಕವಿರಾಜಮಾರ್ಗಕಾರನು ಹೇಳುವುದು ವೃತ್ತಗಳ ಪಾದಾಂತಯತಿವಿಷಯವಾಗಿ. ಈ ಯತಿಯನ್ನು ಕನ್ನಡ ಕವಿಗಳೂ ಮಿಕ್ಕಿರುವುದರಿಂದ, ಅಕ್ಷರವೃತ್ತಗಳನ್ನು ಪಾದಾಂತದಲ್ಲಿ ನಿಲ್ಲಿಸದೆ

---

33. ವೃತ್ತಗಳ ಯತಿಯ ಮತ್ತು ಯತಿಭಂಗದ ಸಮಗ್ರ ವಿವೇಚನೆಯು ಪೂರ್ವೋಕ್ತವಾದ ನನ್ನ 'ಛಂದೋಗತಿ'ಯಲ್ಲಿ ಮಾಡಲ್ಪಟ್ಟಿದೆ. ಆಸಕ್ತರು ಅಲ್ಲಿ ಅದನ್ನು ನೋಡಿಕೊಳ್ಳಬಹುದು.

ರಗಳೆಯಂತೆ ಓದುವ ಅವಶ್ಯಕತೆಯು ನಮಗುಂಟಾಯಿತು. ಅದು ಹೇಗಿದ್ದರೂ ಸಂಸ್ಕೃತಬಂಧಗಳಿಗೆ ಹೊಂದುವ ಸಂಗತಿ: ಅದರ ವಿಚಾರವು ಪ್ರಕೃತವಲ್ಲ. ವಿಶುದ್ಧ ಕನ್ನಡಜಾತಿಗಳಲ್ಲಿ ಯತಿಯ ಸ್ಥಿತಿಯೇನು? ಎಂದರೆ, ಹಿಂದೆಯೇ ನಾನು ಹೇಳಿದಂತೆ, ತ್ರಿಪುರುಷಗಣವೆಲ್ಲೆಲ್ಲಿ ಪ್ರಯುಕ್ತವೋ ಅಲ್ಲೆಲ್ಲ ಗಣಾಂತಗಳಲ್ಲಿ ಹೆಚ್ಚಾಗಿ ಯತಿ ಇರುತ್ತದೆ ಎನ್ನಬಹುದು. ಹಿಂದೆ ಕೊಟ್ಟ ಉದಾಹರಣೆಗಳಿಂದಲೇ ಇದು ಸಾಕಾದಷ್ಟು ಸ್ಪಷ್ಟವಾಗಿರಬಹುದೆಂದು ಭಾವಿಸುತ್ತೇನೆ.

ತ್ರಿಮೂರ್ತಿಗಣಜನ್ಯ ಕನ್ನಡ ಮಾತ್ರಾಬಂಧಗಳನ್ನು ಅವಲೋಕಿಸಿದರೆ ಅಷ್ಟು ನಿರ್ಬಂಧವಿಲ್ಲದಿದ್ದರೂ (ಏಕೆಂದರೆ, ಗಣಾಂತಲಘುವನ್ನು ಮಾತ್ರಾಬಂಧ-ಗಳಲ್ಲಿ ಗುರುವಾಗಿಸಬೇಕಾಗಿಲ್ಲ.) ತಕ್ಕಮಟ್ಟಿಗೆ ಹಾಗೆಯೇ ಇದೆಯೆಂದು ವಿಶದ-ವಾಗುವುದು.[34] ಅಕ್ಕರಿಕೆ ಇದಕ್ಕೆ ಉತ್ತಮವಾದ ಉದಾಹರಣೆ. ಪ್ರಚಾರದಲ್ಲಿರುವ

---

34. {ಮಾತ್ರಾಬಂಧಗಳ ಯತಿವಿಚಾರ} ಮಾತ್ರಾಬಂಧಗಳ ಯತಿವಿಚಾರದಲ್ಲಿ ಛಂದಃಶಾಸ್ತ್ರ-ಗ್ರಂಥಗಳಿಂದ ಹೆಚ್ಚೇನೂ ತಿಳಿದುಬರುವುದಿಲ್ಲ. ಹಿಂದೆ ಸೂಚಿಸಿರುವಂತೆ ಪಿಂಗಳಾದಿಗಳು ವೃತ್ತಗಳಿಗೆ ಮಾತ್ರ ಯತಿನಿಯಮವನ್ನು ಹೇಳಿರುವುದಾಗಿದೆ. ಕವಿರಾಜಮಾರ್ಗಕಾರನು ಯತಿನಿಯಮವನ್ನು ವೃತ್ತಗಳಿಗೆ ಮಾತ್ರವಲ್ಲ 'ಜಾತಿ'ಗಳಿಗೂ ಅನ್ವಯಿಸಿರುತ್ತಾನೆಂಬುದನ್ನು ಈ ಹಿಂದೆ ತಿಳಿಸಲಾಗಿದೆಯಷ್ಟೆ. (ವೃತ್ತಗಳಲ್ಲದಿರುವ ಛಂದೋಬಂಧಗಳೆಲ್ಲವೂ ಜಾತಿಗಳೆನಿಸಿ-ಕೊಳ್ಳುತ್ತವೆ. ಅವುಗಳೊಳಗೆ ಮಾತ್ರಾಬಂಧಗಳೇ ಮುಖ್ಯವಾಗಿವೆ. ವೃತ್ತ ಮತ್ತು ಜಾತಿ ಎಂಬ ಪದ್ಯಭೇದಗಳ ಸ್ವಭಾವಾದಿಗಳ ಕುರಿತು ಈ ಹಿಂದೆ ಸೂಚಿಸಲಾದ 'ಛಂದೋಗತಿ' ಎಂಬ ನನ್ನ ಗ್ರಂಥದ 20ನೆಯ ಟಿಪ್ಪಣಿಯಲ್ಲಿ ವಿಶೇಷ ವಿವರಗಳಿವೆ.) ನಾಗವರ್ಮನು ಅಕ್ಕರಿಕೆಯ ಲಕ್ಷಣನಿರೂಪಣೆಯಲ್ಲಿ ಯತಿಸ್ಥಾನಗಳನ್ನು ನಿರ್ದೇಶಿಸಿರುವನಾದರೂ ಅವಶ್ಯವಾಗಿ ನಿರೂಪಿಸ-ಬೇಕಾಗಿದ್ದ ಕಂದಪದ್ಯದ ಪಾದಮಧ್ಯಯತಿಸ್ಥಾನಗಳ ಕುರಿತು – ಏಕೋ – ಏನೂ ಹೇಳಿಲ್ಲ. ಆದರೆ ಛಂದೋಗ್ರಂಥಗಳಲ್ಲಿ ಮಾತ್ರಾಬಂಧಗಳ ಯತಿವಿಚಾರವು ಬಂದಿಲ್ಲವೆಂಬುದರಿಂದ ಮಾತ್ರಾಬಂಧಗಳಲ್ಲಿ ಯತಿ ಅನವಶ್ಯವೆಂದು ಭಾವಿಸಕೂಡದು. ಕನ್ನಡದ ಮಹಾಕವಿಗಳು ಪದ್ಯಗಳ ಪಾದಾಂತಗಳಲ್ಲಿ ಯತಿಭಂಗವನ್ನು ಯಥೇಚ್ಛವಾಗಿ ಮಾಡಿರುವರಾದರೂ ಮಾತ್ರಾ-ಬಂಧವಾದ ಕಂದಪದ್ಯದ ಪಾದಮಧ್ಯಯತಿಯನ್ನು ಎಲ್ಲಿಯೂ ಉಲ್ಲಂಘಿಸಿದ್ದಿಲ್ಲ. (ಕಂದ-ಪದ್ಯವು ಕನ್ನಡ ಜಾತಿ ಅಲ್ಲದಿರುವುದರಿಂದ ಅದರ ಯತಿವಿಚಾರವು ಇಲ್ಲಿ ಅಪ್ರಸ್ತುತ. ಇದರ ವಿವರಣೆಯನ್ನು ಪೂರ್ವೋಕ್ತವಾದ ಛಂದೋಗತಿಯ ಏಳನೆಯ ಪರಿಚ್ಛೇದದಲ್ಲಿ ಮಾಡ-ಲಾಗಿದೆ.) ಹೀಗಿದ್ದರೂ ಮಾತ್ರಾಬಂಧಗಳ ಯತಿವಿಚಾರದಲ್ಲಿ ಯಾರೊಬ್ಬರೂ ಈವರೆಗೆ ಸಮಗ್ರವಾಗಿ ವಿಚಾರ ಮಾಡಿದ್ದು ಕಂಡುಬರುವುದಿಲ್ಲ. ಆಧುನಿಕ ಕನ್ನಡ ಛಂದೋ-ವಿಮರ್ಶಕರೇನೋ ಕನ್ನಡ ಮಾತ್ರಾಬಂಧಗಳಲ್ಲಿ ಬಂದಿರುವ ಯತಿಭಂಗಗಳನ್ನು ಎಷ್ಟೋ ವೇಳೆ ತೋರಿಸಿಕೊಡುತ್ತಾರೆ. ಆದರೆ ಭಂಗಿಸಿದರೆ ಗತಿಸೌಂದರ್ಯಹಾನಿಯನ್ನುಂಟು-ಮಾಡುವ ಆ ಯತಿನಿಯಮಗಳೇನೆಂಬುದನ್ನು ಯಾರೂ ನಿರೂಪಿಸಿಲ್ಲ! ಹೀಗಿರುವುದಕ್ಕೆ ಮುಖ್ಯಕಾರಣವೇನೆಂದರೆ ಕನ್ನಡ ಮಾತ್ರಾಬಂಧಗಳ ಯತಿವಿಷಯವು ಬಹಳ ಸೂಕ್ಷ್ಮವೂ ಜಟಿಲವೂ ಆಗಿದ್ದು ಅದು ಪೂರ್ವಗಣಾಂತದ ಮತ್ತು ಉತ್ತರಗಣಾದಿಯ ಅಕ್ಷರ ಪರಿಮಾಣಗಳನ್ನು (ಎಂದರೆ ಗುರುತ್ವಲಘುತ್ವಗಳನ್ನು ಮತ್ತು ವಿಚ್ಛೇದಸ್ಥಾನದಲ್ಲಿರುವ ಪದಸ್ವರೂಪವನ್ನು ಅವಲಂಬಿಸಿರುತ್ತದೆ. ಹೀಗಿರುವುದರಿಂದ ಯತಿಭಂಗವು ಸಂಭಾವ್ಯವಾಗ-

ಬಹುದಾದ ರೂಪವಿಶೇಷಗಳನ್ನೆಲ್ಲಾ ಸಂಗ್ರಹಿಸಿ ಪಟ್ಟಿಮಾಡಿ ತೋರಿಸುವುದು ಅತೀವ ಶ್ರಮಸಾಧ್ಯವಾಗಿದೆ. ಮಾತ್ರವಲ್ಲ, ಅವುಗಳನ್ನೆಲ್ಲ ಸ್ಮೃತಿಯಲ್ಲಿಟ್ಟುಕೊಂಡು ಆ ಸ್ಥಾನಗಳಲ್ಲಾಗ- ಬಹುದಾದ ಯತಿಭಂಗಗಳನ್ನು ಪರಿಗಣಿಸುತ್ತಾ ಕಾವ್ಯರಚನೆಗೆ ತೊಡಗಿದರೆ ಆ ಪ್ರಯತ್ನಕ್ಕೆ ಒಂದು ಬಗೆಯ ಕೃತಕತೆಯೂ ಬಾರದಿರಲಾರದು. ಮತ್ತು ಇದರಿಂದಾಗಿ ವ್ಯಾವಹಾರಿಕವಾದ ಪ್ರಯೋಜನ ಹೆಚ್ಚೇನೂ ಲಭಿಸಲಾರದು. ಆದುದರಿಂದ ಕನ್ನಡ ಮಾತ್ರಾಬಂಧಗಳ ರಚನೆಯಲ್ಲಿ ಯತಿಭಂಗಗಳುಂಟಾಗದಂತೆ ಮಾಡಬಲ್ಲ ಬೇರೊಂದು ಉಪಾಯವನ್ನು ಇಲ್ಲಿ ಸೂಚಿಸುವ ಪ್ರಯತ್ನ ಮಾಡುತ್ತೇನೆ.

ಮಾತ್ರಾಬಂಧವೆಂಬುದು ಯಾವ ಭಾಷೆಯದೇ ಆಗಿರಲಿ, ಅದು ತಾಳಕ್ಕೆ ಅಳವಡುವ ಛಂದೋಬಂಧವಾಗಿರುತ್ತದೆ. ಕನ್ನಡ ಮಾತ್ರಾಬಂಧಗಳಲ್ಲಿ ಪ್ರಯುಕ್ತವಾಗಿರುವ ಮಾತ್ರಾಗಣಗಳು ಇವು ಮೂರು:- ೧) ಮೂರು ಮಾತ್ರೆಯ ಗಣ ೨) ನಾಲ್ಕು ಮಾತ್ರೆಯ ಗಣ ೩) ಐದು ಮಾತ್ರೆಯ ಗಣ. ಸಾಧಾರಣವಾಗಿ ಈ ಮೂರು ಗಣಗಳಲ್ಲಿ ಯಾವುದಾದರೂ ಒಂದೇ ಗಣವು ಒಂದು ಪದ್ಯದಲ್ಲಿ ಪ್ರಯುಕ್ತವಾಗುವುದಾದರೂ – ೩+೪ ಮಾತ್ರೆಯ ಗಣಗಳ ಸಂಯೋಗದಿಂದ ರಚಿತವಾದ ಛಂದೋಬಂಧಗಳೂ ಧಾರಾಳ ಇವೆ. ಮತ್ತು ೩+೩ ಮಾತ್ರೆಯ ಗಣಗಳ ಸಂಧಾನದಿಂದ ಹುಟ್ಟಿ ೨+೪ ಎಂದೋ ೪+೨ ಎಂದೋ ಆಗುವ ಸಂಯುಕ್ತಗಣಗಳಿಂದಲೂ ೪+೪ ಮಾತ್ರೆಯ ಗಣಗಳ ಸಂಧಾನದಿಂದ ಹುಟ್ಟಿ ೩+೫ ಎಂದೋ ೫+೩ ಎಂದೋ ಆಗುವ ಸಂಯುಕ್ತಗಣಗಳಿಂದಲೂ ಉಂಟಾಗುವ ಛಂದೋಬಂಧಗಳೂ ಇವೆ. (ಇವುಗಳ ಕೂಲಂಕಷ ವಿವೇಚನೆಯೂ ಪೂರ್ವೋಕ್ತ 'ಛಂದೋಗತಿ'ಯಲ್ಲಿ ಸೋದಾಹರಣವಾಗಿ ನಿರೂಪಿತವಾಗಿರುತ್ತದೆ.) ತಾಳದ ದೃಷ್ಟಿಯಿಂದ ಹೇಳುವುದಾದರೆ ಒಂದು ಮಾತ್ರಾಗಣವೆಂಬುದು ಒಂದು ತಾಲಖಂಡ ಅಥವಾ ಒಂದು ಆವರ್ತವಾಗಿರುತ್ತದೆ. ಹೀಗೆ ನೋಡಿದಾಗ ಕನ್ನಡ ಮಾತ್ರಾಬಂಧಗಳ ಆವರ್ತಗಳು ಆರು ಬಗೆಯವೆಂಬುದು ಗೊತ್ತಾಗುತ್ತದೆ. ಎಂದರೆ ಅವು ೩, ೪, ೫, ೭ ಮತ್ತು ೬, ೮ ಮಾತ್ರೆಯವುಗಳಾಗಿರುತ್ತವೆ.

ಪರಾಮರ್ಶಿಸಿ ನೋಡಿದರೆ ಈ ಮೇಲೆ ಸೂಚಿಸಿದ ಗಣನಿಯಮಗಳಿಂದ ರಚಿತವಾದ ಕನ್ನಡ ಮಾತ್ರಾಬಂಧಗಳ ಪ್ರತಿಯೊಂದು ಆವರ್ತದ ಕೊನೆಯೂ ಒಂದು ಯತಿಸ್ಥಾನವೆನ್ನಬಹುದಾಗಿದೆ. ಆದರೆ ಕನ್ನಡದ ಹಳೆಯ ರಚನೆಗಳಲ್ಲಿ ಅಂತಹ ಪ್ರತಿಯೊಂದು ಸ್ಥಾನದಲ್ಲಿ ಯತಿಯಿರುವುದಿಲ್ಲ. ಹೀಗಿದ್ದರೂ ವಿರಾಮಸ್ಥಾನಗಳಲ್ಲಿ ಹೊರತು (– ಈ ವಿರಾಮ ಸ್ಥಾನಗಳು ಸಾಮಾನ್ಯವಾಗಿ ಪದ್ಯಾರ್ಧಗಳ ಕೊನೆಗಳಲ್ಲಿ ಮಾತ್ರ ಇರುತ್ತವೆ.) ಬೇರೆ ಯಾವ ಆವರ್ತದ ಕೊನೆಯಲ್ಲಿಯೂ ನಿಲ್ಲಿಸದೆ ಪಠಿಸುತ್ತಾ ಹೋದರೆ ಆ ಆವರ್ತಗಳ ಕೊನೆಗಳಲ್ಲಿ ಪದವಿಚ್ಛೇದವಿಲ್ಲದಿದ್ದರೂ ಯತಿಭಂಗವಾದಂತೆ ಭಾಸವಾಗುವುದಿಲ್ಲ. ಉದಾ:-

೧ ೨
ಶ್ರೀಯರಸ ಗಾಂ । ಗೇಯನುತ ಕೌಂ ।
೩ ೪
ತೇಯ ವಂದಿತ । ಚರಣ ಕಮಲದ ।
೫ ೬ ೭ ೮
ಲಾಯತಾಂಬಕ । ರೂಪ ಚಿನ್ಮಯ । ದೇವಕೇತನ । ಯ– ॥

(ಕನಕದಾಸ, ಹರಿಭಕ್ತಿಸಾರ)

ಏಳುಮಾತ್ರೆಗಳ ಆವರ್ತಗಳಿಂದ ಘಟಿತವಾದ ಈ ಪದ್ಯಭಾಗದಲ್ಲಿ ೩, ೫, ೭ನೆಯ ಆವರ್ತಗಳ ಕೊನೆಗಳಲ್ಲಿ ಹೊರತು ಬೇರೆಡೆಗಳಲ್ಲಿ ಯತಿಯಿಲ್ಲ. (ಎಂಟನೆಯದು ವಿರಾಮ-ಸ್ಥಾನವಾಗಿರುವುದರಿಂದ ಊನಾಕ್ಷರಘಟಿತವಾಗಿ ಕೊನೆಗೊಳ್ಳುತ್ತದೆ.) ಈ ಉದಾಹರಣಪದ್ಯದ ಆವರ್ತಗಳು ಏಳು ಮಾತ್ರೆಯವಾಗಿದ್ದರೂ ಅವು ಮೂರು ಮತ್ತು ನಾಲ್ಕು ಮಾತ್ರೆಯ ಗಣಗಳ ಸಂಯೋಗದಿಂದ ಉಂಟಾಗುವುದರಿಂದ ಆ ಪ್ರತಿಯೊಂದು ಆವರ್ತದ ಒಳಗಡೆ ಒಂದು ಅಂತರ್ಯತಿಸ್ಥಾನವೂ ಭಾಸವಾಗದಿರುವುದಿಲ್ಲ. ಈ ಮೇಲಿನ ಪದ್ಯಭಾಗದ ೨, ೩, ೪, ೬ ನೆಯ ಆವರ್ತಗಳಲ್ಲಿ ಅಂತರ್ಯತಿ ಇರುವುದೆಂಬುದನ್ನೂ ಉಳಿದ ಆವರ್ತಗಳಲ್ಲಿ ಅದು ಇಲ್ಲದಿರುವುದನ್ನೂ ನೋಡಬಹುದು.

ಆದರೆ ಆಧುನಿಕ ಕನ್ನಡ ಕವಿಗಳಲ್ಲಿ ಹಲವರು ರಚಿಸಿರುವ ಮಾತ್ರಾಬಂಧಗಳಲ್ಲಿ ಪ್ರತಿಯೊಂದು ಆವರ್ತದ ಕೊನೆಯಲ್ಲಿಯೂ ಯತಿಯಿರುವುದು ಸಾಮಾನ್ಯವಾಗಿ ಕಂಡು-ಬರುತ್ತದೆ. ಉದಾ:-

ಬೆರಗು ಕಣ್ಣಿನ । ಬೆರಳ ಮೀಸೆಯ । ಬೆರಸಿದಾ ನಗು । ಮೋರೆಯ- ।
ಅರಸನಿದ್ದನು । ಡೊಂಬರಾಟಕೆ । ಸೆರೆಯ ಸಿಕ್ಕಿದ । ಮನದಲಿ - ॥
(ಪಂಜೆ, ಡೊಂಬರ ಚೆನ್ನೆ)

ದೋಣಿ ಸಾಗಲಿ । ಮುಂದೆ ಹೋಗಲಿ । ದೂರ ತೀರವ । ಸೇರಲಿ- ।
ಬೀಸುಗಾಳಿಗೆ । ಬೀಳುತೇಳುವ । ತೆರೆಯ ಮೇಗಡೆ । ಹಾರಲಿ - ॥ (ಕುವೆಂಪು)

ಇವುಗಳಲ್ಲಿ ಪ್ರತಿಯೊಂದು ಆವರ್ತದ ಕೊನೆಯಲ್ಲಿ ಯತಿಯಿರುವುದು ಮಾತ್ರವಲ್ಲ, ಆವರ್ತಮಧ್ಯಗಳಲ್ಲಿ ಅಂತರ್ಯತಿಯೂ ಇರುತ್ತದೆ. ಹೀಗೆ ಯತಿಸಂಪನ್ನವಾದ ರಚನೆಗಳ ಗತಿಯು ಸುಲಲಿತವಾಗಿರುವುದರಿಂದ ಇವುಗಳನ್ನೋದುವುದು ಯಾರಿಗಾದರೂ ಬಹು ಸುಲಭ, ಆದರೆ ಯತಿಬಹುಲವಾಗಿಲ್ಲದ ನಮ್ಮ ಹಳೆಯ ಮಾತ್ರಾಬಂಧಗಳನ್ನು ಅರ್ಥವೂ ಧಾಟಿಯೂ ಎರಡೂ ಕೆಡದಂತೆ ಓದಬೇಕಾದರೆ ತಕ್ಕಷ್ಟು ಅಭ್ಯಾಸವಿರಬೇಕಾಗುತ್ತದೆ. ಇದನ್ನು ಸೋದಾಹರಣವಾಗಿ ವಿಶದೀಕರಿಸೋಣ.

ಒಂದು ದಿನ ಸೂ । ರ್ಯೋದಯದಿ ಗೋ ।
ವಿಂದ ಸಲಿಲದಿ । ಮಿಂದು ಸಂಧ್ಯಾ ।
ವಂದನೆಯ ಮಾ । ಳ್ಪನಿತರೊಳು ಮ ।
ತ್ತೊಂದು ಯೋಚನೆ । ಗೈದನು - ॥
(ಸಂಕಯ್ಯ ಭಾಗವತ, ಯಕ್ಷಗಾನ ಕೃಷ್ಣಾರ್ಜುನ ಕಾಳಗ)

ಹಳೆಯ ಮಾತ್ರಾಬಂಧಗಳನ್ನು ಓದಿ ಅಭ್ಯಾಸವಿಲ್ಲದವರು ಇದನ್ನು ಪಠಿಸುವಾಗ ಪ್ರತಿಯೊಂದು ಆವರ್ತದ ಕೊನೆಯಲ್ಲಿಯೂ ನಿಲ್ಲಿಸಿ ಪಠಿಸತೊಡಗುತ್ತಾರೆ. ಆಗ ಅದನ್ನು ಕೇಳುವವರಿಗೆ ಅರ್ಥವು ಸ್ಫುಟವಾಗುವುದಿಲ್ಲ ಮತ್ತು ಅಲ್ಲಲ್ಲ ಯತಿಭಂಗವಿರುವಂತೆಯೂ ಕಾಣುತ್ತದೆ. ಆದರೆ ಇಂತಹ ಪದ್ಯಗಳನ್ನು ಓದಿ ಅಭ್ಯಾಸವುಳ್ಳವರು ಇದನ್ನು ಪಠಿಸುವಾಗ ಪ್ರತಿಯೊಂದು ಆವರ್ತದ ಕೊನೆಯಲ್ಲಿ ನಿಲ್ಲಿಸದೆ ಒಂದೇ ಉಸಿರಲ್ಲೆಂಬಂತೆ ಪಠಿಸುವುದರಿಂದ ಅರ್ಥಗ್ರಹಣಕ್ಕೆ ತೊಡಕಾಗುವುದಿಲ್ಲ ಮತ್ತು ಯತಿಭಂಗವುಂಟೆಂಬ ಭಾವನೆಯೂ ಬರುವುದಿಲ್ಲ.

ಮಾತ್ರಾಬಂಧಗಳಲ್ಲಿ ಪ್ರತಿಯೊಂದು ಗಣಾಂತದಲ್ಲಿಯೂ ಯತಿಯಿದ್ದರೆ ಬಂಧವು ಸುಕುಮಾರವಾಗುತ್ತದೆ. ಆದರೆ ನಮ್ಮ ಹಳೆಯ ಕವಿಗಳಿಗೆ ಇಂತಹ ಶೈಲಿ ಇಷ್ಟವಾಗಿರಲಿಲ್ಲ.

ಸುಕುಮಾರಬಂಧಗಳ ಶೈಲಿಯಲ್ಲಿ ಬಾಲಿಶತೆಯನ್ನೇ ಕಾಣುತ್ತಿದ್ದ ಅವರು ನಿಬಿಡಬಂಧವನ್ನು ಮೆಚ್ಚಿದವರಾಗಿದ್ದರು. ಅಲ್ಲದೆ ಪದ್ಯಗಳನ್ನು ಅವರು ಓದುತ್ತಿದ್ದ ಪದ್ಧತಿಗೆ ನಿಬಿಡಬಂಧವೇ ಉಚಿತತರವಾಗಿತ್ತು. ಆ ಪದ್ಧತಿ ಯಾವುದೆಂದರೆ, ಈ ಹಿಂದೆ ಹೇಳಿದಂತೆ ಪದ್ಯಾರ್ಧಗಳಲ್ಲಿ ಹೊರತು ಬೇರೆಲ್ಲಿಯೂ ನಿಲ್ಲಸದೆ ಪಠಿಸುವುದಾಗಿತ್ತು. (ವೃತ್ತಗಳಲ್ಲಿ ಮತ್ತು ಕಂದಪದ್ಯಗಳಲ್ಲಿ ಕನ್ನಡ ಕವಿಗಳು ಪಾದಾಂತಯತಿಭಂಗವನ್ನು ಮಾಡುತ್ತಿದ್ದುದಕ್ಕೆ ಈ ಪಠನವಿಧಾನವೇ ಮೂಲಕಾರಣವಾಗಿತ್ತು. ಇದರ ವಿವರಗಳೆಲ್ಲವೂ ಪೂರ್ವೋಕ್ತವಾದ 'ಛಂದೋಗತಿ'ಯಲ್ಲಿ ನಿರೂಪಿತವಾಗಿವೆ.) ಹೀಗೆ ನಿಲ್ಲಿಸದೆ ಓದುವಾಗ ಕೇಳುವವರಿಗೆ ಅರ್ಥವೂ ಸ್ಫುಟವಾಗ-ಬೇಕಾದರೆ ಪದ್ಯಾಕ್ಷರಗಳನ್ನು ಪಠಿಸುವಾಗ ವಿಶಿಷ್ಟವಾದೊಂದು ವಿಧಾನವನ್ನು ಅನುಸರಿಸ-ಬೇಕಾಗುತ್ತದೆ. ಆ ವಿಧಾನವೇನೆಂಬುದು ತಿಳಿಯಬೇಕಾದರೆ ಮಾತ್ರಾಬಂಧಗಳಾಗಿ ರಚಿತವಾದ ಪದ್ಯಗಳ ಗತಿಯ ಒಂದು ವೈಶಿಷ್ಟ್ಯವನ್ನು ಮೊದಲು ತಿಳಿದುಕೊಳ್ಳಬೇಕಾಗುತ್ತದೆ. ಅದನ್ನಿಲ್ಲಿ ಒಂದಿಷ್ಟು ವಿವರಿಸುವುದು ಅವಶ್ಯವಾಗಿರುತ್ತದೆ.

ತಾಳಬದ್ಧವಾದ ಪದ್ಯಗಳಲ್ಲಿ (ಎಂದರೆ ಮಾತ್ರಾಬಂಧಗಳಲ್ಲಿ ಮತ್ತು ತಾಳಕ್ಕೆ ಅಳವಡುವ ವೃತ್ತಗಳಲ್ಲಿ ಸಹ) ಎರಡು ಗತಿಗಳ ಮೇಳವಿರುತ್ತದೆ; ಛಂದೋಗತಿಯೆಂಬು-ದೊಂದು, ಪದಗತಿಯೆಂಬುದಿನ್ನೊಂದು, ಛಂದೋಗತಿಯೆಂಬುದು ಅಕ್ಷರಪರಿಮಾಣಗಳನ್ನು ಮತ್ತು ಗಣಪರಿಮಾಣಗಳನ್ನು ಅವಲಂಬಿಸಿರುವ ವಸ್ತುಸ್ಥಿತಿ; ಪದ್ಯದ ಅರ್ಥಕ್ಕೂ ಅದಕ್ಕೂ ತಾತ್ತ್ವಿಕವಾದ ಸಂಬಂಧವಿರುವುದಿಲ್ಲ. ಒಂದು ಛಂದೋಬಂಧವನ್ನು ನಿರರ್ಥಕಾಕ್ಷರಗಳಿಂದ ರಚಿಸಿದರೂ ಅದು ಆ ಛಂದೋಬಂಧವೇ ಆಗಿ ಪರಿಣಮಿಸುತ್ತದೆ. ಆದರೆ ಅದೊಂದು ಪದ್ಯವೆನಿಸಲಾರದು. ಒಂದು ಛಂದೋಬಂಧವು ಪದ್ಯವೆನಿಸಿಕೊಳ್ಳಬೇಕಾದರೆ ಅದೊಂದು ಸಾರ್ಥಕ ಪದಸಮುದಾಯ ಅರ್ಥಾತ್ ವಾಕ್ಯರೂಪವಾಗಿರಬೇಕಾಗುತ್ತದೆ. ಈ ವಾಕ್ಯದಲ್ಲಿ ಕಾಣಿಸಿಕೊಳ್ಳುವ ಪದಗಳೊಳಗೆ ಪರಿಮಾಣಸಾಮ್ಯವು ಸರ್ವತ್ರ ಇರುವುದು ಶಕ್ಯವಲ್ಲ. ಆದರೂ ಆ ಪದಗಳಿಗೂ ಛಂದೋಗತಿಯ ಅವಯವಗಳಾದ ಗಣಗಳಿಗೂ ಒಂದು ಬಗೆಯ ಮೈತ್ರಿ ಇರುವುದು ಅವಶ್ಯವಾಗಿರುತ್ತದೆ. (ಗಣಾಂತದಲ್ಲಿ ಪದ ಪೂರ್ತಿಯಾಗಿರುವಾಗ ಮೈತ್ರಿಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಲ್ಲಿ ಅದು ಸ್ವತಃಸಿದ್ಧ.) ಈ ಮೈತ್ರಿ ಎಲ್ಲಿ ಇಲ್ಲವೋ ಅಲ್ಲಿ ಯತಿಭಂಗವೆಂಬ ದೋಷವು ತಲೆಯೆತ್ತುತ್ತದೆ. ಈ ವಿಷಯವನ್ನು ಒಂದು ಉದಾಹರಣೆ-ಯಿಂದ ಸ್ಪಷ್ಟೀಕರಿಸೋಣ.

೧ ೨
ಅರಸುಗಳಿಗಿದು । ವೀರ ದ್ವಿಜರಿಗೆ ।
೩ ೪
ಪರಮ ವೇದದ । ಸಾರ ಯೋಗೀ ।
೫ ೬ ೭ ೮
ಶ್ವರರ ತತ್ತ್ವವಿ । ಚಾರ ಮಂತ್ರೀ । ಶರಿಗೆ ಬದ್ಧಿಗು । ಣ – ॥
೧ ೨
ವಿರಹಿಗಳ ಶೃಂ । ಗಾರ ವಿದ್ಯಾ ।
೩ ೪
ಪರಿಣತರಲಂ । ಕಾರ ಕಾವ್ಯಕೆ ।
೫ ೬ ೭ ೮
ಗುರುವೆನಲು ರಚಿ । ಸಿದ ಕುಮಾರ । ವ್ಯಾಸ ಭಾರತ । ವ – ॥ . ॥

ಇಲ್ಲಿ ಉದಾಹೃತವಾದ ಪದ್ಯದೊಳಗೆ ಪೂರ್ವಾರ್ಧದ ೪, ೫, ೬ನೆಯ ಮತ್ತು ಉತ್ತರಾರ್ಧದ ೧, ೩, ೫ ನೆಯ ಆವರ್ತಗಳ ಕೊನೆಗಳಲ್ಲಿ ಪದ ಪೂರ್ತಿಯಾಗಿರು-ವುದಿಲ್ಲವಾದರೂ ಪದ್ಯಾರ್ಧದ ವಿರಾಮಸ್ಥಾನವೊಂದರಲ್ಲಿ ಹೊರತು ಬೇರೆಡೆಗಳಲ್ಲಿ ನಿಲ್ಲಿಸದೆ ಪಠಿಸುವಾಗ – ಉತ್ತರಾರ್ಧದ ಮೂರನೆಯ ಆವರ್ತದ ಕೊನೆಯೊಂದನ್ನು ಬಿಟ್ಟು – ಎಲ್ಲಿಯೂ ಅರ್ಥಗ್ರಹಣಕ್ಕೆ ತೊಡಕಾಗುವುದಿಲ್ಲ; ಇದಕ್ಕೆ ಕಾರಣವೇನೆಂದರೆ ಆ ಸ್ಥಾನಗಳಲ್ಲೆಲ್ಲ ಛಂದೋಗತಿಗೂ ಪದಗತಿಗೂ ಮೈತ್ರಿ ಇರುವುದಾಗಿದೆ. ಈ ಮೈತ್ರಿ ಎಂಬುದರ ಲಕ್ಷಣ-ವೇನೆಂದರೆ, ಛಂದೋಗತಿಗನುಗುಣವಾಗಿ ಪಠಿಸುವಾಗ ಪದಸ್ವರೂಪಗಳು ನಿರಾಂತಕವಾಗಿ ಬುದ್ಧಿಗೋಚರವಾಗುವುದಾಗಿದೆ. ಆದರೆ ಉತ್ತರಾರ್ಧದ ಮೂರನೆಯ ಆವರ್ತದಲ್ಲಿರುವ 'ಪರಿಣತರ' ಎಂಬ ಪದವೂ ಅದರ ಮುಂದಣ 'ಅಲಂಕಾರ' ಎಂಬ ಪದವೂ ಸಂಧಿವಶಾತ್ ಬೆಸುಗೆಗೊಂಡು 'ಪರಿಣತರಲಂಕಾರ' ಎಂಬ ಸಂಯುಕ್ತಪದವು ಮೂಡಿಬಂದಿರುವುದರಿಂದ ಪಠನಕಾಲದಲ್ಲಿ ಅಲಂಕಾರ ಎಂಬ ಪದವು ಅಲ್ಲಿ ಸ್ಫುರಿಸದೆ 'ಲಂಕಾರ' ಎಂಬುದೇ ಶ್ರವಣಗೋಚರವಾಗುವಂತಾಗಿದೆ. (ವ್ಯಾಕರಣ ಪರಿಭಾಷೆಯಂತೆ ಇಲ್ಲಿ ಅಲಂಕಾರವೆಂಬ ಪದದ ನಾಮರೂಢಿ ಅಳಿದುಹೋಗಿದೆ.) ಛಂದಃಶಾಸ್ತ್ರಪರಿಭಾಷೆಯಲ್ಲಿ ಹೇಳುವುದಾದರೆ ಇದು ಯತಿಭಂಗ. ('ಯತಿಯೆಂದರೆ ಉಸಿರ್ದಾಣ' ಎಂಬ ಲಕ್ಷಣವು ತಾಳಕ್ಕೆ ಅಳವಡದ ಛಂದೋಬಂಧಗಳಿಗೆ ಎಂದರೆ ವಿಷಮಗತಿಯ ವೃತ್ತಗಳಿಗೆ ಒಂದು ವೇಳೆ ಅನ್ವಯಿಸಬಹು-ದಾದರೂ ಮಾತ್ರಾಬಂಧಗಳ ವಿಷಯದಲ್ಲಿ 'ಯತಿಯೆಂಬುದುಸಿರ್ದಾಣ' ಎಂಬ ಲಕ್ಷಣ-ವಾಕ್ಯವು ಸವಿರಾಮ ಪಾದಾಂತಗಳಲ್ಲಿ ಹೊರತು ಬೇರೆಡೆಗಳಲ್ಲಿ ಸರ್ವಥಾ ಅನ್ವಯಿಸುವಂತಿಲ್ಲ. ಇದನ್ನು ಪರಿಭಾವಿಸಿದೆವಾದರೆ ನಾಗವರ್ಮನು ಹೇಳಿದ ಯತಿಲಕ್ಷಣದಲ್ಲಿರುವ ವ್ಯಾಪ್ತಿ ದೋಷವು ಯಾರಿಗಾದರೂ ಸುಸ್ಪಷ್ಟವಾಗದಿರದು.)

{ದಂಡಾಕಾರ ಪಠನಪದ್ಧತಿ} ನಿಬಿಡಬಂಧಗಳಾಗಿ ರಚಿತವಾಗಿರುವ ತಾಳಬದ್ಧವಾದ ಛಂದೋಬಂಧಗಳನ್ನು ಛಂದೋಗತಿಗನುಗುಣವಾಗಿ ಪಠಿಸುವಾಗ ಪದ್ಯಗತವಾದ ಪದಗಳೆಲ್ಲ ಸ್ಫುಟವಾಗಿ ಬುದ್ಧಿಗೋಚರವಾಗಬೇಕಾದರೆ ಪಠನದಲ್ಲಿ ವಿಶಿಷ್ಟವಾದೊಂದು ವಿಧಾನವನ್ನು ಅನುಸರಿಸುವುದು ಅವಶ್ಯವಾಗಿದೆ. ಅದು ಹೇಗೆಂದರೆ:– ತಾಳಬದ್ಧವಾದ ಪದ್ಯಗಳ ಪಠನ ಮಾಡುವಾಗ ಛಂದೋಗತಿ ಸ್ಪಷ್ಟವಾಗುವುದಕ್ಕಾಗಿ ಆವರ್ತಗಳ ಆದ್ಯಕ್ಷರಗಳನ್ನು ಇತರ ಅಕ್ಷರಗಳಿಗಿಂತ ಸ್ಫುಟತರವಾಗಿ ಉಚ್ಚರಿಸುವುದು ಸಾಮಾನ್ಯವಾಗಿರುತ್ತದೆ. ಆದರೆ ನಿಬಿಡ ಬಂಧಗಳನ್ನು ಪಠಿಸುವಾಗ ಹೀಗೆ ಮಾಡಿದರೆ ಎಷ್ಟೋ ವೇಳೆ ಪದಸ್ವರೂಪಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ವಾಕ್ಯದಲ್ಲಿರುವ ಯಾವುದೊಂದು ಪದಸ್ವರೂಪವು ಸ್ಫುಟವಾಗಿ ಶ್ರವಣ-ಗೋಚರವಾಗಬೇಕಾದರೆ ಪದಾದಿಯ ಅಕ್ಷರವನ್ನು ಇತರ ಅಕ್ಷರಗಳಿಗಿಂತ ಕಿಂಚಿತ್ ಸ್ಫುಟತರವಾಗಿ ಉಚ್ಚರಸಬೇಕಾಗುತ್ತದೆ. ಆದುದರಿಂದ ನಿಬಿಡಬಂಧಗಳ ಪಠನದಲ್ಲಿ ಛಂದೋಗತಿಯನ್ನು ಸ್ಫುಟೀಕರಿಸುವ ಆವರ್ತಗಳ ಆದ್ಯಕ್ಷರಗಳನ್ನು ಸ್ಫುಟೀಕರಿಸದೆ ಪದಾದಿಗಳ ಆದ್ಯಕ್ಷರಗಳನ್ನು ಸ್ಫುಟೀಕರಿಸಿ ಉಚ್ಚರಿಸಿದರೆ ಪದಸ್ವರೂಪಗಳು ವಿಕೃತವಾಗುವುದಿಲ್ಲ. ಮತ್ತು ಪದ್ಯವನ್ನು ಎಡೆಗಳಲ್ಲೆಲ್ಲಿಯೂ ನಿಲ್ಲಿಸದೆ ವಿರಾಮಸ್ಥಾನದವರೆಗೆ ತಾಳತಪ್ಪದೆ ಪಠಿಸು-ವುದರಿಂದ ಅಲ್ಲಿ ಛಂದೋಗತಿಗೂ ಭಂಗಬರುವುದಿಲ್ಲ. ಇದು ಸಂಪೂರ್ಣವಾಗಿ ಮನವರಿಕೆ-ಯಾಗಬೇಕಾದರೆ ಪ್ರಾಯಶಃ ಉಚ್ಚರಣದ ಮೂಲಕವೇ ಆಗಬೇಕೆನ್ನಬಹುದು. ಆದರೂ ಲಿಖಿತರೂಪದಲ್ಲಿ ಅದರ ಒಂದಿಷ್ಟು ಪರಿಚಯವನ್ನು ಮಾಡುವುದಾದರೆ ಅದು ಹೀಗೆ:–

ಶ್ರೀ ವನಿತೆಯರಸನೆ ವಿಮಲ ರಾ

ಷಟ್ಪದಿಗಳಿಗೆಲ್ಲ ಸಾಮಾನ್ಯವಾಗಿ ಈ ನಿಯಮವು ಕೂಡಿಬರುತ್ತದೆ. ಉಪನ್ಯಾಸ ವಿಸ್ತಾರಭಯದಿಂದ ಹೆಚ್ಚು ಉದಾಹರಣೆಗಳನ್ನು ಕೊಡುತ್ತ ಹೋಗುವುದಿಲ್ಲ. ಜೈಮಿನಿಭಾರತದ ಒಂದು ಉದಾಹರಣೆಯನ್ನು ಮಾತ್ರ ಕೊಡುತ್ತೇನೆ. ಅದರ ಆರನೆಯ ಪಾದದಲ್ಲಿ "ದೇವಪುರ ಲಕ್ಷ್ಮೀರ । ಮಣನಾಸ್ಯಚಂದ್ರನಾನಂದಮಂ ನಮಗೀಯಲಿ" ಎಂದಿರುವಲ್ಲಿ "– । ಮಣನಾಸ್ಯ" ಎಂದು ಯತ್ಯನಂತರ ಪ್ರತೀತವಾಗಿ 'ನಾಮರೂಢಿ' ಅಳಿಯುತ್ತದೆ. ಈ ಕಾರಣದಿಂದಲೇ ಈ ಪಾದಕ್ಕೆ ಈಯೊಂದು ವ್ಯಾಕರಣದುಷ್ಟ ಪಾಠವುಂಟಾಗಿದೆ – "ದೇವಪುರ ನಿಲಯ ಲ । ಕ್ಷ್ಮೀರಮಣನಾಸ್ಯಚಂದ್ರಾನಂದಮೆಮಗೀಯಲಿ". ಇಲ್ಲಿ ಯತ್ಯನಂತರ "– । ಕ್ಷ್ಮೀರಮಣ" ಎಂದು ಬರುತ್ತದೆ. ಆದುದರಿಂದ ಇದೂ ಯತಿಭಂಗವಲ್ಲವೋ? ಎಂದರೆ, ಯತಿಯ ಇನ್ನೊಂದು ರಹಸ್ಯವನ್ನು ಗ್ರಹಿಸಿಕೊಳ್ಳುವುದೂ ಅವಶ್ಯ; ಹಿಂದೆಮುಂದೆ ಲಘುವಿದ್ದಲ್ಲಿ ಯತಿಭಂಗವಾದರೆ ಪ್ರತೀತವಾಗುವಂತೆ, ಗುರು–ವಿದ್ದರೆ ಆಗುವುದಿಲ್ಲ. ಇದಕ್ಕೆ ತ್ರಿಮೂರ್ತಿಗಣವು ಕನ್ನಡದ ಕಿವಿಗೆ ಉಂಟು ಮಾಡಿದ ಅಭ್ಯಾಸವೂ ಒಂದು ಕಾರಣ; ಅಲ್ಲದೆ, ಗುರು ಗಣಾಂತಯತಿಯ ಹಿಂದಾಗಲಿ ಮುಂದಾಗಲಿ ಇರುವಾಗ ಅಕ್ಷರೋಚ್ಚಾರವು ವಿಲಂಬಿತವಾಗಿ ಯತಿಭಂಗವು ಭಾಸವಾಗುವುದಿಲ್ಲ. ಉದಾಹೃತವಾದ ಈ ಪಾಠದಂತೆ ಯತಿಯ

---

ಜೀವಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರ ದಾತಾರ – ॥

...........

ಒಂದು ದಿನ ಸೂರ್ಯೋದಯದಿ ಗೋ
ವಿಂದ ಸಲಿಲದಿ ಮಿಂದು ಸಂಧ್ಯಾ
ವಂದನೆಯ ಮಾಳ್ಪನಿತರೊಳು ಮ
ತ್ತೊಂದು ಯೋಚನೆಗೈದನು– ॥

ಇಲ್ಲಿ ಗುರುತು ಹಾಕಿದ ಅಕ್ಷರಗಳನ್ನು ಸ್ಫುಟತರವಾಗಿ ಉಚ್ಚರಿಸಿ ಎಡೆಯಲ್ಲಿ ಎಲ್ಲಿಯೂ ನಿಲ್ಲಿಸದೆ ಉದಾಹೃತ ಭಾಗವನ್ನು ಪೂರ್ಣವಾಗಿ ಪಠಿಸಿದರೆ ಛಂದೋಗತಿ ಹಾಗೂ ಪದಗತಿ ಇವೆರಡೂ ಕೆಡದೆ ಪದ್ಯವು ಸುಶ್ರಾವ್ಯವಾಗುವುದೆಂಬುದನ್ನು ವಾಚಕರು ಸ್ವಾನುಭಾವದಿಂದ ತಿಳಿದುಕೊಳ್ಳಬಹುದು.

ಮಾತ್ರಾಬಂಧಗಳನ್ನು ಈ ಮೇಲೆ ತೋರಿಸಿದಂತೆ ವಿರಾಮಸ್ಥಾನಗಳಲ್ಲಿ ಹೊರತು ಬೇರೆಲ್ಲಿಯೂ ನಿಲ್ಲಿಸದೆ (ತಾಳ ತಪ್ಪದೆ) ಪಠಿಸುವ ವಿಧಾನವನ್ನು "ದಂಡಾಕಾರದಲ್ಲಿ ಓದುವುದು" ಎನ್ನುತ್ತಿದ್ದರು. ಈ ರೀತಿ ದಂಡಾಕಾರದಲ್ಲಿ ಓದುವುದೇ ಹಿಂದಿನ ಕಾಲಗಳಲ್ಲಿ ಸಾಮಾನ್ಯ ಸಂಪ್ರದಾಯವಾಗಿತ್ತು.

ಹಿಂದೆಯೂ ಮುಂದೆಯೂ ಗುರುವಿರುವುದರಿಂದ ಇದು ಗಾನದ ಒಂದು ಗತಿವಿಶೇಷವೆಂದು ಪ್ರತೀತವಾಗಿ ಅರ್ಥಗ್ರಹಣವು ನಿರ್ಬಾಧವಾಗುತ್ತದೆ. ಇದಕ್ಕೆ ಉದಾಹರಣೆಗಳು ಅದೇ ಪದ್ಯದ ಇತರ ಯತಿಸ್ಥಾನಗಳಲ್ಲಿಯೂ ಕಾಣುತ್ತವೆ. ಅಲ್ಲೆಲ್ಲೂ ಯತಿಭಂಗವೆಂದು ಸ್ಫುರಿಸದಿರುವುದಕ್ಕೆ ಹಿಂದಾಗಲಿ, ಮುಂದಾಗಲಿ ಬಂದ ಗುರುವಿನ ಸಹಾಯವೂ, 'ನಾಮರೂಢಿ' ಅಳಿಯದುದೂ ಕಾರಣ.

ಶ್ರೀವಧುವಿ । ನಂಬಕ ಚ । ಕೋರಕಂ । ಪೊರೆಯೆ ಭ ।
ಕ್ತಾವಳಿಯ । ಹೃತ್ಕುಮುದ । ಕೋರಕಂ । ಬಿರಿಯೆ ಜಗ ।
ತೀವಲಯ । ದಮಲ ಸೌ । ಭಾಗ್ಯರ । ತ್ನಾಕರಂ । ಪೆರ್ಚಿನಿಂ ।
ಮೇರೆವರಿ । ಯೆ ॥
ಆವಗಂ । ಸರಸ ಕರು । ಣಾಮೃತದ । ಕಲೆಗಳಿಂ ।
ತೀವಿದೆಳ । ನಗೆಯ ಬೆ । ಳ್ದಿಂಗಳಂ । ಪಸರಿಸುವ ।
ದೇವಪುರ । ಲಕ್ಷ್ಮೀರ । ಮಣನಾಸ್ಯ । ಚಂದ್ರನಾ । ನಂದಮಂ ।
ನಮಗೀಯ । ಲಿ ॥[35]

ಇಲ್ಲಿ ನಾಲ್ಕನೆಯ ಪಾದದ "ಕರು । ಣಾಮೃತ" ಎಂಬಲ್ಲಿ, 'ಅಮೃತ' ಎಂಬ 'ನಾಮರೂಢಿ'ಯಳಿಯಲಿಲ್ಲವೋ? ಎಂದರೆ, 'ಕರುಣಾಮೃತ' ಎಂಬ ಸಮಾಸಪದಾರ್ಥವೇ ಇಲ್ಲಿ ಗ್ರಾಹ್ಯವಾದುದಾದ ಕಾರಣ 'ನಾಮರೂಢಿ' ಅಳಿಯ-ಲಿಲ್ಲ; ಆದುದರಿಂದ ಯತಿಭಂಗದೋಷವಿಲ್ಲ. ಅಲ್ಲದೆ, ಯಾವುದೊಂದು ಪದದ ಸಣ್ಣ ತುಂಡು ಯತ್ಯನಂತರ ಉಳಿದರೆ ಮಾತ್ರ, ಅದೂ ಗುರು ಸಹಾಯ-

35. {ಜೈಮಿನಿಭಾರತದ ಮೊದಲ ಪದ್ಯಕ್ಕೊಂದು ಊಹಾಪಾಠ} ಜೈಮಿನಿಭಾರತದ ಅತಿಸುಂದರವಾದ ಪದ್ಯಗಳೊಳಗೆ ಒಂದಾದ ಪ್ರಸ್ತುತ ಪದ್ಯದ ಆರನೆಯ ಚರಣದಲ್ಲಿ ಕಾಣಿಸಿಕೊಂಡಿರುವ ಯತಿಭಂಗವು ಅದಕ್ಕೆ ಒಂದು ಕಳಂಕವಾಗಿದೆ. ಇದನ್ನು ಪರಿಹರಿಸಬಲ್ಲ ಒಂದು ಪಾಠಾಂತರವನ್ನು ದಿವಂಗತ ಬಡೆಕ್ಕಿಲ ವೆಂಕಟರಮಣ ಭಟ್ಟರು ಹೇಳಿದ್ದುಂಟು. ಅದು ಹೀಗಿವೆ: 'ದೇವಪುರನಿಲಯ ಲಕ್ಷ್ಮೀರಮಣ ಚಂದ್ರನಾನಂದಮಂ ನಮಗೀಯಲಿ' – ಈ ಪಾಠವನ್ನನುಸರಿಸಿದಾಗ ಪದ್ಯದ ವರ್ಣ್ಯವಸ್ತುವಿನಲ್ಲಿ ಒಂದು ಸಣ್ಣ ಬದಲಾವಣೆಯುಂ-ಟಾಗುತ್ತದೆ. ಮುದ್ರಿತ ಪುಸ್ತಕಗಳಲ್ಲಿ ಕಂಡುಬರುವ ಪಾಠದಂತೆ ಈ ಪದ್ಯದಲ್ಲಿ ವರ್ಣಿತವಾದ ವಸ್ತು ದೇವಪುರ ಲಕ್ಷ್ಮೀರಮಣನ ಆಸ್ಯಚಂದ್ರ, ಇಲ್ಲಿ ಸೂಚಿಸಿದ ಪಾಠದಂತೆ ವರ್ಣ್ಯವಸ್ತು ಲಕ್ಷ್ಮೀರಮಣರೂಪವಾದ ಚಂದ್ರನೇ ಆಗುತ್ತದೆ. ಹೀಗಿದ್ದರೂ ಈ ಪಾಠದಿಂದಾಗಿ ಪದ್ಯದ ಸೌಂದರ್ಯವು ಒಂದಿಷ್ಟೂ ಕಡಮೆಯಾಗುವುದಿಲ್ಲ; ಪ್ರಾಯಶಃ ಅದು ಪುಷ್ಟೀಕೃತವೇ ಆಗುತ್ತದೆ. ಆನಂದದಾಯಕವಾದ ಗುಣವನ್ನು ಲಕ್ಷ್ಮೀರಮಣನ ಮುಖಕ್ಕೆ ಮಾತ್ರ ಆರೋಪಿಸದೆ ಲಕ್ಷ್ಮೀ-ರಮಣನ ಪೂರ್ಣಸ್ವರೂಪಕ್ಕೆ ಆ ಗುಣವನ್ನು ಆರೋಪಿಸುವುದು ಪದ್ಯದ ತಾತ್ಪರ್ಯಕ್ಕೆ (ರಾಮಚಂದ್ರ – ಇತ್ಯಾದಿ ಪ್ರಯೋಗಗಳಂತೆ) ಶೋಭಾತಿಶಯವನ್ನೇ ತರುವಂತಹದಾಗಿದೆ. ಆದುದರಿಂದ ಯತಿಭಂಗದೋಷರಹಿತವಾಗಿದ್ದು ಲಲಿತತರವಾಗಿ ಕಿವಿಗೊಳಿಸುವ ಈ ಪಾಠವು ಗ್ರಾಹ್ಯವಾಗಲು ತಕ್ಕುದಾಗಿದೆ.

ವಿಲ್ಲದಿದ್ದರೆ, ಶ್ರುತಿಗೆ ಅಸಹ್ಯವಾಗುವಷ್ಟು ಹಿಂದೆ ಉಳಿದರೆ ಆಗುವುದಿಲ್ಲ. ಇದಕ್ಕೆ "ಅಂಬಕ ಚ । ಕೋರಕಂ" ಎಂಬುದೇ ಸಾಕ್ಷಿ.

*  *  *  *  *

ಇದನ್ನೆಷ್ಟು ವಿಸ್ತರಿಸಿದರೂ ಯತಿಯೆಂಬುದು ಶಯ್ಯೆ ಹೇಗೋ ಹಾಗೆ, ಅಭ್ಯಾಸಸಂಸ್ಕೃತವಾದ ಶ್ರುತಿವಿಷಯವೆಂದು ಹೇಳಿ, ಯತಿವಿಚಾರವನ್ನು ಮುಗಿಸುತ್ತೇನೆ.

ನಾನೀ ಉಪನ್ಯಾಸದಲ್ಲಿ ಪ್ರತಿಪಾದಿಸಿದ ವಿಷಯಗಳನ್ನು ಹೀಗೆ ಸಂಗ್ರ-ಹಿಸಬಹುದು:- ಸಂಗೀತಕ್ಕೂ ಛಂದಸ್ಸಿಗೂ ಮೂಲವೊಂದೇ; ಗಾನೋಪ-ಯುಕ್ತತೆಯೇ ಪದ್ಯದ ಪ್ರಯೋಜನ; ಬಂಧಗಳು ಪ್ರಕೃತಿಪ್ರೇರಿತವಾದ ಗತಿರೂಪ-ಗಳಲ್ಲಿ ಹುಟ್ಟಿ ಬರುತ್ತವೆಯೆ ಹೊರತು ಗಣಿತಕ್ರಿಯೆಯ ಫಲವಾಗಿ ಅಲ್ಲ; ಕನ್ನಡಕ್ಕೆ ವಿಶಿಷ್ಟ, ಸ್ವತಂತ್ರ ಛಂದಸ್ಸಿದೆ; ಪ್ರಥಮ ಲಘ್ವನಂತರ ಗುರುನಿಷೇಧವು ಕನ್ನಡ ಗಣಗಳ ವೈಶಿಷ್ಟ್ಯ; ತ್ರಿಮೂರ್ತಿಗಣಗಳೇ ಕನ್ನಡದ ಆದಿಯ ಛಂದೋಗಣಗಳು; ಇವುಗಳಿಂದಲೇ ಷಟ್ಪದಿ ಮೊದಲಾದುವುಗಳ ಮಾತ್ರಾಗಣಗಳು ಹುಟ್ಟಿದುವು; ಕನ್ನಡದ ಹಾಡುಗಳಲ್ಲಿ ಇಂದಿನವರೆಗೂ ಅಂದಿನ ಲಕ್ಷಣಗಳು ಗೋಚರಿಸುತ್ತವೆ. ಕನ್ನಡಕ್ಕೆ ಯತಿ ಬೇಡವೆಂಬ ಮಾತಿನಲ್ಲಿ ಹುರುಳಿಲ್ಲ; (ಕನ್ನಡ ಕವಿಗಳು ಯತಿ-ಯನ್ನು - ಪಾದಾಂತವಿಷಯದಲ್ಲಿ ಹೊರತು - ಹೆಚ್ಚು ಕಡಮೆ ಅನುಸರಿಸಿ ತಮ್ಮ ರಚನೆಗಳನ್ನು ಮಾಡಿರುತ್ತಾರೆ.) - ಇಷ್ಟೆ.

✷✷

## ಪರಿಶಿಷ್ಟ ೧[36]

## {ಉದ್ದೇಶಪೂರ್ವಕ ಯತಿಭಂಗ ಮತ್ತು ಗಣರೂಪಭಂಗ}

ಕವಿಗಳು ವರ್ಣ್ಯವಸ್ತುಸ್ವರೂಪವನ್ನು ವ್ಯಂಜಿಸುವ ಉದ್ದೇಶದಿಂದ ತಾಳ ಬದ್ಧವಾದ ಬಂಧಗಳಲ್ಲಿ (ಮಾತ್ರಾಬಂಧಗಳಲ್ಲಿ ಮತ್ತು ತ್ರಿಮೂರ್ತಿಗಣಬಂಧ-ಗಳಲ್ಲಿ) ಬುದ್ಧಿಪೂರ್ವಕವಾಗಿ ಯತಿಭಂಗಗಳನ್ನು ಮತ್ತು ಗಣರೂಪಭಂಗಗಳನ್ನು ಮಾಡುವುದುಂಟು. ಕನ್ನಡದ ಹಳೆಯ ಕಾವ್ಯಗಳಲ್ಲಿ ಇದರ ನಿದರ್ಶನಗಳು ಅಪೂರ್ವವಾಗಿರುವುವಾದರೂ ಆಧುನಿಕ ಕವಿಗಳ ರಚನೆಗಳಲ್ಲಿ ಇವು ಅಲ್ಲಲ್ಲಿ ಕಂಡುಬರುತ್ತವೆ. ಉದಾ:- ಕೀ. ಶೇ. ಪಂಜೆ ಮಂಗೇಶರಾಯರ 'ತೆಂಕಣಗಾಳಿ-ಯಾಟ' ಎಂಬ ಮನೋಹರವಾದ ಕವನದಲ್ಲಿ 'ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ' ಎಂಬಲ್ಲಿ ಬಂದಿರುವ 'ದಡಕ್ಕೆ' ಎಂಬಲ್ಲಾದ ಗಣರೂಪಭಂಗದಿಂದ ಸಮುದ್ರದ ತೆರೆ ಕಣ್ಣಿಗೆ ಕಟ್ಟುವಂತಾಗಿರುತ್ತದೆ. ಇತರ ಕವಿಗಳ ಕೃತಿಗಳಲ್ಲಿ ಇದಕ್ಕೆ ಕೊಡಬಹುದಾದ ಉದಾಹರಣೆಗಳು ಈಗ ನನ್ನ ಸ್ಮೃತಿಗೆ ಬಾರದಿರುವುದರಿಂದ (ನಾನೀಗ ದೃಷ್ಟಿಹೀನನಾಗಿರುವುದರಿಂದ ಓದಿಕೊಳ್ಳಲು ಅಸಮರ್ಥನಾಗಿದ್ದೇನೆ.) ನನ್ನ ರಚನೆಗಳಿಂದಲೇ ಒಂದೆರಡು ಉದಾಹರಣೆಗಳನ್ನು – ವಿಷಯಪರಿಚಯವು ವಾಚಕರಿಗೆ ಆಗಬೇಕೆಂಬ ಒಂದೇ ಉದ್ದೇಶದಿಂದ – ಇಲ್ಲಿ ಕೊಡುತ್ತೇನೆ.

೧. ಅಲ್ಲಿ ನಿಂದು ನೋಡಲೇನು ! ಯಮನ ವರಿಸಲೆಂದು ಹೊರಟ
ಸಿರಿಯ ಸಿಂಗರಿಸಿದ ತೇರೊ ! ಎನಲು ತೋರಿ, ಭೋರಿಡುತ್ತ
ಉರಿಯುತಲಿದೆ ಕುಣಿಯುತಲಿದೆ ಆಳ್ವನಾಳ್ವ ಬೀಡು! ಭಾಗ್ಯ
ಚೆದರಿದಂತೆ ಉದುರಿದಂತೆ, ಕೆದರುತಲಿದೆ ಕೆಂಡ, ಜಗುಳು-
ತಲಿದೆ ಬೂದಿ; ನೋಳ್ಪ ಕಣ್ಣನೊಡೆಯುವಂತೆ, ಮನೆಯ ಗಂಟ-
ಲೊಡೆಯುವಂತೆ ಒಡೆಯುತಲಿದೆ ಮಾಡ ಬಿದಿರ ಗಂಟು; ಬದುಕ
ನುಳಿಸೆ ಧಾವಿಸುವರ ತೋಳೆ ಮುರಿಯುವಂತೆ ಮುರಿಯುತಲಿದೆ
ಮನೆಯ ತೋಳು, 'ಗುಮ್ಮಣಾಳ್ವ ! ಬಳಿಗೆ ಬಾರೊ! ಸಿರಿಯ ಕರುಳ
ಸವಿಯ ನೋಡೊ!' ಎಂದು ಬೆಂಕಿ ನಗುವ ತೆರದಿ ಉಗಿವ ತೆರದಿ
ಕರವ ನೀಡಿ ಕರೆವ ತೆರದಿ ನೆಗೆಯುತಿತ್ತು, ಭುಗಿಲುತಿತ್ತು.

– ಈ ಭಾಗವು 'ಶ್ವಮೇಧ' ಎಂಬ ನನ್ನ ಸಣ್ಣ ಕಾವ್ಯದಿಂದ ಎತ್ತಿ ಬರೆದುದಾಗಿದೆ. ಈ ಕಾವ್ಯವು ಸರ್ವತ್ರ ಮೂರು ಮಾತ್ರೆಯ ಗಣಗಳಿಂದಲೇ ರಚಿತವಾಗಿ ಅದೇ ಗತಿಯಲ್ಲಿ ಸಾಗಿರುವುದಾದರೂ ಇಲ್ಲಿ 'ಉರಿಯುತಲಿದೆ,

---

36. ಇಲ್ಲಿ ಕಾಣಿಸಿರುವ ಪರಿಶಿಷ್ಟಗಳು ೧೯೩೦ನೆಯ ಇಸವಿಯ ಉಪನ್ಯಾಸದ ಭಾಗಗಳಲ್ಲ; ಇದನ್ನು ಇದೀಗ (೧೯೮೮ರಲ್ಲಿ) ಹೊಸತಾಗಿ ಸೇರಿಸಲಾಗಿದೆ.

ಕುಣಿಯುತಲಿದೆ, ಕೆದರುತಲಿದೆ, ಒಡೆಯುತಲಿದೆ, ಮುರಿಯುತಲಿದೆ' – ಎಂಬ ಸಂದರ್ಭಗಳಲ್ಲಿ (ಗಣಸಂಧಾನ ಮಾಡಿ) ಕಾವ್ಯದಲ್ಲಿ ಸರ್ವತ್ರಪ್ರವೃತ್ತವಾದ ಮೂರು ಮಾತ್ರೆಗಳ ಗತಿಗೆ ಗತಿಭಂಗ ತರಲಾಗಿದೆ. 'ಕೆದರುತಲಿದೆ ಕೆಂಡ ಜಗುಳುತಲಿದೆ ಬೂದಿ' ಈ ಭಾಗದಲ್ಲಿ ಗತಿಭಂಗ ಮಾಡಿರುವುದು ಮಾತ್ರವಲ್ಲ, ಇದನ್ನು ಪಠಿಸುವಾಗ 'ಜಗುಳುತಲಿದೆ ಬೂದಿ' ಎಂಬಲ್ಲಿ ಯತಿಭಂಗವೂ ಭಾಸವಾಗುವಂತಿದೆ. ಇದರ ಪರಿಣಾಮವಾಗಿ ಪದ್ಯದ ಗತಿ ಛಿನ್ನಭಿನ್ನವಾಗಿ ಪರಿಣಮಿಸುವುದಾದರೂ ಬೆಂಕಿ ಮಾಡುತ್ತಿದ್ದ ಘೋರಕೃತ್ಯಗಳನ್ನು ಪ್ರತ್ಯಕ್ಷೀಕರಿಸು-ವುದಕ್ಕಾಗಿ ಬುದ್ಧಿಪೂರ್ವಕವಾಗಿ ಹೀಗೆ ಗತಿಯನ್ನು ಕೆಡಿಸಿದುದಾಗಿದೆ.

೨. ಗಜರುದನಿಯ ಸದ್ದು ಕಿವಿಯನೊದೆಯೆ, ಸಂಧಿ ಸಡಿಲಿ ಕಾಲು
ನಡುನಡುಗುತ ಹೊರಗೆ ಬಂದ ಸತಿಯ ಕಣ್ಗೆ ಬಿದ್ದುದೊಡೆದ
ಅಮೃತಭಾಂಡ ಉದುರಿತವಳ ಹರಣದೊಂದು ಖಂಡ ! 'ಅರೇ'
ಎನುತ ಕೀರುಗುತ್ತುತಿರುವ ರವಕೆ, ಕಾದ ಕಬ್ಬಿಣಕ್ಕೆ
ಮಲೆವ ಮೊಗವನೆತ್ತಿ ಸೆಟ್ಟಿ ನುಡಿದ –

– ಈ ಭಾಗದಲ್ಲಿ 'ನಡನಡುಗುತ' ಎಂಬಲ್ಲಿ ಆಗಿರುವುದು ಹಿಂದಿನ ಉದಾಹರಣದಲ್ಲಿರುವಂತಹ ಗಣಸಂಧಾನ. 'ಅರೇ' ಎಂಬಲ್ಲಿ ಮಾಡಲ್ಪಟ್ಟಿ-ರುವುದು ಗಣರೂಪಭಂಗ. ಈ ಕಾವ್ಯದಲ್ಲಿ ಬೇರೆಲ್ಲಿಯೂ 'ಲಗಂ' ರೂಪದ ಗಣವಿಲ್ಲ. ಇಲ್ಲಿ ಮಾತ್ರ ಹೀಗೆ ಮಾಡಿರುವುದು ಅದನ್ನುಚ್ಚರಿಸುವ ವ್ಯಕ್ತಿಯ ಗಾಬರಿಯನ್ನು ತೋರಿಸುವ ಉದ್ದೇಶದಿಂದಾಗಿದೆ.

೩. "ಭಿಲ್ಲ ತರುಣ ಹೃದಯ ವನಸಾರಂಗಿ !
ನಿಲ್ಲು ನಿಲ್ಲದೊ ಬಂದ ಬೇಟೆಗಾರ !
ಬಿಲ್ಲ ತಾರ, ಹಿ । ಡಿಯದಿರಲಾರ ! ಹಿ – ।
ಡಿದು, ಬಿಡಲಾರದ ಬೇಟೆಗಾರ !
ನಲ್ಲನದೊ ಬಂದ, ನಗುತ ನಗುತ ನಿಂದ;
ಗಲ್ಲವು ಬಲು ಚೆಂದ! ತನುವಿನಂದ
ಚೆಲ್ಲಗಾರ್ತಿ! –ಲ । ಜ್ಜೆಗೆ ಮಸೆಗತ್ತಿ; ಮ – ।
ದುವೆ ನಮಗರ್ತಿ, ಕು । ಣಿಯಲಾನಂದ !"
(ಪುಣ್ಯಲಹರಿ ಅಥವಾ ಶಬರಿ)

– ಈ ಪಿರಿಯಕ್ಕರವನ್ನು ಅದರ ಧಾಟಿಗನುಗುಣವಾಗಿ ಪಠಿಸುವಾಗ ಐದು ಕಡೆಗಳಲ್ಲಿ ಪರಿಸ್ಫುಟವಾದ ಯತಿಭಂಗಗಳು ಗೋಚರಿಸುತ್ತವೆ. ನರ್ತನದ ಪ್ಲುತಿಗಳನ್ನು ಪ್ರತ್ಯಕ್ಷೀಕರಿಸುವುದಕ್ಕಾಗಿಯೇ ಈ ಯತಿಭಂಗಗಳು ಉದ್ದೇಶ-ಪೂರ್ವಕವಾಗಿ ಮಾಡಲ್ಪಟ್ಟುವಾಗಿವೆ. ಹೀಗೆ ಅರ್ಥಪುಷ್ಟಿಯನ್ನೊದಗಿಸುವ

ಉದ್ದೇಶದಿಂದ ಮಾಡಲ್ಪಡುವ 'ಯತಿಭಂಗ'ಗಳನ್ನು ಮತ್ತು 'ಗಣರೂಪ ಭಂಗ'ಗಳನ್ನು ಈ ಹೆಸರುಗಳಿಂದ ಸೂಚಿಸುವುದರ ಬದಲಾಗಿ, 'ಯತಿಸ್ಥಾನ ವಿಕಲ್ಪ' ಮತ್ತು 'ಗಣರೂಪವಿಕಲ್ಪ' ಎಂದು ಹೆಸರಿಸುವುದು ಯೋಗ್ಯವೆಂದು ಹೇಳಿದರೆ ತಪ್ಪಾಗಲಾರದು.

[ಆಂಗ್ಲಭಾಷೆಯ ಛಂದೋಬಂಧಗಳು ಅಕ್ಷರಗಣಬಂಧಗಳಾಗಿದ್ದು ಸಂಸ್ಕೃತದ ಸತಾನವೃತ್ತಗಳಂತೆ (ಸತಾನವೃತ್ತಗಳ ಸ್ವರೂಪನಿರೂಪಣೆಯನ್ನು ಪೂರ್ವೋಕ್ತವಾದ 'ಛಂದೋಗತಿ'ಯಲ್ಲಿ ನೋಡಿಕೊಳ್ಳಬಹುದು.) ಏಕಗಣ ಘಟಿತಗಳಾಗಿಯೇ ಇರುವುದರಿಂದ ಆ ರಚನೆಗಳಲ್ಲಿ ಉಂಟಾಗುವ ಏಕರೂಪತೆ-ಯನ್ನು ಪರಿಹರಿಸುವ ಪ್ರಯತ್ನವಾಗಿ ಆಂಗ್ಲಕವಿಗಳು ಗಣಭಂಗವನ್ನು ಮಾಡು-ವುದುಂಟು. ಇದರ ಅನುಕರಣೆಯಾಗಿ ನಮ್ಮ ಆಧುನಿಕ ಕನ್ನಡ ಕವಿಗಳಲ್ಲಿ ಕೆಲವರು ತಮ್ಮ ಮಾತ್ರಾಗಣಬಂಧಗಳಲ್ಲಿ ಗಣಭಂಗಗಳನ್ನು ಮಾಡಿರುತ್ತಾರೆ. ಆದರೆ ಮಾತ್ರಾಗಣಗಳು – ಉದ್ದೇಶಪೂರ್ವಕವಾಗಿ ಮಾಡಲ್ಪಡದಿರುವಲ್ಲಿ – ಅಕ್ಷರವಿನ್ಯಾಸಗಳಲ್ಲಿ ಏಕರೂಪವಾಗಿರುವುದು ಅಪೂರ್ವವಾದುದರಿಂದ ಆಂಗ್ಲ ಭಾಷೆಯ ಛಂದೋಬಂಧಗಳಲ್ಲಿ ಬರುವಂತಹ ಏಕರೂಪತೆ ಮಾತ್ರಾಬಂಧಗಳಲ್ಲಿ ಬರುವುದೇ ಇಲ್ಲ. ಆದುದರಿಂದ ಏಕರೂಪತೆಯನ್ನು ಪರಿಹರಿಸುವ ಒಂದೇ ಉದ್ದೇಶದಿಂದ ಗಣಭಂಗವನ್ನೋ ಗಣರೂಪಭಂಗವನ್ನೋ ಮಾಡಿದರೆ ಅದು ಛಂದೋಭಂಗವಲ್ಲದೆ ಬೇರೇನೂ ಅಲ್ಲ. ಇಂತಹ ಭಂಗಗಳಿಂದ ಕಾವ್ಯಕ್ಕೆ ಮಹತ್ತ್ವ ಬರುವುದೆಂಬ ಭಾವನೆ ಕೇವಲ ಭ್ರಮೆ. ಅರ್ಥಪುಷ್ಟಿಯಾಗುವ ಸಂದರ್ಭಗಳಲ್ಲಿ ಮಾತ್ರ ಗಣರೂಪಭಂಗಗಳು ಮಾನ್ಯವೆಂದಾಗುತ್ತವೆ. ಇನ್ನು ಪಾದದ ಮಾತ್ರಾಸಂಖ್ಯೆಯಲ್ಲಿ ವೃದ್ಧಿಯನ್ನೋ ಹ್ರಾಸವನ್ನೋ ಮಾಡಿದರೆ ಅದು ಛಂದೋಭಂಗವೆಂಬುದನ್ನು ಬೇರೆ ಹೇಳಬೇಕಾಗಿಲ್ಲವಷ್ಟೆ?]



## ಪರಿಶಿಷ್ಟ ೨

## {ಹಳೆಯ ಹಾಡುಗಳಲ್ಲಿ ತ್ರಿಮೂರ್ತಿಗಣಗಳು}

ಹಿಂದಿನ ಕಾಲದ ಕನ್ನಡ ಹಾಡುಗಳಲ್ಲಿ ಹೆಚ್ಚಿನವುಗಳು ತ್ರಿಮೂರ್ತಿಗಣ ಜನ್ಯವಾದ ರೂಪಗಳಲ್ಲಿಯೇ ರಚಿತವಾಗಿವೆಯೆಂದು ಈ ನಿಬಂಧದ ಆದಿಭಾಗ-ದಲ್ಲಿ ಸೂಚಿತವಾಗಿದೆ. ಈ ತಥ್ಯವು ವಾಚಕರಿಗೆ ಸ್ಫುಟವಾಗಲೆಂಬ ಉದ್ದೇಶದಿಂದ ಇಲ್ಲಿ ಅಂತಹ ಹಾಡುಗಳ ಕೆಲವು ಉದಾಹರಣಗಳನ್ನು ಕೊಡುತ್ತಿದ್ದೇನೆ.

ಬ್ರ | ವಿ | ವಿ | ವಿ | ವಿ | ವಿ |
೧. ರಂಗ | ನಾಯಕ | ರಾಜೀವ | ಲೋಚನ | ರಮಣ ನೀ | ಬೆಳಗಾಯಿ |

ರು
ತೇಳೆನುತ ॥ ಪಲ್ಲವಿ ॥

ವಿ | ವಿ | ವಿ | ವಿ | ಬ್ರ | ವಿ | ವಿ |
ಅಂಗನೆ | ಲಕ್ಷ್ಮಿತಾ | ಪತಿಯನೆ | ಬ್ಬಿಸುವಳು | ಶೃಂಗಾ | ರದ ನಿದ್ರೆ | ಸಾಕುಸಾ |

ವಿ
ಕೆನುತಲಿ ॥ ಅನುಪಲ್ಲವಿ ॥ (ದಾಸರ ಪದ)

– ಈ ಉದಾಹರಣದಲ್ಲಿ ಪಲ್ಲವಿ ಭಾಗವು ಪಿರಿಯಕ್ಕರದ ಒಂದು ಪಾದಕ್ಕೆ ಸಂಪೂರ್ಣ ಸಮನಾಗಿದೆ. ಅನುಪಲ್ಲವಿ ಭಾಗವು ಪಿರಿಯಕ್ಕರದ ಪಾದ-ಕ್ಕಿಂತ ಸ್ವಲ್ಪ ಭಿನ್ನವಾಗಿರುವುದಾದರೂ ಇದರಲ್ಲಿರುವವುಗಳೆಲ್ಲವೂ ತ್ರಿಮೂರ್ತಿ ಗಣಗಳೇ ಆಗಿವೆ.

೨. ಯಾತಕೆ । ಮರುಳಹೆ । ತಾತ – । – ರಘು – ।
ನಾಥನೊಳ್ । ಕಲಹವೆ । ಲೋಕ ಪ್ರ । ಖ್ಯಾತ – ॥
(ಅತಿಕಾಯನ ಕಾಳಗ)

ಯಕ್ಷಗಾನದ ಈ 'ಪದ'ವೂ ವಿಷ್ಣುಧಾಟಿಯಲ್ಲಿ ರಚಿಸಲ್ಪಟ್ಟಿದೆ. ಮತ್ತು ಇದರ ಗಣಗಳಲ್ಲಿ ಅಧಿಕಸಂಖ್ಯೆಯವು ವಿಶುದ್ಧ ವಿಷ್ಣುಗಣಗಳಾಗಿದ್ದು ತಾಳಸಮನ್ವಯ-ಕ್ಕಾಗಿ ಕರ್ಷಣಾಧಿಕ್ಯವನ್ನು ಪಡೆಯುವಲ್ಲಿ ಮಾತ್ರ ಭಿನ್ನವಿನ್ಯಾಸಗಳು ಬಂದಿವೆ.

ವಿ | ವಿ | ವಿ | ಬ್ರ |
೩. ಕರಿವದ | ನನ ಪಾದ | ಕಮಲಯು | ಗವನು |

ವಿ | ವಿ | ವಿ | ಬ್ರ |
ಸ್ಮರಿಸಿ ಪೇ | ಳುವೆ ಪರ | ತತ್ತ್ವ ಬೋ | ಧೆಯನು |

ವಿ | ವಿ | ವಿ | ಬ್ರ
ಹರಿಭಕ್ತ|ರಾಲಿಸಿ|ಕೇಳಿ ಮು|ಕ್ತಿಯನು|

ವಿ | ವಿ | ವಿ | ಬ್ರ
ಕರುಣಿಸು|ವನು ಮುರ|ಹರನಾರಾ|ಯಣನು|| ಜೋ ಜೋ ||

(ಪರಂಪರಾಗತವಾದ ಜೋಗುಳ ಹಾಡು)

ಉದಯರಾಗದ ಈ ಹಾಡಿನ ಪ್ರತಿಯೊಂದು ಪಾದದಲ್ಲಿ ಮೂರು ವಿಷ್ಣು ಗಣಗಳೂ ಒಂದು ಬ್ರಹ್ಮಗಣವೂ ಇದ್ದು ಇದು ಒಂದು ವಿಶುದ್ಧವಾದ ತ್ರಿಮೂರ್ತಿಗಣಬಂಧವಾಗಿದೆ.

ವಿ | ವಿ | ವಿ | ವಿ
೪. ಹರಶಂಭು|ನೀಲಕಂ ಧರ|ಸರ್ವೋ|ತ್ತಮ ಗೌರೀ|

ವಿ | ರು
ವರ ಪುರ|ಹರ ಪಾಹಿ ಮಾಂ||

ವಿ | ವಿ | ವಿ | ವಿ
ದುರಿತವಿ|ದೂರ ಸ|ಚ್ಚರಿತ ಸ|ದಾನಂದ||

ವಿ | ರು
ಕರುಣಾವಾ|ರಿಧಿ ಪಾಹಿ ಮಾಂ||

(ಭದ್ರಾಯು ಚರಿತೆ)

ಯಕ್ಷಗಾನದ ಈ ‘ಪದ’ವು ವಿಶುದ್ಧವಾದ ತ್ರಿಮೂರ್ತಿಗಣ ಬಂಧ-ವೆಂಬುದು ಸುಸ್ಪಷ್ಟ. (ಸಾಂಗತ್ಯ ಸೊಬಗಿನ ಸೋನೆಗಳನ್ನೂ ಇಲ್ಲಿ ಉದಾಹೃತ-ವಾದ ‘ಪದ’ವನ್ನೂ ಹೋಲಿಸಿ ನೋಡಿದರೆ ಈ ಮೂರರೊಳಗೆ ಇರುವ ಭೇದವು ಅತ್ಯಲ್ಪವೆಂಬುದು ತಿಳಿಯದಿರದು.)

ವಿ | ವಿ | ವಿ | ವಿ
೫. ಹೃದಯಕ|ಮಲವೆಂಬ|ಹರಿವಾಣ|ದೊಳು ದಿವ್ಯ|

ವಿ | ವಿ | ರು
ಸದಮಲ|ಭಕ್ತಿರ|ಸದ ತೈಲದಿ||

ವಿ | ವಿ | ವಿ | ವಿ
ಪದುಮನಾ|ಭನ ನಾಮ|ವೆಂಬ ಜ್ಯೋ|ತಿಯ ತಂದು|

ವಿ | ವಿ | ರು
ಮುದದಿಂದ|ಜ್ಞಾನದಾ|ರತಿಯೆತ್ತಿರೇ ||

(ಡವಳಾರದ ಹಾಡು – ಪಾರ್ತಿಸುಬ್ಬ _ )

ಇದು ಆರತಿ ಹಾಡಿನ ಒಂದು ಸೂಲು (stanza). ಪಿರಿಯಕ್ಕರದ ಅರ್ಧವನ್ನು ನಾಲ್ಕು ಪಾದಗಳಾಗಿ ವಿಂಗಡಿಸಿದರೆ ಉಂಟಾಗುವ ಸ್ವರೂಪವೇ ಇದಾಗಿದೆ. (ಪಿರಿಯಕ್ಕರದ ಪಾದಗಳ ಪ್ರಥಮ ಗಣವು ಸಾಮಾನ್ಯವಾಗಿ ಬ್ರಹ್ಮ-ಗಣವಾಗಿರುವುದಾದರೂ ವಿಷ್ಣುಗಣವು ಆ ಸ್ಥಾನದಲ್ಲಿ ಬರುವುದುಂಟೆಂಬುದನ್ನು ಹಿಂದೆ 18ನೇ ಟಿಪ್ಪಣಿಯಲ್ಲಿ ನಿರೂಪಿಸಲಾಗಿದೆ.)

ಇಲ್ಲಿ ಕೊಟ್ಟಿರುವ ಉದಾಹರಣೆಗಳನ್ನು ಪರಾಮರ್ಶಿಸಿದರೆ ತ್ರಿಮೂರ್ತಿ-ಗಣಗಳಿಗೆ, ವಿಶೇಷತಃ ಪಿರಿಯಕ್ಕರಕ್ಕೆ ಕನ್ನಡದ ಹಾಡುಗಳಲ್ಲಿ ನೆಲೆಗೊಂಡಿದ್ದ ಪ್ರಭಾವವು ಸುಸ್ಪಷ್ಟವಾಗದಿರದು. ಮತ್ತು ಪಿರಿಯಕ್ಕರ ಮೊದಲಾದ ಐದು ಜಾತಿಯ ಬಂಧಗಳಿಗೆ ಅಕ್ಕರವೆಂಬ ಹೆಸರು ಬರುವುದಕ್ಕೆ ಅವು ಕನ್ನಡದ ಪುರಾತನ ಗೇಯಬಂಧಗಳಲ್ಲಿ ಪ್ರಮುಖವಾಗಿದ್ದುದು ಕಾರಣವೆಂಬುದೂ ಗೊತ್ತಾಗದಿರದು. (ಅಕ್ಕರವೆಂಬ ಹೆಸರಿನ ಔಚಿತ್ಯ ವಿಚಾರವನ್ನು ಹಿಂದೆ 19ನೇ ಟಿಪ್ಪಣಿಯಲ್ಲಿ ನೋಡಿಕೊಳ್ಳಬಹುದು.)



## ಪರಿಶಿಷ್ಟ ೩

## {ಸರಳರಗಳೆ ಮತ್ತು ಪ್ರಾಸತ್ಯಾಗವಿಚಾರ}

'ಸರಳರಗಳೆ' ಎಂಬ ಹೆಸರಿನ ಛಂದೋರೂಪವೊಂದು ಹೊಸಗನ್ನಡ ಸಾಹಿತ್ಯದಲ್ಲಿ ಸುಪ್ರಸಿದ್ಧವಾಗಿದೆಯಷ್ಟೆ. ಇದು ಪ್ರಾಸರಹಿತವಾದ ಲಲಿತರಗಳೆಯಲ್ಲದೆ ಬೇರೇನೂ ಅಲ್ಲ. ಆಂಗ್ಲಭಾಷೆಯ Blank verse ಎಂಬ ಛಂದೋರೂಪದ ಮಾದರಿಯಲ್ಲಿ ಇದು ಈ ಶತಮಾನದಲ್ಲಿ ಹುಟ್ಟಿದ ನೂತನ ಛಂದೋಬಂಧ-ವೆಂದು ಸಾಮಾನ್ಯವಾಗಿ ತಿಳಿಯಲ್ಪಟ್ಟಿದೆ. ಆದರೆ ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಯಾದವನೆಂಬ ಕವಿಯು ರಚಿಸಿರುವ 'ಕಲಾವತೀಪರಿಣಯ'-ವೆಂಬ ಹನ್ನೆರಡು ಆಶ್ವಾಸಗಳುಳ್ಳ ಇಡೀ ಕಾವ್ಯದ ಛಂದೋರೂಪಕ್ಕೂ ಇಂದಿನ ಸರಳರಗಳೆಗೂ ಯಾವ ಭೇದವೂ ಇರುವುದಿಲ್ಲ. ಯಾದವಕವಿ ಆಂಗ್ಲ ಭಾಷೆಯ ಛಂದೋಬಂಧದಿಂದ ಪ್ರಭಾವಿತನಾಗಿದ್ದಿರಬಹುದೆಂದು ಹೇಳುವುದಕ್ಕೆ ಆಧಾರವಿಲ್ಲ. ಅಲ್ಲದೆ ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಇಂಗ್ಲಿಷ್ ಕಾವ್ಯಗಳ ಪ್ರಭಾವವು ಕನ್ನಡದ ಯಾವ ರಚನೆಯ ಮೇಲೂ ಬಿದ್ದುದು ಕಂಡುಬರುವುದಿಲ್ಲ. ಆದುದರಿಂದ ಸರಳರಗಳೆ ಎಂಬ ಹೆಸರೇನೋ ಈ ಶತಮಾನದ್ದಾದರೂ ಇದರ ಹುಟ್ಟು ಕಳೆದ ಶತಮಾನದ್ದೇ ಆಗಿರುತ್ತದೆಯೆಂಬುದರಲ್ಲಿ ಸಂದೇಹವಿಲ್ಲ.

ಈ ಕಲಾವತೀ ಪರಿಣಯವು, ಪ್ರಾಸರಹಿತವಾಗಿದ್ದುದರಿಂದಲೋ ಏನೋ, ಗದ್ಯಕಾವ್ಯವೆಂದೇ ಭಾವಿಸಲ್ಪಟ್ಟು ಗದ್ಯದಂತೆಯೇ ಮುದ್ರಿತವಾಗಿತ್ತು. ಆ ಹಳೆಯ ಮುದ್ರಣದ ಪುಸ್ತಕವು ಪುತ್ತೂರು ಹೈಸ್ಕೂಲಿನ ಗ್ರಂಥಭಂಡಾರದಲ್ಲಿ ಇದ್ದುದನ್ನು ನಾನು ಅಲ್ಲಿ ವಿದ್ಯಾರ್ಥಿಯಾಗಿದ್ದಾಗ ಕಂಡಿದ್ದೇನೆ. ಮತ್ತು ಅದನ್ನು ಭಾಗಶಃ ಓದಿದ್ದೇನೆ. 'ಕವಿಚರಿತೆ'ಯ ಮೂರನೆಯ ಸಂಪುಟದಲ್ಲಿ ಕೀ. ಶೇ. ಆರ್. ನರಸಿಂಹಾಚಾರ್ಯರು ಈ ಗ್ರಂಥದ ಕುರಿತು ಬರೆದ ಮಾತುಗಳಲ್ಲಿಯೂ ಅದು ಗದ್ಯಕಾವ್ಯವೆಂದೇ ಇದೆಯಾದರೂ ಮುಂದೇ ಅವರೇ 'ಇದನ್ನು ಐದು ಮಾತ್ರೆಯ ಗಣಗಳುಳ್ಳ ಪ್ರಾಸವಿಲ್ಲದ ರಗಳೆಯ ರೂಪವಾಗಿ ಮೊದಲಿನಿಂದ ಕೊನೆಯ ವರೆಗೂ ಬರೆದಿರುವಂತೆ ತೋರುತ್ತದೆ' ಎಂದಿರುತ್ತಾರೆ. ಮತ್ತು ಆ ಕಾವ್ಯದ ಕೆಲವು ಸಾಲುಗಳನ್ನು ಉದಾಹರಿಸಿಯೂ ಇರುತ್ತಾರೆ. ಅದರೊಳಗಿನ ನಾಲ್ಕಾರು ಸಾಲು-ಗಳನ್ನು ಇಲ್ಲಿ ಉದ್ಧರಿಸಿದ್ದೇನೆ:-

ನಾಲ್ಮೊಗನು ನಿಖಿಲತೇಜಸ್ಸಾರವನ್ನು ಸಂ
ಗ್ರಹಗೈದು ಈ ನಾರಿಯಾಕಾರವನ್ನಂಘ್ರಿ
ಮೊದಲಾಗಿ ಮಂಡೆ ಪರಿಯಂತವೂ ರಚಿಸಿ ಮುಗಿ
ಯಲ್ ಬಟಿಕ ತದಭಾವರೂಪಮಾಗಿರುವ ಘನ
ತಿಮಿರಗಳ ಸಾರಮಂ ಸಂಗ್ರಹಿಸಿ ಚಿಕುರಮಂ
ರಚಿಸಿದನೊ ಎಂಬಂತೆ ಮುಖಕಮಲ ಸೌಂದರ್ಯ......

ಈ ಉದಾಹರಣದಿಂದ, ಈ ಬಂಧವು ಆದಿಪ್ರಾಸವಾಗಲಿ ಅಂತ್ಯಪ್ರಾಸ-ವಾಗಲಿ ಇಲ್ಲದ ಲಲಿತರಗಳೆ – ಎಂದರೆ – ಇಂದಿನ ಸರಳರಗಳೆಯೇ ಆಗಿರು-ವುದೆಂಬುದು ಸುಸ್ಪಷ್ಟ. ಇದರಿಂದ ಲಲಿತರಗಳೆಯನ್ನು ಶಿಥಿಲೀಕರಿಸಿ ಅದಕ್ಕೆ ಹೊಸ ರೂಪವನ್ನು ಕೊಟ್ಟವರಲ್ಲಿ ಯಾದವಕವಿಯೇ ಮೊತ್ತಮೊದಲಿಗನೆಂಬುದು ಸಿದ್ಧವಾಗುತ್ತದೆ.

ಕನ್ನಡ ಕವಿಗಳು ಆದಿಕಾಲದಿಂದಲೂ ಬಿಡದೆ ಅನುಸರಿಸಿಕೊಂಡು ಬಂದಿದ್ದ ಆದಿಪ್ರಾಸವು ಭಗ್ನವಾದುದೂ ಈ ಶತಮಾನದಲ್ಲಿ ಎಂದು ಹೇಳ-ಲಾಗುತ್ತಿದೆ. ಆದರೆ ಕಳೆದ ಶತಮಾನದ ಕಲಾವತೀ ಪರಿಣಯದಲ್ಲಿ ಮಾತ್ರವಲ್ಲ ಅದಕ್ಕಿಂತ ಹಿಂದಿನ ಶತಮಾನಗಳ ಕೆಲವು ರಘಟಾರೂಪ ಬಂಧಗಳಲ್ಲಿಯೂ ಆದಿಪ್ರಾಸವನ್ನು ತಪ್ಪದೆ ಅನುಸರಿಸಿದ್ದು ಕಂಡುಬರುವುದಿಲ್ಲ. ಉದಾ:- ಪಂಪ ಭಾರತದ ಮಟ್ಟರಗಳೆಯೆಂದು ಹೆಸರಿಸಲಾದ ಪಜ್ಝಟಿಕಾ ಬಂಧದಲ್ಲಿ ಆದಿಪ್ರಾಸ-ವಿಲ್ಲ. ಪುರಂದರದಾಸರ ರಚನೆಯೆಂದು ಹೇಳಲ್ಪಡುವ ಮಂದಾನಿಲರಗಳೆ-ಯೊಂದರಲ್ಲಿ ಆದಿಪ್ರಾಸವೂ ಇಲ್ಲ; ಅಂತ್ಯಪ್ರಾಸವೂ ಇಲ್ಲ. ಆ ಮಂದಾನಿಲ ರಗಳೆಯ ಆರಂಭದ ನಾಲ್ಕೈದು ಸಾಲುಗಳನ್ನು ಇಲ್ಲಿ ಉದ್ಧರಿಸುತ್ತೇನೆ:-

ಜಯವಿದೆ ಜಯವಿದೆ ಈ ಮನೆತನಕೆ
ಬಿಡು ಬಿಡು ನಿನ್ನ ಮನಃಸಂಶಯವ
ಸುಖಿಯೆಂಬೋ ಖಗ ಹೇಳುವುದಪ್ಪಾ
ಜಗವೆಂಬೋ ಮರ ಹುಟ್ಟುವುದಣ್ಣಾ
ಮೂರೂ ಬುಡದಾ ಗಿಡ ಕೇಳಣ್ಣಾ...... ಇತ್ಯಾದಿ.

ಹಿಂದಿನ ಕಾವ್ಯಗಳಲ್ಲಿ ಹುಡುಕಿದರೆ ಇಂತಹ ಉದಾಹರಣಗಳು ಇನ್ನೂ ಕೆಲವು ದೊರೆಯಬಹುದು. ಆದುದರಿಂದ ಸರಳರಗಳೆಯ ಉತ್ಪತ್ತಿಯೂ ಆದಿ-ಪ್ರಾಸದ ತ್ಯಾಗವೂ ಕನ್ನಡದಲ್ಲಿ ತಾನಾಗಿಯೇ ಹುಟ್ಟಿ ಬಂದ ಲಕ್ಷಣಗಳೆಂದು ಹೇಳ ಬೇಕಾಗಿ ಬರುತ್ತದೆ. ಹೀಗಿದ್ದರೂ ಈ ಶತಮಾನದ ಕನ್ನಡ ಪದ್ಯಗಳು ಆದಿಪ್ರಾಸ-ದಿಂದ ಹೆಚ್ಚು ಕಡಮೆ ಸಂಪೂರ್ಣವಾಗಿ ಬಿಡುಗಡೆ ಹೊಂದಿದುದಕ್ಕೂ ರಘಟಾ-ರೂಪದ ಬಂಧಗಳ ಹೊರತಾಗಿ ಉಳಿದವುಗಳಲ್ಲಿ ಪಾದಾಂತ್ಯಪ್ರಾಸವು ಸಾಮಾನ್ಯವಾಗಿ ನೆಲೆಗೊಂಡುದಕ್ಕೂ ಕನ್ನಡದ ಮೇಲೆ ಆದ ಆಂಗ್ಲ ಪದ್ಯ ಸಾಹಿತ್ಯದ ಪ್ರಭಾವವೇ ಕಾರಣವೆಂಬುದನ್ನು ಅಲ್ಲಗಳೆಯುವಂತಿಲ್ಲ. ಮತ್ತು ಆದಿ ಕಾಲದಿಂದಲೂ ಕನ್ನಡ ಪದ್ಯಗಳ ವೈಶಿಷ್ಟ್ಯವೆಂಬಂತಿದ್ದ ಬಂಧನಿಬಿಡತೆಯು ಕ್ರಮಶಃ ಶಿಥಿಲೀಕರಿಸಲ್ಪಟ್ಟು, ಸಾಮಾನ್ಯವಾಗಿ ಒಂದೊಂದು ಪದವೂ ಒಂದೊಂದು ಛಂದೋಗಣಕ್ಕೆ ಪರಿಮಿತವೋ ಎಂಬಂತಿರುವ ಸುಕುಮಾರಬಂಧವು ಕವಿಜನ-ಪ್ರಿಯವಾದುದಕ್ಕೂ ಆಂಗ್ಲಸಾಹಿತ್ಯದ ಪ್ರಭಾವವು ಕಾರಣವಾಯಿತೆಂದರೆ ತಪ್ಪಾಗ-ಲಾರದೆಂದು ಹೇಳಬಹುದು.

# ಪರಿಶಿಷ್ಟ ೪

## {'ಲಯ'ಕ್ಕೆ ಬಂದ ಅಸ್ಪಷ್ಟಾರ್ಥ; ಗತಿವಿನ್ಯಾಸ ಮತ್ತು ಉಚ್ಚಾರಣೆಯ ಶ್ರುತಿಭೇದ ವಿಚಾರ}

'ಕನ್ನಡ ಛಂದಸ್ಸು' ಎಂಬೀ ನನ್ನ ನಿಬಂಧವು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ೧೯೩೩ನೇ ಇಸವಿಯ ಸಂಚಿಕೆಗಳಲ್ಲಿ ಪ್ರಕಟವಾಗುವುದಕ್ಕೆ ಮೊದಲು ಕನ್ನಡದ ಛಂದಸ್ಸಿನ ಆದಿರೂಪಗಳ ವಿಷಯದಲ್ಲಿ ಯಾವ ವಿಮರ್ಶೆಯೂ ನಡೆದಿರಲಿಲ್ಲವೆಂದರೆ ಬಹುಶಃ ತಪ್ಪಾಗಲಾರದು; ಮತ್ತು ನಮ್ಮ ವಿದ್ವಾಂಸರೆಲ್ಲರೂ ಕಿಟ್ಟೆಲ್ ಸಾಹೇಬರು ಪ್ರಕಟಿಸಿದ ಛಂದೋಂಬುಧಿಯಲ್ಲಿರು-ವಂತೆ ತ್ರಿಮೂರ್ತಿಗಣಗಳು ಮಾತ್ರಾಗಣಗಳೆಂದೇ ಭಾವಿಸಿದ್ದರು. ಇನ್ನು ಕೆಲವರು ನಡುಗನ್ನಡದ ಷಟ್ಪದಿಗಳು ಸಹ ಸಂಸ್ಕೃತ ಛಂದೋಗಣಗಳ ಅವಲಂಬನದಿಂದ ನಿರ್ಮಿತವಾದವುಗಳೆಂದೂ ಹೇಳುತ್ತಿದ್ದರು. ಇದಲ್ಲದೆ ಪಂಪಭಾರತ ಮೊದಲಾದ ಹಳೆಯ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುವ ಪಿರಿಯಕ್ಕರವನ್ನು ಪಠಿಸುವ ರೀತಿ ಹೇಗೆಂಬುದನ್ನು ಯಾರೂ ತಿಳಿದಿರಲಿಲ್ಲ. ಸಾಂಗತ್ಯವನ್ನು ಈಗ ಪಠಿಸುವ ರೀತಿಯಲ್ಲಿಯೇ ಆ ಕಾಲದಲ್ಲೂ ಪಠಿಸುತ್ತಿದ್ದರಾದರೂ ಅದೊಂದು ಛಂದೋ-ನಿಯಮಗಳಿಗೆ ಬಹಿರ್ಭೂತವಾದ ಬರಿಯ ಹಾಡೆಂದೇ ತಿಳಿಯುತ್ತಿದ್ದರು. ಪ್ರಸ್ತುತವಾದ ನನ್ನ ನಿಬಂಧವು ಪ್ರಕಟವಾದ ಮೇಲೆ ಈ ಅಭಿಪ್ರಾಯಗಳೆಲ್ಲಾ ಮಾಯವಾಗಿ ತ್ರಿಮೂರ್ತಿಗಣಬಂಧಗಳು ಕನ್ನಡದ ಆದಿಯ ಛಂದೋರೂಪ-ಗಳೆಂಬ ಮತ್ತು ಅವು ಮಾತ್ರಾಬಂಧಗಳಲ್ಲವೆಂಬ ಅಭಿಪ್ರಾಯವು ಕರ್ಣಾಟಕ-ದಲ್ಲೆಲ್ಲ ಮಾನ್ಯವಾಯಿತು. ಅಷ್ಟು ಮಾತ್ರವಲ್ಲ, ಕೆಲವರು ಛಂದಃಶಾಸ್ತ್ರದ ವಿಮರ್ಶೆಗೂ ತೊಡಗಿ ಹಲವು ನಿಬಂಧಗಳನ್ನು ಬರೆದು ಪ್ರಕಟಿಸಿದುದಲ್ಲದೆ ಆ ಕುರಿತು ಗ್ರಂಥಗಳನ್ನೂ ನಿರ್ಮಿಸಿದರು. ಪದ್ಯವೂ ಸಂಗೀತವೂ ಅನಾದಿಕಾಲದಲ್ಲಿ ಅಭಿನ್ನವೇ ಆಗಿದ್ದುವೆಂಬ ನನ್ನ ಪ್ರತಿಪಾದನೆಗೆ ಉಪಷ್ಟಂಭಕವಾಗಿ ನಾನು ಪ್ರತಿಪಾದಿಸಿದ 'ಲಯಬದ್ಧ' ಮತ್ತು 'ಲಯರಹಿತ'ವೆಂಬ ವೈವಿಧ್ಯವಿಚಾರವೂ ತದನಂತರ ಕಾಣಿಸಿಕೊಂಡ ಛಂದೋವಿಮರ್ಶೆಗಳಲ್ಲಿ ಬರತೊಡಗಿದವು. ಮತ್ತು ವಿಶೇಷವಾಗಿ ಲಯವೆಂಬ ಪದವು ಬಹಳವಾಗಿ ಬಳಸಲ್ಪಡುತ್ತಾ ಬಂತು. ಆದರೆ ಲಯವೆಂಬುದು ನಮ್ಮ ಪುರಾತನ ಛಂದಃಶಾಸ್ತ್ರಗ್ರಂಥಗಳಲ್ಲಿ ಪ್ರೋಕ್ತವಾದ ಸಂಜ್ಞೆಯಾಗಿರದೆ ಅದು ನಮ್ಮ ಸಂಗೀತಶಾಸ್ತ್ರದ ಸೊತ್ತು ಮಾತ್ರವಾಗಿದ್ದು ಆ ಶಾಸ್ತ್ರದಲ್ಲಿ ನಿರೂಪಿತವಾದ 'ಲಯ' ಎಂಬ ಸಂಜ್ಞೆಯ ಅರ್ಥವ್ಯಾಪ್ತಿಯ ಪರಿಚಯವು ವಿಮರ್ಶಕರಿಗೆಲ್ಲ ಇರದಿದ್ದ ಕಾರಣದಿಂದಲೋ ಏನೋ ಅವರ ಬರಹಗಳಲ್ಲಿ ಆ ಪದದ ಅರ್ಥದಲ್ಲಿ ಒಂದು ಅಸ್ಪಷ್ಟತೆಯುಂಟಾಯಿತು. ನಮ್ಮ ಸಂಗೀತಪರಂಪರೆಯ ಲಯ, ತಾಳ, ಗತಿ, (ಧಾಟಿ, ನಡೆ) ಎಂಬ ಸಂಜ್ಞೆಗಳನ್ನು

ಆಂಗ್ಲಭಾಷೆಯಲ್ಲಿ ಹೇಳಬೇಕಾದ ಸಂದರ್ಭಗಳಲ್ಲಿ – ಆ ಭಾಷೆಯಲ್ಲಿ ಲಯ, ತಾಳ, ಗತಿ ಎಂಬುವುಗಳನ್ನು ತಿಳಿಸುವುದಕ್ಕೆ ಬೇರೆ ಬೇರೆ ಸಂಜ್ಞೆಗಳಿಲ್ಲದಿರು-ವುದರಿಂದ – ಆ ಮೂರು ಸಂಜ್ಞೆಗಳ ಲಕ್ಷಣಗಳನ್ನೂ ಒಟ್ಟಾಗಿ ಪ್ರಕಟಿಸುವ (ವಸ್ತುತಃ- ಗತಿಯೆಂಬುದೇ ಅರ್ಥವಾಗುಳ್ಳ) Rhythm ಎಂಬುದನ್ನೇ ಪ್ರಯೋ-ಗಿಸಬೇಕಾಗುತ್ತದೆ. ಆಂಗ್ಲಭಾಷೆಯ ಛಂದೋಮೀಮಾಂಸೆಗಳಲ್ಲಿ Rhythm ಎಂಬ ಸಂಜ್ಞೆಗೆ ಮಹತ್ತ್ವವಿರುವುದರ ಪರಿಯಚಯವುಳ್ಳ ನಮ್ಮ ಆಧುನಿಕ ವಿದ್ವಾಂಸರಿಗೆ, ನಮ್ಮ ಛಂದೋಬಂಧಗಳ ಸ್ವರೂಪವಿಮರ್ಶೆಯಲ್ಲಿಯೂ ಆ ತತ್ತ್ವವನ್ನು ಬಳ-ಸುವ ಬಯಕೆಯುಂಟಾಗಿ Rhythm ಎಂಬುದಕ್ಕೆ ಸಮಾನವಾದ ಪದಪ್ರಯೋಗವು ನಮ್ಮ ಛಂದಃಶಾಸ್ತ್ರದಲ್ಲಿ ಕಾಣದಿದ್ದುದರಿಂದಲೂ Rhythm ಎಂಬುದರ ಅರ್ಥ-ದಲ್ಲಿ ಲಯ ಸಂಜ್ಞೆಯ ಅರ್ಥವೂ ಅಡಕವಾಗುವುದರಿಂದಲೂ, ತಮ್ಮ ಅಂತ-ರಂಗದಲ್ಲಿ ಗರ್ಭಿತವಾಗಿದ್ದ Rhythm ಎಂಬುದರ ಅರ್ಥವನ್ನು ಹೇಳುವುದಕ್ಕೆ 'ಲಯ' ಎಂಬ ಸಂಜ್ಞೆಯನ್ನೇ ಬಳಸತೊಡಗಿದುದರಿಂದ 'ಲಯ' ಎಂಬ ಸಂಜ್ಞೆಗೆ ನಮ್ಮ ಶಾಸ್ತ್ರಗಳಲ್ಲಿ ಪ್ರೋಕ್ತವಾದ ನಿಷ್ಕೃಷ್ಟವಾದ ಅರ್ಥವು ತೊಲಗಿ, ಒಂದು ಅಸ್ಪಷ್ಟಾರ್ಥವನ್ನು ಅದು ಪಡೆಯುವಂತಾಯಿತು. [ಈ ಅಸ್ಪಷ್ಟತೆಯನ್ನು ಪರಿಹರಿಸಿ ಲಯವೆಂಬುದರ ನಿಷ್ಕೃಷ್ಟಾರ್ಥವನ್ನು ಪ್ರಕಾಶಪಡಿಸಿ, ಆಂಗ್ಲಭಾಷೆಯಲ್ಲಿ ಪ್ರಯೋಗಿಸಲ್ಪಡುವ Rhythm ಶಬ್ದದ ಅರ್ಥವನ್ನು ಅದರಂತೆಯೇ ಸಮಷ್ಟಿಯಾಗಿ ಹೇಳುವುದಕ್ಕೆ ನಮ್ಮ ಶಾಸ್ತ್ರಗಳಲ್ಲಿ ಪ್ರೋಕ್ತವಾದ 'ಗತಿ' ಎಂಬ ಶಬ್ದವು ಸಮರ್ಥವಾಗಿದೆ ಎಂಬುದನ್ನು "ಛಂದೋಗತಿ" (Metrical Rhythm) ಎಂಬ ನನ್ನ ಗ್ರಂಥದ ಮೊದಲ ಮೂರು ಪರಿಚ್ಛೇದಗಳಲ್ಲಿ, ಆಯಾ ಗ್ರಂಥಗಳಿಂದ ಎತ್ತಿಕೊಂಡ ಉದ್ಧರಣಗಳ ಸಮೇತ ವಿಶದವಾಗಿ ನಿರೂಪಿಸುವ ಪ್ರಯತ್ನಮಾಡಿರುತ್ತೇನೆ. ಇನ್ನು, ಲಯ ಎಂಬ ಸಂಜ್ಞೆಯ ಅರ್ಥವು ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಖಚಿತವಾಗಿ ನಿರೂಪಿಸಲ್ಪಟ್ಟಿರುವುವದಾದರೂ – ಶಾಸ್ತ್ರಾಭಿ-ಪ್ರಾಯವನ್ನು ತಿಳಿದೋ ತಿಳಿಯದೆಯೋ – ಕರ್ಣಾಟಕ ಸಂಗೀತಜ್ಞರಲ್ಲಿಯೂ ಕೆಲವರು, ಈಗೀಗ, Rhythm ಎಂಬ ಅರ್ಥದಲ್ಲಿ ಲಯವೆಂಬ ಪದವನ್ನು ಬಳಸತೊಡಗಿರುವುದು ಖೇದಾಸ್ಪದವಾಗಿದೆ. ಸಂಗೀತ ಕಚೇರಿಗಳ ಮಧ್ಯದಲ್ಲಿ ಮಾಡುವ ಕೇವಲ ವಾದ್ಯವಾದನಚಾತುರ್ಯಪ್ರಕಾಶವನ್ನು 'ತಾಳವಾದ್ಯಕಚೇರಿ' ಎಂದೋ 'ತನಿಯಾವರ್ತನ' ಎಂದೋ ಹೇಳುವುದು ಈ ಮೊದಲು ರೂಢ-ವಾಗಿತ್ತು. ಈಗೀಗ ಅದರ ಬದಲಾಗಿ 'ಲಯವಿನ್ಯಾಸ' ಎಂದು ಹೇಳುವ ಮಾತು ಆಕಾಶವಾಣಿಯಲ್ಲಿ ಕೇಳಿ ಬರುತ್ತಲಿದೆ. ವಸ್ತುತಃ ಅಲ್ಲಿ ವಾದಕರು ಮಾಡುವುದು ಯಾವುದೊಂದು ತಾಳದ ನಾನಾ ಗತಿಸ್ವರೂಪಗಳ ಪ್ರದರ್ಶನವನ್ನು; ಆ ಸಂದರ್ಭಗಳಲ್ಲೆಲ್ಲ ಒಂದೇ ಕಾಲಪ್ರಮಾಣದ ಆವರ್ತಗಳನ್ನು ಅವಲಂಬಿಸಿಯೇ ಆ ತಾಳದ ನಡೆಯ ನಾನಾರೂಪಗಳನ್ನು ಅವರು ಪ್ರದರ್ಶಿಸುವುದಾಗಿದೆ

ಹೊರತು, ವಿಭಿನ್ನ ಕಾಲಪ್ರಮಾಣದ ಆವರ್ತಗಳನ್ನು ಅವಲಂಬಿಸುವುದಿಲ್ಲ. ಈ ಕಾರಣದಿಂದ ಅವರ ಈ ಕ್ರಿಯಾಕಲಾಪವನ್ನು 'ಲಯವಿನ್ಯಾಸ'ವೆಂದು ಹೇಳುವುದು ಶಾಸ್ತ್ರಕ್ಕೂ ಸಂಗೀತಪರಂಪರೆಗೂ ವಿರುದ್ಧವಾಗಿದೆ. 'ಲಯವಿನ್ಯಾಸ'ವೆಂಬ ಹೆಸರು ರೂಢಿಗೆ ಬರುವುದಕ್ಕೆ, ಲಯವೆಂದರೆ Rhythm ಎಂಬ ಅಪಾರ್ಥವು ರೂಢ-ವಾಗತೊಡಗಿದುದೇ ಹೇತುವಾಗಿದೆ. 'ತಾಳವಾದ್ಯ ಕಚೇರಿ', 'ತನಿಯಾವರ್ತನ' ಎಂಬ ಪದಸ್ವರೂಪಗಳಿಗಿಂತ 'ಲಯವಿನ್ಯಾಸ' ಎಂಬ ಪದರೂಪವು ಆಕರ್ಷಕ-ವಾಗಿರುವುದೂ ಉಚಿತವಲ್ಲದ ಈ ಪದಪ್ರಯೋಗವು ರೂಢವಾಗುತ್ತಿರುವುದಕ್ಕೆ ಇನ್ನೊಂದು ಪ್ರೇರಣೆಯಾಗಿದೆ. ಹಿಂದುಸ್ತಾನೀ ಸಂಗೀತಕಚೇರಿಗಳೊಳಗೆ ಲಯ ವಿನ್ಯಾಸವೆಂಬೀ ಪದವು ಇಷ್ಟರವರೆಗೆ ಪ್ರವೇಶಿಸಿರುವಂತೆ ತೋರುವುದಿಲ್ಲ; ಅವರು ಇನ್ನೂ ಕೂಡ ಹಿಂದೆ ಹೇಳುತ್ತಿದ್ದಂತೆಯೇ '(ತಬಲಾ)ಗತ್' (ಗತ್ತೋಡಾ) ಅರ್ಥಾತ್ 'ಗತಿ' ಎಂಬುದನ್ನೇ ಪ್ರಯೋಗಿಸುತ್ತಿರುವುದು ಆಕಾಶವಾಣಿಯಲ್ಲಿ ಕೇಳಿಬರುತ್ತದೆ. ಇದು ಸಮಾಧಾನಕರವೇ ಸರಿ. ವಾಸ್ತವಿಕವಾಗಿ ಹೇಳುವುದಾದರೆ ನಮ್ಮ ಕರ್ಣಾಟಕ ಸಂಗೀತಜ್ಞರಿಗೆ ತಾಳವಾದ್ಯಕಚೇರಿ, ತನಿಯಾವರ್ತನ ಎಂಬ ಹೆಸರುಗಳಲ್ಲಿ ಅರುಚಿಯುಂಟಾಗಿರುವುದಾದರೆ, ಅವುಗಳ ಬದಲಾಗಿ 'ತಾಳ ವಿನ್ಯಾಸ' ಅಥವಾ 'ತಾಳಗತಿವಿನ್ಯಾಸ' ಇಲ್ಲವೇ 'ಗತಿವಿನ್ಯಾಸ' ಎಂಬ ಕರ್ಣಸುಖ ಕರವೇ ಆದ ಸಂಜ್ಞೆಗಳನ್ನು ಅವರು ಬಳಸುವುದು ಉಚಿತವಾಗಿದೆ. ತಾತ್ಪರ್ಯ-ವೇನೆಂದರೆ, Rhythm ಎಂದರೆ ಲಯವಲ್ಲ; ಗತಿ. ಆದರೆ ಇಂಗ್ಲಿಷಿನಲ್ಲಿ ಲಯ, ತಾಳ, ಗತಿ ಎಂಬ ತತ್ತ್ವಗಳನ್ನು ಸೂಚಿಸುವ ಬೇರೆ ಬೇರೆ ಸಂಜ್ಞೆಗಳಿಲ್ಲದಿರುವು-ದರಿಂದ ಅಲ್ಲಿ ಆ ಒಂದೇ ಪದದಿಂದ ವಿವಕ್ಷಾನುಸಾರವಾಗಿ ಕೇವಲ ಲಯವನ್ನೋ ಅಥವಾ ಕೇವಲ ತಾಳದ ನಡೆಯನ್ನೋ ಇಲ್ಲವೆ ಅವುಗಳ ಸಮಷ್ಟಿರೂಪವಾದ ಗತಿಯನ್ನೋ ಹೇಳದೆ ನಿರ್ವಾಹವಿಲ್ಲವಾಗಿದೆ. ಇಷ್ಟು ಮಾತ್ರವಲ್ಲ, ನಮ್ಮ ಛಂದಸ್ಸಿನಲ್ಲಿಯೂ ಸಂಗೀತದಲ್ಲಿಯೂ ಇರುವ ಸಮಗತಿ ವಿಷಮಗತಿ ಎಂಬ ಭೇದಗಳೆರಡನ್ನೂ ಇಂಗ್ಲಿಷಿನ Rhythm ಎಂಬ ಒಂದೇ ಪದವು ತಿಳಿಸುವಂತಹ-ದಾಗಿದೆ. ಹೀಗೆ ಅನೇಕಾರ್ಥಗಳ ಗುಂಫವೆಂಬಂತಿರುವ Rhythm ಎಂಬ ಸಂಜ್ಞೆಗೆ (ಸಮಗತಿತ್ವವನ್ನು ಮಾತ್ರ ಸೂಚಿಸಬಲ್ಲ) ಏಕರೂಪವೂ ಖಚಿತವೂ ಆದ ಅರ್ಥವನ್ನು ಕೊಡುವ ಲಯವೆಂಬ ಸಂಜ್ಞೆ ಸರ್ವಥಾ ಸಮಾನಾರ್ಥಕವಲ್ಲ. ಇದು ನಿಶ್ಚಯ.]

ಏತದ್ವಿಷಯದಲ್ಲಿ ಪಾಶ್ಚಾತ್ಯವಿಚಾರಧಾರೆಗೂ ಭಾರತೀಯವಿಚಾರಧಾರೆಗೂ ಇರುವ ಮೂಲಭೂತವಾದೊಂದು ಭೇದವೂ ಲಕ್ಷಿಸತಕ್ಕದ್ದಾಗಿದೆ. ಛಂದೋ-ವಿಚಾರದಲ್ಲಿ ಭಾರತೀಯವೈಚಾರಿಕರು ಮಾಡಿಕೊಂಡಿರುವಂತೆ, ಪಾಶ್ಚಾತ್ಯರು, ಧ್ವನಿಯನ್ನೂ ಧ್ವನಿಪರಿಮಾಣವನ್ನೂ ಬೇರ್ಪಡಿಸಿಕೊಂಡಿರುವುದಿಲ್ಲ. ಇದರಿಂದ Rhythm ಎಂಬುದಕ್ಕೆ ಖಚಿತವಾದೊಂದು ಲಕ್ಷಣವನ್ನು ಹೇಳುವುದಕ್ಕೂ ಅವರು ಅಸಮರ್ಥರಾಗಿದ್ದಾರೆ; ಮತ್ತು ಪಾಶ್ಚಾತ್ಯ ವೈಚಾರಿಕರೊಳಗೆ Rhythmನ

ಲಕ್ಷಣವಿಷಯದಲ್ಲಿ ಏಕಾಭಿಪ್ರಾಯವೂ ಇಲ್ಲದಾಗಿದೆ. (ಉದಾ:- Rhythm - "Precision, however has hardly yet been reached; and there are few subjects, on which openions, even among experts, differ more widely" -*Encyclopaedia Britannica* 1965. Vol. 19, page 272.) ಧ್ವನಿಯೂ ಧ್ವನಿಪರಿಮಾಣವೂ ಪರಸ್ಪರ ಅವಿನಾಭಾವಿಗಳಾಗಿರುವವಾದರೂ, ಧ್ವನಿಸ್ವರೂಪಕ್ಕೂ ಧ್ವನಿಪರಿಮಾಣಕ್ಕೂ ಸ್ಥಿರವಾದ ನಿತ್ಯಸಂಬಂಧವಿರುವುದಿಲ್ಲ; ದ್ರವ್ಯಸ್ವರೂಪಕ್ಕೂ ಅದರ ಭಾರಕ್ಕೂ ಇಲ್ಲದಿರುವ ಹಾಗೆ. ಭಾರದಲ್ಲಿ ಭೇದವಿಲ್ಲದಿದ್ದರೂ ದ್ರವ್ಯಸ್ವರೂಪವು ಬೇರೊಂದಾಗಬಹುದು. ಉದಾ:- ಒಂದು ಕೆ.ಜಿ. ಸಕ್ಕರೆಯ ಭಾರಕ್ಕೂ ಒಂದು ಕೆ.ಜಿ. ಹತ್ತಿಯ ಭಾರಕ್ಕೂ ಯಾವ ವ್ಯತ್ಯಾಸವೂ ಇಲ್ಲ; ದ್ರವ್ಯಸ್ವರೂಪವಾದರೋ ಸಂಪೂರ್ಣ ಭಿನ್ನ. ಆದುದರಿಂದ ಧ್ವನಿಯನ್ನೂ ಧ್ವನಿಪರಿಮಾಣವನ್ನೂ ವೈಚಾ-ರಿಕವಾಗಿ ಬೇರ್ಪಡಿಸಿಕೊಳ್ಳದೆ ಮಾಡುವ ವಿಚಾರವು ಖಚಿತವಾದೊಂದು ನಿರ್ಣಯವನ್ನು ನಮಗೆ ಕೊಡಲಾರದು. ಪಾಶ್ಚಾತ್ಯರ Rhythmಗೆ ಬಂದಿರುವ ಅವಸ್ಥೆ ಇದೇ ಆಗಿದೆ. ಇದರಿಂದಾಗಿಯೇ ಆ ವಿಷಯದಲ್ಲಿ, *Encyclopaedia Britannica* ಹೇಳುವಂತೆ, ಏಕಾಭಿಪ್ರಾಯವಾಗಲಿ, ನಿರ್ದಿಷ್ಟವಾದೊಂದು ಲಕ್ಷಣವಾಗಲಿ ಉಂಟಾಗದಿರುವುದಾಗಿದೆ.

ನಮ್ಮ ಛಂದಸ್ಸಿನ ಗುರುಲಘುಪರಿಮಾಣಗಳು ಧ್ವನಿಸ್ವರೂಪನಿರಪೇಕ್ಷ-ಗಳಾಗಿವೆ - ಯಾವುದೊಂದು ಲಘ್ವಕ್ಷರವನ್ನು ಉಚ್ಚಶ್ರುತಿಯಲ್ಲಿ ಪಠಿಸಿದರೂ ನೀಚಶ್ರುತಿಯಲ್ಲಿ ಪಠಿಸಿದರೂ ಅದು ಲಘುವೇ ಆಗಿ ಉಳಿಯುತ್ತದೆ. ಆಂಗ್ಲ ಛಂದಸ್ಸಿನ ಯಾವುದೊಂದು ಅಕ್ಷರವನ್ನು (syllable) ಉಚ್ಚಶ್ರುತಿಯಲ್ಲಿ (accented) ಪಠಿಸಿದಾಗ ಅದು ಗುರುವೆಂದೂ ನೀಚಶ್ರುತಿಯಲ್ಲಿ ಪಠಿಸಿದಾಗ (unaccented) ಲಘುವೆಂದೂ ಗಣಿಸಲ್ಪಡುತ್ತದೆ. ಧ್ವನಿಸ್ವರೂಪವನ್ನೂ ಧ್ವನಿಪರಿ-ಮಾಣವನ್ನು ಬೇರ್ಪಡಿಕೊಳ್ಳದೆ ಮಾಡಿದ ವಿಚಾರದ ಫಲವಿದು. ಆದುದರಿಂದ ಯಾವುದೊಂದು ಛಂದಃಖಂಡದ Rhythmನ್ನು ಪರಾಮರ್ಶಿಸುವ ಸಂದರ್ಭ-ದಲ್ಲಿ ಅವರು ಧ್ವನಿಪರಿಮಾಣವನ್ನು ಮಾತ್ರ ಗಣಿಸದೆ ಧ್ವನಿಸ್ವರೂಪವನ್ನು ಸಹ ಒಟ್ಟಾಗಿ ಪರಿಗಣಿಸಬೇಕಾಗುತ್ತದೆ. ಈ ವಿಧಾನವನ್ನು, ನಮ್ಮ ಆಧುನಿಕ ಛಂದೋ-ವಿಮರ್ಶಕರಲ್ಲಿ ಕೆಲವರು ಮಾಡುತ್ತಿರುವಂತೆ, ನಮ್ಮ ಪದ್ಯಖಂಡಗಳಿಗೆ ಅನ್ವ-ಯಿಸಿದರೆ ಉಂಟಾಗುವುದು ಅನವಸ್ಥೆಯೇ ಹೊರತು ಬೇರೇನೂ ಅಲ್ಲ. ನಮ್ಮ ಲಯ, ತಾಳ, ಛಂದೋಗತಿ - ಎಂಬಿವು ಧ್ವನಿಸ್ವರೂಪನಿರಪೇಕ್ಷಗಳಾಗಿರುತ್ತ-ವೆಂಬುದನ್ನು ವಿಮರ್ಶಕರು ಮರೆಯಬಾರದು. ಆದರೂ Rhythm ಎಂಬುದನ್ನು ನಮ್ಮ ಭಾಷೆಗಳಲ್ಲಿ ಭಾಷಾಂತರಿಸುವ ಸಂದರ್ಭಗಳಲ್ಲಿ ಅದನ್ನು 'ಗತಿ' ಎಂದೇ ಹೇಳುವುದರಿಂದ ಯಾವ ಬಾಧೆಯೂ ಬರುವಂತಿಲ್ಲ. ಏಕೆಂದರೆ, ಗತಿಯೆಂಬುದು ಗುರುಲಘುಸ್ವರೂಪವಾದ ಅಕ್ಷರಗತಿಯನ್ನೂ, ಲಯಬದ್ಧವಾದ ಆವರ್ತಗತಿ-ಯನ್ನೂ ನಾನಾವಿಧದ ತಾಳಗತಿಯನ್ನೂ, ಅಕ್ಷರೋಚ್ಚಾರದ ಬಲಾನುಗುಣವಾದ

ಪದಗತಿಯನ್ನೂ, ಉಚ್ಚನೀಚಶ್ರುತಿಭೇದರೂಪವಾದ ಸ್ವರಗತಿಯನ್ನೂ ವಿವಕ್ಷಾ-ನುಸಾರವಾಗಿ, (Rhythm ಎಂಬುದು ಹೇಗೋ ಹಾಗೆ) ಹೇಳುವುದಕ್ಕೆ ಸಮರ್ಥವಾಗಿದೆ. ನಿಷ್ಕೃಷ್ಟವಾಗಿ ಹೇಳಬೇಕಾಗುವ ಸಂದರ್ಭಗಳಲ್ಲಿ ಗತಿಯೆಂ-ಬುದಕ್ಕೆ ಆಯಾ ಪೂರ್ವಪದಗಳನ್ನು ಅಳವಡಿಸಿಕೊಂಡರಾಯಿತು. ಹೀಗೆ – ಅಕ್ಷರಗತಿ, ಆವರ್ತಗತಿ, ತಾಳಗತಿ, ಸಮಗತಿ, ವಿಷಮಗತಿ, ಸ್ವರಗತಿ, ಪದಗತಿ, ಛಂದೋಗತಿ, ಧ್ವನಿಗತಿ ಇತ್ಯಾದಿ. ಪಾಶ್ಚಾತ್ಯ ವೈಚಾರಿಕರು 'ಗತಿ' ವಿವೇಚನೆ ಮಾಡುವಾಗ ಧ್ವನಿಯ ಸ್ವರೂಪವನ್ನೂ ಅದರ ಪರಿಮಾಣವನ್ನೂ ಬೇರ್ಪಡಿಸಿ-ಕೊಳ್ಳದೆ ವಿಚಾರಮಾಡಿದುದರ ಫಲವಾಗಿ, ಅವರ Rhythmನಲ್ಲಿ ಧ್ವನಿಸ್ವರೂಪವೂ ಸೇರಿಕೊಳ್ಳುತ್ತದೆ; ತತ್ಫಲವಾಗಿ ಧ್ವನಿಯ ಏರಿಳಿತಗಳಿಂದ ಅಥವಾ ಸ್ಫುಟಾಸ್ಫುಟತ್ವ-ಗಳಿಂದ ಇಲ್ಲವೆ ಧ್ವನಿಪರಿಮಾಣದ ಹ್ರಸ್ವತ್ವ ದೀರ್ಘತ್ವಗಳಿಂದ ವ್ಯಕ್ತವಾಗುವ ಗತಿರೂಪಭೇದಗಳನ್ನೆಲ್ಲ ಒಂದಾಗಿ ಭಾವಿಸಿಕೊಂಡು ಆ ಎಲ್ಲ ಸಂದರ್ಭ-ಗಳಲ್ಲಿಯೂ Rhythm ಎಂಬ ಒಂದೇ ಸಂಜ್ಞೆಯನ್ನು ಬಳಸುತ್ತಾರೆ. (ಇದರಿಂದಾಗಿ Rhythm ಎಂಬುದಕ್ಕೆ ನಿಷ್ಕೃಷ್ಟವಾದೊಂದು ಲಕ್ಷಣವನ್ನು ಹೇಳಲು ಅವರು ಅಸಮರ್ಥರಾಗಿದ್ದಾರೆ – *Encyclopaedia Britannica*, 1965, Vol – 19, page 272 ನೋಡಿರಿ.) ಲಯಾನ್ವಿತವಾದ ಧ್ವನಿಗತಿ ಅಂತಹ ಸಮಷ್ಟಿರೂಪವನ್ನು ತಳೆದು, ಹಿಂದುಸ್ತಾನೀ ಸಂಗೀತಸಂಪ್ರದಾಯದ ವಾದ್ಯವಾದನದಲ್ಲಿ 'ಗತ್' ಎನಿಸಿಕೊಳ್ಳುತ್ತದೆ.



# ಅವಶಿಷ್ಟ

ಹಿಂದೆ ನಾಲ್ಕನೆಯ ಪರಿಶಿಷ್ಟದಲ್ಲಿ ಹೇಳದೆ ಉಳಿದಿದ್ದ ಎರಡು ಮಾತುಗಳನ್ನು ಇಲ್ಲಿ ಹೇಳುತ್ತಿದ್ದೇನೆ :- ಭಾರತೀಯ ಸಂಗೀತಸಂಪ್ರದಾಯದಲ್ಲಿ 'ಗಮಕ' ಎಂಬೊಂದು ಸ್ವರಾಲಂಕಾರವಿರುತ್ತದೆ. ಇದು ಧ್ವನಿಗತಿಯ ಒಂದು ವಿಲಾಸವಾಗಿದ್ದು ನಾದಗಳ ಸೂಕ್ಷ್ಮವಾದ ಏರಿಳಿತಗಳಿಂದ ಹಾಗೂ ಸ್ವರಗಳ ಒಲೆಯುವಿಕೆ ಮೊದಲಾದವುಗಳಿಂದ ಉನ್ಮೀಲಿಸುತ್ತದೆ. ಈ ಗಮಕಗಳು ಹಲವು ವಿಧಗಳಾಗಿದ್ದು ಆಂದೋಲನ, ಕಂಪನ, ವಲ್ಗನ ಇತ್ಯಾದಿ ನಾನಾರೂಪಗಳನ್ನು ಪಡೆಯುತ್ತವೆ. 'ಗಮಕ' ಎಂಬ ಪದವೂ 'ಗತಿ' ಎಂಬ ಪದವೂ ಏಕಮೂಲ-ದವುಗಳಾಗಿವೆ ಎಂಬುದು ಇಲ್ಲಿ ಲಕ್ಷಿಸತಕ್ಕ ವಿಷಯವಾಗಿದೆ. ಸಾರಾಂಶ-ವೇನೆಂದರೆ, ಧ್ವನಿಗತಿಯ ಒಂದು ರೂಪವಾಗಿರುವ ಕಾರಣದಿಂದಲೇ ಆ ಸ್ವರಾಲಂಕಾರಗಳಿಗೆ ಗಮಕವೆಂಬ ಹೆಸರು ಬಂದುದಾಗಿದೆ.

[{ಗಮಕಪದ್ಧತಿಯ ವಾಚನವಿಚಾರ} ಗಮಕವೆಂಬ ಹೆಸರಿನ ಕಾವ್ಯವಾಚನ ಸಂಪ್ರದಾಯವೊಂದು ಕನ್ನಡ ನಾಡಿನಲ್ಲಿ ಪುರಾತನ ಕಾಲದಿಂದಲೂ ರೂಢವಾಗಿದೆ. ಈ ಪದ್ಧತಿಯಲ್ಲಿ ಕಾವ್ಯವಾಚನ ಮಾಡುವವರಿಗೆ ಗಮಕಿಗಳೆಂಬ ಹೆಸರೂ ಪ್ರಸಿದ್ಧವಾಗಿದೆ. ಪೂರ್ವಕಾಲದ ರಾಜರ ಆಸ್ಥಾನಗಳಲ್ಲಿ ಕವಿಗಳು ಇದ್ದಂತೆಯೇ ಗಮಕಿಗಳೂ ಇದ್ದರೆಂಬುದು ಹಳೆಯ ಕಾವ್ಯಗಳಿಂದ ಗೊತ್ತಾಗು-ತ್ತದೆ. (ಉದಾ:- ಕವಿಗಮಕಿವಾದಿವಾಗ್ಮಿಪ್ರವರರ್) ಪದ್ಯಗಳನ್ನು ಪದ್ಧತಿಗಳಲ್ಲಿ ಸುಸ್ಪಷ್ಟವಾದ ಎರಡು ಭೇದಗಳು ಕಂಡು ಬರುತ್ತವೆ :- ಛಂದೋಗತಿಗೆ ಯಾವ ಭಂಗವನ್ನೂ ತಾರದೆ ರಾಗಾನ್ವಿತವಾಗಿ ಹಾಡುವ ಪದ್ಧತಿ ಒಂದು. ಈ ಪದ್ಧತಿ-ಯಲ್ಲಿ ಹಾಡುವಾಗ ಯತಿಸ್ಥಾನಗಳಲ್ಲಿ ಹೊರತು ಬೇರೆಲ್ಲಿಯೂ ವಿರಮಿಸುವುದ-ಕ್ಕಾಗುವುದಿಲ್ಲ. ನಮ್ಮ ಕಾವ್ಯಗಳ ಪದಗಳು ಸಂಧಿಬದ್ಧಗಳಾಗಿರುವುದರಿಂದ ಪದಾಂತಗಳಲ್ಲಿ ನಿಲ್ಲಿಸದೆ ಹಾಡುವಾಗ ಎಷ್ಟೋ ವೇಳೆ ಅರ್ಥವು ಅಸ್ಪಷ್ಟವಾಗಿ ಹೋಗುವುದುಂಟು. ಅರ್ಥಪ್ರಧಾನವಾದ ಕಾವ್ಯಗಳನ್ನು ಈ ಪದ್ಧತಿಯಲ್ಲಿ ಹಾಡುವಾಗ ವಾಚನದ ಪ್ರಯೋಜನವು ಜನಸಮುದಾಯಕ್ಕೆ ಸಾಕಷ್ಟು ಲಭ್ಯ-ವಾಗುವುದಿಲ್ಲ. ಆದುದರಿಂದ ಛಂದೋಗತಿಯನ್ನು ಲೆಕ್ಕಿಸದೆ, ಅರ್ಥಾನುಸಾರವಾಗಿ ಇಷ್ಟವಾದಲ್ಲೆಲ್ಲ ನಿಲ್ಲಿಸಿ, ಅವಶ್ಯವಿದ್ದಲ್ಲಿ ಪುನರುಚ್ಚರಿಸಿ, ರಾಗಬದ್ಧವಾಗಿ ಹಾಡುವ ಕಾವ್ಯವಾಚನಪದ್ಧತಿಯೊಂದು ಉಂಟಾಗಬೇಕಾಯಿತು. 'ಗಮಕ'ವೆಂದರೆ ಈ ಪದ್ಧತಿಯ ವಾಚನವೇ ಆಗಿದೆ. ಆದರೆ ಒಂದು ಪದ್ಯವಾಚನಪದ್ಧತಿಯಾದ ಈ ಗಮಕಕ್ಕೂ ಮೇಲೆ ಹೇಳಿದ ಸಂಗೀತಸಂಪ್ರದಾಯದ ಗಮಕಕ್ಕೂ ಅರ್ಥಸಾಮ್ಯ-ವಿಲ್ಲ. ಒಂದು ವಾಚನಪದ್ಧತಿಯಾಗಿರುವ ಗಮಕಕ್ಕೆ ಈ ಹೆಸರು ಬಂದುದಕ್ಕೆ ಕಾರಣವೇನೆಂಬುದನ್ನು ಯಾರೂ ಈ ವರೆಗೆ ಹೇಳಿದಂತಿಲ್ಲ. ಈ ಬಗೆಯ ಹಾಡುಗಾರಿಕೆಯು ಕಾವ್ಯಾರ್ಥವು ಸುಸ್ಪಷ್ಟವಾಗಿ 'ಗಮ್ಯ'ವಾಗುವಂತೆ ಮಾಡುವು-

ದಕ್ಕಾಗಿಯೇ ಹುಟ್ಟಿದುದರಿಂದ 'ಗಮಕ' ಎಂದರೆ 'ಗಮ್ಯವಾಗುವಂತಹ' ಎಂಬರ್ಥದಲ್ಲಿ ಈ ಪದ್ಧತಿಗೆ ಈ ಹೆಸರು ಬಂದಿರಬೇಕೆಂದು ನನಗೆ ತೋರುತ್ತದೆ. ಮೊದಲು ಹೇಳಿದ ವಾಚನಪದ್ಧತಿಗೆ ದಂಡಾಕಾರದಲ್ಲಿ ಪಠಿಸುವುದು ಅಥವಾ ಹಾಡುವುದು ಎಂಬ ಹೆಸರು ಪರಂಪರಾಗತವಾಗಿ ಬಂದಿರುತ್ತದೆ. (ಈ ಪದ್ಧತಿಯ ವಿಶೇಷಪರಿಚಯಕ್ಕೆ ಈ ನಿಬಂಧದ 34ನೆಯ ಟಿಪ್ಪಣಿಯನ್ನು ನೋಡಿರಿ.) ದಂಡಾಕಾರದಲ್ಲಿ ಹಾಡಿದಾಗ ರಾಗಸೌಂದರ್ಯವೂ – ಪದ್ಯವು ಲಯಾನ್ವಿತ-ವಾಗಿರುವುದಾದರೆ ಲಯತಾಳಗಳ ಸೌಂದರ್ಯವೂ – ಪ್ರಕಟವಾಗುವವಾದರೂ ಅರ್ಥಪ್ರಕಾಶನವು ಸಾಕಷ್ಟು ಆಗದಿರುತ್ತದೆ. ಗಮಕಪದ್ಧತಿಯಲ್ಲಿ ಹಾಡಿದಾಗ ರಾಗ ಸೌಂದರ್ಯ ಮತ್ತು ಅರ್ಥಸೌಂದರ್ಯ ಇವೆರಡೇ ಗೋಚರಿಸುತ್ತವೆ; ಛಂದ-ಸ್ಸೌಂದರ್ಯವಾಗಲಿ ಲಯಾನ್ವಿತಬಂಧಗಳಲ್ಲಿರುವ ತಾಳಲಯಸೌಂದರ್ಯವಾಗಲಿ ಪ್ರಕಾಶಿತವಾಗುವುದಿಲ್ಲ. ಹೀಗೆ ಈ ಎರಡು ಪದ್ಧತಿಗಳಲ್ಲಿಯೂ ಅಪರಿಹಾರ್ಯ-ವಾದ ಅಷ್ಟಿಷ್ಟು ಅಪೂರ್ಣತೆ ಇದ್ದೇ ಇದೆ. ಕನ್ನಡ ಕಾವ್ಯಗಳನ್ನು ಮಾತ್ರವಲ್ಲ, ಸಂಸ್ಕೃತದ ಶಾರ್ದೂಲವಿಕ್ರೀಡಿತಾದಿ ವೃತ್ತಗಳನ್ನೂ ಗಮಕಪದ್ಧತಿಯಲ್ಲಿಯೇ ಹಾಡುವುದು ಕರ್ಣಾಟಕಸಂಗೀತ ಕಲಾಕಾರರ ಪದ್ಧತಿಯಾಗಿದೆ. ಹಿಂದುಸ್ತಾನಿ ಸಂಪ್ರದಾಯದ ವೃತ್ತಗಾಯನವು ಗಮಕಪದ್ಧತಿಯಲ್ಲಿರದೆ ದಂಡಾಕಾರರೂಪ-ವಾಗಿಯೇ ಇರುತ್ತದೆ.]



ಅನುಬಂಧ – ೧

# ಅಕ್ಷರ ಮತ್ತು ವರ್ಣ*

'ಅಕ್ಷರ' ಮತ್ತು 'ವರ್ಣ' – ಎಂಬ ಈ ಎರಡು ಪದಗಳನ್ನು ಪರ್ಯಾಯ ಪದಗಳಾಗಿ ಎಂದರೆ, ಸಮಾನವಾದ ಅರ್ಥದಲ್ಲಿ ಬಳಸುವುದು ಎಷ್ಟೋ ಶತ-ಮಾನಗಳಿಂದ ರೂಢಿಗೆ ಬಂದಿದೆ. ಉದಾ: ಅಕ್ಷರವೃತ್ತ – ವರ್ಣವೃತ್ತ; ವರ್ಣಮಾಲೆ – ಅಕ್ಷರಮಾಲೆ – ಇತ್ಯಾದಿ. ಇಷ್ಟು ಮಾತ್ರವಲ್ಲ ಇವು ಪರ್ಯಾಯ ಪದಗಳಾಗಿ ಪರಿಣಮಿಸಿದುದರಿಂದಲೇ "ಅಕ್ಕರಮುಂ ವರ್ಣಮುಮೆಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ" ಎಂದು ಕೇಶಿರಾಜನಿಗೆ ಶಬ್ದಮಣಿದರ್ಪಣದಲ್ಲಿ ಹೇಳ-ಬೇಕಾಗಿ ಬಂತು. ಈ ಎರಡು ಪದಗಳನ್ನು ಒಂದೇ ಅರ್ಥದಲ್ಲಿ ಬಳಸುತ್ತಿರು-ವುದರಿಂದಾಗಿ ಇವುಗಳೊಳಗೆ ಒಂದು ಪದವು ನಿಷ್ಪ್ರಯೋಜಕವಾದಂತಾಗಿದೆ. ಆದರೆ ಆದಿಕಾಲಗಳಲ್ಲಿ ಇವುಗಳಿಗೆ ಬೇರೆ ಬೇರೆ ಅರ್ಥಗಳಿದ್ದಿರಬೇಕು – ಎಂಬೊಂದು ಊಹೆಯನ್ನು ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ೧೯೫೦ನೇ ಇಸವಿಯಲ್ಲಿ ನಾನು ನೀಡಿದ ಕನ್ನಡ ವರ್ಣಗಳ ಕುರಿತಾದ ಉಪನ್ಯಾಸಮಾಲೆಯಲ್ಲಿ ಮಂಡಿಸಿದ್ದೆ. (ಕನ್ನಡ ವರ್ಣಗಳು – ಸ್ವರ-ಪ್ರಕರಣ – ಅಡಿಟಿಪ್ಪಣಿ ೨೨.) ವರ್ಣಸಮಾಮ್ನಾಯ, ಅಷ್ಟಾಕ್ಷರಿ, ಪಂಚಾಕ್ಷರಿ – ಇತ್ಯಾದಿ ಪ್ರಯೋಗಗಳನ್ನು ನೋಡಿದಾಗ ಈ ಅಭಿಪ್ರಾಯವು ನನಗೆ ಹೊಳೆದು 'ಅಕ್ಷರ'ವೆಂಬುದು 'Syllable' ಎಂಬ ಅರ್ಥವನ್ನೂ 'ವರ್ಣ' ಎಂಬುದು Letter – ಎಂದರೆ ಕೇಶಿರಾಜನು ಶುದ್ಧಾಕ್ಷರ(ಸುದ್ದಗೆ)ವೆಂದೂ ಭಟ್ಟಾಕಳಂಕನು ಶುದ್ಧಕ-ವೆಂದೂ ಮೂಲವರ್ಣವೆಂದೂ ಹೇಳುವ ಮೂಲಧ್ವನಿಯನ್ನೂ ಹೆಸರಿಸುವ ಶಬ್ದಗಳಾಗಿ ಆದಿಕಾಲಗಳಲ್ಲಿ ಪ್ರಯುಕ್ತವಾಗುತ್ತಿದ್ದಿರಬೇಕೆಂದು ನನ್ನಲ್ಲಿ ನಿಶ್ಚಯಿಸಿ-ಕೊಂಡೆ. ಆ ಮೇಲೆ ಎಷ್ಟೋ ವರ್ಷಗಳ ಅನಂತರ ಯಾಸ್ಕನ ನಿರುಕ್ತ ಗ್ರಂಥ-ವನ್ನು ಅವಲೋಕಿಸಿದಾಗ ನನ್ನ ಊಹೆ ಯಥಾರ್ಥವೇ ಆಗಿತ್ತೆಂಬುದು ಕಂಡು-ಬಂತು.

ನಿರುಕ್ತದ ಉಪೋದ್ಘಾತಭಾಗದ ದ್ವಿತೀಯಾಧ್ಯಾಯದ ಪ್ರಥಮಪಾದದಲ್ಲಿ ಅಕ್ಷರವೂ ವರ್ಣವೂ ಬೇರೆ ಬೇರೆ ಎಂಬುದನ್ನು ಯಾಸ್ಕನು ಸ್ಪಷ್ಟವಾಗಿ

---

* {ಈ ಲೇಖನವು ಉಡುಪಿಯಿಂದ ಪ್ರಕಟಗೊಳ್ಳುವ 'ಸುಗುಣಮಾಲಾ' ಪತ್ರಿಕೆಯ ಸಂಪುಟ ೨ ಸಂಚಿಕೆ ೬– ಜೂನ್ ೧೯೮೭ರ ಪುಟ ೧೯–೨೦ರಲ್ಲಿ ಮೊದಲಿಗೆ ಪ್ರಕಟಗೊಂಡು ಅನಂತರ ೧೯೮೮ರಲ್ಲಿ ಪ್ರಕಟಗೊಂಡ 'ಕನ್ನಡ ಛಂದಸ್ಸು' ನಿಬಂಧದ ಅನುಬಂಧ ೧ರಲ್ಲಿ ಸೇರ್ಪಡೆಗೊಂಡಿತು. ಸೇಡಿಯಾಪು ಸಮಗ್ರಲೇಖನ ಸಂಕಲನ 'ವಿಚಾರಪ್ರಪಂಚ'ದ 'ಭಾಷಾವಿಚಾರ' ವಿಭಾಗದಲ್ಲೂ ಈ ಲೇಖನ ಸೇರಿದೆ. ಪ್ರಸ್ತುತ ನಿಬಂಧದ 19ನೇ ಟಿಪ್ಪಣಿಯಲ್ಲಿ ಈ ಲೇಖನವನ್ನು ಉಲ್ಲೇಖಿಸಿದೆ–ಸಂ.}

ನಿರೂಪಿಸಿದ್ದಾನೆ. ಆದರೆ, ತಾವು ಬರೆದ ನಿರುಕ್ತವ್ಯಾಖ್ಯಾನದಲ್ಲಿ ಪಂಡಿತ ಮುಕುಂದ ಝಾ ಬಖ್ಶಿಯವರು – ಅಕ್ಷರವೆಂದರೆ ಸ್ವರವೆಂದೂ ವರ್ಣವೆಂದರೆ ವ್ಯಂಜನವೆಂದೂ ಹೇಳುತ್ತಾರೆ. ಅವರ ಈ ಅಭಿಪ್ರಾಯವು ಪೂರ್ಣ ಸಮಂಜಸ-ವೆನ್ನಲಾಗುವುದಿಲ್ಲ. ಅತಿಪುರಾತನ ಪ್ರಯೋಗಗಳನ್ನು ಪರೀಕ್ಷಿಸಿದರೆ ಅಕ್ಷರ ಶಬ್ದವು ಸ್ವರವನ್ನು ಮಾತ್ರ ಹೇಳುವುದಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಉದಾ:- 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' (ಛಾಂದೋಗ್ಯ ಉಪನಿಷತ್ತು); ಓಮಿ-ತ್ಯೇಕಾಕ್ಷರಂ ಬ್ರಹ್ಮ' (ಭಗವದ್ಗೀತೆ) – ಇಲ್ಲಿ 'ಓಮ್' ಎಂಬ ಸ್ವರವ್ಯಂಜನ-ಪಿಂಡವನ್ನೇ ಏಕಾಕ್ಷರವೆಂದು ಹೇಳಿದುದನ್ನು ನೋಡಬಹುದು. ಸಂಧ್ಯಾವಂದನೆ-ಯಲ್ಲಿ ಪಠಿಸುವ 'ಗಾಯತ್ರೀ ಚತುರ್ವಿಂಶತ್ಯಕ್ಷರಾ' (ಗಾಯತ್ರಿಯು ಇಪ್ಪತ್ತನಾಲ್ಕು ಅಕ್ಷರಗಳುಳ್ಳದ್ದು) – ಇತ್ಯಾದಿಗಳಲ್ಲಿ ವ್ಯಂಜನಸಹಿತವಾದ ಸ್ವರವನ್ನೇ ಅಕ್ಷರ ಎಂದು ಸಂಜ್ಞಿಸಿ ವರ್ಣಿಸಲಾಗಿದೆ.

ಇದರಿಂದ ಅಕ್ಷರವೆಂದರೆ ಒಂದು ಪೂರ್ಣೋಚ್ಚಾರಕ್ಕೆ ಸಿಲುಕುವ ಧ್ವನಿ ಎಂದು ಸಿದ್ಧವಾಗುತ್ತದೆ. ಹಿಂದಾಗಲಿ ಮುಂದಾಗಲಿ ಒಂದು ಸ್ವರದ ಸಂಯೋಗ-ವಿದ್ದರೆ ಮಾತ್ರ ವ್ಯಂಜನವು ಶ್ರವಣಗೋಚರವಾಗಬಲ್ಲುದು. ಸ್ವರವಾದರೆ ವ್ಯಂಜನ-ಸಂಯೋಗವಿಲ್ಲದೆಯೂ ಸ್ಫುಟವಾಗಿ ಪ್ರಕಟವಾಗುತ್ತದೆ; ಎಂದರೆ ಸ್ವರವು ಸ್ವಭಾ-ವತಃ ಒಂದು ಪೂರ್ಣೋಚ್ಚಾರರೂಪವಾಗಿರುತ್ತದೆ. ಆದುದರಿಂದ ವ್ಯಂಜನ ಸಂಯೋಗವಿರಲಿ, ಇಲ್ಲದಿರಲಿ ಸ್ವರವು 'ಅಕ್ಷರ'ವೆಂಬ ಹೆಸರಿಗೆ ಪಾತ್ರವಾಗುತ್ತದೆ.

ಒಂದು ಭಾಷೆಯ ಮೂಲಧ್ವನಿಯನ್ನು ಶಾಸ್ತ್ರಕಾರರು 'ವರ್ಣ' ಎಂದು ಹೆಸರಿಸಿರುತ್ತಾರೆ. ವರ್ಣಗಳು ಸ್ವರ ಮತ್ತು ವ್ಯಂಜನ ಎಂದು ದ್ವಿವಿಧವಾಗಿವೆ. ಇವುಗಳೊಳಗೆ ಸ್ವರಗಳು – ಮೂಲಧ್ವನಿಗಳಾಗಿರುವುದರಿಂದ ವರ್ಣಗಳೆಂದೂ, ಸ್ವತಃ ಪೂರ್ಣೋಚ್ಚಾರರೂಪಗಳಾಗಿರುವುದರಿಂದ ಅಕ್ಷರಗಳೆಂದೂ ಎರಡು ಸಂಜ್ಞೆಗಳನ್ನು ಪಡೆಯತಕ್ಕವಾಗಿವೆ. ಉದಾ – ಸವರ್ಣದೀರ್ಘ (ವ್ಯಾಕರಣ), ಅಕ್ಷರಾಣಾಂ ಅಕಾರೋಸ್ಮಿ (ಭಗವದ್ಗೀತೆ) – ಇತ್ಯಾದಿ. ಸ್ವರಸಂಯೋಗವಿಲ್ಲದೆ ಉಚ್ಚಾರಕ್ಕೆ ಬಾರದ ಮೂಲಧ್ವನಿಗಳಾಗಿರುವ ವ್ಯಂಜನಗಳಿಗೆ ವರ್ಣವೆಂಬ ಸಂಜ್ಞೆ ಮಾತ್ರ ಸಲ್ಲತಕ್ಕುದಾಗಿದೆ. ಇವುಗಳನ್ನು ಅಕ್ಷರಗಳೆಂದು ಕರೆಯುವುದು ವಸ್ತುಸ್ಥಿತಿಯ ಯಥಾರ್ಥಜ್ಞಾನಕ್ಕೆ ತೊಡಕನ್ನುಂಟುಮಾಡುತ್ತದೆ.

ಆದರೂ ವಿದ್ಯಾಭ್ಯಾಸದ ಆರಂಭವನ್ನು ಅಕ್ಷರಾಭ್ಯಾಸವೆಂದೂ ಲಿಪಿ ರೂಪದಲ್ಲಿ ನಾವು ಕಲಿಯುವ ನಮ್ಮ ಭಾಷೆಗಳ ವರ್ಣಸಮುದಾಯವನ್ನು ಅಕ್ಷರಮಾಲೆಯೆಂದೂ ಕರೆಯುವ ರೂಢಿ ತ್ಯಾಜ್ಯವೆನ್ನಲಾಗುವುದಿಲ್ಲ. ಭಾರತೀಯ ಭಾಷೆಗಳ ಲಿಪಿಗಳೆಲ್ಲವೂ ಅಕ್ಷರರೂಪವಾಗಿಯೇ (= Syllable ರೂಪವಾಗಿಯೇ) ಇರುವವುಗಳಾದುದರಿಂದಲೂ ಮತ್ತು ಕೇವಲ ವ್ಯಂಜನಗಳು ಉಚ್ಚಾರಕ್ಕೆ ಸಿಲುಕದಿರುವ ಕಾರಣ ನಮ್ಮ ವರ್ಣಮಾಲೆಯ ವ್ಯಂಜನಗಳೆಲ್ಲವನ್ನೂ ನಾವು ಅಕಾರಸಹಿತವಾಗಿಯೇ (ಉದಾ ಕ, ಖ, ಗ, ಘ) ಕಲಿಯುವುದರಿಂದಲೂ ಈ

ರೂಢಿ ತಪ್ಪೆಂದಾಗುವುದಿಲ್ಲ. ಆದರೆ ವ್ಯಾಕರಣಗ್ರಂಥಗಳಲ್ಲಿ ಮೂಲಧ್ವನಿಸಮುದಾಯವನ್ನು ತದ್ವತ್ತಾಗಿ ಬರೆದು ತೋರಿಸುವ ಸಂದರ್ಭಗಳಲ್ಲಿ 'ಅಕ್ಷರಮಾಲೆ'-ಯೆಂದು ಹೇಳುವುದು ಯುಕ್ತವೆನಿಸಲಾರದು; ಅಲ್ಲಿ ಅವುಗಳನ್ನು 'ವರ್ಣಮಾಲೆ' ಎಂದೇ ಕರೆಯುವುದು ಉಚಿತ.[1] ಯಾವ ಶಾಸ್ತ್ರದಲ್ಲಾದರೂ ಒಂದು ಸಂಜ್ಞೆಯನ್ನು ಪಾರಿಭಾಷಿಕವಾಗಿ ಅನೇಕಾರ್ಥಗಳಲ್ಲಿ ಬಳಸಿಬಿಟ್ಟರೆ ಶಾಸ್ತ್ರನಿರೂಪಣೆಯ ಖಚಿತತೆಯು ನಷ್ಟವಾಗಿ ಅರ್ಥವು ಸಂದಿಗ್ಧವಾಗಿ ಪರಿಣಮಿಸುತ್ತದೆಂಬುದನ್ನು ಗ್ರಂಥಕಾರರು ಮರೆಯದಿರುವುದು ಒಳ್ಳೆಯದು.



---

1. ಛಂದೋಗ್ರಂಥಗಳಲ್ಲಿ 'ಅಕ್ಷರ' ಎಂಬ ಅರ್ಥದಲ್ಲಿ ವರ್ಣವೆಂದು ಪ್ರಯುಕ್ತವಾಗಿರುವುದೂ ಉಂಟು. ವಸ್ತುತಃ ಛಂದಸ್ಸಿನಲ್ಲಿ ವರ್ಣ ಎಂಬ ಪದಪ್ರಯೋಗಕ್ಕೆ ನ್ಯಾಯವಾಗಿ ಎಡೆಯೇ ಇಲ್ಲ. ಗುರುಲಘು ಸಂಜ್ಞೆಗಳು ಅಕ್ಷರಗಳಿಗೆ ಸಂಬಂಧಿಸಿದವು. ವರ್ಣಗಳಿಗಲ್ಲವೇ ಅಲ್ಲ.

ಅನುಬಂಧ – ೨

# ತ್ರಿಪದಿಯ ಲಕ್ಷಣ*

ತ್ರಿಪದಿ ಕನ್ನಡದಲ್ಲಿ ಪ್ರಸಿದ್ಧವಾಗಿರುವ ಒಂದು ಪದ್ಯರೂಪ. ಸರ್ವಜ್ಞನ ತ್ರಿಪದಿಗಳಂತೂ ಅತ್ಯಂತ ಪ್ರಸಿದ್ಧವಾಗಿವೆ. ಸುಮಾರು ಏಳನೆಯ ಶತಮಾನದಿಂದಲೇ ತ್ರಿಪದಿಯ ಅಸ್ತಿತ್ವವು ಕಂಡುಬರುತ್ತದೆ. ನಮ್ಮ ನಾಡಿನ ಹೆಂಗಳ ಹಾಡುಗಳಲ್ಲಿ ತ್ರಿಪದಿಗೆ ಪ್ರಮುಖವಾದ ಸ್ಥಾನವಿದೆ. ಹೀಗಿದ್ದರೂ ಇದರ ಛಂದೋಲಕ್ಷಣದ ಕುರಿತು ಒಂದು ಯುಕ್ತವಾದ ನಿರ್ಧಾರಕ್ಕೆ ಇಂದಿನ ಅಕ್ಕರಿಗರೆಲ್ಲ ಬಂದಿರುವುದಿಲ್ಲ. ಇದು ತ್ರಿಮೂರ್ತಿಗಣಘಟಿತವೆಂದು ನಾಗವರ್ಮನು ಹೇಳಿರುವನಾದರೂ, ಆ ಅಭಿಪ್ರಾಯವು ಇಂದಿನ ವಿದ್ವಾಂಸರೆಲ್ಲರಿಗೆ ಮನವರಿಕೆಯಾದಂತೆ, ಮೆಚ್ಚಿದಂತೆ, ಕಾಣುವುದಿಲ್ಲ. ಏಕೆಂದರೆ ಇಂದು ಕಾಣಿಸಿಕೊಳ್ಳುವ ತ್ರಿಪದಿಗಳೆಲ್ಲ ಅವನು ಹೇಳಿದ ಲಕ್ಷಣಕ್ಕೆ ಒಡಂಬಡುವಂತೆ ತೋರುವುದಿಲ್ಲ. ಆದುದರಿಂದ ಮಾತ್ರೆಗಳ ಲೆಕ್ಕದಿಂದಲೇ ಅದರ ಲಕ್ಷಣವನ್ನು ಹೇಳುವ ಮತ್ತು ತಿಳಿಯುವ ಪ್ರಯತ್ನಗಳು ಕೆಲವು ಕಾಲದಿಂದ ಕಂಡುಬರುತ್ತವೆ. ಉದಾಹರಣವಾಗಿ – ೧೯೨೪ನೆಯ ಇಸವಿಯಲ್ಲಿ ಮುದ್ರಿತವಾದ 'ಸರ್ವಜ್ಞ ವಚನಗಳ' ಪ್ರಸ್ತಾವನೆಯಲ್ಲಿ ಶ್ರೀ ಉತ್ತಂಗಿಯವರು ಹೀಗೆಂದಿದ್ದಾರೆ:–

'ತ್ರಿಪದಿಯೆಂದರೆ ಮೂರು ಚರಣಗಳುಳ್ಳದ್ದು, ಇವುಗಳಲ್ಲಿ ಮೊದಲನೆಯ ಚರಣಕ್ಕೆ ೨೦, ಎರಡನೆಯದಕ್ಕೆ ೧೭, ಮೂರನೆಯದಕ್ಕೆ ೧೩ ಮಾತ್ರೆಗಳು ಬರುವುವು... ಎರಡನೆಯ ಚರಣದ ಎರಡನೆಯ ಹಾಗೂ ಮೂರನೆಯ ಚರಣದ ಎರಡನೆಯ ಗಣಗಳಲ್ಲಿ, ಅಂದರೆ ರಸದಶಸ್ಥಾನಗಳಲ್ಲಿ (೬–೧೦) – ಬ್ರಹ್ಮಗಣವು ಬರತಕ್ಕದ್ದು... ಅಂದರೆ ಈ ಎರಡು ಸ್ಥಾನಗಳಲ್ಲಿ ೩ – ೪ಕ್ಕಿಂತ ಹೆಚ್ಚು, ಉಳಿದ ಸ್ಥಾನಗಳಲ್ಲಿ ೫ಕ್ಕಿಂತ ಹೆಚ್ಚು ಮಾತ್ರೆಗಳು ಬರಲಾಗದು. ಹೇಗಿದ್ದರೂ ಎರಡನೆಯ ಚರಣದ ೧೭ ಮಾತ್ರೆಗೂ ೩ನೆಯ ಚರಣದ ೧೩ ಮಾತ್ರೆಗೂ ಏನೂ ಹೆಚ್ಚುಕಡಿಮೆ ಆಗಬಾರದು. ಆದರೆ ಷಡಕ್ಷರಿಯ ರಾಜಶೇಖರ ವಿಲಾಸದಲ್ಲಿಯೂ ಸರ್ವಜ್ಞನ ತ್ರಿಪದಿಯಲ್ಲಿಯೂ ರಸದಶಸ್ಥಾನಗಳಲ್ಲಿ ಮೂರು ಮಾತ್ರೆಗಳು ಬರುವುದೇ ವಿಶೇಷ. ತ್ರಿಪದಿಗೆ ಒಂದು ತರದ ವಿಲಕ್ಷಣ ಸ್ವಭಾವವಿದ್ದು, ಇದರಲ್ಲಿ

* {ಈ ಲೇಖನವು ೧೯೫೦ರಲ್ಲಿ ಧರ್ಮಸ್ಥಳದ ಕಿ. ಶೇ. ಮಂಜಯ್ಯ ಹೆಗ್ಗಡೆಯವರಿಗೆ ಒಪ್ಪಿಸಿದ 'ಸಮರ್ಪಣೆ' ಎಂಬ ಹೆಸರಿನ ಅಭಿನಂದನ ಗ್ರಂಥದಲ್ಲಿ ಮೊದಲು ಪ್ರಕಟಗೊಂಡುದಾಗಿದೆ. 'ಕನ್ನಡ ಛಂದಸ್ಸು' ನಿಬಂಧದ 21ನೆಯ ಟಿಪ್ಪಣಿಯಲ್ಲಿ ಈ ಲೇಖನದ ಉಲ್ಲೇಖವಿದೆ. ತ್ರಿಪದಿ ತ್ರಿವಿಧಿಗಳು ಅಭಿನ್ನವೆಂದು ಆ ಮೂಲ ಲೇಖನದಲ್ಲಿ ಮಾಡಿದ್ದ ಪ್ರತಿಪಾದನೆಯ ಭಾಗವನ್ನು ಮಾತ್ರ ಇಲ್ಲಿ ಕೈಬಿಡಲಾಗಿದೆ. ತ್ರಿಪದಿಯ ಬಗೆಗೆ ಈ ಲೇಖನದಲ್ಲಿ ಹೇಳದ ಹೆಚ್ಚಿನ ವಿವರಗಳು ಆ ಟಿಪ್ಪಣಿಯಲ್ಲಿವೆ. – ಸಂ.}

ಪದಗಳನ್ನು ರಚಿಸುವುದು ಅನೇಕಾವರ್ತಿ ತೋರುವಷ್ಟು ಸುಲಭವಾಗಿರುವುದಿಲ್ಲ...' (ಪ್ರಸ್ತಾವನೆ, ಪುಟ ೪೮-೪೯).

೧೯೨೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಿಸಲ್ಪಟ್ಟ 'ಕನ್ನಡ ಕೈಪಿಡಿ'ಯಲ್ಲಿ ತ್ರಿಪದಿ ಲಕ್ಷಣವು ಹೀಗಿದೆ:-

'ಐದು ಮಾತ್ರೆಯ ಗಣವು ಒಂದೆರಡನೆಯ ಪಾದಗಳಲ್ಲಿ ನಾಲ್ಕು ನಾಲ್ಕೂ, ಮೂರನೆಯ ಪಾದದಲ್ಲಿ ಮೂರೂ ಇರುವುವು". (ಪುಟ ೧೩೨) [ಎಂದರೆ ಮೊದಲನೆಯ ಪಾದದಲ್ಲಿ ೨೦, ಎರಡನೆಯ ಪಾದದಲ್ಲಿಯೂ ೨೦, ಮೂರನೆಯ ಪಾದದಲ್ಲಿ ೧೫ ಮಾತ್ರೆಗಳು ಎಂದಂತಾಯಿತು. – ಲೇಖಕ.] ಮುಂದೆ ಅದೇ ಪುಸ್ತಕದ ೧೩೫ನೆಯ ಪುಟದಲ್ಲಿ –

"ಬಿಸರುಹೋದ್ಭವಗಣಂ ರಸದಶಸ್ಥಾನದೊಳ್
ಬಿಸರುಹನೇತ್ರಗಣಮೆ ಬರ್ಕುಳಿದುವು
ಬಿಸರುಹನೇತ್ರೇ ತ್ರಿಪದಿಗೆ".

ಎಂದು ನಾಗವರ್ಮನು ಹೇಳಿದ ಲಕ್ಷಣವೂ ದಿಙ್ಮಾತ್ರವಾಗಿ ಸೂಚಿತವಾಗಿದೆ.

೧೯೩೨ನೇ ಇಸವಿಯಲ್ಲಿ ಮಡಿಕೇರಿಯ ಸಾಹಿತ್ಯ ಸಮ್ಮೇಳನದಲ್ಲಿ ಈ ಲೇಖಕನು ಓದಿದ, ಮತ್ತು ೧೯೩೩ನೆಯ ಇಸವಿಯ ಸಾಹಿತ್ಯ ಪರಿಷತ್ ಪತ್ರಿಕೆಯ ೧, ೨ನೆಯ ಸಂಚಿಕೆಗಳಲ್ಲಿ ಪ್ರಕಟವಾದ 'ಕನ್ನಡ ಛಂದಸ್ಸು' ಎಂಬ ವಿಸ್ತೃತವಾದ ಲೇಖನದಲ್ಲಿ ಈ ಕುರಿತು ಹೀಗೆ ಹೇಳಲಾಗಿದೆ:-

'ಅಕ್ಕರಗಳಂತೆ ತ್ರಿಪದಿಯೂ ಮಾತ್ರಾನಿಯಮವಿಲ್ಲದೆ ವಿಶುದ್ಧ ತ್ರಿಮೂರ್ತಿಗಣಘಟಿತವಾದರೂ, ಇಲ್ಲಿ ನಾಗವರ್ಮನು ಗಣಾಂತಗಳಲ್ಲಿ ಯತಿಯನ್ನು-ಲ್ಲಂಘಿಸದೆ ಚೊಕ್ಕವಾಗಿ ಹೇಳಿದ್ದಾನೆ. ಇದಕ್ಕೆ ಅವನ ಕಾಲದಲ್ಲಿ ಈ ಬಂಧವು ಹಳಸದುದೇ ಕಾರಣ. ಸುಮಾರು ಇತ್ತಿತ್ತಲಾಗಿನ ವರೆಗೂ ಇದರಲ್ಲಿ ಕವಿತಾ-ರಚನೆಯಾಗುತ್ತಿತ್ತು. ಕನ್ನಡ ಜಿಲ್ಲೆಯ ಹೆಂಗುಸರ ತೊಟ್ಟಿಲ ಹಾಡುಗಳು ಈ ಬಂಧದಲ್ಲಿಯೇ ಇಂದಿನವರೆಗೂ ಇವೆ. ....ಮುದ್ರಿತವಾದ ಸರ್ವಜ್ಞನ ಪದಗಳು ತ್ರಿಪದಿಯ ಲಕ್ಷಣಕ್ಕೆ ಅಲ್ಲಲ್ಲಿ ಬಹಳ ಬಿಡುತ್ತವೆ. ಅಕ್ಷರಬಂಧಗಳನ್ನು ಅಥವಾ ವಿಶುದ್ಧ ಮಾತ್ರಾಬಂಧಗಳನ್ನು ಹಾಡದೆ ಓದಿದರೂ, ಅವುಗಳ ರೂಪವು ನಷ್ಟ-ವಾಗಲಾರದು. ಆದರೆ ಆ ನಿರ್ಬಂಧವಿಲ್ಲದ ಬಂಧಗಳನ್ನು ಹಾಡದೆ ಓದಿದರೆ, ಅವುಗಳಲ್ಲಿ ನಿಧಾನವಾಗಿ ತಪ್ಪು ಸೇರಿಕೊಳ್ಳುವುದು ಸ್ವಾಭಾವಿಕ. ಈ ದೃಷ್ಟಿಯಿಂದ ಸರ್ವಜ್ಞನ ವಚನಗಳನ್ನು ಶೋಧಿಸಿದರೆ ಸರಿಯಾದ ಪಾಠಗಳು ದೊರೆಯದಿರವು... ತ್ರಿಮೂರ್ತಿಗಣದಿಂದಲ್ಲದೆ ಅದರ ಲಕ್ಷಣವನ್ನು ಯಾವ ಇನ್ನೊಂದು ರೀತಿ-ಯಲ್ಲಿಯೂ ಸಮಂಜಸವಾಗಿ ಹೇಳಲು ಸಾಧ್ಯವಿಲ್ಲ' (ಸಂಪುಟ ೧೮. ಸಂಚಿಕೆ ೨. ಪುಟ ೧೨೮-೨೯).

ಆ ಲೇಖನದಲ್ಲಿ ಅದೇ ಮೊದಲಾಗಿ ನಿರೂಪಿಸಲ್ಪಟ್ಟ 'ಸಾಂಗತ್ಯ'ದ ಲಕ್ಷಣ ಇತ್ಯಾದಿ ವಿಷಯಗಳು ಈಗ ಸರ್ವಸಮ್ಮತವಾಗಿ ವಿದ್ವಾಂಸರಿಂದ ಸ್ವೀಕೃತವಾಗಿರುವುದಾದರೂ,[1] ತ್ರಿಪದಿಯ ಕುರಿತು ಸಂದೇಹಗಳು ಉಳಿದಿವೆ. ಇದಕ್ಕೆ ಕಾರಣಗಳೂ ಇವೆ. ಉಕ್ತಲಕ್ಷಣಕ್ಕೆ ಹೊಂದದ ತ್ರಿಪದಿಗಳು ತುಂಬ ಗ್ಗೋಚರವಾಗುತ್ತಿರುವಾಗ ಹಾಗಾಗುವುದು ಸ್ವಾಭಾವಿಕ. ಆದುದರಿಂದ ನಾಗವರ್ಮನ ಕಾಲಕ್ಕಿಂತ ಮೊದಲಿನ ತ್ರಿಪದಿಗಳು ತ್ರಿಮೂರ್ತಿಗಣಘಟಿತವಾಗಿರಬಹುದಾದರೂ ಅದರಿಂದೀಚೆಯ ತ್ರಿಪದಿಗಳು, ಮುಖ್ಯವಾಗಿ ಸರ್ವಜ್ಞನ ತ್ರಿಪದಿಗಳು, ಭಿನ್ನಲಕ್ಷಣಕ್ಕೆ ಒಳಗಾಗಿವೆಯೆಂದು ತಿಳಿದುಕೊಂಡು, ಮಾತ್ರಾನಿಯಮದಿಂದ ಅದರ ಲಕ್ಷಣವನ್ನು ಅನೇಕ ಮಂದಿ ವಿದ್ವಾಂಸರು ಇಂದೂ ಹೇಳುತ್ತಿದ್ದಾರೆ. ಆದರೆ ಮಾತ್ರಾನಿಯಮವಿಷಯದಲ್ಲಿಯೂ ಐಕಮತ್ಯವುಂಟಾಗಿಲ್ಲದುದರಿಂದ ಏತದ್ವಿಷಯಕವಾದ ಬೇರೆ ಬೇರೆ ಅಭಿಪ್ರಾಯಗಳನ್ನು ಇಲ್ಲಿ ಕ್ರೋಡೀಕರಿಸಬೇಕಾಗಿದೆ.

೧. ಹಿಂದೆ ಸೂಚಿಸಿದ ಶ್ರೀ ಉತ್ತಂಗಿಯವರ ಮತದಂತೆ, – ಮೂರು ಪಾದಗಳಲ್ಲಿ ಅನುಕ್ರಮವಾಗಿ ೨೦, ೧೭, ೧೩ ಮಾತ್ರೆಗಳು.

೨. ೧೯೨೭ನೆಯ ಇಸವಿಯ 'ಕನ್ನಡ ಕೈಪಿಡಿ'ಯ ಮತದಂತೆ – ೨೦, ೨೦, ೧೫ ಮಾತ್ರೆಗಳು.

೩. ೧೯೩೫ರಲ್ಲಿ ಪ್ರಕಟವಾದ 'ಸರ್ವಜ್ಞ ವಚನಗಳ ಜನಪದಾವೃತ್ತಿ'ಯ ಪ್ರಸ್ತಾವನೆಯ ೧೮, ೧೯ನೆಯ ಪುಟಗಳಲ್ಲಿ ಪ್ರಕಟವಾದ ಶ್ರೀ ಹುಲ್ಕುಂಟೆಮಠ ಶಿವಮೂರ್ತಿ ಶಾಸ್ತ್ರಿಗಳ ಮತದಂತೆ – ೨೦, ೧೯, ೧೩ ಮಾತ್ರೆಗಳು.

೪. ೧೯೩೭ನೆಯ ಇಸವಿಯ 'ಕನ್ನಡ ಕೈಪಿಡಿ'ಯ ಎರಡನೆಯ ಮುದ್ರಣದ ಮತದಂತೆ ೨೦, ೧೯, ೧೪ ಮಾತ್ರೆಗಳು.

ಇವುಗಳೊಳಗೆ ಒಂದೊಂದನ್ನೇ ಪರೀಕ್ಷಿಸುವ:–

ಮಾತ್ರೆ ಎಂಬುದು ಪ್ರತ್ಯಕ್ಷಗಣನೆಗೆ ಒಳಪಟ್ಟ ವಿಷಯವಾಗಿರುವಾಗ, ವಿದ್ವಾಂಸರೊಳಗೆ ಈ ಕುರಿತು ಇಷ್ಟು ಮತಭೇದ ಬರಲು ಕಾರಣವೇನು? ಎಲ್ಲಾ ತ್ರಿಪದಿಗಳಲ್ಲಿ ಮಾತ್ರಾಸಂಖ್ಯೆ ಸಮಾನವಾಗಿಲ್ಲವೆಂಬುದಕ್ಕೆ ಬೇರೆ ಯಾವ ಆಧಾರವಾದರೂ ಬೇಕೆ? ಆದರೂ ದೃಷ್ಟಾಂತಕ್ಕಾಗಿ, ಸರ್ವಜ್ಞನ ಕೆಲವು ತ್ರಿಪದಿಗಳನ್ನು ಕೈಗೆ ಬಂದಂತೆ ಹೆಕ್ಕಿ ಮಾತ್ರೆಗಳನ್ನು ಲೆಕ್ಕಿಸೋಣ.

| | ಮಾತ್ರೆಗಳು |
|---|---|
| ಮುನ್ನ ಕೈಲಾಸದಲಿ ಪನ್ನಗಧರನಾಳು | ೧೯ |
| ಎನ್ನಯ ಪೆಸರು ಪುಷ್ಪದತ್ತನು ಎಂದು | ೧೭ |

---

1. ೧೯೨೭ನೆಯ ಇಸವಿಯಲ್ಲಿ ಮುದ್ರಿತವಾದ ಕನ್ನಡ ಕೈಪಿಡಿಯ ಸಾಂಗತ್ಯಲಕ್ಷಣವನ್ನೂ, ೧೯೩೭ನೆಯ ಇಸವಿಯ ಎರಡನೆಯ ಮುದ್ರಣದಲ್ಲಿ ಕಾಣುವ ಲಕ್ಷಣವನ್ನೂ ಅವಲೋಕಿಸಿರಿ.

ಮನ್ನಿಪರು ದಯದಿ ಸರ್ವಜ್ಞ ೧೩+೧[2]

ಒಳಗಣಾ ಜ್ಯೋತಿಯಾ ಬೆಳಗನರಿದಾತಂಗೆ ೨೦

ಬೆಳಗಾದುದೇಳು ಬೇಹಾರಕೆಂದೆಂಬ ೧೮

ಕಳವಳವೇಕೆ ಸರ್ವಜ್ಞ ೧೨+೧[2]

ಯೋಗಿಗೆ ಹೊಲೆಯಿಲ್ಲ ಸಾಗರಕೆ ನೆಲೆಯಿಲ್ಲ ೧೯

ಯೋಗವಟ್ಟಿಗೆಗೆ ಮೊಳವಿಲ್ಲ ಜ್ಞಾನಿಗೆ ೧೭

ಆಗುಹೋಗಿಲ್ಲ ಸರ್ವಜ್ಞ ೧೩+೧[2]

[ಇವು ಅನುಕ್ರಮವಾಗಿ, ಶ್ರೀ ಉತ್ತಂಗಿಯವರ ೧೯೨೪ನೆಯ ಇಸವಿಯ ವಿಶೇಷಾವೃತ್ತಿಯ ೨, ೩೧೩, ೩೧೫ನೆಯ ಪದ್ಯಗಳು.]

ಮೇಲೆ ಕ್ರೋಡೀಕರಿಸಿದ ಮತಗಳೊಳಗೆ ಯಾವುದೊಂದಕ್ಕೂ ಈ ಪದ್ಯ-ಗಳಲ್ಲಿ ಪ್ರತಿಯೊಂದು ಒಡಂಬಡುವುದಿಲ್ಲವೆಂಬುದು ಸ್ಪಷ್ಟವಾಗಬಹುದು. ಆದರೆ 'ಕೈಪಿಡಿ'ಯ ಎರಡನೆಯ ಮುದ್ರಣದ (೧೯೩೬) ಮಾತ್ರಾಪ್ರಸ್ತಾರದಲ್ಲಿ ಒಂದು ವಿಶೇಷವಿದೆ. ಅದರಲ್ಲಿ ಹೀಗೆ ಮಾತ್ರಾಸಂಖ್ಯೆಯೊಡನೆ ಗಣವಿಭಾಗ ಮಾಡಿದ್ದಾರೆ:–

೫ ೫ ೫ ೫

ಒಬ್ಬನ । ಲ್ಲದೆ ಜಗಕೆ । ಇಬ್ಬರುಂ । ಟೇ ಮತ್ತೆ । ೨೦

೫ ೪ ೪ ೧ ೫

ಒಬ್ಬ ಸ । ರ್ವಜ್ಞ । ಕರ್ತ : ನು ॥ ಜಗಕೆಲ್ಲ । ೧೯

೫ ೪ ೪ ೧

ಒಬ್ಬನೇ । ದೈವ । ಸರ್ವ : ಜ್ಞ ॥ ೧೪

ಇಲ್ಲಿ ಆರನೆಯ ಹತ್ತನೆಯ ಸ್ಥಾನಗಳಲ್ಲಿ ಒಂದೊಂದು ಮಾತ್ರಾಸಂಖ್ಯೆ ಹೆಚ್ಚಿಸಲ್ಪಟ್ಟಿದೆ; ಏಳನೆಯ ಹನ್ನೊಂದನೆಯ ಸ್ಥಾನಗಳಲ್ಲಿಯೂ ಗಣಮಧ್ಯದಲ್ಲಿ ಒಂದೊಂದು ಮಾತ್ರೆ ಹೆಚ್ಚು ಕಾಣಿಸಲಾಗಿದೆ. ಇದೆಲ್ಲಾ ಹಾಡಿನ ಧಾಟಿಯನ್ನು

---

2. ಪಾದಾಂತ ವಿಶ್ರಾಂತಿಸ್ಥಾನವಾದುದರಿಂದ ಕೊನೆಯ ಅಕ್ಷರವನ್ನು (ಮಾತ್ರಾಬಂಧದಲ್ಲಿ) ಗುರುವೆಂದೆಣಿಸುವುದು ಯುಕ್ತವಾಗುತ್ತದೆ. ಅದಕ್ಕಾಗಿ +೧ ಎಂದು ತೋರಿಸಲಾಗಿದೆ.

ತೋರಿಸುವುದಕ್ಕಾಗಿ ಮಾಡಿದ್ದು. ಆದರೆ ಪಾದಮಧ್ಯದಲ್ಲಿಯೂ ಹೀಗೆ ಹೆಚ್ಚಿಸಿ-ದ್ದರೂ, ಸರ್ವಜ್ಞ ಎಂಬಲ್ಲಿ ಕೊನೆಯ ಅಕ್ಷರಕ್ಕೆ ಒಂದೇ ಮಾತ್ರೆಯೆಂದು ಲೆಕ್ಕಿಸ-ಲಾಗಿದೆ. ಇದು ಸರಿಯೇ? ಸಾಧಾರಣ ಛಂದಸ್ಸಿನಲ್ಲಿಯೇ ಪಾದಾಂತವಿಶ್ರಾಂತಿ-ಯಿರುವಲ್ಲಿ ಕೊನೆಯ ಅಕ್ಷರ ಗುರುವೆನ್ನಿಸುವಾಗ ಹಾಡಿನಲ್ಲಿ ಅದು ಲಘುವಾಗ-ಬಲ್ಲುದೆ? ಮತ್ತು ಆರನೆಯ ಹತ್ತನೆಯ ಸ್ಥಾನಗಳಲ್ಲಿ ಗಣಾಂತದಲ್ಲಿಯೂ, ಏಳನೆಯ ಹನ್ನೊಂದನೆಯ ಸ್ಥಾನಗಳಲ್ಲಿ ಗಣಮಧ್ಯದಲ್ಲಿಯೂ ಮಾತ್ರಾಸಂಖ್ಯೆ-ಯನ್ನು ಏರಿಸಿದುದು ಹಾಡಿನ ಧಾಟಿಯ ದೃಷ್ಟಿಯಿಂದ ಹೊರತು ಅಕ್ಷರಸ್ವರೂಪ-ದಿಂದಲ್ಲವೆಂಬುದು ಸ್ಪಷ್ಟ. ಹೀಗೆ ಪಾದಮಧ್ಯದಲ್ಲಿ ಮಾತ್ರೆಗಳ ಲೆಕ್ಕವನ್ನೇರಿಸುವ ಪದ್ಧತಿ ಯಾವ ಮಾತ್ರಾಬಂಧದಲ್ಲಾದರೂ ಇದೆಯೆ? ಇದ್ದರೂ, ಹಾಡುವಾಗ ಆರನೆಯ ಹತ್ತನೆಯ ಸ್ಥಾನಗಳೂ ಒಂದೊಂದು ತಾಲಖಂಡವಾಗುವುದರಿಂದ ಸಹಜವಾಗಿ ಅವು ಐದು ಮಾತ್ರೆಗಳ ಕಾಲವನ್ನು ಅಕ್ರಮಿಸುವುದಿಲ್ಲವೆ? ಮತ್ತು ಹನ್ನೊಂದನೆಯ ಸ್ಥಾನದ ಪೂರ್ವಭಾಗಕ್ಕೂ, ಹಾಡಿಕೆಯ ಪೂರ್ವಾವೃತ್ತಿಯಲ್ಲಿ ಏಳನೆಯ ಸ್ಥಾನದ ಪೂರ್ವಭಾಗಕ್ಕೂ ಇದೇ ಅವಸ್ಥೆಯುಂಟಾಯಗುವುದಿಲ್ಲವೆ? ಹಾಗಾದರೆ ತ್ರಿಪದಿಯ ಮೂರು ಪಾದಗಳಿಗೆ ಅನುಕ್ರಮವಾಗಿ ೨೦, ೧೯, ೧೪ ಮಾತ್ರೆಗಳೆಂದು ಸಮಂಜಸವಾದ ಯಾವ ಗಣನೆಯಿಂದ ಸಿದ್ಧವಾದಂತಾಯಿತು?

ಇಲ್ಲಿ ಇನ್ನೊಂದು ವಿಚಾರ. ಮಾತ್ರೆಗಳು ಎರಡು ವಿಧ; ಒಂದು ಛಂದೋಮಾತ್ರೆ (ಅಥವಾ ಅಕ್ಷರಮಾತ್ರೆ), ಇನ್ನೊಂದು ತಾಲಮಾತ್ರೆ. ಛಂದಸ್ಸಿನಲ್ಲಿ ಲಘುಗುರುಗಳಿಗೆ ಅನುಕ್ರಮವಾಗಿ ಒಂದು ಎರಡು ಮಾತ್ರೆಗಳು; ವಿಶ್ರಾಂತಿಯುಳ್ಳ ಪಾದಾಂತದಲ್ಲಿರುವ ಲಘುವಿಗೂ ಎರಡು ಮಾತ್ರೆ. ಸಂಗೀತದ ತಾಲಮಾತ್ರೆ-ಯಾದರೆ ಹೀಗಲ್ಲ. ಒಂದೇ ಅಕ್ಷರಕ್ಕೆ, ತಾಳಕ್ಕೆ ಬೇಕಾದಷ್ಟು ಸಂದರ್ಭೋಚಿತವಾಗಿ ಎಷ್ಟು ಮಾತ್ರೆಗಳೂ ಬರಬಹುದು; ಅಲ್ಲದೆ, ಸಾಹಿತ್ಯಾಂಶವು ಕೊನೆಗೊಂಡ ಮೇಲೂ ತಾಳದ ಆವರ್ತದ ಕೊನೆಯವರೆಗೂ ಮಾತ್ರಾಗಣನೆಯಾಗಬೇಕಾಗು-ವುದು. ಈ ತಾಲಮಾತ್ರೆಗಳನ್ನು ಯಾವುದೊಂದು ಛಂದೋಬಂಧಕ್ಕೆ ಅನ್ವಯಿಸಿ ಹಾಡಿನ ಗತಿಯನ್ನು ವಿಮರ್ಶಿಸಬಾರದೆಂದಿಲ್ಲ. ಆದರೆ ಒಂದು ಪದ್ಯದ ಕೆಲವು ಭಾಗಗಳಿಗೆ ಅಕ್ಷರಮಾತ್ರೆಯನ್ನೂ ಇನ್ನು ಕೆಲವು ಭಾಗಗಳಿಗೆ ತಾಲಮಾತ್ರೆಯನ್ನೂ ಹೊಂದಿಸಿ, ಒಟ್ಟು ಮಾತ್ರೆಗಳನ್ನು ಲೆಕ್ಕಿಸಿದರೆ ಸಹಜವಾದ ಲಕ್ಷಣವು ಕೈಗೂಡದು. ಮೇಲೆ ತೋರಿಸಿದ ತ್ರಿಪದಿಗೆ ಸಾರ್ವತ್ರಿಕವಾಗಿ ತಾಲಮಾತ್ರೆಗಳನ್ನು (ಕೈಪಿಡಿಯ ಧಾಟಿಯಲ್ಲಿ) ಹಾಕಿದರೆ ಅದು ಹೀಗಾಗುವುದು:-

ಶ ಶ ಶ ಶ
ಒಬ್ಬನ । ಲ್ಲದೆ ಜಗಕೆ । ಇಬ್ಬರುಂ । ಟೇ ಮತ್ತೆ । ೨೦

ಶ ಶ ಶ ಶ
ಒಬ್ಬ ಸ । ರ್ವಜ್ಞ. । ಕರ್ತ.. । ನು.... ॥ ೨೦

೫ ೫ ೫ ೫
(ಒಬ್ಬ ಸ । ರ್ವಜ್ಞ.. । ಕರ್ತ.ನು ।) ಜಗಕೆಲ್ಲ । (೧೫+)೫
೫ ೫ ೫ ೫
ಒಬ್ಬನೇ । ದೈವ.. । ಸರ್ವ.. । ಜ್ಞ... ॥ ೨೦

[ಹೀಗೆ ಕೈಪಿಡಿಯಲ್ಲಿ ವಿವರಿಸಿದ ಕ್ರಮದಲ್ಲಿ ತ್ರಿಪದಿಯನ್ನು ಹಾಡುವುದಕ್ಕೆ ಒಟ್ಟಿಗೆ ಎಂಬತ್ತು ಮಾತ್ರೆಗಳ ಕಾಲವು ಬೇಕಾಗುತ್ತದೆಂಬುದು ವಿದ್ವಾಂಸರು ತಮ್ಮೊಳಗೇ ಸಾವಧಾನವಾಗಿ ಹಾಡಿಕೊಂಡು ಪರೀಕ್ಷಿಸಿದರೆ ಮನದಟ್ಟುವುದು.]

ಆದರೆ ಇದನ್ನು ತ್ರಿಪದಿಯ ಛಂದೋಲಕ್ಷಣವೆಂದು ತಿಳಿಯುವುದು ಸಮಂಜಸವೆ? ಸಮಂಜಸವೆಂದು ಸಾಧಿಸಿದರೂ, ಆಗ ತ್ರಿಪದಿ ಬರಿಯ ಒಂದು ತಾಲಬಂಧವೆಂದಾಗುವುದು ಹೊರತು ಮಾತ್ರಾಬಂಧಕ್ಕೊಳಪಟ್ಟಿದೆಯೆಂದಾಗುವುದೆ? ಛಂದೋಮಾತ್ರೆಗಳಿಗೂ ತಾಲಮಾತ್ರೆಗಳಿಗೂ ಸಾಹಿತ್ಯಾಂತದ ವರೆಗೆ ಸರಿಯಾದ ಮೇಳವಿದ್ದಲ್ಲಿ ಮಾತ್ರ ಅದೊಂದು ಮಾತ್ರಾಬಂಧವೆಂದಾಗುವುದು; ಅಥವಾ ಯಾವುದೊಂದು ಬಂಧದ ಎಲ್ಲಾ ಪದ್ಯಗಳಲ್ಲಿ ಸಮಾನಸಂಖ್ಯೆಯ ಛಂದೋ-ಮಾತ್ರೆಗಳು ಇರುವ ಪಕ್ಷದಲ್ಲಿ ಮಾತ್ರ ಅದನ್ನು ಮಾತ್ರಾಬಂಧವೆಂದು ಕರೆಯು-ವುದು (ಉದಾ:- ಭಾಮಿನಿ, ವಾರ್ಧಕ ಇತ್ಯಾದಿ ಷಟ್ಪದಿಗಳು; ಆರ್ಯೆ, ಗೀತಿಕೆ, ಕಂದ ಇತ್ಯಾದಿ ಸ್ಕಂಧಜಾತಿಗಳು.) ಯುಕ್ತವಾಗುವುದು. ತ್ರಿಪದಿಗಳಲ್ಲಿ, ಸರ್ವಜ್ಞನ ತ್ರಿಪದಿಗಳಲ್ಲಿಯೂ, ಹಾಗೆ ಸಮಾನಮಾತ್ರೆಗಳಿಲ್ಲವೆಂಬುದು ಯಾವುದಾದರೂ ನಾಲ್ಕಾರುಪದ್ಯಗಳನ್ನು ತೆಗೆದುಕೊಂಡು ಪರೀಕ್ಷಿಸಿದೊಡನೆ ಗೊತ್ತಾಗುವುದು. ಇದಕ್ಕೆ ಹಿಂದೆ ಕೊಟ್ಟ ಉದಾಹರಣೆಗಳೇ ಸಾಕಾಗಬಹುದು.

ತ್ರಿಪದಿಯ ಲಕ್ಷಣವನ್ನು ಮಾತ್ರಾನಿಯಮದಿಂದ ಹೇಳುವ ಪ್ರಯತ್ನದಲ್ಲಿ ಯಾರಿಗೂ ಸಫಲತೆ ದೊರಕಲಿಲ್ಲವೆಂಬುದು ಈಗ ಸ್ಪಷ್ಟವಾಗದಿರದು. ನಾಗ-ವರ್ಮನು ಹೇಳಿದ ತ್ರಿಪದಿಯ ಲಕ್ಷಣಕ್ಕೆ ಸರ್ವಜ್ಞಾದಿಗಳ ಎಲ್ಲಾ ತ್ರಿಪದಿಗಳು ಸಂಪೂರ್ಣವಾಗಿ ಕೂಡಿ ಬರುವುದಿಲ್ಲ. ಹಾಗಾದರೆ ಸರ್ವಜ್ಞಾದಿಗಳ ತ್ರಿಪದಿಗೆ ನಿಶ್ಚಿತವಾದ ಛಂದೋಲಕ್ಷಣವೇ ಇಲ್ಲವೇ? ಅಥವಾ ಅದು ಬರಿಯ ತಾಲ-ಬಂಧವೆ?

ನಾಗವರ್ಮನು ತ್ರಿಪದಿಯ ಲಕ್ಷಣವನ್ನು, ಕೈಪಿಡಿಯ ಎರಡನೆಯ ಮುದ್ರಣದಲ್ಲಿ ಅಂಶಗಣವೆಂದು ಸುಂದರವಾಗಿ ಹೆಸರಿಸಿದ ತ್ರಿಮೂರ್ತಿಗಣ-ಗಳಿಂದಲೇ ಹೇಳಿದ್ದಾನೆ. ಪುರಾತನ ತ್ರಿಪದಿಗಳು ಆ ಲಕ್ಷಣಕ್ಕೆ ಒಳಪಡುತ್ತವೆಂದು ವಿದ್ವಾಂಸರು ಒಪ್ಪಿದ್ದಾರೆ. (ಉದಾ:- ಕನ್ನಡ ಕೈಪಿಡಿಯ ಎರಡನೆಯ ಮುದ್ರಣ, ಪುಟ ೧೪೭) ಹೀಗಿರುವಾಗ, ಆಧುನಿಕ ತ್ರಿಪದಿ ಬರಿಯ ಒಂದು ತಾಲಬಂಧ-ವೆಂದು ಹೇಳುವ ಮೊದಲು, ಆ ಗಣಗಳು ಇದಕ್ಕೂ ಹೊಂದುತ್ತವೆಯೋ ಇಲ್ಲವೋ ಎಂಬುದನ್ನು ಚೆನ್ನಾಗಿ ಪರೀಕ್ಷಿಸುವುದು ಯುಕ್ತವೂ ಲಾಭಕರವೂ

ಆಗಿದೆ. ನಾಗವರ್ಮನು ತ್ರಿಪದಿಯಲ್ಲಿ ಮೂರು ಭೇದಗಳನ್ನು ಕಾಣಿಸಿದ್ದಾ- ನೆಂಬುದು ನಾವು ಚೆನ್ನಾಗಿ ಗಮನಿಸತಕ್ಕ ವಿಷಯವಾಗಿದೆ. ಇವುಗಳೊಳಗೆ ಮೊದಲನೆಯದನ್ನು ನಾವು ಮೂಲತ್ರಿಪದಿಯೆಂದು ಕರೆಯೋಣ. (ಅದರ ಲಕ್ಷಣ – ೬ – ೧೦ನೆಯ ಸ್ಥಾನಗಳಲ್ಲಿ ಬ್ರಹ್ಮಗಣ; ಬೇರೆಲ್ಲ ವಿಷ್ಣುಗಣ, ಒಟ್ಟು ಹನ್ನೊಂದು ಗಣಗಳು) ಅದು ಹೀಗಿದೆ:–

ಬಿಸರುಹೋ । ದ್ಭವ ಗಣಂ । ರಸದಶ । ಸ್ಥಾನದೊಳ್ ।
ಬಿಸರುಹ । ನೇತ್ರ । ಗಣಮೆ ಬ । ರ್ಕುಳಿದುವು ।
ಬಿಸರುಹ । ನೇತ್ರೇ । ತ್ರಿಪದಿಗೆ ॥

ಈ 'ಸಾಹಿತ್ಯ'ವನ್ನು ತ್ರಿಮೂರ್ತಿಗಣಗಳಲ್ಲಿ ಪ್ರಸ್ತಾರಿಸಿದರೆ ಅದು ಹೀಗಾಗುವುದು:–

ಸ್ಮರಪಿತಂ । ಸ್ಮರಪಿತಂ । ಸ್ಮರಪಿತಂ । ಮಾಧವಂ ।
ಮುರರಿಪು । ಧಾತೃ । ಸ್ಮರಪಿತಂ । ಮುರರಿಪು ।
ಮುರರಿಪು । ಬ್ರಹ್ಮಂ । ಮುರರಿಪು ॥

ತ್ರಿಪದಿ ಜಾತಿಯಲ್ಲಿ ಎರಡನೆಯದಾದ ಚಿತ್ರವು ಹೀಗಿದೆ:–

(ಸಾಹಿತ್ಯ)

ಭುಜಗಪಕ್ಷ । ಗತಿಶಿಖಿ । ವ್ರಜಪದ । ಗಣದೊಳ ।
ಗಜರಸ । ದಶದೊಳ್ । ಪೆರವೆಡೆ । ಯೊಳಗಧೋ ।
ಕ್ಷಜಗಣ । ಮಾದೊ । ಡದು ಚಿತ್ರಂ ॥

(ಪ್ರಸ್ತಾರ)

ಭುಜಗಧಾರಿ । ಸ್ಮರಪಿತಂ । ಮುರರಿಪು । ಮುರರಿಪು ।
ಮುರರಿಪು । ದ್ರುಹಿಣಂ । ಮುರರಿಪು । ಸ್ಮರಪಿತಂ ।
ಮುರರಿಪು । ಧಾತೃ । ಜಲಜಾಕ್ಷಂ ॥

ಮೂರನೆಯದಾದ 'ಚಿತ್ರಲತೆ' ಇಂತಿದೆ:–

(ಸಾಹಿತ್ಯ)

ತುದಿಯೊಳಗೀ । ಶ್ವರಗಣ । ಮೊದವಿರೆ । ಪದಮೆಲ್ಲಂ ।
ಮದಗಜ । ಗಮನೆ । ಪೆರಗಣ । ಚಿತ್ರದಂ ।
ದದೊಳಿರ್ದೊ । ಡದೆ ಚಿ । ತ್ರಲತೆಯಕ್ಕುಂ ॥

(ಪ್ರಸ್ತಾರ)

ಪುರಮಥನಂ । ಮುರರಿಪು । ಮುರರಿಪು । ಜಲಜಾಕ್ಷಂ ।
ಮುರರಿಪು । ಸುರಪ । ಮುರರಿಪು । ಮಾಧವಂ ।
ನರಕಾರಿ । ದ್ರುಹಿಣಂ । ವೃಷಭಲಕ್ಷ್ಮಂ ॥

ನಾಗವರ್ಮನು ತೋರಿಸಿದ ಈ ಮೂರರೊಳಗೆ ಮೊದಲನೆಯದಾದ 'ಮೂಲತ್ರಿಪದಿ'ಯಲ್ಲಿ ರುದ್ರಗಣಗಳಿಲ್ಲ. ಎರಡನೆಯದಾದ 'ಚಿತ್ರ' ತ್ರಿಪದಿಯಲ್ಲಿ ಮೊದಲನೆಯದೊಂದು ರುದ್ರಗಣ; ಬೇರೆಲ್ಲ ಮೂಲತ್ರಿಪದಿಯಂತೆಯೇ. ಮೂರನೆಯ ತ್ರಿಪದಿಯಾದ 'ಚಿತ್ರಲತೆ'ಯಲ್ಲಿ ಮೊದಲನೆಯದ್ದೊಂದು ಮತ್ತು ಕೊನೆಯದೊಂದು ಹೀಗೆ ಎರಡು ಮಾತ್ರ ರುದ್ರಗಣ; ಬೇರೆಲ್ಲ ಮೂಲತ್ರಿಪದಿ-ಯಂತೆಯೇ. ರುದ್ರಗಣದ ಈಯೊಂದು ಅಲ್ಪಭೇದವಲ್ಲದೆ ಮೂಲತ್ರಿಪದಿಗೂ ಉಳಿದೆರಡು ಪ್ರಭೇದಗಳಿಗೂ ಯಾವ ವ್ಯತ್ಯಾಸವೂ ಇಲ್ಲ. ಈ ದೃಷ್ಟಿಯಿಂದ ನೋಡಿದರೆ ತ್ರಿಪದಿಸಾಮಾನ್ಯದ ಛಂದೋಲಕ್ಷಣದ ಜೀವಾಳವು ಯಾವುದೆಂದು ತಿಳಿಯುವುದು. 'ಬಿಸರುಹೋದ್ಭವಗಣಂ ರಸದಶಸ್ಥಾನದೊಳ್' ಎಂದು ಆ ಜೀವಾಳವನ್ನೇ ನಾಗವರ್ಮನು ಮೊದಲಾಗಿ ಎತ್ತಿತೋರಿಸಿದ್ದಾನೆ. ಉಳಿದುವು ಹೆಚ್ಚಾಗಿ ವಿಷ್ಣುಗಣಗಳು; ಅಲ್ಲಲ್ಲಿ ವಿಷ್ಣುಗಣಸ್ಥಾನಗಳಲ್ಲಿ – ೬, ೧೦, ಎಂಬ ಬ್ರಹ್ಮಗಣ ಸ್ಥಾನದಲ್ಲಲ್ಲ – ರುದ್ರಗಣಗಳು ಕಾಣಿಸಿಕೊಳ್ಳುವುದೂ ಉಂಟು. ವಿಶಿಷ್ಟ-ವಾದ ವಿಷ್ಣುಸ್ಥಾನಗಳಲ್ಲಿ ರುದ್ರಗಣವು ಕಾಣಿಸಿಕೊಂಡಾಗ ಚಿತ್ರವೆಂದೋ ಚಿತ್ರಲತೆ-ಯೆಂದೋ ಬೇರೆ ಬೇರೆ ಹೆಸರುಗಳನ್ನು ಕಲ್ಪಿಸಬಹುದಾದರೂ ಅವೆಲ್ಲ ತ್ರಿಪದಿಗಳೇ ಎಂಬುದನ್ನು ಮರೆಯಬಾರದು. ಮಾತ್ರವಲ್ಲ, ನಾಗವರ್ಮನಾದರೂ ರುದ್ರಗಣ-ಜನ್ಯವಾದ ಈ ಎಲ್ಲಾ 'ತ್ರಿಪದಿವೈಚಿತ್ರ್ಯ'ಗಳಿಗೆ ಹೆಸರನ್ನು ಹೇಳಿಲ್ಲ. ಅವನಿಗಿಂತ ಮೊದಲಿನ ಕವಿಗಳು ಬರೆದ ತ್ರಿಪದಿಗಳಲ್ಲಿಯೂ, ಅವನು ಹೇಳದ ಎಡೆಗಳಲ್ಲಿ ರುದ್ರಗಣ ಬಂದುದುಂಟು. ಉದಾಹರಣವಾಗಿ, ಏಳನೆಯ ಶತಮಾನದ ಕೊನೆಯ ಬಾದಾಮಿಯ ಶಾಸನದಲ್ಲಿ (ಇಂಡಿಯನ್ ಎಂಟಿಕ್ವರಿ X ೬೧) ಕಪ್ಪೆ ಅರಭಟ್ಟನೆಂಬವನ ಸ್ತುತಿರೂಪವಾದ ತ್ರಿಪದಿಗಳೊಳಗೆ ಒಂದು ಹೀಗಿದೆ:-

(ಸಾಹಿತ್ಯ)

ಒಳ್ಳಿತ್ತ । ಕೆಯ್ವೊರಾರ್ । ಪೊಲ್ಲದು । ಮದರಂತೆ ।
ಬಲ್ಲಿತ್ತು । ಕಲಿಗೆ । ವಿಪರೀತ ಪು । ರಾಕೃತ ।
ಮಿಲ್ಲಿ ಸಂ । ಧಿಕ್ಕು । ಮದು ಬಂದು ॥

(ಪ್ರಸ್ತಾರ)

ಕಂಸಾರಿ । ಮಾಧವಂ । ಶ್ರೀಪತಿ । ನರಕಾರಿ ।
ಕಂಸಾರಿ । ಸುರಪ । ತ್ರಿಜಗದ್ಗುರು । ಶ್ರೀಪತಿ ।
ಮಾಧವಂ । ಧಾತೃ । ನರಕಾರಿ ॥

ಇಲ್ಲಿ ಏಳನೆಯ ಗಣಸ್ಥಾನದಲ್ಲಿ 'ತ್ರಿಜಗದ್ಗುರು' ಎಂಬ ರುದ್ರಗಣವಿದೆ; ಬೇರೆಲ್ಲಾ ಬಗೆಯಲ್ಲಿ ಮೂಲತ್ರಿಪದಿಯಂತೆಯೇ ಇದೆ. ಪುರಾತನ ತ್ರಿಪದಿಗಳಲ್ಲಿ ವಿಷ್ಣುಸ್ಥಾನದಲ್ಲಿ ಬ್ರಹ್ಮಗಣ ಬಂದುದೂ ಉಂಟು. ಉದಾ – ಪಂಪನ ಆದಿ ಪುರಾಣದ ೬ನೆಯ ಆಶ್ವಾಸದ ೧೦೦ನೆಯ ಪದ್ಯ ಹೀಗಿದೆ:-

ಸುರಯಿಯೊಳ್ । ಗಿಳಿ ಮಗು । ಳ್ವರಗಿಳಿ । ಬಿರಯಿಗೆ ।
ಮೊರೆವಂತೆ । ಮೊರೆವ । ಮರಿದುಂಬಿ । ತಳಿರೊಳ್ ।
ಪರಭೃತಂ । ಮಗುಳ್ವ । ಪರಭೃತಂ ॥

ಇಲ್ಲಿ ಎಂಟನೆಯ ಸ್ಥಾನದಲ್ಲಿ ವಿಷ್ಣುಗಣದ ಬದಲಾಗಿ 'ತಳಿರೊಳ್' (ದ್ರುಹಿಣಂ) ಎಂಬ ಬ್ರಹ್ಮಗಣವಿದೆ. ಮಾತ್ರಾಬಂಧಕ್ಕಿಂತ ತ್ರಿಮೂರ್ತಿಗಣಬಂಧವು ಸಹಜವಾಗಿ ಶಿಥಿಲವಾದುದರಿಂದ ಒಮ್ಮೊಮ್ಮೆ ಹೀಗಾಗುವುದರಲ್ಲಿ ಆಶ್ಚರ್ಯವಿಲ್ಲ. ಏಕೆಂದರೆ ಕವಿಗಳು ಧಾಟಿಯನ್ನೇ ಹಿಡಿದು ಬರೆಯುವರಲ್ಲದೆ, ಗಣಗಳನ್ನು ಲೆಕ್ಕಿಸಿ ಬರೆಯಲಾರರು. ಸಾಂಗತ್ಯದಲ್ಲಿ ವಿಷ್ಣುಸ್ಥಾನದಲ್ಲಿ ಬ್ರಹ್ಮಗಣ ಬರುವುದು ಸಾಧಾರಣವಾಗಿದೆ ಎಂಬುದನ್ನಿಲ್ಲಿ ನೆನಪು ಮಾಡಿಕೊಳ್ಳಬೇಕು.

ನಾಗವರ್ಮನು ತೋರಿಸಿದ ಮೂಲತ್ರಿಪದಿಯ ಮತ್ತು ಅದರ ಪ್ರಭೇದ-ಗಳಾದ ಚಿತ್ರ ಚಿತ್ರಲತೆಗಳ ಸ್ವರೂಪವನ್ನೂ, ಅವನಿಗಿಂತ ಮೊದಲಿನ ಕವಿಗಳ ತ್ರಿಪದಿಗಳ ವಿಶೇಷಗಳನ್ನೂ ಪರಾಮರ್ಶಿಸಿದರೆ ಅಂದಿನ ತ್ರಿಪದಿಸಾಮಾನ್ಯದ ಲಕ್ಷಣವು ಹೀಗಿತ್ತೆನ್ನಬಹುದು:- "ಮೂರು ಪಾದಗಳಲ್ಲಿ ಒಟ್ಟು (೪+೪+೩) ಹನ್ನೊಂದು ಗಣಗಳು. ಇವುಗಳೊಳಗೆ ೬, ೧೧ನೆಯ ಗಣಗಳು ನಿಯತವಾಗಿ ಬ್ರಹ್ಮಗಣಗಳು; ಉಳಿದೆಲ್ಲವು ವಿಷ್ಣುಗಣಗಳು. ಆದರೆ ಕೆಲವು ವೇಳೆ ವಿಷ್ಣುಗಣ-ಸ್ಥಾನಗಳಲ್ಲಿ ರುದ್ರಗಣ ಬರಲೂಬಹುದು. (ಅಪೂರ್ವವಾಗಿ ವಿಷ್ಣುಗಣಸ್ಥಾನದಲ್ಲಿ ಬ್ರಹ್ಮಗಣ ಕಾಣಿಸಿಕೊಳ್ಳುವುದೂ ಉಂಟು.)

ಹೀಗೆ ನೇರ್ಪಟ್ಟ ತ್ರಿಪದಿಯ ಲಕ್ಷಣಕ್ಕೆ ಸರ್ವಜ್ಞನ ತ್ರಿಪದಿಯೂ ಒಡಂಬ-ಡುವುದೆಂದಾದರೆ, ಅದಕ್ಕೆ ಬೇರೊಂದು ಲಕ್ಷಣವನ್ನು ನಿರ್ಮಿಸುವ ಆವಶ್ಯಕತೆ-ಯುಂಟೇ?

ಹಿಂದೆ ಉದಾಹರಿಸಿದ ಸರ್ವಜ್ಞನ ತ್ರಿಪದಿಯನ್ನೇ ತ್ರಿಮೂರ್ತಿಗಣಗಳ ಒರೆಯಲ್ಲಿ ಪರೀಕ್ಷಿಸುವ :-

(ಸಾಹಿತ್ಯ)

ಒಬ್ಬನ । ಲ್ಲದೆ ಜಗಕೆ । ಇಬ್ಬರುಂ । ಟೇ ಮತ್ತೆ ।
ಒಬ್ಬ ಸ । ರ್ವಜ್ಞ । ಕರ್ತನು । ಜಗಕೆಲ್ಲ ।
ಒಬ್ಬನೇ । ದೈವ । ಸರ್ವಜ್ಞ ॥

(ಪ್ರಸ್ತಾರ)

ಮಾಧವಂ । ಮದನರಿಪು । ಮಾಧವಂ । ಕಂಸಾರಿ ।
ಮಾಧವಂ । ಧಾತೃ । ಶ್ರೀಪತಿ । ನರಕಾರಿ ।
ಮಾಧವಂ । ಧಾತೃ । ಕಂಸಾರಿ ॥

ಇಲ್ಲಿ ಎರಡನೆಯದು ಮಾತ್ರ ರುದ್ರಗಣ, ಬೇರೆಲ್ಲಾ ವಿಷಯಗಳಲ್ಲಿ ಇದು ಮೂಲ ತ್ರಿಪದಿಯಂತೆಯೇ ಇದೆ.

ಇನ್ನೊಂದು ಇದು :–

(ಸಾಹಿತ್ಯ)

ಯೋಗಿಗೆ । ಹೊಲೆಯಿಲ್ಲ । ಸಾಗರಕೆ । ನೆಲೆಯಿಲ್ಲ ।
ಯೋಗವ । ಟ್ಟಿಗೆಗೆ । ಮೊಳವಿಲ್ಲ । ಜ್ಞಾನಿಗೆ ।
ಆಗು ಹೋ । ಗಿಲ್ಲ । ಸರ್ವಜ್ಞ ॥

ಇದರಲ್ಲಿ 'ಸಾಗರಕೆ' (ಕಾಮರಿಪು) ಎಂಬುದೊಂದು ಮಾತ್ರ ರುದ್ರಗಣ. ಬೇರೆಲ್ಲಾ ಮೂಲ ತ್ರಿಪದಿಯ ಲಕ್ಷಣಕ್ಕೆ ಸರಿಯಾಗಿದೆ.

ಇದು ಮತ್ತೊಂದು :–

ಒಳಗಣಾ । ಜ್ಯೋತಿಯಾ । ಬೆಳಗನರಿ । ದಾತಂಗೆ ।
ಬೆಳಗಾದು । ದೇಳು । ಬೇಹಾರ । ಕೆಂದೆಂಬ ।
ಕಳವಳ । ವೇಕೆ । ಸರ್ವಜ್ಞ ॥

ಇದರಲ್ಲಿ 'ಬೆಳಗನರಿ' (ಮದನರಿಪು) ಎಂಬುದೊಂದು ರುದ್ರಗಣ; ಬೇರೆಲ್ಲ ಮೂಲತ್ರಿಪದಿಗೆ ಸರಿ.

ಇದು ಮಗುಳೊಂದು :–

ಇಂದು ನಾ । ಳೆಗೆ ಎಂದು । ತಂದು ಕೂ । ಡಿಡಬೇಡ ।
ಬಂದುದ । ನುಂಡು । ಸುಖಿಯಾಗಿ । ಬೇನೆಯು ।
ಬಂದಾಗ । ನರಳು । ಸರ್ವಜ್ಞ ॥

(ಶ್ರೀ ಉತ್ತಂಗಿಯವರ ಪ್ರತಿ – ೩೪೨)

ಇದರಲ್ಲಿ ರುದ್ರಗಣವಿಲ್ಲ; ಶುದ್ಧ ಮೂಲತ್ರಿಪದಿಯಂತಿದೆ.

ಹೀಗೆ ಸರ್ವಜ್ಞನ ಯಾವ ಪದ್ಯವನ್ನು ತೆಗೆದುಕೊಂಡರೂ, ಮೇಲೆ ವಿವರಿಸಿದ ತ್ರಿಪದಿಸಾಮಾನ್ಯದ ಲಕ್ಷಣಕ್ಕೆ ಸರಿಹೋಗುವುದೆಂಬುದು ಪರೀಕ್ಷೆ ಮಾಡಿದಲ್ಲಿ ನಿಸ್ಸಂದಿಗ್ಧವಾಗಿ ತಿಳಿದುಬರುವುದು.

ಆದರೆ ೧೯೩೪ರಲ್ಲಿ ಶ್ರೀ ಉತ್ತಂಗಿಯವರು ಪ್ರಸಿದ್ಧಿಸಿದ ಸರ್ವಜ್ಞ ವಚನಗಳ ಜನಪದಾವೃತ್ತಿಯ ಪ್ರಸ್ತಾವನೆಯಲ್ಲಿ ಶ್ರೀ ಹುಲ್ಕುಂಟೆಮಠ ಶಿವಮೂರ್ತಿ ಶಾಸ್ತ್ರಿಗಳು ಹೀಗೆ ಹೇಳುತ್ತಾರೆ:– "......ತ್ರಿಪದಿಯಲ್ಲಿ ಆರು ಮತ್ತು ಹತ್ತನೆಯ ಗಣ ಬ್ರಹ್ಮಗಣವಾಗಿರಬೇಕೆಂದು ನಾಗವರ್ಮನ ಮತ. ಆದರೆ ಸರ್ವಜ್ಞ, ಷಡಕ್ಷರದೇವ, ಸೋಮರಾಜ ಕವಿಗಳು ಹೇಳುವ ತ್ರಿಪದಿಗಳಲ್ಲಿ ರಸದಶಸ್ಥಾನದಲ್ಲಿ ಪ್ರಾಯೇಣ ನಾಗವರ್ಮನು ಹೇಳಿದ ಲಕ್ಷಣವಿಲ್ಲ. ಕವಿಚಕ್ರವರ್ತಿ ರನ್ನನು ಗದಾಯುದ್ಧದಲ್ಲಿ ಹೇಳಿರುವ 'ತಿವಳಿ'ಯು ಇವೆಲ್ಲಕ್ಕೂ ಭಿನ್ನವಾಗಿದೆ.

ಪದ್ಯರಚನೆಯೊಳ್ ಕಾಳಿದಾಸನುಂ ॥
ಗದ್ಯರಚನೆಯೊಳ್ ಬಾಣನುಂ ಮುಂಕವಿಗಳಿರ್ವರುಂ ॥
ನೆಗಳ್ದರದರಿಂ ಸತ್ಕವಿಗಳಿರ್ವರೆಮಗಭಿವಂದ್ಯರ್ ॥

ಕವಿರತ್ನನ ಈ ತ್ರಿಪದಿಯ ಲಕ್ಷಣವು ಯಾವ ಛಂದೋಗ್ರಂಥದಲ್ಲಿದೆಯೋ ತಿಳಿದುಬಂದಿಲ್ಲ." (ಪುಟ ೧೯).

ಪ್ರಸ್ತಾವನೆಯಲ್ಲಿ ಹೀಗಿದ್ದರೂ ಮುಂದೆ ಅದೇ ಪುಸ್ತಕದಲ್ಲಿ ಮುದ್ರಿತವಾದ ಸರ್ವಜ್ಞನ ಎಲ್ಲಾ ತ್ರಿಪದಿಗಳಲ್ಲೆಂಬಂತೆ, ರಸದಶಸ್ಥಾನಗಳಲ್ಲಿ ಬ್ರಹ್ಮಗಣವಿದೆ-ಯೆಂಬುದು ಪರೀಕ್ಷೆಮಾಡಿದರೆ ತಿಳಿಯುವ ವಿಷಯವಾಗಿದೆ. ಅಲ್ಲದೆ, ೧೯೨೪-ನೆಯ ಇಸವಿಯ ಪುಸ್ತಕದ ಪ್ರಸ್ತಾವನೆಯಲ್ಲಿ ಶ್ರೀ ಉತ್ತಂಗಿಯವರು "....ಮೂರು ಮೂರು, ನಾಲ್ಕು ನಾಲ್ಕು, ಮಾತ್ರೆಗಳು ಮಾತ್ರವೇ ಹೇಳಿದ ಆರನೆಯ ಹತ್ತನೆಯ ಸ್ಥಾನಗಳಲ್ಲಿ ಬರಬಹುದು." (ಪುಟ ೪೯) ಎಂದೂ, 'ಷಡಕ್ಷರಿಯ ರಾಜಶೇಖರ ವಿಲಾಸದಲ್ಲಿಯೂ ಸರ್ವಜ್ಞನ ತ್ರಿಪದಿಯಲ್ಲಿಯೂ ರಸದಶಸ್ಥಾನಗಳಲ್ಲಿ ಮೂರು ಮಾತ್ರೆಗಳು ಬರುವುದೇ ವಿಶೇಷ' (ಪುಟ ೪೯) ಎಂದೂ ಹೇಳಿದ್ದಾರೆ. ಎಂದರೆ ಶ್ರೀ ಉತ್ತಂಗಿಯವರ ಅಭಿಪ್ರಾಯದಂತೆ ಸರ್ವಜ್ಞನ ತ್ರಿಪದಿಯ ರಸದಶಸ್ಥಾನ-ಗಳಲ್ಲಿ ಬ್ರಹ್ಮಗಣವೇ ಇರುತ್ತದೆ; ಶ್ರೀ ಶಿವಮೂರ್ತಿ ಶಾಸ್ತ್ರಿಗಳ ಮತದಂತೆ, ಪ್ರಾಯೇಣ ಇರುವುದಿಲ್ಲ. ಇವುಗಳೊಳಗೆ ಯಾವುದು ಯಥಾರ್ಥವೆಂಬುದನ್ನು ವಿದ್ವಾಂಸರೇ ಪರೀಕ್ಷಿಸಿ ನೋಡಿಕೊಳ್ಳಲಿ. ನಾನು ನಿರೀಕ್ಷಿಸಿದ ಮಟ್ಟಿಗೆ ಪಾಠ ದೋಷಗಳಿರಬಹುದಾದ ಎಲ್ಲಿಯೋ ಒಂದೆರಡು ಕಡೆಗಳಲ್ಲಿ ಹೊರತು ಸರ್ವಜ್ಞನ ತ್ರಿಪದಿಗಳಲ್ಲೆಲ್ಲ ರಸದಶಸ್ಥಾನಗಳಲ್ಲಿ ಶುದ್ಧವಾದ ಬ್ರಹ್ಮಗಣಗಳೇ ಇವೆ. ಷಡಕ್ಷರಿಯ ರಾಜಶೇಖರ ವಿಳಾಸದ ತ್ರಿಪದಿಗಳಂತೂ ನಾಗವರ್ಮನ ಮೂಲತ್ರಿಪದಿಯ ಲಕ್ಷಣಕ್ಕೆ ಸಂಪೂರ್ಣವಾಗಿ ಕೂಡಿಬರುತ್ತವೆ; ಒಂದೇ ಒಂದು ತ್ರಿಪದಿಯಲ್ಲಿ ಮಾತ್ರ ವಿಷ್ಣುಗಣಸ್ಥಾನದಲ್ಲಿ ರುದ್ರಗಣ ಬಂದಂತಿದೆ. ಇದು ಸಹ ಪಾಠದೋಷ-ವಾಗಿರಲೂಬಹುದು.

ಮನದಿಚ್ಛೆ । ಯಿಂ ಮುಂಚಿ । ತನುವಿತ್ತು । ನಲ್ಲರೊಂ ।
ದನುವರಿ । ದೊಂದಿ । ಸವದೋರ್ಪ । ಸೂಳೆಯರ ।
ಮನೆಯ ಮುಂ । ದಿರದೆ । ಸುರಧೇನು ॥

ಇಲ್ಲಿ 'ಸೂಳೆಯರ' (ಕಾಮರಿಪು) ಎಂಬುದೊಂದು ರುದ್ರಗಣ. ಇದು 'ಸೂಳೆಯ' ಇಷ್ಟೇ ಇದ್ದು ವಿಷ್ಣುಗಣವಾಗಿದ್ದಿರಲೂಬಹುದು. ಉಳಿದುವೆಲ್ಲ ಮೂಲ ತ್ರಿಪದಿಗೆ ಸಮನಾಗಿವೆ. ಒಂದೆರಡನ್ನು ಇಲ್ಲಿ ನೋಡಿರಿ:-

ಮದನಂಗೆ । ಜಯಮಕ್ಕೆ । ಮಧುಗೆ ಸಂ । ಪದಮಕ್ಕೆ ।
ಬಿದುಗದಿ । ರಿಂತು । ನೆಲಸಿರ್ಕೆ । ರತಿಗೆ ಸಂ ।
ಮದವೆಂದು । ತೊಲಗ । ದಿರುತಿರ್ಕೆ ॥

ಚದುರಂಗ । ನೆತ್ತಮಿಂ । ಪೊದವಿದ । ಪಾಡು ಸ ।
ಕ್ಕದದೋದು । ಹಾಸ್ಯ । ಮಿನಿಗಬ್ಬ । ಮೊಳ್ಪದಿ ।
ಲ್ಲದ ಸೂಳೆ । ವನೆಯೆ । ಬರಿವನೆ ॥

ಹೀಗೆ ಎಲ್ಲವುಗಳಲ್ಲಿಯೂ ರಸದಶಸ್ಥಾನಗಳಲ್ಲಿ ಬ್ರಹ್ಮಗಣಗಳೇ ಇವೆ.

ಇನ್ನು ಸೋಮರಾಜನ ತ್ರಿಪದಿಗಳನ್ನು ನೋಡೋಣ. ಮೇಲೆ ಉದಾ-ಹರಿಸಿದ 'ಮದನಂಗೆ ಜಯಮಕ್ಕೆ...' ಎಂಬ ಪದ್ಯವೂ, 'ಚದುರಂಗ ನೆತ್ತ....' ಎಂಬ ಪದ್ಯವೂ ಸೋಮರಾಜನ 'ಉದ್ಭಟ ಕಾವ್ಯ'ದಲ್ಲಿಯೂ ಗೋಚರವಾಗುತ್ತವೆ! ಸೋಮರಾಜನು ಪ್ರಾಚೀನವಾದುದರಿಂದ ಷಡಕ್ಷರಿ ಅವನಿಂದ ಎತ್ತಿಕೊಂಡನೋ, ಅಥವಾ ಆಧುನಿಕ ಲಿಪಿಕಾರರು ಉದ್ಭಟಕಾವ್ಯದಲ್ಲಿ ಷಡಕ್ಷರಿಯ ತ್ರಿಪದಿಗಳನ್ನು ಸೇರಿಸಿದರೋ ಹೇಳಲಾಗುವುದಿಲ್ಲ. ಆದರೆ ಇವರಿಬ್ಬರೂ ನೇಮಿಚಂದ್ರನ 'ಲೀಲಾವತಿ'ಯಿಂದ ಆ ತ್ರಿಪದಿಗಳಿಗೆ ಬೇಕಾದ 'ಸ್ಫೂರ್ತಿ'ಯನ್ನೂ ನೆರವನ್ನೂ ಪಡೆದಿರುವರೆಂಬುದು ತುಲನೆ ಮಾಡಿದಲ್ಲಿ ತಿಳಿಯುವುದು. ಅದು ಹೇಗೂ ಇರಲಿ. ಮುದ್ರಿತವಾದ ಉದ್ಭಟಕಾವ್ಯದ ತ್ರಿಪದಿಗಳು ರಾಜಶೇಖರವಿಲಾಸದವು-ಗಳಷ್ಟು ಶುದ್ಧರೂಪದಲ್ಲಿಲ್ಲ. ಆದರೂ ರಸದಶಸ್ಥಾನಗಳಲ್ಲಿ ಬ್ರಹ್ಮಗಣಗಳೇ ಇವೆ. ಮದನಂತೆ ಜಯಮಕ್ಕೆ – ಎಂಬ ಪದ್ಯದಲ್ಲಿ ಎರಡನೆಯ ಪಾದದಲ್ಲಿ 'ಬಿದುಗ-ದಿರಿಂತು ನೆಲಸಿರ್ಕೆ' ಎಂಬುದರ ಬದಲಾಗಿ, 'ಬಿದುವಗದಿರಿಂತು' ಎಂದು ಒಂದು ಅಕ್ಷರ ಹೆಚ್ಚಿಸಲಾಗಿದೆ. ಚದುರಂಗನೆತ್ತ – ಎಂಬ ಪದ್ಯದ ಕೊನೆಯ ಪಾದದಲ್ಲಿ 'ಸೂಳೆವನೆಯೆ ಬರಿವನೆಯು' ಎಂದು ಒಂದು ಅಕ್ಷರ ಹೆಚ್ಚಿದೆ. ಇದು ಮನನೀಯ ವಿಷಯ. 'ಬರಿವನೆಯು' ಎಂಬ ಪಾಠಕ್ಕಿಂತ 'ಬರಿವನೆ' ಎಂಬ ಪಾಠವು ವ್ಯಾಕರಣದೃಷ್ಟಿಯಿಂದ ಪ್ರಾಚೀನವೂ ಶುದ್ಧವೂ ಎಂದು ಹೇಳಬೇಕಾಗಿಲ್ಲ. ಹಾಗೆಯೇ 'ಬಿದುಗದಿರ್' ಎಂಬುದೇ 'ಬಿದುವಗದಿರ್' ಎಂಬುದಕ್ಕಿಂತ ಶುದ್ಧ-ತರವೆಂಬುದೂ ಸ್ಪಷ್ಟ. ಅಷ್ಟು ಮಾತ್ರವಲ್ಲ, ಆಧುನಿಕನಾದ ಷಡಕ್ಷರಿಯ ಭಾಷೆಯಲ್ಲಿ ಹಾಗೆ ಕಾಣಿಸುವುದಕ್ಕಿಂತ, ಪ್ರಾಚೀನನಾದ ಸೋಮರಾಜನ ಭಾಷೆಯಲ್ಲಿ ಹಾಗೆ ಕಾಣಿಸುವುದು ಇನ್ನಷ್ಟು ಆಶ್ಚರ್ಯಕರ. ಆದುದರಿಂದ ಇದು ಲಿಪಿಕಾರರ ದೋಷವೇ ಆಗಿರಬೇಕೆಂದು ತೋರುತ್ತದೆ. ಆದರೂ ಇದು ಪ್ರಮಾದದಿಂದ ಬಂದುದಲ್ಲವೆಂಬುದಕ್ಕೆ ಉದ್ಭಟಕಾವ್ಯದಲ್ಲಿ ಮುದ್ರಿತವಾದ ಬೇರೆ ತ್ರಿಪದಿಗಳೂ ಸಾಕ್ಷಿಯಾಗಿವೆ. ಉದಾ:- ನೆಲೆಮೊಲೆಯದುಳ್ವಿನಂ ನೆಲೆಯಕ್ಕು ಪೋಪರ್ಗೆ – ಎಂದು ಒಂದು ತ್ರಿಪದಿಯ ಪ್ರಥಮ ಪಾದ. ಇದು ನೇಮಿಚಂದ್ರನ ಲೀಲಾವತಿ-ಯಲ್ಲಿ ಹೀಗಿದೆ:-

ನೆಲೆಮೊಲೆಯುಳ್ವಿನಂ ನೆಲೆಯಕ್ಕು ಪೋಪವರ್ಗೆ – ಹೀಗಿರುವುದನ್ನು ಹಾಗೆ ಮಾರ್ಪಡಿಸಿ ಉದ್ಭಟ ಕಾವ್ಯದಲ್ಲಿ ಸೇರಿಸಲು ಕಾರಣವೇನು? ಲಿಪಿ-ಕಾರರೋ, ಸಂಪಾದಕರೋ ಮಾತ್ರೆಗಳ ಲೆಕ್ಕದಿಂದ ತ್ರಿಪದಿಯನ್ನಳೆಯತೊಡಗಿ, ಸರಿಯಿಲ್ಲವೆಂದು ಕಂಡಲ್ಲಿ ಮಾತ್ರೆಗಳ 'ಭರ್ತಿ'ಗಾಗಿ ಅಕ್ಷರಗಳನ್ನು ಕೂಡಿಸಿ-ಕೊಂಡುದೇ ಇದಕ್ಕೆ ಕಾರಣವಾಗಿರಬೇಕೆಂದು ಹೇಳಿದರೆ ತಪ್ಪಾಗಲಾರದು. ನೋಡಿರಿ:-

೪ ೫
ನೆಲೆಮೊಲೆ । ಯುಳ್ವಿನಂ । ನೆಲೆಯಕ್ಕು । ಪೋಪವರ್ಗೆ ।

– ಎಂಬ ಪಾಠದಲ್ಲಿ ಐದ್ಯೆದು ಮಾತ್ರೆಯ ಗಣವಿಭಾಗವಾಗುವುದಿಲ್ಲ. ಮೊದ-ಲನೆಯ ಗಣದಲ್ಲಿ ನಾಲ್ಕೇ ಮಾತ್ರೆಯಾಗುತ್ತದೆ; ಅಥವಾ ಮುಂದಿನ ಅಕ್ಷರವನ್ನು ತೆಗೆದುಕೊಂಡರೆ ಆರು ಮಾತ್ರೆಯಾಗುತ್ತದೆ; ಮತ್ತು ಮುಂದೆ ಅನವಸ್ಥೆ-ಯುಂಟಾಗುತ್ತದೆ. ಅದಕ್ಕಾಗಿ

೫ ೫ ೫ ೫
ನೆಲೆಮೊಲೆಯ । ದುಳ್ವಿನಂ । ನೆಲೆಯಕ್ಕು । ಪೋಪರ್ಗೆ ।

– ಹೀಗೆ ಮಾಡಿದುದಲ್ಲವೆ? ಹಿಂದೆ ಸೂಚಿಸದ ರೂಪಾಂತರಗಳಿ-ಗಾದರೂ ಇದೇ ಕಾರಣವಲ್ಲವೆ?

ಬಿದುಗದಿ । ರಿಂತು । ನೆಲಸಿರ್ಕೆ – ಇತ್ಯಾದಿಯಾಗಿದ್ದರೆ, ಮೊದಲನೆ-ಯದು ಐದು ಮಾತ್ರೆಯ ಗಣವಾಗುವುದಿಲ್ಲ. ಅದಕ್ಕಾಗಿ ಬಿದುವಗದಿ । ರಿಂತು । – ಎಂದು ಮಾಡಿದುದೆಂಬುದರಲ್ಲಿ ಸಂದೇಹವಿದೆಯೇ? ಹಾಗೆಯೇ 'ಬರಿವನೆ' ಎಂದು ನಿಲ್ಲಿಸಿದರೆ ಆ ಪಾದದಲ್ಲಿ ಒಂದು ಮಾತ್ರೆ ಕಡಮೆಯೆಂಬಂತೆ ಮಾತ್ರಾ-ಪಕ್ಷಪಾತಿಗಳಿಗೆ ಕಾಣುವುದು. ಅದಕ್ಕಾಗಿ 'ಬರಿವನೆಯು' ಎಂದು ಮಾಡಿದ್ದಾಗಿದೆ. ಇದು ಕೇವಲ ಊಹೆಯಲ್ಲ. ತ್ರಿಪದಿಯಲ್ಲಿ ಹೇಗೆ ಇಂತಹ ಬದಲಾವಣೆಗಳು, ಮಾತ್ರೆಗಳ ಸಂಖ್ಯೆಗಾಗಿ, ಇಂದೂ ಆಗುತ್ತಲೇ ಇವೆ ಎಂಬುದಕ್ಕೆ ಶ್ರೀ ಉತ್ತಂಗಿ-ಯವರ ೧೯೨೪ನೆಯ ಇಸವಿಯ ಪ್ರತಿಯನ್ನೂ ೧೯೩೫ರ ಜನಪದಾವೃತ್ತಿಯನ್ನು ಹೋಲಿಸಿ ನೋಡಿದರೆ ಗೊತ್ತಾಗುವುದು. ಉದಾಹರಣವಾಗಿ ಮೊದಲನೆಯ ಪುಟದಲ್ಲಿಯೇ–

೫ ೫ ೪ ೫
ಮುನ್ನ ಕೈ । ಲಾಸದಲಿ । ಪನ್ನಗ । ಧರನಾಳು ।
೪
ಎನ್ನಯ । ಪೆಸರು । ಪುಷ್ಪದ । ತ್ತನು ಎಂದು ।
ಮನ್ನಿಪರು । ದಯದಿ । ಸರ್ವಜ್ಞ ॥ (೧೯೨೪ರ ಪ್ರತಿ – ಪದ್ಯ ೨)

ಇದನ್ನೇ ೧೯೩೫ರಲ್ಲಿ ಹೀಗೆ ತಿದ್ದಲಾಗಿದೆ:–

೫ ೫ ೫ ೫
ಮುನ್ನ ಕೈ । ಲಾಸದಲಿ । ಪನ್ನಗನ । ಧರನಾಳು ।
೫
ಎನ್ನಯಾ । ಪೆಸರು । – ಇತ್ಯಾದಿ.

ಇಲ್ಲಿ 'ಪನ್ನಗನ ಧರನಾಳು' ಎಂಬ ಪ್ರಯೋಗವು ಸಾಧುವಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಹಾಗಿದ್ದರೂ ಮಾತ್ರೆಗಳ ಮೋಹವು ರೂಪಾಂತರ-ವನ್ನುಂಟುಮಾಡಿದೆ. 'ಅಪಿಮಾಷಂ ಮಷಂ ಕುರ್ಯಾತ್'! ಇರಲಿ. 'ಎನ್ನಯಾ' ಎಂದು ಮಾಡಿದುದೂ ಇದೇ ಕಾರಣದಿಂದಲೆಂಬುದು ಸ್ಪಷ್ಟ. ಇಂತಹ ಎಷ್ಟು ಉದಾಹರಣಗಳನ್ನೂ ಕೊಡಬಹುದು.

ಇನ್ನು ರನ್ನನ ತ್ರಿಪದಿಯ ವಿಚಾರ. ಅದು ಮೂರು ಸಾಲಾಗಿ ಮುದ್ರಿತ-ವಾದ ಮಾತ್ರದಿಂದ ಅದನ್ನು ತ್ರಿಪದಿಯೆನ್ನಬೇಕೇ? ಅದು ತ್ರುಟಿತ ಭಾಗದಿಂದ ಎತ್ತಿದುದೆಂಬುದನ್ನು ನಾವಿಲ್ಲಿ ಮರೆಯಲಾಗದು. ಮೂರನೆಯ ಪಂಕ್ತಿಯ ಆದಿ-ಯಲ್ಲಿ ಪ್ರಾಸವಿಲ್ಲ. – ಅದರಿಂ ಸತ್ಕವಿಗಳಿರ್ವರೆಮಗಭಿವಂದ್ಯರ್ – ಎಂಬುದು ಕಂದಪದ್ಯದ ದೀರ್ಘಪಾದದಂತಿದೆ. ಆದುದರಿಂದ ಆ ಭಾಗದ ಶುದ್ಧಸ್ವರೂಪ-ವನ್ನು ತೋರಿಸುವ ಒಂದು ಹಸ್ತಪ್ರತಿ ದೊರೆಯದೆ, ಅದೇನೆಂದು ನಿರ್ಣಯ ಮಾಡಲು ಬರುವಂತಿಲ್ಲ. ಅದರ ವಿಚಾರ ಇಲ್ಲಿ ಅನವಶ್ಯ. ಇರಲಿ.

ಈ ಮೇಲಿನ ವಿವೇಚನೆಯಿಂದ ಸರ್ವಜ್ಞನ ತ್ರಿಪದಿಗಳಿಗೂ ತ್ರಿಪದಿಗಳಿಗೆಲ್ಲ ಸಾಮಾನ್ಯವಾದ ತ್ರಿಮೂರ್ತಿಗಣಾವಲಂಬನದಿಂದಲೇ ಸಹಜವಾಗಿ ಲಕ್ಷಣವನ್ನು ಹೇಳಲಾಗುತ್ತದೆ ಎಂಬುದು ಸ್ಪಷ್ಟವಾಗಿರಬಹುದೆಂದು ನಂಬುತ್ತೇನೆ. ಆದರೆ ಹಾಡಿನ ಧಾಟಿ ಕನ್ನಡ ಕೈಪಿಡಿಯ ಎರಡನೆಯ ಮುದ್ರಣದಲ್ಲಿ ತೋರಿಸಿದಂತೆ ಐದು ಮಾತ್ರೆಯ ಗತಿಯಲ್ಲಿರುವಾಗ, ಆ ಮಾತ್ರಾಗತಿಯಿಂದಲೇ ಲಕ್ಷಣ ಹೇಳದೆ, ಹೀಗೆ ಹೇಳುವುದು ಸಮಂಜಸವಾದೀತೆ? ಎಂದು ಕೆಲವರು ಕೇಳಬಹುದು. ಆದರೆ ತ್ರಿಪದಿಗೆ ಕನ್ನಡ ನಾಡಿನ ಎಲ್ಲಾ ಭಾಗಗಳಲ್ಲೂ ಹಾಡುವ ಧಾಟಿ ಒಂದೇ ಇರು-ವುದಲ್ಲವೆಂಬುದನ್ನು ಅರಿಕೆ ಮಾಡಿಕೊಳ್ಳುತ್ತೇನೆ. [ಪುನರಾವೃತ್ತಿಯ ವಿಷಯವೂ ಹಾಗೆಯೇ, ಸಾರ್ವತ್ರಿಕವಲ್ಲ. ಶ್ರೀ ಹುಲ್ಕಂಟೆಮಠ ಶಿವಮೂರ್ತಿ ಶಾಸ್ತ್ರಿಗಳು 'ಜನ-ಪದಾವೃತ್ತಿ'ಯ ಪ್ರಸ್ತಾವನೆಯ ೧೯ನೆಯ ಪುಟದಲ್ಲಿ ಹೇಳುತ್ತಾರೆ:– 'ಕೆಲವರು ತ್ರಿಪದಿಗಳನ್ನು ಹೇಳುವಾಗ ದ್ವಿತೀಯಪಾದದ ಮೂರು ಗಣಗಳ ವರೆಗೆ ಹೇಳಿ, ಮತ್ತೆ ಆ ಎರಡನೆಯ ಸಾಲನ್ನು ಮೊದಲಿನಿಂದ ಪ್ರಾರಂಭಿಸುತ್ತಾರೆ. ಈ ಪದ್ಧತಿಯು ಹಳ್ಳಿಗರು ಹೇಳುವ ತ್ರಿಪದಿ ಛಂದಸ್ಸಿನ ಒನಕೆವಾಡುಗಳಲ್ಲುಂಟೆಂದು ಹೇಳಬಹುದು.' ಕನ್ನಡ ಜಿಲ್ಲೆಯ ಮಟ್ಟುಗಳಲ್ಲಿ ಒಂದರಲ್ಲಿ ಪುನರಾವೃತ್ತಿ ಇದೆ. ಇನ್ನೊಂದರಲ್ಲಿ ಇಲ್ಲ. ಮೂರನೆಯ ಮಟ್ಟಿನಲ್ಲಿ ಏಳನೆಯ ಗಣವನ್ನು ಮಾತ್ರ ಪುನರಾವರ್ತಿಸುತ್ತಾರೆ.] ಈಗಣ ರೂಢಿಯಂತೆ ತ್ರಿಪದಿಯ ಹಾಡುಗಾರಿಕೆಯಲ್ಲಿ – ಧಾರವಾಡದ ಕಡೆಯ ಧಾಟಿಯೊಂದು, ಮೈಸೂರು ಕಡೆಯದಿನ್ನೊಂದು, ಕುಂದಾಪುರದ್ದು ಬೇರೊಂದು, ಹವೀಕರ ತೊಟ್ಟಿಲ ಹಾಡಿನದೊಂದು, ಉದಯ-ರಾಗ, ಕದಿರು ತುಂಬುವ ಹಾಡು ಮೊದಲಾದುವುಗಳ ಧಾಟಿ ಮತ್ತೊಂದು – ಹೀಗೆ ಹಲವು ಗತಿ ಅಥವಾ 'ನಡೆ'ಗಳಿರುತ್ತವೆ. ಇದು ತ್ರಿಮೂರ್ತಿಗಣಘಟಿತ-ವಾದುದರಿಂದ ಹೀಗೆ ಭಿನ್ನ ಭಿನ್ನ ಗತಿಗಳು ಒಂದೇ ಪದ್ಯಕ್ಕೆ ಹೊಂದಿಕೊಳ್ಳ-

ಬಹುದಾಗುತ್ತದೆ. ತ್ರಿಪದಿಯ ಪದ್ಯಗತಿಯನ್ನು ನಿರ್ಮಿಸುವುದು ವಿಷ್ಣುಗಣ. ಆದರೆ ಅದರಲ್ಲಿ ಇರಲೇಬೇಕಾದ (೬-೧೦) ಬ್ರಹ್ಮಗಣಗಳ ಕೊನೆಯನ್ನು ಎಳೆಯಬೇಕು; ಅಲ್ಲಲ್ಲಿ ಕಾಣಿಸಿಕೊಳ್ಳಬಹುದಾದ ರುದ್ರಗಣಗಳನ್ನು ವಿಷ್ಣುಗಣದ ಗತಿಗೆ ಒಗ್ಗಿಸ-ಬೇಕು.[3] ವಿಷ್ಣುಗಣವು ಸಹಜಗತಿಯಲ್ಲಿ ಆರು ತಾಲಮಾತ್ರೆಗಳನ್ನು ಪಡೆದು, ರೂಪಕತಾಳದಲ್ಲಿ ನಡೆಯುತ್ತದೆ. ರತ್ನಾಕರವರ್ಣಿ ಮೊದಲಾದವರ ಬ್ರಹ್ಮಗಣಾಂತ ಸಾಂಗತ್ಯವು ಈ ಗತಿಯ ಶುದ್ಧಸ್ವರೂಪವನ್ನು ತೋರಿಸುತ್ತದೆ. ಉದಾ:-

(ಸಾಹಿತ್ಯ)

ಪರಮ ಪ । ರಂಜ್ಯೋತಿ । ಕೋಟಿ ಚಂ । ದ್ರಾದಿತ್ಯ ।
ಕಿರಣ ಸು । ಜ್ಞಾನ ಪ್ರ । ಕಾಶಾ ॥

(ಪ್ರಸ್ತಾರ)

ಮುರರಿಪು । ಕಂಸಾರಿ । ಮಾಧವಂ । ಕಂಸಾರಿ ।
ಸ್ಮರಪಿತಂ । ಕಂಸಾರಿ । ಬ್ರಹ್ಮಂ ॥

(ಹಾಡು)

ಪರಮಾ ಪಾ । ರಂಜ್ಯೋತೀ । ಕೋಟೀ ಚಂ । ದ್ರಾದಿತ್ಯಾ ।
ಕಿರಣಾ ಸು । ಜ್ಞಾನ ಪ್ರಾ । ಕಾಶಾ ॥ . ॥

ಇದೇ ಗತಿಯನ್ನು ಒಲೆಯಿಸಿ 'ಕೋರೆ'ಯಾಗಿ ಹಾಡಿದರೆ (ಏಳು ತಾಲಮಾತ್ರೆಗಳನ್ನು ಪಡೆದು) 'ಚಾಪು ಅಟ ತಾಳ'ದಲ್ಲಿ ನಡೆಯುತ್ತದೆ. ದೇಪ-ರಾಜಾದಿಗಳ ವಿಷ್ಣುಗಣಾಂತ ಸಾಂಗತ್ಯವನ್ನೂ ಪಿರಿಯಕ್ಕರವನ್ನೂ ಹೀಗೆ ಹಾಡಿದರೆ ಸೊಗಸಾಗುತ್ತದೆ. ಅಧಿಕಮಾತ್ರೆಯ ವಿಷ್ಣುಗಣಗಳನ್ನು ಕುಗ್ಗಿಸಿ, ಅಲ್ಪಮಾತ್ರೆಯವನ್ನು ಹಿಗ್ಗಿಸಿ, ಎಲ್ಲವನ್ನು ಐದು ಮಾತ್ರೆಗಳ ಕಾಲದಲ್ಲಿ ಉಚ್ಚರಿಸಿದರೆ, ವಿಷ್ಣುಗಣ-ಘಟಿತವಾದ ಪದ್ಯವನ್ನು ಝಂಪೆತಾಳದ ಗತಿಯಲ್ಲಿ ಹಾಡಲೂ ಬಹುದು. ಈ ಮೂರು ಗತಿಗಳಲ್ಲದೆ ಬೇರೆ 'ನಡೆ'ಗಳೂ ತ್ರಿಪದಿಗೆ ಒಗ್ಗುವುವು. (ಒಂದೇ ಛಂದೋಬಂಧವು ಒಮ್ಮೆ ಒನಕೆವಾಡಾಗಿಯೂ ಇನ್ನೊಮ್ಮೆ ಬೀಸುವ ಹಾಡಾ-ಗಿಯೂ ಮತ್ತೊಮ್ಮೆ ತೊಟ್ಟಿಲ ಹಾಡಾಗಿಯೂ ಮಾರ್ಪಡುವಾಗ ಹೀಗೆ ಭಿನ್ನಗತಿ ಬರುವುದು ಸಹಜವೂ ಸುಂದರವೂ ಆಗಿದೆ.) ಇಷ್ಟು ಗತಿಗಳು ಇದಕ್ಕೆ ಹೊಂದುವುವಾದರೂ ರೂಪಕಗತಿಯೇ ವಿಷ್ಣುಗಣದ ಮೂಲಗತಿ.[4] ಆದುದರಿಂದ

---

3. ಸರ್ವಜ್ಞನ ತ್ರಿಪದಿಗಳಲ್ಲಿ ತೋರಿಬರುವ ರುದ್ರಗಣಗಳು ಹೆಚ್ಚಾಗಿ ಅಲ್ಪ ಮಾತ್ರೆಗಳವು. ಆದುದರಿಂದ ಹಾಡುವಾಗ ವಿಷ್ಣುಗಣದೊಡನೆ ಹೊಂದಿಕೊಳ್ಳುತ್ತವೆಂಬುದನ್ನು ಅರಿಯಬಹುದು.

4. ಗೋವಿಂದಂ – ಎಂಬ ಪ್ರಥಮ ವಿಷ್ಣುಗಣವೇ ಆ ವರ್ಗದ ಗಣಗತಿಯನ್ನು ನಿರ್ದೇ-ಶಿಸುವುದು. ಹೆಚ್ಚಿನ ವಿವರಗಳನ್ನು ಹಿಂದೆ ಸೂಚಿಸಿದ 'ಕನ್ನಡಛಂದಸ್ಸು' ಎಂಬ ಲೇಖನದಲ್ಲಿ ನೋಡಿಕೊಳ್ಳಬಹುದು.

ತ್ರಿಪದಿಯನ್ನು ಆ ಗತಿಯಲ್ಲಿ ಹಾಡಿದರೆ, ಅಥವಾ ಚಾಪು ಗತಿಯಲ್ಲಿ ಹಾಡಿದರೆ ಮಾತ್ರ, ಅದರಲ್ಲಿರುವ ಗಣಗಳ ಸ್ವರೂಪವು ಅಚ್ಚಳಿಯದೆ ತೋರುವುದು. ತ್ರಿಪದಿಯನ್ನು ಝಂಪೆಯ ಗತಿಯಲ್ಲಿ ಹಾಡಿದರೆ, ಅನಿಶ್ಚಿತ ಸ್ಥಾನಗಳಲ್ಲಿ ಜಗ್ಗಬೇಕಾದ ಮಾತ್ರಾಬಂಧವಿಕಾರವೆಂಬಂತೆ ಭಾಸವಾಗಲು ಎಡೆಯಿದೆ.

ಆರಂಭದಲ್ಲಿ ತ್ರಿಪದಿಗೆ ರೂಪಕಗತಿಯೇ ರೂಢವಾಗಿತ್ತೆಂದು ಹೇಳುವುದಕ್ಕೆ ಪೊನ್ನನ ಶಾಂತಿಪುರಾಣದ (೯-೯೨)

೬ ೬

ಸಹಕಾರಾ । ಸಾರಾನೋ । ಕಹದ...ಇತ್ಯಾದಿಯಾಗಿರುವ ತ್ರಿಪದಿಯೂ ಒಂದು ಸಾಕ್ಷಿಯಾಗಿದೆ. ಇದನ್ನು ಆರು ಮಾತ್ರೆಯ ನಡೆಯಲ್ಲಿ ಹಾಡದಿದ್ದರೆ ಅರ್ಥವು ಕಣ್ಮರೆಯಾಗುವಂತಿದೆ. ಅಷ್ಟೇಕೆ? ಸರ್ವಜ್ಞನ ಅನೇಕ ಪದ್ಯಗಳನ್ನು ಐದು ಮಾತ್ರೆಯ ಗತಿಯಲ್ಲಿ ಹಾಡಲಾಗುವುದಿಲ್ಲ. ಉದಾ:- (ಉತ್ತಂಗಿ - ೨೭೯)

೬ ೪ ೫ ೫

ಸರ್ವಾಂತ । ರ್ಯಾಮಿಯು । ಓರ್ವನೆಂ । ಬುವ ತತ್ತ್ವ ।

– ಇದನ್ನು ಐದು ಮಾತ್ರೆಯ ಗತಿಯಲ್ಲಿ ಹಾಡಿದರೆ ಎಷ್ಟು ಕೃತ್ರಿಮವಾಗುವುದು. ಆರು ಮಾತ್ರೆಯ ಗತಿಯಲ್ಲಿ ಹಾಡಿದರೆ ಎಷ್ಟು ಮನೋಹರವಾಗುವುದು ಎಂಬುದು ಅನುಭವೈಕವೇದ್ಯ.[5]

---

5. ಈ ಮೇಲಿನ ಲೇಖನವನ್ನು ನಾನು ಬರೆದಾಗ ಜಯಕೀರ್ತಿಯ ಗ್ರಂಥವನ್ನು ನಾನು ಕಂಡಿರಲಿಲ್ಲ. ಮತ್ತೆ ಅದನ್ನು ನೋಡಿದಾಗ, ತ್ರಿಪದಿಯ ಲಕ್ಷಣದ ವಿಷಯದಲ್ಲಿ ನಾಗವರ್ಮ ಜಯಕೀರ್ತಿಗಳೊಳಗೆ ಏಕಾಭಿಪ್ರಾಯವಿಲ್ಲವೆಂಬುದು ತಿಳಿದುಬಂತು. ನಾಗವರ್ಮನು ತ್ರಿಪದಿ ಜಾತಿಯಲ್ಲಿ ಮೂರು ಭೇದಗಳನ್ನು ಹೇಳುತ್ತಾನೆ. ಆದರೆ ಜಯಕೀರ್ತಿ ಎರಡೇ ಭೇದಗಳನ್ನು ಹೇಳಿದ್ದಾನೆ. ಈ ಎಲ್ಲ ಭೇದಗಳು ವಿಷ್ಣುಗಣಸ್ಥಾನಗಳಲ್ಲಿ ರುದ್ರಗಣ ಸೇರಿಕೊಳ್ಳುವುದರಿಂದ ಉಂಟಾಗುವಂತಹವು. ತ್ರಿಮೂರ್ತಿಗಣಗಳು ಶಿಥಿಲಸ್ವಭಾವದವುಗಳಾಗಿರುವುದರಿಂದ ಎಷ್ಟೋ ವೇಳೆ ಒಂದು ವರ್ಗದ ಗಣದ ಬದಲಿಗೆ ಇನ್ನೊಂದು ವರ್ಗದ ಗಣವು ಸೇರಿಕೊಳ್ಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಹಾಗೆ ಸೇರಿಕೊಂಡಾಗ ಅವುಗಳಿಗೆ ಬೇರೆ ಬೇರೆ ಹೆಸರಿಟ್ಟು ವರ್ಗೀಕರಿಸುತ್ತಾ ಹೋಗುವುದರಲ್ಲಿ ಔಚಿತ್ಯವೂ ಇಲ್ಲ, ಪ್ರಯೋಜನವೂ ಇಲ್ಲ. ಪಿರಿಯಕ್ಕರದಲ್ಲಿ ಬ್ರಹ್ಮಗಣಸ್ಥಾನಗಳಲ್ಲಿ ವಿಷ್ಣುಗಣ ಬಂದು ಸೇರುವುದುಂಟೆಂಬುದನ್ನು ಮತ್ತು ಸಾಮಾನ್ಯವಾಗಿ ವಿಷ್ಣುಗಣವಿರಬೇಕಾದಲ್ಲಿ ಬ್ರಹ್ಮಗಣವು ಪ್ರಯುಕ್ತವಾಗುವುದೂ ಉಂಟೆಂಬುದನ್ನು ಜಯಕೀರ್ತಿ ನಾಗವರ್ಮರು ಸ್ಪಷ್ಟವಾಗಿ ಹೇಳಿರುತ್ತಾರೆ. ಅದಕ್ಕೆ ಈ ಕಾರಣಗಳನ್ನವಲಂಬಿಸಿ ಅವರು ಪಿರಿಯಕ್ಕರದಲ್ಲಿ ಭೇದಕಲ್ಪನೆಯನ್ನೇಕೆ ಮಾಡಿಲ್ಲ ಎಂಬುದಕ್ಕೆ ಉತ್ತರ ದೊರೆಯುವಂತಿಲ್ಲ! ಹೀಗಿರುವಾಗ ತ್ರಿಪದಿಯ ವಿಷಯದಲ್ಲಿ ಮಾತ್ರ ಭೇದಕಲ್ಪನೆ ಮಾಡುವುದರಲ್ಲಿ ಅರ್ಥವಿಲ್ಲ. ಹೀಗಿದ್ದರೂ ತ್ರಿಪದಿಯ ಏಳನೆಯ ಮತ್ತು ಹನ್ನೊಂದನೆಯ ಗಣಸ್ಥಾನಗಳಲ್ಲಿ ಲಘ್ವಾದಿಯಾದ ವಿಷ್ಣುಗಣವೇ ಇರಬೇಕೆಂಬ ಒಂದು ಲಕ್ಷಣ ವಿಶೇಷವನ್ನು ಜಯಕೀರ್ತಿ ಸೂಚಿಸಿದ್ದಾನೆ. ಹಿಂದಿನ ಕಾಲದ ತ್ರಿಪದಿಗಳೊಳಗೆ ಅಧಿಕ ಸಂಖ್ಯೆಯವು ಹೀಗಿರುವುದು ನಿಜ. ತ್ರಿಪದಿಯಲ್ಲಿ ಆ ಲಕ್ಷಣಗಳಿದ್ದರೆ ಹಾಡುವುದು ಸೊಗಸಾಗುವುದೂ ನಿಜ. ಆದರೆ ಆ ಲಕ್ಷಣವು ಎಲ್ಲಾ

ಅನುಬಂಧ – ೩

# ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ*

ಕನ್ನಡನಾಡಿನಲ್ಲಿ ಈ ಶತಮಾನದಲ್ಲಿ ಆಗಿಹೋದ ಬಹುಮುಖಪ್ರತಿಭಾನ್ವಿತರಾದ ಮಹಾಮೇಧಾವಿಗಳೊಳಗೆ ಅಗ್ರಸ್ಥಾನೀಯರೆಂದು ನಾನು ನಂಬಿರುವ ಕೀರ್ತಿಶೇಷ ಡಿ. ವಿ. ಜಿ.ಯವರು ೧೯೩೨ನೆಯ ಇಸವಿಯಲ್ಲಿ ಮಡಿಕೇರಿಯಲ್ಲಿ ನೆರೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಸಂಮೇಳನದ ಅಧ್ಯಕ್ಷಸ್ಥಾನವನ್ನು ವಹಿಸಿದ್ದಾಗ 'ಕನ್ನಡ ಛಂದಸ್ಸು' ಎಂಬ ನನ್ನೊಂದು ನಿಬಂಧವನ್ನು ಓದಿ ಅವರ ಮೆಚ್ಚುಗೆಯನ್ನು ಪಡೆಯುವ ಭಾಗ್ಯವು ನನಗೊದಗಿತ್ತು. ಆ ಮಹನಿಯರೇ ಸ್ಥಾಪಿಸಿ, ಬೆಳೆಯಿಸಿ, ಘನತೆಗೇರಿಸಿದ ಈ ಸಂಸ್ಥೆಯ ಆಶ್ರಯದಲ್ಲಿ ಛಂದೋವಿಷಯಕವೇ ಆದ ಇನ್ನೊಂದು ನಿಬಂಧವನ್ನು ಓದುವ ಭಾಗಧೇಯವು ನನಗಿಂದು ಒದಗಿದೆ; ಇದೊಂದು ದೈವಯೋಗ.

---

ತ್ರಿಪದಿಗಳಲ್ಲಿ ಇಲ್ಲದಿರುವುದರಿಂದ ಏಳನೆಯ ಹನ್ನೊಂದನೆಯ ಸ್ಥಾನಗಳಲ್ಲಿ ಲಘ್ವಾದಿಯಾದ ಗಣವೇ ಇರಬೇಕೆಂಬ ನಿಯಮವನ್ನು ಮಾಡುವುದಕ್ಕಾಗುವುದಿಲ್ಲ. ಸ್ವಭಾವತಃ ಶಿಥಿಲರೂಪದ ಗಣಗಳಾಗಿರುವ ತ್ರಿಮೂರ್ತಿಗಣಗಳಿಂದ ಘಟಿತವಾಗುವ ಛಂದೋಬಂಧಗಳಿಗೆ ವಿಶಿಷ್ಟಸ್ಥಾನಗಳಲ್ಲಿ ವಿಶಿಷ್ಟವಿನ್ಯಾಸದ ಗಣವೇ ಇರಬೇಕೆಂಬ ನಿಯಮವನ್ನು ಮಾಡಿದರೆ ಆ ನಿಯಮವು ಊರ್ಜಿತವಾಗುವಂತಿಲ್ಲ. ಮತ್ತು ಆ ಲಕ್ಷಣಗಳಿಲ್ಲದ ತ್ರಿಪದಿರೂಪವನ್ನು ಜಯಕೀರ್ತಿ ಹೇಳಿರುವ ಕಾರಣ ಅಂತಹ ಲಕ್ಷಣವಿಹೀನವಾದ ಪದ್ಯವು ತ್ರಿಪದಿಯೇ ಅಲ್ಲವೆಂಬುದು ಅವನ ಅಭಿಪ್ರಾಯವಾಗಿತ್ತೆಂಬ ಶಂಕೆಗೂ ಎಡೆದೊರೆಯುತ್ತದೆ. ಇಂತಹ ಅಭಿಪ್ರಾಯವು ಅಸಂಗತವೆಂದು ಬೇರೆ ಹೇಳಬೇಕಾಗಿಲ್ಲ. ಏಕೆಂದರೆ, ವಿಷ್ಣುಗಣಸ್ಥಾನದಲ್ಲಿ ಭಿನ್ನವರ್ಗದ ಗಣವಾದ ರುದ್ರಗಣವು ಬಂದರೂ ಆ ಪದ್ಯವು ತ್ರಿಪದಿಯಾಗಿಯೇ ಉಳಿಯುತ್ತದೆಂಬುದು ಜಯಕೀರ್ತಿಯ ಮತವೆಂಬುದಕ್ಕೆ ಅವನು ಉದಾಹರಿಸಿರುವ 'ವಿಚಿತ್ರಾ' ತ್ರಿಪದಿಯೇ ಸಾಕ್ಷಿ. ಹೀಗಿರುವಾಗ ಲಘ್ವಾದಿಯಾದ ವಿಷ್ಣುಗಣವಿರಬೇಕಾದ ಸ್ಥಾನದಲ್ಲಿ ಅದೇ ಗಣವರ್ಗದ ಗುರ್ವಾದಿಯಾದ ಗಣ ಬಂದ ಮಾತ್ರದಿಂದ ಅದು ತ್ರಿಪದಿಯೇ ಅಲ್ಲವೆಂದು ಹೇಳುವುದರಲ್ಲಿ ಔಚಿತ್ಯಲೇಶವೂ ಇಲ್ಲ. ಆದುದರಿಂದ ಕೆಲವರು ವಾದಿಸುತ್ತಿರುವಂತೆ, ನಾಗವರ್ಮನು ತ್ರಿಪದಿಜಾತಿಯಲ್ಲಿ ಜಯಕೀರ್ತಿ ಹೇಳಿರುವಂತೆಯೇ ಎರಡೇ ಭೇದಗಳನ್ನು ಹೇಳಿರುವನೋ ಅಥವಾ ಮೂರು ಭೇದಗಳನ್ನು ಹೇಳಿರುವನೋ ಎಂಬುದರ ನಿಷ್ಕರ್ಷೆಯಿಂದ ವ್ಯಾವಹಾರಿಕವಾದ ಪ್ರಯೋಜನವೇನೂ ದೊರೆಯಲಾರದು. ಆದುದರಿಂದ ಪಿರಿಯಕ್ಕರಕ್ಕೆ ಹೇಗೋ ಹಾಗೆ, ತ್ರಿಪದಿಗೂ ಅನಿಯತಗಣಪ್ರವೇಶವಾದ ಸಂದರ್ಭಗಳಲ್ಲಿ ನಾಮಾಂತರನಿರ್ದೇಶವು ಅನವಶ್ಯವೇ ಸರಿ. – ೧೯೮೮.]

* {ಇದು ೧೯೭೭ರಲ್ಲಿ ಸೇಡಿಯಾಪು ಅವರು ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯಲ್ಲಿ ನೀಡಿದ 'ಗೋವಿಂದ ಪೈ ಜ್ಞಾಪಕೋಪನ್ಯಾಸ'. ಆಗಲೇ ಪುಸ್ತಕರೂಪದಲ್ಲಿ ಪ್ರಕಟಗೊಂಡು ಅನಂತರ 'ಕನ್ನಡ ಛಂದಸ್ಸು' ಕೃತಿಯ ಮೂರನೆಯ ಅನುಬಂಧವಾಗಿ ಸೇರಿಸಲ್ಪಟ್ಟಿತು. ಪ್ರಸ್ತುತ ನಿಬಂಧದ 23ನೆಯ ಟಿಪ್ಪಣಿಯಲ್ಲಿ ಗೀತಿಕೆಯನ್ನು ಉಲ್ಲೇಖಿಸಿದೆ. – ಸಂ.}

ಅಂದಿನ ಆ ನಿಬಂಧವು 'ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯ ೧೮ನೆಯ ಸಂಪುಟದ ೧ - ೨ ಸಂಚಿಕೆಗಳಲ್ಲಿ (೧೯೩೩ರ ಎಪ್ರಿಲ್ ಮತ್ತು ಜುಲಾಯಿ) ಪ್ರಕಟವಾಯಿತು. ಅದರ ಕುರಿತು ನಾನಿಲ್ಲಿ ಹೇಳುವ ನಾಲ್ಕು ಮಾತುಗಳು, ಇಂದು ನಾನು ನಿವೇದಿಸಲಿರುವ ವಿಷಯಕ್ಕೆ ಪೀಠಿಕೆಯಾಗುತ್ತವೆ. ಛಂದೋಂಬುಧಿಯಲ್ಲಿ ನಿರೂಪಿಸಲ್ಪಟ್ಟಿರುವ 'ಕರ್ಣಾಟಕ ವಿಷಯಜಾತಿ'ಗಳೊಳಗೆ ಮಾತ್ರಾನಿಯಮಬಾಹಿರವಾದ ಛಂದೋಬಂಧಗಳ 'ಧಾಟಿ'ಯ ಮತ್ತು ಆ ಬಂಧಗಳ ಘಟಕಗಳಾದ ಬ್ರಹ್ಮ ವಿಷ್ಣು ರುದ್ರ ಗಣಗಳ ವಿಶಿಷ್ಟಸ್ವಭಾವದ ಹಾಗೂ ವ್ಯಾಪ್ತಿಯ ಕುರಿತು ಮಾಡಲಾದ ಮೊತ್ತಮೊದಲ ಮೀಮಾಂಸೆ ಅದಾಗಿತ್ತು. ಛಂದಃಶಾಸ್ತ್ರಗ್ರಂಥಗಳಲ್ಲೆಲ್ಲಿಯೂ ಉಕ್ತವಾಗಿರದ - ಆದರೆ ಈಗ ಎಲ್ಲರೂ ಒಪ್ಪಿ-ರುವ - ಸಾಂಗತ್ಯದ ಸಹಜಲಕ್ಷಣವು ಮೊತ್ತಮೊದಲಾಗಿ ಪ್ರತಿಪಾದಿತವಾದದ್ದೂ ಆ ನಿಬಂಧದಲ್ಲಿಯೇ. ಆ ನಿಬಂಧವನ್ನು ನಿರ್ಮಿಸುವುದಕ್ಕೆ ಆಗ ನನಗೆ ಸಹಾಯಕವಾಗಿದ್ದ ಛಂದೋಗ್ರಂಥವೆಂದರೆ ನಾಗವರ್ಮನ 'ಛಂದೋಂಬುಧಿ'-ಯೊಂದೇ ಆಗಿತ್ತು. ಜಯಕೀರ್ತಿಯ 'ಛಂದೋನುಶಾಸನ'ವು ಬಹುಶಃ ಆಗ ಮುದ್ರಿತವೇ ಆಗಿದ್ದಿಲ್ಲ; ನನಗಂತೂ ಆ ಗ್ರಂಥದ ಅಸ್ತಿತ್ವದ ಅರಿವೇ ಆಗ ಇದ್ದಿಲ್ಲ. ಛಂದೋಂಬುಧಿಯ ಪಾಠದೋಷ ಗ್ರಂಥಪಾತಗಳಿಂದಾಗಿ, ಆ 'ಜಾತಿ'ಗಳೊಳಗೆ ಕೆಲವು ಬಂಧಗಳ ಲಕ್ಷಣವು ದುರ್ಬೋಧವಾಗಿದ್ದುದರಿಂದ, ಏಳೆ ಮತ್ತು ಗೀತಿಕೆ ಎಂಬವುಗಳ ವಿಮರ್ಶೆ ಅಂದು ನನಗೆ ಶಕ್ಯವಾಗಿರಲಿಲ್ಲ; 'ಛಂದೋವತಂಸ'ದ ನಿಜರೂಪವನ್ನು ತಿಳಿದುಕೊಳ್ಳುವುದೂ ಅಂದು ಸಾಧ್ಯವಾಗಲಿಲ್ಲ. ಜಯಕೀರ್ತಿಯ ಗ್ರಂಥವು ಲಬ್ಧವಾದ ಮೇಲೆ, ಆ ಎಲ್ಲಾ ಜಾತಿಗಳ ಲಕ್ಷಣಗಳೇನೋ ಎಲ್ಲರಿಗೂ ನಿಸ್ಸಂದಿಗ್ಧವಾಗಿ ತಿಳಿಯುವಂತಾಗಿವೆಯಾದರೂ, ಅವುಗಳೊಳಗೆ ಒಂದೆರಡು ಜಾತಿಗಳ, ಮುಖ್ಯವಾಗಿ 'ಗೀತಿಕೆ' ಎಂಬುದರ ಧಾಟಿ, ಎಂದರೆ ಶ್ರವ್ಯತ್ವ-ವೊದಗುವಂತೆ ಅದನ್ನೋದುವ ವಿಧಾನ ಯಾವುದು ಎಂಬುದನ್ನು ಕಂಡು ಹಿಡಿಯುವ ಪ್ರಯತ್ನವನ್ನು ಯಾರಾದರೂ ಈ ವರೆಗೆ ಮಾಡಿದ್ದಾರೋ ಎಂಬುದು ನನಗೆ ಗೊತ್ತಿಲ್ಲ. ಅಲ್ಲದೆ ಹಳಗನ್ನಡ ಗ್ರಂಥಗಳಲ್ಲಿ ನಮಗೆ ದೊರಕುವ ಗೀತಿಕೆ-ಗಳಲ್ಲಿ ಕೆಲವು ಮಾತ್ರ, ಛಂದೋಗ್ರಂಥಗಳಲ್ಲಿ ಕಾಣುವ ಲಕ್ಷಣಕ್ಕೆ ಸರಿಯಾಗಿವೆ; ಅಧಿಕಸಂಖ್ಯೆಯ ಲಕ್ಷ್ಯಗಳಿಗೆ ಲಕ್ಷಣಸಮನ್ವಯ ಮಾಡುವುದಕ್ಕಾಗುವುದಿಲ್ಲ. ಲಕ್ಷಣವು ಅನ್ವಯಿಸದಿರುವ ಗೀತಿಕೆಗಳ ಸಂಖ್ಯೆಯೇ ಅಧಿಕವಾಗಿರುವಾಗ, ಅವನ್ನೆಲ್ಲ ಅಪಪಾಠವೆಂದು ತಳ್ಳಿಹಾಕುವುದು ಯುಕ್ತವೆಂದೆನಿಸುವಂತೆಯೂ ಇಲ್ಲ. ಈ ವಿಷಯದಲ್ಲಿ ನಾನು ಮಾಡಿದ ಯತ್ಕಿಂಚಿತ್ ಪ್ರಯತ್ನದ ಫಲಿತಾಂಶಗಳನ್ನು ಸಹೃದಯರಾದ ವಿದ್ವಜ್ಜನರ ಮುಂದಿಡುವುದಕ್ಕೆ ಅನುಮತಿಯನ್ನು ಯಾಚಿಸಿ, ವಿಷಯಪ್ರವೇಶ ಮಾಡುತ್ತೇನೆ.

'ಕರ್ಣಾಟಕ ವಿಷಯಜಾತಿ' ಎಂದು ಛಂದೋಂಬುಧಿಯಲ್ಲಿ ಹೆಸರಿಸಲ್ಪ-ಟ್ಟಿರುವ ಛಂದೋಬಂಧಗಳೊಳಗೆ 'ಗೀತಿಕೆ' ಎಂಬುದು ಒಂದೆಂಬುದನ್ನು ಈ

ಮೊದಲೇ ವಿಜ್ಞಾಪಿಸಿದ್ದೇನೆ. ಆ ಗ್ರಂಥದಲ್ಲಿ ಬ್ರಹ್ಮ – ವಿಷ್ಣು – ರುದ್ರ ಎಂದೂ, ಜಯಕೀರ್ತಿಯ ಗ್ರಂಥದಲ್ಲಿ 'ರ–ಲ–ಫ'[1] ಎಂದೂ, ಮತಂಗ ಶಾರ್ಙ್ಗದೇವಾದಿ–ಗಳ ಸಂಗೀತಶಾಸ್ತ್ರಗ್ರಂಥಗಳಲ್ಲಿ ರತಿ – ಕಾಮ – ಬಾಣ ಎಂದೂ ಹೆಸರಿಸಲ್ಪ–ಟ್ಟಿರುವ, ಅಕ್ಷರಗಣ ಎಂದಾಗಲಿ ಮಾತ್ರಾಗಣ ಎಂದಾಗಲಿ ಹೇಳಿದರೆ ಒಪ್ಪಲಾರದ ವಿಶಿಷ್ಟಸ್ವಭಾವದ ಗಣಗಳು ಈ ಗೀತಿಕೆಯ ಘಟಕಗಳೂ ಆಗಿವೆ. ೧೯೩೩ನೆಯ ಇಸವಿಯ ಅನಂತರ, ಅನೇಕ ಪ್ರಖ್ಯಾತ ಕನ್ನಡ ವಿದ್ವಾಂಸರ ಲಕ್ಷ್ಯವು ಈ 'ಜಾತಿ'ಗಳ ಮತ್ತು ಈ ಗಣಗಳ ಕಡೆಗೆ ಆಕರ್ಷಿತವಾದುದರ ಪರಿಣಾಮವಾಗಿ ಇಂದು ಅವುಗಳ ಪರಿಚಯವು ವ್ಯಾಪಕವಾಗಿ ಆಗಿರುತ್ತದೆ. ಮತ್ತೆ ೧೯೩೬ರಲ್ಲಿ ಪ್ರಕಟವಾದ 'ಕನ್ನಡ ಕೈಪಿಡಿ'ಯ ದ್ವಿತೀಯ ಮುದ್ರಣದಲ್ಲಿ ಈ ಗಣಗಳಿಗೆ 'ಅಂಶಗಣ' ಎಂಬ ಹೆಸರು ಮೊತ್ತಮೊದಲಾಗಿ ಕೊಡಲ್ಪಟ್ಟಿತು. ಅಂದಿನಿಂದ ಕನ್ನಡ ನಾಡಿನಲ್ಲೆಲ್ಲ ಈ ಗಣಗಳಿಗೆ ಈ ಗಣಗಳಿಗೆ 'ಅಂಶಗಣ' ಎಂಬ ಹೆಸರು ನೆಲೆಗೊಂಡಿದೆ. ಇಂದು ನಾನು ಮಾಡುವ ಪ್ರತಿಪಾದನೆ ಹೃದ್ಗತವಾಗಬೇಕಾದರೆ, ಆ ಗಣಗಳ ಪರಿಜ್ಞಾನವು ಮೂಲಭೂತವಾದ ಆವಶ್ಯಕತೆ. ಆದರೆ ಅಕ್ಕರಿಗರಲ್ಲಿ ಈಗ ಅವು ಸಾಕಷ್ಟು ಪರಿಚಿತವಾಗಿರುವ ಕಾರಣದಿಂದ, ಅವುಗಳ ಸ್ವರೂಪ ನಿರೂಪಣೆ ಇಲ್ಲಿ ಅನವಶ್ಯವೆಂದು ನಂಬುತ್ತೇನೆ.

ಛಂದೋಂಬುಧಿಯಲ್ಲಿ ಲಕ್ಷ್ಯಲಕ್ಷಣಸಮವಾಯಪದ್ಧತಿಯಿಂದ ಗೀತಿಕೆ ನಿರೂಪಿತವಾಗಿರುವುದಾದರೂ, ಅದರ ಉತ್ತರಾರ್ಧದ ಶುದ್ಧಪಾಠವು ಅಲಭ್ಯ–ವಾಗಿದೆ. ವಿದ್ವತ್ ಸಂಪಾದಿತವಾಗಿ ಮುದ್ರಿತವಾಗಿರುವ ಅದರ ಬೇರೆ ಬೇರೆ ಪ್ರತಿಗಳಲ್ಲಿ, ಆಯಾ ವಿದ್ವಾಂಸರು ಆ ಭಾಗವನ್ನು ಬೇರೆ ಬೇರಾಗಿ ತಿದ್ದಿಕೊಂಡಿ–ದ್ದಾರೆ. ಮತ್ತು ಆ ಪಾಠಗಳಲ್ಲಿ ಯಾವುದನ್ನು ಅವಲಂಬಿಸಿ ನೋಡಿದರೂ ಲಭ್ಯವಾಗುವ ಲಕ್ಷಣವು ಅಪರ್ಯಾಪ್ತವಾಗಿಯೇ ಉಳಿಯುತ್ತದೆ. ಆದುದರಿಂದ ಅದನ್ನು ವಿಮರ್ಶಿಸುವ ಮೊದಲು, ಜಯಕೀರ್ತಿಯ ಗ್ರಂಥದಲ್ಲಿ ನಿಸ್ಸಂದಿಗ್ಧವಾಗಿ ನಮಗೆ ದೊರೆಯುವ ಲಕ್ಷಣವನ್ನು ತಿಳಿದುಕೊಳ್ಳುವುದು ಲಾಭಪ್ರದವಾಗಿದೆ. ಅದು ಹೀಗಿದೆ:–

> ರಗಣೋ ದ್ವಿತೀಯೇ ಷಷ್ಠೇ ಚ
> ಲಗಣೋ ಫಗಣೋವಾನ್ಯತ್ರ ಪಂಚಸ್ವರ್ಧಯೋಶ್ಚ
> ತ್ರಿಗಣೋಯುಕ್ ಸಮಪಾದೋಬ್ಧಿಗಣೋ
> ನಿಗದಿತಾ ಗೀತಿಕಾಲಂಕಾರೇ ಪ್ರಭುಸೇನೀಯೈಃ

---

1. ಮುದ್ರಿತವಾದ 'ಛಂದೋನುಶಾಸನ'ದಲ್ಲಿ ರ–ಲ–ಧ ಎಂದಿದೆ. ಇದು ಸರಿಯಲ್ಲ; 'ಕಟಪಯಾದಿ' ಸಂಖ್ಯಾನ ಪದ್ಧತಿಯ ಸಂಜ್ಞೆಗಳಿವು; ಆಯಾ ವರ್ಗದ ಪ್ರಥಮ ಗಣದ ಅಕ್ಷರಸಂಖ್ಯೆಯನ್ನು ಇವು ಇಲ್ಲಿ ಸೂಚಿಸುತ್ತವೆ:– ರ = ೨, ಲ = ೩, ಫ = ೪ ಇವು ಅನುಕ್ರಮವಾಗಿ ಬ್ರಹ್ಮ ವಿಷ್ಣು ರುದ್ರಗಳು, (ಧ = ೯).

ಇದರ ತಾತ್ಪರ್ಯ ಹೀಗೆ: "ಪ್ರಥಮ ಮತ್ತು ತೃತೀಯ ಪಾದಗಳಲ್ಲಿ ಮೂರು ಮೂರು ಗಣಗಳು; ದ್ವಿತೀಯ ಮತ್ತು ಚತುರ್ಥ ಪಾದಗಳಲ್ಲಿ ನಾಲ್ಕು ನಾಲ್ಕು ಗಣಗಳು; ಪದ್ಯಾರ್ಧದ ಏಳು ಗಣಗಳೊಳಗೆ ಎರಡನೆಯದು ಮತ್ತು ಆರನೆಯದು ರಗಣ (=ಬ್ರಹ್ಮ); ಉಳಿದ ಐದು ಗಣಗಳು ಐಚ್ಛಿಕವಾಗಿ ಲಗಣ (=ವಿಷ್ಣು) ಅಥವಾ ಫಗಣ (=ರುದ್ರ). ಹೀಗೆ ಗೀತಿಕೆ ಪ್ರಭುಸೇನೀಯರಿಂದ 'ಅಲಂಕಾರ'ದಲ್ಲಿ ನಿಗದಿತವಾಗಿದೆ." – ಇಲ್ಲಿ ಬಂದಿರುವ 'ಅಲಂಕಾರ' ಎಂಬ ಪದಕ್ಕೆ 'ಅಲಂಕಾರಗ್ರಂಥ' ಎಂದು ಅರ್ಥಮಾಡದಿದ್ದರೆ ಹೊಂದಿಕೆಯಾಗು-ವಂತಿಲ್ಲ. 'ಗೀತಿಕಾಲಂಕಾರ' ಎಂಬುದೊಂದು ಸಮಸ್ತಪದವೆಂದೂ ಅದು ಆ ಗ್ರಂಥದ ಹೆಸರೆಂದೂ ಒಂದು ಅಭಿಪ್ರಾಯ ಪ್ರಕಟವಾಗಿದೆ. ಆದರೆ ಇದು ಗ್ರಾಹ್ಯ-ವಲ್ಲವೆನ್ನಬೇಕಾಗುತ್ತದೆ. ಹಾಗೆ ತಿಳಿದುಕೊಂಡ ಪಕ್ಷದಲ್ಲಿ, 'ನಿಗದಿತಾ' ಎಂಬುದರ ಸ್ತ್ರೀಲಿಂಗಕ್ಕೆ ಔಚಿತ್ಯವಿಲ್ಲದಾಗುತ್ತದೆ. ಆದುದರಿಂದ 'ಗೀತಿಕಾ, ಅಲಂಕಾರೇ' ಎಂಬಿವು ವ್ಯಸ್ತಪದಗಳೆಂದೇ ತಿಳಿಯಬೇಕು. ನನಗೆ ತೋರುವಂತೆ ಹೇಳುವು-ದಾದರೆ, 'ಪ್ರಭುಸೇನೀಯೈಃ' ಎಂಬ ಪಾಠವು ಲಿಪಿಕಾರರ ಕೈತಪ್ಪಾಗಿರಬೇಕು. ಆ ಗ್ರಂಥಕಾರನ ಹೆಸರು 'ಪ್ರಭುಸೇನೀಯ' ಎಂದಿರದೆ, ಜಿನಸೇನ ಅಜಿತಸೇನ ಇತ್ಯಾದಿಗಳಂತೆ 'ಪ್ರಭುಸೇನ' ಎಂದೇ ಇದ್ದಿರುವುದು ಸಂಭಾವ್ಯ. ಈ ಊಹೆ ಸರಿಯಾದರೆ, ಆ ಪಾಠವು 'ಪ್ರಭುಸೇನೀಯೇ' ಎಂದಿರಬೇಕಾಗುತ್ತದೆ. ಆಗ ಅದು 'ಅಲಂಕಾರೇ' ಎಂಬ ಪದಕ್ಕೆ ವಿಶೇಷಣವಾಗಿ, 'ಪ್ರಭುಸೇನೀಯೇ ಅಲಂಕಾರೇ' ಎಂದರೆ 'ಪ್ರಭುಸೇನನ ಅಲಂಕಾರದಲ್ಲಿ' ಅರ್ಥಾತ್ 'ಪ್ರಭುಸೇನನ ಅಲಂಕಾರ-ಗ್ರಂಥದಲ್ಲಿ' ಎಂಬರ್ಥವನ್ನು ಸ್ಫುಟತರವಾಗಿ ತಿಳಿಸುವಂತಾಗುತ್ತದೆ. ಆದರೆ ಈ ಪಾಠ ಹೇಗಿದ್ದರೂ, ಅಲ್ಲಿ ನಿರೂಪಿತವಾದ ಗೀತಿಕೆಯ ಛಂದೋಲಕ್ಷಣಕ್ಕೆ ಬಾಧೆ ಏನೂ ಇಲ್ಲ; ಇದು ಹಾಗಿರಲಿ.

ಜಯಕೀರ್ತಿಯ ಮತದಂತೆ ಪೂರ್ವಾರ್ಧದಲ್ಲಿ ಎರಡು, ಉತ್ತರಾರ್ಧ-ದಲ್ಲಿ ಎರಡು – ಹೀಗೆ ಒಂದು ಗೀತಿಕೆಯಲ್ಲಿ ನಾಲ್ಕೇ ಬ್ರಹ್ಮಗಣಗಳಿರುತ್ತವೆ. ಉಳಿದ ಹತ್ತು ಗಣಗಳು ವಿಷ್ಣು ಅಥವಾ ರುದ್ರಗಣಗಳಾಗಿರುತ್ತದೆ. ಛಂದೋಂ-ಬುಧಿಯಲ್ಲಿ ನಿರೂಪಿತವಾಗಿರುವ ಲಕ್ಷಣವು ಅಪರ್ಯಾಪ್ತವಾಗಿರುವುದಾದರೂ, ಆ ಪದ್ಯದ ಪೂರ್ವಾರ್ಧವು ಅನೇಕ ಹಸ್ತಪ್ರತಿಗಳಲ್ಲಿ ಏಕರೂಪವಾಗಿರುವಂತೆ ತಿಳಿದುಬರುವುದರಿಂದ ಆ ಭಾಗವನ್ನು ಶುದ್ಧಪಾಠವೆಂದು ಸ್ವೀಕರಿಸಬಹುದಾಗಿದೆ. ಅದು ಹೀಗಿದೆ:–

> ಎರಡಱೊಳಾಱೆಂಬ ಸಂಖ್ಯೆಯೊಳ್
> ಬರೆ ಪದ್ಮಭವನುೞಿದುವು ಮೆಚ್ಚುವ ತೆಱದಿಂ । ದಿರೆ......

ಎಂದರೆ, –"ಎರಡು ಮತ್ತು ಆರು ಎಂಬ ಸಂಖ್ಯಾಸ್ಥಾನಗಳಲ್ಲಿ ಬ್ರಹ್ಮಗಣ, 'ಉಳಿದುವು' ಇಷ್ಟಪ್ರಕಾರ" ಎಂದು ಇದರ ತಾತ್ಪರ್ಯ. ಇಲ್ಲಿ ಬಂದಿರುವ

'ಉೞಿದುವು' ಎಂಬುದರ ಅರ್ಥ ದ್ವಿಮುಖವಾಗಿದೆ. ಜಯಕೀರ್ತಿಯು ಗ್ರಂಥಾ-ನುಸಾರವಾಗಿ ಇದನ್ನು ನೋಡಿದರೆ 'ಉೞಿದುವು' ಎಂದರೆ ಉಳಿದ ಗಣಗಳು – ವಿಷ್ಣು ಮತ್ತು ರುದ್ರ – ಎಂಬರ್ಥ ಹುಟ್ಟುತ್ತದೆ. ಆದರೆ ಕನ್ನಡದ ಹಳೆಯ ಸಾಹಿತ್ಯದಲ್ಲಿ ನಮಗೆ ದೊರಕುವ ಲಕ್ಷ್ಯಗಳನ್ನು ಪರೀಕ್ಷಿಸಿದರೆ, 'ಉೞಿದುವು' ಎಂದರೆ ಎರಡು, ಆರು ಎಂಬವುಗಳನ್ನು ಬಿಟ್ಟು 'ಉಳಿದ ಸಂಖ್ಯಾಸ್ಥಾನಗಳು' ಎಂಬುದೇ ಛಂದೋಂಬುಧಿಕಾರನ ವಿವಕ್ಷೆ ಎಂದು ಭಾವಿಸಬೇಕಾಗುತ್ತದೆ. ಉದಾಹರಣಾರ್ಥವಾಗಿ 'ಕಾವ್ಯಾವಲೋಕನ'ದ ಒಂದು ಗೀತಿಕೆಯನ್ನು ಪರಾಮ-ರ್ಶಿಸೋಣ: (ಮೈಸೂರು ಓರಿಯೆಂಟಲ್ ಲೈಬ್ರೆರಿಯ ಪ್ರತಿ, ಪದ್ಯ – ೪೯೫)

ಈ ಪೇೞ್ದ ಮಾೞ್ಕೆಯಿಂ ದೋಷಾ- ।
ಲೇಪಂ ಪೊರ್ದದಂತಿರೆ ಸಂನಿಬಂಧ- ॥
ವ್ಯಾಪೃತನಕ್ಕೆ ಗುಣವದರ್ಥಂ ।
ವ್ಯಾಪಕಮಾಗೆ ಕವಿತ್ವತತ್ತ್ವದೊಳ್ ॥ . ॥

ಇದರ ಗಣವಾಚಕಗಳು ಹೀಗಿವೆ:-

ಕಂಸಾರಿ । ಧಾತೃ । ಗೋವಿಂದಂ ।
ಕಂದರ್ಪಾರಿ । ಶ್ರೀಪತಿ । ಧಾತೃ । ಬ್ರಹ್ಮಂ ॥
ಶ್ರೀಪತಿ । ಧಾತೃ । ವೃಷಭಲಕ್ಷ್ಮಂ ।
ಶ್ರೀಪತಿ । ಶ್ರೀಪತಿ । ಧಾತೃ । ಮಾಧವಂ ॥ . ॥

ಇಲ್ಲಿ ಪೂರ್ವಾರ್ಧದ ಏಳನೆಯ ಗಣವೂ ಬ್ರಹ್ಮ. ಜಯಕೀರ್ತಿಯ ಲಕ್ಷಣದಂತೆ ಇಲ್ಲಿ ವಿಷ್ಣುವೋ ರುದ್ರವೋ ಇರಬೇಕಾಗತ್ತದೆ. ಇನ್ನು ಕವಿರಾಜ-ಮಾರ್ಗದ ಒಂದು ಗೀತಿಕೆಯನ್ನು ಪರೀಕ್ಷಿಸೋಣ: (ದ್ವಿತೀಯ ಪರಿಚ್ಛೇದ – ಪದ್ಯ ೪೯, ಎಂ. ವಿ. ಸೀ. ಪ್ರತಿ.)

ಅಱಿದು ಪೀನಂ ಮಾರ್ಗ ಗತಿಯಂ ।
ತೞಿಸಲಾಗದಾರ್ಗಂ ಬಹು ವಿಕಲ್ಪದೊಳ್ ॥
ಕುಱಿತು ಪೂರ್ವಶಾಸ್ತ್ರ ಪದವಿಧಿಯಂ ।
ತೆಱಿದಿರೆ ಪೇೞ್ವೆನಿನಿಸಂ ಕನ್ನಡದೊಳ್ ॥ . ॥

ಗಣವಾಚಕ ರೂಪದಲ್ಲಿ ಇದು ಹೀಗಿದೆ:-

ವೃಷಭಲಕ್ಷ್ಮಂ । ಧಾತೃ । ದ್ರುಹಿಣಂ ।
ಭುಜಗಧಾರಿ । ಬ್ರಹ್ಮಂ । ಸುರಪ । ಮಾಧವಂ ॥
ಭುಜಗಧಾರಿ । ಧಾತೃ । ಪುರಮಥನಂ ।
ಮುರರಿಪು । ಧಾತೃ । ದ್ರುಹಿಣಂ । ಶೂಲಧರಂ ॥ . ॥

ಇಲ್ಲಿ ಪೂರ್ವಾರ್ಧದ ಮೂರನೆಯ ಸ್ಥಾನದಲ್ಲಿಯೂ, ಪೂರ್ವಾರ್ಧದ ಹಾಗೂ ಉತ್ತರಾರ್ಧದ ಐದನೆಯ ಸ್ಥಾನಗಳಲ್ಲಿಯೂ ಬ್ರಹ್ಮಗಣಗಳು ಬಂದಿವೆ. ಜಯಕೀರ್ತಿಗೆ ಇದು ಸಮ್ಮತವಲ್ಲ. ಛಂದೋಂಬುಧಿಯ ಲಕ್ಷಣೋಕ್ತಿಯಲ್ಲಿರುವ 'ಉೞಿದುವು' ಎಂಬ ಪದಕ್ಕೆ 'ಉಳಿದ ಸ್ಥಾನಗಳು' ಎಂದು ಅರ್ಥಮಾಡಿದರೆ, ನಾನು ಉದಾಹರಿಸಿದ ಈ ಎರಡು ಗೀತಿಕೆಗಳೂ ಲಕ್ಷಣಸಂಮತವೆಂದಾಗುತ್ತವೆ. ಆದರೆ ನಮಗೆ ದೊರೆಯುವ ಲಕ್ಷ್ಯಗಳಲ್ಲಿ ಜಯಕೀರ್ತಿಗೆ ಸಂಮತವಲ್ಲದವು ಮಾತ್ರವಲ್ಲ, ಛಂದೋಂಬುಧಿಕಾರನಿಗೆ ಸಂಮತವೆಂದು ತೋರುವ ಲಕ್ಷಣಕ್ಕೂ ಒಡಂಬಡದ ಗೀತಿಕೆಗಳು ಹಲವು ಕಂಡು ಬರುತ್ತವೆ. ಉದಾ: (ಕವಿರಾಜಮಾರ್ಗ ೧-೧೩೭)

ಕುಱಿತು ಸಮುಚ್ಚಯದಾ ಬೞಿವಿಕಲ್ಪದಾ ।
ತೆಱದೊಳೆ ದೋಷಮುಮನಂತೆ ಗುಣಮುಮಂ ॥
ಕೆಱದೞೊಳಱಿಯೆ ಪೇೞ್ದನಿಂತೆ ಪೆಱವುಮನೀ ।
ಕುಱಿಪನೆ ಕುಱ ಮಾಡಿ ಪೇೞ್ಗೆ ಕಬ್ಬಮಂ ॥ . ॥

ಈ ಪದ್ಯದ ಪ್ರಥಮ ತೃತೀಯ ಪಾದಗಳು ಲಕ್ಷಣಕ್ಕೆ ಸಂಪೂರ್ಣ ಬಾಹಿರವಾಗಿವೆ. ಇವುಗಳನ್ನು ಮೂರು ಗಣಗಳಾಗಿ ವಿಭಾಗಿಸುವಾಗ, ಪ್ರಥಮ ಪಾದವು ರುದ್ರ ವಿಷ್ಣು ರುದ್ರ ಎಂದಾಗುತ್ತದೆ; ತೃತೀಯಪಾದದಲ್ಲಿ ಮೂರು ರುದ್ರಗಣಗಳಾದ ಮೇಲೂ ಒಂದಕ್ಷರ ಉಳಿಯುತ್ತದೆ. ಆದುದರಿಂದ ಈ ಗೀತಿಕೆ ಉಕ್ತವಾದ ಯಾವ ಲಕ್ಷಣಕ್ಕೂ ಒಡಂಬಡುವಂತಿಲ್ಲ. ಇನ್ನೊಂದನ್ನು ನೋಡಿರಿ:- (ಕವಿರಾಜಮಾರ್ಗ - ೨-೧೪೫)

ಸವಿಹಿತಮಪ್ಪ ಕರ್ಣಪೂರೋತ್ಪಳಮಂ ।
ಧವಳ ವಿಲೋಚನೆಯ ಗುಣ ಸುಂದರಮಂ ॥
ಕಿವಿವರಂ ನೀೞ್ದ ನಯನಯುಗದೊಳೊ- ।
ಪ್ಪುವವಳಾನವಯವದೇಕೆ ಕಳೆಯವೇೞ್ದಂ ಪ್ರಿಯೆಯಂ ॥ . ॥

ಈ ಗೀತಿಕೆಯ ಪ್ರಥಮಪಾದವನ್ನು ಮೂರು ಗಣಗಳಾಗಿ ವಿಭಾಗಿಸ-ಲಾಗುವುದಿಲ್ಲ; ಒಂದಕ್ಷರ ಉಳಿಯುತ್ತದೆ. ನಾಲ್ಕನೆಯ ಪಾದದಲ್ಲಿ ಬ್ರಹ್ಮಗಣವು ನಿಯಮಿತ ಸ್ಥಾನದಲ್ಲಿಲ್ಲ. ಹೀಗೆ ಈ ಗೀತಿಕೆಯೂ ಹಿಂದಿನದರಂತೆಯೇ ಲಕ್ಷಣಕ್ಕೆ ಬಾಹಿರ. ಆದರೆ ಉದಾಹೃತವಾದ ಈ ಎರಡು ಗೀತಿಕೆಗಳ ಮತ್ತು ಹೆಚ್ಚು ಕಡಮೆ ಇವುಗಳನ್ನು ಹೋಲುವ (ಕವಿರಾಜಮಾರ್ಗದಲ್ಲಿರುವ) ಗೀತಿಕೆಗಳ ಪ್ರತಿ-ಯೊಂದು ಪಾದದಲ್ಲಿಯೂ ನಾಲ್ಕು ಗಣಗಳಿವೆ ಎಂದು ಭಾವಿಸಿದರೆ, ಗಣ ವಿಭಾಗವು ಸುಗಮವಾಗಿ ಕೈಗೂಡುತ್ತದೆ. ಈಗ ಅವುಗಳನ್ನೇ ಹೀಗೆ ವಿಭಾಗಿಸಿ ನೋಡೋಣ:-

ವಿ. ರು. ಬ್ರ. ವಿ.
ಕುಱುತುಸ । ಮುಚ್ಚಯದಾ । ಬಱುವಿ । ಕಲ್ಪದಾ ।
ವಿ. ರು. ಬ್ರ. ವಿ.
ತೆಱದೊಳೆ । ದೋಷಮುಮ । ನಂತೆ । ಗುಣಮುಮಂ ॥
ವಿ. ರು. ಬ್ರ. ರು.
ಕಿಱದಱೊ । ಳಱಯೆ ಪೇೞ್ದ । ನಿಂತೆ । ಪೆಱವುಮನೀ ।
ವಿ. ವಿ. ಬ್ರ. ವಿ.
ಕುಱುಪನೆ । ಕುಱುಮಾಡಿ । ಪೇೞ್ಗೆ । ಕಬ್ಬಮಂ ॥ . ॥

* * * * *

ವಿ. ರು. ಬ್ರ. ಬ್ರ.
ಸವಿಹಿತ । ಮಪ್ಪಕರ್ಣ । ಪೂರೋ । ತ್ಪಳಮಂ ।
ವಿ. ರು. ಬ್ರ. ಬ್ರ.
ಧವಳವಿ । ಲೋಚನೆಯ । ಗುಣಸುಂ । ದರಮಂ ॥
ವಿ. ಬ್ರ. ಬ್ರ. ವಿ.
ಕಿವಿವರಂ । ನೀಳ್ದ । ನಯನ । ಯುಗದೊಳೊ – ।
ರು. ರು. ರು. ಬ್ರ.
ಪ್ಪುವವಳಾನ । ವಯವದೇಕೆ । ಕಳೆಯವೇೞ್ದಂ । ಪ್ರಿಯೆಯಂ ॥ . ॥

ಈಗ ನಮ್ಮ ಮುಂದೆ ಕಠಿನವಾದೊಂದು ಪ್ರಶ್ನೆ ಬಂದು ನಿಲ್ಲುತ್ತದೆ.

ಗೀತಿಕೆಯ ಈ ಬೇರೆ ಬೇರೆ ರೂಪಗಳನ್ನೊಳಕೊಳ್ಳಬಹುದಾದ ಲಕ್ಷಣ-ವನ್ನು ಹೇಳದೆ, ಛಂದೋಂಬುಧಿಕಾರನೂ ಜಯಕೀರ್ತಿಯೂ ಅನುಕ್ರಮವಾಗಿ ಸಂಕುಚಿತ ಹಾಗೂ ಸಂಕುಚಿತತರವಾದ ವ್ಯಾಪ್ತಿಯುಳ್ಳ ಲಕ್ಷಣವನ್ನು ತಮ್ಮ ಗ್ರಂಥಗಳಲ್ಲಿ ನಿರೂಪಿಸಿ ಏಕೆ ತೃಪ್ತರಾದರು? ತ್ರಿಪದಿಯ ಸಾಮಾನ್ಯಲಕ್ಷಣವನ್ನು ಮೊದಲು ತಿಳಿಸಿ, ಮತ್ತೆ ಅವುಗಳ ಪ್ರಭೇದಗಳನ್ನು ಚಿತ್ರಾ ವಿಚಿತ್ರಾ ಇತ್ಯಾದಿಯಾಗಿ ಹೆಸರಿಸಿ ಲಕ್ಷಣನಿರೂಪಣೆ ಮಾಡಿದಂತೆ ಇಲ್ಲೇಕೆ ಅವರು ಮಾಡಲಿಲ್ಲ? – ಇದಕ್ಕೆ ಉತ್ತರವಿದೆಯೋ ನೋಡೋಣ.

ಕರ್ಣಾಟಕ ವಿಷಯಜಾತಿಗಳ ನಿರೂಪಣಾವಸರದಲ್ಲಿ, ಆ ಕೆಲವು ಬಂಧ-ಗಳ ಆಕರಗಳನ್ನು ಜಯಕೀರ್ತಿ ಉಲ್ಲೇಖಿಸಿದ್ದಾನೆ. ದೊರೆಯಕ್ಕರಕ್ಕೆ 'ಅಸಗನ ಕರ್ಣಾಟ ಕುಮಾರಸಂಭವ', ನಡುವಣಕ್ಕರಕ್ಕೆ 'ಕರ್ಣಾಟ ಮಾಲತೀಮಾಧವ', ಎಡೆಯಕ್ಕರಕ್ಕೆ 'ಕರ್ಣಾಟೇಶ್ವರಕಥೆ', ಕಿರಿಯಕ್ಕರಕ್ಕೆ 'ಶೃಂಗಾರಪಿಂಡ', ಛಂದೋ-ವತಂಸಕ್ಕೂ 'ಕುಮಾರಸಂಭವ', ಚೌಪದಿಕೆಗೆ 'ಚೂಡಾಮಣಿ' ಎಂಬ ಲಕ್ಷ್ಯ-

ಗ್ರಂಥಗಳನ್ನು ಆಕರಗಳಾಗಿ ನಿರ್ದೇಶಿಸಿ, – ಗೀತಿಕೆಯ ವಿಷಯದಲ್ಲಿ ಮಾತ್ರ ಒಂದು ಲಕ್ಷಣಗ್ರಂಥದ ಕಡೆಗೆ ಕೈತೋರಿಸಿದ್ದಾನೆ. ಪಿರಿಯಕ್ಕರ ತ್ರಿಪದಿ ಏಳೆ ಷಟ್ಪದಿಕೆಗಳಿಗೂ, ಮಾತ್ರಾನಿಯಮಯುಕ್ತವೂ ಆಗಿರುವ ಅಕ್ಕರಿಕೆ ಮದನವತಿ-ಗಳಿಗೂ ಆಕರನಿರ್ದೇಶ ಮಾಡಿಲ್ಲ. 'ಉತ್ಸಾಹ'ವನ್ನು ತ್ರಿಮೂರ್ತಿಗಣಬಂಧವೆಂದು ಜಯಕೀರ್ತಿ ಭಾವಿಸಿಲ್ಲ. ಆದರೆ ಅದಕ್ಕೆ 'ಉತ್ಸವ' ಎಂಬ ಇನ್ನೊಂದು ಹೆಸರೂ ಇದೆ ಎಂಬುದನ್ನು ರುಜುಪಡಿಸುವುದಕ್ಕಾಗಿ 'ಗೋಗ್ರಹ' ಎಂಬ ಲಕ್ಷ್ಯಗ್ರಂಥವನ್ನು ಉದಾಹರಿಸಿದ್ದಾನೆ. ಪ್ರಕ್ರಮದಲ್ಲಿ ಕಂಡುಬರುವ ಈ ವ್ಯತ್ಯಾಸಕ್ಕೆ ಕಾರಣವೇನು?

ಜಯಕೀರ್ತಿ ಮಾಡಿರುವ ಕರ್ಣಾಟ ವಿಷಯಜಾತಿಗಳ ಲಕ್ಷಣವಿವೇಚನೆ-ಯನ್ನು ಸೂಕ್ಷ್ಮವಾಗಿ ಪರಾಮರ್ಶಿಸಿದರೆ ಅವನ ಮನೋಧರ್ಮವು ನಮಗೆ ಸ್ಪಷ್ಟವಾಗಿ ತಿಳಿಯುವಂತಿದೆ. ಯಾವುದೊಂದು ಬಂಧದ ಲಕ್ಷಣವನ್ನು ಹೇಳು-ವಾಗಲೂ ಅದನ್ನು ಸುವಿವರವಾಗಿಯೂ ಪೂರ್ಣವಾಗಿಯೂ ಅವನು ಹೇಳುತ್ತಾನೆ. ಅಷ್ಟು ಮಾತ್ರವಲ್ಲ, ಅನವಶ್ಯವಾದ ಮಾತನ್ನು ಹೇಳುವುದೂ ಇಲ್ಲ. ಅವನ ಈ ಧೋರಣೆಯೇ ಈ ಪ್ರಕ್ರಮಭಂಗಕ್ಕೆ ಕಾರಣವಾಗಿದೆ. ಹೇಗೆಂದರೆ – ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಬಂಧಗಳಿಗೆ ಆಕರಗಳನ್ನು ತೋರಿಸುವ ಆವಶ್ಯಕತೆ ಅವನಿಗೆ ಕಂಡುಬಾರದಿರುವುದು ಸಹಜವೇ ಆಗಿದೆ. ಅವನ ಕಾಲದಲ್ಲಿ ಕನ್ನಡದಲ್ಲಿ ಮೆರೆಯುತ್ತಿದ್ದ ಕಾವ್ಯಗಳೆಂದರೆ ಚಂಪೂಪ್ರಬಂಧಗಳು. ಪಿರಿಯಕ್ಕರಕ್ಕೆ ಅವುಗಳಲ್ಲಿ ಆಶ್ರಯವಿತ್ತು. ತ್ರಿಪದಿಯಂತೂ ಅಂದಿನಿಂದ ಇಂದಿನವರೆಗೆ ಸರ್ವರಿಗೂ ಪರಿಚಿತವಾದ ಬಂಧ. ಜಯಕೀರ್ತಿಯ ಕಾಲಕ್ಕಿಂತ ಒಂದೆರಡು ಶತಮಾನಗಳ ಅನಂತರವೂ ಏಳೆಷಟ್ಪದಿಕೆಗಳನ್ನು ಹಾಡುವ ಸಂಪ್ರದಾಯ ಉಳಿದಿತ್ತೆಂಬುದನ್ನು ಶಾರ್ಙ್ಗದೇವನ 'ಸಂಗೀತರತ್ನಾಕರ'ದಲ್ಲಿ ಕಾಣಬಹುದು. ಹೀಗೆ ಪಿರಿಯಕ್ಕರ, ತ್ರಿಪದಿ, ಏಳೆ, ಷಟ್ಪದಿಕೆಗಳು ಜಯಕೀರ್ತಿಯ ಕಾಲದಲ್ಲಿ ಎಲ್ಲರಿಗೂ ಪರಿಚಿತವಾದ ಬಂಧಗಳಾಗಿದ್ದುದರಿಂದ ಅವುಗಳಿಗೆ ಆಕರನಿರ್ದೇಶ ಮಾಡುವುದು ಅನವಶ್ಯ-ವಾಗಿತ್ತು. ಅವನು ಆಕರನಿರ್ದೇಶ ಮಾಡಿರುವ ಬಂಧಗಳಲ್ಲಿ – ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ, ಛಂದೋವತಂಸ, ಚೌಪದಿಕೆ – ಎಂಬವುಗಳೊಳಗೆ ಯಾವುದೊಂದು ಬಂಧವೂ ಛಂದೋಗ್ರಂಥಗಳ ಹೊರಗೆ – ಚಂದ್ರರಾಜನ ಚಮತ್ಕಾರದಲ್ಲಿ ಹೊರತು – ಬೇರೆ ಎಲ್ಲಿಯೂ ನಮಗಿಂದು ದೊರೆಯುವುದಿಲ್ಲ. ಅವುಗಳ ಬಳಕೆಯನ್ನು ನಮ್ಮ ಕವಿಗಳು ಬಿಟ್ಟುಕೊಟ್ಟು ಸಹಸ್ರಮಾನ ಕಳೆದು ಹೋಗಿದೆ. ಜಯಕೀರ್ತಿಯ ಕಾಲಕ್ಕೇ ಅವು ಹಳೆಯ ಬಂಧಗಳಾಗಿ ಹೋಗಿದ್ದುವು. ಆದುದರಿಂದಲೇ ಅವನು ಅವುಗಳ ಅಸ್ತಿತ್ವವನ್ನು ತೋರಿಸುವುದಕ್ಕಾಗಿ, ಹಳೆಯ ಗ್ರಂಥಗಳಲ್ಲಿ ಹುಡುಕಿ ಹುಡುಕಿ ಆಕರನಿರ್ದೇಶ ಮಾಡಿದ್ದಾನೆ. ಆ ಆಕರಗಳಾದರೂ ನಮಗಿಂದು ದೊರಕಿಲ್ಲ. ಅವುಗಳೊಳಗೆ ಒಂದು 'ಅಸಗ'ನೆಂಬ ಕವಿಯ ಕೃತಿ ಎಂದು ಅವನು ಹೇಳಿದ್ದಾನೆ. ಪಂಪನಿಗಿಂತ ಹಿಂದಿನ ಕನ್ನಡ ಕವಿಗಳೊಳಗೆ ಅಸಗನು ಅತ್ಯಂತ ಪ್ರಖ್ಯಾತ ಕವಿಯೆಂಬುದು

ಪೊನ್ನನ ಶಾಂತಿಪುರಾಣದಿಂದ ತಿಳಿದುಬರುತ್ತದೆ. 'ಚೂಡಾಮಣಿ' ಎಂಬುದಂತೂ ಅತಿಪುರಾತನ ಕೃತಿ. ಇದು ಏಳನೆಯ ಶತಮಾನದ ಗ್ರಂಥವೆಂದು 'ಕವಿಚರಿತೆ' ಹೇಳುತ್ತದೆ. ಜಯಕೀರ್ತಿ ತಿಳಿಸುವ ಇತರ ಆಕರಗ್ರಂಥಗಳೂ ಪುರಾತನಕೃತಿಗಳೇ ಆಗಿರಬೇಕೆಂದು ತೋರುತ್ತದೆ. ಏಕೆಂದರೆ ಪಂಪನಿಂದ ಮೊದಲುಗೊಂಡ ಅನಂ-ತರ ಕಾಲದವರಾರೂ ಆ ಬಂಧಗಳನ್ನು ತಮ್ಮ ಕಾವ್ಯಗಳಲ್ಲಿ ಪ್ರಯೋಗಿಸಿದ್ದು ಕಂಡುಬಂದಿಲ್ಲ. 'ಉತ್ಸಾಹ' ಎಂಬುದು ಛಂದೋವತಂಸಾದಿಗಳಂತೆ ಜಯ ಕೀರ್ತಿಯ ಕಾಲದಲ್ಲಿ ಸಂಪೂರ್ಣ ಲುಪ್ತವಾಗಿರಲಿಲ್ಲ; (ಪಂಪಭಾರತ. ೧೨-೧೩) ಆದರೂ ಅಲ್ಲಿ ಆಕರನಿರ್ದೇಶವಿದೆ. ಇದಕ್ಕೆ ಕಾರಣ ಬೇರೆ; 'ಉತ್ಸವ' ಎಂಬ ಇನ್ನೊಂದು ಹೆಸರೂ ಅದಕ್ಕೆ ರೂಢವಾಗಿದೆ ಎಂಬುದನ್ನು ಸಪ್ರಮಾಣವಾಗಿ ತಿಳಿಸುವುದು ಮಾತ್ರ ಆ ನಿರ್ದೇಶದ ಆಶಯವೆಂಬುದು ಅಲ್ಲಿ ಬಂದಿರುವ 'ಉತ್ಸಾಹಮಾಹುರುತ್ಸವಂ ಚ ಗೋಗ್ರಹಾದಿಕೇ ಬುಧಾಃ' ಎಂಬ ಮಾತಿನಿಂದ ಸುವ್ಯಕ್ತವಾಗುತ್ತದೆ.

ಹಾಗಾದರೆ, ಛಂದೋಗ್ರಂಥಗಳಲ್ಲಿ ಹೊರತು ನಮಗೀಗ ಬೇರೆಲ್ಲಿಯೂ ಕಾಣದಿರುವ ಅಕ್ಕರಿಕೆಗೂ ಮದನವತಿಗೂ ಜಯಕೀರ್ತಿ ಆಕರನಿರ್ದೇಶ ಮಾಡಿ-ಲ್ಲವೇಕೆ? ಆ ಬಂಧಗಳು ಅವನ ಕಾಲದಲ್ಲಿ ಪ್ರಚಲಿತವಾಗಿದ್ದವೆಂದು ಹೇಳುವುದಕ್ಕೆ ಪ್ರಮಾಣವಿಲ್ಲ. ಪ್ರಚಲಿತವಾಗಿರದ ಇತರ ಹಳೆಯ ಬಂಧಗಳಿಗೆಲ್ಲ ಆಕರ ನಿರ್ದೇಶ ಮಾಡಿದ ಜಯಕೀರ್ತಿ ಇವುಗಳನ್ನೇಕೆ ಕೈಬಿಟ್ಟನು ಎಂಬ ಪ್ರಶ್ನೆ ಇಲ್ಲಿ ತಲೆದೋರುವುದು ಸಹಜ. ನನಗೆ ತೋರುವುದೇನೆಂದರೆ – ಅವುಗಳ ಆಕರವು ಅವನಿಗೂ ದೊರೆಯಲಿಲ್ಲ; ಆದುದರಿಂದ ನಿರ್ದೇಶಿಸುವುದು ಅಶಕ್ಯವಾಯಿತು; ಕೇವಲ ಪೂರ್ವಶಾಸ್ತ್ರಾನುರೋಧದಿಂದ ಅವುಗಳನ್ನು ಅವನು ತನ್ನ ಗ್ರಂಥದಲ್ಲಿ ಸೇರಿಸಿದ್ದಾನೆಂದು ತಿಳಿಯಬೇಕು.

ಛಂದೋವತಂಸಾದಿಗಳ ಲಕ್ಷಣವನ್ನು ಜಯಕೀರ್ತಿ ಸ್ವೋಕ್ತಿಯಿಂದಲೇ ನಿರೂಪಿಸಿ, ಮತ್ತೆ ಆಕರನಿರ್ದೇಶ ಮಾಡುವಾಗ – 'ಸಂದೃಷ್ಟಾಸೌ ಕುಮಾರ-ಸಂಭವಾದೌ' – 'ಇದು ಕುಮಾರಸಂಭವಾದಿಗಳಲ್ಲಿ ಕಂಡು ಬರುತ್ತದೆ' ಇತ್ಯಾದಿಯಾಗಿ ಹೇಳಿದಂತೆ ಗೀತಿಕೆಯ ಪ್ರಕರಣದಲ್ಲಿ ಹೇಳದೆ. – "ಪ್ರಭುಸೇನನ ಅಲಂಕಾರಗ್ರಂಥದಲ್ಲಿ ಗೀತಿಕೆ 'ಈ ಈ ಪ್ರಕಾರ' ನಿಗದಿತವಾಗಿದೆ" ಎಂದಿದ್ದಾನೆ. 'ನಿಗದಿತ' ಎಂದರೆ ಕೇವಲ 'ಹೇಳಲ್ಪಟ್ಟಿದೆ' ಎಂದರ್ಥವಲ್ಲ, ನಿರ್ಧಾರಾತ್ಮಕವಾಗಿ ಹೇಳಲ್ಪಟ್ಟಿದೆ ಎಂದರ್ಥ. ಆ ಪದ್ಯದ ಅನ್ವಯ ಹೀಗೆ – 'ರಗಣೋ.....ಅಬ್ಧಿಗಣಃ (ಏವಂ) ಗೀತಿಕಾ ಪ್ರಭುಸೇನೀಯೇ ಅಲಂಕಾರೇ ನಿಗದಿತಾ' – (ಇಲ್ಲಿ 'ಏವಂ' ಎಂಬ ಅಧ್ಯಾಹಾರವಿಲ್ಲದೆ ಅನ್ವಯವಾಗಲಾರದು.) ಇದರಿಂದ 'ಪ್ರಭುಸೇನನ ಗ್ರಂಥದಲ್ಲಿ ಗೀತಿಕೆಯ ಲಕ್ಷಣವು ಹೀಗೆ ಪ್ರೋಕ್ತವಾಗಿದೆ' ಎಂಬುದೇ ಇಲ್ಲಿ ಜಯಕೀರ್ತಿಯ ವಿವಕ್ಷೆಯೆಂಬುದು ಸ್ಪಷ್ಟ.

ಪ್ರಭುಸೇನನದು ಅಲಂಕಾರಗ್ರಂಥ; ಛಂದೋಗ್ರಂಥವಲ್ಲ. ಅಲಂಕಾರ ಗ್ರಂಥದಲ್ಲಿ ಛಂದೋಲಕ್ಷಣವಿರುವುದು ವಿಚಿತ್ರವಲ್ಲವೆ? – ಎಂದರೆ, ಅಲ್ಲಿ ಅದು ಏಕೆ ಬಂತೆಂಬುದು ಆ ಗ್ರಂಥ ನಮಗೆ ಉಪಲಬ್ಧವಾದಾಗ ಮಾತ್ರ ಖಚಿತವಾಗಿ ತಿಳಿದೀತಷ್ಟೆ. ಈಗ ಮಾಡಬಹುದಾದದ್ದು ಬರಿಯ ಊಹೆ ಮಾತ್ರ. ನಮ್ಮ ಕೆಲವು ಲಕ್ಷಣಗ್ರಂಥಗಳಲ್ಲಿ ಭಾಷೆಗೆ ಸಂಬಂಧಿಸಿದ ಅನೇಕ ವಿಷಯಗಳು ಸೇರಿಕೊಂಡಿ–ರುವುದು ಕಂಡುಬರುತ್ತದೆ. ಕಾವ್ಯಾವಲೋಕನದಲ್ಲಿ ವ್ಯಾಕರಣವೂ ಒಂದು ಭಾಗ. ತಮಿಳಿನ 'ತೊಲ್‌ಕಾಪ್ಪಿಯ'ದಲ್ಲಿ ವ್ಯಾಕರಣ, ಅಲಂಕಾರ, ಛಂದಸ್ಸು ಎಲ್ಲಾ ಇದೆ. ಹೀಗೆಯೇ ಪ್ರಭುಸೇನನೂ ತನ್ನ ಲಕ್ಷಣಗ್ರಂಥದಲ್ಲಿ ಅಲಂಕಾರದೊಡನೆ ಛಂದಸ್ಸನ್ನೂ ಸೇರಿಸಿದ್ದನೋ ಏನೋ! ಅಲಂಕಾರದಂತೆ ಛಂದಸ್ಸು ಕೂಡ 'ಕಾವ್ಯಶೋಭಾಕರ'ವಾದೊಂದು 'ಧರ್ಮ'ವಷ್ಟೆ?

ಕನ್ನಡ ಗೀತಿಕೆ ಇದ್ದೇ ಇರಬೇಕಾಗಿದ್ದ ಚತ್ತಾಣ ಮೊದಲಾದ ಕಾವ್ಯ ಭೇದಗಳೂ ಕವಿರಾಜಮಾರ್ಗವೂ ಜಯಕೀರ್ತಿಗಿಂತ ಪೂರ್ವಕಾಲದವು. ಅವು–ಗಳಾವುವನ್ನೂ ಗೀತಿಕೆಗೆ ಆಕರವಾಗಿ ಹೇಳದೆ ಅದರ ಲಕ್ಷಣವನ್ನಾದರೂ ಸ್ವೋಕ್ತಿಯಾಗಿ ನಿರೂಪಿಸದೆ, ಪರೋಕ್ತ ಲಕ್ಷಣವನ್ನು ಹೇಳಿ ಅವನು ಆ ಪ್ರಕರಣವನ್ನು ಮುಗಿಸಿ ಬಿಟ್ಟಿದ್ದಾನೆ. ಇದಕ್ಕೇನು ಕಾರಣ ಎಂಬುದು ವಿಚಾರಾರ್ಹ.

ಲಕ್ಷ್ಯಗಳನ್ನು ಚೆನ್ನಾಗಿ ಪರೀಕ್ಷಿಸಿ ವ್ಯಾಪ್ತಿದೋಷ ಬಾರದಂತೆ ಲಕ್ಷಣ ಹೇಳಲು ಜಯಕೀರ್ತಿ ಬಹಳ ಪ್ರಯತ್ನ ಪಟ್ಟಿರುವನೆಂದು, ಪಿರಿಯಕ್ಕರ ತ್ರಿಪದಿ ಉತ್ಸಾಹಾದಿಗಳ ಅವನ ವಿವೇಚನೆಯಿಂದ ವಿಶದವಾಗುತ್ತದೆ. ಆದರೆ ತನ್ನ ನಿರ್ಧಾರವೂ ಆಗಿ ಪರಿಣಮಿಸದ, ಅಥವಾ ಮತಭೇದವಿದ್ದಿರಬಹುದಾದ ಯಾವುದೊಂದು ಪೂರ್ವಶಾಸ್ತ್ರೋಕ್ತ ಲಕ್ಷಣವನ್ನು ನಿರೂಪಿಸುವ ಸಂದರ್ಭದಲ್ಲಿ, ಅದು ಪೂರ್ವಿಕರ ಮತವೆಂಬುದನ್ನು ಪ್ರಾಮಾಣಿಕ ಬುದ್ಧಿಯಿಂದ ಅವನು ತಿಳಿಸಿ–ದ್ದಾನೆ. (ಉದಾ:– ತ್ರಿಪದಿಯ ಪ್ರಕರಣದಲ್ಲಿ, 'ವಿಚಿತ್ರಾಸ್ಯಾತ್ ಪೂರ್ವಂ ಕರ್ಣಾಟ–ಚ್ಛಂದೋಮತೇ') ಅವನು ನಿದರ್ಶಿಸಿದ ಗೀತಿಕೆಯ ಲಕ್ಷಣವನ್ನು ನಾವು ಈ ದೃಷ್ಟಿಯಿಂದ ಪರೀಕ್ಷಿಸಿದರೆ, ಅವನ ಮನೋಗತವನ್ನು ಕಂಡುಕೊಳ್ಳಬಹುದಾಗಿದೆ.

ನಾನು ಈ ಮೊದಲೇ ಸೋದಾಹರಣವಾಗಿ ವಿವರಿಸಿದಂತೆ, ಗೀತಿಕೆಗೆ ಏಕರೂಪತೆ ಇಲ್ಲವಾಗಿದೆ. ಕೆಲವು ಗೀತಿಕೆಗಳಲ್ಲಿ ಒಟ್ಟು ಹದಿನಾಲ್ಕು ಗಣಗಳಿದ್ದರೆ ಮತ್ತೆ ಕೆಲವರಲ್ಲಿ ಹದಿನಾರು ಗಣಗಳು ಕಂಡುಬರುತ್ತವೆ. ಪದ್ಯಾರ್ಧದ ಎರಡನೆಯ ಮತ್ತು ಆರನೆಯ ಗಣಸ್ಥಾನಗಳಲ್ಲಿ ಬ್ರಹ್ಮಗಣವಿರಬೇಕೆಂಬ ನಿಯಮವೂ ಸಾರ್ವ–ತ್ರಿಕವಾಗಿ ಮನ್ನಿಸಲ್ಪಟ್ಟಿಲ್ಲ. ಎರಡು, ಆರು ಎಂಬವು ಹೊರತಾಗಿ ಉಳಿದೆಲ್ಲವು ವಿಷ್ಣು ಅಥವಾ ರುದ್ರಗಣಗಳಾಗಿರಬೇಕೆಂಬುದಂತೂ ಕೆಲವೇ ಗೀತಿಕೆಗಳಲ್ಲಿ ಪಾಲಿಸಲ್ಪಟ್ಟಿರುವುದು ಕಂಡು ಬರುತ್ತದೆ. ಇದು ಜಯಕೀರ್ತಿಯ ಪರೀಕ್ಷಾಬುದ್ಧಿಗೆ ಖಂಡಿತವಾಗಿಯೂ ಕಂಡಿರಲೇಬೇಕು. ಆದರೆ ಪುರಾತನ ಲಾಕ್ಷಣಿಕರು – ಪ್ರಭುಸೇನಾದಿಗಳು – ಗೀತಿಕೆಗೆ ಒಂದೇ ಒಂದು ರೂಪದ ಲಕ್ಷಣವನ್ನು

ಹೇಳಿರುವಾಗ, ಲಕ್ಷ್ಯಗಳಲ್ಲಿ ಉಕ್ತಲಕ್ಷಣದ ಉಲ್ಲಂಘನವೇ ಅಧಿಕವಾಗಿರುವಾಗ, ಲಕ್ಷಣಕಾರರಂತೆಯೇ ಲಕ್ಷ್ಯಗಳನ್ನು ನಿರ್ಮಿಸಿದ ಕವಿಪುಂಗವರೂ ಮಾನ್ಯರೇ ಆಗಿರುವಾಗ – ಜಯಕೀರ್ತಿಯು ಪೂರ್ವಶಾಸ್ತ್ರಾಭಿಪ್ರಾಯವನ್ನು ತಿದ್ದಿ ಸ್ವಾಭಿ-ಪ್ರಾಯವನ್ನು ಮಂಡಿಸುವ ಸಾಹಸ ಮಾಡದೆ, ತನ್ನ ಗ್ರಂಥಕ್ಕೆ ಅಪೂರ್ಣತೆಯನ್ನು ತರಲಾರದೆ, ಪೂರ್ವಾಚಾರ್ಯರಿಗೆ ಮಾನ್ಯವಾದ ಲಕ್ಷಣವನ್ನು ಮಾತ್ರ ನಿರೂಪಿಸಿ, ಅದರ ಹೊಣೆಗಾರಿಕೆಯನ್ನು ಅವರಿಗೇ ಬಿಟ್ಟಿರುತ್ತಾನೆಂದು ಅನುಮಾನಿಸ-ಬೇಕಾಗುತ್ತದೆ. ಎಲ್ಲಾ ಗೀತಿಕೆಗಳನ್ನು ಒಳಕೊಳ್ಳಬಹುದಾದ ಒಂದು ಲಕ್ಷಣವನ್ನು ಹೇಳದಿದ್ದರೂ, ಪುರಾತನ ಲಾಕ್ಷಣಿಕರಿಗೆ ಸಂಮತವಾಗಿದ್ದ ಗೀತಿಕೆಯ ಲಕ್ಷಣವನ್ನು ತನ್ನ ಗ್ರಂಥದಲ್ಲಿ ಯಥಾರೂಪವಾಗಿ ಅನುವಾದಿಸಿದ ಜಯಕೀರ್ತಿ ನಮ್ಮ ಕೃತಜ್ಞತೆಗೆ ಅರ್ಹನಾಗಿದ್ದಾನೆ. ಏಕೆಂದರೆ, ಮತ್ತೆ ವಿಕೃತಿ ಹೊಂದಿ ಅನೇಕರೂಪಿ-ಯಾಗಿ ಪರಿಣಮಿಸಿದ ಕನ್ನಡ ಗೀತಿಕೆಯ ಆದಿಸ್ವರೂಪ ಹೇಗಿತ್ತೆಂಬುದನ್ನು ಅವನ ಗ್ರಂಥ ನಮಗೆ ಸ್ಪಷ್ಟವಾಗಿ ತಿಳಿಸುತ್ತದೆ. ಆ ಆದಿರೂಪವು ನಮಗೆ ಲಬ್ಧವಾದು-ದರಿಂದ ಗೀತಿಕೆಯನ್ನು ಓದುವ ಧಾಟಿ ಹೇಗೆಂಬುದನ್ನೂ, ಅದು ಅನೇಕರೂಪಿ-ಯಾಗಿ ಪರಿಣಮಿಸಲು ಕಾರಣವೇನೆಂಬುದನ್ನೂ ಹುಡುಕಲು ನಮಗೀಗ ಸಾಧನವೊಂದು ಕೈಗೆ ಬಂದತಾಗಿದೆ. ಇದನ್ನವಲಂಬಿಸಿ ಈ ಪ್ರಯತ್ನವನ್ನೀಗ ಮಾಡಿ ನೋಡೋಣ.

ಪದ್ಯದ ವಿಶಿಷ್ಟಪ್ರಯೋಜನವೆಂದರೆ ಶ್ರವ್ಯತ್ವ. ಪದ್ಯವನ್ನು ರಾಗಯುಕ್ತವಾಗಿ ಎಂದರೆ ಸ್ವರಾರೋಹಾವರೋಹಪೂರ್ವಕ ಹಾಡದೆ ಕೇವಲ ಓದಿದರೂ ಗದ್ಯದಲ್ಲಿಲ್ಲದ ಒಂದು ಗುಣವಿಶೇಷದ ಬೋಧವಾಗಿ, ನಮಗದು ಸುಖದಾಯಕ-ವಾಗುತ್ತದೆ. ಈ ಸುಖದಾಯಕ ಗುಣವು ಆ ಪದ್ಯದ 'ಗತಿ'ಯಲ್ಲಿ ಅಡಗಿರುತ್ತದೆ. ಈ 'ಗತಿ'ಯೇ ಎಂದರೆ ಬಳಕೆಯ ಮಾತಿನಲ್ಲಿ ಹೇಳುವುದಾದರೆ 'ಧಾಟಿ'ಯೇ ಛಂದೋನಿಯಮಗಳ ಲಕ್ಷ್ಯ ಮತ್ತು ಪರಿಣಾಮ. ಧಾಟಿ ಎಂದರೆ ಕೆಲವರು 'ರಾಗತಾಳಗಳ ಕೂಟ' ಎಂದು ಭಾವಿಸುವುದುಂಟು. ಆದರೆ ಅದಕ್ಕೆ ಪ್ರಯೋಗ ಸಂಮತಿ ಇಲ್ಲ. ಸಂಸ್ಕೃತದಲ್ಲಿ 'ಅಶ್ವಧಾಟಿ' ಎಂಬೊಂದು ಲಯಗ್ರಾಹಿಯಾದ ವೃತ್ತವಿದೆ. ಈ ವೃತ್ತದ ಗತಿ ಸೈನ್ಯದ ಕುದುರೆಗಳ ರಭಸದ ಓಟವನ್ನು ಹೋಲುವುದೆಂಬ ಕಾರಣದಿಂದ ಈ ಹೆಸರುಬಂದಿದೆ. ಆ ವೃತ್ತಸ್ವರೂಪ ಹೀಗೆ:-

> ಚೇಟೀಭವನ್ನಿಖಿಲ ಖೇಟೀ ಕದಂಬತರು ವಾಟೀಷು ನಾಕಿ ಪಟಲೀ ।
> ಕೋಟೀರ ಚಾರುತರ ಕೋಟೀಮಣೀಕಿರಣ ಕೋಟೀ ಕರಂಬಿತಪದಾ ॥
> ಪಾಟೀರಗಂಧ ಕುಚಶಾಟೀ ಕವಿತ್ವ ಪರಿಪಾಟೀಮಗಾಧಿಪಸುತಾ ।
> ಘೋಟೀ ಕುಲಾದಧಿಕ ಧಾಟೀಮುದಾರ ಮುಖ ವೀಟೀರಸೇನ
> ತನುತಾಂ ॥ . ॥

ಮುದ್ದಣನ ಮಾತಿನಿಂದಲೂ ಧಾಟಿ ಎಂದರೆ ಪದಗಳ 'ಗತಿಸ್ವರೂಪ' ಎಂಬರ್ಥವು ವ್ಯಕ್ತವಾಗುತ್ತದೆ.– "ಆವ ಧಾಟಿಯೊಳ್ ಪೇಳ್ವೆಂ? ಪದ್ಯದೊಳ್

ಪೇೞ್ವೆನೋ ಗದ್ಯದೊಳ್ ಪೇೞ್ವೆನೋ?" ಎನ್ನುತ್ತಾನೆ ಮುದ್ದಣ. ಧಾಟಿ ಎಂದರೂ ಗತಿ ಎಂದರೂ ಅರ್ಥ ಒಂದೇ. (ಧಾಟಿ ಎಂಬ ಶಬ್ದದ ಮೂಲಾರ್ಥ 'ರಭಸದ ಗತಿ' ಎಂದು ಸಂಸ್ಕೃತ ಕೋಶಗಳಿಂದ ತಿಳಿದುಬರುತ್ತದೆ. ಇಂಗ್ಲಿಷಿನ Rhythm ಎಂಬುದರ ಗ್ರೀಕ್ ಮೂಲದ ಅರ್ಥವು flow ಎಂದು 'ಡಿಕ್ಷನರಿ' ಹೇಳುತ್ತದೆ. ಇದರಿಂದ Rhythm ಮತ್ತು ಧಾಟಿ ಎಂಬ ಶಬ್ದಗಳ ಅರ್ಥ ಕಲ್ಪನೆಯಲ್ಲಿ ಸಾಮ್ಯವು ಭಾಸವಾಗುತ್ತದೆ.)

ಛಂದೋನಿಯಮಗಳ ಫಲವಾಗಿ ಉಂಟಾಗುವ ವಿಶಿಷ್ಟ ಗತಿಸ್ವರೂಪದ ಆಕರ್ಷಕತ್ವವನ್ನು ಪೂರ್ವಕಾಲದ ಶಾಸ್ತ್ರಕಾರರು 'ಶ್ರವ್ಯತ್ವ' ಎಂದು ಹೆಸರಿಸಿದ್ದಾರೆ. ಅದು ಸ್ವರಾರೋಹಾವರೋಹದ ಪರಿಣಾಮವಾಗಿ ಒದಗುವ 'ರಾಗಸುಖ'ವಲ್ಲ; ಅಕ್ಷರಗಳ ಅಥವಾ ಅಕ್ಷರಪುಂಜಗಳ ಪ್ರಮಾಣಬದ್ಧವಾದ ಉಚ್ಚಾರಪರಂಪರೆಯ ಪರಿಣಾಮವಾಗಿ ಒದಗುವ ಹೃದಯಸಂವೇದ್ಯವಾದ 'ಸ್ಪಂದನಸುಖ', ಅರ್ಥಾತ್ ಗತಿಸೌಂದರ್ಯ. ಇದೇ ಛಂದಸ್ಸೌಂದರ್ಯ. ಗತಿಸೌಂದರ್ಯವಿಲ್ಲದೆ, ಬರಿಯ ಕಟ್ಟುಪಾಡುಗಳಿಂದ ಪದ್ಯ ಹುಟ್ಟುವುದಿಲ್ಲ. ಹೃದ್ಯವಾದ ಸ್ವರಾರೋಹಾವರೋಹ ಪ್ರಕಾರವು ಮಾತ್ರ ಸಂಗೀತದಲ್ಲಿ 'ರಾಗ'ವೆಂಬ ಹೆಸರನ್ನು ಪಡೆಯುವಂತೆ, ಹೃದ್ಯವಾದ ಗತಿಪ್ರಕಾರವು ಮಾತ್ರ ಛಂದಸ್ಸಿನಲ್ಲಿ 'ಗತಿ' ಎನ್ನಿಸಿಕೊಳ್ಳುತ್ತದೆ. ಇದನ್ನೇ ಬಳಕೆಯ ಮಾತಿನಲ್ಲಿ ನಾವು 'ಧಾಟಿ' ಎನ್ನುತ್ತೇವೆ. ಹೃದ್ಯವಾದ ಗತಿಪ್ರಕಾರವು ಎಲ್ಲಿ ಇದೆ, ಎಲ್ಲಿ ಇಲ್ಲ ಎನ್ನುವುದಕ್ಕೆ ಸಂವೇದನಶಕ್ತಿಯುಳ್ಳ ಹೃದಯವೇ ಪ್ರಮಾಣ; ಶುಷ್ಕತರ್ಕಕ್ಕಾಗಲಿ ಕೇವಲ ಗಣಿತನೈಪುಣ್ಯಕ್ಕಾಗಲಿ ಅದು ಗಮ್ಯವಲ್ಲ.

ಪದ್ಯವಾಚನವಿಧಾನದ ದೃಷ್ಟಿಯಿಂದ ನೋಡಿದರೆ, ನಮ್ಮ ದೇಶದ ನಾನಾಭಾಷೆಗಳ ಪದ್ಯರಾಶಿಯಲ್ಲಿ ಮುಖ್ಯವಾದ ಎರಡು ಭೇದಗಳು ಕಂಡು ಬರುತ್ತವೆ. ಅವುಗಳೊಳಗೆ ಒಂದು ವರ್ಗದವನ್ನು ಯಥಾಕ್ಷರವಾಗಿ, ಎಂದರೆ ಯಾವುದೊಂದು ಗದ್ಯಭಾಗವನ್ನು ಓದುವಂತೆ ಯಥಾಗುರುಲಘುವಾಗಿ ಓದು-ವಾಗಲೇ ಆ ಬಂಧಗಳ ಧಾಟಿ ತಾನಾಗಿ ಉನ್ಮೀಲಿತವಾಗಿ ಶ್ರವ್ಯತ್ವವೊದಗುತ್ತದೆ. ನಮ್ಮ ಶಾರ್ದೂಲವಿಕ್ರೀಡಿತಾದಿ ಅಕ್ಷರವೃತ್ತಗಳೂ ಕಂದ ರಗಳೆ ಭಾಮಿನಿ ವಾರ್ಧಕಾದಿ ಮಾತ್ರಾಬಂಧಗಳೂ ಈ ವರ್ಗದವು. ಇನ್ನೊಂದು ವರ್ಗವನ್ನು ಶ್ರವ್ಯತ್ವವೊದಗುವಂತೆ ಓದಬೇಕಾಗಿದ್ದರೆ, ಅವುಗಳ ಧಾಟಿ ಮೊದಲಾಗಿ ನಮ್ಮ ಹೃದ್ಗತವಾಗಿರಬೇಕಾಗುತ್ತದೆ. ಅವನ್ನು ಯಥಾಕ್ಷರಗುರುಲಘುವಾಗಿ ಓದಿದರೆ, ಅವಕ್ಕೂ ಗದ್ಯಕ್ಕೂ ಭೇದವೇ ಸ್ಫುರಿಸುವುದಿಲ್ಲ; ಶ್ರವ್ಯತ್ವವಂತೂ ದೂರ ಉಳಿಯು-ತ್ತದೆ. ಮಾತ್ರಾನಿಯಮಕ್ಕೆ ಒಳಪಡದ ವಿಶುದ್ಧ ತ್ರಿಮೂರ್ತಿಗಣಬಂಧಗಳಾದ ನಮ್ಮ ಸಾಂಗತ್ಯ, ಪಿರಿಯಕ್ಕರ ಮೊದಲಾದವುಗಳು ಈ ವರ್ಗದವು. ಇವುಗಳನ್ನೋದು-ವಾಗ ನಿಯಮಿತ ಸ್ಥಾನಗಳಲ್ಲಿ ಲಘ್ವಕ್ಷರಗಳನ್ನು ವಿಕರ್ಷಿಸಿ ಗುರುವತ್ ಉಚ್ಚರಿಸಿ-ದರೆ ಮಾತ್ರ ಧಾಟಿ ಉನ್ಮೀಲಿತವಾಗಿ ಶ್ರವ್ಯತ್ವವೊದಗುತ್ತದೆ. ವಿಶಿಷ್ಟ ಛಂದೋ ಬಂಧಗಳಲ್ಲಿ ಲಘುಗಳನ್ನು ಗುರುವತ್ ಉಚ್ಚರಿಸಿ ಪಠಿಸಬೇಕಾದ ಪ್ರಮೇಯವು

ಕನ್ನಡಕ್ಕೆ ಮೀಸಲೇನೂ ಅಲ್ಲ. ಮಲಯಾಳದ 'ವಂಜಿಪ್ಪಾಟ್', ಹಿಂದಿ ಮರಾಠೀ ಭಾಷೆಗಳ 'ಘನಾಕ್ಷರಿ' ಎಂಬ ಛಂದೋಬಂಧಗಳಲ್ಲಿಯೂ ಲಘುವನ್ನು ಗುರುವಾಗಿ ಓದಬೇಕಾಗುತ್ತದೆ. ಇವುಗಳ ಒಂದೊಂದು ಉದಾಹರಣವನ್ನು, ಮೊದಲು ಯಥಾಗುರುಲಘುವಾಗಿ ಓದಿ, ಮತ್ತೆ ಆಯಾ ಸಂಪ್ರದಾಯದ ವಿಧಾನದಲ್ಲಿ ಓದಿ ತೋರಿಸುತ್ತೇನೆ.

ಹಾಗೆ ಓದುವುದಕ್ಕೆ ಮೊದಲು ಒಂದೇ ಮಾತು ಹೇಳುವುದಕ್ಕಿದೆ; ಅಕ್ಷರಗಳನ್ನು ವಿಕರ್ಷಿಸಿ ಯಾವುದೊಂದು ಛಂದೋಬಂಧವನ್ನು ಓದುವುದು ಛಂದಃಶಾಸ್ತ್ರಕ್ಕೆ ವಿರುದ್ಧವೆಂದೂ, ಗುರುಲಘುಗಳನ್ನು ಸಹಜಪ್ರಮಾಣದಲ್ಲಿ ಉಚ್ಚರಿಸುವ ಅನುಲ್ಲಂಘನೀಯವಾದ ನಿಯಮದ ಮೇಲೆಯೇ ಛಂದಃಶಾಸ್ತ್ರವು ನಿಂತಿದೆಯೆಂದೂ, ಹಾಗೆ ವಿಕರ್ಷಿಸಬೇಕಾಗುವುದು ಛಂದೋಬಂಧಗಳಲ್ಲಾಗಿರದೆ ಹಾಡುಗಳಲ್ಲೆಂದೂ ಹಾಡುಗಳು ಛಂದಃಶಾಸ್ತ್ರಕ್ಕೆ ಬಹಿರ್ಭೂತವಾದವುಗಳೆಂದೂ ಒಂದು ವಾದವಿದೆ. ಇದರ ಸಾಧುತ್ವವನ್ನು ಕೂಲಂಕಷವಾಗಿ ವಿಮರ್ಶಿಸುವುದಕ್ಕೆ ಇಂದಿನ ಉಪನ್ಯಾಸದಲ್ಲಿ ಎಡೆಯಿಲ್ಲವಾದರೂ, ಛಂದಃಶಾಸ್ತ್ರವನ್ನು ಕೇವಲ ಸಂಕುಚಿತ ದೃಷ್ಟಿಯಿಂದ ನೋಡುವುದರ ಪರಿಣಾಮವೇ ಈ ವಾದಕ್ಕೆ ಹೇತು-ವೆಂದು ಹೇಳದಿರಲಾಗುವುದಿಲ್ಲ. ಯಾವ ಶಾಸ್ತ್ರವಾದರೂ ಪುಸ್ತಕದ ಪುಟಗಳಿಂದ ಮರ್ಯಾದಿತವಾದುದಲ್ಲವೆಂದು ವಿಜ್ಞಾಪಿಸಬೇಕಾಗುತ್ತದೆ. ಪದ್ಯ ಮತ್ತು ಹಾಡು ಮೂಲದಲ್ಲಿ ಅಭಿನ್ನ. ಸಂಸ್ಕೃತ ಛಂದಗಳಿಗೆಲ್ಲ ತಾಯಿ ಎನಿಸಿದ್ದು ಗಾಯತ್ರಿ; ಈ ಹೆಸರಿನ ಅರ್ಥವೇನು? ವೇದವೇ ಹೇಳುತ್ತದೆ:- 'ಗಾಯಂತಿ ತ್ವಾ ಗಾಯತ್ರಿಣಃ ಅರ್ಚಂತಿ ಅರ್ಕಿಣಃ' (ಋಗ್ವೇದ-೧-೩-೧೦) ಇದು ಇಂದ್ರನ ಸ್ತುತಿ; ಅವನನ್ನು ಹಾಡಿ ಹೊಗಳುವವರನ್ನು ಇಲ್ಲಿ 'ಗಾಯತ್ರಿಣಃ' ಎಂದು ಕರೆಯಲಾಗಿದೆ. ಭಗವದ್ಗೀತೆ ಹೇಳುತ್ತದೆ – 'ಋಷಿಭಿಃ ಬಹುಧಾ ಗೀತಂ ಛಂದೋಭಿಃ ವಿವಿಧೈಃ' ಛಂದ ಎಂದರೂ ಗೀತ ಎಂದರೂ ಮೂಲತಃ ಒಂದೇ ಎಂಬುದಕ್ಕೆ ಈ ಪ್ರಮಾಣಗಳು ಸಾಲವೇ? ಸಾಂಗವೇದಾದಿ ಶಾಸ್ತ್ರಗಳಲ್ಲಿ ಪ್ರಕಾಂಡಪಂಡಿತರಾಗಿದ್ದು, ಹಲವು ಶಾಸ್ತ್ರೀಯನಿಬಂಧಗಳನ್ನು ಸಂಸ್ಕೃತದಲ್ಲಿ ರಚಿಸಿ, 'ಸಮೀಕ್ಷಾಚಕ್ರವರ್ತಿ' ಎಂದು ಖ್ಯಾತರಾಗಿದ್ದ ಮಧುಸೂದನ ವಿದ್ಯಾವಾಚಸ್ಪತಿ ಎಂಬ ಮಹನೀಯರು 'ಛಂದಃಸಮೀಕ್ಷಾ' ಎಂಬ ನಿಬಂಧದ 'ಛಂದೋವಿಜ್ಞಾನ ಸಾರ್ಥಕತಾವಾದ' ಪ್ರಕರಣದಲ್ಲಿ 'ಗೇಯವೇದಸ್ಯ ಛಂದೋವೇದಾನತಿರಿಕ್ತತ್ವಾತ್' (ಪಿಂಗಳ ಛಂದಃ-ಶಾಸ್ತ್ರಭೂಮಿಕಾ – ಪುಟ ೬೭, ನಿರ್ಣಯ ಸಾಗರ ಪ್ರತಿ) – ಎಂದರೆ 'ಗೇಯ ವಿಜ್ಞಾನವು ಛಂದೋವಿಜ್ಞಾನಕ್ಕೆ ಹೊರಗಾದುದಲ್ಲ' ಎಂದು ಸ್ಪಷ್ಟವಾಗಿ ಹೇಳು-ತ್ತಾರೆ. ಇದು ಪದ್ಯ, ಇದು ಪದ ಅಥವಾ ಹಾಡು ಎಂದು ನಾವು ಹೇಳುವವುಗಳೆಲ್ಲ ತಾತ್ತ್ವಿಕವಾಗಿ ಛಂದೋಬಂಧಗಳೇ; ರೂಪದಲ್ಲಿ ಮಾತ್ರ ಅವು ಬೇರೆ ಬೇರೆ. ಅಕ್ಷರಸಂಖ್ಯೆಗೆ ಯಾವ ನಿಯಮವೂ ಇಲ್ಲದೆ ಕೇವಲ ತಾಳಮಾತ್ರಾ ಬದ್ಧವಾದ ಹಾಡುಗಳನ್ನು 'ಜಾತಿ' ವಿಭಾಗ ಮಾಡುವುದು ಅಶಕ್ಯವಾಗುವ

ಕಾರಣದಿಂದ ಮಾತ್ರ ಛಂದಃಶಾಸ್ತ್ರಗ್ರಂಥಗಳಲ್ಲಿ ಅವುಗಳನ್ನು ನಾವು ಕಾಣುವುದಿಲ್ಲ ಹೊರತು, ಅವು ಕೂಡ ಪರಮಾರ್ಥತಃ ಛಂದೋಬಂಧಗಳೇ ಆಗಿವೆ. ಇಷ್ಟು ವಿಜ್ಞಾಪಿಸಿ, ಇನ್ನು ಓದುತ್ತೇನೆ.

'ವಂಜಿಪ್ಪಾಟ್' ಎಂದರೆ ನೌಕಾಗೀತ ಎಂದರ್ಥ. ಇದರ ಧಾಟಿ, ಎಡೆ ಬಿಡದೆ ಹುಟ್ಟುಹಾಕುತ್ತಿರುವಾಗ ವ್ಯಂಜಿತವಾಗುವ ಗತಿಯಂತಿದೆ. (ಇದಕ್ಕೆ 'ನತೋನ್ನತ' ಎಂಬ ಇನ್ನೊಂದು ಹೆಸರೂ ಇದೆ.) ಇದರಲ್ಲಿ ಬರುವ ಅಕ್ಷರಗಳನ್ನೆಲ್ಲ – ಅವು ಗುರುವಾಗಿರಲಿ ಲಘುವಾಗಿರಲಿ – ಅಭಿನ್ನವಾಗಿ ಗುರು-ವತ್ ಉಚ್ಚರಿಸಬೇಕೆಂಬುದು ನಿಯಮ.[2] ನಾನಿಲ್ಲಿ ಉದಾಹರಿಸುವ ಪದ್ಯ ರಾಮ-ಪುರತ್ತು ವಾರಿಯರ್ ಕವಿಯ 'ಕುಚೇಲವೃತ್ತ' ಎಂಬ ಕಾವ್ಯದ್ದು. ಅದು ಹೀಗೆ:–

ಕಂಡಾಲೆತ್ರ ಕಷ್ಟಮೆತ್ರಯುಂ ಮುಷಿಂಞ ಜೀರ್ಣವಸ್ತ್ರಂ
ಕೊಂಡು ತಟ್ಟುಡುತ್ತಿಟ್ಟುತ್ತರೀಯವುಮಿಟ್ಟು ।
ಮುಂಡಿಲ್ ಪೊದಿಂಞ ಪೊದಿಯುಂ ಮುಖ್ಯಮಾಯ ಪುಸ್ತಕವುಂ
ರಂಡುಂ ಕೂಡೆ ಕಕ್ಷತ್ತಿಂಗಲಿಡುಕ್ಕಿಕೊಂಡು ॥

ಘನಾಕ್ಷರಿಯಲ್ಲಿ ನಾಲ್ಕು ಪಾದಗಳು; ಪ್ರತಿಪಾದದಲ್ಲಿ ಮೂವತ್ತೊಂದು ಅಕ್ಷರಗಳು; ಪಾದಾಂತ್ಯದ ಅಕ್ಷರವೊಂದು ಗುರುವೇ ಆಗಿರಬೇಕು; ಉಳಿದುವೆಲ್ಲ ಯಥೇಷ್ಟವಾಗಿ ಗುರುವೋ ಲಘುವೋ ಆಗಿರಬಹುದು. ಪಾದದ ೧೬ನೇ ಅಕ್ಷರದಲ್ಲಿಯೂ ಪಾದಾಂತ್ಯದಲ್ಲಿಯೂ ಯತಿ ಇರಬೇಕು – ಇಷ್ಟು ಛಂದೋ ನಿಯಮ. ಆದರೆ ಸಂಪ್ರದಾಯದಂತೆ ಇದನ್ನು ಓದುವವರು ಪ್ರತಿಯೊಂದು ಅಕ್ಷರವನ್ನು ಗುರುವಾಗಿ ಉಚ್ಚರಿಸುತ್ತಾರೆ. ಈ ಬಂಧದ ಹೆಸರೇ ಈ ನಿಯಮವನ್ನು ಸೂಚಿಸುತ್ತದೆ. ಘನ ಎಂದರೂ ಗುರು ಎಂದರೂ ಶಬ್ದಾರ್ಥ ಒಂದೇ. 'ಘನಾಕ್ಷರೀ' ಎಂದರೆ 'ಗುರ್ವಕ್ಷರೀ', ಎಂದರೆ 'ಗುರ್ವಕ್ಷರ ಬಂಧ' ಎಂಬರ್ಥ ಸ್ಪಷ್ಟ. ನಾನೀಗ ಓದುವ ಘನಾಕ್ಷರಿ ಖ್ಯಾತ ಹಿಂದೀ ಕವಿ ಗೋಪಾಲ ಶರಣ ಸಿಂಹರ ಕೃತಿ :–

ಮಂಜುಲ ಮೃದುಲ ಮುರಲೀಕೇ ಸ್ವರಕೇ ಸಮಾನ
ಉಸಕಾ ಸರಸಗಾನ ಗೂಂಜತಾ ಹೈ ಕಾನಮೇಂ ।
ಉಸಕಾ ಅನೂಪ ರೂಪ ಭೂಲತಾ ಕಭೀ ಭೀ ನಹೀಂ
ಚಾಹೇ ಕುಛ ಸೋಚೂಂ ಕಿಂತು ಆತಾ ವಹೀ ಧ್ಯಾನ ಮೇಂ ॥
ಸುಖಕರ ಉಸಕೀ ಶರೀರಕೀ ಸುಗಂಧ ಜೈಸೀ

2. ಗುರುತನ್ನೆ ಎಟುತ್ತೆಲ್ಲಾಂ, ಇಕ್ಶೀಲಿನ್ ಪೇರ್ ನತೋನ್ನತ (ರಾಜರಾಜವರ್ಮ-ವೃತ್ತಮಂಜರೀ)

ಹೈ ಮುಝೋ ಉಸೀಕೀ ಸುಧ ಆತೀ ಆನ ಆನಮೇಂ ।
ಪ್ರಾಣಮೇಂ ಉಸೀಕೀ ಮಂಜುಮೂರ್ತಿ ಹೈ ಸಮಾಯೀ ಹುಈ
ಮಾನೋ ಹೈ ಉಡತೀ ವಹೀ ಸಾಂಸೋಂಕೀ ವಿಮಾನ ಮೇಂ ॥

ವಂಜಿಪ್ಪಾಟನ್ನಾಗಲಿ ಘನಾಕ್ಷರಿಯನ್ನಾಗಲಿ ಸಂಪ್ರದಾಯದಂತೆ ಓದುವಾಗ ಎರಡು ಅಥವಾ ನಾಲ್ಕಕ್ಷರದ ಗಣಗಳು ಸ್ಫುರಿಸುತ್ತವೆ. ಪಠಿಸುವಾಗ ಆ ಅಕ್ಷರಗಳೆಲ್ಲ ಗುರೂಚ್ಚಾರವನ್ನು ಪಡೆಯುವುದರಿಂದ ಈ ಪದ್ಯಗಳ ಧಾಟಿ ನಾಲ್ಕು ಅಥವಾ ಎಂಟು ಮಾತ್ರೆಗಳ ಆವರ್ತದಲ್ಲಿ ನಡೆಯುತ್ತದೆ.

ಸಂಸ್ಕೃತ ಪ್ರಾಕೃತಾದಿಗಳ ಛಂದೋಮಾತ್ರಾಗಣನೆಯಲ್ಲಿ, ಮೂಲಮಾನವು ಒಂದು ಲಘುವಾಗಿದ್ದು, ಒಂದು ಗುರು ಎಂಬುದು ಅದರ ದ್ವಿಗುಣಿತ ಮಾನ-ವಾಗಿರುತ್ತದೆ. ಆದರೆ ತಮಿಳಿನ ಪುರಾತನ ಛಂದೋಗಣನಾವಿಧಾನವನ್ನು ಈ ಲಘು ಗುರು ದೃಷ್ಟಿಯಿಂದ ಪರಾಮರ್ಶಿಸುವಾಗ, ಅಲ್ಲಿ ಮೂಲಮಾನವು ಒಂದು ಗುರುರೂಪವೆಂಬುದು ಗೋಚರವಾಗುತ್ತದೆ. ಲಘು ಗುರು ಎಂದು ಸಂಸ್ಕೃತಾದಿ-ಗಳಲ್ಲಿ ಎರಡು ಮಾನಭೇದಗಳಿರುವಂತೆ ತಮಿಳಿನಲ್ಲಿಯೂ ಎರಡು ಮಾನ ಭೇದಗಳಿವೆಯಾದರೂ ಅವುಗಳು, ಲಘು ಗುರುಗಳಂತೆ ಒಂದು ಮತ್ತೊಂದರ ದ್ವಿಗುಣಿತ ಮಾನವಲ್ಲ; ಎರಡು ಮಾನಗಳೂ ಮೂಲಮಾನಗಳೇ ಆಗಿವೆ. ಮಾತ್ರಾದೃಷ್ಟಿಯಿಂದ ಅವೆರಡನ್ನು ನೋಡಿ ಸ್ಥೂಲವಾಗಿ ಹೇಳುವುದಾದರೆ, ಮೊದಲನೆಯ ವರ್ಗದ ಮಾನಕ್ಕಿಂತ ಎರಡನೆಯ ವರ್ಗದ ಮೂಲಮಾನವು ಒಂದೂವರೆಯಷ್ಟಿರುತ್ತದೆ ಹೊರತು ಎರಡರಷ್ಟಲ್ಲ. ಮೊದಲನೆಯ ವರ್ಗದ ಮೂಲಮಾನವು (ಗುರು) ಏಕಾಕ್ಷರಿ, ಎರಡನೆಯದು (ಲಘು+ಗುರು) ಯುಗಲಾಕ್ಷರಿ. ಆದುದರಿಂದ ಅವುಗಳನ್ನು ನಾವು ಅನುಕ್ರಮವಾಗಿ ಒಂಟಿ, ಜಂಟಿ ಎಂದು ಕರೆಯಬಹುದಾಗಿದೆ. ಈ ವಿಷಯದಲ್ಲಿ ಪರಿಮಿತವಾದ ನನ್ನ ತಿಳಿವಿನಂತೆ ಹೇಳುವುದಾದರೆ, ಲಘ್ವಕ್ಷರಕ್ಕೆ ತಮಿಳಿನ ಛಂದೋವಿಧಾನದಲ್ಲಿ ಸಾತಂತ್ರ್ಯವಿಲ್ಲ. ಗುರು ಕೇವಲವಾಗಿಯೂ ಮೂಲಮಾನವಾಗುತ್ತದೆ. ಲಘುಗಳು ಎರಡು ಕೂಡಿದರೆ ಮಾತ್ರ ಒಂದು (ಜಂಟಿ) ಮೂಲಮಾನವೆನಿಸಬಲ್ಲವು. ಒಂದು ಲಘುವಿನ ಅನಂತರ ಗುರ್ವಕ್ಷರವಿರುವಾಗ, ಆ ಲಘು, ಗುರುವನ್ನು ಕೂಡಿ ಒಟ್ಟು ಒಂದು (ಜಂಟಿ) ಮೂಲಮಾನವಾಗುತ್ತದೆ. ಹೀಗಿದ್ದರೂ ಒಂದು ಛಂದೋಗಣದ ಕೊನೆಯಲ್ಲಿ ಕೇವಲ ಲಘು ಬರುವುದುಂಟು. ಆಗ ಮಾತ್ರ ಅದೂ (ಒಂಟಿ) ಮೂಲಮಾನವನ್ನೆನಿಸಿಕೊಳ್ಳುತ್ತದೆ. ಎಂದರೆ ಅದನ್ನು ಗುರುವತ್ ಗ್ರಹಿಸಲಾಗುತ್ತದೆಂದಾಯಿತು. ಆಗ ಅದರ ಉಚ್ಚಾರಕಾಲವು (ಜಂಟಿ) ಮೂಲ-ಮಾನವಾದ ಒಂದು ಗುರುವಿನ ಉಚ್ಚಾರಕಾಲಕ್ಕೆ ಸರಿಯಾಗಬೇಕಾಗುತ್ತದೆ – ಸಂಸ್ಕೃತದಲ್ಲಿ ಸರ್ವತ್ರ ಪಾದಾಂತ್ಯದ ಲಘು ಗುರುವಾಗುವ ಹಾಗೆ. ಹಾಗೆ ಉಚ್ಚರಿಸಿ ಓದಿದಾಗ ಮಾತ್ರ ಬಂಧದ ಧಾಟಿ ವ್ಯಕ್ತವಾಗುತ್ತದೆ. ತಮಿಳು ಬಂಧಗಳ

ಧಾಟಿಯನ್ನು ಸ್ಪಷ್ಟವಾಗಿ ನಿರೂಪಿಸುವುದಕ್ಕಾಗಿ ಪುರಾತನ ಛಂದೋವಿದರು ಪ್ರತಿಯೊಂದು ಗಣ(ಚೀರ್)ಕ್ಕೂ ಗಣವಾಚಕಗಳನ್ನು ನಿರ್ಮಿಸಿ ಮಹೋಪಕಾರ ಮಾಡಿದ್ದಾರೆ. ನಿದರ್ಶನವಾಗಿ ಸುಪ್ರಸಿದ್ಧವಾದ ತಿರುಕ್ಕುರಳಿನ ಮೊತ್ತಮೊದಲ ಪದ್ಯದ ಸ್ವರೂಪವನ್ನು ಪರೀಕ್ಷಿಸೋಣ. ಪದ್ಯಾಕ್ಷರಗಳಿಗೂ ಪದ್ಯದ ಗಣವಾಚಕಗಳ ಅಕ್ಷರಗಳಿಗೂ ಗುರು ಲಘು ಸಂಕೇತಗಳನ್ನು ಅಳವಡಿಸಿ ನೋಡಿದರೆ, ಪದ್ಯದ ಯಥಾಕ್ಷರ ಸ್ವರೂಪಕ್ಕೂ ಅದರ ಧಾಟಿಯ ಸ್ವರೂಪಕ್ಕೂ ಇರುವ ವ್ಯತ್ಯಾಸವು ಸ್ಪಷ್ಟವಾಗಿ ಗೊತ್ತಾಗುತ್ತದೆ.

UUU   U UU   U – – –   – U
ಅಗರ । ಮುದಲ । ಎಱುತ್ತೆಲ್ಲಾಂ । ಆದಿ ।

U U –   U – –   U U U
ಭಗವನ್ । ಮುದಟ್ರೇ । ಉಲಗು ॥

ಇದರ ಗಣವಾಚಕಗಳು ಹೀಗೆ:-

U U –   U U –   U U – –   – –
ಪುಳಿಮಾ । ಪುಳಿಮಾ । ಪುಳಿಮಾಂಗಾಯ್ । ತೇಮಾ ।

U U –   U U –   U U –
ಪುಳಿಮಾ । ಪುಳಿಮಾ । ಪುಳಿಮಾ ॥

ಈ ಪದ್ಯದ ಏಳು ಗಣಗಳೊಳಗೆ ಐದನೆಯದೊಂದು (ಭಗವನ್, U U –) ಮಾತ್ರ ಅದರ ಗಣವಾಚಕ(ಪುಳಿಮಾ, U U –)ದ 'ಯಥಾಪ್ರತಿ'ಯಾಗಿದೆ; ಉಳಿದ ಆರು ಗಣಗಳಿಗೂ ಅವುಗಳ 'ವಾಚಕ'ಗಳಿಗೂ ಗುರುಲಘುಪ್ರಕಾರದಲ್ಲಾಗಲಿ ಮಾತ್ರಾ ಸಂಖ್ಯೆಯಲ್ಲಾಗಲಿ ಸಾಮ್ಯವಿಲ್ಲ. ಪದ್ಯದ ೧, ೨, ೪, ೭ನೆಯ ಗಣಗಳ ಕೊನೆ-ಯಲ್ಲಿರುವ ಲಘುಗಳು 'ವಾಚಕರೂಪ'ದಲ್ಲಿ ಗುರುಗಳಾಗಿವೆ; ಪದ್ಯದ ೩ನೆಯ ಮತ್ತು ೬ನೆಯ ಗಣಗಳಲ್ಲಿರುವ ದ್ವಿತ್ವಗಳು ವಾಚಕರೂಪದಲ್ಲಿ ಶಿಥಿಲೀಕೃತವಾದ ಪರಿಣಾಮವಾಗಿ ಅವುಗಳ ಉಪಧಾಕ್ಷರಗಳು ಲಘುಗಳಾಗಿ ಮಾರ್ಪಟ್ಟಿವೆ. ಪದ್ಯಾಕ್ಷರಗಳ ಒಟ್ಟು ಮಾತ್ರಾಸಂಖ್ಯೆ ೨೮; ವಾಚಕರೂಪದಲ್ಲಿ ಒಟ್ಟು ೩೦ ಮಾತ್ರೆಗಳಿವೆ. ಪದ್ಯವನ್ನು ಯಥಾಕ್ಷರಗುರುಲಘುವಾಗಿ ಓದುವಾಗ ವ್ಯಕ್ತವಾಗ-ದಿರುವ ಧಾಟಿ, ಗಣವಾಚಕಾನುಗುಣವಾಗಿ ಓದುವಾಗ ಉನ್ಮೀಲಿಸಿ ಶ್ರವ್ಯತ್ವ ಉಂಟಾಗುತ್ತದೆ. ಆದುದರಿಂದ ತಮಿಳಿನ ಪುರಾತನಛಂದೋಬಂಧಗಳನ್ನು ಓದುವ ವಿಧಾನವು ಯಥಾಕ್ಷರಗುರುಲಘುರೂಪವಾಗಿರದೆ, ನಿಯತಸ್ಥಾನಗಳಲ್ಲಿ ಹ್ರಸ್ವಗಳನ್ನು ದೀರ್ಘೀಕರಿಸಿ ಗುರುಗಳನ್ನಾಗಿಯೂ, ಅವಶ್ಯವಾದ ಎಡೆಗಳಲ್ಲಿ ವ್ಯಂಜನದ್ವಿತ್ವ-ಗಳನ್ನು ಶಿಥಿಲೀಕರಿಸಿ ಉಪಧಾಕ್ಷರಗಳನ್ನು ಲಘುಗಳನ್ನಾಗಿಯೂ ಪರಿವರ್ತಿಸಿ-ಕೊಂಡು ಓದುವುದೇ ಸಂಪ್ರದಾಯವಾಗಿತ್ತೆಂಬುದನ್ನು ತೇಮಾ ಪುಳಿಮಾದಿ ಗಣವಾಚಕಗಳು ನಿಸ್ಸಂದಿಗ್ಧವಾಗಿ ತಿಳಿಸುತ್ತವೆ.

ಪುರಾತನ ಛಂದೋವಿದರು, ತಮಿಳಿನ ಪ್ರಾಚೀನಛಂದೋರೂಪಗಳಿಗಾಗಿ ತೇಮಾ ಪುಳಿಮಾದಿ ಗಣವಾಚಕಗಳನ್ನು ನಿರ್ಮಿಸಿದಂತೆ, ಕನ್ನಡದ ಪ್ರಾಚೀನ

ಛಂದೋರೂಪಗಳ ಲಕ್ಷಣನಿರೂಪಣೆಗಾಗಿಯೂ ಬ್ರಹ್ಮಂ, ದ್ರುಹಿಣಂ ಇತ್ಯಾದಿ ಗಣವಾಚಕಗಳನ್ನು ನಿರ್ಮಿಸಿದ್ದಾರೆ. ಆದರೆ ಕನ್ನಡದ ಗಣವಾಚಕಗಳಿಗೂ ತಮಿಳಿನ ಗಣವಾಚಕಗಳಿಗೂ ಮೂಲಭೂತವಾದ ಒಂದು ಭೇದವಿದೆ. ಆಯಾ ಗಣದ ಅಕ್ಷರಗಳ ಗುರುಲಘುಸಂನಿವೇಶವನ್ನು ಯಥಾವತ್ತಾಗಿ ತೋರಿಸುವುದು ಕನ್ನಡ ಗಣವಾಚಕಗಳ ಗುರಿ. ತಮಿಳಿನ ಗಣವಾಚಕಗಳ ಗುರಿ ಬೇರೆ; ಅವು ಆಯಾ ಗಣದ ಅಕ್ಷರಗಳ ಗುರುಲಘುಸ್ವರೂಪವನ್ನು ಇದ್ದಂತೆ ತೋರಿಸುವುದಿಲ್ಲ. ಈ ಮೊದಲೇ ನಿದರ್ಶಿಸಿದಂತೆ ಮುದಲ ಎಂಬುದೂ ಮುದಟ್ರೇ ಎಂಬುದೂ ಗುರುಲಘುಸ್ವರೂಪಾನುಗುಣವಾಗಿ ಭಿನ್ನವಾಗಿದ್ದರೂ ಅವೆರಡಕ್ಕೂ ಗಣವಾಚಕವು ಪುಳಿಮಾ ಎಂಬುದೊಂದೇ ಆಗಿದೆ. ಗುರುಲಘುವ್ಯವಸ್ಥೆಯಲ್ಲಿ ಅತಿಶೈಥಿಲ್ಯವಿರುವ ತಮಿಳು ಬಂಧಗಳ ಗಣನಿರೂಪಣ ಮಾಡುವುದೇ ತಮಿಳು ಗಣವಾಚಕಗಳ ಗುರಿಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ತೇಮಾ, ಪುಳಿಮಾ ಇತ್ಯಾದಿ ಗಣವಾಚಕಗಳ ಗುರುಲಘುಗಳನ್ನವಲಂಬಿಸಿ ಪದ್ಯಗತವಾದ ಆಯಾ ಗಣಗಳ-ನ್ನೋದುವಾಗ ಆ ಎಲ್ಲಾ ತಮಿಳು ಬಂಧಗಳ ಧಾಟಿ ಸುಗಮವಾಗಿ ಹರಿಯುತ್ತ ಹೋಗುತ್ತದೆ. ಛಂದೋಗತಿಯನ್ನು ವ್ಯಂಜಿಸುವ ಪ್ರಯೋಜನದೃಷ್ಟಿಯಿಂದ ನೋಡಿದರೆ, ಕನ್ನಡ ಗಣವಾಚಕಗಳಿಂದ ನಮಗಾಗುವ ನೆರವು ಅತ್ಯಲ್ಪ. ಕನ್ನಡದ ತ್ರಿಮೂರ್ತಿಗಣವಾಚಕಗಳನ್ನು ತೇಮಾಪುಳಿಮಾದಿಗಳಂತೆ ಯಥಾಕ್ಷರಗುರುಲಘು-ವಾಗಿ ಓದಿದರೆ ಧಾಟಿ ಅರಳುವುದಿಲ್ಲ. ಆದುದರಿಂದ ತಮಿಳು ಬಂಧಗಳಂತೆಯೇ ಅಕ್ಷರಸಮತೆಯಾಗಲಿ ಮಾತ್ರಾಸಮತೆಯಾಗಲಿ ಇಲ್ಲದಿರುವ ನಮ್ಮ ತ್ರಿಮೂರ್ತಿ ಬಂಧಗಳ ಧಾಟಿಯನ್ನು ಪರಂಪರಾಗತವಾದ ವಾಚನಸಂಪ್ರದಾಯದಿಂದ ಮಾತ್ರ ನಾವು ತಿಳಿದುಕೊಳ್ಳಬೇಕಾಗಿದೆ; ಬೇರೆ ಮಾರ್ಗವಿಲ್ಲ.

ಆದರೆ ಕನ್ನಡದ ಪುರಾತನ ಛಂದೋಬಂಧಗಳಲ್ಲಿ ಹೆಚ್ಚಿನವುಗಳು ಈಗ ಲುಪ್ತಪ್ರಾಯವಾಗಿವೆ, ಲುಪ್ತವೇ ಆಗಿವೆ ಎನ್ನಬಹುದು. ಅವೆಲ್ಲವುಗಳನ್ನು ಓದುವ ಅಥವಾ ಹಾಡುವ ಸಂಪ್ರದಾಯವೂ ಉಳಿದಿಲ್ಲ. ತ್ರಿಪದಿಯೊಂದು – ಅದೀಗ ಪ್ರಚಲಿತರಚನೆಯಾಗಿಲ್ಲದಿದ್ದರೂ – ನಾಡಿನ ಜನರ ಬಾಯಲ್ಲಿ ಉಳಿದಿದೆ. ಆದರೆ, ಅಖಿಲಕರ್ನಾಟಕದಲ್ಲಿ ಇದು ನಮ್ಮ ಕಿವಿಗೆ ಬೀಳುತ್ತಿದ್ದರೂ ಒಂದೊಂದು ಊರಲ್ಲಿ ಇದಕ್ಕೆ ಒಂದೊಂದು ಧಾಟಿ ಎಂಬಂತಿದೆ. ಸಾವಧಾನವಾಗಿ ಅವನ್ನೆಲ್ಲ ಕಿವಿಗೊಟ್ಟು ಕೇಳಿದರೆ ಕೆಲವೆಡೆಗಳಲ್ಲಿ ಅದು ಆರು ಮಾತ್ರೆಗಳ ನಡೆಯಲ್ಲಿ, ಕೆಲವೆಡೆ ಏಳು ಮಾತ್ರೆಗಳ ನಡೆಯಲ್ಲಿ ನಡೆಯುವುದು ಗೊತ್ತಾಗುತ್ತದೆ. ಮತ್ತೆ ಕೆಲವರು ಅದನ್ನು ನಾಲ್ಕು ಮತ್ತು ಎಂಟು ಮಾತ್ರೆಗಳ ನಡೆಯಲ್ಲಿ ಹಾಡುವುದೂ ಉಂಟು. ಹದಿನಾಲ್ಕು ಮಾತ್ರೆಗಳ ನಡೆಯಲ್ಲಿ ಇದನ್ನು ಹಾಡುವುದನ್ನೂ ನಾನು ಕೇಳಿದ್ದೇನೆ. ಇದಲ್ಲದೆ ವಿತಾಲಗತಿಯಲ್ಲಿ ಹಾಡುವ ಸಂಪ್ರದಾಯವಂತೂ ಶಿಶು-ಗಳನ್ನಾಡಿಸುವಾಗ ಕೇಳುವುದು ಇನ್ನೂ ಪೂರ್ಣವಾಗಿ ಅಳಿದಿಲ್ಲ. ಹೀಗೆ

ತ್ರಿಪದಿಯ ಧಾಟಿ ನಾನಾರೂಪವಾಗಿರುವುದರಿಂದ ಅದರ ಸಹಜಗತಿಯನ್ನು ಕಂಡುಕೊಳ್ಳುವುದು ಅಸಾಧ್ಯವೆಂಬಂತಾಗಿದೆ. ಇದೂ ಅಲ್ಲದೆ, ವಿಶಿಷ್ಟ ಧಾಟಿಯ ಸೌಕರ್ಯಕ್ಕಾಗಿ – ತ್ರಿಪದಿಯ ಛಂದೋಲಕ್ಷಣವನ್ನು ಮೀರಿ – ಅಕ್ಷರಾಧಿಕ್ಯವನ್ನು ಮಾಡಿಕೊಂಡದ್ದೂ ಅಲ್ಲಲ್ಲಿ ವಿಪುಲವಾಗಿ ಕಂಡುಬರುತ್ತದೆ. ಈ ಕಾರಣದಿಂದಲೇ ತ್ರಿಪದಿ ಐದು ಮಾತ್ರೆಯ ಗಣಗಳ ಬಂಧ ಎಂಬ ಭ್ರಾಂತಿಯನ್ನೂ ಕೆಲವರಲ್ಲಿ ಹುಟ್ಟಿಸಿದೆ. ಇದನ್ನು ಸಾಧಿಸುವ ವ್ಯರ್ಥಪ್ರಯತ್ನಗಳೂ ನಡೆದಿವೆ.

ಯಾವುದೊಂದು ಛಂದೋಬಂಧವನ್ನಾದರೂ ಬೇರೆ ಬೇರೆ ರೀತಿಯಲ್ಲಿ ಹಾಡಬಾರದೆಂಬ ಕಟ್ಟಳೆ ಇರಬೇಕೆಂಬುದು ನನ್ನ ಮತವಲ್ಲ. ಅಂತಹ ಕಟ್ಟಲೆ ವ್ಯವಹಾರ್ಯವೂ ಅಲ್ಲ. ಕಲಾಕಾರರಿಗೆ ಸ್ವಾತಂತ್ರ್ಯ ಬೇಕೇಬೇಕು. ಅದು ಇದ್ದೇ ಇದೆ. ತ್ರಿಪದಿಗೆ ನಾನಾ ಧಾಟಿ ಒಗ್ಗುವುದೆಂಬುದು ಆ ಛಂದೋಬಂಧದ ಗುಣವಿಶೇಷ. ನಮ್ಮ ಪುರಾತನ ಬಂಧಗಳೊಳಗೆ ಅದು ನಾನಾ ನಾಟ್ಯವಾಡಬಲ್ಲ ರಂಗನಾಯಕಿ. ಆದರೆ ಒಂದು ಛಂದೋಬಂಧದ ಸಹಜಗತಿಯನ್ನು ತೊರೆದು ಬೇರೊಂದು ಗತಿಯಲ್ಲಿ ಹಾಡುವ ಸಂಪ್ರದಾಯ ಬೆಳೆದರೆ, ಕಾಲಾಂತರದಲ್ಲಿ ಅದೇ ಛಂದೋಬಂಧದ ಹೆಸರಲ್ಲಿ ರಚಿತವಾಗುವ ಪದ್ಯಗಳ ಲಕ್ಷಣವೇ ಬೇರಾಗಿ ಬಿಡುತ್ತದೆಂಬುದು ಮಾತ್ರ ನನ್ನ ನಿವೇದನೆ. ಇದಕ್ಕೆ ಕಾರಣವೇನೆಂದರೆ, ಕವಿ ಛಂದೋಗ್ರಂಥದ ಅಧ್ಯಯನ ಮಾಡಿ ಮತ್ತೆ ಕವನ ಕಟ್ಟಲು ತೊಡಗುವುದಲ್ಲ, ಅವನ ಕಿವಿಗೆ ಬಿದ್ದ ಯಾವುದೊಂದು ಧಾಟಿ ಅವನನ್ನು ಆಕರ್ಷಿಸಿ, ಅವನಿಂದ ಆ ಧಾಟಿಯಲ್ಲೇ ನುಡಿಸುತ್ತದೆ. ಎಷ್ಟೋ ಸಲ ಕವಿಗೆ ತಾನು ಬರೆಯುವ ಪದ್ಯದ ಛಂದೋಲಕ್ಷಣಗಳ ಅರಿವೇ ಇರುವುದಿಲ್ಲ, ಇರಬೇಕಾಗಿಯೂ ಇಲ್ಲ. ಆದರೂ ಆ ಪದ್ಯವು ಲಕ್ಷಣಸಂಮತವಾಗಿಯೇ ಅವನ ಮನೋರಂಗದಲ್ಲಿ ನರ್ತಿಸಿ ಪ್ರಕಟ-ವಾಗುತ್ತದೆ. ಕಾರಣವೇನೆಂದರೆ, ಧಾಟಿಯೇ ಛಂದಸ್ಸಿನ ಜೀವಾಳ; ಅದರ ಸರ್ವಸ್ವವೆಂದರೂ ಸರಿ. ಇನ್ನೂ ಆಳಕ್ಕಿಳಿದು ಹೇಳುವುದಾದರೆ – ಧಾಟಿಯೇ ಛಂದಸ್ಸು. ಕವಿಗೆ ಪದ್ಯಲಕ್ಷಣವನ್ನು ತಿಳಿಸುವುದು ಛಂದೋಗ್ರಂಥವಲ್ಲ. ಅವನಿಗೆ 'ಪದ್ಯಂ ಪದ್ಯಸ್ಯ ಲಕ್ಷಣಂ'. ಎಂದರೆ ಯಾವುದೊಂದು ಪದ್ಯದ ಧಾಟಿ ಹಿಡಿದು ಅವನು ಕವಿತಾರಚನೆ ಮಾಡುತ್ತಾನೆ. ಛಂದಃಪ್ರತಿಭಾಶಾಲಿಯಾದ ಕವಿ ಹೊಸ ಧಾಟಿಯನ್ನು ನಿರ್ಮಿಸಿಕೊಳ್ಳುವುದೂ ಉಂಟು. ಗತಕಾಲದ ಧಾಟಿಗಳಲ್ಲಿ ಹೆಚ್ಚಿನ-ವುಗಳನ್ನು ನಿರ್ಮಿಸಿದವರು ಕವಿಗಳು, ಶಾಸ್ತ್ರಕಾರರಲ್ಲ; ಅವುಗಳ ಲಕ್ಷಣಗಳನ್ನು ವ್ಯಕ್ತಪಡಿಸಿದವರು ಶಾಸ್ತ್ರಕಾರರು. ಶಾಸ್ತ್ರಕಾರರೇ ನಿರ್ಮಿಸಿದ್ದೆಂಬಂತೆ ತೋರುವ ಆರಕ್ಷರಕ್ಕಿಂತ ಕಡಮೆಯ ಪಾದಗಳ ಲೌಕಿಕ ಸಮವೃತ್ತಗಳನ್ನು ಯಾವ ಮಹಾಕವಿ ಬಳಸಿದ್ದಾನೆ?

ಕವಿಸ್ವಭಾವ ನಿರೂಪಣೆಗಾಗಿ ಒಂದು ಸಮಕಾಲೀನ ದೃಷ್ಟಾಂತವನ್ನು ಕೊಡುತ್ತೇನೆ.

"ಬ್ರಮ್ಮ ನಿಂಗೆ ಜೋಡಿಸ್ತೀನಿ ಯೆಂಡ ಮುಟ್ಟಿದ್ ಕೈನ ॥ . ॥

ನರಕಕ್ಕಿಳಿಸಿ ನಾಲ್ಗೆ ಸೀಳ್ಸಿ ಮೂಗೊಲ್ಯಾಕಿದ್ರೂನೇ ।
ಮೂಗ್ನಲ್ ಕನ್ನಡ್ ಪದವಾಡ್ತೀನಿ ನನ್ ಮನ್ಸನ್ ನೀ ಕಾಣೆ" ॥ . ।

ಇದನ್ನು ರಚಿಸುವಾಗ ಈ ಕವಿಗೆ, ತಾನು ರಚಿಸುತ್ತಿರುವುದು ವಿಶುದ್ಧ-ಬ್ರಹ್ಮಗಣ ಘಟಿತವಾದ ಛಂದೋಬಂಧವೆಂಬುದರ ಕಲ್ಪನೆ ಇತ್ತೇ? – ಇಲ್ಲವೆಂದು ನಾನು ಹೇಳುತ್ತೇನೆ. ಧಾಟಿ ಹಿಡಿಯಲಾರದೆ, ಗಣಗಣನೆ ಮಾಡುತ್ತಾ ಪದ್ಯ ಬರೆಯುವವರು ಇಲ್ಲವೆಂದು ನಾನು ಹೇಳಲಾರೆ. ಇದ್ದಾರೆ. ಆದರೆ ಅವರನ್ನು ಕವಿಗಳೆನ್ನುವುದಕ್ಕಿಂತ ಪದ್ಯಶಿಲ್ಪಿಗಳೆಂದು ಕರೆಯುವುದು ಸೊಗಸು.[3]

ಹಾಡುವ ಅಥವಾ ಓದುವ ರೀತಿಯ ಎಂದರೆ ಪದ್ಯದ ಗತಿಯ ಬದಲಾವಣೆಯಿಂದ ಛಂದೋಬಂಧದಲ್ಲಾಗುವ ರೂಪಾಂತರಕ್ಕೆ ದಕ್ಷಿಣ ಕನ್ನಡದ, ಪ್ರಾಚೀನರಲ್ಲದ ಯಕ್ಷಗಾನ ಕವಿಗಳ ಕಂದಪದ್ಯಸ್ವರೂಪವು ಒಂದು ಸಾಕ್ಷಿ. ಉದಾಹರಣೆಯಾಗಿ ಮುದ್ದಣ ಕವಿಯ 'ಕುಮಾರವಿಜಯ'ದ ಕಂದಪದ್ಯವನ್ನು ನೋಡಿರಿ:–

ಬಿತ್ತರಿಸುವುದೇನುಪಟಳ–
ವಿತ್ತಸುರರ ದೂರುತಲಾ ತ್ರಿದಶರು ಭಯದಿಂ ॥
ಮೊತ್ತದೊಳುಂ ತಮ್ಮಾಳ್ದನ
ಹತ್ತಿರೆ ಬಂದೆರಗುತಲೆಂದರ್ ನಿಜಪರಿಯಂ ॥ . ॥

ಇದರಲ್ಲಿ ಗಣಸಂಖ್ಯೆ ಮಾತ್ರಾಸಂಖ್ಯೆಗಳೇನೋ ಸರಿಯಾಗಿದ್ದರೂ, ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಬಂದಿರುವ ಗಣದೋಷ ಮತ್ತು ಯತಿಭಂಗಗಳಿಗೆ ವಿವರಣೆ ಬೇಕಾಗಿಲ್ಲ. ಮುದ್ದಣನು ರಾಮಾಶ್ವಮೇಧದಲ್ಲಿ

---

3. ಧಾಟಿಯ ಗೊಡವೆಯಿಲ್ಲದೆ ಗಣಿತೈಕದೃಷ್ಟಿಯಿಂದ ಛಂದಸ್ಸನ್ನು ನೋಡುತ್ತಾ ಹೋಗುವುದರ ಪರಿಣಾಮವು ಏನಾಗುತ್ತದೆಂಬುದನ್ನು, ನಾನು ಇತ್ತೀಚೆ ನೋಡಿದ ಒಂದು ಲೇಖನವು ಸ್ಪಷ್ಟವಾಗಿ ತೋರಿಸುತ್ತದೆ. ಉತ್ಪಲಮಾಲಾದಿ ಆರು ವೃತ್ತಗಳು ಏಕೆ 'ಖ್ಯಾತಕರ್ಣಾಟಕ'-ಗಳಾದುವೆಂಬುದು ಲೇಖನದ ವಿಷಯ. ಆ ಆರು ವೃತ್ತಗಳನ್ನು, ಕನ್ನಡಕ್ಕೆ ಸಹಜವಾದ ಪಿರಿಯಕ್ಕರವನ್ನು ಹೇಗೋ ಹಾಗೆ, ಬ್ರಹ್ಮ ವಿಷ್ಣು ರುದ್ರಗಣಗಳಾಗಿ ವಿಭಜಿಸುವುದಕ್ಕೆ ಬರು-ವುದೇ ಇದಕ್ಕೆ ಕಾರಣವೆಂದು ಲೇಖಕರು ಹೇಳುತ್ತಾರೆ. ಪಿರಿಯಕ್ಕರದ ಧಾಟಿಯನ್ನು ಆ ಆರು ವೃತ್ತಗಳೊಳಗೆ ಯಾವುದೊಂದರ ಧಾಟಿಯೊಡನೆ ಕಿಂಚಿತ್ತಾದರೂ ಹೋಲಿಸುವ ಪ್ರಯತ್ನಕ್ಕೆ ಅವರು ಹೋಗಿದ್ದರೆ, ಹಾಗೆ ಹೇಳಲು ಅವರಿಗೆ ಸರ್ವಥಾ ಸಾಧ್ಯವಾಗುತ್ತಿರಲಿಲ್ಲ. ಛಂದೋಂಬುಧಿಯಲ್ಲಿ ಲಕ್ಷಣನಿರೂಪಣೆ ಮಾಡಿದ ೧೪೬ ಸಮವೃತ್ತಗಳೊಳಗೆ ೧೨೫ ವೃತ್ತಗಳನ್ನು ಬ್ರಹ್ಮ ವಿಷ್ಣು ರುದ್ರಗಳಾಗಿ ವಿಂಗಡಿಸುವುದಕ್ಕೆ ಬರುತ್ತದೆ. ಲೇಖಕರ ಅಭಿಪ್ರಾಯ ಸಾಧುವಾಗಿದ್ದಿದ್ದರೆ, ಕೇವಲ ಆರಲ್ಲ, ೧೨೫ ವೃತ್ತಗಳು 'ಖ್ಯಾತಕರ್ಣಾಟಕ'ಗಳಾಗಿ ನಮ್ಮ ಕಾವ್ಯಗಳನ್ನು ಅಲಂಕರಿಸುತ್ತಿದ್ದವು!

ಅಲ್ಲಲ್ಲಿ ವ್ಯಕ್ತವಾಗಿ ಕೆಲವೆಡೆಗಳಲ್ಲಿ ಗುಪ್ತವಾಗಿ ಅಳವಡಿಸಿದ ಕಂದಪದ್ಯಗಳೊಳಗೆ ಒಂದು ಸಹ ಇಂತಹ ಲಕ್ಷಣವಿರುದ್ಧರೂಪವನ್ನು ಪಡೆದಿಲ್ಲ. ಅವನ ಯಕ್ಷಗಾನದಲ್ಲಿ ಮಾತ್ರ ಲಕ್ಷಣಸಂಮತವಾದ ಕಂದಪದ್ಯ ದುರ್ಲಭ! ಹೀಗಾಗಲು ಕಾರಣವೇನೆಂದರೆ, ದಕ್ಷಿಣ ಕನ್ನಡದ ಯಕ್ಷಗಾನ ಭಾಗವತರು ಕಂದಪದ್ಯವನ್ನು ಹಾಡುವ ರೀತಿ, ಅದು ಮುದ್ದಣನಂತಹ ವಿದ್ವತ್ಕವಿಯಿಂದಲೂ ಕಂದಪದ್ಯಕ್ಕೆ ಈ ರೂಪವನ್ನು ಕೊಡಿಸಿತು. ಯಕ್ಷಗಾನ ಭಾಗವತರು ಕಂದಪದ್ಯದ ಪ್ರತಿಯೊಂದು ಗಣದ ಆದಿಯ ಅಕ್ಷರದ ಮೇಲೆ ಸ್ವರ ಘಾತ ಹಾಕಿ ಮಾಲಾಕಾರವಾಗಿ ಹಾಡು-ವುದು ಸಂಪ್ರದಾಯವಾಗಿ ಬಂದಿದೆ. ಈ ಪದ್ಧತಿಯಲ್ಲಿ ಹಾಡುವಾಗ ಯಾವ ಗಣವಾದರೂ 'ಜಗಣ' ರೂಪದಲ್ಲಿದ್ದರೆ, ಹಾಗೂ ಒಂಬತ್ತನೆ ಮಾತ್ರೆಯಲ್ಲಿ ಯತಿ ಇದ್ದರೆ, ಅಲ್ಲಿ ಧಾಟಿ ಮುಗ್ಗರಿಸುತ್ತದೆ. ಈ ಕಾರಣದಿಂದ, ಪಾರ್ತಿಸುಬ್ಬ ಮೊದಲಾದ ಹಳೆಯ ಕವಿಗಳ ಯಕ್ಷಗಾನಗಳಲ್ಲಿ ಹೊರತು, ಅನಂತರ ಕಾಲದವರ ಯಕ್ಷಗಾನದ ಕಂದಪದ್ಯಗಳಲ್ಲಿ ಸಾಮಾನ್ಯವಾಗಿ ಎಲ್ಲಿಯೂ 'ಜಗಣ' ಇರುವುದಿಲ್ಲ, ಮತ್ತು ಒಂಬತ್ತನೆಯ ಮಾತ್ರೆಯಲ್ಲಿ ಯತಿಯೂ ಕಾಣುವುದಿಲ್ಲ. ಮುದ್ದಣನು ಈ ಹಾಡುಗಾರಿಕೆಯ ಧಾಟಿಯನ್ನನುಕರಿಸಿ ತನ್ನ ಯಕ್ಷಗಾನದಲ್ಲಿ ಕಂದಪದ್ಯ ರಚನೆ ಮಾಡಿದ್ದರಿಂದ ಅವಕ್ಕೂ ಆ ರೂಪ ಬರುವಂತಾಯಿತು. ಇದನ್ನು ಪರಿಭಾವಿಸಿದರೆ, ಹಾಡುವ ರೀತಿಯಿಂದ ಛಂದೋರೂಪಗಳ ಮೇಲಾಗುವ ಪರಿಣಾಮವೆಷ್ಟೆಂಬುದು ವಿಶದವಾಗದಿರದು; ಹಾಗೂ ಸರ್ವಜ್ಞನ ತ್ರಿಪದಿಗಳಲ್ಲಿ ನಾನಾ ಪಾಠಭೇದಗಳಾಗುವುದಕ್ಕೆ ಮುಖ್ಯ ಕಾರಣವು ಹಾಡುವ ರೀತಿ ಬೇರೆ ಬೇರಾದುದೆಂಬುದೂ ಮನವರಿಕೆಯಾಗದಿರದು.

ನಾಗವರ್ಮ ಜಯಕೀರ್ತಿಗಳ ಗ್ರಂಥಗಳಲ್ಲಿ ನಿರೂಪಿತವಾಗಿರದಿದ್ದರೂ, ವಿಶುದ್ಧ ತ್ರಿಮೂರ್ತಿಗಣಘಟಿತವೇ ಆಗಿರುವ ಸಾಂಗತ್ಯ ಎಂಬ ಒಂದು ಛಂದೋಬಂಧದ ವಾಚನಸಂಪ್ರದಾಯವು ಈಗಲೂ ಪ್ರಚಲಿತವಾಗಿದೆ. ನಮ್ಮ ಪುರಾತನ ಛಂದೋಬಂಧಗಳ ಧಾಟಿಯನ್ನು ತಿಳಿದುಕೊಳ್ಳುವುದಕ್ಕೆ ವಿಶ್ವಸನೀಯವಾದ ಈ ಒಂದು ಸಾಧನವಾದರೂ ಉಳಿದಿರುವುದು ಸುದೈವವೆನ್ನಬೇಕು. ಸಾಂಗತ್ಯದಲ್ಲಿ ಕಥನಪ್ರಧಾನವಾದ ದೊಡ್ಡ ದೊಡ್ಡ ಕಾವ್ಯಗಳೂ ಧಾರ್ಮಿಕ ಗ್ರಂಥಗಳೂ ನಿರ್ಮಿತವಾಗಿರುವುದರಿಂದ ಇದನ್ನು ವಿಲಂಬಿತವಾಗಿ ಹಾಡದೆ ಮಧ್ಯಮಕಾಲದಲ್ಲಿ ಓದುವುದೇ ಹೆಚ್ಚು ರೂಢವಾಗಿರುವುದು ಧಾಟಿಯ ಸಹಜಸ್ವರೂಪವನ್ನು ತಿಳಿಯುವುದಕ್ಕೆ ಬಹಳ ಅನುಕೂಲವಾಗಿದೆ. ಇದರ ವಾಚನದಲ್ಲಿ ಎರಡು ರೀತಿಗಳು ಗೋಚರಿಸುತ್ತವೆ: ಘಟ್ಟದ ಕೆಳಗೆ ಒಂದು ರೀತಿ, ಘಟ್ಟದ ಮೇಲೆ ಬಯಲು ಸೀಮೆಯಲ್ಲಿ ಇನ್ನೊಂದು ರೀತಿ. ಘಟ್ಟದ ಕೆಳಗೆ ಇದನ್ನು ಆರು-ಮಾತ್ರೆಗಳ ನಡೆಯಲ್ಲಿ – ಕರ್ಣಾಟಕಸಂಗೀತದ ರೂಪಕತಾಳದ ನಡೆಯಲ್ಲಿ ಓದುತ್ತಾರೆ. ಬಯಲು ಸೀಮೆಯಲ್ಲಿ ಒಂದಿಷ್ಟು ದ್ರುತಕಾಲದ ಏಳು ಮಾತ್ರೆಗಳಲ್ಲಿ

ನಡೆಯಲ್ಲಿ ಓದುತ್ತಾರೆ.[4] ಈ ನಡೆಯನ್ನು ಸಂಗೀತಜ್ಞರು ಮೂರೂವರೆ ಮಾತ್ರೆಗಳ ನಡೆ ಎಂದು ವ್ಯವಹರಿಸುವುದೂ ಉಂಟು. ಪ್ರಚಲಿತವಾದ ಸಂಗೀತ ಪರಿಭಾಷೆ-ಯಲ್ಲಿ ಇದು 'ಮಿಶ್ರಛಾಪು ತಾಳ'ದ ನಡೆ ಎನಿಸಿಕೊಳ್ಳುತ್ತದೆ. ಯಕ್ಷಗಾನದಲ್ಲಿ ಇದನ್ನು 'ಅಷ್ಟತಾಳ'ದ ನಡೆ ಎನ್ನುತ್ತಾರೆ. ಈಗ ಲಕ್ಷಣನಿರೂಪಣೆಗಾಗಿ, ಸಾಂಗತ್ಯ-ಕಾವ್ಯಶಿರೋಮಣಿಯಾದ ಭರತೇಶವೈಭವದ ಮೊತ್ತಮೊದಲ ಪದ್ಯವನ್ನೆತ್ತಿ-ಕೊಳ್ಳೋಣ:-

ಪರಮಪ । ರಂಜ್ಯೋತಿ । ಕೋಟಿ ಚಂ । ದ್ರಾದಿತ್ಯ ।
ಕಿರಣಸು । ಜ್ಞಾನಪ್ರ । ಕಾಶ ॥
ಸುರರ ಮ । ಕುಟಮಣಿ । ರಂಜಿತ । ಚರಣಾಬ್ಜ ।
ಶರಣಾಗು । ಪ್ರಥಮಜಿ । ನೇಶ ॥ . ॥

ಇದರ ಗಣವಾಚಕಗಳು ಹೀಗೆ :-

ಮುರರಿಪು । ಕಂಸಾರಿ । ಮಾಧವಂ । ಕಂಸಾರಿ ।
ಸ್ಮರಪಿತಂ । ಕಂಸಾರಿ । ಧಾತೃ ॥
ಮುರರಿಪು । ಮುರರಿಪು । ಶ್ರೀಪತಿ । ನರಕಾರಿ ।
ನರಕಾರಿ । ಮುರರಿಪು । ಧಾತೃ ॥ . ॥

ಪದ್ಯಾರ್ಧದ ಮೊದಲನೆಯ ಪಾದದಲ್ಲಿ ನಾಲ್ಕು ವಿಷ್ಣುಗಣಗಳು; ಎರಡನೆಯ ಪಾದದಲ್ಲಿ ಎರಡು ವಿಷ್ಣು ಗಣಗಳು ಮತ್ತು ಒಂದು ಬ್ರಹ್ಮಗಣ. ಉತ್ತರಾರ್ಧವೂ ಇದೇ ಪ್ರಕಾರವಾಗಿದೆ. ಘಟ್ಟದ ಕೆಳಗಿನ ಸಂಪ್ರದಾಯದಂತೆ ಓದುವಾಗ ಇದು ಕಿವಿಗೆ ಹೀಗೆ ಬೀಳುತ್ತದೆ:

ಪರಮಾಪಾ । ರಂಜ್ಯೋತೀ । ಕೋಟೀಚಂ । ದ್ರಾದಿತ್ಯ ।
ಕಿರಣಾಸು । ಜ್ಞಾನಾಪ್ರಾ । ಕಾಶಾ- ॥
ಸುರರಾಮಾ । ಕುಟಮಾಣೀ । ರಂಜೀತಾ । ಚರಣಾಬ್ಜಾ ।
ಶರಣಾಗೂ । ಪ್ರಥಮಾಜೀ । ನೇಶಾ- ॥ . ॥

ಹೀಗೆ ಓದುವಾಗ ಗಣಾಕ್ಷರಗಳು ಪಡೆಯುವ ಮಾತ್ರಾಸಂಖ್ಯೆಗಳಿಂದ ಇದರ ನಡೆ ಆರು ಮಾತ್ರೆಗಳದೆಂಬುದು ಸ್ಪಷ್ಟವಾಗುತ್ತದೆ.

ಬಯಲು ಸೀಮೆಯ ಸಂಪ್ರದಾಯ ಹೀಗೆ:-

---

4. ದಕ್ಷಿಣ ಕನ್ನಡದ ಉತ್ತರಭಾಗದಲ್ಲಿ ಸಾಂಗತ್ಯಕ್ಕೆ ಈ ನಡೆಯೂ ಇದೆಯೆಂದು ತಿಳಿದುಬರುತ್ತದೆ.

ಪರ . ಮಾಪಾ ।ರಂ. ಜ್ಯೋತೀ । ಕೋ. ಟೀಚಂ । ದ್ರಾ. ದಿತ್ಯಾ ।

ಕಿರ . ಣಾಸು । ಜ್ಞಾ . ನಪ್ರಾ । ಕಾ . ಶಾ– ॥

ಸುರ . ರಾಮಾ । ಕುಟ . ಮಾಣೀ । ರಂ . ಜೀತಾ । ಚರ . ಣಾಬ್ಜಾ ।

ಶರ . ಣಾಗೂ । ಪ್ರಥ . ಮಾಜೀ । ನೇ . ಶಾ– ॥

ಹೀಗೆ ಓದುವಾಗಲೂ ಪದ್ಯದ ಅಕ್ಷರಗಳು ಪಡೆಯುವ ಮಾತ್ರಾ-ಸಂಖ್ಯೆಗಳು ಮೊದಲಿನದರಷ್ಟೇ ಆಗುವವಾದರೂ, ಆವರ್ತದ ಮೊದಲ ಎರಡು ಮಾತ್ರೆಗಳ ಅನಂತರ ಒಂದು ಮಾತ್ರಾಕಾಲದಷ್ಟು ವಿರಮಿಸಿ ಮುಂದಿನ ಅಕ್ಷರೋಚ್ಚಾರವಾಗುವ ಮೂಲಕ ಏಳು ಮಾತ್ರೆಗಳ ನಡೆ ಉಂಟಾಗುತ್ತದೆ. ಈ ವಾಚನಸಂಪ್ರದಾಯದಲ್ಲಿ ಅಕ್ಷರಗಳು ಒಂದಿಷ್ಟು ದ್ರುತಗತಿಯಲ್ಲಿ ಕ್ರಮಿಸುವುದ-ರಿಂದ ಇದರಲ್ಲಿ ಕಿವಿಗೆ ಬೀಳುವ ಗುರೂಚ್ಚಾರಗಳು, ನಾವು ಗದ್ಯವನ್ನೋದುವಾಗ ಸಾಮಾನ್ಯವಾಗಿ ಉಚ್ಚರಿಸುವ ಲಘುಕಾಲಕ್ಕಿಂತ ದ್ವಿಗುಣವಾಗಿರದೆ ಸ್ವಲ್ಪ ಮಾತ್ರ ಅಧಿಕವಾಗುವ ಕಾರಣ, ಅವು ಲಘುಗಳೋ ಎಂಬಂತೆ ಭಾಸವಾಗುತ್ತವೆ – ಬಂಗಾಳೀ ಪದ್ಯಗಳಲ್ಲಿ ಬಹುಧಾ ಹ್ರಸ್ವದೀರ್ಘಗಳು ಸಮಕಾಲದಲ್ಲಿ ಉಚ್ಚರಿಸ-ಲ್ಪಡುವಾಗ ಹೇಗೋ ಹಾಗೆ. ಉದಾ: "ಝುರಿಛೇ । ಮುಕುಲ । ಕೂಜಿಛೇ । ಕೋಕಿಲ । ಯಾಮಿನೀ । ಜೋಛನಾ । ಮತ್ತಾ" (ಕವೀಂದ್ರ ರವೀಂದ್ರರ ಒಂದು ಕಥನ ಕಾವ್ಯದಿಂದ) ಹೀಗೆ ಗುರು ಕುಬ್ಜೀಕೃತವಾದಾಗ, ಅದರ ಅರ್ಧದಷ್ಟಿರುವ ವಿರಾಮಕಾಲವಂತೂ ಸೂಕ್ಷ್ಮವಾದ ಪರೀಕ್ಷೆಗೆ ಮಾತ್ರ ಗೋಚರವಾಗಬಲ್ಲುದಾಗು-ತ್ತದೆ. ಕುಬ್ಜೀಕೃತ ಗುರೂಚ್ಚಾರಕಾಲವನ್ನು ಎರಡು ಮಾತ್ರಾಕಾಲವೆನ್ನದೆ ಒಂದು ಮಾತ್ರಾಕಾಲವೆಂದು ಲೆಕ್ಕಿಸಿದರೆ, ಇಲ್ಲಿ ಬರುವ ಲಘುಗಳೂ ಲಘುತುಲ್ಯವಾದ ವಿರಾಮವೂ ಅರ್ಧಮಾತ್ರೆಯವೆಂದಾಗುವುದರಿಂದ, ಈ ಒಂದು ಆವರ್ತಕ್ಕೆ ಮೂರೂವರೆ ಮಾತ್ರೆಗಳೆಂದೂ ವ್ಯವಹಾರವಿರುತ್ತದೆ. ಮಾತ್ರಾಕಾಲವೆಂಬುದು ಮಿನಿಟು ಸೆಕುಂದಗಳಂತೆ ಸ್ಥಿರವಾದೊಂದು ಕಾಲಪ್ರಮಾಣವಲ್ಲ; ಸಾಪೇಕ್ಷಪ್ರಮಾಣ. ಲಘುವಿಗೆ ಒಂದು ಮಾತ್ರೆ ಎಂದಿಟ್ಟುಕೊಂಡಾಗ ಗುರುವಿಗೆ ಎರಡು ಮಾತ್ರೆ; ಗುರುವಿಗೆ ಒಂದು ಮಾತ್ರೆ ಎಂದಿಟ್ಟುಕೊಂಡರೆ ಲಘುವಿಗೆ ಅರ್ಧಮಾತ್ರೆ-ಯಾಗುತ್ತದೆ.

ಸಾಂಗತ್ಯದಲ್ಲಿ ಸಮಪಾದಗಳ ಕೊನೆಯ ಒಂದು ಗಣ ಮಾತ್ರ ಬ್ರಹ್ಮವಾಗಿರುತ್ತದೆ; ಉಳಿದೆಲ್ಲವೂ ವಿಷ್ಣುಗಣಗಳೇ. ಆದರೂ ಕವಿಗಳು ವೈಕಲ್ಪಿಕ-ವಾಗಿ ಅಲ್ಲಲ್ಲಿ ವಿಷ್ಣುಗಣಸ್ಥಾನದಲ್ಲಿ ಬ್ರಹ್ಮವನ್ನು ಬಳಸುವುದುಂಟು. ಅದನ್ನು ಓದುವಾಗ, ಘಟ್ಟದ ಕೆಳಗಣ ಹಾಗೂ ಮೇಗಣ ಸಂಪ್ರದಾಯಗಳೆರಡರಲ್ಲಿಯೂ, ಆ ಬ್ರಹ್ಮಗಣಗಳ ಕೊನೆಯನ್ನು ವಿಕರ್ಷಿಸಿ ವಿಷ್ಣುಗಣೋಚ್ಚಾರ ಕಾಲಕ್ಕೆ ಸಮ

ಮಾಡಿಕೊಂಡು ಓದುತ್ತಾರೆ. ಉದಾ:-

ವಿ. ವಿ. ಬ್ರ. ವಿ.
ಕುವರನಾ । ದೊಡೆ ಬಂದ । ಗುಣವೇ- । ನದರಿಂದ ।
ವಿ. ಬ್ರ. ಬ್ರ
ಕುವರಿಯಾ । ದೊಡೆ ಕುಂ- । ದೇನು- ॥
ಬ್ರ ಬ್ರ ವಿ. ವಿ.
ಇವರಿರ್- । ವರೊಳೇ- । ಳಿಗೆವಡೆ । ದವರಿಂದೆ ।
ವಿ. ವಿ. ಬ್ರ.
ಸವನಿಪು । ದಿಹಪರ । ಸೌಖ್ಯ- ॥ . ॥ (ಹದಿಬದೆಯ ಧರ್ಮ)

ಸಾಂಗತ್ಯದ ಧಾಟಿಗೆ ವಿಷ್ಣುಗಣವೇ ಆಧಾರವೆಂಬುದು ಇದರಿಂದ ನಿಸ್ಸಂ-ದಿಗ್ಧವಾಗಿ ತಿಳಿಯುತ್ತದೆ. ಸಾಂಗತ್ಯದ ಧಾಟಿಯ ಪರಿಚಯ ಮಾಡಿಕೊಂಡಾಗ ವಾಚನದಲ್ಲಿ ವಿಷ್ಣುಗಣಗಳು ಪಡೆಯುವ ರೂಪಗಳೇನೆಂಬುದೂ ನಮಗೆ ಖಚಿತವಾಗಿ ತಿಳಿಯುತ್ತದೆ. ಅಕ್ಷರರೂಪದಲ್ಲಿ ಎಂಟು ವಿಧವಾಗಿರುವ ವಿಷ್ಣುಗಣ-ಗಳಲ್ಲಿ ಯಾವ ಗಣವೇ ಆಗಿರಲಿ, ವಾಚನದಲ್ಲಿ ಅದು ಪಡೆಯುವ ರೂಪ ಗೋವಿಂದಂ ಮತ್ತು ಜಲಜಾಕ್ಷಂ ಎಂಬ ಎರಡರೊಳಗೆ ಒಂದರ ಪ್ರತಿಬಿಂಬ ಎಂಬುದನ್ನು ಮೇಲೆ ನಿರೂಪಿಸಿದ ಸಾಂಗತ್ಯದ ಎರಡು ರೀತಿಯ ವಾಚನ-ಸಂಪ್ರದಾಯಗಳೂ ಸಂದೇಹಕ್ಕೆಡೆಯಿಲ್ಲದಂತೆ ತೋರಿಸಿಕೊಡುತ್ತವೆ. ವಿಷ್ಣುಗಣದಲ್ಲಿ ಆದ್ಯಕ್ಷರವು ಗುರುವಾಗಿದ್ದರೆ – ಮುಂದೆ ಹೇಗಿದ್ದರೂ – ಅದರಲ್ಲಿ ಮೂರೇ ಅಕ್ಷರಗಳಿರುತ್ತವೆ; ಆದಿಯಲ್ಲಿ ಎರಡು ಲಘುಗಳಾಗಿದ್ದರೆ – ಮುಂದೆ ಹೇಗಿದ್ದರೂ – ಅದರಲ್ಲಿ ನಾಲ್ಕು ಅಕ್ಷರಗಳಿರುತ್ತವೆ. ವಾಚನದಲ್ಲಿ, ಮೂರಕ್ಷರದ ಯಾವ ಗಣ-ವಾದರೂ ಗೋವಿಂದಂ ಎಂಬಂತಿರುವ ರೂಪವನ್ನೇ ಪಡೆಯುತ್ತದೆ; ನಾಲ್ಕಕ್ಷರ ಯಾವ ಗಣವಾದರೂ ಜಲಜಾಕ್ಷಂ ಎಂಬಂತಿರುವ ರೂಪವನ್ನೇ ಪಡೆಯುತ್ತದೆ. ತಮಿಳು ಬಂಧಗಳ ವಾಚನವಿಧಾನವನ್ನು ನಿರೂಪಿಸುವುದಕ್ಕಾಗಿ ನಿರ್ಮಿತವಾಗಿ-ರುವ ತೇಮಾ ಪುಳಿಮಾದಿಗಳ ಹೋಲಿಕೆಯಿಂದ ಹೇಳುವುದಾದರೆ, ವಿಷ್ಣುಗಣಗಳ ವಾಚನಸ್ವರೂಪನಿದರ್ಶನ ಮಾಡುವ ಗಣವಾಚಕಗಳು, ಗೋವಿಂದಂ ಮತ್ತು ಜಲಜಾಕ್ಷಂ ಎಂಬ ಎರಡೇ ಎರಡು ಎನ್ನಬೇಕು. ಸಾಂಗತ್ಯದ ವಾಚನ ಸಂಪ್ರ-ದಾಯಗಳು ನಮಗೆ ತೆರೆದು ತೋರಿಸುವ ರಹಸ್ಯವೇನೆಂದರೆ – ಗಣದಾದಿಯಲ್ಲಿ ಗುರ್ವಕ್ಷರವಿದ್ದರೆ ಮುಂದೆ ಹೇಗಿದ್ದರೂ ಆ ಗಣದ ಅಕ್ಷರಗಳನ್ನೆಲ್ಲ ಗುರುವತ್ ಉಚ್ಚರಿಸಿ ಓದಬೇಕು; ಗಣದಾದಿಯಲ್ಲಿ ಇರುವ ಲಘುದ್ವಯವನ್ನು ಮಾತ್ರ ಲಘುಗಳೇ ಆಗಿ ಉಚ್ಚರಿಸಿ ಓದಬೇಕು – ಎಂಬುದಾಗಿರುತ್ತದೆ. ಗಣದಾದಿಯಲ್ಲಿ ಒಂಟಿ ಲಘು ಇರುವುದೇ ಇಲ್ಲವಾದುದರಿಂದ ಹಾಗೂ ಮುಂದೆ ಬರುವ ಲಘುಗಳೆಲ್ಲ ಗುರೂಚ್ಚಾರಗಳನ್ನು ಪಡೆಯುವುದರಿಂದ ಕನ್ನಡ ಜಾತಿ ಛಂದೋ

ವಿಧಾನದಲ್ಲಿಯೂ ಲಘುವಿಗೆ ಸ್ವಾತಂತ್ರ್ಯವಿಲ್ಲವೆಂಬುದು ವ್ಯಕ್ತವಾಗುತ್ತದೆ. ಇದ-ರಿಂದ ತಮಿಳಿನಲ್ಲಿ ಹೇಗೋ ಹಾಗೆ, ಇಲ್ಲಿಯೂ ಮೂಲಮಾನವು ಒಂದು ಗುರುವೇ ಆಗಿತ್ತೆಂಬುದು ಸ್ಪಷ್ಟ.

ಸಾಂಗತ್ಯವು ಹೇಗೋ ಹಾಗೆಯೇ, ಪಿರಿಯಕ್ಕರ ಮೊದಲಾದ ಐದು ಅಕ್ಕರಗಳೂ ಏಳೆಯೂ ಷಟ್ಪದಿಕೆಯೂ ವಿಷ್ಣುಗಣಪ್ರಧಾನವಾದ ಬಂಧಗಳೇ ಆಗಿರುವ ಕಾರಣ, ಅವೆಲ್ಲವುಗಳ ಧಾಟಿಯೂ ನಮಗೀಗ ಹಸ್ತಗತವಾದ ಹಾಗಾ-ಯಿತು. ತ್ರಿಪದಿಯೂ ವಿಷ್ಣುಗಣಪ್ರಧಾನವಾಗಿದ್ದು, ಏಳೆ ತ್ರಿಪದಿಗಳು ಏಕೋದರ-ಗಳೆಂಬದನ್ನು ಜಯಕೀರ್ತಿಯೇ ಹೇಳುತ್ತಾನೆ. ತ್ರಿಪದಿಗೆ ಪ್ರಚಲಿತವಾಗಿರುವ ನಾನಾಧಾಟಿಗಳಲ್ಲಿ ಮೂಲಧಾಟಿ ಯಾವುವೆಂಬುದು (ಆರು ಮಾತ್ರೆಗಳ ಅಥವಾ ಏಳು ಮಾತ್ರೆಗಳ ನಡೆ) ಇದರಿಂದ ನಿಶ್ಚಿತವಾದಂತಾಯಿತು. ಸಾಂಗತ್ಯದ ವಿಷ್ಣು-ಸ್ಥಾನಗಳಲ್ಲಿ ವೈಕಲ್ಪಿಕವಾಗಿ ಬರುವ ಬ್ರಹ್ಮಗಣಗಳನ್ನು ವಿಷ್ಣುವತ್ ವಿಸ್ತರಿಸಿ ಓದುವ ಸಂಪ್ರದಾಯ ತಿಳಿದುಬಂದುದರಿಂದ, ವಿಷ್ಣುಪ್ರಧಾನವೇ ಆದ ಅಕ್ಕರಗಳೆಂಬವು-ಗಳಲ್ಲಿ (ನಿಯತ ಅಥವಾ ವೈಕಲ್ಪಿಕವಾಗಿ) ಬರುವ ಬ್ರಹ್ಮಗಣಗಳನ್ನು ವಿಷ್ಣುವತ್ ಓದಬೇಕೆಂಬುದೂ ಗೊತ್ತಾದ ಹಾಗಾಯಿತು. ಏಳೆತ್ರಿಪದಿಗಳಲ್ಲಿ ನಿಯತವಾಗಿ ಮಾತ್ರ ಬ್ರಹ್ಮಗಣವಿರುತ್ತದೆ; ವೈಕಲ್ಪಿಕವಾಗಿ ಬರುವುದೆಂಬುದಕ್ಕೆ ಆಧಾರವಿಲ್ಲ. ಆದರೆ ತ್ರಿಪದಿಯನ್ನು ಹಾಡುವ ಪ್ರಚಲಿತ ಧಾಟಿಗಳಲ್ಲೆಲ್ಲ, ಅಲ್ಲಿ ಬರುವ ಬ್ರಹ್ಮ ಗಣಗಳನ್ನು ವಿಷ್ಣುಗಣದಷ್ಟೇ ವಿಕರ್ಷಿಸುವ ಸಂಪ್ರದಾಯವು ನಿರಪವಾದವಾಗಿ ಕಂಡುಬರುವುದರಿಂದ, ಬ್ರಹ್ಮಗಣವಿಕರ್ಷಣವು ತ್ರಿಪದಿಗೆ ಹೇಗೋ ಹಾಗೆ, ಅದರ ಸೋದರಬಂಧವಾದ ಏಳೆಗೂ ಅನ್ವಯಿಸುತ್ತದೆಂದು ಅವಗತವಾದಂತಾಯಿತು. (ಷಟ್ಪದಿಕೆ ಎಂಬ ವಿಷ್ಣುಪ್ರಧಾನ ಬಂಧದಲ್ಲಿ ಬ್ರಹ್ಮಗಣ ಬರುವ ನಿದರ್ಶನವಿಲ್ಲವಾದ ಕಾರಣ ಅಲ್ಲಿ ಈ ಸಮಸ್ಯೆ ಹುಟ್ಟುವುದಿಲ್ಲ.)

ಏಳೆತ್ರಿಪದಿಗಳು ಏಕೋದರಗಳಾದರೆ, ಏಳೆಯೂ ಸಾಂಗತ್ಯವೂ ಅಭಿನ್ನವೋ ಎಂಬಂತಿವೆ. ಏಳೆಯ ಆರನೇ ಏಳನೇ ಗಣಗಳನ್ನು ಅದಲು ಬದಲು ಮಾಡಿದರೆ ಸಾಂಗತ್ಯದ ಅರ್ಧವಾಗುತ್ತದೆ. ಜಲಜಾಕ್ಷಂ, ಮಾಧವಂ, ನರಕಾರಿ, ಶ್ರೀಪತಿ – ಇವು ಹೊರತು ಇತರ ಯಾವುದಾದರೊಂದು ವಿಷ್ಣುಗಣವು ಏಳೆಯ ಏಳನೆಯ ಗಣವಾಗಿರುವ ಪಕ್ಷದಲ್ಲಿ, ಅದರ ಪ್ರಥಮಾಕ್ಷರವನ್ನು ಆರನೆಯ ಗಣಕ್ಕೆ ಸೇರಿಸಿ-ದೊಡನೆ (ಯತಿಭಂಗವಾಗದ ಸಂದರ್ಭಗಳಲ್ಲೆಲ್ಲ) ಅದು ಸಾಂಗತ್ಯ ಸ್ವರೂಪ-ವನ್ನು ಪಡೆಯುತ್ತದೆ. ಛಂದೋಗ್ರಂಥಗಳಲ್ಲಿ ಹೊರತು ಬೇರೆ ಯಾವ ಪುರಾತನ ಗ್ರಂಥದಲ್ಲಿಯೂ ಏಳೆ ನಮಗೆ ಉಪಲಬ್ಧವಾಗಿರುವುದಿಲ್ಲ. ಆದುದರಿಂದ ನಿದರ್ಶನಕ್ಕಾಗಿ ಜಯಕೀರ್ತಿಯ ಲಕ್ಷ್ಯಲಕ್ಷಣಸಮವಾಯವಾದ ಏಳೆಯನ್ನೇ ಎತ್ತಿಕೊಳ್ಳೋಣ:–

ವಿ. ವಿ. ವಿ. ವಿ.

ತ್ರಿಪದೀ ತ್ರ । ತೀಯಾಂಘ್ರಾ । ವಪಮುಂಚ । ತ್ಯೇಲೇತಿ ।

ವಿ. ಬ್ರ ವಿ.
ಸುಪಠಿತಾ । ಗೇಯ । ವಿದಜನ್ಯೈಃ ॥ . ॥
ವಿ. ಬ್ರ

ಇದರ ಕೊನೆಯ ಭಾಗವನ್ನು ಗೇಯವಿ । ದಜನ್ಯೈಃ । ಎಂದು ವಿಭಜಿಸಿದರೆ ಈ ಪದ್ಯವು ಅರ್ಧಸಾಂಗತ್ಯವಾಗುತ್ತದೆ. (ಈ ಪದ್ಯದಲ್ಲಿ ಹೀಗೆ ಮಾಡುವಾಗ ಯತಿಭಂಗವಾಗುತ್ತದೆ. ಶುದ್ಧರೂಪದ ಪುರಾತನ ಏಳೆ ಬೇರೆ ದುರ್ಲಭವಾದುದರಿಂದ, ನಿದರ್ಶನಸೌಕರ್ಯಕ್ಕಾಗಿ ಹೀಗೆ ಮಾಡಬೇಕಾಯಿತು.) ಸಾಂಗತ್ಯ ಎಂಬ ಶಬ್ದಕ್ಕೆ 'ಒಡಗೂಡಿರುವಿಕೆ' ಎಂದು ಅರ್ಥ. ಈ ಛಂದೋ-ಬಂಧಕ್ಕೆ 'ಸಂಗತಿ' ಎಂಬ ಹೆಸರೂ ಕಂಡು ಬರುತ್ತದೆ. ಈ ಎರಡು ಹೆಸರುಗಳ ಅಭಿಪ್ರಾಯವೂ ಒಂದೇ ಆಗಿದೆ. ಎರಡು ಏಳೆಗಳ 'ಒಕ್ಕೂಟ' ಎಂಬ ಕಾರಣದಿಂದಲೇ ಇದಕ್ಕೆ ಈ ಹೆಸರುಗಳು ಬಂದಿರಬೇಕೆಂದು ನನಗೆ ತೋರುತ್ತದೆ. ಏಳೆ ಎಂಬುದು ಮತಂಗಾದಿಗಳ ಕಾಲದಿಂದ ಶಾರ್ಙ್ಗದೇವನ ಕಾಲದವರೆಗೂ ಅತ್ಯಂತಪ್ರಸಿದ್ಧವಾದ ಗೇಯಬಂಧವಾಗಿತ್ತೆಂದು ಅವರ ಗ್ರಂಥಗಳಿಂದ ತಿಳಿಯುತ್ತದೆ. ಈ ಅಭಿಪ್ರಾಯವನ್ನು ಜಯಕೀರ್ತಿಯ "...ಸುಪಠಿತಾ ಗೇಯವಿದಜನ್ಯೈಃ" ಎಂಬ ಮಾತೂ ಪುಷ್ಟೀಕರಿಸುತ್ತದೆ. ಇದು ಬಹಳ ಕಿರಿದಾದ ಪದ್ಯವಾದುದರಿಂದ ಕಥನಕ್ಕೆ ಅಷ್ಟೊಂದು ಉಪಯುಕ್ತವಲ್ಲ. ಅದಕ್ಕಾಗಿ ಎರಡು ಏಳೆಗಳ 'ಸಾಂಗತ್ಯ'ವನ್ನು ಮಾಡಿಕೊಂಡು, ಅರ್ಧಸಮಪದ್ಯಗಳ ಸಹಜಲಕ್ಷಣವಾದ ಪದ್ಯಾರ್ಧದ ವಿರಾಮ-ಲಾಭಕ್ಕಾಗಿ ಉಪಾಂತ್ಯದ ಬ್ರಹ್ಮಗಣವನ್ನು ಕೊನೆಗೆ ತಳ್ಳಿ, ಅಂದಿನ ಕಥನಕಾವ್ಯ-ಕರ್ತರು ಸಾಂಗತ್ಯವೆಂಬ ಪದ್ಯರೂಪವನ್ನು ಸೃಷ್ಟಿಸಿಕೊಂಡಿರಬೇಕೆಂದು ತೋರುತ್ತದೆ. ಸಾಂಗತ್ಯಬಂಧಕ್ಕೆ 'ಚರಿತೆ' ಎಂಬ ಇನ್ನೊಂದು ಹೆಸರು ಪ್ರಸಿದ್ಧವಾಗಿದೆ. ಈ ಹೆಸರು ನನ್ನ ಅಭಿಪ್ರಾಯಕ್ಕೆ ಬಹಳ ಪೋಷಕವಾಗಿದೆ. ಚರಿತೆ ಎಂದರೆ ಕಥೆ ಅಥವಾ ಕಥನಕಾವ್ಯ ಎಂದರ್ಥ. ಆದುದರಿಂದ 'ಚರಿತೆ'ಯಾಗಿ ಮೆರೆಯುವುದಕ್ಕಾಗಿ, ಆ ವರೆಗೆ ಒಂಟಿಯಾಗಿದ್ದ ಏಳೆಗಳು 'ಸಾಂಗತ್ಯ'ವನ್ನು ಪಡೆದವೆಂದು ಹೇಳಿದರೆ ತಪ್ಪಾಗಲಾರದೆನ್ನಬಹುದು. ಮತ್ತು ತ್ರಿಮೂರ್ತಿಬಂಧಗಳೊಳಗೆ ನಮಗಿಂದು ಲಭ್ಯವಾಗುವ ದೊಡ್ಡ ಮೊತ್ತ ಸಾಂಗತ್ಯದ್ದೇ ಆಗಿರುವುದಕ್ಕೆ, ಹಿಂದಿನ ಕಾಲದಲ್ಲಿ ಏಳೆ ಅತ್ಯಂತ ಜನಪ್ರಿಯವಾದ ಹಾಡಾಗಿದ್ದುದೇ ಕಾರಣವೆಂದೂ ಹೇಳಬಹುದು.

ಛಂದೋಂಬುಧಿಯಲ್ಲಿ ನಿರೂಪಿತವಾದ 'ಕರ್ಣಾಟಕ ವಿಷಯಜಾತಿ' ಬಂಧಗಳು ಒಟ್ಟು ಹದಿನಾಲ್ಕು. ಇವುಗಳೊಳಗೆ ಮದನವತಿ, ಅಕ್ಕರಿಕೆ, ಉತ್ಸಾಹ ಎಂಬ ಮೂರಕ್ಕೆ ಮಾತ್ರಾನಿಯಮವೂ ಇರುವ ಕಾರಣ, ಇವು ಶುದ್ಧ ತ್ರಿಮೂರ್ತಿ ಬಂಧಗಳಾಗಿಲ್ಲ; ಉತ್ತರಕಾಲದಲ್ಲಿ ಆವಿರ್ಭವಿಸಿದ ಶರ – ಕುಸುಮ – ಭೋಗ – ಭಾಮಿನಿ – ಪರಿವರ್ಧಿನಿ – ವಾರ್ಧಕಗಳು ಹೇಗೋ ಹಾಗೆ, ಆದರೆ ಪೂರ್ವ ಕಾಲದಲ್ಲಿಯೇ, ಹುಟ್ಟಿಕೊಂಡವುಗಳು. ಶರಕುಸುಮಾದಿಗಳಂತೆಯೇ ಇವು ಕೂಡಾ, ತ್ರಿಮೂರ್ತಿಗಣಸಮುದಾಯದೊಳಗೆ ಅಂತರ್ಗತವಾದ ಮಾತ್ರಾಸಾಮ್ಯ-

ವುಳ್ಳ ಗಣಗಳಿಂದ ಮಾತ್ರ ಘಟಿತವಾಗಿದ್ದು, ಅವುಗಳಂತೆಯೇ ಯಥಾಕ್ಷರಗುರು–ಲಘುವಾಗಿ ಓದುವಾಗಲೇ ಧಾಟಿಯನ್ನರಳಿಸುವ ಛಂದೋಬಂಧಗಳು. ಉಳಿದ ಹನ್ನೊಂದರಲ್ಲಿ ಪಿರಿಯಕ್ಕರ ಮೊದಲಾದ ಐದು 'ಅಕ್ಕರ'ಗಳು, ಏಳೆ, ತ್ರಿಪದಿ, ಷಟ್ಪದಿಕೆ–ಹೀಗೆ ಎಂಟು ಸಹ, ಏಳೆಗಳ ಜೋಡಿಯಿಂದ ಪ್ರಾಯಃ ನಾಗವರ್ಮನ ಕಾಲದ ಅನಂತರ ರೂಪುಗೊಂಡ ಸಾಂಗತ್ಯದ ಹಾಗೆ, ವಿಷ್ಣುಗಣಪ್ರಧಾನ ಬಂಧಗಳು. ಆ ಹನ್ನೊಂದು ಬಂಧಗಳಲ್ಲಿ ಎಂಟರ ಎಂದರೆ ಮೂರನೇ ಎರಡು ಪಾಲಿಗಿಂತಲೂ ಅಧಿಕ ಬಂಧಗಳ ಧಾಟಿಯ ಸ್ವಭಾವವಿಶೇಷದ ಅರಿವು ನಮಗೆ ಈಗ ಆಗಿದೆ. ಇದರ ಬಲದಿಂದ ನಾವೀಗ ಎಲ್ಲಾ ವಿಶುದ್ಧ ತ್ರಿಮೂರ್ತಿಬಂಧಗಳ ಧಾಟಿಯ ವೈಶಿಷ್ಟ್ಯಗಳನ್ನು ಊಹಿಸಿ ಹೀಗೆ ಕ್ರೋಡೀಕರಿಸಬಹುದು :–

೧. ಯಾವುದೊಂದು ಬಂಧವಾದರೂ, ಬ್ರಹ್ಮ ವಿಷ್ಣು ರುದ್ರ ಎಂಬ ಮೂರು ಗಣವರ್ಗಗಳೊಳಗೆ, ಒಂದೇ ವರ್ಗದ ಗಣಗಳಿಂದ ಘಟಿತವಾಗಿರು–ವುದಿಲ್ಲ. (ಸಾಂಗತ್ಯದ ಪ್ರಭೇದವಾದ 'ಸೊಬಗಿನಸೋನೆ'ಯಲ್ಲಿ ಎಲ್ಲವೂ ವಿಷ್ಣು–ಗಣಗಳಾಗಿದ್ದು ಮೇಲೆ ಹೇಳಿದ್ದಕ್ಕೆ ಅಪವಾದವೆಂಬಂತಿದ್ದರೂ, ವೈಕಲ್ಪಿಕವಾಗಿ ಅದರಲ್ಲಿಯೂ ಬ್ರಹ್ಮಗಣಗಳು ಬರುತ್ತವೆ. ಹೇಗಿದ್ದರೂ ಅದು ಪುರಾತನ ಬಂಧವಲ್ಲ; ಆ ಹನ್ನೊಂದರೊಳಗೆ ಸೇರುವಂತಹದಲ್ಲ.)

೨. ಬಂಧದಲ್ಲಿ ಯಾವ ವರ್ಗದ ಗಣಗಳ ಆಧಿಕ್ಯವಿದೆಯೋ ಅದು ಆ ಬಂಧದ ಧಾಟಿಗೆ ಆಧಾರ.

೩. ಯಾವುದೊಂದು ಬಂಧದಲ್ಲಿ ನಿಯತವಾಗಿ ಅಥವಾ ವೈಕಲ್ಪಿಕವಾಗಿ ಬರುವ ಅಲ್ಪತರ(ಸಣ್ಣ)ಗಣಗಳನ್ನು ಬಂಧದ ಆಧಾರಭೂತವಾದ ಮಹತ್ತರ (ದೊಡ್ಡ)ಗಣದ ಪ್ರಮಾಣಕ್ಕೆ ಸರಿಯಾಗುವಂತೆ ವಿಕರ್ಷಿಸಿ ಓದಬೇಕೆಂಬುದು ಸಂಪ್ರದಾಯಸಿದ್ಧ.

೪. ಬಂಧದ ಧಾಟಿಗೆ ಆಧಾರಭೂತವಾದ ಗಣಕ್ಕಿಂತ ಮಹತ್ತರ(ದೊಡ್ಡ) ಗಣವು ಸಾಮಾನ್ಯವಾಗಿ ಪಾದದ ಕೊನೆಯಲ್ಲಾಗಲಿ, ಪದ್ಯಾರ್ಧದ ಕೊನೆಯ–ಲ್ಲಾಗಲಿ ಅಥವಾ ಪದ್ಯದ ಕೊನೆಯಲ್ಲಿ ಮಾತ್ರ ಬರುತ್ತದೆ; ಆಗ ಅದು ಆ ಬಂಧದ ಧಾಟಿಯನ್ನೇ ಮುಂದುವರಿಸಿ ಮುಕ್ತಾಯಗೊಳಿಸುತ್ತದೆ. (ಇದಕ್ಕೆ ಛಂದೋವತಂಸ ಮಾತ್ರ ಅಪವಾದವಾಗಿದೆ. ಅದು ಬ್ರಹ್ಮಗಣದ ಆಧಿಕ್ಯವುಳ್ಳ ಬಂಧ; ಪಾದಾದಿ–ಯಲ್ಲೊಂದು ವಿಷ್ಣುಗಣವಿರುತ್ತದೆ. ಇದರ ಧಾಟಿಯ ವಿಚಾರಕ್ಕೆ ಈ ಉಪನ್ಯಾಸದ ಶೀರ್ಷಿಕೆ ಎಡೆಕೊಡುವುದಿಲ್ಲ; ಅದನ್ನು ಅನ್ಯತ್ರ ಮಾಡಲಾಗುವುದು.)*

---

* {'ಛಂದೋವತಂಸ'ವೆಂಬ ಲೇಖನವು ೧೯೮೭ರಲ್ಲಿ ರಚಿತವಾಗಿ ಅನ್ಯತ್ರ ಪ್ರಕಟಗೊಂಡಿದ್ದು 'ಕನ್ನಡ ಛಂದಸ್ಸು' ನಿಬಂಧದ ನಾಲ್ಕನೆಯ ಅನುಬಂಧವಾಗಿ (ಪ್ರಸ್ತುತ ಅನುಬಂಧದ ಅನಂತರ) ಸೇರಿಸಲ್ಪಟ್ಟಿದೆ. – ಸಂ.}

ಅಕ್ಷರಗಳ ವಿನ್ಯಾಸದಿಂದ ಎಂಟು ರೂಪಗಳನ್ನು ಪಡೆದಿರುವ ವಿಷ್ಣುಗಣ-ಗಳೆಲ್ಲವೂ ಸಂಪ್ರದಾಯಸಿದ್ಧವಾದ ಸಾಂಗತ್ಯವಾಚನವಿಧಾನಗಳೆರಡರಲ್ಲಿಯೂ ಪಡೆಯುವ ರೂಪಗಳು ಗೋವಿಂದಂ ಮತ್ತು ಜಲಜಾಕ್ಷಂ ಎಂಬೆರಡರ ಪ್ರತಿಬಿಂಬಗಳಾಗಿ ಪರಿಣಮಿಸುತ್ತವೆಂಬುದನ್ನು ಈ ಮೊದಲೇ ತೋರಿಸಲಾಗಿದೆ. ವಿಷ್ಣುಗಣಪ್ರಧಾನವಾದ ಇತರ ಎಲ್ಲಾ ಬಂಧಗಳನ್ನು ಸಾಂಗತ್ಯವಾಚನದ ತತ್ತ್ವ-ವನ್ನವಲಂಬಿಸಿ ಓದುವಾಗ ಅವೆಲ್ಲವುಗಳ ಧಾಟಿ ಸರಸವಾಗಿ ಉನ್ಮೀಲಿತ-ವಾಗುವುದು ಅನುಭವಕ್ಕೆ ಬರುತ್ತದೆ. ಈ ವಿಧಾನವನ್ನನುಸರಿಸಿದಾಗ ನನಗೆ ಸುಗಮವಾಗಿ ಕೈಗೂಡಿದ ಪಿರಿಯಕ್ಕರದ ಧಾಟಿ ಮಡಿಕೇರಿಯಲ್ಲಿ ಪ್ರಕಟವಾಯಿತು. ಅದು ವಿದ್ವತ್‌ಸಮುದಾಯದಿಂದ ಸ್ವೀಕೃತವಾಗಿರುವುದು ಈ ವಿಧಾನದ ಸಾಧುತ್ವಕ್ಕೆ ಸಾಕ್ಷಿ.

ವಿಷ್ಣುಗಣಕ್ಕೆ ಅನ್ವಯಿಸುವ ತತ್ತ್ವಗಳು ಬ್ರಹ್ಮರುದ್ರಗಣಗಳಿಗೂ ಅನ್ವಯಿಸ-ಬೇಕಾದದು ಕ್ರಮಪ್ರಾಪ್ತವಾಗಿರುತ್ತದೆ. ಏಕೆಂದರೆ ವಿಷ್ಣುಗಣಗಳ ಕೊನೆಯ ಒಂದ-ಕ್ಷರವನ್ನು – ಆದಿಯದನ್ನಲ್ಲ – ಕಳೆದು ಹಾಕಿದರೆ ಅವೆಲ್ಲ ಬ್ರಹ್ಮಗಣಗಳೇ ಆಗುತ್ತವೆ. ಹೀಗೆಯೇ ವಿಷ್ಣುಗಣಗಳ ಕೊನೆಗೆ – ಆರಂಭಕ್ಕಲ್ಲ – ಒಂದಕ್ಷರವನ್ನು – ಸೇರಿಸಿದರೆ ಅವೆಲ್ಲ ರುದ್ರಗಣಗಳಾಗುತ್ತವೆ. ಇದರಿಂದ, ಈ ಮೂರು ಗಣ-ಗಳಲ್ಲಿಯೂ ಅಕ್ಷರಗಳ ಗತಿಪ್ರಕಾರವು ಅಭಿನ್ನವೆಂದೂ, ಬ್ರಹ್ಮಗಣದ ವಿಸ್ತರಣವೇ ವಿಷ್ಣುಗಣ, ವಿಷ್ಣುಗಣದ ವಿಸ್ತರಣವೇ ರುದ್ರಗಣ ಎಂದೂ ಸಿದ್ಧವಾಗುತ್ತದೆ. ಹೀಗೆ ಈ ಮೂರು ವರ್ಗದ ಗಣಗಳಿಗೂ ಸಾಧರ್ಮ್ಯವಿರುವ ಕಾರಣ ಎಂಟು ಬಗೆಯ ವಿಷ್ಣುಗಣಗಳಿಗೂ ವಾಚನದಲ್ಲಿ ಎರಡೇ ರೂಪ ಬರುವಂತೆ – ಅಕ್ಷರವಿನ್ಯಾಸ ರೂಪದಲ್ಲಿ ನಾಲ್ಕು ವಿಧವಾಗಿರುವ ಬ್ರಹ್ಮಗಣಗಳೆಲ್ಲ ವಿಶುದ್ಧ ತ್ರಿಮೂರ್ತಿಬಂಧಗಳ ವಾಚನಸ್ವರೂಪದಲ್ಲಿ ಸ್ವವರ್ಗದ ಮೊದಲಿನ ಎರಡು ಗಣಗಳಾದ ಬ್ರಹ್ಮಂ ಮತ್ತು ದ್ರುಹಿಣಂ ಎಂಬ ಎರಡೇ ಗಣರೂಪಗಳ ಪ್ರತಿಬಿಂಬತ್ವವನ್ನು ಪಡೆಯುತ್ತವೆ. ಇದೇ ಪ್ರಕಾರ, ಅಕ್ಷರವಿನ್ಯಾಸರೂಪದಲ್ಲಿ ಹದಿನಾರಾಗಿರುವ ರುದ್ರಗಣಗಳೆಲ್ಲವೂ ವಾಚನಸ್ವರೂಪದಲ್ಲಿ ಸ್ವವರ್ಗದ ಮೊದಲಿನೆರಡು ಗಣಗಳಾದ ಗಂಗಾಧೀಶಂ ಮತ್ತು ಗಿರಿಜಾಕಾಂತಂ ಎಂಬ ಎರಡರ ಪ್ರತಿಬಿಂಬಗಳಾಗಿ ಪರಿಣಮಿಸುತ್ತದೆ. ಏಕೆಂದರೆ ಶುದ್ಧ ತ್ರಿಮೂರ್ತಿಬಂಧಗಳ ವಾಚನದಲ್ಲಿ, ಗಣಾದಿಯ ಲಘುಯುಗ್ಮವನ್ನು ಮಾತ್ರ ಸಹಜಲಘುರೂಪದಲ್ಲಿ ಉಚ್ಚರಿಸುವುದೇ ಈ ಧಾಟಿಗಳ ಸ್ವಭಾವವಿಶೇಷ-ವೆಂಬುದನ್ನು ಸಾಂಗತ್ಯಸಂಪ್ರದಾಯವು ಉದ್ಘೋಷಿಸುತ್ತದೆ. ಎಲ್ಲಾ ಬ್ರಹ್ಮಗಣಗಳು ಬ್ರಹ್ಮಂ, ದ್ರುಹಿಣಂ ಎಂಬ ಎರಡೇ ಗಣರೂಪಗಳ ಪ್ರತಿಬಿಂಬಗಳಾಗುತ್ತವೆಂಬ ತಥ್ಯವನ್ನು, ಸಾಂಗತ್ಯದ ಅರ್ಧಗಳ ಕೊನೆಯಲ್ಲಿ ನಿಯತವಾಗಿರುವ ಬ್ರಹ್ಮಗಣಗಳ ಸಾಂಪ್ರದಾಯಿಕ ವಾಚನವಿಧಾನವು ತೋರಿಸುತ್ತದೆ. ರುದ್ರಗಣಗಳೆಲ್ಲವೂ ವಾಚನ

ರೂಪದಲ್ಲಿ ಗಂಗಾಧೀಶಂ ಗಿರಿಜಾಕಾಂತಂ ಎಂಬ ಎರಡೇ ಗಣರೂಪಗಳ ಪ್ರತಿಬಿಂಬಗಳಾಗಿ ಪರಿಣಮಿಸುವುದನ್ನು – ಈಗ ಬಹಳ ಮಂದಿಗೆ ಧಾಟಿ ತಿಳಿದಿರುವ ಪಿರಿಯಕ್ಕರದ ಪಾದಾಂತದಲ್ಲಿ ನಿಯತವಾಗಿರುವ ರುದ್ರಗಣದ ವಾಚನರೂಪವು ಸ್ಪಷ್ಟೀಕರಿಸುತ್ತದೆ. ತ್ರಿಮೂರ್ತಿಬಂಧಗಳ ಈ ಸ್ವಭಾವವನ್ನು ತಿಳಿದುಕೊಂಡಾಗ ನಾಗವರ್ಮನು ಹೇಳಿದ ಎಲ್ಲಾ 'ಕರ್ಣಾಟಕ ವಿಷಯ–ಜಾತಿ'ಗಳ ಧಾಟಿಗಳನ್ನೂ ಕಂಡುಕೊಳ್ಳಲು ನಾವು ಶಕ್ತರಾಗುತ್ತೇವೆ.

ಬಹಳ ದೀರ್ಘವಾಗಿ ನಿರೂಪಿಸಬೇಕಾಗಿ ಬಂದ ತ್ರಿಮೂರ್ತಿಗಣ ಬಂಧ–ಗಳ ಸ್ವಭಾವವನ್ನವಲಂಬಿಸಿ 'ಗೀತಿಕೆ'ಯ ಧಾಟಿಯನ್ನೀಗ ತಿಳಿದುಕೊಳ್ಳೋಣ.

ಉಪನ್ಯಾಸದ ಆದಿಭಾಗದಲ್ಲಿಯೇ ನಾನು ನಿವೇದಿಸಿದಂತೆ 'ಗೀತಿಕೆ' ಅನೇಕರೂಪಿಯಾಗಿ ಕಂಡುಬರುವುದಾದರೂ ಅದರ ಮೂಲಸ್ವರೂಪವನ್ನು ಜಯಕೀರ್ತಿ ನಮಗೆ ಒದಗಿಸಿಕೊಟ್ಟಿದ್ದಾನೆ. ಮೊದಲು ವಿಮರ್ಶಿಸಿದ ಆ ಲಕ್ಷ್ಯವನ್ನೇ ಇಲ್ಲಿ ಮತ್ತೊಮ್ಮೆ ಎತ್ತಿಕೊಳ್ಳಬೇಕಾಗುತ್ತದೆ:–

ವಿ. ಬ್ರ. ವಿ.
ರಗಣೋ ದ್ವಿ । ತೀಯೇ । ಷಷ್ಠೇ ಚ ।
ರು. ರು. ಬ್ರ. ರು.
ಲಗಣೋ ಘಗ । ಣೋವಾನ್ಯತ್ರ । ಪಂಚ । ಸ್ವರ್ಧಯೋಶ್ಚ ॥
ವಿ. ಬ್ರ. ರು.
ತ್ರಿಗಣೋಯುಕ್ । ಸಮಪಾ । ದೋಬ್ಧಿಗಣೋ ।
ವಿ. ರು. ಬ್ರ. ರು.
ನಿಗದಿತಾ । ಗೀತಿಕಾಲಂ । ಕಾರೇ । ಪ್ರಭುಸೇನೀಯೇ ॥ . ॥

ಲಕ್ಷಣೋಕ್ತವಾದಂತೆಯೇ ಈ ಲಕ್ಷ್ಯದ ನಿಯತಸ್ಥಾನಗಳಲ್ಲಿ ಮಾತ್ರ ಬಂದಿರುವ ಬ್ರಹ್ಮಗಣಗಳು ನಾಲ್ಕು; ಇತರ ಸ್ಥಾನಗಳಲ್ಲಿ ವಿಷ್ಣು ಅಥವಾ ರುದ್ರಗಣ ಐಚ್ಛಿಕ ಎಂಬ ಲಕ್ಷಣಕ್ಕನುಗುಣವಾಗಿ ಬಂದಿರುವ ವಿಷ್ಣುಗಣಗಳು ನಾಲ್ಕು, ರುದ್ರಗಣಗಳು ಆರು.

ಈ ಬಂಧದ ಧಾಟಿಗೆ ಆಧಾರಭೂತವಾದ ಗಣ ಯಾವುದೆಂದು ನಿರ್ಣಯಿಸಿಕೊಳ್ಳದೆ ಇದರ ಧಾಟಿಯನ್ನು ನಿರ್ಧರಿಸುವುದು ಅಶಕ್ಯ. ತ್ರಿಪದಿ – ಏಳೆ – ಸಾಂಗತ್ಯ ಪಿರಿಯಕ್ಕರಗಳಂತೆಯೇ ಇದರಲ್ಲಿಯೂ ಬ್ರಹ್ಮಗಣಕ್ಕೆ ನಿಯತ–ಸ್ಥಾನ ಮಾತ್ರ ಇರುವ ಕಾರಣ ಇದು ಬ್ರಹ್ಮಗಣಪ್ರಧಾನವಾದ ಬಂಧವಲ್ಲ–ವೆಂಬುದು ಸ್ಪಷ್ಟ. ವಿಷ್ಣುರುದ್ರಗಳು ಐಚ್ಛಿಕವಾಗಿರುವುದರಿಂದ, ಇವುಗಳೊಳಗೆ ಧಾಟಿಗೆ ಆಧಾರಭೂತವಾದ ಗಣ ಯಾವುದೆಂಬುದು ಅಸ್ಪಷ್ಟ.

ವಿಷ್ಣುಗಣಪ್ರಧಾನವಾದ ಪಿರಿಯಕ್ಕರದಲ್ಲಿಯೂ ಪಾದಕ್ಕೊಂದು ರುದ್ರ ಗಣವಿದೆ. ಆದರೆ ಅದು ಪಾದಾಂತ್ಯಗಣವಾಗಿರುವುದರಿಂದ, ವಿಷ್ಣುಗಣವೇ ಒಂದು ಹಜ್ಜೆ ಮುಂದಿಟ್ಟಂತಾಗಿ ಮುಕ್ತಾಯಕ್ಕೆ ಅಂದವನ್ನು ತರುತ್ತದೆ ಹೊರತು, ವಿಷ್ಣುಗಣದ ನಡೆಗೆ ಏನೇನೂ ವ್ಯತ್ಯಾಸವನ್ನುಂಟುಮಾಡುವುದಿಲ್ಲ. ಗೀತಿಕೆಯಲ್ಲಾದರೆ ಸ್ಥಾನವ್ಯವಸ್ಥೆ ಇಲ್ಲದೆ ವಿಷ್ಣು ರುದ್ರಗಣಗಳು ಐಚ್ಛಿಕವಾಗಿ ಬೆರಸಿಬರುವುದರಿಂದ, ಇದರ ಧಾಟಿಗೆ ಯಾವ ಗಣ ಆಧಾರವೆಂಬುದು ಒಂದು ತೊಡಕಿನ ಪ್ರಶ್ನೆಯಾಗಿದೆ. ಆದರೆ ಒಂದು ವಾಸ್ತವಿಕ ತಥ್ಯವನ್ನು ನಾವಿಲ್ಲಿ ಮನವರಿಕೆ ಮಾಡಿಕೊಂಡರೆ ಈ ತೊಡಕನ್ನು ಬಿಡಿಸಬಹುದು. ಅದು ಹೇಗೆಂಬುದಕ್ಕೆ ಒಂದು ದೃಷ್ಟಾಂತ ಹೇಳುತ್ತೇನೆ. ಒಬ್ಬ ವಿದ್ಯಾರ್ಥಿಯ ಪಠ್ಯಪುಸ್ತಕಗಳಲ್ಲಿ ಕೆಲವು 'ಡೆಮ್ಮಿ ಎಂಟ'ರ ಆಕೃತಿಯವೆಂದೂ ಇನ್ನು ಕೆಲವು 'ಕ್ರೌನ್ ಎಂಟ'ರವೆಂದೂ ಭಾವಿಸಿಕೊಳ್ಳೋಣ, ಅವುಗಳನ್ನೆಲ್ಲ ಒಂದೇ ಚೀಲದಲ್ಲಿ ಅಂದವಾಗಿಟ್ಟುಕೊಂಡು ಪಾಠಶಾಲೆಗೆ ಹೋಗಬೇಕಾದರೆ, ಕ್ರೌನ್ ಎಂಟರ ಅಗಲದಷ್ಟರ ಚೀಲ ಸಾಕಾದೀತೇ? ಡೆಮ್ಮಿ ಎಂಟರ ಅಗಲದಷ್ಟರ ಚೀಲವೇ ಬೇಕಾಗುತ್ತದೆ. ಇದರಂತೆಯೇ ಇಲ್ಲಿಯೂ ಆಗಬೇಕಾಗುತ್ತದೆ. ವಿಷ್ಣುಗಣದ ವಿಸ್ತಾರದಲ್ಲಿ ರುದ್ರಗಣ ಅಡಕವಾಗಲಾರದು; ರುದ್ರಗಣದ ವಿಸ್ತಾರದಲ್ಲಿ ವಿಷ್ಣುಗಣ ಅಡಕವಾಗುವುದಕ್ಕೆ ತಡೆಯೇನೂ ಇಲ್ಲ. ವಿಷ್ಣುಗಣಪ್ರಧಾನಬಂಧಗಳಲ್ಲಿ ಬ್ರಹ್ಮಗಣವು ನಿಯತವಾಗಿಯಾಗಲಿ ವೈಕಲ್ಪಿಕವಾಗಿಯಾಗಲಿ ಬರುವಲ್ಲೆಲ್ಲ ಅಲ್ಪೀಯವಾದ ಆ ಬ್ರಹ್ಮಗಣದ ಕೊನೆಯನ್ನು ವಿಕರ್ಷಿಸಿ ಮಹೀಯವಾದ ವಿಷ್ಣುಗಣದ ಉಚ್ಚಾರಕಾಲಕ್ಕೆ ಸರಿದೂಗಿಸಿ ಓದುತ್ತೇವಲ್ಲವೆ? ಸಾಂಗತ್ಯದಲ್ಲಿಯೂ ತ್ರಿಪದಿಯಲ್ಲಿಯೂ ಇದು ಸಂಪ್ರದಾಯಸಿದ್ಧವಾಗಿದೆ. ಇದರಿಂದ ಗೀತಿಕೆಯಲ್ಲಿ ಬರುವ ವಿಷ್ಣುಗಣಗಳ ಕೊನೆಯನ್ನು ವಿಕರ್ಷಿಸಿ ರುದ್ರಗಣಗಳ ಉಚ್ಚಾರಕಾಲಕ್ಕೆ ಸರಿದೂಗಿಸಿ ಓದಬೇಕಾಗುತ್ತದೆ. ಹಾಗಾದರೆ ಗೀತಿಕೆಯ ಧಾಟಿಗೆ ಆಧಾರಭೂತವಾದ ಗಣ ರುದ್ರಗಣವೇ ಎಂದಾಯಿತು. ಜಯಕೀರ್ತಿ ರಚಿಸಿರುವ ಲಕ್ಷ್ಯದಲ್ಲಿ ರುದ್ರಗಣಗಳದೇ ದೊಡ್ಡ ಸಂಖ್ಯೆ; ಒಟ್ಟು ಹದಿನಾಲ್ಕು ಗಣಗಳಲ್ಲಿ ಆರು ರುದ್ರಗಣಗಳಿವೆ; ಎಂದರೆ ಆ ಗೀತಿಕೆಯ ಸುಮಾರು ಅರ್ಧದಷ್ಟನ್ನು ರುದ್ರಗಣಗಳು ತುಂಬಿವೆ. ಯಾವುದೊಂದು ತ್ರಿಮೂರ್ತಿಬಂಧದಲ್ಲಿ ಯಾವ ವರ್ಗದ ಗಣಗಳ ಆಧಿಕ್ಯವಿದೆಯೋ ಅದು ಆ ಬಂಧದ ಧಾಟಿಯನ್ನು ರೂಪಿಸುವುದೆಂಬುದನ್ನು ಈ ಹಿಂದೆ ಕಂಡುಕೊಂಡಿದ್ದೇವೆ. ಜಯಕೀರ್ತಿಯ ಗೀತಿಕೆಯಲ್ಲಿ ರುದ್ರಗಣಗಳು ಆರು ಇರುವಾಗ ವಿಷ್ಣುಗಣಗಳು ಇರುವುದು ನಾಲ್ಕೇ. ಶುದ್ಧಪಾಠವೆಂದು ಸ್ವೀಕರಿಸಬಹುದಾದ ಛಂದೋಂಬುಧಿಯ ಗೀತಿಕೆಯ ಪೂರ್ವಾರ್ಧದಲ್ಲಿಯೂ, ರುದ್ರಗಣಗಳಿಗೆ ಆಧಿಕ್ಯವು ಕಂಡುಬರುತ್ತದೆ; ಅದರಲ್ಲಿ ಒಟ್ಟು ಏಳು ಗಣಗಳೊಳಗೆ ವಿಷ್ಣುಗಣ ಎರಡು, ರುದ್ರಗಣ ಮೂರು; ಇದರಿಂದಲೂ ಗೀತಿಕೆಯ ಧಾಟಿಯ ಆಧಾರವು ರುದ್ರಗಣ ಎಂಬುದು ದೃಢವಾಗುತ್ತದೆ. ಈಗ ಇದರಲ್ಲಿ ಬರುವ ಬ್ರಹ್ಮಗಣಗಳನ್ನು ಎಷ್ಟು ವಿಕರ್ಷಿಸಬೇಕು

ಎಂಬುದೊಂದು ಪ್ರಶ್ನೆ ಉಳಿಯುತ್ತದೆ. ಧಾಟಿಗೆ ಆಧಾರವು ವಿಷ್ಣುಗಣವಾಗಿರು-ವಾಗ ಬ್ರಹ್ಮಗಣವು ಅದರ ಉಚ್ಚಾರಕಾಲಕ್ಕೆ ಸರಿಹೊಂದಿಕೊಳ್ಳಬೇಕಾಗುವುದನ್ನು ಸಾಂಗತ್ಯ ತ್ರಿಪದಿ ಪಿರಿಯಕ್ಕರಗಳಲ್ಲಿ ಕಾಣುತ್ತೇವೆ. ಗೀತಿಕೆಯ ಧಾಟಿಗೆ ರುದ್ರಗಣವು ಆಧಾರಭೂತವಾಗಿರುವುದರಿಂದ, ಇದರಲ್ಲಿ ಬರುವ ವಿಷ್ಣುಗಣಗಳನ್ನು ಹೇಗೋ ಹಾಗೆ, ಬ್ರಹ್ಮಗಣಗಳನ್ನೂ ರುದ್ರಗಣದ ಉಚ್ಚಾರಕಾಲಕ್ಕೆ ಸರಿಯಾಗುವಷ್ಟು ವಿಕರ್ಷಿಸಬೇಕೆಂಬುದು ಕ್ರಮಪ್ರಾಪ್ತವಾಗುತ್ತದೆ. ಈ ವಿಧಾನವನ್ನನುಸರಿಸಿ ಓದು-ವಾಗ ಗೀತಿಕೆಯ ಧಾಟಿ ಸುಗಮವಾಗಿ ಉನ್ಮೀಲಿತವಾಗುತ್ತದೆ. ಹಾಗೆ ಒಂದೆರಡು ಗೀತಿಕೆಗಳನ್ನು ಓದುವ ಮೊದಲು ಒಂದು ಮಾತನ್ನು ಇಲ್ಲಿ ನಿವೇದಿಸ-ಬೇಕಾಗುತ್ತದೆ. ತ್ರಿಮೂರ್ತಿಬಂಧಗಳಲ್ಲೆಲ್ಲ ಪ್ರತಿಯೊಂದು ಗಣದ ಅಂತ್ಯದಲ್ಲಿಯೂ ಯತಿ ಇದ್ದರೆ ಓದು ರಮ್ಯವಾಗುತ್ತದೆ. ಯತಿ ಇಲ್ಲದಿದ್ದಲ್ಲಿ ವಾಚನವು ಅಷ್ಟು ಸೊಗಸಾಗುವುದಿಲ್ಲ. ಆದರೆ ವಿಲಂಬಿತವಾಗಿ ಹಾಡುವಾಗ, ಯತಿಭಂಗವನ್ನು ಮರೆಮಾಡಲು ಸಾಧ್ಯವಾಗುವುದರಿಂದ, ಯತಿ ಇಲ್ಲದಿದ್ದರೂ ಅಷ್ಟೊಂದು ಬಾಧೆ ತೋರುವುದಿಲ್ಲ. ಈಗ ಮೊತ್ತಮೊದಲಾಗಿ ಜಯಕೀರ್ತಿಯ ಗೀತಿಕೆಯನ್ನು ಓದೋಣ :-[5]

∩∩ ೨ ೨ ೨ ೨ ೨ ೨ ೨ ೨೨ ೨ ೨
ರಗಣೋದ್ವಿ . । ತೀಯೇ . . । ಷಷ್ಠೇಚ . ।

∩∩ ೨ ೨ ೨ ೨ ೨ ೨೨ ೨ ೨ ೨೨ ೨ ೨ ೨ ೨
ಲಗಣೋಘಗ । ಣೋವಾನ್ಯತ್ರ । ಪಂಚ . . । ಸ್ವರ್ಧಯೋಶ್ಚ ॥

∩∩ ೨ ೨ ೨ ∩∩ ೨ ೨ ೨ ೨ ೨ ೨ ೨
ತ್ರಿಗಣೋಯುಕ್ . । ಸಮಪಾ . . । ದೋಬ್ಧಿಗಣೋ ।

∩∩೨ ೨ ೨ ೨ ೨೨ ೨ ೨ ೨ ೨ ೨ ∩∩ ೨ ೨ ೨
ನಿಗದಿತಾ . । ಗೀತಿಕಾಲಂ । ಕಾರೇ . . । ಪ್ರಭುಸೇನೀಯೇ ॥ . ॥

ಕವಿರಾಜಮಾರ್ಗದಿಂದ ಒಂದನ್ನು ಓದೋಣ:-

∩∩ ೨ ೨ ೨ ೨ ೨ ೨ ೨ ∩∩ ೨ ೨೨
ಅಱಿದು ಪೀನಂ । ಮಾರ್ಗ . . । ಗತಿಯಂ . . ।

∩∩ ೨ ೨೨ ೨ ೨ ೨ ೨ ∩∩ ೨ ೨ ೨ ೨೨ ೨ ೨
ತಱಿಸಲಾಗ । ದಾರ್ಗಂ . . । ಬಹುವಿ . . । ಕಲ್ಪದೊಳ್ . ॥

---

5. ಅಕ್ಷರಗಳ ಮುಂದಿನ ಚುಕ್ಕೆ ವಿಕರ್ಷಣವನ್ನು ಸೂಚಿಸುತ್ತದೆ. ಇಲ್ಲಿ ಒಂದು ಚುಕ್ಕೆ ಒಂದು ಗುರ್ವಕ್ಷರಕ್ಕೆ ಸಮ ಎಂದು ತಿಳಿದುಕೊಳ್ಳಬೇಕು.

ᑎ ᑎᑌ ᑌ ᑌ ᑌ ᑌ ᑌᑌ ᑎ ᑎᑌᑌ ᑌ
ಕುಱಿತು ಪೂರ್ವ । ಶಾಸ್ತ್ರ . . । ಪದವಿಧಿಯಂ ।

ᑎᑎ ᑌᑌᑌ ᑌᑌ ᑌ ᑌ ᑎᑎᑌ ᑌᑌ ᑌᑌᑌ ᑌ
ತೆಱೆದಿರೆ . । ಪೇಟ್ವೆ . . । ನಿನಿಸಂ . . । ಕನ್ನಡದೊಳ್ ॥ . ॥

ಕರ್ಣಾಟಕ ವಿಷಯಜಾತಿಗಳೊಳಗೆ ರುದ್ರಗಣಪ್ರಧಾನವಾದ ಬಂಧವು ಇದೊಂದೇ ಆಗಿದೆ. ರುದ್ರಗಣ ಎಂಟು ಮಾತ್ರೆಗಳ ಆವರ್ತದಲ್ಲಿ ಕಂಡು ಬರುತ್ತದೆ. ಇದರಿಂದ ಗೀತಿಕೆಯಲ್ಲಿ ಬರುವ ವಿಷ್ಣುಗಣಗಳಿಗೂ ಬ್ರಹ್ಮಗಣಗಳಿಗೂ ಎಂಟು ಮಾತ್ರೆಗಳ ನಡೆಯೇ ಒದಗುತ್ತದೆ. ಹೀಗೆ, ಗೀತಿಕೆ ಎಂಟು ಮಾತ್ರೆಗಳ ಆವರ್ತದ ಗತಿಯುಳ್ಳದ್ದಾಗಿದೆ.

ಛಂದೋಬಂಧಗಳು ಎರಡು ವಿಧದಲ್ಲಿ ಕರ್ಣರಸಾಯನವಾಗತಕ್ಕವುಗಳು: ಸ್ವರಾರೋಹಾವರೋಹಕ್ಕೆ ಹೆಚ್ಚು ಅವಕಾಶ ಕೊಡದೆ, ಪದ್ಯದ ಅರ್ಥಪ್ರಕಾಶನಕ್ಕೆ ಪ್ರಾಧಾನ್ಯವಿತ್ತು, ಗತಿಸೌಂದರ್ಯವು ಸ್ಫುಟವಾಗುವಂತೆ ಓದುವುದು ಒಂದು ವಿಧಾನ; ಇದಕ್ಕೆ 'ಪಾಠ್ಯ'ವೆಂದು ಹೆಸರು. ಛಂದಃಸೌಂದರ್ಯಕ್ಕೆ ರಾಗಸೌಂದ-ರ್ಯವನ್ನು ಎರಕಹೊಯ್ದು ಗಮಕಗಳನ್ನಳವಡಿಸಿ ಹಾಡುವುದು ಇನ್ನೊಂದು ವಿಧಾನ; ಇದಕ್ಕೆ 'ಗೇಯ'ವೆಂದು ಹೆಸರು. ಯಾವ ಛಂದೋಬಂಧವನ್ನಾದರೂ ಈ ಎರಡು ಪ್ರಕಾರಗಳಿಗೂ ಒಗ್ಗಿಸಬಹುದಾದರೂ, ಕೆಲಕೆಲವು ಬಂಧಗಳ ಸೌಂದರ್ಯವು ಪಾಠ್ಯದಲ್ಲಿಯೇ ಹೆಚ್ಚು ಸ್ಫುಟವಾಗಿರುವುದರಿಂದ ಅವುಗಳನ್ನು ಆ ಪದ್ಧತಿಯಲ್ಲಿ ಓದುವುದು ಉಚಿತವೆಂದೂ ಇನ್ನು ಕೆಲವು ಬಂಧಗಳ ಸೌಂದರ್ಯವು ಗೇಯವಾದಾಗ ಮಾತ್ರ ಚೆನ್ನಾಗಿ ವ್ಯಂಜಿತವಾಗುವುದರಿಂದ ಅಂಥವುಗಳನ್ನು ಹಾಡುವುದು ಯುಕ್ತವೆಂದೂ ಅಭಿನವಗುಪ್ತನು ಹೇಳುತ್ತಾನೆ. 'ಪಾಠ್ಯೇ ಗೇಯೇ ಚ ಮಧುರಂ' ಎಂದು ಶ್ರೀಮದ್ರಾಮಾಯಣದ ಪೀಠಿಕಾ-ಭಾಗದಲ್ಲಿ ಹೇಳಲಾಗಿರುವಂತೆ, ಕೆಲವು ಬಂಧಗಳು ಪಾಠ್ಯವಾದಾಗಲೂ ಗೇಯ-ವಾದಾಗಲೂ ಸಮನಾಗಿ ರಂಜಕವಾಗುತ್ತವೆ. ಈ ದೃಷ್ಟಿಯಿಂದ ಹೇಳುವುದಾದರೆ, ಶುದ್ಧ ತ್ರಿಮೂರ್ತಿಬಂಧಗಳೆಲ್ಲವೂ, ಪಾಠ್ಯವಾಗುವುದಕ್ಕಿಂತ ಗೇಯವಾದಾಗಲೇ ಸ್ವಸೌಂದರ್ಯವನ್ನು ಚೆನ್ನಾಗಿ ಪ್ರಕಟಿಸಬಲ್ಲವೆಂದು ಹೇಳಬೇಕಾಗುತ್ತದೆ. ಕಾರಣ-ವೇನೆಂದರೆ, ಈ ಜಾತಿಬಂಧಗಳೆಲ್ಲ ಅಕ್ಷರವಿಕರ್ಷಣಕ್ಕೆ ಒಳಗಾಗುವವುಗಳು. ಇಂತಹ ವಿಕರ್ಷಣವು ಅಲ್ಲಲ್ಲಿ ಬಂದರೆ ಹಾಡಿನ ಶೋಭೆಯನ್ನು ಅದು ಹೆಚ್ಚಿಸುತ್ತದೆ; ನಾನಾ ಗಮಕಗಳಿಗೆ ಅವಕಾಶವನ್ನೂ ಕೊಡುತ್ತದೆ. ವಿಕರ್ಷಣವು ಗಾನಕ್ಕೆ (ಒಮ್ಮೊಮ್ಮೆ ಅರ್ಥಕ್ಕೂ) ಶೋಭಾತಿಶಯವನ್ನು ತರುವ ಕಾರಣ, ಸಂಗೀತಕ್ಕೆ ಮೀಸಲಾದ 'ಕೃತಿ'ಗಳಲ್ಲಿ ಇದು ಧಾರಾಳವಾಗಿರುತ್ತದೆ. ತ್ಯಾಗರಾಜರ "ಕ್ಷೀರ..ಸಾ...ಗರ..ಶಯನ" ಎಂಬುದರಲ್ಲಿ ಈ ಎಳೆತವಿಲ್ಲದಿರುತ್ತಿದ್ದರೆ ಈಗ ಅದ-ಕ್ಕಿರುವ ಅಪೂರ್ವವಾದ ಸೌಂದರ್ಯವೂ ಅರ್ಥಸ್ವರೂಪವ್ಯಕ್ತಿಯೂ ಇರುತ್ತಿದ್ದವೆ?

ತ್ರಿಮೂರ್ತಿಜಾತಿಬಂಧಗಳೊಳಗೆ, ನಾನೀಗ ಸವಿವರವಾಗಿ ನಿರೂಪಣೆ ಮಾಡಿದಂತೆ, ಗೀತಿಕೆ ಅತಿ ಹೆಚ್ಚಿನ ವಿಕರ್ಷಣವನ್ನು ಪಡೆಯುವ ಬಂಧವಾಗಿದೆ. ಆದುದರಿಂದ ಇದು ಪಾಠ್ಯಕ್ಕೆ ಅನುರೂಪವಾದ ಬಂಧವಲ್ಲ. ಇದರ ಸಂಪೂರ್ಣ ಸೌಂದರ್ಯವು ಪ್ರಕಟವಾಗಬೇಕಾದರೆ, ಹಾಡಬಲ್ಲವರು ಇದನ್ನು ಹಾಡಬೇಕು. ಈ ತಥ್ಯವನ್ನು 'ಗೀತಿಕೆ' ಎಂಬ ಇದರ ಹೆಸರೇ ನಮಗೆ ತಿಳಿಸುತ್ತದೆಂದು ನನಗೆ ತೋರುತ್ತದೆ. ಒಂದಾನೊಂದು ಕಾಲದಲ್ಲಿ ಇದು ಕನ್ನಡನಾಡಿನ ಜನ ಅತಿ ಹೆಚ್ಚಾಗಿ ಹಾಡುತ್ತಿದ್ದ ಪದ್ಯರೂಪವಾಗಿದ್ದಿರಬೇಕು. ಏಕೆಂದರೆ, ಇದರ ಹೆಸರು ತ್ರಿಪದಿ, ಚೌಪದಿಕೆ, ಪಿರಿಯಕ್ಕರ ಇತ್ಯಾದಿಗಳಂತೆ ಆಯಾ ಛಂದೋಬಂಧದ ವಿಶಿಷ್ಟಲಕ್ಷಣವನ್ನೇನೂ ಸೂಚಿಸದೆ, ಕೇವಲ 'ಗೀತಿಕೆ' – ಎಂದರೆ 'ಹಾಡು' ಎಂಬರ್ಥವನ್ನು ಮಾತ್ರ ಹೇಳುತ್ತದೆ. – ತೆಂಗಿನಕಾಯಿ ಕಾಯಿಗಳೊಳಗೆಲ್ಲ ಅತಿ ಬಳಕೆಯ ಕಾಯಿಯಾಗಿರುವುದರಿಂದ ಅದಕ್ಕೆ ಬರೇ 'ಕಾಯಿ' ಎಂಬ ಹೆಸರು ನಮ್ಮಲ್ಲಿ ರೂಢವಾಗಿರುವಂತೆ.

ಧಾಟಿ ಕೂಡಿಬರಬೇಕಾದರೆ ಅಕ್ಷರಗಳ ವಿಕರ್ಷಣವು ಅವಶ್ಯವಾಗಿರುವ ಛಂದೋಬಂಧಗಳ ಸ್ವರೂಪವು, ಅವುಗಳಲ್ಲಿ ಹೊಸ ಹೊಸ ರಚನೆಗಳಾಗುತ್ತ ಹೋಗುವಾಗ ಇದ್ದಂತೆಯೇ ಉಳಿಯುವುದು ಕಷ್ಟ. ಇದಕ್ಕೆ ಮರಾಠಿಯ ಓವೀಬಂಧವು ಉತ್ತಮ ನಿದರ್ಶನ. ಆರಂಭದಲ್ಲಿ ಪಾದಕ್ಕೆ ಆರೋ ಏಳೋ ಅಕ್ಷರಗಳಿದ್ದ ಓವಿ ಮತ್ತೆ ಪಾದಕ್ಕೆ ಎಂಟು, ಒಂಬತ್ತು, ಹತ್ತು ಅಕ್ಷರಗಳನ್ನೂ ಪಡೆಯಿತು! ಈ ಮೊದಲೇ ವಿಜ್ಞಾಪಿಸಿದಂತೆ, ಕವಿಯಾದವನು ಛಂದೋ ಲಕ್ಷಣಗಳನ್ನು ಕಲಿತು ಮತ್ತೆ ರಚನೆ ಮಾಡತೊಡಗುವುದಲ್ಲವೇ ಅಲ್ಲ. ಧಾಟಿ-ಯನ್ನು ಹಿಡಿದು ಅವನ ರಚನೆ ಸಾಗುತ್ತದೆ. ಅಲ್ಪ ಪ್ರಮಾಣದ ಅಕ್ಷರಪುಂಜವನ್ನು ಬೃಹತ್‌ಪ್ರಮಾಣದ ಪುಂಜದೊಡನೆ ಸಮೀಕರಿಸಿ ಉಚ್ಚರಿಸುವುದರಿಂದಲೇ ಇಂತಹ ಬಂಧಗಳ ಧಾಟಿ ಉನ್ಮೀಲಿತವಾಗುವ ಕಾರಣ, ಅಂತಹ ಅಲ್ಪೀಯವಾದ ಪುಂಜ-ಗಳಲ್ಲಿ ಅಧಿಕಾಕ್ಷರಗಳು ಸೇರಿಕೊಳ್ಳತೊಡಗುತ್ತವೆ; ಹಾಗೆಯೆ ಮಹೀಯವಾದ ಪುಂಜಗಳಲ್ಲಿ ಅಕ್ಷರಸಂಖ್ಯೆ ಕಡಮೆಯಾಗತೊಡಗುತ್ತದೆ. ಹೀಗೆ ಮಾಡಿದರೂ ಧಾಟಿಯಲ್ಲಿ ವ್ಯತ್ಯಾಸ ಕಾಣುವುದಿಲ್ಲವಾದುದರಿಂದ, ಶ್ರವ್ಯತ್ವಕ್ಕೆ ಹಾನಿ ಬರುವುದಿಲ್ಲ. ಪಿರಿಯಕ್ಕರದಲ್ಲಿ ಪಾದಕ್ಕೆ ಮೂಲಲಕ್ಷಣ – ಒಂದು ಬ್ರಹ್ಮ, ಐದು ವಿಷ್ಣು, ಕೊನೆಗೊಂದು ರುದ್ರ – ಹೀಗೆ. ಆದರೆ ಲಕ್ಷ್ಯಗಳಲ್ಲೆಲ್ಲ ಇದು ತಪ್ಪದೆ ಹೀಗೆ ಇರುವುದಿಲ್ಲವೆಂದೂ, ಮೊದಲನೆಯದು ವಿಷ್ಣುವಾಗಿರುವುದು ಉಂಟೆಂದೂ, ಎರಡನೆಯ ಹಾಗೂ ಆರನೆಯ ಗಣಗಳು ಬ್ರಹ್ಮವಾಗುವುದೂ ಇದೆಯೆಂದೂ ಜಯಕೀರ್ತಿ ನಾಗವರ್ಮರು ಹೇಳುತ್ತಾರೆ. ಸಾಂಗತ್ಯದಲ್ಲಿ ಪದ್ಯಾರ್ಧದ ಕೊನೆ-ಯಲ್ಲಿ ಮಾತ್ರ ಬ್ರಹ್ಮಗಣವೆಂಬುದು ಸಾಮಾನ್ಯ ನಿಯಮ: ಆದರೆ ವೈಕಲ್ಪಿಕವಾಗಿ ಬ್ರಹ್ಮಗಣ ಬೇಕಾದಲ್ಲೆಲ್ಲ ಬರುತ್ತದೆ. 'ಭರತೇಶವೈಭವ'ದಂತಹ ಕಥನಕಾವ್ಯಗಳಲ್ಲಿ ಅದು ಅಲ್ಲೊಂದು ಇಲ್ಲೊಂದು ಎಂಬಂತಿದ್ದರೆ ಕಥನಪ್ರಧಾನವಲ್ಲದ 'ಹದಿಬದೆಯ

ಧರ್ಮ'ದಂಥವುಗಳಲ್ಲಿ ಇದು ವಿಪುಲವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಇಂತಹ ವಿಕಲ್ಪಗಳಿಂದಾಗಿ ಧಾಟಿ ಕೆಡುವುದಿಲ್ಲವಾದ ಕಾರಣ ಇದು ರೂಢವಾಗಿ ಹೋಗಿ, ಮಾನ್ಯವೇ ಆಗಿದೆ. ವಿಕರ್ಷಣಕ್ಕೆ ಎಡೆಯಿಲ್ಲದ ಅಕ್ಷರನಿಯಮ ಅಥವಾ ಮಾತ್ರಾ ನಿಯಮ ಕಟ್ಟುನಿಟ್ಟಾಗಿರುವ ಬಂಧಗಳು ಮಾತ್ರ ಇದ್ದಂತೆ ಉಳಿಯಬಲ್ಲವು. (ಮಾತ್ರಾನಿಯಮವಿದ್ದರೂ ಹಾಡುವ ರೀತಿ ಬದಲಾದರೆ ಛಂದೋರೂಪದಲ್ಲಿ ಅಷ್ಟಿಷ್ಟು ಬದಲಾವಣೆಯಾಗದಿರುವುದಿಲ್ಲವೆಂಬುದನ್ನು ಯಕ್ಷಗಾನದ ಕಂದಪದ್ಯದ ದೃಷ್ಟಾಂತದಿಂದ ಈ ಮೊದಲೇ ತೋರಿಸಲಾಗಿದೆ.) ನಾವೀಗ ಕಂಡಿರುವಂತೆ ತ್ರಿಮೂರ್ತಿಬಂಧಗಳೊಳಗೆ 'ಗೀತಿಕೆ' ಎಂಬುದು ತನ್ನ ಹೆಸರಿಗೆ ತಕ್ಕಂತೆ ಅತಿ ಹೆಚ್ಚಿನ ವಿಕರ್ಷಣಕ್ರಿಯೆಗೆ ಒಳಗಾಗುವ ಛಂದೋಬಂಧ. ಆದುದರಿಂದ ಬರಬರುತ್ತಾ ಇದರಲ್ಲಿ ಒಂದು ವರ್ಗದ ಗಣದ ಬದಲಾಗಿ ಮತ್ತೊಂದು ವರ್ಗದ ಗಣ ಬರತೊಡಗುವುದರಲ್ಲಿ ಚೋದ್ಯವೇನೂ ಇಲ್ಲ.

ಆದರೆ ನಮ್ಮೀ ಗೀತಿಕೆಯಲ್ಲಿ, ಪಿರಿಯಕ್ಕರ ಸಾಂಗತ್ಯಾದಿಗಳಲ್ಲಾದಂತೆ ಗಣವಿಕಲ್ಪ ಮಾತ್ರ ಬಂದುದಲ್ಲ. ಗಣಾಧಿಕ್ಯವೂ ಬಂದಿದೆಯಲ್ಲಾ? ಇದಕ್ಕೇನು ಸಮಾಧಾನ? ಎಂಬ ಪ್ರಶ್ನೆ ಇಲ್ಲಿ ಸಹಜವಾಗಿ ಹುಟ್ಟುತ್ತದೆ. ಈ ಸಮಸ್ಯೆ ಬಗೆಹರಿಯಬೇಕಾದರೆ, ಅಧಿಕಾಧಿಕ ಛಂದೋಬಂಧಗಳಲ್ಲಿ ಕಂಡುಬರುವ ಒಂದು ಲಕ್ಷಣವಿಶೇಷವನ್ನು ಮನವರಿಕೆ ಮಾಡಿಕೊಳ್ಳಬೇಕು. ೧೯೩೩ರಲ್ಲಿ ಪ್ರಕಟವಾದ ನನ್ನ ಛಂದೋನಿಬಂಧದಲ್ಲಿ ಈ ವಿಶೇಷವನ್ನು ವಿಸ್ತಾರವಾಗಿ ನಿರೂಪಿಸಿರುವು-ದರಿಂದ ಇಲ್ಲಿ ಪ್ರಸ್ತುತ ಪ್ರತಿಪಾದನೆಗೆ ಅತ್ಯವಶ್ಯವಿರುವ ಮಟ್ಟಿಗೆ ಮಾತ್ರ ಸಂಕ್ಷೇಪಿಸಿ ಹೇಳುತ್ತೇನೆ :–

ಲಯಬದ್ಧವಾದ, ಎಂದರೆ ಉಚ್ಚಾರಕಾಲದಲ್ಲಿ ಸಮತೆಯಿರುವ ಆವರ್ತ-ಗಳುಳ್ಳ, ಛಂದೋಬಂಧಗಳಲ್ಲಿ ಸಮಪಾದಬಂಧಗಳೆಂದೂ ಅರ್ಧಸಮಬಂಧ-ಗಳೆಂದೂ ಎರಡು ಮುಖ್ಯ ರೂಪಗಳು ಕಂಡುಬರುತ್ತವೆ. ಸಾಮಾನ್ಯವಾಗಿ, ಸಮಪಾದಬಂಧಗಳಲ್ಲಿ ನಾಲ್ಕು ಪಾದಗಳು;[6] ಪ್ರತಿಯೊಂದು ಪಾದದಲ್ಲಿ ನಾಲ್ಕು ತಾಳಖಂಡಗಳಿರುತ್ತವೆ. ಗಣವಿಭಾಗಶಃ ಮೂರು ಪೂರ್ಣಗಣಗಳೂ ಮತ್ತೊಂದು ಅಪೂರ್ಣಗಣವೂ ಇರುತ್ತವೆ. ಉದಾ:–

"ಮಿನುಗೆಲೆ । ಮಿನುಗೆಲೆ । ನಕ್ಷ । ತ್ರ – ॥"

"Twinkle, twinkle, little, star – "

"ದೇಶದಲಿ । ದೀಪಾವ । ಳಿಯ ದಿನವಿ । ದೆಂದು _ ॥"

ಅಥವಾ ಎಂಟು ಖಂಡಗಳಿದ್ದು ಕೊನೆಯದು ಅಲ್ಪಾಕ್ಷರಖಂಡವಾಗಿರು-ತ್ತದೆ. ಉದಾ :–

---

6. ಎರಡೇ ಪಾದಗಳ ಸಮಪಾದ ಬಂಧಗಳೂ ಕೆಲವು ಇವೆ – ನಡುಗನ್ನಡ ದ್ವಿಪದಿಯ ಹಾಗೆ.

"ಶೃಂಗಾರ । ವಲ್ಲರಿಯೆ । ಲತೆಯೊಡನೆ । ಬಳುಕಿ ನೀಂ ।
ನೃತ್ಯಲಾ । ಸ್ಯದಿನಾರ । ನೊಲಿಸುತಿರು । ವೆ– ॥"

ಪಿರಿಯಕ್ಕರ, ಘನಾಕ್ಷರಿ, ಉತ್ಸಾಹ ಇತ್ಯಾದಿಗಳೆಲ್ಲ ಹೀಗೆಯೇ. ಅರ್ಧಸಮ ಬಂಧಗಳಲ್ಲಾದರೆ ಪದ್ಯಾರ್ಧದಲ್ಲಿ ಎಂಟು ಖಂಡಗಳು, ಕೊನೆಯ ಖಂಡ ಅಲ್ಪಾಕ್ಷರದ್ದು.

ಉದಾ :–

"ಮೆರೆವ ಕಾಂ । ಚೀಪುರದೊ । ಳರಸುತನ । ಗ್ಯೆಯುತ್ತ ।
ದೊರೆಯೊರ್ವ । ನಿರ್ದನತಿ । ಪೂರ್ವಕಾ । ಲದೊಳು – ॥
ಚರಿತೆಯೊಳ । ಗವನ ಹೆಸ । ರಿಲ್ಲ ವಾ । ದೊಡದೇನು ।
ನರಪತಿ ಹಿ । ರಣ್ಯ ಗ । ರ್ಭನ ಕೀರ್ತಿ । ಕಿರಿದೆ – ॥"

ಅಥವಾ ಸಂಸ್ಕೃತದ ಗೀತಿಕೆಯ ಹಾಗೆ; ಹಿಂದೆ ಉದಾಹರಿಸಿದ ವಂಜಿ–ಪ್ಪಾಟಿನ ಹಾಗೆ;

"Tell me, not in, mournful, numbers |
Life is, but an, empty, dream - ||

– ಎಂಬುದರ ಹಾಗೆ. ಕೆಲವೇ ಕೆಲವು ಬಂಧಗಳಲ್ಲಿ, ಕಂದಪದ್ಯದ ಹಾಗೆ, ಎಂಟೂ ಅಕ್ಷರಪೂರ್ಣಖಂಡಗಳಾಗಿರುವುದುಂಟು. ಹೀಗೆಯೇ ಕೆಲವು ಸಮ–ಪಾದಬಂಧಗಳಲ್ಲಿಯೂ ನಾಲ್ಕೂ ಅಕ್ಷರಪೂರ್ಣಖಂಡಗಳಾಗಿರುವುದುಂಟು – ಮಾತ್ರಾಸಮಕದ ಹಾಗೆ. ಇನ್ನು ಕೆಲವು ಅರ್ಧಸಮಬಂಧಗಳಲ್ಲಿ ಏಳೇ ಗಣಗಳಿರುತ್ತವೆ; ಅವು 'ಸೊಬಗಿನ ಸೋನೆ'ಯಲ್ಲಿ ಹೇಗೋ ಹಾಗೆ ಎಲ್ಲವೂ ಪೂರ್ಣಗಣಗಳಾಗಿರಬಹುದು. ಅಥವಾ ಸಾಂಗತ್ಯದ ಹಾಗೆ ಕೊನೆಯ ಗಣ ಅಲ್ಪಾಕ್ಷರದ್ದಾಗಿರಬಹುದು. 'ಮಾತ್ರಾಸಮಕ'ದ ಹಾಗೆ ನಾಲ್ಕು ಅಕ್ಷರಪೂರ್ಣ ಖಂಡಗಳಿರುವ ಮತ್ತು ಕಂದಪದ್ಯದ ಹಾಗೆ ಎಂಟು ಪೂರ್ಣಗಣಗಳಿರುವ ಬಂಧಗಳ ಹೊರತಾಗಿ ಉಳಿದೆಲ್ಲವುಗಳಲ್ಲಿ ಸಮಪಾದಬಂಧಗಳಲ್ಲಿ ಪಾದಾಂತದಲ್ಲಿ, ಅರ್ಧಸಮಬಂಧಗಳಲ್ಲಿ ಪದ್ಯಾರ್ಧದಲ್ಲಿ ವಿರಾಮಾವಕಾಶವಿದ್ದೇ ಇರುತ್ತದೆ; ಕೆಲವು ಬಂಧಗಳಲ್ಲಿ ಕಡಮೆ, ಕೆಲವು ಬಂಧಗಳಲ್ಲಿ ಸ್ವಲ್ಪ ಹೆಚ್ಚು. ಈ ವಿರಾಮಾವಕಾಶದ ಪರಿಣಾಮವಾಗಿ ಅವುಗಳ ವಾಚನದಲ್ಲಿ ಯಥೋಚಿತವಾಗಿ ನಾಲ್ಕು ಅಥವಾ ಎಂಟು ತಾಳಖಂಡಗಳು ಉದ್ಭೂತವಾಗುತ್ತವೆ. ಕೆಲವು ಸಮಪಾದ ಬಂಧಗಳ ಪಾದದಲ್ಲಿ ಮೂರೇ ಗಣಗಳಿರುವುದೂ ಕಂಡುಬರುತ್ತದೆ. ಆದರೆ ಅದರ ವಾಚನದಲ್ಲಿ ಕೊನೆಗೆ ಒಂದು ಪೂರ್ಣಗಣದ ಉಚ್ಚಾರಕಾಲದಷ್ಟು ವಿರಾಮವಿದ್ದೇ ಇರುತ್ತದೆ. ಉದಾ:– ಮಹಾಕವಿ ಇಕ್ಬಾಲರ ಸುಪ್ರಸಿದ್ಧವಾದ ಪದ್ಯ:–

ಸಾರೇ ಜಹಾನ್ ಸೇ ಅಚ್ಛಾ ।
ಹಿಂದೂಸ್ತಾನ್ ಹಮಾರಾ ॥

ಉರ್ದು ಛಂದೋಬಂಧಗಳಿಗೂ ತಮಿಳಿನ ತೇಮಾ ಪುಳಿಮಾದಿಗಳನ್ನು ಹೋಲುವ ಗಣವಾಚಕಗಳಿವೆ. ಇಲ್ಲಿ ಉದಾಹೃತವಾದ ಪದ್ಯದ ಗಣವಾಚಕ ಹೀಗೆ:-

ಮಫ ಊಲ ಫಾಯಲಾತುನ್ ।
ಮಫ ಊಲ ಫಾಯಲಾತುನ್ ॥

ಗಣವಾಚಕಕ್ಕೆ ಸರಿಯಾಗುವಂತೆ ಪದ್ಯವನ್ನೋದುವಾಗ ಅದರ ರೂಪ ಹೀಗಾಗುತ್ತದೆ:-

ಸಾರೇ । ಜಹಾನ್‌ಸೆ । ಅಚ್ಛಾ । – ।
ಹಿಂದೂ । ಸಿತಾನ್ ಹ । ಮಾರಾ । – ॥

ಮಾತ್ರಾಗಣನೆ ಮಾಡಿದರೆ, ಇಲ್ಲಿ ಪಾದಕ್ಕೆ ಚತುರ್ಮಾತ್ರಾಗಣಗಳು ಮೂರೇ. ಆದರೆ ವಾಚನದಲ್ಲಿ ಮತ್ತೊಂದು ಚತುರ್ಮಾತ್ರಾಗಣದಷ್ಟು ವಿರಾಮ ಬಂದೇ ಬರುತ್ತದೆ; ಅದು ಕಳೆದ ಮೇಲೆಯೇ ಮುಂದಿನ ಪಾದವನ್ನು ಓದಬೇಕಾಗುತ್ತದೆ. ಪರಿಣಾಮತಃ ಪಾದಕ್ಕೆ ನಾಲ್ಕು ತಾಳಖಂಡಗಳೊದಗುತ್ತವೆ. ಹಿಂದೀ ಮರಾಠೀ ಭಾಷೆಗಳಲ್ಲಿಯೂ ಈ ಛಂದೋಬಂಧವು ಪ್ರಚಲಿತವಾಗಿದ್ದು ಅದಕ್ಕೆ 'ದಿಕ್ಪಾಲ' ಎಂಬ ಹೆಸರಿದೆ, ಇತ್ತೀಚೆಗೆ ವಿಶ್ವವಿಖ್ಯಾತ ಸಂಗೀತಜ್ಞ ಪಂಡಿತ ರವಿಶಂಕರ್ ಈ ಪದ್ಯಕ್ಕೆ ಸ್ವರಸಂಯೋಜನೆ ಮಾಡಿ ಹಾಡಿಸಿದ್ದನ್ನು 'ಆಕಾಶ- ವಾಣಿ'ಯಲ್ಲಿ ನನ್ನಂತೆ ಅನೇಕರು ಕೇಳಿರಬಹುದು. ಅಲ್ಲಿ ಅವರು ಇದರ ದ್ವಿತೀಯಪಾದಕ್ಕೆ ಒಂದು ಗಣವನ್ನು ಹೆಚ್ಚಿಸಿದ್ದಾರೆ. ಅದು ಹೀಗೆ:-

ಸಾರೇ । ಜಹಾನ್‌ಸೇ । ಅಚ್ಛಾ । – ॥
ಹಿಂದೂ । ಸಿತಾನ್ ಹ । ಮಾರ ಹ । ಮಾರಾ ॥

ಹೀಗೆ ಹೆಚ್ಚಿಸಿದ್ದರಿಂದ 'ದಿಕ್ಪಾಲ'ದ ಛಂದೋರೂಪಕ್ಕೆ ಭಂಗ ಬಂದರೂ, ಅದೇ ಧಾಟಿಯನ್ನು ಬೆಳೆಯಿಸಿ ವಿರಾಮಕಾಲವನ್ನು ಅಕ್ಷರಗಳಿಂದ ತುಂಬಿಸಿರುವ ಕಾರಣ ಶ್ರವ್ಯತ್ವಕ್ಕೆ ಹಾನಿ ಬಂದಿಲ್ಲ. ಯಾವುದೊಂದು ಛಂದೋರೂಪಕ್ಕೆ ಕಾಲಾಂ- ತರದಲ್ಲಿ ವೃದ್ಧಿಯೋ ಹ್ರಾಸವೋ ಉಂಟಾಗಿ ಅದೇ ಧಾಟಿಯ ಬೇರೆ ಬೇರೆ ಛಂದೋರೂಪಗಳು ಹುಟ್ಟುವುದು ಹೀಗೆಯೇ. ಸಂಸ್ಕೃತದ ಆರ್ಯೆ, ಗೀತಿ, ಆರ್ಯಾಗೀತಿ ಅಥವಾ ಕಂದಪದ್ಯ – ಇವುಗಳಲ್ಲಿ ಯಾವುದೋ ಒಂದು ಮೂಲಬಂಧವಾಗಿದ್ದು, ಉಳಿದುವು ಹೆಚ್ಚುಕಡಮೆ – "ಹಿಂದೂಸಿತಾನ್ ಹಮಾರ ಹಮಾರಾ" ಹುಟ್ಟಿದಂತೆ ಹುಟ್ಟಿದವುಗಳೆಂಬ ತಥ್ಯವು ಈ ದೃಷ್ಟಿಯಿಂದ ನೋಡಿ- ದರೆ ತಿಳಿದುಬಾರದಿರದು. ಈ ನಾನಾ ಬಗೆಗಳನ್ನೆಲ್ಲ ನಿರ್ಮಿಸಿದವರು ಕವಿಗಳು, ಕಲಾಕಾರರು ಹೊರತು ಛಂದಃಶಾಸ್ತ್ರಕಾರರಲ್ಲ. ಶಾಸ್ತ್ರಕಾರನು ಛಂದಃಶಿಶುವಿನ ತಾಯಿಯಲ್ಲ, ತಂದೆಯೂ ಅಲ್ಲ; ಕವಿಯೇ ತಾಯಿ, ನವೋನ್ಮೇಷಶಾಲಿಯಾದ ಪ್ರತಿಭೆಯೇ ತಂದೆ. ಶಾಸ್ತ್ರಕಾರನ ಸ್ಥಾನ ಅಕ್ಕರೆಯಿಂದ ಶಿಶುವನ್ನು ನೋಡಿ-

ಕೊಳ್ಳುವ ದಾದಿಯದು; ನಾಮಕರಣ ಮಾಡಿಸಿ ಆಶೀರ್ವದಿಸುವ ಪುರೋಹಿತ-ನದು, ಅಷ್ಟೆ.

ನಮ್ಮ ಕನ್ನಡ ಗೀತಿಕೆಯಲ್ಲಿ 'ಹಮಾರ ಹಮಾರಾ' ಆದುದಕ್ಕೆ ಸಂಪೂರ್ಣ ತುಲ್ಯವಾದ ಪರಿಣಾಮವಾಗಿರುವುದು ಕಂಡುಬರುತ್ತದೆ. ಪುರಾತನಲಕ್ಷಣದಂತೆ ಇದೊಂದು ಅರ್ಧಸಮಬಂಧ. ಪದ್ಯಾರ್ಧದಲ್ಲಿ ಏಳು ಗಣಗಳು. ತಾಳದ ದೃಷ್ಟಿ-ಯಿಂದ ಅಕ್ಷರಭರಿತಖಂಡಗಳು ಏಳು, ಹಾಗೂ ವಿರಾಮಖಂಡ ಒಂದು – ಹೀಗೆ ಎಂಟು ಖಂಡಗಳು, ಗೀತಿಕೆಯ ಈ ರೂಪದ ಮೇಲೆ ಯಾವನೋ ಒಬ್ಬ ಪುರಾತನ 'ರವಿಶಂಕರ'ನು ಕೈಯಾಡಿಸಿ, ವಿರಾಮಾವಕಾಶವನ್ನು ಅಕ್ಷರಗಳಿಂದ ತುಂಬಿಸಿರಬೇಕು. ಅದೂ ಸೊಗಸೆಂದೇ ಕಂಡ ಕವಿಗಳು – ನಮಗೀಗ ಕವಿರಾಜ ಮಾರ್ಗದಲ್ಲಿ ಕಂಡುಬರುವಂತಹ – ಪದ್ಯಾರ್ಧದಲ್ಲಿ ಎಂಟು ಗಣಗಳಿರುವ ಗೀತಿಕೆಗಳನ್ನು ರಚಿಸತೊಡಗಿರಬೇಕು. ಇದರಿಂದಾಗಿ ಗೀತಿಕೆಗೆ ಅರ್ಧಸಮರೂಪ ಮತ್ತು ಸಮಪಾದ ರೂಪ – ಹೀಗೆ ಎರಡು ರೂಪಗಳುಂಟಾದವೆಂದು ಅನುಮಾನಿಸುವುದು ಯುಕ್ತವಾಗಿದೆ. ಹಾಗಾದರೆ, ಅದೊಂದು ಗೀತಿಕಾ ಪ್ರಭೇದವೆಂದು ಜಯಕೀರ್ತಿ ನಾಗವರ್ಮರು ಏಕೆ ಹೇಳಲಿಲ್ಲ? – ಎಂಬೊಂದು ಆಕ್ಷೇಪ ಇಲ್ಲಿ ಹುಟ್ಟಬಹುದು. ಇದಕ್ಕೆ ನನಗೆ ತೋರುವ ಸಮಾಧಾನವಿದು :- ಪ್ರಭುಸೇನನ ಲಕ್ಷಣಕ್ಕೆ ಸರಿಯಾದ ಗೀತಿಕೆ ಬಳಕೆಯಲ್ಲಿದ್ದುದು ಪ್ರಾಯಃ ಬೆದಂಡೆ ಚತ್ತಾಣಗಳ ಆ ಹಳೆಯ ಕಾಲದಲ್ಲಿ. ಕವಿರಾಜಮಾರ್ಗದ ಕಾಲದಲ್ಲಿ ಅದು ರೂಪುಗೆಟ್ಟು ಅನೇಕರೂಪಿಯಾದುದು ನಮಗೆ ಕಂಡುಬರುತ್ತದೆ. ಮತ್ತೆ ಅದರ ಬಳಕೆ ನಿಂತು ಹೋಗಿ, ಜಯಕೀರ್ತಿ ನಾಗವರ್ಮರ ಕಾಲಕ್ಕೆ ಅದೊಂದು ಅಳಿದುಳಿದ ಬಂಧವಾಗಿ ಹೋಗಿತ್ತು. (ಅವರಿಗಿಂತ ಮೊದಲಿನ ಲಾಕ್ಷಣಿಕರಾರೂ ಸಮಪಾದಗೀತಿಕೆಗೆ ಲಕ್ಷಣನಿರೂಪಣೆ ಮಾಡಿದ್ದಿರಲಿಕ್ಕಿಲ್ಲ). ಆದುದರಿಂದ ಪ್ರಚಲಿತ ಬಂಧವಾಗಿದ್ದ ತ್ರಿಪದಿಯ ಪ್ರಭೇದಗಳನ್ನು ನಿರೂಪಿಸಿದ ಹಾಗೆ, ಲುಪ್ತಪ್ರಾಯ-ವಾಗಿದ್ದ ಗೀತಿಕೆಯ ವಿಷಯದಲ್ಲಿ ಮಾಡಬೇಕಾದ ಆವಶ್ಯಕತೆ ಇದ್ದಿಲ್ಲ. ಇದನ್ನು ಪರಿಭಾವಿಸಿದರೆ, ಆದಿರೂಪವಾಗಿರದೆ ಮತ್ತೆ ಭಿನ್ನರೂಪದಲ್ಲಿ ಕಾಣಿಸಿಕೊಂಡ ಸಮಪಾದಗೀತಿಕೆಯ ಪ್ರಸ್ತಾವವನ್ನು ಅವರು ಮಾಡದಿದ್ದುದರಲ್ಲಿ ಆಶ್ಚರ್ಯ-ವೇನೂ ತೋರಲಾರದು.

ಮತ್ತೆ ನಮಗೆ ಗೀತಿಕೆ ಕಂಡುಬರುವುದು ಕಾವ್ಯಾವಲೋಕನದಲ್ಲಿ. ಅಲ್ಲಿ ಕಂಡುಬರುವ ಮಾತ್ರದಿಂದ, ಆ ಕಾಲದಲ್ಲಿ ಗೀತಿಕೆ ಪ್ರಚಲಿತವಾಗಿದ್ದ ಬಂಧವೆಂದು ತೀರ್ಮಾನಿಸುವುದು ಉಚಿತವೆಂದಾಗಲಾರದು. ಏಕೆಂದರೆ, ಕಾವ್ಯಾವಲೋಕನ-ಕಾರನೊಬ್ಬ ಲಾಕ್ಷಣಿಕನೆಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು. ಕೇವಲ ಛಂದೋಗ್ರಂಥಗಳಲ್ಲಿ ಮಾತ್ರ ಕಾಣುವ, ಕಾವ್ಯರಚನೆಗೆ ಸರ್ವಥಾ ಉಪಯುಕ್ತ-ವಲ್ಲದ, ಛಂದೋವಿದ್ಯೆಯನ್ನು ಗಣಿತಪ್ರಧಾನದೃಷ್ಟಿಯಿಂದ ನೋಡಿದವರಲ್ಲಿ ಪ್ರಾಯಃ ಮೊತ್ತಮೊದಲಿಗನಾಗಿದ್ದಿರಬಹುದಾದ ಪಿಂಗಳನು ಸಹ ಹೇಳದಿರುವ,

(ಪಿಂಗಳಸೂತ್ರ ಪ್ರಕಾರ ಪಾದಕ್ಕೆ ಆರು ಅಕ್ಷರಗಳಿಗಿಂತ ಕಡಮೆಯ ಸಮವೃತ್ತ-ವಿಲ್ಲ.) ಎರಡೇ ಅಕ್ಷರಗಳ ಪಾದದ ಒಂದು ವೃತ್ತವನ್ನೂ ಕಾವ್ಯಾವಲೋಕನ ಕರ್ತನು ಪ್ರಯೋಗಿಸಿರುವನೆಂಬುದನ್ನು ಮನಗಂಡರೆ, ಅವನಿಗೆ ಶಾಸ್ತ್ರಪ್ರೀತಿ ಎಷ್ಟೆಂಬುದರ ಅರಿವಾಗದಿರದು. ಅವನು ಛಂದೋಂಬುಧಿಯಲ್ಲಿಯೋ ಇನ್ನಾ-ವುದರಲ್ಲಿಯೋ ಉಕ್ತವಾಗಿದ್ದ ಲಕ್ಷಣವನ್ನವಲಂಬಿಸಿ ತನ್ನ ನಾಲ್ಕಾರು ಗೀತಿಕೆಗಳನ್ನು ರಚಿಸಿರುವನೆಂದು ತಿಳಿಯಬೇಕು ಹೊರತು, ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ ಒಂದು ಛಂದೋಬಂಧದಲ್ಲಿ ರಚನೆ ಮಾಡಿರುವನೆಂದಲ್ಲ. ಛಂದೋಗ್ರಂಥಗಳಲ್ಲಿ ಗೀತಿಕೆಗೆ ಪದ್ಯಾರ್ಧದಲ್ಲಿ ಏಳೇ ಗಣಗಳು ಪ್ರೋಕ್ತವಾದುದರಿಂದ ಅವನೂ ಹಾಗೆಯೇ ಬರೆಯಬೇಕಾಯಿತು. ಕವಿರಾಜಮಾರ್ಗದಲ್ಲಿ ಕಾಣುವಂತಹ ಲಕ್ಷಣ ಹೀನವಾದ ಸಮಪಾದಗೀತಿಕೆ ಅವನಿಗೆ ಗ್ರಾಹ್ಯವಾಗದಿದ್ದುದು ಸಹಜವೇ ಸೈ. ಅವನ ಗೀತಿಕೆಗಳಲ್ಲಿ ರುದ್ರಗಣಗಳಿಗೆ ಪ್ರಾಶಸ್ತ್ಯವಿಲ್ಲದೆ, ವಿಷ್ಣುಗಣಗಳ ಆಧಿಕ್ಯವು ಕಂಡುಬರುತ್ತದೆ. ತುಲನಾತ್ಮಕವಾಗಿ, ಅವನ ಗೀತಿಕೆಗಳಿಗಿಂತ ಕವಿರಾಜಮಾರ್ಗದ ಗೀತಿಕೆಗಳಲ್ಲಿ ರುದ್ರಸಂಖ್ಯೆ ಅಧಿಕ. ಗೀತಿಕೆ ರುದ್ರಗತಿಯ ಬಂಧವಾಗಿರುವುದರಿಂದ ರುದ್ರಗಣಗಳ ಆಧಿಕ್ಯವೇ ಸಹಜವಾಗಿ ಅದಕ್ಕೆ ಒಪ್ಪುತ್ತದೆ. ಇದರಿಂದ ನಿಷ್ಪನ್ನ-ವಾಗುವ ತಥ್ಯವೇನೆಂದರೆ – ಕಾವ್ಯಾವಲೋಕನಕಾರನು ಛಂದೋಗ್ರಂಥಗತವಾದ ಲಕ್ಷಣವನ್ನವಲಂಬಿಸಿ ತನ್ನ ಗೀತಿಕೆಗಳನ್ನು ರಚಿಸಿದ್ದು ಹೊರತು, ಪ್ರಚಲಿತವಾಗಿದ್ದ ಧಾಟಿಯಿಂದ ಪ್ರೇರಿತನಾಗಿ ಅವುಗಳನ್ನು ಬರೆದುದಲ್ಲವೆಂಬುದಾಗಿದೆ.

ಸಂಸ್ಕೃತದ 'ಗೀತಿ' ಅಥವಾ 'ಗೀತಿಕೆ'ಯ ವಿರಾಮಾವಕಾಶವು ಅಕ್ಷರಗಳಿಂದ ಭರ್ತಿಮಾಡಲ್ಪಟ್ಟು 'ಆರ್ಯಾಗೀತಿ' ಎಂದರೆ ಕಂದಪದ್ಯ ಹುಟ್ಟಿದ್ದಕ್ಕೂ, ಪದ್ಯಾರ್ಧದಲ್ಲಿ ಏಳು ಗಣಗಳಿದ್ದ ಕನ್ನಡ ಗೀತಿಕೆಯಿಂದ ಎಂಟು ಗಣಗಳ ಗೀತಿಕೆ ಉಂಟಾದುದಕ್ಕೂ ಒಂದು ವ್ಯತ್ಯಾಸವಿದೆ. ಸಂಸ್ಕೃತ ಗೀತಿಕೆಯಲ್ಲಿ ಅಕ್ಷರ ಭರ್ತಿಯಾದದ್ದು ಸಾಧಾರಣವಾಗಿ ಎಲ್ಲಾ ಅರ್ಧಸಮಬಂಧಗಳು ವಿರಮಿಸುವ ದ್ವಿತೀಯ ಚತುರ್ಥ ಪಾದಗಳ ಕೊನೆಯಲ್ಲಿ. ಕನ್ನಡ ಗೀತಿಕೆಯಲ್ಲಿ ಅಕ್ಷರ ಭರ್ತಿಯಾದದ್ದೆಂದು ನಾವೀಗ ಭಾವಿಸಿರುವ ಸ್ಥಾನವು ದ್ವಿತಿಯ ಚತುರ್ಥ ಪಾದಗಳ ಕೊನೆ ಅಲ್ಲ, ಪ್ರಥಮ ತೃತೀಯ ಪಾದಗಳ ಕೊನೆ. ಪ್ರಥಮ ತೃತೀಯ ಪಾದಗಳ ಕೊನೆಯಲ್ಲಿಯೂ ವಿರಾಮವಿರುವುದು ಸಮಪಾದಬಂಧಗಳಲ್ಲಿ ಮಾತ್ರ. ಅರ್ಧಸಮಬಂಧಗಳಲ್ಲಿ ಸಾಧಾರಣವಾಗಿ ಅಲ್ಲಿ ವಿರಾಮವಿಲ್ಲ. ಈ ಕಾರಣದಿಂದ ನಮ್ಮೀ ಊಹೆಯ ಸಾಧುತ್ವದಲ್ಲಿ ಸಂದೇಹ ತೋರಬಹುದು. ಆದರೆ ಈ ವರೆಗೆ ವಿದ್ವಾಂಸರ ಲಕ್ಷ್ಯಕ್ಕೆ ಬೀಳದಿರುವ ವಿಶಿಷ್ಟ ಲಕ್ಷಣವೊಂದು ಕನ್ನಡದ ಪುರಾತನ ಛಂದೋಬಂಧಗಳಲ್ಲಿರುವುದನ್ನು ಮನಗಂಡರೆ ಈ ಸಂದೇಹದ ಪರಿಹಾರ-ವಾಗುತ್ತದೆ. ಅದನ್ನು ಒಂದಿಷ್ಟು ವಿವರವಾಗಿಯೇ ಹೇಳಬೇಕಾಗುತ್ತದೆ.

ನಮಗೆ ಈ ವರೆಗೆ ದೊರೆತಿರುವ ಕನ್ನಡಜಾತಿ ಛಂದೋಬಂಧಗಳಲ್ಲಿ ತ್ರಿಪದಿ ಅತಿಪುರಾತನವೆನ್ನುವುದಕ್ಕೆ ಶಾಸನದ ದಾಖಲೆ ಇದೆ. ಏಳೆಯೂ

ತ್ರಿಪದಿಯೂ ಏಕೋದರಬಂಧಗಳಾಗಿದ್ದು ಇವುಗಳೊಳಗೆ ಏಳೆ ಕಿರಿದಾಗಿರುವು-ದರಿಂದ, ತ್ರಿಪದಿಗಿಂತ ಏಳೆಯೇ ಪುರಾತನಬಂಧವೆಂದು ಕೆಲವರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಕಿರಿದೆಂಬುದರಿಂದ ಮಾತ್ರ ಅದು ಪ್ರಾಚೀನ-ತರವೆಂದು ಹೇಳುವುದಾದರೆ, ಅಕ್ಕರ ಜಾತಿಗಳೊಳಗೆ ಕಿರಿಯಕ್ಕರವೇ ಪ್ರಾಚೀನ-ತಮವೆಂದೂ ಪಿರಿಯಕ್ಕರವು ಅವುಗಳೊಳಗೆ ಅತ್ಯಾಧುನಿಕವೆಂದೂ ಹೇಳುವ ಪ್ರಸಂಗ ಉದ್ಭೂತವಾಗುತ್ತದೆ. ಇದಕ್ಕೆ ಪ್ರಮಾಣವೆಲ್ಲಿದೆ? ಆದಕಾರಣ ಏಳೆ ಪೂರ್ವತರವೋ ತ್ರಿಪದಿ ಪೂರ್ವತರವೋ ಎಂಬುದನ್ನು ನಿರ್ಧರಿಸುವುದಕ್ಕೆ ತೃಪ್ತಿಕರವಾದ ಸಾಧನವು ಉಪಲಬ್ಧವಾಗಿಲ್ಲವೆಂದು ಹೇಳುವುದು ಸೂಕ್ತ. ಅಂತೂ ಅವೆರಡು ಅತಿಪುರಾತನ ಬಂಧಗಳೆಂದು ಒಪ್ಪಿಕೊಳ್ಳುವುದಕ್ಕೆ ಅಡ್ಡಿಯಿಲ್ಲ. ನಮಗೆ ಲಬ್ಧವಾಗಿರುವ ಅತಿ ಹಳೆಯ ಕನ್ನಡ ಪದ್ಯಗ್ರಂಥ ಕವಿರಾಜಮಾರ್ಗ. ಅದರಲ್ಲಿ ಕನ್ನಡ ಜಾತಿಬಂಧ ಬೇರಾವುದೂ ಇಲ್ಲದಿದ್ದರೂ (ಎರಡು ರೂಪದಲ್ಲಿ) ಗೀತಿಕೆಗಳು ಸಾಕಷ್ಟು ಸಂಖ್ಯೆಯಲ್ಲಿ ಇವೆ. ತದನಂತರ ಕಾಲದಲ್ಲಿ ಗೀತಿಕೆಯ ರಚನೆ ನಿಂತುಹೋದಂತೆ ಕಾಣುತ್ತದೆ. ಕಾವ್ಯಾವಲೋಕನದಲ್ಲಿ ಅದನ್ನು ಊರ್ಜಿತ-ಗೊಳಿಸುವ ಪ್ರಯತ್ನ ನಡೆದರೂ ಅದು ಊರ್ಜಿತವಾಗಲಿಲ್ಲ. ಕವಿರಾಜಮಾರ್ಗದ ಕಾಲದಲ್ಲಿ ಎಂದರೆ ಒಂಬತ್ತನೆಯ ಶತಮಾನದಲ್ಲಿಯೇ ಗೀತಿಕೆ ತನ್ನ ಹಳೆಯ ರೂಪವನ್ನು ಬಿಟ್ಟುಕೊಟ್ಟಿತ್ತು. ಇದನ್ನೆಲ್ಲ ಪರಿಭಾವಿಸಿದರೆ, ಏಳೆ, ತ್ರಿಪದಿಗಳಂತೆಯೇ ಗೀತಿಕೆಯೂ ನಮ್ಮ ಅತಿಪುರಾತನ ಛಂದೋಬಂಧಗಳಲ್ಲೊಂದು ಎಂಬುದು ಸ್ಫುಟವಾಗುತ್ತದೆ. ಏಳೆ, ತ್ರಿಪದಿ, ಗೀತಿಕೆ ಎಂಬೀ ಮೂರು ಪುರಾತನ ಬಂಧಗಳಲ್ಲಿ – ಇತರ ಕನ್ನಡ ಜಾತಿಗಳಲ್ಲಿ ಕಂಡುಬಾರದಿರುವ – ಒಂದು ವಿಶೇಷ ಲಕ್ಷಣ-ವಿದೆ. ಅದೇನೆಂದರೆ – ವಾಚನಕ್ರಮದಲ್ಲಿ ಧಾಟಿ ಯಾವ ಗಣದಲ್ಲಿ ನಿಲ್ಲುವುದೋ, ಆ ಗಣದ ಉಪಾಂತ್ಯಗಣವು ನಿಯತವಾಗಿ ಬ್ರಹ್ಮಗಣವಾಗಿರುತ್ತದೆ, ಎಂದರೆ ಧಾಟಿಯ ಆಧಾರಭೂತವಾದ ಗಣಕ್ಕಿಂತ ಅಲ್ಪೀಯವಾಗಿರುತ್ತದೆ. ವಿಷ್ಣುಧಾಟಿಯ ಏಳೆಯಲ್ಲಿ ಏಳನೆಯದು ಅಂತ್ಯಗಣ; ಉಪಾಂತ್ಯವಾದ ಆರನೆಯ ಗಣ ನಿಯತವಾಗಿ ಬ್ರಹ್ಮಗಣ. ಅದೇ ಧಾಟಿಯ ತ್ರಿಪದಿಯಲ್ಲಿ ಧಾಟಿ ನಿಲ್ಲುವ ಸ್ಥಾನಗಳು ಎರಡು ಏಳನೆಯ ಮತ್ತು ಹನ್ನೊಂದನೆಯ ಗಣಗಳು; ಅವುಗಳ ಉಪಾಂತ್ಯಗಳಾದ ಆರನೆಯ ಮತ್ತು ಹತ್ತನೆಯ ಗಣಗಳು ನಿಯತವಾಗಿ ಬ್ರಹ್ಮ-ಗಣಗಳು. ಲಕ್ಷಣಸಂಮತವಾದ ಗೀತಿಕೆಯ ಪುರಾತನರೂಪದಲ್ಲಿ, ಪ್ರತಿಯೊಂದು ಪಾದದ ಕೊನೆಯ ಗಣದ ಉಪಾಂತ್ಯವೂ ನಿಯತವಾಗಿ ಬ್ರಹ್ಮಗಣ. ಏಳೆ ತ್ರಿಪದಿಗಳ ಹೋಲಿಕೆಯಿಂದ ಗೀತಿಕೆಯ ಈ ವಿಶೇಷಲಕ್ಷಣವನ್ನು ಪರಾಮ-ರ್ಶಿಸುವಾಗ – ಪುರಾತನ ಗೀತಿಕೆಯ ಗತಿ, ಅರ್ಧಸಮಬಂಧಗಳೆಲ್ಲ ವಿರಮಿ-ಸುವ, ದ್ವಿತೀಯ ಚತುರ್ಥ ಪಾದಗಳ ಕೊನೆಗಳಲ್ಲಿ ಮಾತ್ರ ವಿರಮಿಸದೆ, ಪ್ರತಿಯೊಂದು ಪಾದದ ಕೊನೆಯಲ್ಲಿಯೂ ವಿಶ್ರಾಂತವಾಗುತ್ತಿತ್ತೆಂದು ಖಚಿತ-ವಾಗುತ್ತದೆ. ಆದರೆ ಇಲ್ಲಿ ಪ್ರಥಮ ತೃತೀಯ ಪಾದಗಳ ಕೊನೆಯಲ್ಲಿ, ಧಾಟಿಯ

ಒಟ್ಟು ಪ್ರಮಾಣಕ್ಕೆ ಒಳಪಡಬಹುದಾದಷ್ಟು ಮಾತ್ರ ಪರಿಮಿತವಾದ ವಿರಾಮವಿರ-ಬಹುದಾಗುತ್ತದೆ. ಏಕೆಂದರೆ ಅವಧಿರಹಿತವಾದ ವಿರಾಮವು ಅರ್ಧಸಮಬಂಧ-ಗಳಲ್ಲೆಲ್ಲ ದ್ವಿತೀಯ ಚತುರ್ಥ ಪಾದಗಳ ಕೊನೆಯಲ್ಲಿರುವ ಅವಧಿಬದ್ಧವಾದ ವಿರಾಮಾವಕಾಶವನ್ನು ಅಕ್ಷರಗಳಿಂದ ಭರ್ತಿಮಾಡಿದರೆ, 'ಹಮಾರ ಹಮಾರಾ' ಎಂಬುದರಲ್ಲಿ ಹೇಗೋ ಹಾಗೆ, ಛಂದಸ್ಸಿನ ನಡೆಗಾಗಲಿ ತಾಳದ ಕಾಲಾವಧಿ-ಗಾಗಲೀ ಒಂದಿಷ್ಟೂ ಭಂಗಬರುವುದಿಲ್ಲವಾದುದರಿಂದ, ಅಂದಿನ ಸೃಷ್ಟಿಶೀಲರು ಅರ್ಧಸಮಗೀತಿಕೆಯ ಪ್ರಥಮ ತೃತೀಯ ಪಾದಗಳಿಗೆ ಒಂದೊಂದು ಗಣವನ್ನು ಕೂಡಿಸುವಾಗ ಆವಿರ್ಭವಿಸಿದ ಗೀತಿಕೆ ಸಮಪಾದ ಬಂಧವಾಗಿ ಪರಿಣಮಿಸಿತು.[7] (ಸಂಸ್ಕೃತದ ಗೀತಿಕೆಯಲ್ಲಿ ಕನ್ನಡದ ಅರ್ಧಸಮ ಗೀತಿಕೆಯ ಹಾಗೆ ಪ್ರಥಮ ತೃತೀಯ ಪಾದಾಂತಗಳಲ್ಲಿ 'ಗತಿ'ಗೆ ವಿರಾಮವಿಲ್ಲವಾದುದರಿಂದ, ಅಲ್ಲಿ ಅಧಿಕಾ-ಕ್ಷರಗಳು ಸೇರಲು ಎಡೆಯಿಲ್ಲವೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.)

ಏಳೆ, ತ್ರಿಪದಿ, ಲಕ್ಷಣಸಂಮತವಾದ ಅರ್ಧಸಮಗೀತಿಕೆ – ಎಂಬೀ ಮೂರು ಅತಿಪುರಾತನ ಕನ್ನಡ ಛಂದೋಬಂಧಗಳಲ್ಲಿ ಬ್ರಹ್ಮಗಣದ ಅವಸ್ಥಾನ-ವನ್ನು ಮತ್ತು ಆ ಛಂದೋಬಂಧಗಳನ್ನು ಹಾಡುವಾಗ ಆ ಬ್ರಹ್ಮಗಣಗಳಿಗೆ ಒದಗುವ ವಿಕರ್ಷಣಾಧಿಕ್ಯವನ್ನು ಅವಧಾನಪೂರ್ವಕ ಭಾವಿಸಿ ನೋಡಿದರೆ, ಅಂದಿನ ಹಾಡುಗಳ ಗತಿಯ ವಿಶಿಷ್ಟ ಲಕ್ಷಣವೊಂದು ನಮ್ಮ ಮನಃಫಲಕದಲ್ಲಿ ಬಿಂಬಿಸುತ್ತದೆ. ಅದೇನೆಂದರೆ – ಧಾಟಿ ಎಂದರೆ ಗತಿಯು ಪಾದಾಂತ್ಯದಲ್ಲಿ ಮುಗಿಯುವುದಕ್ಕೆ ಮೊದಲೇ ಉಪಾಂತ್ಯದಲ್ಲಿ ಒಮ್ಮೆ ವಿಶ್ರಮಿಸಿ, ಮತ್ತೆ ಕೊನೆಯ ಹಜ್ಜೆಯನ್ನಿಡುವುದಾಗಿದೆ. ಈ ಪರಂಪರೆಯ ಪರಿಣಾಮವನ್ನು ನಡುಗನ್ನಡ 'ಪದ'ಗಳಲ್ಲಿ ಎಂದರೆ 'ದಾಸರ ಪದ'ಗಳಲ್ಲಿ, ಯಕ್ಷಗಾನದ ಪದಗಳಲ್ಲಿ, ನಮ್ಮ ಹೆಣ್ಣುಮಕ್ಕಳ ಹಳೆಯ ಪರಂಪರೆಯ ಹಾಡುಗಳಲ್ಲಿ ವಿಪುಲವಾಗಿ ಕಾಣಬಹು-ದಾಗಿದೆ. ಇದಕ್ಕೆ ಕೆಲವು ಉದಾಹರಣಗಳನ್ನು ಕೊಡುತ್ತೇನೆ :–

೧. ಹರಿಯೊಂದು । ದಿವಸದ । ಲಿ– ಬೀ । ದಿಯ ಮೇಲೆ ।
ಹರಿಯುತ್ತ । ತೋಷದ । ಲಿ– ॥

*　*　*　*

೨. ಸದಾನಂದವಿರ । ಲಿ– ಮನವಿದು ।
ಸದಾಶಿವನೊಳಿರ । ಲಿ – ॥

*　*　*　*

೩. ಅಂಗಜ । ಪಿತ ಪಾಪ । ನಾಶನ । –ದೇವೋ ।
ತ್ತುಂಗ ಉ । ತ್ತಮ ಗರು । ಡಾಸನ– ॥

7. ಇದರ ವಾಚನರೂಪವನ್ನು ಈ ನಿಬಂಧದ ಕೊನೆಯಲ್ಲಿ ತೋರಿಸಲಾಗಿದೆ.

* * * *

೪. ಕೋಮಲಾಂಗಿ ಕೇ । ಳೀ– ಮದಗಜ ।
ಗಾಮಿನಿ ಪಾಂಚಾ । ಲೇ– ॥

* * * *

೫. ಬಿಡು ಬಾಹ್ಯ । ದೊಳು ಡಂಬ । ವ– ಮಾ । ನಸದೊಳ ।
ಗೆಡವಿಡ । ದಿಡು ಶಂಭು । ವ– ॥

* * * *

ಉದಾಹೃತವಾದ ಭಾಗಗಳಲ್ಲಿ ಮೊದಲನೆಯದು, ಮೂರನೆಯದು ಮತ್ತು ಐದನೆಯದು ವಿಷ್ಣುಗತಿಯಲ್ಲಿ ನಡೆಯುತ್ತವೆ; ಎರಡನೆಯದು ಮತ್ತು ನಾಲ್ಕನೆಯದು ಚತುರ್ಮಾತ್ರಾಯುಗ್ಮಗತಿಯಲ್ಲಿವೆ. ಇವೆಲ್ಲವುಗಳ ಪ್ರಥಮಪಾದಗಳ ಗತಿಸ್ವರೂಪವು ಇಲ್ಲಿ ಲಕ್ಷ್ಯ. ಧಾಟಿ ಒಮ್ಮೆ ವಿರಮಿಸಿದಂತೆ ತೋರಿಸಿಕೊಂಡು ಥಟ್ಟನೆ ಮುಂದೆ ನೆಗೆಯುವುದೇ ಇದರಲ್ಲಡಗಿರುವ ವಿಶೇಷ. ಹೀಗೆ ಪಾದಾಂತ್ಯ–ದಲ್ಲಿ ವಿಭಕ್ತವಾಗಿ ಕಾಣಿಸಿಕೊಳ್ಳುವ ಅಕ್ಷರಪುಂಜವನ್ನು ಯಕ್ಷಗಾನ ಸಂಪ್ರದಾಯದ ಪರಿಭಾಷೆಯಲ್ಲಿ 'ವರಣ' ಎನ್ನುತ್ತಿದ್ದರು. (ಖ್ಯಾತ ಅರ್ಥಧಾರಿ ದಿ। ಅರ್ಕುಳ ಸುಬ್ರಾಯಾಚಾರ್ಯರು ಸಂಪಾದಿಸಿ ಪ್ರಕಟಿಸಿದ 'ಕೃಷ್ಣಸಂಧಾನ' ಪ್ರಸಂಗದ ಪ್ರಸ್ತಾವನೆಯನ್ನು ಅವಲೋಕಿಸಿರಿ.) ಉದಾಹರಿಸಿದ ಭಾಗಗಳಲ್ಲಿ – 'ಬೀದಿಯ ಮೇಲೆ', 'ಮನವಿದು', 'ದೇವೋ', 'ಮದಗಜ', 'ಮಾನಸದೊಳ' ಎಂಬವು ವರಣಗಳು. ಇಂತಹ 'ವರಣ'ಗಳು ಕರ್ನಾಟಕ ಸಂಗೀತದ 'ಕೃತಿ'ಗಳಲ್ಲಿಯೂ ಜಾವಳಿಗಳಲ್ಲಿಯೂ ಇರುವುದುಂಟು. ಹೀಗೆ 'ವರಣ'ವಿರುವ 'ಪದ'ಗಳು ನೃತ್ಯಕ್ಕೆ ಬಹಳ ಸೊಗಸು. ಇದರಿಂದ ಕುಣಿತದಲ್ಲಿ ಮನೋಹರವಾದೊಂದು ತರಂಗ–ಭಂಗಿಗೋ 'ಪ್ಲುತಿ'ಗೋ ಪ್ರೇರಣೆ ದೊರಕುತ್ತದೆ.

ಅರ್ಧಸಮಗೀತಿಕೆ ಮತ್ತು ಸಮಪಾದಗೀತಿಕೆ ಎಂಬ ಎರಡು ರೂಪ–ಗಳೊಳಗೆ, ಅರ್ಧಸಮಗೀತಿಕೆಯಲ್ಲಿಯೇ ಗೀತೋಪಯುಕ್ತತೆ ಅಧಿಕವಾಗಿದೆ. ಈ ಬಂಧದಲ್ಲಿ ರಚಿತವಾದ 'ಕಾವ್ಯ' ಎನ್ನಬಹುದಾದದ್ದು ಯಾವುದೂ ಈ ವರೆಗೆ ನಮಗೆ ಲಬ್ಧವಾಗಿಲ್ಲ. ನಮಗೆ ಲಬ್ಧವಾದವುಗಳೆಲ್ಲ ಶಾಸ್ತ್ರನಿರೂಪಣಾವಸರದಲ್ಲಿ ಬಂದವುಗಳು. ಇದರಿಂದಾಗಿ ಈ ಅರ್ಧಸಮಗೀತಿಕೆಯ ಉಪಯೋಗ ಅಷ್ಟೇ ಎಂದು ನಾವು ಭ್ರಮಿಸಬಾರದೆಂದು ಇದರ ಹೆಸರೂ ಇದರ ಗತಿಸ್ವರೂಪವೂ ಸಾರಿ ಸಾರಿ ನಮಗೆ ಹೇಳುತ್ತವೆ. ಅಕ್ಷರಗಳ ವಿಕರ್ಷಣಕ್ಕೆ ಅತಿಯಾಗಿ ಗುರಿಯಾಗಬೇಕಾಗಿರುವ ಈ ಛಂದೋಬಂಧವನ್ನು ಶಾಸ್ತ್ರಕಾರರು ಏಕೆ ಬಳಸಿ–ಕೊಂಡರೋ, ಅಲ್ಲಿ ಅದರ ಔಚಿತ್ಯವೇನೋ, ಹೇಳುವುದು ಕಷ್ಟ. ಅಕ್ಷರಗಳ ಜಗ್ಗಾಟವು ಗಾನಕ್ರಿಯೆಯಲ್ಲಿ ಅತಿಶಯವನ್ನು ತರಬಲ್ಲುದು ಹೊರತು, ಅರ್ಥದ ಯಥಾವತ್ತಾದ ನಿರೂಪಣಕ್ಕೆ ಅದು ಸಹಾಯಕವಲ್ಲ, ಪ್ರತಿಬಂಧಕ – ಎಂಬುದರಲ್ಲಿ

ಮತಭೇದವಿರಲಾರದು. ಬುದ್ಧಿಗೆ ಕ್ಲೇಶದಾಯಕವಾದ ಲಕ್ಷಣವಿವೃತಿಗಳಲ್ಲಿ ವಿದ್ಯಾರ್ಥಿಯೋ ಜಿಜ್ಞಾಸುವೋ ಓದುವಾಗ ಎಡೆಯೆಡೆಯಲ್ಲಿ ಲಘುವಾಗಿ ಒಂದಿಷ್ಟು ಹಾಡಿಕೊಳ್ಳಲಿ ಎಂಬ ಕಾರುಣ್ಯಬುದ್ಧಿಯಿಂದ ಈ ಗೀತಿಕೆಗಳನ್ನವರು ತಮ್ಮ ಶಾಸ್ತ್ರನಿಬಂಧಗಳಲ್ಲಿ ಸೇರಿಸಿದರೋ ಏನೋ! ಯಾರು ಹೇಳಬಲ್ಲರು? ಅವರು ಯಾವ ಉದ್ದೇಶದಿಂದಲಾದರೂ ಹಾಗೆ ಮಾಡಿರಲಿ – ನಾನಿಲ್ಲಿ ಈ ವರೆಗೆ ಮಾಡಿದ ನೀರಸವಾದ ವಿವರಣೆಗಳನ್ನೂ ಜಟಿಲವಾದ ಪ್ರತಿಪಾದನೆಗಳನ್ನೂ ಕೇಳಿ ಕೇಳಿ ಭಾರವಾಗಿ ಹೋಗಿರಬಹುದಾದ ನಿಮ್ಮ ಮನಸ್ಸನ್ನು ಒಂದಿಷ್ಟು ಹಗುರ ಮಾಡುವೆನೆಂಬ ಹುಚ್ಚಿನಿಂದ, ಪ್ರಭುಸೇನಪ್ರೋಕ್ತವಾದ ಲಕ್ಷಣಕ್ಕೆ ಸಂಮತವಾಗಿ – ಆದರೆ ಪರ್ಯಾಯ ಕ್ರಮದಲ್ಲಿ ಪ್ರಾಸವಿಟ್ಟು, ಓದುವುದು ಸುಗಮವಾಗುವಂತೆ ಗಣಾಂತಗಳಲ್ಲಿ ಯತಿಯಿಟ್ಟು ನಾನು ರಚಿಸಿದ ಗೀತಿಕೆಯೊಂದನ್ನು ಓದುತ್ತೇನೆ – ಲಾಲಿಸಬೇಕು:

ರು ಬ್ರ ರು
೧ ೧ ೨ ೨ ೨ ೧೧೨ ೨೨ ೨ ೨ ೨೨
ಮನಸು ಮಾತು । ನಡತೆ . . । ಒಂದೇ ಆಗಿ

ರು ರು ಬ್ರ ವಿ
೧೧೨ ೨೨ ೧ ೧ ೨ ೨ ೨ ೧೧ ೨ ೨ ೨ ೧೧ ೨೨ ೨
ನಡೆಯಿರಣ್ಣ । ಸುಖ ಸಂಚಾರ । ಕ್ಕಿದುವೇ . . । ರಹದಾರಿ . ।

ವಿ ಬ್ರ ರು
೧೧ ೨ ೨ ೨ ೨ ೨ ೨೨ ೧೧೨ ೨ ೨
ತನಿಹಾಲ . । ಮೇಲೆ . . । ಕೆನೆಯೆಂತಂತೆ ।

ರು ರು ಬ್ರ ರು
೧ ೧ ೨ ೨ ೨ ೧೧ ೨೨ ೨ ೧೧೨ ೨೨ ೨ ೨೨ ೨
ಪೊಡವಿಯಲ್ಲಿ । ಕೆಳೆ ಹಬ್ಬುವ । ಬೆಡಗ . . । ಕಾಂಬಿರಾಗ ॥

'ಅರ್ಧಸಮಗೀತಿಕೆ'ಯ ಪ್ರಥಮ ತೃತೀಯ ಪಾದಗಳಿಗೆ, ಬ್ರಹ್ಮ ವಿಷ್ಣು ರುದ್ರಗಳೊಳಗೆ ಯಾವುದಾದರೊಂದು ಗಣವನ್ನು (ಇಷ್ಟಬಂದ ಸ್ಥಾನದಲ್ಲಿ) ಕೂಡಿಸಿದರೆ, ಅದು ಕವಿರಾಜಮಾರ್ಗದಲ್ಲಿರುವಂತಹ 'ಸಮಪಾದಗೀತಿಕೆ'–ಯಾಗುತ್ತದೆ. ಈಗ ನಾನೋದಿದ ಅರ್ಧಸಮಗೀತಿಕೆಯನ್ನೇ (ಆ ಪಾದಾಂತ–ಗಳಲ್ಲಿ ಒಂದೊಂದು ಗಣ ಕೂಡಿಸಿ) ಸಮಪಾದಗೀತಿಕೆಯಾಗಿ ರೂಪಿಸಿ, ಓದಿ ತೋರಿಸುತ್ತೇನೆ:–

ವಿ
೧ ೧೨ ೨ ೨ ೧೧೨ ೨೨ ೨ ೨ ೨೨ ೨ ೨ ೨ ೨
ಮನಸು ಮಾತು । ನಡತೆ . . । ಒಂದೇ ಆಗಿ । ನೇರಾಗಿ . ।

೧೧ ೨ ೨೨ ೧೧ ೨ ೨೨ ೧೧ ೨ ೨ ೨ ೧೧ ೨೨ ೨
ನಡೆಯಿರಣ್ಣ । ಸುಖ ಸಂಚಾರ । ಕ್ಕಿದುವೇ . . । ರಹದಾರಿ . ।

ಬ್ರ
೧೧ ೨ ೨ ೨ ೨ ೨ ೨ ೨ ೧೧೨ ೨ ೨ ೨ ೨ ೨೨
ತನಿಹಾಲ . । ಮೇಲೆ . . । ಕೆನೆಯೆಂತಂತೆ । ಮೂಡಿ . . ।

೧ ೧ ೨ ೨ ೨ ೧೧ ೨ ೨ ೨ ೧೧೨ ೨೨ ೨ ೨ ೨ ೨
ಪೊಡವಿಯಲ್ಲಿ । ಕೆಳೆ ಹಬ್ಬುವ । ಬೆಡಗ . . । ಕಾಂಬಿರಾಗ ॥

ಹಿಂದೆ ಉದ್ಧರಿಸಲಾದ ಕವಿರಾಜಮಾರ್ಗದ ಸಮಪಾದ ಗೀತಿಕೆಗಳ ಪಾಠನರೂಪ:–

ವಿ ರು ಬ್ರ ವಿ
೧ ೧ ೨೨ ೨ ೨ ೨ ೨ ೨ ೧೧ ೨ ೨೨ ೨೨ ೨ ೨
ಕುಱುತುಸ . । ಮುಚ್ಚಯದಾ । ಬಱುವಿ . . । ಕಲ್ಪದಾ . ।

ವಿ ರು ಬ್ರ ವಿ
೧೧ ೨ ೨ ೨ ೨ ೨ ೨ ೨ ೨ ೨ ೨೨ ೧೧ ೨ ೨ ೨
ತೆಱದೊಳೆ . । ದೋಷಮುಮ । ನಂತೆ . . । ಗುಣಮುಮಂ . ॥

ವಿ ರು ಬ್ರ ರು
೧೧ ೨ ೨ ೨ ೧ ೧ ೨ ೨ ೨ ೨ ೨ ೨೨ ೧ ೧೨ ೨ ೨
ಕಿಱಿದಱೊ . । ಳಱಿಯೆ ಪೇೞ್ದ । ನಿಂತೆ . . । ಪೆಱುವುಮನೀ ।

ವಿ ವಿ ಬ್ರ ವಿ
೧೧ ೨೨ ೨ ೧ ೧ ೨ ೨ ೨ ೨ ೨ ೨೨ ೨೨ ೨ ೨
ಕುಱುಪನೆ . । ಕುಱುಮಾಡಿ . । ಪೇೞ್ಗೆ . . । ಕಬ್ಬಮಂ . ॥

ವಿ ರು ಬ್ರ ವಿ
೧೧ ೨೨ ೨ ೨ ೨ ೨೨ ೨ ೨ ೨ ೨ ೧೧ ೨ ೨೨
ಸವಿಹಿತ . । ಮಪ್ಪ ಕರ್ಣ । ಪೂರೋ . . । ತ್ಪಳಮಂ . . ।

ವಿ ರು ಬ್ರ ಬ್ರ
೧೧ ೨೨ ೨   ೨ ೨೨೨   ೧ ೧ ೨ ೨೨   ೧೧ ೨ ೨೨
ಧವಳವಿ . . । ಲೋಚನೆಯ । ಗುಣ ಸುಂ . . । ದರಮಂ . . ॥

ವಿ ರು ಬ್ರ ವಿ
೧೧೨ ೨ ೨   ೨೨ ೨ ೨   ೧೧ ೨ ೨೨   ೧ ೧ ೨ ೨ ೨
ಕಿವಿವರಂ . । ನೀಳ್ದ . . । ನಯನ . . । ಯುಗದೊಳೊ . ।

ರು ರು ರು ಬ್ರ
೧ ೧ ೨ ೨೨   ೧ ೧ ೨ ೨ ೨   ೧೧ ೨ ೨ ೨   ೧೧ ೨ ೨೨
ಪ್ಪುವವಳಾನ । ವಯವದೇಕೆ । ಕಳೆಯವೇೞ್ದಂ । ಪ್ರಿಯೆಯಂ . . ।



## ಅನುಬಂಧ – ೪

# ಛಂದೋವತಂಸ*

೧

೧೯೩೨ನೆಯ ಇಸವಿ ದಶಂಬರ ತಿಂಗಳಲ್ಲಿ ಮಡಿಕೇರಿಯಲ್ಲಿ ನಡೆದ ಕರ್ಣಾಟಕ ಸಾಹಿತ್ಯಪರಿಷತ್ತಿನ ವಾರ್ಷಿಕ ಸಂಮೇಳನದಲ್ಲಿ ಓದಿದ ನನ್ನ 'ಕನ್ನಡ ಛಂದಸ್ಸು' ಎಂಬೊಂದು ದೀರ್ಘನಿಬಂಧದಲ್ಲಿ – ಇದು ೧೯೩೩ರ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ಎರಡು ಸಂಚಿಕೆಗಳಲ್ಲಿ ಪ್ರಕಾಶಿತವಾಗಿರುತ್ತದೆ – 'ಕರ್ಣಾಟಕ ವಿಷಯಜಾತಿ' ಗಳಲ್ಲೊಂದಾದ **ಛಂದೋವತಂಸ** ಎಂಬ ಛಂದೋ-ಬಂಧದ ಕುರಿತಾಗಿಯೂ ಕೆಲವು ವಿಚಾರಗಳು ಬಂದಿವೆ; ಮತ್ತು ಅದರ 'ಧಾಟಿ'ಯನ್ನು ನಿರೂಪಿಸುವ ಪ್ರಯತ್ನವನ್ನೂ ಅಲ್ಲಿ ಮಾಡಲಾಗಿದೆ. ಆ ನಿಬಂಧದಲ್ಲಿ ನಾನು ಅವಲಂಬಿಸಿದುದು ಕೀ. ಶೇ. ಮಂ. ಆ. ರಾಮಾನುಜ ಅಯ್ಯಂಗಾರರಿಂದ ಪರಿಷ್ಕೃತವಾಗಿ ಮೈಸೂರಿನಲ್ಲಿ ಪ್ರಕಾಶಿತವಾದ 'ಛಂದೋಂ-ಬುಧಿ'ಯನ್ನೇ ಆಗಿದ್ದರೂ, ಅದರಲ್ಲಿ ಪ್ರೋಕ್ತವಾದ ಛಂದೋವತಂಸದ ಲಕ್ಷಣ-ವನ್ನಾಧರಿಸಿ ಅದರ ಧಾಟಿಯನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ಸಾಫಲ್ಯವು ಕಂಡುಬಾರದಿದ್ದುದರಿಂದ – ಕಿಟ್ಟೆಲ್ ಸಾಹೇಬರಿಂದ ಸಂಪಾದಿತವಾಗಿ (ಮೈಸೂರು ಪ್ರತಿ ಬರುವುದಕ್ಕೆ ಎಷ್ಟೋ ಮೊದಲು) ಮಂಗಳೂರಲ್ಲಿ ಮುದ್ರಿತ-ವಾಗಿದ್ದ 'ಛಂದೋಂಬುಧಿ'ಯ ಪಾಠವನ್ನಾಧರಿಸಿ ಪ್ರಯತ್ನಿಸಿದಾಗ ವಿಶಿಷ್ಟ-ವಾದೊಂದು ಧಾಟಿ ಕೂಡಿ ಬಂದುದರಿಂದ ಅದುವೇ ಛಂದೋವತಂಸದ ಧಾಟಿ ಎಂದೂ ಆ ಪಾಠಾನುಸಾರವಾದ ಲಕ್ಷಣವೇ ಛಂದೋವತಂಸದ ನಿಜವಾದ ಲಕ್ಷಣವೆಂದೂ ಆಗ ನಾನು ಭಾವಿಸುವಂತಾಯಿತು. ಆದರೆ ಮತ್ತೆ ಹಲವು ವರ್ಷಗಳ ಬಳಿಕ (೧೯೪೯ರಲ್ಲಿ) ಬೆಳಕಿಗೆ ಬಂದ ಜಯಕೀರ್ತಿಯ

---

* {ಬೆಂಗಳೂರಿನ ಬಿ. ಎಂ. ಶ್ರೀ ಪ್ರತಿಷ್ಠಾನದಿಂದ ಪ್ರಕಟಗೊಳ್ಳುತ್ತಿದ್ದ 'ಲೋಚನ' ಪತ್ರಿಕೆಯ (ಅನಂತರ ಈ ಪತ್ರಿಕೆಗೆ 'ಕರ್ನಾಟಕ ಲೋಚನ' ಎಂಬ ನಾಮಾಂತರವುಂಟಾಯಿತು.) ಸಂಪುಟ ೪ರ ಸಂಚಿಕೆ ೧ – ೨ (ಸಂಯುಕ್ತ ಸಂಚಿಕೆ – ಜೂನ್ – ಡಿಸೆಂಬರ್ ೧೯೮೬)ಯಲ್ಲಿ ಈ ಲೇಖನವು ಮೊದಲು ಪ್ರಕಟಗೊಂಡು ಅನಂತರ ೧೯೮೮ರಲ್ಲಿ 'ಕನ್ನಡ ಛಂದಸ್ಸು' ನಿಬಂಧದ ಅನುಬಂಧವಾಗಿ ಸೇರಿಸಲ್ಪಟ್ಟಿತು. ಈ ಲೇಖನದಲ್ಲಿ 'ಚೌಪದಿ' ಮತ್ತು 'ಛಂದೋವತಂಸ' ಎಂಬ ಎರಡು ಛಂದೋಬಂಧಗಳ ವಿವೇಚನೆಯಿದ್ದು ಮೂಲ ನಿಬಂಧದಲ್ಲಿ ಈ ವಿಚಾರಗಳು ಅಸಮರ್ಪಕವಾದುದರಿಂದ ಅಲ್ಲಿ ಅವನ್ನು ಕೈ ಬಿಡಲಾಗಿದೆ. ಛಂದೋಂಬುಧಿಯಲ್ಲಿ ಏಳೆಯ ಅನಂತರ ಚೌಪದಿ ಮತ್ತು ಛಂದೋವತಂಸ ಎಂಬ ಬಂಧಗಳ ಲಕ್ಷಣನಿರೂಪಣೆ ಇದೆ. ಪ್ರಸ್ತುತ 'ಕನ್ನಡ ಛಂದಸ್ಸು' ನಿಬಂಧದ 21ನೆಯ ಟಿಪ್ಪಣಿಯಲ್ಲಿ ತ್ರಿಪದಿಯ ಅನಂತರ ಏಳೆಯ ವಿವೇಚನೆ ಮಾಡಲಾಗಿದ್ದು ಕೊನೆಯಲ್ಲಿ 'ಛಂದೋವತಂಸ' ಎಂಬ ಈ ಲೇಖನವನ್ನು ಉಲ್ಲೇಖಿಸಿದೆ. – ಸಂ.}

'ಛಂದೋನುಶಾಸನ'ವನ್ನೋದಿದಾಗ ಅದರಲ್ಲಿ ಪ್ರೋಕ್ತವಾದ ಲಕ್ಷಣವೂ ಮೈಸೂರು ಪ್ರತಿಯಲ್ಲಿಯ ಲಕ್ಷಣವೂ ಸಮಾನವಾಗಿರುವುದು ತಿಳಿದುಬಂದುದ-ರಿಂದ, ಆ ಪಾಠವೇ ಗ್ರಾಹ್ಯವೆಂದೂ, ಮಂಗಳೂರು ಪ್ರತಿಯದು ಗ್ರಾಹ್ಯವಲ್ಲ-ವೆಂದೂ ಮನವರಿಕೆಯಾಯಿತು. ಜಯಕೀರ್ತಿಯ ಗ್ರಂಥದಲ್ಲಿ ಆ ಭಾಗ ಹೀಗಿದೆ:

ಕಂದರ್ಪಗಣತೋ ರತಿಗಣಚತುಷ್ಕಂ ಚೇತ್ ।
ಛಂದಸಿ ಜಯಕೀರ್ತೇರಾದಿವರಾಹಾಖ್ಯಾ ॥
ಛಂದೋವತಂಸ ನಾಮೇತಿ ಚತುಷ್ಪದಿಕಾ ।
ಸಂದೃಷ್ಟಾಸೌ ಕುಮಾರಸಂಭವಾದೌ ॥ (೭-೧೬)

ಛಂದೋಂಬುಧಿಯ ಮೈಸೂರು ಪ್ರತಿಯಲ್ಲಿ ಕಂಡು ಬರುವ ಪಾಠ:

ಮಂದರಧರಗಣಮೆಸೆದಿರೆ ಮೊದಲೊಳೆ ।
ಬಂದಿರೆಯುಂ ನಾಲ್ಕೆಡೆ ಬಿಸರುಹಜನ್ಮಂ ।
ಸಂದುದು ಲಕ್ಷಣಮವನಿಯೊಳೀ ತೆರದಿಂ ।
ಛಂದೋವತಂಸಕ್ಕೆಸೆದುದು ಗಜಗಮನೇ ॥ (ಪಂಚಮಾಧಿಕಾರ)

[ವಿ.ಸೂ. : ಸಂಸ್ಕೃತ ಛಂದಃಶಾಸ್ತ್ರಗಳಲ್ಲಿ ತ್ರಿಮೂರ್ತಿಗಣ(=ಅಂಶಗಣ)ಗಳ ಪ್ರಸ್ತಾವವಿಲ್ಲವಾದರೂ – ಸಂಸ್ಕೃತದ ಸಂಗೀತಶಾಸ್ತ್ರಗ್ರಂಥಗಳಲ್ಲಿ ಇವುಗಳ ವಿಚಾರವಿದೆ. 'ಛಂದೋಂಬುಧಿ'ಯಲ್ಲಿ ಬ್ರಹ್ಮ, ವಿಷ್ಣು, ರುದ್ರ ಎಂದು ಹೆಸರಿಸ-ಲಾಗಿರುವ ಮೂರು ಗಣಗಳಿಗೆ ಈ ಸಂಗೀತಶಾಸ್ತ್ರಗ್ರಂಥಗಳಲ್ಲಿ ಅನುಕ್ರಮವಾಗಿ ರತಿ, ಕಾಮ, ಬಾಣ, ಎಂಬ ಹೆಸರುಗಳು ಪ್ರೋಕ್ತವಾಗಿವೆ. ಜಯಕೀರ್ತಿ ಈ ಸಂಜ್ಞೆಗಳನ್ನು ಬಳಸಿದ್ದು ಮಾತ್ರವಲ್ಲದೆ ರ, ಲ, ಫ ಎಂಬ ಏಕಾಕ್ಷರ ನಾಮಗಳನ್ನು ಸಹ ನಿರ್ಮಿಸಿಕೊಂಡಿದ್ದಾನೆ. ಕಟಪಯಾದಿ ಸಂಖ್ಯಾನದಂತೆ ರ = ೨, ಲ = ೩, ಫ = ೪ ಎಂದಾಗುತ್ತದೆ. ಆಯಾ ಗಣವರ್ಗದ ಪ್ರಥಮಗಣದ ಅಕ್ಷರಸಂಖ್ಯೆಯನ್ನು ರ, ಲ, ಫಗಳು ಸೂಚಿಸುತ್ತವೆ.]

ಜಯಕೀರ್ತಿ ಹೇಳುವ ಛಂದೋವತಂಸದ ಲಕ್ಷಣಕ್ಕೂ ಛಂದೋಂ-ಬುಧಿಯ ಮೈಸೂರು ಪ್ರತಿಯಲ್ಲಿಯ ಲಕ್ಷಣಕ್ಕೂ ಯಾವ ಭೇದವೂ ಇಲ್ಲ. ಆದುದರಿಂದ ಮೈಸೂರು ಪ್ರತಿಯಲ್ಲಿ ಹಾಗೂ ಜಯಕೀರ್ತಿಯ ಗ್ರಂಥದಲ್ಲಿ ಪ್ರೋಕ್ತವಾದ ಲಕ್ಷಣವೇ ಛಂದೋವತಂಸದ ನಿಜವಾದ ಲಕ್ಷಣವೆಂಬುದರಲ್ಲಿ ಸಂದೇಹವಿಲ್ಲ.

ಆದರೆ, ಈ ಮೇಲೆ ಉದಾಹೃತವಾದಂತೆ, ಲಕ್ಷ್ಯಲಕ್ಷಣಸಮವಾಯ-ರೂಪವಾಗಿ ಜಯಕೀರ್ತಿಯೂ ನಾಗವರ್ಮನೂ ನಿರೂಪಿಸಿರುವ ಛಂದೋ-ವತಂಸದ ಧಾಟಿಯನ್ನು ನಿರ್ಣಯಿಸುವ ವಿಷಯದಲ್ಲಿ ಒಂದು ತೊಡಕು ಕಂಡು ಬರುತ್ತದೆ; ಯಾವುದೊಂದು ತ್ರಿಮೂರ್ತಿಗಣಬಂಧದಲ್ಲಿ ಗಣಗಳೊಳಗೆ ಯಾವು-ದರ ಆಧಿಕ್ಯವಿದೆಯೋ ಆ ಗಣವು ಆ ಬಂಧದ ಧಾಟಿಯನ್ನು ನಿರ್ಧರಿಸು-ವುದಾಗಿದೆ. (ಈ ತತ್ತ್ವದ ವಿವರಗಳನ್ನು ತಿಳಿಯಲಪೇಕ್ಷಿಸುವವರು ಬೆಂಗಳೂರಿನ

ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ಮೂಲಕ ಪ್ರಕಟವಾದ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ನನ್ನ ನಿಬಂಧವನ್ನು ಅವಲೋಕಿಸಬಹುದು.) ಅಲ್ಲದೆ, ಆ ಧಾಟಿಯಂತೆ ಪಠಿಸುವಾಗ ಅಲ್ಪಪರಿಮಾಣದ ಗಣಗಳು ಆ ಬಂಧದಲ್ಲಿರುವ ಅಧಿಕಪರಿಮಾಣದ ಗಣಗಳಷ್ಟು ವಿಸ್ತಾರಗೊಳ್ಳುವುದೂ ಕರ್ಣಾಟಕ ವಿಷಯಜಾತಿಬಂಧಗಳ ಇನ್ನೊಂದು ಸಾಮಾನ್ಯಲಕ್ಷಣವಾಗಿದೆ. ಉದಾ – ಪಿರಿಯಕ್ಕರ – ಈ ಬಂಧದಲ್ಲಿ ವಿಷ್ಣುಗಣಗಳ ಆಧಿಕ್ಯವಿರುವುದರಿಂದ ಅದು ವಿಷ್ಣುಧಾಟಿಯಲ್ಲಿ ಪಠಿಸಬೇಕಾದ ಬಂಧವಾಗಿದೆ. ಅದರೊಳಗೆ ಕಡ್ಡಾಯವಾಗಿ ಮತ್ತು ಐಚ್ಛಿಕವಾಗಿ ಬರುವ ಬ್ರಹ್ಮಗಣಗಳನ್ನು ವಿಷ್ಣುಗಣದ ಪರಿಮಾಣಕ್ಕೆ ಸರಿಯಾಗಿ ಕರ್ಷಿಸಬೇಕಾಗುತ್ತದೆ. ಆದರೆ ಯಾವುದೊಂದು ಬಂಧದಲ್ಲಿ ಅಧಿಕಪರಿಮಾಣದ ಗಣವು ಪಾದಾಂತದಲ್ಲಿರುವ ಸಂದರ್ಭಗಳಲ್ಲೆಲ್ಲ ಆ ಬಂಧದ ಪ್ರಧಾನಗಣದಷ್ಟನ್ನು ಮೀರಿದ ಭಾಗವು ಆ ಪಾದದ ಕೊನೆಯ ಊನಾಕ್ಷರ ತಾಲಖಂಡವಾಗಿ ಪರಿಣಮಿಸುತ್ತದೆ. ಪಿರಿಯಕ್ಕರದ ಪಾದಾಂತದಲ್ಲಿರುವ ರುದ್ರ ಗಣವು ಇಂತಹದಾಗಿದೆ. ತ್ರಿಮೂರ್ತಿಬಂಧಗಳ ಈ ಸಾಮಾನ್ಯಲಕ್ಷಣಗಳನ್ನನುಸರಿಸಿ ಛಂದೋವತಂಸವನ್ನು ಪಠಿಸುವ ಪ್ರಯತ್ನಮಾಡುವಾಗ – ಛಂದೋವತಂಸವು ಬ್ರಹ್ಮಗಣಪ್ರಧಾನಬಂಧವಾದುದರಿಂದ ಸಹಜವಾಗಿ ಅದು ಬ್ರಹ್ಮ ಧಾಟಿಯನ್ನು ಅನುಸರಿಸಬೇಕಾಗುತ್ತದೆ. ಆದರೆ ಅದರಲ್ಲಿರುವ ಒಂದು ವಿಷ್ಣು ಗಣವು ಪಾದಾಂತದಲ್ಲಿ ಇರದೆ ಪಾದಾದಿಯಲ್ಲಿ ಇರುವುದರಿಂದ ಬ್ರಹ್ಮಧಾಟಿಗೆ ಅದು ಒಗ್ಗುವಂತೆ ತೋರುವುದಿಲ್ಲ. ಇದರ ಬದಲಾಗಿ ಸಾಮಾನ್ಯನಿಯಮಕ್ಕೆ ಇದೊಂದು ಅಪವಾದವೆಂದು ಭಾವಿಸಿಕೊಂಡು ಇದರಲ್ಲಿರುವ ಬ್ರಹ್ಮಗಣಗಳೆಲ್ಲವನ್ನೂ ವಿಷ್ಣುಧಾಟಿಗೆ ಒಗ್ಗುವಂತೆ ಕರ್ಷಿಸಿದರೆ ಆ ಧಾಟಿಯ ಸ್ವರೂಪವು ಹೀಗಾಗುತ್ತದೆ.

೨ ೨೨ ೧೧೨+೨ ೧೧೨+೨ ೧೧೨+೨ ೧ ೧ ೨+೨
ಮಂದರ । ಧರಗ . । ಣಮೆಸೆ . । ದಿರೆಮೊ . । ದಲೊಳೆ . ।

೨ ೨ ೨ ೨ ೨+೨ ೧೧ ೨+೨ ೧೧ ೨+೨ ೨ ೨+೨
ಬಂದಿರೆ । ಯುಂ ನಾ . । ಲ್ಕೆಡೆಬಿ . । ಸರುಹ . । ಜನ್ಮಂ . ॥

೨ ೨ ೨ ೨ ೨+೨ ೧ ೧ ೨+೨ ೧ ೧ ೨+೨ ೧೧೨+೨
ಸಂದುದು । ಲಕ್ಷ . । ಣಮವ . । ನಿಯೊಳೀ . । ತೆರದಿಂ . ।

೨ ೨ ೨ ೨ ೨+೨ ೧೧೨+೨ ೧ ೧೨+೨ ೧೧ ೨+೨
ಛಂದೋವ । ತಂಸ . । ಕ್ಕೆಸೆದು . । ದುಗಜ . । ಗಮನೇ . ॥

ಇದು ಲೆಕ್ಕಾಚಾರದ ದೃಷ್ಟಿಯಿಂದ ಸಮಂಜಸವಾಗಿ ಕಂಡುಬರಬಹು[illegible]ದರೂ ಈ ಧಾಟಿಯನ್ನು ಅನುಸರಿಸಿದಾಗ, ಎಡೆಬಿಡದೆ ಬರುವ ಬ್ರಹ್ಮಗಣಗಳ ಕರ್ಷಣಾತಿಶಯದಿಂದ ಪದ್ಯದ ಅರ್ಥವೇ ಹೊಳೆಯಲಾರದೆಂಬುದು ಪಠಿಸಿ

ಪರೀಕ್ಷಿಸುವವರಿಗೆ ಸ್ಪಷ್ಟವಾಗದಿರದು. ಇದೂ ಅಲ್ಲದೆ ಯಾವ ತ್ರಿಮೂರ್ತಿಗಣ ಬಂಧದಲ್ಲೂ ಎರಡು ಬ್ರಹ್ಮಗಣಗಳು ಸಮೀಪವರ್ತಿಗಳಾಗಿದ್ದು ಕರ್ಷಣಾತಿಶಯವನ್ನು ಪಡೆಯಬೇಕಾದವುಗಳಾದರೆ ಬಂಧವು ಶ್ರವ್ಯತ್ವವನ್ನು ಕಳೆದುಕೊಳ್ಳುವುದರಿಂದ ಅಂತಹ ಪ್ರಯೋಗಗಳು ಸಾಮಾನ್ಯವಾಗಿ ದುರ್ಲಭವೇ ಆಗಿವೆ. ('ಗೀತಿಕೆ' ಎಂಬುದರಲ್ಲಿ ಮಾತ್ರ ಒಂದೊಂದೆಡೆ ಬ್ರಹ್ಮಗಣದ್ವಂದ್ವವು ಕಾಣಿಸಿಕೊಳ್ಳುವುದುಂಟು. ಗೀತಿಕೆಯೆಂಬುದು ಗಾನಕ್ಕೆ ಮೀಸಲಾಗಿರುವುದರಿಂದ ಅಲ್ಲಿ ಮಾತ್ರ ಇದು ಒಂದು ವೇಳೆ ಶೋಭಾವಹವಾಗಬಹುದಾದರೂ ಆ ಬಂಧದಲ್ಲಿ ಸಹ ಎರಡಕ್ಕಿಂತ ಹೆಚ್ಚು ಬ್ರಹ್ಮಗಣಗಳು ಪರಸ್ಪರ ಸಮೀಪವರ್ತಿಗಳಾಗಿ ಬರುವ ಸಂದರ್ಭವಿರುವುದಿಲ್ಲ.) ಆದುದರಿಂದ ಬ್ರಹ್ಮಗಣಪ್ರಧಾನವಾದ ಛಂದೋವತಂಸವನ್ನು ವಿಷ್ಣುಧಾಟಿಗೆ ಒಗ್ಗಿಸಿ ಪಠಿಸುವುದು ಸರ್ವಥಾ ಅಸಂಗತವೆನಿಸುವುದರಿಂದ ಈ ಮಾರ್ಗವು ತ್ಯಾಜ್ಯವೇ ಸರಿ.

ತ್ರಿಮೂರ್ತಿಗಣಬಂಧಗಳೊಳಗೆ ಅತಿಪುರಾತನಗಳೆಂಬುದಕ್ಕೆ ಸಾಕಷ್ಟು ಸಾಕ್ಷ್ಯವಿರುವ ತ್ರಿಪದಿ, ಏಳೆ, ಚೌಪದಿಕೆ[1] –ಎಂಬೀ ಮೂರು ಬಂಧಗಳಲ್ಲಿಯೂ

---

1. {**ಚೌಪದಿಕೆಯ ಲಕ್ಷಣವಿಚಾರ**} 'ಚೌಪದಿಕೆ'ಯ ಪಾದದಲ್ಲಿ ಎರಡೇ ಗಣಗಳಿರುತ್ತವೆ; ಮೊದಲನೆಯದು ವಿಷ್ಣುಗಣ, ಎರಡನೆಯದು ರುದ್ರಗಣ. ರುದ್ರಗಣವು ಪಾದಾಂತದಲ್ಲಿರುವುದರಿಂದ ಇದೊಂದು ವಿಷ್ಣುಧಾಟಿಯ ಬಂಧವೆಂಬ ಅಭಿಪ್ರಾಯವುಂಟಾಗುವಂತಿದೆ. ಆದರೆ, ಇದನ್ನು ವಿಷ್ಣುಧಾಟಿಗೆ ಒಗ್ಗಿಸಿದರೆ, ಪಿರಿಯಕ್ಕರ ಅಥವಾ ಕಿರಿಯಕ್ಕರದ ಪಾದಗಳ ಕೊನೆಗಳ ಸ್ವರೂಪವೇ ಇದಕ್ಕೆ ಬಂದು ಈ ಬಂಧಕ್ಕೆ ಯಾವ ವಿಶೇಷತೆಯೂ ಇಲ್ಲವೆಂದಾಗುತ್ತದೆ. ನಾಗವರ್ಮನ ಚೌಪದಿಕೆಯಲ್ಲಿ ಇಂತಹ ಭ್ರಮೆಗೆ ಅವಕಾಶವಿದ್ದರೂ ಜಯಕೀರ್ತಿಯ ರಚನೆಯನ್ನು ಪಠಿಸುವಾಗ ಇದರ ನಿಜಸ್ವರೂಪವು ವ್ಯಕ್ತವಾಗುವಂತಿದೆ. ಉದಾ:-

ಮದನಾದ್ಯಾಃ ಶರಗಣಾಂತಾಃ ।
ಯದಿ ಚರಣಾಶ್ಚತ್ವಾರಃ ॥
ಗದಿತಾಶ್ಚೇಚ್ಚತುಷ್ಪದಿಕಾ ।
ವಿದಿತಾಸೌ ಚೂಡಾಮಣೌ ॥

[ಇದರ ಮೂರನೆಯ ಪಾದದಲ್ಲಿ ಚತುಷ್ಪದಿಕಾ (⏑ – ⏑ ⏑ –) ಎಂಬುದು ತ್ರಿಮೂರ್ತಿಗಣ ನಿಯಮಕ್ಕೆ ವಿರುದ್ಧವಾಗಿರುವುದರಿಂದ ಇದು ಶುದ್ಧ ಪಾಠವಲ್ಲವೆಂಬುದು ಸ್ಪಷ್ಟ. ಪ್ರಾಯಶಃ ಮೂಲದಲ್ಲಿ ಇದು ಚೌಪದಿಕಾ (– ⏑ ⏑ –) (=ಶೂಲಧರಂ) ಎಂದೇ ಇದ್ದಿರಬೇಕು. 'ಚೌಪದಿಕಾ' ಎಂಬುದು ಶುದ್ಧ ಸಂಸ್ಕೃತರೂಪವಲ್ಲವೆಂಬುದರಿಂದ ಯಾರೋ ಲಿಪಿಕಾರರು ಇದನ್ನು 'ಚತುಷ್ಪದಿಕಾ' ಎಂದು ಪರಿವರ್ತಿಸಿದ್ದಾಗಿರಬೇಕು.]

ಇದರಿಂದ ಈ ಬಂಧವು ರುದ್ರಧಾಟಿಯದೆಂದು ಸಿದ್ಧವಾಗುತ್ತದೆ. ಪಾದದ ಮೊದಲನೆಯ ಗಣವಾದ ವಿಷ್ಣುವನ್ನು ಕರ್ಷಿಸಿ ರುದ್ರಧಾಟಿಗೆ ಒಗ್ಗಿಸಿದಾಗ ಅದರ ಸ್ವರೂಪ ಈ ಕೆಳಗಿನಂತಾಗುತ್ತದೆ:

ಪಾದಾಂತಗಳಲ್ಲಿ ವಿರಾಮಾವಕಾಶವಿಲ್ಲವೆಂಬ ಮತ್ತು ಉಪಾಂತ್ಯಗಣಸ್ಥಾನಗಳಲ್ಲಿ ಅಲ್ಪತರಪರಿಮಾಣದ ಗಣಗಳೇ ಇದ್ದು ಅಲ್ಲಿ ಅವು ಕರ್ಷಣಾಧಿಕ್ಯವನ್ನು ಪಡೆ-ಯುವುವೆಂಬ ತಥ್ಯವನ್ನು ಇಲ್ಲಿ ಸ್ಮರಿಸಿಕೊಳ್ಳುವುದು ಲಾಭಕರ. (ಪುರಾತನಬಂಧ-ಗಳೊಳಗೊಂದಾದ ಗೀತಿಕೆಯ ಪದ್ಯಾರ್ಧಗಳ ಕೊನೆಯಲ್ಲಿಯೂ ವಿರಾಮಾವ-ಕಾಶವಿರುವುದಿಲ್ಲ. ಕವಿರಾಜಮಾರ್ಗದಲ್ಲಿ ಕಂಡುಬರುವ ಗೀತಿಕಾಭೇದದಲ್ಲಿ ಯಾವ ಪಾದದ ಕೊನೆಯಲ್ಲಿಯೂ ವಿರಾಮಾವಕಾಶವಿರುವುದಿಲ್ಲ. ಆದರೆ, ಆದಿಸ್ವರೂಪದ ಗೀತಿಕೆಯ ಓಜಪಾದಗಳ ಕೊನೆಯಲ್ಲಿ ಒಂದು ಗಣದ ಪರಿಮಿತಿಗೊಳಪಟ್ಟ ವಿರಾಮಾವಕಾಶವೇನೋ ಇರುವುದಾದರೂ ಅದೊಂದು ಅರ್ಧಸಮಬಂಧ-ವಾದುದರಿಂದ ಅರ್ಧಸಮಬಂಧಗಳ ಸಹಜವಾದ ವಿರಾಮಸ್ಥಾನಗಳು ಯುಕ್ಪಾದಾಂತಗಳೇ ಎಂಬ ತಥ್ಯವು ಇಲ್ಲಿ ಲಕ್ಷಿಸತಕ್ಕದ್ದಾಗಿದೆ.)

ಇವುಗಳಂತೆಯೇ ಛಂದೋವತಂಸದಲ್ಲಿ ವಿಷ್ಣುಗಣ ಒಂದೇ ಇದ್ದು ಬ್ರಹ್ಮಗಣಗಳು ನಾಲ್ಕು ಇರುವುದರಿಂದ ಬ್ರಹ್ಮಗಣಗಳನ್ನವಲಂಬಿಸಿಯೇ (ಇದು ಸಹ ಪಾದಾಂತವಿರಾಮವಿಲ್ಲದಿರುವ ಬಂಧವೆಂದು ಗ್ರಹಿಸಿಕೊಂಡು) ಇದರ ಧಾಟಿಯನ್ನು ನಿಷ್ಕರ್ಷಿಸುವುದು ಯುಕ್ತಿಯುಕ್ತವಾಗಿದೆ. ಆದುದರಿಂದ ಪಾದಾದಿಯ ವಿಷ್ಣುಗಣವನ್ನು ಬ್ರಹ್ಮಧಾಟಿಗೆ ಒಗ್ಗಿಸಬೇಕೆಂಬುದು ಕ್ರಮಪ್ರಾಪ್ತವಾಗುತ್ತದೆ. ತ್ರಿಪದಿ ಏಳೆ ಚೌಪದಿಕೆಗಳಂತೆ ಹಾಗೂ ಕವಿರಾಜಮಾರ್ಗದಲ್ಲಿ ಕಂಡುಬರುವ ಗೀತಿಕಾ-ಭೇದದಂತೆ ಛಂದೋವತಂಸವೂ ಪಾದಾಂತದಲ್ಲಿ ವಿರಾಮವಿಲ್ಲದಿರುವ ಬಂಧ-ವೆಂದು ಗ್ರಹಿಸಿ, ಬ್ರಹ್ಮಗಣಚತುಷ್ಕಗಳ ಉಪಾಂತ್ಯಸ್ಥಾನದಲ್ಲಿರುವ (ಪಾದಾದಿಯ) ವಿಷ್ಣುಗಣವನ್ನು ಕರ್ಷಿಸಿ ಬ್ರಹ್ಮಗಣದ್ವಂದ್ವದ ಪರಿಮಾಣಕ್ಕೆ ಸಮನಾಗಿಸಿ ಇದನ್ನು ಪಠಿಸಿದಾಗ ಸುಂದರವಾದೊಂದು ಧಾಟಿ ಉನ್ಮೀಲಿಸುತ್ತದೆ. ಅದರ ಸ್ವರೂಪ ಈ ಕೆಳಗಿನಂತಾಗುತ್ತದೆ :–

ⵏ ⵏ ⵏ+ⵏ ∩∩ⵏ ∩ ∩ⵏ ∩∩ⵏ ∩ ∩ ⵏ
ಮಂದರ . । ಧರಗ । ಣಮೆಸೆ । ದಿರೆಮೊ । ದಲೊಳೆ ।

ⵏ ⵏⵏ+ ⵏ ⵏ ⵏ ∩∩ⵏ ∩∩ⵏ ⵏ ⵏ
ಬಂದಿರೆ . . । ಯುಂನಾ । ಲ್ಕಡೆಬಿ । ಸರುಹ । ಜನ್ಮಂ ॥

---

∩ ∩ ⵏ ⵏ +ⵏ ∩∩ⵏ ⵏ ⵏ
ಮದನಾದ್ಯಾಃ . । ಶರಗಣಾಂತಾಃ ।
∩ ∩ ⵏⵏ+ⵏ ⵏ ⵏⵏ ⵏ
ಯದಿಚರ . । ಣಾಶ್ಚತ್ವಾರಃ ॥
∩∩ⵏ ⵏ+ⵏ ⵏⵏⵏⵏ
ಗದಿತಾಶ್ಚೇ . । ಚ್ಚೌಪದಿಕಾ ।
∩∩ ⵏ ⵏ+ⵏ ⵏ ⵏ ⵏ ⵏ
ವಿದಿತಾಸೌ . । ಚೂಡಾಮಣೌ ॥

೨ ೨ ೨+೨ ೨೨ ೧೧೨ ೧೧೨ ೧೧೨
ಸಂದುದು . । ಲಕ್ಷ । ಣಮವ । ನಿಯೊಳೀ । ತೆರದಿಂ ।

೨ ೨ ೨+೨ ೨ ೨ ೧೧೨ ೧ ೧೨ ೧೧೨
ಛಂದೋವ . । ತಂಸ । ಕ್ಕೆಸೆದು । ದುಗಜ । ಗಮನೇ ॥

(ಬ್ರಹ್ಮಗಣಗಳು ಸಹಜವಾಗಿ ನಾಲ್ಕು ಮಾತ್ರೆಗಳ ಆವರ್ತದ ಚತುರಶ್ರ ಜಾತಿ ಏಕತಾಳಕ್ಕೆ ಅಳವಡುವಂಥವುಗಳು. ಈ ಮೇಲೆ ನಿರೂಪಿಸಿರುವಂತೆ ಬ್ರಹ್ಮಗಣಪ್ರಧಾನವಾದ ಛಂದೋವತಂಸವು ಇದೇ ತಾಳಗತಿಯ ಬಂಧವಾಗಿದೆ. ವಿಷ್ಣುಗಣವು ಸಹಜವಾಗಿ ಆರುಮಾತ್ರೆಗಳ ಆವರ್ತದ ಗತಿಯಲ್ಲಿ ನಡೆಯು-ವಂತಹದಾಗಿರುವುದರಿಂದ ಛಂದೋವತಂಸದ ಪಾದಾದಿಯಲ್ಲಿರುವ ವಿಷ್ಣುಗಣಕ್ಕೆ ಎರಡು ಮಾತ್ರೆಗಳಷ್ಟು ಕರ್ಷಣವನ್ನು ನೀಡಿದಾಗ ಅದು ಬ್ರಹ್ಮಧಾಟಿಗೆ ಹೊಂದಿಕೊಳ್ಳುತ್ತದೆ.)

ನಮಗೆ ಈವರೆಗೆ ಲಬ್ಧವಾಗಿರುವ ಛಂದೋವತಂಸಗಳು ಎರಡೇ: ನಾಗವರ್ಮನ ರಚನೆಯೊಂದು, ಜಯಕೀರ್ತಿಯದೊಂದು. ನಾಗವರ್ಮನ ರಚನೆಯನ್ನು ಧಾಟಿಗನುಗುಣವಾಗಿ ಈ ಮೇಲೆ ನಿರೂಪಿಸಲಾಯಿತು. ಈಗ ಜಯಕೀರ್ತಿಯ ರಚನೆಯನ್ನು ಗಣವಾಚಕರೂಪದಲ್ಲಿ ಮಾರ್ಪಡಿಸಿ ಧಾಟಿಗನು-ಗುಣವಾಗಿ ನಿರೂಪಿಸೋಣ. ಜಯಕೀರ್ತಿಯ ರಚನೆಯನ್ನು ಈ ಲೇಖನದ ಆದಿಯಲ್ಲಿಯೇ ಕೊಡಲಾಗಿದೆ. ಆ ಪದ್ಯವನ್ನು ಗಣವಾಚಕಗಳಾಗಿ ಮಾರ್ಪಡಿಸಿ-ದಾಗ ಅದು ಹೀಗಾಗುತ್ತದೆ:

೨ ೨ ೨+೨ ೧ ೧ ೨ ೧೧ ೨ ೧ ೧ ೨ ೨ ೨
ಕಂಸಾರಿ . । ದ್ರುಹಿಣಂ । ಸುರಪ । ದ್ರುಹಿಣಂ । ಬ್ರಹ್ಮಂ ।

೨ ೨೨+೨ ೧೧ ೨ ೨ ೨ ೧೧ ೨ ೨ ೨
ಶ್ರೀಪತಿ . । ದ್ರುಹಿಣಂ । ಬ್ರಹ್ಮಂ । ದ್ರುಹಿಣಂ । ಬ್ರಹ್ಮಂ ॥

೨ ೨ ೨+೨ ೨ ೨ ೨ ೨ ೧ ೧ ೨ ೧ ೧ ೨
ಕಂಸಾರಿ . । ಧಾತೃ । ಬ್ರಹ್ಮಂ । ದ್ರುಹಿಣಂ । ದ್ರುಹಿಣಂ ।

೨ ೨ ೨+೨ ೨ ೨ ೨ ೨ ೨ ೨ ೨ ೨
ಗೋವಿಂದಂ . । ಧಾತೃ । ಧಾತೃ । ಧಾತೃ । ಬ್ರಹ್ಮಂ ॥

(ತ್ರಿಮೂರ್ತಿಗಣಬಂಧಗಳ ಗಣಾಂತಗಳಲ್ಲಿ – ಕನಿಷ್ಠಪಕ್ಷ ಕರ್ಷಣವಿಶೇಷವು ಅನಿವಾರ್ಯವಾಗಿರುವಲ್ಲಾದರೂ, ಯತಿ ಇರುವುದಾದರೆ ಪಠನವು ಸುಗಮವಾಗು-ತ್ತದೆ. ಉದಾಹೃತವಾದ ಎರಡು ಛಂದೋವತಂಸಗಳಲ್ಲಿಯೂ ಹೀಗಿಲ್ಲ. ನಾಗ-ವರ್ಮ ಜಯಕೀರ್ತಿಗಳ ಕಾಲದಲ್ಲಿ ಈ ಬಂಧವು ಬಳಕೆಯಲ್ಲಿಲ್ಲದಿದ್ದುದರಿಂದ ಇವುಗಳ ಧಾಟಿಯು ಅವರಿಗೆ ಅಜ್ಞಾತವಾಗಿದ್ದುದೇ ಇದಕ್ಕೆ ಕಾರಣವಾಗಿರಬೇಕು.)

## ೨

'ಛಂದೋವತಂಸ' – ಇದು ಕರ್ಣಾನಂದಕರವಾದ ಹೆಸರು. ತ್ರಿಮೂರ್ತಿಗಣಬಂಧಗಳೊಳಗೆ ಬೇರೆ ಯಾವುದರ ಹೆಸರೂ ಇಷ್ಟು ಮೋಹಕ-ವಾಗಿಲ್ಲ. ಈ ಪದ್ಯಕ್ಕೆ ಈ ಹೆಸರು ಕೊಟ್ಟುದರ ಔಚಿತ್ಯವೇನು? ಈ ಹೆಸರಿನಿಂದ ಸೂಚಿತವಾಗುವ ತಥ್ಯವೇನು? – ಎಂಬುದನ್ನು ಊಹಿಸುವ ಪ್ರಯತ್ನಮಾಡು-ವುದು ಇಲ್ಲಿ ಅಪ್ರಸ್ತುತವೆನಿಸಲಾರದೆಂದು ನಂಬುತ್ತೇನೆ.

ಛಂದೋವತಂಸವೆಂಬೀ ಪದಕ್ಕೆ ಛಂದೋಬಂಧಗಳ ಭೂಷಣ, ಛಂದೋಬಂಧಗಳಲ್ಲಿ ಶ್ರೇಷ್ಠ ಅಥವಾ ಇನ್ನೊಂದು ಛಂದೋಬಂಧದ ಶಿಖೆ ಇಲ್ಲವೆ ಶಿರೋಭೂಷಣ – ಎಂಬಿತ್ಯಾದಿಗಳೊಳಗೆ ಯಾವುದಾದರೊಂದು ಅರ್ಥವಿದ್ದಿರಬೇಕು. ಇಲ್ಲಿ ಸೂಚಿಸಿದ ಅರ್ಥಗಳಲ್ಲಿ ಮೊದಲಿನ ಎರಡರೊಳಗೆ ಯಾವುದಾದರೊಂದು ಈ ಬಂಧಕ್ಕೆ ಅನ್ವಯಿಸುತ್ತಿದ್ದುದಾದರೆ ಈ ಬಂಧವು ವಿಪುಲವಾಗಿ ಬಳಕೆಯಲ್ಲಿರುತ್ತಿತ್ತು. ಒಂದಾನೊಂದು ಕಾಲದಲ್ಲಿ ಇಂತಹದೊಂದು ಬಂಧವಿತ್ತೆಂದು ತಿಳಿಸುವುದಕ್ಕೆ ಮಾತ್ರವೆಂಬಂತೆ ಎರಡೇ ಎರಡು ಪದ್ಯಗಳು – ಅವು ಸಹ. ಛಂದೋಲಕ್ಷಣಗ್ರಂಥಗಳಲ್ಲಿ ಮಾತ್ರ – ನಮಗೆ ಲಬ್ಧವಾಗಿವೆ. (ಅಸಗನ 'ಕರ್ಣಾಟ ಕುಮಾರಸಂಭವ' ಮೊದಲಾದ ಕಾವ್ಯಗಳಲ್ಲಿ ಈ ಬಂಧವು ಪ್ರಯುಕ್ತವಾಗಿದೆಯೆಂದು ಜಯಕೀರ್ತಿ ತಿಳಿಸಿರುವನಾದರೂ ಆ ಕೃತಿಗಳಾವುವೂ ನಮಗೆ ಲಬ್ಧವಾಗಿಲ್ಲ.) ಆದುದರಿಂದ ಮೇಲೆ ಹೇಳಿದ ಮೊದಲಿನ ಆ ಎರಡು ಅರ್ಥಗಳು ಇಲ್ಲಿಗೆ ಅನ್ವಯಿಸಲಾರವು. ಹಾಗಾದರೆ, ಮೂರನೆಯದಾಗಿ ಸೂಚಿಸಿದ ಅರ್ಥವು ಮಾತ್ರ ಇಲ್ಲಿ ಹೊಂದಿಕೆಯಾಗುವಂತಿದೆ. ಈ ಊಹೆ ಸಾಧುವೆಂದಾ-ದರೆ, ಛಂದೋವತಂಸವೆಂಬ ಹೆಸರಿನ ಈ ಬಂಧವು ಯಾವುದೋ ಇನ್ನೊಂದು ಛಂದೋಬಂಧದ ಅನುಬಂಧಿಯಾಗಿ ಪ್ರಯುಕ್ತವಾಗುತ್ತಿದ್ದಿರಬೇಕೆಂಬುದು ಸ್ಪಷ್ಟ. ಹೀಗೆ ಒಂದು ಬಂಧಕ್ಕೆ ಇನ್ನೊಂದು ಬಂಧವು ಅನುಬಂಧಿಯಾಗಿಯೇ ಎಲ್ಲಾದರೂ ಇರುವುದುಂಟೆ? – ಇದೀಗ ವಿಚಾರಣೀಯ; ಕನ್ನಡದ ಹಳೆಯ ರಚನೆಗಳಲ್ಲಿ ಇಂತಹ ಉದಾಹರಣೆ ನಮಗೆ ಅಲಭ್ಯವಾಗಿರುವುದಾದರೂ ತೆಲುಗಿನಲ್ಲೇನೋ ಸುಪ್ರಸಿದ್ಧವಾದೊಂದು ಉದಾಹರಣೆ ದೊರೆಯುತ್ತದೆ. ಅದಾವುದೆಂದರೆ – ಸೀಸಪದ್ಯ.

ತೆಲುಗಿನ 'ಸೀಸ'ವು ಮಾತ್ರಾಬಂಧವೋ ಎಂಬಂತೆ ಸಕೃದ್ದರ್ಶನಕ್ಕೆ ಕಾಣಬಹುದಾದರೂ ವಾಸ್ತವಿಕವಾಗಿ ಅದು ಮಾತ್ರಾಬಂಧವಲ್ಲ; ಅದು ಕನ್ನಡದ ತ್ರಿಮೂರ್ತಿಗಣಗಳ ಅಪರಾವತಾರರೂಪವಾದ ಸೂರ್ಯ, ಇಂದ್ರ, ಚಂದ್ರ – ಎಂಬ ಹೆಸರಿನ ಮೂರು ಗಣಗಳೊಳಗೆ ಮೊದಲಿನ ಎರಡು ಗಣಗಳಿಂದ ಘಟಿತವಾದ ಪದ್ಯವಾಗಿದೆ. ಪ್ರತಿಯೊಂದು ಸೀಸಕ್ಕೂ ಅದಕ್ಕಿಂತ ಕಿರಿಯದಾದ 'ತೇಟಗಿತಿ' ಅಥವಾ 'ಆಟವೆಲದಿ' ಎಂಬೆರಡರೊಳಗೊಂದು ಬಂಧವು ನಿರಪ-ವಾದವಾಗಿ ಅನುಬಂಧಿಯಾಗಿಯೇ ಇರುತ್ತದೆ. ಮತ್ತು ಅನುಬಂಧಿಯಾದ

ಕಿರಿಯ ಬಂಧಗಳು ಸೀಸದ ಧಾಟಿಗಿಂತ ಭಿನ್ನವಾದ ಧಾಟಿಯಲ್ಲಿರುತ್ತವೆ. ಇದನ್ನು ಸ್ಪಷ್ಟೀಕರಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಡುತ್ತೇನೆ–

ಸೀಸ:–

ಪಾದಂಬು । ನಾಲುಗು. । ಪಾದಂಬು । ಲುಗ ಜೇಸಿ । ಮೊದಲಿ ಮೂ ।
ಡಿಟಿ ಲೋಕ । ವಿದಿತ । ಮೈನ ।
ನಲ ನಾಮ । ಗಣಮುಲು. । ವೆಲಯನಿ । ಮೂ‌ರ್ಡಿಡಿ. । ಮಾನುಗಾ ।
ದಕ್ಕಿನ. । ವಾನಿ । ಯಂದು ॥
ನಗಣಮುಲ್ । ರೆಂಡಿಡಿ. । ತಗಗೂಡ । ಬಾದಮುಲ್ । ನಾಲುಗು. ।
ನಿಪ್ಪಾಟ । ನೋಲಿ । ನಿಲಿಪಿ ।
ಸಮಸೀಸ । ಮುಲು ಜೆಪ್ಪು । ಡಮರುಗ. । ರೆಂಟಕಿ । ಬ್ರಾಸಮುಲ್ ।
ವೇಱಗಾ । ಜೇಸಿ । ಯೊನರ ॥

ತೇಟಗೀತಿ :–

ನಾಲು । ಗಡುಗುಲ । ನುನನಲ । ನಲವ । ನಂಬು ।
ಲೋಲಿ । ನಿಲಿಪಿ ಮೂ । ಡಗು ಕಡ । ನೊಂಡೆ । ವಳ್ಲ ॥
ವ್ರಾಲು । ನಿಡಿಯುಂಡೆ । ಜೆಪ್ಪಿನ । ವಸ್ತು । ಕವಿಜ ।
ನಾಶ್ರ । ಯಾ ತೇಟ । ಗೀದಿಯ । ಯಗು ಧ । ರಿತ್ರಿ ॥

ಆಟವೆಲದಿ :–

ನನನ । ನಲನ । ಗಮ್ಮು । ಲೊನರಗ । ನೊಕ್ಕ ಪಾ ।
ದಂಬು । ನಗಣ । ಪಂಚ । ಕಂಬು । ಗೂಡ ॥
ನವುಲ । ದಾನಿ । ಯನಲ । ನದಿಯುನು । ನಟ್ಟು ಕಾ ।
ಜೆಪ್ಪ । ನಾಟ । ವೆಲದಿ । ಯೊಪ್ಪು । ಗೃತುಲ ॥

ತೆಲುಗಿನ ಸೂರ್ಯ, ಇಂದ್ರ, ಚಂದ್ರ – ಎಂಬ ಗಣಗಳು ಕನ್ನಡದ ಬ್ರಹ್ಮ, ವಿಷ್ಣು, ರುದ್ರ – ಗಣಗಳ ನಾಮಾಂತರಗಳಾಗಿವೆಯಾದರೂ ಕನ್ನಡದ ಈ ಎಲ್ಲಾ ಗಣಗಳು ತೆಲುಗಿನಲ್ಲಿ ಬಳಕೆಯಾಗುವುದಿಲ್ಲ. ತೆಲುಗರು ಈ ಮೂರು ಗಣವರ್ಗಗಳ ಆರಂಭದ ಎರಡೆರಡು ಗಣಗಳನ್ನು ಬಿಟ್ಟು ಉಳಿದವುಗಳನ್ನು ಮಾತ್ರ ಸ್ವೀಕರಿಸಿ ಅನುಕ್ರಮವಾಗಿ ಅವುಗಳಿಗೆ ಸೂರ್ಯ, ಇಂದ್ರ, ಚಂದ್ರ ಎಂಬ ಹೆಸರುಗಳನ್ನು ಕೊಟ್ಟಿರುತ್ತಾರೆ. ಹೀಗೆ ಮಾಡಿದುದರ ಉದ್ದೇಶವು ತ್ರಿಮೂರ್ತಿ ಗಣಗಳಿಗೆ ಕರ್ಷಣಾವಶ್ಯಕತೆಯನ್ನು ಕಡಮೆ ಮಾಡಿ ಅಷ್ಟಿಷ್ಟು ಮಾತ್ರಾಸಮತ್ವ–ವನ್ನೂ ತರುವುದಾಗಿದೆಯೆಂಬುದು ಸುವ್ಯಕ್ತ. ಇದರಿಂದಾಗಿ ತೆಲುಗಿನ ಗಣಗಳಲ್ಲಿ ಗಣಾಂತದ ಲಘುವನ್ನು – ಅದೂ ಕೆಲವೆಡೆಗಳಲ್ಲಿ ಮಾತ್ರ – ಗುರುವಾಗಿ ಉಚ್ಚರಿಸಿದರೆ ಸಾಕಾಗುತ್ತದೆ. ಈ ಕಾರಣದಿಂದಾಗಿ ತೆಲುಗಿನ ಆ ಬಂಧಗಳು

ಮಾತ್ರಾಬಂಧಗಳೆಂಬಂತೆ ಭಾಸವಾಗುವುದು ಹೊರತು ವಾಸ್ತವಿಕವಾಗಿ ಅವು ತ್ರಿಮೂರ್ತಿಗಣಬಂಧಗಳೇ ಆಗಿವೆ.

ಈ ಮೇಲೆ ಉದಾಹರಿಸಿದ ಸೀಸವನ್ನು ಮತ್ತು ಅದರ ಅನುಬಂಧಿಗಳಾದ ತೇಟಗೀತಿ ಹಾಗೂ ಆಟವೆಲದಿಯನ್ನು ಕನ್ನಡದ ತ್ರಿಮೂರ್ತಿಗಣವಾಚಕಗಳ ರೂಪದಲ್ಲಿ ಪರಿವರ್ತಿಸಿ ನೋಡೋಣ.

ಸೀಸ :–

ಕಂಸಾರಿ । ಶ್ರೀಪತಿ । ಕಂಸಾರಿ । ನರಕಾರಿ । ಸ್ಮರಪಿತಂ । ನರಕಾರಿ ।
ಸುರಪ । ಧಾತೃ ।
ನರಕಾರಿ । ಮುರರಿಪು । ಸ್ಮರಪಿತಂ । ಶ್ರೀಪತಿ । ಮಾಧವಂ । ಶ್ರೀಪತಿ ।
ಧಾತೃ । ಧಾತೃ ॥
ಸ್ಮರಪಿತಂ । ಶ್ರೀಪತಿ । ನರಕಾರಿ । ಮಾಧವಂ । ಶ್ರೀಪತಿ । ಕಂಸಾರಿ ।
ಧಾತೃ । ಸುರಪ ।
ನರಕಾರಿ । ನರಕಾರಿ । ಮುರರಿಪು । ಮಾಧವಂ । ಮಾಧವಂ ।
ಮಾಧವಂ । ಧಾತೃ । ಸುರಪ ॥

ವಿಷ್ಣುಗಣಗಳೊಳಗೆ 'ಶ್ರೀಪತಿ' ಮತ್ತು 'ಮುರರಿಪು' ಎಂಬೆರಡು ಗಣಗಳ ಕೊನೆಯ ಅಕ್ಷರವನ್ನು ಮಾತ್ರ ಗುರುವಾಗಿ ಉಚ್ಚರಿಸಿ ಪಠಿಸಿದರಾಯಿತು; ಸೀಸಕ್ಕೆ ಐದುಮಾತ್ರೆಗಳ ಆವರ್ತದ ಧಾಟಿ ಕೂಡಿಬಂದು ಇದೊಂದು ಮಾತ್ರಾಬಂಧವೋ ಎಂಬಂತೆ ಭಾಸವಾಗುತ್ತದೆ. (ಮೇಲೆ ಉದಾಹರಿಸಿದ 'ಸೀಸ'ದಲ್ಲಿ ಇಂತಹ ಸಂದರ್ಭಗಳು ಏಳು ಇವೆ.)

ತೇಟಗೀತಿ:–

ಧಾತೃ । ಮುರರಿಪು । ಮುರರಿಪು । ಸುರಪ । ಧಾತೃ ।
ಧಾತೃ । ಸ್ಮರಪಿತಂ । ಮುರರಿಪು । ಧಾತೃ । ಧಾತೃ ॥
ಧಾತೃ । ನರಕಾರಿ । ಶ್ರೀಪತಿ । ಧಾತೃ । ಸುರಪ ।
ಧಾತೃ । ಕಂಸಾರಿ । ಶ್ರೀಪತಿ । ಸುರಪ । ಧಾತೃ ॥

ಇದರ ಪ್ರತಿಯೊಂದು ಪಾದಾರಂಭದ ಬ್ರಹ್ಮಗಣವನ್ನು ಯಥಾಕ್ಷರವಾಗಿ, ಎಂದರೆ ಮೂರು ಮಾತ್ರಾಕಾಲದಲ್ಲಿಯೂ, ಪ್ರತಿಯೊಂದು ಪಾದದ ಎರಡನೆಯ ಗಣವಾದ ವಿಷ್ಣುವನ್ನು ಐದು ಮಾತ್ರಾಕಾಲದಲ್ಲಿಯೂ ಉಚ್ಚರಿಸಿ, ಕೊನೆಯ ಎರಡು ಬ್ರಹ್ಮಗಣಗಳ ಅಂತ್ಯಾಕ್ಷರಗಳನ್ನು ಕರ್ಷಿಸಿ ನಾಲ್ಕು ನಾಲ್ಕು ಮಾತ್ರೆಗಳ ಕಾಲದಲ್ಲಿಯೂ ಪಠಿಸಬೇಕು. ಆಗ ಈ ಪದ್ಯಕ್ಕೆ ನಾಲ್ಕು ಮಾತ್ರೆಗಳ ಆವರ್ತದ ಧಾಟಿ ಕೂಡಿಬರುತ್ತದೆ. (ಈ ಮೇಲಿನ ತೇಟಗೀತಿಯ ಪ್ರಥಮಪಾದದ ಎರಡನೆಯ ಗಣದ ಕೊನೆಯ ಲಘುವನ್ನು ಮಾತ್ರ ಕರ್ಷಿಸಿದರೆ ಸಾಕಾಗುತ್ತದೆ;

ಉಳಿದ ಪಾದಗಳ ದ್ವಿತೀಯಗಣಗಳೆಲ್ಲವೂ ಯಥಾಕ್ಷರವಾಗಿಯೇ ಐದು ಮಾತ್ರೆಯವುಗಳಾಗಿವೆ.)

ಈಗ ಆಟವೆಲದಿಯನ್ನು ಪರೀಕ್ಷಿಸೋಣ:

ಸುರಪ । ಸುರಪ । ಧಾತೃ । ಮುರರಿಪು । ಮಾಧವಂ ।
ಧಾತೃ । ಸುರಪ । ಧಾತೃ । ಧಾತೃ । ಧಾತೃ ॥
ಸುರಪ । ಧಾತೃ । ಸುರಪ । ಮುರರಿಪು । ಮಾಧವಂ ।
ಧಾತೃ । ಧಾತೃ । ಸುರಪ । ಧಾತೃ । ಸುರಪ ॥

ಈ ಆಟವೆಲದಿಯಲ್ಲಿ ಬಂದಿರುವ ಎಲ್ಲ ಬ್ರಹ್ಮಗಣಗಳ ಅಂತ್ಯಾಕ್ಷರಗಳನ್ನು ಕರ್ಷಿಸಿ ಅವುಗಳನ್ನು ನಾಲ್ಕು ಮಾತ್ರೆಯವುಗಳಾಗಿ ಪಠಿಸಿದರೆ, ಹಾಗೂ ಇದರಲ್ಲಿ ಬಂದಿರುವ ವಿಷ್ಣುಗಣಗಳನ್ನು ಯಥಾಕ್ಷರವಾಗಿ ಪಠಿಸಿದರೆ ಇದರ ಧಾಟಿ ಅವ-ಗತವಾಗುತ್ತದೆ. ಹೀಗೆ ಪಠಿಸುವಾಗ ಇದು ನಾಲ್ಕು ಮಾತ್ರೆಗಳ ಆವರ್ತದ ಬಂಧವಾಗಿ ಪರಿಣಮಿಸುತ್ತದೆ. ತೇಟಗೀತಿ ಆಟವೆಲದಿ ಎಂಬೆರಡು ಬಂಧ-ಗಳೊಳಗೆ ಮೊದಲನೆಯದು ಸಮಪಾದಬಂಧವಾಗಿದ್ದು ಎರಡನೆಯದು ಅರ್ಧ-ಸಮಬಂಧವಾಗಿದೆ. ಮತ್ತು ಇವೆರಡೂ ಬಂಧಗಳು ಪಠನದಲ್ಲಿ ನಾಲ್ಕು ಮಾತ್ರೆಗಳ ಆವರ್ತದ ಧಾಟಿಯನ್ನು ಪಡೆಯುವವಾಗಿವೆ. ಆದರೂ ಅವುಗ-ಳೊಳಗೆ ಮುಖ್ಯವಾದ ಇನ್ನೊಂದು ವ್ಯತ್ಯಾಸವಿದೆ. ಅದೇನೆಂದರೆ: ತೇಟಗೀತಿಯ ಯಾವ ಪಾದಾಂತದಲ್ಲೂ ವಿರಾಮಾವಕಾಶವಿರುವುದಿಲ್ಲ; ಆದರೆ ಆಟವೆಲದಿಯ ಓಜಪಾದಗಳ ಕೊನೆಗಳಲ್ಲಿ ಮೂರು ಮಾತ್ರೆಗಳ ವಿರಾಮಾವಕಾಶವೂ ಯುಕ್ಪಾ-ದಗಳ ಕೊನೆಗಳಲ್ಲಿ ನಾಲ್ಕು ಮಾತ್ರೆಗಳ ವಿರಾಮಾವಕಾಶವೂ ಇರುತ್ತದೆ. (ಈ ಮೇಲೆ ಉದಾಹೃತವಾದ ತೆಲುಗು ಪದ್ಯಗಳನ್ನು, ನನ್ನ ವಿದ್ವದ್ಬಂಧುಗಳಾದ ಶ್ರೀ ಕುಕ್ಕಿಲ ಕೃಷ್ಣ ಭಟ್ಟರಿಂದ ಸಂಪಾದಿತವಾಗಿ ಮೈಸೂರಿನಲ್ಲಿ ಡಿ. ವಿ. ಕೆ. ಮೂರ್ತಿ-ಯವರಿಂದ ಪ್ರಕಾಶಿಸಲ್ಪಟ್ಟಿರುವ ಛಂದೋಂಬುಧಿಯ ಪಂಚಮಾಧಿಕಾರದ ವಿವರಣಭಾಗದಿಂದ ಆಯ್ದುಕೊಳ್ಳಲಾಗಿದೆ.)

'ಸೀಸ' ಎಂಬ ಈ ಛಂದೋನಾಮವು 'ಶೀರ್ಷಕ' ಎಂಬ ಶಬ್ದ ಅಪಭ್ರಂಶವೆಂದು ಹಲವರು ವಿದ್ವಾಂಸರು ಊಹಿಸಿರುತ್ತಾರೆ. ಜಯಕೀರ್ತಿಯ ಛಂದೋನುಶಾಸನದ ಇಪ್ಪತೆರಡನೆಯ ಪದ್ಯವೂ ಈ ಅಭಿಪ್ರಾಯವನ್ನು ಸಮರ್ಥಿಸುವಂತೆ ತೋರುತ್ತದೆ. (ಕರ್ಣಾಟಕೇಕ್ಷರಾದ್ಯಾ ವಿಷಯೇ[ಂಧ್ರೇ] ಶೀರ್ಷಕಾದಿ ಜಾತಯ ಉದಿತಾಃ). 'ಸೀಸ' ಎಂಬೀ ಪದ್ಯಸ್ವರೂಪವು ಎಂದೂ ಒಂಟಿಯಾಗಿರದೆ ಅನುಬಂಧಿಯಾದೊಂದು ಭಾಗವನ್ನು ಪಡೆಯುತ್ತಿರುವುದರಿಂದ 'ಶೀರ್ಷಕ'ವೆಂಬ ಹೆಸರು ಇದಕ್ಕೆ ಬಂದಿರಬೇಕೆಂದು ಹೇಳಿದರೆ ತಪ್ಪಾಗಲಾರದು. 'ಸೀಸಕ' ಎಂಬುದು 'ಶೀರ್ಷಕ' ಎಂಬುದರ ತದ್ಭವರೂಪವೆಂಬುದರಲ್ಲಿ ಸಂದೇಹವಿಲ್ಲ. ಈ ಶಬ್ದಕ್ಕೆ ಶಿರಸ್ಸು, ಶಿರಸ್ತ್ರಾಣ, ಟೊಪ್ಪಿಗೆ ಇತ್ಯಾದಿ ಅರ್ಥಗಳಿವೆ.

ಕರಿಮಣಿಗಳುಳ್ಳ ಚಿನ್ನದ ಕಂಠಹಾರಕ್ಕೆ ಕೇವಲ 'ಕರಿಮಣಿ' ಎಂಬ ಹೆಸರೇ (ದಕ್ಷಿಣಕನ್ನಡಿಗರಲ್ಲಿ) ರೂಢವಾಗಿರುವಂತೆ, ಸೀಸಕಯುಕ್ತವಾದುದೆಂಬ ಅರ್ಥದಲ್ಲಿ 'ಸೀಸಕ'ವೆಂಬ ರೂಪವೇ ಪ್ರಯುಕ್ತವಾಗುತ್ತಾ ಬಂದು ಕೊನೆಗೆ ಕಕಾರವನ್ನೂ ಕಳೆದುಕೊಂಡು ಕೇವಲ 'ಸೀಸ' ಎಂದಿಷ್ಟೇ ಉಳಿದು ರೂಢವಾಯಿತೆಂದು ಊಹಿಸಿದರೆ ಅಸಾಧುವೆನಿಸಲಾರದೆಂದು ನನಗೆ ತೋರುತ್ತದೆ.

ತೇಟಗೀತಿ ಆಟವೆಲದಿಗಳು ತಮಗಿಂತ ಬೃಹತ್ತರವಾದ ಸೀಸಪದ್ಯಕ್ಕೆ ಅನುಬಂಧಿಗಳಾದಂತೆಯೇ ತನಗಿಂತ ದೊಡ್ಡದೊಂದು ಛಂದೋಬಂಧಕ್ಕೆ ಅನು-ಬಂಧಿಯಾಗಿರುವ ಕಾರಣದಿಂದಲೇ ಪ್ರಸ್ತುತ ನಾವು ವಿಚಾರಿಸುತ್ತಿರುವ ಬಂಧಕ್ಕೆ 'ಛಂದೋವತಂಸ' (ಬೇರೊಂದು ಛಂದೋಬಂಧದ ಶಿಖೆ ಅಥವಾ ಶಿರೋ-ಭೂಷಣ ಎಂಬರ್ಥದಲ್ಲಿ) ಎಂಬೀ ಹೆಸರು ಬಂದಿರುವುದು ಸಂಭಾವ್ಯವಾಗಿ ಕಾಣುತ್ತದೆ. ಹಾಗಿದ್ದರೆ ಛಂದೋವತಂಸವು ಯಾವ ಬಂಧಕ್ಕೆ ಅನುಬಂಧಿ-ಯಾಗಿದ್ದಿರಬಹುದು? – ಇದೀಗ ವಿಚಾರಣೀಯ.

ಸೀಸಪದ್ಯದ ಸ್ವರೂಪವನ್ನು ಪರಾಮರ್ಶಿದರೆ ಛಂದೋವತಂಸವು ಯಾವುದರ 'ಶಿಖೆ' ಯಾಗಿದ್ದಿರಬಹುದೆಂಬುದು ಹೊಳೆಯುವಂತಿದೆ. ಸೀಸಪದ್ಯದ ಪಾದಗಳಲ್ಲಿ ಆರು ವಿಷ್ಣುಗಣಗಳು ಮತ್ತು ಎರಡು ಬ್ರಹ್ಮಗಣಗಳು ಕೂಡಿ ಎಂಟು ಗಣಗಳು ಇರುವವಷ್ಟೆ. ಹೆಚ್ಚುಕಡಮೆ ಸೀಸಪದ್ಯದ ಪರಿಮಾಣಕ್ಕೆ ತುಲ್ಯವೆನಿಸುವ ಕನ್ನಡದ ಪಿರಿಯಕ್ಕರದ ಪಾದಗಳಲ್ಲಿ ಒಂದು ಬ್ರಹ್ಮ, ಐದು ವಿಷ್ಣು, ಒಂದು ರುದ್ರ – ಹೀಗೆ ಒಟ್ಟು ಏಳು ಗಣಗಳಿರುತ್ತವೆ. ರುದ್ರಗಣಗಳು ಸಂಖ್ಯೆಯಲ್ಲಿ ಹದಿನಾರಾ-ಗಿದ್ದರೂ ಅವುಗಳೊಳಗೆ ಎಂಟು ಗಣಗಳು ಬ್ರಹ್ಮಗಣದ್ವಂದ್ವಗಳೇ ಆಗಿವೆ. ಪಿರಿಯಕ್ಕರದ ಪಾದಗಳ ಕೊನೆಯ ರುದ್ರಗಣವು ಬ್ರಹ್ಮಗಣದ್ವಂದ್ವ ಸ್ವರೂಪವಾಗಿ-ರುವಲ್ಲಿ ಅದರ ಪಾದಗಳ ಗಣಸಂಖ್ಯೆಯು ಎಂಟೆಂದೂ ಆಗುತ್ತದೆ. ಇದಲ್ಲದೆ ಪಿರಿಯಕ್ಕರದ ಪಾದಗಳ ಪ್ರಥಮಗಣವು ಬ್ರಹ್ಮಗಣವಾಗಿರಬೇಕೆಂಬ ನಿಯಮವಿರುವುದಾದರೂ ಪಂಪಾದಿಗಳು ಕೆಲವೆಡೆಗಳಲ್ಲಿ ಅದರ ಬದಲಾಗಿ ವಿಷ್ಣುಗಣವನ್ನು ಪ್ರಯೋಗಿಸಿದ್ದುಂಟು. ಉದಾ:–

> ಸಿಲೆಯ ಮೇ । ಲಾದೊಡಂ । ಶಕುನಮಂ । ನಿಱಪಂತೆ । ನಿಱುಸುವೆಂ ।
> ಪಂದಿಯಂ । ನೀಂ ಮೆಚ್ಚಲುಂ ॥ (ಪಂಪಭಾರತ–೫–೪೬)

ಇಂತಹ ಪ್ರಯೋಗಗಳು ಪಿರಿಯಕ್ಕರದಲ್ಲಿ ಗ್ರಾಹ್ಯವೆಂದು ಜಯ-ಕೀರ್ತಿಯೂ ಹೇಳುತ್ತಾನೆ. (ಪಾದಾದಿ ಪ್ರಭೃತೀತಿ ಕೇವಲಂ ಸ್ಮರಗಣ ಷಟ್ಕಯಂ ಬಾಣಾಂತಂ ಕೇಚಿದಾಹುಃ – ಛಂದೋನುಶಾಸನ: ೭–೮) ಈ ದೃಷ್ಟಿಯಿಂದ ಪಿರಿಯಕ್ಕರವನ್ನೂ ಸೀಸಪದ್ಯವನ್ನೂ ಹೋಲಿಸಿ ನೋಡಿದರೆ ಮೂಲತಃ ಅವು ಅಭಿನ್ನವಾಗಿದ್ದುವೆಂಬುದು ನಮ್ಮ ಗೋಚರಕ್ಕೆ ಬರಬಹುದಾಗಿದೆ. [ಇಂದು ಸೀಸಪದ್ಯವು ಐದು ಮಾತ್ರೆಗಳ ಆವರ್ತದ ಧಾಟಿಯಲ್ಲಿ ನಡೆಯುವ ಪದ್ಯವೆನಿಸಿ-

ಕೊಂಡಿರುವುದಾದರೂ ಅದು ವಿಷ್ಣುಗಣಪ್ರಧಾನಬಂಧವೇ ಆಗಿರುವುದರಿಂದ, (ಅದರ ಪಾದಾಂತದ ಬ್ರಹ್ಮಗಣದ್ವಂದ್ವಗಳು ರುದ್ರಗಣಸ್ವರೂಪವಾಗಿರುವಲ್ಲಿ) ಈಗಲೂ ಕೂಡ ಪಿರಿಯಕ್ಕರದ ಧಾಟಿಯನ್ನೇ ಅಳವಡಿಸಿ – ಎಂದರೆ ಏಳು ಮಾತ್ರೆಗಳ ಆವರ್ತದ ಮಿಶ್ರಛಾಪುತಾಳದ ಧಾಟಿಯಲ್ಲಿ – ನಿರಾತಂಕವಾಗಿ ಅದನ್ನು ಪಠಿಸಬಹುದಾಗಿದೆಯೆಂಬುದೂ ಇಲ್ಲಿ ಲಕ್ಷಿಸತಕ್ಕದ್ದಾಗಿದೆ.]

ಸೀಸಪದ್ಯದ ಧಾಟಿಯೂ ಅದಕ್ಕೆ ಅನುಬಂಧಿಗಳಾಗಿ ಕಾಣಿಸಿಕೊಳ್ಳುವ ತೇಟಗೀತಿ ಆಟವೆಲದಿಗಳ ಧಾಟಿಯೂ ಪರಸ್ಪರ ಭಿನ್ನವಾಗಿರುತ್ತವೆಯಷ್ಟೆ. ಸೀಸದ ಧಾಟಿ ಐದು ಮಾತ್ರೆಗಳ ಆವರ್ತಗಳದು; ತೇಟಗೀತಿ ಆಟವೆಲದಿಗಳ ಧಾಟಿ ನಾಲ್ಕು ಮಾತ್ರೆಗಳ ಆವರ್ತಗಳದು. ಇದೇ ಬಗೆಯ ಸಾಮ್ಯವನ್ನು ಪಿರಿಯಕ್ಕರ ಮತ್ತು ಛಂದೋವತಂಸಗಳನ್ನು ಹೋಲಿಸಿದಾಗಲೂ ನಾವು ಕಾಣಬಹುದು. ಪಿರಿಯಕ್ಕರವು ವಿಷ್ಣುಧಾಟಿಯ ಬಂಧ. [ವಿಷ್ಣುಧಾಟಿ ದ್ವಿವಿಧವಾಗಿದೆ. ಸಹಜವಾಗಿ ಅದು ಆರು ಮಾತ್ರೆಗಳ ಆವರ್ತದ ಧಾಟಿ. 'ಕೋರೆ'ಯಾಗಿ – ಎಂದರೆ ಅಟ್ಟತಾಳದಲ್ಲಿ (=ಮಿಶ್ರಛಾಪು ತಾಳದಲ್ಲಿ) ಪಠಿಸಿದಾಗ ಏಳು ಮಾತ್ರೆಗಳ ಅಥವಾ ಮೂರುವರೆ ಮಾತ್ರೆಗಳ ಆವರ್ತದ ಧಾಟಿ.] ಛಂದೋವತಂಸವಾದರೆ ಬ್ರಹ್ಮಧಾಟಿಯ ಬಂಧ – ಎಂದರೆ, ನಾಲ್ಕು ಮಾತ್ರೆಗಳ ಆವರ್ತದ ಬಂಧ ಎಂಬುದನ್ನು ಈ ಹಿಂದೆ ನಿದರ್ಶಿಸಲಾಗಿದೆಯಷ್ಟೆ. ಆದುದರಿಂದ ಆದಿಕಾಲಗಳಲ್ಲಿ ಛಂದೋವತಂಸವು ಪಿರಿಯಕ್ಕರದ ಅನುಬಂಧಿಯಾಗಿ ಪ್ರಯುಕ್ತವಾಗುತ್ತಿದ್ದಿರ-ಬೇಕೆಂದೂ ಇದೇ ಕಾರಣದಿಂದ ಈ ಹೆಸರು ಅದಕ್ಕೆ ಬಂದುದೆಂದೂ, ಮತ್ತು 'ಪಿರಿಯಕ್ಕರ ಛಂದೋವತಂಸ' – ಎಂಬೀ ಯುಗ್ಮವೇ ಮಾತೃಕೆಯಾಗಿ 'ಸೀಸ ಮತ್ತು ಒಂದು ಗೀತಿ' ಎಂಬೀ ಯುಗ್ಮವು ತೆಲುಗಿನಲ್ಲಿ ಹುಟ್ಟಿ ಬಂದಿತೆಂದೂ ಊಹಿಸುವುದು ಸುಸಂಗತವಾಗಿದೆ.[2]

[ಇದು ಹೇಳಿ ಬರೆಯಿಸಿದ ಲೇಖನ. ಇದನ್ನು ಪ್ರೀತಿಯಿಂದ ಲಿಖಿಸಿದ ಶ್ರೀ ಪಾದೇಕಲ್ಲು ವಿಷ್ಣುಭಟ್ಟ, ಎಂ. ಎ., – ಇವರಿಗೆ ನನ್ನ ಎದೆದುಂಬಿದ ಹರಕೆಗಳು. – ಸೇಡಿಯಾಪು ಕೃಷ್ಣ ಭಟ್ಟ – ತಾ ॥ ೪-೯-೧೯೮೬]



2. ಕೀ ॥ ಶೇ॥ ಡಿ.ವಿ.ಜಿ.ಯವರು ರಚಿಸಿದ "ಬೇಲೂರಿನ ಶಿಲಾಬಾಲಿಕೆಯರು" ಎಂಬ ಕವನವು ಸೀಸಪದ್ಯದ ಚೌಕಟ್ಟಿನಲ್ಲಿ ರಚಿತವಾದ, ಐದು ಮಾತ್ರೆಗಳ ಆವರ್ತದ ಶುದ್ಧ ಮಾತ್ರಾ ಗಣಬಂಧ. ಇದೂ ಅಲ್ಲದೆ ಅದರ ಅನುಬಂಧಿ ಗೀತವೂ ಅದೇ ಧಾಟಿಯ – ಎಂದರೆ ಐದು ಮಾತ್ರೆಗಳ ಆವರ್ತದ ರಚನೆ. ಆದುದರಿಂದ ಅದನ್ನು ಸೀಸಪದ್ಯವೆಂದು ಕರೆಯುವುದು ಉಚಿತವೆನಿಸದು. ವೀರಶೈವ ಕವಿಗಳು ತ್ರಿಪದಿಯ ಚೌಕಟ್ಟಿನಲ್ಲೊಂದು ಮಾತ್ರಾಬಂಧವನ್ನು ನಿರ್ಮಿಸಿ ಅದನ್ನು 'ತ್ರಿವಿಧಿ' ಎಂದು ಹೆಸರಿಸಿರುವಂತೆ, ಡಿ.ವಿ.ಜಿ.ಯವರ ರಚನೆಯನ್ನು 'ಸುಬದ್ಧ ಸೀಸ' ಎಂದು ಕರೆದರೆ ಒಪ್ಪಬಹುದಾಗಿದೆ.

# ಪೂರಕವಿಚಾರವಿಭಾಗ

- ಛಂದೋಗತಿ – ಗ್ರಂಥ ವಿಮರ್ಶೆ
- ಛಂದೋಗತಿಯ ವಿಮರ್ಶೆ – ಪ್ರತಿಕ್ರಿಯೆ
- ಛಂದಃಶಾಸ್ತ್ರಕ್ಕೆ ಒಂದು ಅಮೂಲ್ಯಕೊಡುಗೆ
- ಕನ್ನಡ ಛಂದಸ್ಸು – ಒಂದು ವಿವರಣೆ
- ಪಂಡಿತ ಶ್ರೇಷ್ಠ ಸೇಡಿಯಾಪು – ಛಂದೋವಿಷಯಕ ರಚನೆಗಳು
- ಛಂದೋವಿದ ಸೇಡಿಯಾಪು
- ಭಾರತೀಯಚ್ಛಂದಃಶಾಸ್ತ್ರಕ್ಕೆ ಸೇಡಿಯಾಪು ಕೊಡುಗೆ
- 'ಛಂದೋಗತಿ' – ಒಂದು ವೈಚಾರಿಕ ಕೃತಿ
- ಪ್ರೌಢಚಿಂತನ ಗ್ರಂಥ – ಕನ್ನಡ ಛಂದಸ್ಸು
- ಶೀರ್ಷಿಕೆ ಉಪಶೀರ್ಷಿಕೆಗಳ ಸೂಚಿ
- ಉಲ್ಲೇಖಿಸಿದ ಗ್ರಂಥನಾಮಗಳ ಸೂಚಿ
- ಉಲ್ಲೇಖಿಸಿದ ವ್ಯಕ್ತಿನಾಮಸೂಚಿ
- ಸೂತ್ರ, ಸೂತ್ರಾತ್ಮಕ ವಾಕ್ಯಸೂಚಿ
- ಛಂದೋಬಂಧ ಸೂಚಿ
- ಉಲ್ಲೇಖಿಸಿದ, ಉದ್ಧರಿಸಿದ ಪದ್ಯಗಳ ಸೂಚಿ
- ಪಾರಿಭಾಷಿಕ ಪದಸೂಚಿ

❋ "ದಿಟವಾಗಿ ಸೇಡಿಯಾಪು ಅವರ ಸ್ಥಾನವು ಆಧುನಿಕ ಛಂದೋವಿದರಾರೊಡನೆಯೂ ಇಲ್ಲ; ಅದೇನಿದ್ದರೂ ಪಿಂಗಳ, ಭರತಾದಿ ಮಹರ್ಷಿಗಳೊಡನೆ ಮಾತ್ರ ಎಂದರೆ ಸರ್ವಥಾ ಅಭಿ-ಮಾನದ ಅತ್ಯುಕ್ತಿಯಾಗದು"

**– ಶತಾವಧಾನಿ ಡಾ. ಆರ್. ಗಣೇಶ್**

❋ "ಸೇಡಿಯಾಪು ಅವರು.... ಛಂದಃಶಾಸ್ತ್ರದ ವಿದ್ಯಾರ್ಥಿಗಳಿಗೆ ಮಾತ್ರವಲ್ಲ, ಎಲ್ಲಾ ಶಾಸ್ತ್ರಗಳ ವಿದ್ಯಾರ್ಥಿಗಳಿಗೂ ಮಾರ್ಗದರ್ಶಕ-ರಾಗಿದ್ದಾರೆ ಎಂದು ನಿಃಸಂದೇಹವಾಗಿ ಹೇಳಬಹುದು".

**– ಪಾದೆಕಲ್ಲು ನರಸಿಂಹ ಭಟ್ಟ**

❋ "ಇತರ ವಿದ್ವಾಂಸರ ಕಣ್ಣುಗಳು ಹಾಯದ ನೆಲೆಗಳನ್ನೂ ತಲುಪದ ನೇರಗಳನ್ನೂ ಅವರ ಕಣ್ಣುಗಳು ಹಾಯುತ್ತವೆ, ತಲಪುತ್ತವೆ. ಆ ಕಣ್ಣುಗಳು ನಿಜವನ್ನು ಯಶಸ್ವಿಯಾಗಿ ಗುರುತಿಸುತ್ತವೆ; ಕತ್ತಲಲ್ಲಿ ಬೆಳಕಿನ ಕಿರಣಗಳನ್ನು ಹೊಮ್ಮಿಸುತ್ತವೆ."

**– ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ**



# ಛಂದೋಗತಿ – ಗ್ರಂಥವಿಮರ್ಶೆ*

– ಎಂ. ವಿ. ಸೀತಾರಾಮಯ್ಯ

ಸಂಗೀತಶಾಸ್ತ್ರದ ಹಿನ್ನೆಲೆಯಲ್ಲಿ ಕನ್ನಡ ಛಂದಸ್ಸನ್ನು ಕುರಿತು ಆಳವಾಗಿ ಅಭ್ಯಾಸಮಾಡಿರುವ ಕೆಲವೇ ವಿದ್ವಾಂಸರಲ್ಲಿ ವಿದ್ವಾನ್ ಶ್ರೀ ಸೇಡಿಯಾಪು ಕೃಷ್ಣ ಭಟ್ಟ ಅವರು ಅಗ್ರಮಾನ್ಯರು. ಅವರು ಹೆಚ್ಚು ಬರೆದವರಲ್ಲ. ಆದರೆ ಅವರು ಬರೆದಿರು-ವುದೆಲ್ಲ ಅಚ್ಚಬಂಗಾರ. ಶ್ರೀ ಸೇಡಿಯಾಪು ಅವರು ಸ್ವತಃ ಕವಿಯಾಗಿರುವರಲ್ಲದೆ ವ್ಯಾಕರಣ, ಭಾಷಾವಿಜ್ಞಾನ, ಛಂದಃಶಾಸ್ತ್ರಗಳಲ್ಲಿ ನಿರಂತರವಾಗಿ ಸಂಶೋಧನೆ ನಡೆಸುತ್ತಾ ಬಂದಿದ್ದಾರೆ. ಸುಮಾರು ಅರ್ಧಶತಮಾನಕ್ಕೂ ಮಿಕ್ಕ ದೀರ್ಘಾವಧಿ-ಯಲ್ಲಿ ಇವರು ನಡೆಸಿರುವ ಛಂದಶ್ಶಾಸ್ತ್ರವಿವೇಚನೆ ಅನನ್ಯವಾದುದು. ೧೯೩೨ರಷ್ಟು ಹಿಂದೆಯೇ ಇವರು 'ಕನ್ನಡ ಛಂದಸ್ಸು' ಎಂಬ ಪ್ರಬಂಧವನ್ನು ಆ ವರ್ಷ ಡಿ. ವಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ಮಡಿಕೇರಿಯಲ್ಲಿ ಜರುಗಿದ ಕರ್ಣಾಟಕ ಸಾಹಿತ್ಯ ಪರಿಷತ್ತಿನ – ವಾರ್ಷಿಕ ಸಮ್ಮೇಳನದಲ್ಲಿ ನಿವೇದನ ಮಾಡಿದರು. ಅದರಲ್ಲಿ, "ಛಂದೋಂಬುಧಿಯಲ್ಲಿ ನಿರೂಪಿಸಲ್ಪಟ್ಟಿರುವ ಕರ್ಣಾಟಕ ವಿಷಯಜಾತಿಗಳೊಳಗೆ ಮಾತ್ರಾನಿಯಮಬಾಹಿರವಾದ ಛಂದೋಬಂಧಗಳ 'ಧಾಟಿ'ಯ ಮತ್ತು ಆ ಬಂಧಗಳ ಘಟಕಗಳಾದ ಬ್ರಹ್ಮವಿಷ್ಣುರುದ್ರಗಣಗಳ ವಿಶಿಷ್ಟಸ್ವಭಾವದ ಹಾಗೂ ವ್ಯಾಪ್ತಿಯ ಕುರಿತು ಮಾಡಲಾದ ಮೊತ್ತಮೊದಲ ಮೀಮಾಂಸೆ ಅದಾಗಿತ್ತು."[1] ಛಂದಃಶಾಸ್ತ್ರವನ್ನು ಕುರಿತ ಅವರ ಎರಡನೆಯ ಕೃತಿಯೇ 'ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ಎಂ. ಗೋವಿಂದ ಪೈ ಜ್ಞಾಪಕೋಪನ್ಯಾಸ. (ಈ ಉಪನ್ಯಾಸವನ್ನು ಪುಸ್ತಕರೂಪದಲ್ಲಿ ೧೯೭೭ರಲ್ಲಿ ಬೆಂಗಳೂರು ಗೋಖಲೆ ಸಾರ್ವ-ಜನಿಕ ವಿಚಾರಸಂಸ್ಥೆ ಪ್ರಕಟಿಸಿದೆ.) ಈ ಉಪನ್ಯಾಸದಲ್ಲಾಗಲೇ ಅವರು 'ಛಂದೋ-ಗತಿ' ಎಂದರೇನು ಎನ್ನುವುದನ್ನು ಸೂಚಿಸಿದ್ದಾರೆ. "ಪದ್ಯದ ವಿಶಿಷ್ಟ ಪ್ರಯೋಜನ-ವೆಂದರೆ ಶ್ರವ್ಯತ್ವ[2] ಪದ್ಯವನ್ನು ರಾಗಯುಕ್ತವಾಗಿ ಎಂದರೆ ಸ್ವರಾರೋಹಾ-

---

* ಇದು 'ಛಂದೋಗತಿ'ಯನ್ನು ಕುರಿತು 'ಲೋಚನ' ಪತ್ರಿಕೆಯ ಸಂಪುಟ ೫, ಸಂಚಿಕೆ ೧ರಲ್ಲಿ ಪ್ರೊ ಎಂ. ವಿ. ಸೀತಾರಾಮಯ್ಯನವರು ಬರೆದ ವಿಮರ್ಶೆ (ಪು. ೧೧೩–೧೩೩). ಇದಕ್ಕೆ ಸೇಡಿಯಾಪು ಅವರ ಪ್ರತಿಕ್ರಿಯೆಯೂ ಈ ಪತ್ರಿಕೆಯ ಇನ್ನೊಂದು ಸಂಚಿಕೆಯಲ್ಲಿ ಪ್ರಕಟಗೊಂಡಿದ್ದು ಪ್ರಸ್ತುತ ಸಂಪುಟದಲ್ಲಿ ಈ ಲೇಖನದ ಅನಂತರ ಸೇರಿದೆ. – ಸಂ.

1. ಈ ಪ್ರಬಂಧವು ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ೧೮ನೆಯ ಸಂಪುಟದ ೧–೨ ಸಂಚಿಕೆಗಳಲ್ಲಿ (ಏಪ್ರಿಲ್, ಜುಲೈ 1933) ಪ್ರಕಟವಾಗಿದೆ.

2. ಕಾವ್ಯವನ್ನು ದೃಶ್ಯಕಾವ್ಯ ಶ್ರವ್ಯಕಾವ್ಯ ಎಂದು ಲಾಕ್ಷಣಿಕರು ವಿಭಜಿಸಿರುವರಷ್ಟೆ. ಇಲ್ಲಿ ಶ್ರವ್ಯ ಎಂದರೆ ಶ್ರೋತೃಗಳು ಕೇಳತಕ್ಕದ್ದು ಎಂದು ಮಾತ್ರವಲ್ಲದೆ, ಕಾವ್ಯ ತನ್ನ ಶಬ್ದಗುಣಗಳಿಂದ ಶ್ರವಣೇಂ-ದ್ರಿಯಾಹ್ಲಾದಕಾರಕ ಎಂದೂ ತಿಳಿಯಬೇಕು.

ವರೋಹಪೂರ್ವಕ ಹಾಡದೆ ಕೇವಲ ಓದಿದರೂ ಗದ್ಯದಲ್ಲಿಲ್ಲದ ಒಂದು ಗುಣವಿಶೇಷದ ಬೋಧವಾಗಿ, ನಮಗದು ಸುಖದಾಯಕವಾಗುತ್ತದೆ. ಈ ಸುಖ ದಾಯಕ ಗುಣವು ಆ ಪದ್ಯದ 'ಗತಿ'ಯಲ್ಲಿ ಅಡಗಿರುತ್ತದೆ. ಈ ಗತಿಯೇ ಎಂದರೆ ಬಳಕೆಯ ಮಾತಿನಲ್ಲಿ ಹೇಳುವುದಾದರೆ 'ಧಾಟಿ'ಯೇ ಛಂದೋನಿಯಮಗಳ ಲಕ್ಷ್ಯ ಮತ್ತು ಪರಿಣಾಮ." ಈ ಪರಿಣಾಮ ಸುಖವನ್ನವರು 'ಗತಿಸೌಂದರ್ಯ' ಎಂದು ಹೇಳಿ, ಇದೇ 'ಛಂದಸ್ಸೌಂದರ್ಯ' ಎಂದಿದ್ದಾರೆ. ಛಂದೋಗತಿ ಸೌಂದರ್ಯಮೀಮಾಂಸೆಯೇ 'ಛಂದೋಗತಿ' ಗ್ರಂಥದ ವಿಷಯ. ಲೇಖಕರು ನಿರ್ದೇಶಮಾಡಿರುವಂತೆ "ಛಂದಸ್ತತ್ತ್ವಗಳ ಹಾಗೂ ಗತಿಭೇದಗಳ ವಿವೇಚನೆ ಮತ್ತು ವಿವೃತಿ"ಯೆ ಗ್ರಂಥವಿಷಯ.

'ಛಂದೋಗತಿ'ಯಲ್ಲಿ ಒಟ್ಟು ಒಂಬತ್ತು ಪರಿಚ್ಛೇದಗಳಿವೆ. ಒಟ್ಟು ೨೧೭ ಪುಟಗಳಲ್ಲಿ ಹರಡಿಕೊಂಡಿರುವ ವಿಷಯವಿವೇಚನೆಯಲ್ಲಿ ಲೆಕ್ಕಹಿಡಿಯುವ ಗೋಜಿಗೆ ಹೋಗದೆ ಅಂದಾಜಿನ ಮೇಲೆ ಹೇಳುವುದಾದರೆ ಕನಿಷ್ಠ ಪಕ್ಷ ೬೦-೭೦ ಪುಟಗಳಷ್ಟು ಸಣ್ಣ ಅಕ್ಷರದಲ್ಲಿ (ಎಂದರೆ ೧೦ ಪಾಯಿಂಟ್) ಅಚ್ಚಾಗಿರುವ ೯೭ ಅಡಿಟಿಪ್ಪಣಿಗಳು ಶಾಸ್ತ್ರಪರಿಚಯವಿರುವ ಓದುಗನಿಗೆ ಕೂಡ ದಿಗ್ಭ್ರಮೆ ಉಂಟುಮಾಡಿ, ವಿಷಯಾಂತರವಾಯಿತೇನೋ ಎಂಬ ಸಂದೇಹವನ್ನು ಹುಟ್ಟಿ-ಸುವ ಮಟ್ಟಿಗೆ ದೀರ್ಘವಾಗಿವೆ. ಈ ಅಡಿಟಿಪ್ಪಣಿಗಳ ಪ್ರಮಾಣ ಅರ್ಧಪುಟದಿಂದ ಹಿಡಿದು ೧೮ ಪುಟಗಳ ವರೆಗೆ ಮೆಯ್‌ಚಾಚಿದೆ. ಈ ಅಡಿಟಿಪ್ಪಣಿಗಳು ಅನ್ಯ ಗ್ರಂಥಾಧಾರಗಳ ಸೂಚನೆಗಳಿಗೆ, ಅವತರಣಿಕೆಗಳಿಗೆ ಮಾತ್ರ ಸೀಮಿತವಾಗಿಲ್ಲ. ಮುನ್ನುಡಿಯಲ್ಲಿ ಡಾ। ಶ್ರೀನಿವಾಸ ಹಾವನೂರರು ತಿಳಿಸಿರುವಂತೆ, ಇವುಗಳಲ್ಲಿ "ಸ್ವತಂತ್ರವಾಗಿ ಪ್ರತಿಪಾದಿತವಾದ ಹಲವು ಪೂರಕವಿಷಯಗಳಿವೆ. ಈ ಬಗೆಯ ಅಡಿಟಿಪ್ಪಣಿಗಳು ಅವರ ವ್ಯಾಸಂಗದ ವಿಸ್ತಾರವನ್ನು ತೋರ್ಪಡಿಸುವುದಲ್ಲದೆ, ಯಾವುದೊಂದು ಅಂಶವು ಮುಖ್ಯವಿಷಯಕ್ಕೆ ನೇರಸಂಬಂಧ ಇರುವುದರ ಅಥವಾ ಇಲ್ಲದಿರುವುದರ ಖಚಿತವಾದ ಪರಿಜ್ಞಾನವನ್ನು ಸೂಚಿಸಬಲ್ಲವುಗಳಾಗಿವೆ. ಹಾಗೆಂದು ಅವು ಅಮುಖ್ಯ ವಿಷಯಗಳು ಅಲ್ಲವೇ ಅಲ್ಲ. ಅಲ್ಲಿ ಬಂದಿರುವ ತಂತ್ರೀಲಯದ ವಿಚಾರ, 'ವೃತ್ತ' ಮತ್ತು 'ಜಾತಿ'ಯ ವಿಚಾರ, ವೈದಿಕ ಛಂದೋ-ರೂಪಗಳ ಸ್ವಭಾವ ಹಾಗೂ ತ್ರೈಸ್ವರ್ಯದ ವಿಚಾರ – ಇವು ಒಂದೊಂದೂ ಪರಿಪೂರ್ಣ ವಿಷಯಗಳೇ ಆಗಿ ಮೂಡಿವೆ." ಹಾವನೂರರ ಈ ಮಾತನ್ನು ಅನುಮೋದಿಸಿ ಎತ್ತಿ ಹೇಳುವುದರೊಂದಿಗೆಯೇ ಅವರು ಮುಂದುವರಿಸಿ ಹೇಳಿರುವ ಮಾತನ್ನೂ ಅನುಮೋದಿಸಿ ಎತ್ತಿಹೇಳುವುದು ಉಚಿತವೆನಿಸುತ್ತದೆ:

"ಇದೇ ಸಂದರ್ಭದಲ್ಲಿ ಸುವಿಖ್ಯಾತ ಛಂದಃಶಾಸ್ತ್ರಜ್ಞ ವೇಲಣಕರರ ಕೆಲವು ಅಭಿಪ್ರಾಯಗಳ (ವೈದಿಕ ಕವಿಗಳಿಗೆ ತಾಳಪ್ರಜ್ಞೆ ಇರಲೇ ಇಲ್ಲ – ಇತ್ಯಾದಿ) ಖಂಡನೆ ಬಂದಿದೆ. ಅದರಂತೆ ಮೊನಿಯರ್ ವಿಲಿಯಮ್ಸ್ ತನ್ನ 'ಇಂಗ್ಲಿಷ್ – ಸಂಸ್ಕೃತ ಶಬ್ದಕೋಶ'ದಲ್ಲಿ ರಿದಮ್, ಮೀಟರ್ ಇತ್ಯಾದಿ ಸಂಜ್ಞೆಗಳಿಗೆ ತಪ್ಪು

ಅರ್ಥ ಕೊಟ್ಟಿದ್ದರ ಟೀಕೆಯೂ ಇದೆ. ಬೇರೆಯವರ ತಪ್ಪಾದ ಹೇಳಿಕೆ, ತಪ್ಪು ವಿಧಾನಗಳನ್ನು ಎತ್ತಿತೋರುವುದು ಇಂಥ ಗ್ರಂಥಗಳಲ್ಲಿ ಇರಬೇಕಾದದ್ದೇ. ಮತ್ತು ತೀ.ನಂ.ಶ್ರೀ. ಅವರ ಹೇಳಿಕೆಯಲ್ಲಿನ ಒಂದೆರಡು ಲೋಪಗಳನ್ನು, ಕಿಟ್ಟೆಲ್ಲರ ಬುದ್ಧಿಪೂರ್ವಕವಾದ ಒಂದು ಪ್ರಮಾದವನ್ನು ಹಾಗೆ ತೋರಿಸಿದ್ದೂ ಇದೆ. ಅದೇ ವೇಲಣಕರ, ಮೊನಿಯರ್ ವಿಲಿಯಮ್ಸ್ ಇವರ ಕುರಿತಾದ ಆಕ್ಷೇಪಣೆ ತುಸು ಕಟುವಾಯಿತೆಂದು ಕೆಲವರಿಗೆ ಅನಿಸಲೂ ಬಹುದು. ಆದರೆ ವೇಲಣಕರರು ಛಂದಶ್ಶಾಸ್ತ್ರವಿಚಾರದಲ್ಲಿ ಒಬ್ಬ 'ಅಥಾರಿಟಿ' ಎಂದು ನಾವು ತಿಳಿಯುತ್ತಿರುವಾಗ, ಅವರು ಆ ರೀತಿಯ ಅಸಂಗತ ಹೇಳಿಕೆ ನೀಡಬಾರದಿತ್ತು – ಎಂಬ ವಿದ್ವದ್ವ್ಯಾಕುಲದಿಂದ ಕಟೂಕ್ತಿ ಬಂದಿರಬೇಕು – ಎಂದುಕೊಂಡಿದ್ದೇನೆ."

ಹಾವನೂರರ ಇನ್ನೊಂದು ಮಾತೂ ಈ ಸಂದರ್ಭದಲ್ಲಿ ಗಮನಾರ್ಹ:

"ಇನ್ನೊಂದು ಎದ್ದುಕಾಣುವ ಸಂಗತಿಯೆಂದರೆ, ಇದುವರೆಗೆ ಕನ್ನಡದಲ್ಲಿ ಛಂದಶ್ಶಾಸ್ತ್ರ ವಿವೇಚನೆ ಮಾಡಿದ ಆಧುನಿಕರು ಯಾರನ್ನೂ ಸೇಡಿಯಾಪು ಅವರು ಉಲ್ಲೇಖಿಸಲು ಅಥವಾ ಆಧರಿಸಲು ಹೋಗಿಲ್ಲ. ಅವರಿಗೆ ಅದರ ಅಗತ್ಯವಾದರೂ ಎಲ್ಲಿದೆ?"

ಸೇಡಿಯಾಪು ಅವರು ಪರಾಮರ್ಶೆ ಮಾಡಿರುವ ಛಂದೋಗ್ರಂಥಗಳ ಕರ್ತರಾದ ಆಧುನಿಕ ವಿದ್ವಾಂಸರಿಗೂ ಅವರಿಗೂ ಮತಭೇದವಿರುವಲ್ಲಿ ಮಾತ್ರ ಅವರು ಆ ವಿದ್ವಾಂಸರ ಅಭಿಪ್ರಾಯಗಳನ್ನು ಉಲ್ಲೇಖಿಸಿರುವುದು ಕಂಡು-ಬರುತ್ತದೆ. (ತೀ.ನಂ.ಶ್ರೀ. ಅವರ 'ಸಮಾಲೋಕನ' ಮತ್ತು 'ಕನ್ನಡ ಕೈಪಿಡಿ'ಯಲ್ಲಿ ಕನ್ನಡದ ಛಂದಸ್ಸನ್ನು ಕುರಿತು ಬಿ.ಎಂ.ಶ್ರೀ. ಅವರು ಬರೆದಿರುವ ಲೇಖನ – ಇವೆರಡನ್ನು ಮಾತ್ರ ಸೇಡಿಯಾಪು ಅವರು ಪರಿಶೀಲಿಸಿದ್ದಾರೆ. ವೆಂಕಟಾಚಲ ಶಾಸ್ತ್ರೀ, ಡಿ.ಎಸ್. ಕರ್ಕಿ, ವಿ.ಸೀ. ಇವರ ಬರೆಹಗಳು ಮಾನ್ಯ ಲೇಖಕರ ಗಮನಕ್ಕೆ ಬಂದಿಲ್ಲ.) ಒಂದೆರಡು ಅಂಶಗಳಲ್ಲಿಯಾದರೂ ಸ್ಥೂಲವಾಗಿ ಸಹಮತವಿರುವಾಗ ಆಧುನಿಕರ ಅಭಿಪ್ರಾಯಗಳನ್ನು ಉಲ್ಲೇಖಿಸಬೇಕಾಗಿದ್ದಿತೆಂದು ನಮಗೆ ತೋರುತ್ತದೆ. ಉದಾಹರಣೆಗೆ, ಲಯಸ್ವರೂಪದ ಬಗೆಗೆ ತೀ.ನಂ.ಶ್ರೀ ಹೀಗೆ ಹೇಳಿದ್ದಾರೆ: "ನಿಯತವಾದ ಕಾಲದ ಅಂತರದಲ್ಲಿ ತಾಳಗಳು ಆವರ್ತನೆಯಾಗುವುದಕ್ಕೆ ಲಯ (Rhythm) ಎಂದು ಹೆಸರು. 'ಲಯ'ದ ಅರ್ಥವನ್ನು ಇನ್ನಷ್ಟು ಹಿಗ್ಗಲಿಸಿ, ಸದೃಶಕ್ರಿಯೆಗಳ ಪರಂಪರೆಯಲ್ಲಿ ನಿಯಮಬದ್ಧತೆ ಗೋಚರವಾದಾಗಲೆಲ್ಲ ಅದು ನಿಷ್ಪನ್ನವಾಗುವುದೆಂದು ಹೇಳಬಹುದು." (ಸಮಾಲೋಕನ, ಪು.೧೮೨). ಲಯದ ಬಗೆಗೆ ಸೇಡಿಯಾಪು ಅವರ ಅಭಿಪ್ರಾಯ: 'ಲಯವೆಂದರೆ, ಕ್ರಿಯಾಕಾಲಖಂಡಗಳ ಅನ್ಯೋನ್ಯಸಮತ್ವ, ಆ ಸಮತ್ವವೇ ತಾಳದ ಆಧಾರ; ಆದುದರಿಂದ, ಅದು ತಾಳದ ಅವಿಭಾಜ್ಯವಾದ ಅಂಗ.' (ಛಂದೋಗತಿ, ಪು. ೩೧). ಈ ಎರಡೂ ವಾಕ್ಯಗಳಲ್ಲಿ ಮಾತುಗಳು ಬೇರೆಯಾಗಿದ್ದರೂ ಆಶಯ ಒಂದೇ ಆಗಿದೆ. ತೀ.ನಂ.ಶ್ರೀ. ಲಯ = Rhythm ಎಂದೇ ಬಗೆದಿರುವುದು ಸ್ಪಷ್ಟ. ಆದರೆ ಸೇಡಿಯಾಪು ಅವರು ಈ

ಸಮೀಕರಣವನ್ನು ಒಪ್ಪುವುದಿಲ್ಲ. Oxford ಕೋಶದ ಆಧಾರವನ್ನು ಹಿಡಿದು 'Rhythm ಎಂದರೆ metrical movement ಎಂದು ಪ್ರೋಕ್ತ'ವಾಗಿರುವುದನ್ನು ಅವಲಂಬಿಸಿ, 'ಛಂದೋವಿಷಯಕವಾದ 'ರಿಧಮ್' ಎಂದರೆ 'ಛಂದೋಗತಿ' ಎಂದಾಯಿತು,' "Rhythm ಎಂದರೆ ಒಂದು ಬಗೆಯ ಗತಿ" – ಎಂಬ ನಿಲುವಿಗೆ ತಲಪುತ್ತಾರೆ. ಸೇಡಿಯಾಪು ಅವರ ನಿಶ್ಚಿತದ ಮೇರೆಗೆ, "Rhythm ಎಂಬ ಪದದ ಅರ್ಥದೊಳಗೆ 'ಲಯ'ವೂ ಸೇರಬಹುದಾದರೂ 'ಲಯ' ಎಂಬುದರೊಳಗೆ Rhythm ಅಡಕವಾಗಲಾರದು" (ಪು.೪೯). ತೀ.ನಂ.ಶ್ರೀ. ಅವರ ಪ್ರಕಾರ Rhythm = ಲಯ ಆದರೆ, ಸೇಡಿಯಾಪು ಅವರ ಪ್ರಕಾರ Rhythm = ಗತಿ. ಇದು ಸೇಡಿಯಾಪು ಅವರು ಮೊತ್ತಮೊದಲಿಗೆ ಗೊತ್ತುಹಚ್ಚಿ ಪ್ರತಿಪಾದಿಸಿರುವ ಈ ಎರಡು ಪರಿಕಲ್ಪನೆಗಳ ನಡುವಣ ಮೂಲಭೂತ ವ್ಯತ್ಯಾಸ, ಎಂದು ಭಾವಿಸಬಹುದೆ? ಕರ್ಕಿಯವರು ಈ ವ್ಯತ್ಯಾಸವನ್ನು ಗುರುತಿಸಿದ್ದಾರೆ ಎಂದು ನನಗೆ ತೋರುತ್ತದೆ. ಅವರು ಹೀಗೆ ಹೇಳಿದ್ದಾರೆ: 'ಲಯದಿಂದ ಹಾಡಿಗೆ ಧಾಟಿಯುಂಟಾಗುವುದಾದರೂ ಲಯವೇ ಧಾಟಿಯಲ್ಲ. ಒಂದು ಪದ್ಯದಲ್ಲಿರುವ ಲಯವು ಒಂದೇ ವಿಶಿಷ್ಟವಾದ ಲಯ. ಆದರೆ ಆ ಪದ್ಯವನ್ನು ಹಲವು ರೀತಿಗಳಲ್ಲಿ ಹೇಳಬಹುದಾಗಿದೆ. ತ್ರಿಪದಿಯನ್ನು ನಾಲ್ಕಾರು ರೀತಿಗಳಲ್ಲಿ ಹೇಳುವು-ದನ್ನು ನಾವು ಕೇಳಿದ್ದೇವೆ." (ಕ. ಛಂದೋವಿಕಾಸ, ಪು. ೯).[3] ಕರ್ಕಿ ಅವರ ದೃಷ್ಟಿಯಲ್ಲಿ 'ಧಾಟಿ' ಎಂದರೆ 'ಗತಿ'ಯೆ. ಇಲ್ಲಿ ಮುಖ್ಯವಾಗಿ ಉದ್ಭವಿಸುವ ಪ್ರಶ್ನೆ ಏನೆಂದರೆ, ಲಯವು ಗತಿಯನ್ನು ನಿಯಂತ್ರಿಸುತ್ತದೆಯೆ, ಇಲ್ಲವೆ ಗತಿ ಲಯವನ್ನು ನಿಯಂತ್ರಿಸುತ್ತದೆಯೇ ಎನ್ನುವುದು. ಬೇರೆಯ ಮಾತಿನಲ್ಲಿ ಹೇಳುವುದಾದರೆ, ಲಯದ ವ್ಯಾಪ್ತಿ ಹಿರಿದೆ, ಗತಿಯ ವ್ಯಾಪ್ತಿ ಹಿರಿದೆ, ಎನ್ನುವುದು ಪ್ರಶ್ನೆ. ಈ ಪ್ರಶ್ನೆಗೆ ಉತ್ತರಿಸುವಾಗ, ಸೇಡಿಯಾಪು ಅವರ ಅಭಿಪ್ರಾಯವನ್ನು ಗಮನಿಸಬೇಕಾಗುತ್ತದೆ. 'ಲಯ' ಎಂದರೆ ವಸ್ತುತಃ 'ಒಂದು ಬಗೆಯ ನಿಲುಗಡೆ' ಎಂದೂ Rhythm ಎಂದರೆ 'ಒಂದು ಬಗೆಯ ಗತಿ' ಎಂದೂ, ಇವು ಪರಸ್ಪರ ವಿರೋಧಿಗಳು ಎಂದೂ ನಿರ್ಣಯಿಸಿ, ಅವರು ಹೀಗೆ ಹೇಳಿದ್ದಾರೆ:

"'ಗತಿ' ಮತ್ತು 'ನಿಲುಗಡೆ' ಎಂಬವು ತಾತ್ತ್ವಿಕವಾಗಿ ಒಂದು ಇನ್ನೊಂದರ ಅಭಾವರೂಪವಾಗಿದ್ದರೂ – ಪ್ರಸ್ತುತ ವಿಷಯದಲ್ಲಿ ಅವೆರಡರೊಳಗೆ ಅಪರಿ-

---

3. ತ್ರಿಪದಿಯನ್ನು ತಂತಮ್ಮ ಇಚ್ಛೆಯಂತೆ, ತಮ್ಮ ನಾಲಗೆ ನುಡಿದಂತೆ, ನಾಲ್ಕಾರಲ್ಲ ಎಂಟು ಹತ್ತು ರೀತಿಯಲ್ಲೂ ಹೇಳಬಹುದು, ಹಾಡಬಹುದು. ತಾಳದ ದೃಷ್ಟಿಯಿಂದ ತ್ರಿಪದಿಯನ್ನು ಮುಖ್ಯವಾಗಿ ಮಿಶ್ರಛಾಪು, ಆದಿ, ರೂಪಕಗಳಲ್ಲಿ ಹೇಳಬಹುದು (ಮತ್ತು, ಸಾಂಗತ್ಯವನ್ನು ಕೂಡ). ಛಂದಶ್ಶಾಸ್ತ್ರರೀತ್ಯಾ ತ್ರಿಪದಿ ಎರಡು ಬಗೆಯ ಧಾಟಿಗೆ ಒದಗಿ ಬರುತ್ತದೆ: ಒಂದು (ಪಂಚ) ಮಾತ್ರಾಲಯ, ಇನ್ನೊಂದು ತ್ರಿಮೂರ್ತಿಗಣಗಳ ಅಂಶಲಯ. ಪಂಚಮಾತ್ರಾ ಲಯಕ್ಕೆ ತಿರುಗಿದಾಗ ಅದರ ತಾಳಲಯ ಝಂಪೆ ಆಗುತ್ತದೆ.

ಹಾರ್ಯವಾದೊಂದು ಸಂಬಂಧವಿರುತ್ತದೆ. ಅದು ಹೇಗೆಂದರೆ : ಛಂದೋಗತಿ ಎಂಬುದು ಯಂತ್ರವಾಹನದ ಗತಿಯಂತೆ ಏಕಾಕಾರವಾದ ಅಖಂಡಗತಿಯಲ್ಲ; ಅದು ನಮ್ಮ ಕಾಲಿನ ನಡಿಗೆಯಂತೆ ಸಖಂಡಗತಿ; ಅದಕ್ಕೂ 'ಹಜ್ಜೆ'ಗಳಿವೆ. ಪ್ರತಿಯೊಂದು ಹಜ್ಜೆಗೂ ಒಂದು 'ನಿಲುಗಡೆ' ಇದೆ. ಆ ನಿಲುಗಡೆಗಳು ಸಮಕಾಲಿಕವಾಗಿದ್ದರೆ ಆ 'ಗತಿ' ಲಯಾನ್ವಿತವೆನಿಸುವುದೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಹಾಗೆ ಆಗಬೇಕಾದರೆ ಅವುಗಳ 'ಅಂತರ', ಎಂದರೆ ಆ ನಿಲುಗಡೆಗಳ ಮಧ್ಯದ ಉಚ್ಚಾರಕಾಲಾವಕಾಶ ಒಂದಕ್ಕೊಂದು ಸಮಾನವಾಗಿರಬೇಕಾಗುತ್ತದೆ. ಅವಕಾಶಗಳು ಅಸಮಾನವಾಗಿದ್ದರೆ ಆ ಗತಿ ಲಯರಹಿತವಾಗುತ್ತದೆ. ಹೀಗೆ, ಛಂದೋಗತಿಯು ಸಮಾನಾಂತರ ಗತಿ (=ಸಮಗತಿ) ಎಂದೂ, ಅಸಮಾನಾಂತರ ಗತಿ (=ವಿಷಮಗತಿ) ಎಂದೂ ದ್ವಿವಿಧವಾಗಿದೆ. ಈ ಎರಡೂ ಗತಿಯ ಛಂದೋ ಬಂಧಗಳು ನಮ್ಮ ಛಂದಶ್ಶಾಸ್ತ್ರಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿವೆ. ಮಾತ್ರಾಸಮಕ, ಷಟ್ಪದಿ ಮೊದಲಾದ ಎಲ್ಲಾ 'ಮಾತ್ರಾಬಂಧ'ಗಳೂ; ಭುಜಂಗಪ್ರಯಾತ, ಲಲಿತಪದ, ರಥೋದ್ಧತಾ ಇತ್ಯಾದಿ (ಹಾಗೂ ಹಿಂದೆ ಉದಾಹರಿಸಲಾದ ಲಲಿತ, ಲಯಗ್ರಾಹಿ ಇತ್ಯಾದಿ) 'ವೃತ್ತ'ಗಳೂ ಸಮಗತಿಬಂಧಗಳಾಗಿದ್ದು 'ಲಯಾನ್ವಿತ'ವಾಗಿವೆ. ಶಾರ್ದೂಲವಿಕ್ರೀಡಿತ, ಚಂಪಕಮಾಲಾ, ಸ್ರಗ್ಧರಾ, ಮಂದಾಕ್ರಾಂತಾ, ಮಾಲಿನಿ, ಶಾಲಿನಿ ಇತ್ಯಾದಿ ವೃತ್ತಗಳೂ ಅನುಷ್ಟುಪ್ ಶ್ಲೋಕ, ಉಪಜಾತಿ, ಕರಂಬಜಾತಿ ಇತ್ಯಾದಿ 'ಅಕ್ಷರಜಾತಿ'ಗಳೂ ವಿಷಮಗತಿಬಂಧಗಳಾಗಿದ್ದು ಲಯರಹಿತವಾಗಿವೆ."

ಮೇಲ್ಕಂಡ ಅವತರಣಿಕೆಯ ಹೇಳಿಕೆಯಲ್ಲಿ, ಷಟ್ಪದಿ ಮುಂತಾದ ಮಾತ್ರಾ ಬಂಧಗಳು 'ಸಮಗತಿ'ಯವು ಎಂದಿರುವುದು ಸರಿಯೆ ಎಂಬ ಪ್ರಶ್ನೆ ವಿಚಾರಾ–ರ್ಹವಾಗಿ ಕಾಣುತ್ತದೆ. ಈ 'ಸಮಗತಿ' ಎಂದರೆ ತಾಳನಿಬದ್ಧ ಅಥವಾ ತಾಳ ಲಯಾನ್ವಿತ ಎಂದು ತಾನೆ ಅರ್ಥ? ಯಾವುದೇ ಮಾತ್ರಾಬಂಧವನ್ನು ಸಮಗತಿ ಎಂದರೆ ತಾಳಬದ್ಧವಾಗಿ ಎಲ್ಲ ಸಂದರ್ಭಗಳಲ್ಲಿಯೂ ಪಠಿಸಿದ್ದೇ ಆದರೆ 'ಛಂದೋಗತಿ'ಗೆ ಗೌರವ ಸಲ್ಲಿಸಿ ಬಂಧದ ಕಾವ್ಯ – ಶ್ರವ್ಯತ್ವಕ್ಕೆ – ಎಂದರೆ, ಅದರ ಅರ್ಥಗೌರವ, ಶಬ್ದಶ್ರವಣಸುಭಗತೆ (ಎಂದರೆ ಸುಶ್ರಾವ್ಯತೆ), ಭಾವ–ರಮಣೀಯತೆ, ರಸಪ್ರತೀತಿ, ಇವಕ್ಕೆ ತಿಲಾಂಜಲಿ ಕೊಟ್ಟಂತೆಯೆ ಆಗುತ್ತದೆ. ಮಾತ್ರಾಬಂಧವಾಗಲಿ ವರ್ಣವೃತ್ತವಾಗಲಿ ಪದ್ಯವಾಚನದ ಗತಿ (ಎಂದರೆ, ನಡೆ, ಧಾಟಿ) ಮತ್ತು ಅದರ ನಿಲುಗಡೆಗಳು ಪದ್ಯದ ಅರ್ಥಾನುಗವಾಗಿರಬೇಕೇ ಹೊರತು 'ಲಯ' (=ತಾಳ)ವನ್ನು ಅನುಸರಿಸುವವು ಆಗಿರಕೂಡದು. ಲಯಾನು–ಸಾರಿ ಪದ್ಯವಾಚನ ಸುಗಮವಾಗಿರದು. ಗ್ರಂಥಾಂತ್ಯದಲ್ಲಿ ಮಾನ್ಯ ಲೇಖಕರು ಉದಾಹರಿಸಿರುವ ಪದ್ಯದ 'ಬಂಧಲಯ'(=ಗತಿ)ವನ್ನೂ 'ಪಾಠ್ಯಗತಿ'ಯನ್ನೂ ಬೇರ್ಪಡಿಸಿ ತೋರಿಸಲು ಪ್ರಯತ್ನಿಸುತ್ತೇನೆ:

ತೆಗೆದು । ದಗ್ಗದ । ತಂಪು, । ನದಿಸರ–।
ಸಿಗಳ । ತಡಿಯಲಿ । ಹಜ್ಜೆ । ಯಾದುದು, ।

ಹಗಲ । ಹಾವಸೆ । ಹರಿದು । ದೋಕರಿ । ಸಿದುದು । ಹಿಮಜಲವ ॥
ಸೆಗಳಿ । ಕೆಗಳೇ । ರಿದವು, । ನೋಟಕೆ ।
ಸೊಗಸಿ । ದವು ನೆಳ । ಲುಗಳು, । ತಂಗಾ– ।
ಳಿಗೆ ವಿ । ಹಾರಿಸಿ, । ಮೆಯ್ಯ । ತೆತ್ತುದು । ಕೂಡೆ । ಜನನಿಕರ ॥

ನಾಟ್ಯ ಮತ್ತು ಸಂಗೀತಶಾಸ್ತ್ರಗಳ ಲಯತತ್ತ್ವವನ್ನು ಛಂದಶ್ಶಾಸ್ತ್ರದಲ್ಲಿ ಉಕ್ತವಾದ ಬಂಧಗಳಿಗೆ ಅನ್ವಯಿಸಿ ಹೇಳುವಾಗ ಮಾತ್ರಾಬಂಧಗಳ ವಿಷಯದಲ್ಲಿ ಗಣಾನುಸಾರಿಯಾದ 'ಲಯ'ವನ್ನೂ ಅರ್ಥಾನುಸಾರಿಯಾದ 'ಗತಿ'ಯನ್ನೂ ಸಮೀಕರಿಸುವುದು ಸರಿಯಲ್ಲ ಎಂದು ತೋರುತ್ತದೆ. ಎಂದರೆ, ಛಂದೋಬಂಧದ 'ಗಣಮಾನ'ವನ್ನು ಅರ್ಥಾನುಸಾರಿಯಾದ ಹಾಗೂ 'ಅರ್ಥಯತಿ'ಗೆ ಒಳಪಟ್ಟ 'ಗತಿ'ಯನ್ನು ಸಮೀಕರಿಸುವುದು ಸಲ್ಲದೆಂದೇ ನನ್ನ ಅಭಿಪ್ರಾಯ. ಗಣಗಳಿಗೆ ಸಂಬಂಧಪಟ್ಟಂತೆ 'ಗತಿ'ಯ ನಿಲುಗಡೆಗಳು ಅಸ್ಫುಟವಾಗಿದ್ದು ಅರ್ಥಾನುಗವಾದ ಯತಿಯಲ್ಲಿ (ಪದ್ಯದಲ್ಲಿ ಅಲ್ಪವಿರಾಮ ಉಪಯೋಗಿಸಿರುವ ಕಡೆಗಳಲ್ಲಿ) ಮಾತ್ರ ಸ್ಫುಟವಾಗಿರುತ್ತದೆ. ಅಡಿಗೆರೆಗಳನ್ನು ಹಾಕಿರುವ ಗಣಗಳ ನಿಲುಗಡೆಗಳನ್ನೂ ಹಾಕಿರದ ಗಣಗಳ ನಿಲುಗಡೆಗಳನ್ನೂ ಹೋಲಿಸಿ ನೋಡಿದಾಗ, ಛಂದೋಗತಿಗೂ ಛಂದೋಲಯಕ್ಕೂ ಇರುವ ಹೊಂದಾಣಿಕೆಯ ಸ್ವರೂಪ ಏನು ಎನ್ನುವುದು ಸ್ಪಷ್ಟವಾಗುತ್ತದೆ. 'ಹಗಲ । ಹಾವಸೆ' ಎನ್ನುವಲ್ಲಿ ಉಚ್ಚಾರಕಾಲಖಂಡದ (ಮಿಶ್ರ–ಛಾಪು ತಾಳಲಯದ ಒಂದು ಆವರ್ತದ) ನಿಲುಗಡೆ ಸುವ್ಯಕ್ತವಾಗಿದೆ. 'ಹರಿದು । ದೋಕರಿ' ಎಂಬ ಆವರ್ತಕ್ಕೆ ಉಚ್ಚಾರವನ್ನು ನಿಲ್ಲಿಸಿದರೆ, ಶಬ್ದಾರ್ಥಕ್ಕೆ ಭಂಗ ಬರುತ್ತದೆ. 'ಹರಿದುದೋಕರಿಸಿದುದು' ಎಂಬಲ್ಲಿ ತಾಳಲಯದ ಒಂದೂವರೆ ಆವರ್ತ ಉಚ್ಚಾರದೃಷ್ಟಿಯಿಂದ ಏಕಖಂಡವಾಗಿದೆ. 'ಛಂದೋಲಯ' ಎನ್ನುವುದು ತಾಳಲಯಕ್ಕಿಂತ ಭಿನ್ನವಾದುದು ಎಂದು ನನ್ನ ಅಭಿಮತ. 'ಗತಿ'ಗೂ ಗಣಗಳ 'ತಾಳಲಯ'ಕ್ಕೂ ಹೊಂದಿಕೆಯಿದ್ದರೂ ಅರ್ಥಾನುಸಾರಿಯಾಗಿ ಉಚ್ಚಾರವಾಗುವ ಮಾತ್ರಾಕಾಲಖಂಡವೆ 'ಛಂದೋಲಯ' ಎನ್ನಿಸುತ್ತದೆ. ಹೀಗಿರುತ್ತ, ಛಂದೋ–ಗತಿಯೇ ಬೇರೆ, ಛಂದೋಲಯವೇ ಬೇರೆ ಎನ್ನಬೇಕಾಗುತ್ತದೆ. ಸಮುದ್ರದ ತರಂಗಗತಿಯಂತೆ ಛಂದೋಲಯ. ಜೈಮಿನಿ ಭಾರತದ ಈ ಕೆಳಗಿನ ಪದ್ಯದಿಂದ ನನ್ನ ನಿಲವು ಹೆಚ್ಚು ಸ್ಪಷ್ಟವಾಗುವುದೆಂದು ನಂಬಿದ್ದೇನೆ:

ಚಪಲೆ, ಚಂ । ಚಲೆ, ಚಾಟು । ವತಿ, ಚಂಡಿ, । ಛಲವಾದಿ ।
ಕುಪಿತೆ, ಕು । ತ್ಸಿತೆ, ಕುಹಕೆ, । ಕುಜೆ, ಕಡ್ಡೆ, । ಕುಲಗೇಡಿ ।
ಕಪಟಿ, ಕಂ । ಟಕಿ, ಕಟಕಿ, । ಕಡುದುಷ್ಟೆ । ಕಲಹಾರ್ಥಿ ।
ವಿರಸೆ, ಪರ । ವಶೆ, ಪಾದರಿ ॥
ವಿಫಲೆ, ವಿ । ಹ್ವಲೆ, ವಿಷಮೆ । ವಿರಸೆ, ವಿಪ । ರೀತೆ, ಮಿಗೆ ।
ತಪಿತೆ, ತ । ಸ್ಕರೆ, ತವಕಿ । ತವೆ ತಂದ್ರಿ । ತಾಮಸಿ, ಯೆ–।

ನಿಪ ವನಿತೆ । ಯರ ನಿಜಕೆ । ನಿಲಿಸಿ, ನಿ । ಶ್ಚಯಿಸಿದೊಡೆ । ಬಳಿಕ
ಬಳಲಿಕೆ ಬಾರದೆ ॥

ಈ ವಾರ್ಧಕ ಷಟ್ಪದಿಯಲ್ಲಿ ಝಂಪೆ ತಾಳ(ಲಯ)ದ ನಡೆ ಅಥವಾ ಗತಿ ಇದೆ. ಆದರೆ 'ನಿಲುಗಡೆಗಳು ಕಟ್ಟುನಿಟ್ಟಾದ ಸಮಕಾಲದಲ್ಲಿ ಗೋಚರಿಸುವ ಹಾಗೆ' ಇವೆ ಎಂದು ಅನ್ನಿಸುವುದಿಲ್ಲ. ಅಲ್ಪವಿರಾಮ ಇರುವಲ್ಲಿ ಅರ್ಥಾನುಸಾರಿಯಾದ ನಿಲುಗಡೆ ಇದೆ. 'ವರಯತಿಗೆ ಭಂಗಮಂ ತಾರದ' ಲಕ್ಷ್ಮೀಶನ ಹೇಳಿಕೆಯಲ್ಲಿಯ 'ವರಯತಿ'ಗೆ ಕನ್ನಡ ಪದ್ಯರಚನೆಗೆ ವಿಶಿಷ್ಟವಾದ 'ಅರ್ಥಯತಿ' ಎಂದೇ ಅರ್ಥಮಾಡಬೇಕಾಗುತ್ತದೆ. 'ವರಯತಿ' ಎಂದರೆ ಶ್ರೇಷ್ಠವಾದ ಯತಿ. ಇಲ್ಲಿ ಬೇರೆ ಯಾವ ಯತಿಯೂ ವಿವಕ್ಷಿತವಲ್ಲ.[4]

'ಲಯ' ಮತ್ತು 'ಗತಿ'ಯ ಬಗೆಗೆ ಶ್ರೀಯುತರ ಸಮರ್ಥವೂ ಶಾಸ್ತ್ರಾಧಾರಿತೂ ಆದ ವಿಶ್ಲೇಷಣೆ ಒಂದು ಅತಿಶಯವಾದ ಸಾಧನೆ. ಆದರೆ, ಮಾತ್ರಾಬಂಧಗಳು ಸಮಗತಿಬಂಧಗಳು, ಲಯಾನ್ವಿತವಾಗಿವೆ ಎಂಬ ಹೇಳಿಕೆ ಮಾತ್ರ ವಿಚಾರಾರ್ಹ. ಲಯಕ್ಕೂ ಗತಿಗೂ ಅಪರಿಹಾರ್ಯವಾದ ಸಂಬಂಧ ಇದೆ ಎಂಬ ಮಾತು ಒಪ್ಪತಕ್ಕದ್ದೆ.

ಆಂಗ್ಲಭಾಷೆಯ ಛಂದಶ್ಶಾಸ್ತ್ರದ Iambic, Trochee, Anapaestic, Dactylic ಎಂಬ ನಾಲ್ಕು ಪ್ರಕಾರದ ಗಣಗಳ ಬಗೆಗೆ ವಿಚಾರಮಾಡುತ್ತ, ಆ ಛಂದೋಗತಿಯ ವಿಶಿಷ್ಟಲಕ್ಷಣವಾದ Accent ಎಂದರೆ 'ಸ್ವರಭರ' ಎಂಬ ಛಂದಸ್ಸಿನ ಅಂಶ ನಮ್ಮ ಛಂದೋಗತಿಯಲ್ಲಿ ಇಲ್ಲ ಎಂದು ಲೇಖಕರು ಭಾವಿಸಿರುವಂತಿದೆ. ಈ ವಿಚಾರವನ್ನು ಪ್ರಸ್ತಾವಿಸಿರುವ ತೀ.ನಂ.ಶ್ರೀಯವರು ಹೀಗೆ ಹೇಳಿದ್ದಾರೆ: 'ಇಂಗ್ಲಿಷಿನಲ್ಲಿರುವ ಹಾಗೆ ಕನ್ನಡದಲ್ಲಿ ಸ್ವರಾಘಾತವು (Accent) ಪ್ರಮುಖವಾಗಿಲ್ಲವೆಂಬುದು ನಿಜ: ಆದರೆ ಕನ್ನಡದಲ್ಲಿ ಅದು ಇಲ್ಲವೇ ಇಲ್ಲವೆಂದು ಹೇಳುವಂತಿಲ್ಲ. ನಮ್ಮಲ್ಲಿ ಸಾಮಾನ್ಯವಾಗಿ ಪದದ ಮೊದಲನೆಯ ಸ್ವರದ ಮೇಲೆ ಆಘಾತವಿರುತ್ತದೆಂದು ಸ್ಥೂಲವಾಗಿ ಹೇಳಬಹುದು. ಪ್ರತ್ಯಯಗಳು ಈ ದೃಷ್ಟಿಯಿಂದ ದುರ್ಬಲ, ಸ್ವರವು ಗುರುವಾಗಿದ್ದರೆ ಮಾತ್ರ, ಪದದಲ್ಲಿ ಯಾವ ಸ್ಥಾನದಲ್ಲಿದ್ದರೂ ಆಘಾತವನ್ನು ತಡೆಯಬಲ್ಲದು.' (ಸಮಾಲೋಕನ, ಪು. ೧೯೦), ಧ್ವನಿಶಾಸ್ತ್ರವನ್ನು (Phonetics) ಅಧ್ಯಯನಮಾಡಿದ್ದ ತೀ.ನಂ.ಶ್ರೀಯವರ ಮಾತು ಗಮನಾರ್ಹ. ತೀ.ನಂ.ಶ್ರೀಯವರ ಅಭಿಪ್ರಾಯವನ್ನು ಒಪ್ಪುವುದಾದರೆ, ಛಂದೋಗತಿಯಲ್ಲಿ

---

4. "ತಾಳಬೇಕು । ತಕ್ಕ । ಮೇಳ ಬೇಕು ॥ ಯತಿ ಪ್ರಾಸವಿರಬೇಕು । ಗತಿಗೆ ನಿಲ್ಲಿಸಬೇಕು" ಎಂಬ ಪುರಂದರದಾಸರ ಕೀರ್ತನೆಯಲ್ಲಿ 'ಗತಿ' ಶಬ್ದಪ್ರಯೋಗ ಗಮನಾರ್ಹ. ಇಲ್ಲಿ 'ಗತಿ' ಶಬ್ದದ ಅರ್ಥ ಏನು ಎನ್ನುವುದು ಸ್ಪಷ್ಟವಾಗುವುದಿಲ್ಲ. ಇದು ಛಂದೋಗತಿಯಂತೂ ಅಲ್ಲ. ತಾಳಲಯದ ನಿಲುಗಡೆಗೆ 'ಗತಿ' ಎಂದಿರಬಹುದು ದಾಸರು; ಚರಣಾಂತ್ಯದ ನಿಲುಗಡೆ ಯತಿ ಎಂಬು ತೋರುತ್ತದೆ, ದಾಸರ ದೃಷ್ಟಿಯಲ್ಲಿ.

ಕಾಲಮಾನದ ಜೊತೆಗೆ ಅಕ್ಷರೋಚ್ಚಾರದ ಆಘಾತ ಅಥವಾ ಏರಿಕೆಯೂ ಒಂದು ಪ್ರಮುಖ ಗುಣಲಕ್ಷಣವಾಗುತ್ತದೆ. ಮೇಲೆ ಉದಾಹರಿಸಿರುವ ಪದ್ಯದ ಮೊದಲ ಸಾಲಿನಲ್ಲಿ ಛಂದೋಗತಿಯ ನಿಲುಗಡೆಗಳನ್ನೂ ಸ್ವರಾಘಾತಗಳನ್ನೂ ಈ ಕೆಳಗಿನಂತೆ ತೋರಿಸಬಹುದು:

ಚಪಲೆ, ಚಂ । ಚಲೆ, ಚಾಟು । ವತಿ, ಚಂಡಿ, । ಛಲವಾದಿ.

ಯಾವುದೇ ಷಟ್ಪದಿಯಲ್ಲಿ ಮೇಲೆ ಸೂಚಿಸಿರುವಂತೆ ಆಂಗ್ಲಭಾಷೆಯಷ್ಟು ಸುಸ್ಪಷ್ಟವಲ್ಲದಿದ್ದರೂ ಅಸ್ಪಷ್ಟಗೋಚರವಾದ 'ಸ್ವರಭಾರ' ಮತ್ತು ಅರ್ಥಾನುಸಾರಿ-ಯಾದ ಯತಿ – ಇವು ಛಂದೋಗತಿಯನ್ನು (= ಪಠನಕ್ರಮವನ್ನು) ಉನ್ಮೀಲನ ಮಾಡುತ್ತವೆ. ಈ 'ಗತಿ' ಓದುಗನ ಅನುಭವಕ್ಕೆ ಬರತಕ್ಕುದು; ಇಲ್ಲವೆ ಗಟ್ಟಿಯಾಗಿ ಓದಿತೋರಿಸಿದಾಗ ಓದುಗನ ಹಾಗೂ ಕೇಳುಗನ ಅನುಭವಕ್ಕೆ ಬರತಕ್ಕದ್ದು.

ಛಂದಶ್ಶಾಸ್ತ್ರದಲ್ಲಿ 'ಲಯ' ಭಿನ್ನವಾದ **ಛಂದೋಗತಿ** ಎಂಬ ಒಂದು ಅಂಶ ಉಂಟು ಎಂಬ ಮಹತ್ತ್ವದ ವಿಚಾರವನ್ನು ಶೋಧಮಾಡಿದ ಮಾನ್ಯ ಲೇಖಕರ ಪ್ರಯತ್ನಪಟುತ್ವ ಕೇವಲ ಅಭಿನಂದನೀಯ ಎಂಬ ಬಗೆಗೆ ಭಿನ್ನಾಭಿಪ್ರಾಯ ಇರಬೇಕಾಗಿಲ್ಲ. ಇವೆರಡರ ಸಂಬಂಧದ ಬಗೆಗೆ ಮಾತ್ರ ಅವರ ನಿಲುವಿಗೂ ನನ್ನ ನಿಲುವಿಗೂ ಇರುವ ದೃಷ್ಟಿಭೇದವನ್ನು ವಿದ್ವಾಂಸರು ವಿಚಾರವಿಮರ್ಶೆಮಾಡಿ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಬಹುದಾಗಿದೆ.

ಮೇಲಿನ ವಿಚಾರವಿಮರ್ಶೆ ಮೊದಲ ಮೂರು ಪರಿಚ್ಛೇದಗಳಿಗೆ ಸಂಬಂಧಪಟ್ಟದ್ದು. 'ಛಂದಸ್ ಮತ್ತು ಗತಿ – ಛಂದಃಪದಾರ್ಥ ವಿವೇಚನೆ' ನಾಲ್ಕನೆಯ ಪರಿಚ್ಛೇದದ ವಿಷಯ. ಛಂದಸ್ ಎಂಬ ಶಬ್ದಕ್ಕೆ ಪ್ರಾಚೀನ ವಿದ್ವಾಂಸರು ಹೇಳಿರುವ ಬೇರೆ ಬೇರೆ ಅರ್ಥಗಳನ್ನೂ ಶಬ್ದದ ನಿಷ್ಪತ್ತಿಯನ್ನೂ ಕೂಲಂಕಷವಾಗಿ, ಸಮಗ್ರವಾಗಿ ಪರಿಚಯ ಮಾಡಿಕೊಟ್ಟು, ಛಂದಸ್ ಶಬ್ದಾರ್ಥದ ಬಗೆಗೆ ಭರತ ಜಯಕೀರ್ತಿಗಳ ಅಭಿಪ್ರಾಯ ಒಂದೇ ಆಗಿದೆ ಎಂದು ಹೇಳಿ, ಅದನ್ನು ಸ್ವೀಕರಿಸಿ, "ತಾತ್ತ್ವಿಕವಾಗಿ....'ಛಂದಸ್' ಎಂಬುದು ಗುರುಲಘುಗಳ 'ವಿನ್ಯಾಸ'. ಇದು ಸಮಸ್ತವಾಙ್ಮಯಕ್ಕೆ ಅನ್ವಯಿಸುವ, ಎಂದರೆ ಪದ್ಯದಲ್ಲಿಯೂ ಗದ್ಯದಲ್ಲಿಯೂ ಅರ್ಥಾತ್ ಸಕಲ ಶಬ್ದಗಳಲ್ಲಿ ಇರುವ ಒಂದು ಗುಣ ಅಥವಾ ಲಕ್ಷಣ"[5] ಎಂದು ಛಂದಸ್ ಶಬ್ದಾರ್ಥದ ನಿಜವಾದ ವ್ಯಾಪ್ತಿಯನ್ನು ತಿಳಿಸಿ; "ಛಂದಸ್ ಎಂಬುದು 'ನಿಬದ್ಧ'ವೆಂದೂ 'ಅನಿಬದ್ಧ'ವೆಂದೂ ಎರಡು ವಿಧವಾಗಿದೆ. ಛಂದಸ್ಸಿನ ನಿಬದ್ಧ ರೂಪವೇ 'ಪದ್ಯ' ; ಛಂದಸ್ಸಿನ ಅನಿಬದ್ಧ ರೂಪವೇ 'ಗದ್ಯ' " ಎಂಬ ಸುಗ್ರಾಹ್ಯವಾದ ತೀರ್ಮಾನಕ್ಕೆ ಬಂದಿದ್ದಾರೆ ಲೇಖಕರು.

---

5. ಆಧುನಿಕ ಪಾಶ್ಚಾತ್ಯ ಛಂದಶ್ಶಾಸ್ತ್ರ ವಿವೇಚನೆಯಲ್ಲಿ Prose Rhythm, Speech Rhythm ಎಂಬ ಶಬ್ದಗಳ ಬಳಕೆಯನ್ನೂ 'ಪದ್ಯಗಂಧಿ ಗದ್ಯ' ಎಂದು ನಾವು ಹೇಳುವುದನ್ನೂ ಈ ಸಂದರ್ಭದಲ್ಲಿ ನೆನೆಯಬಹುದು.

ನಾಲ್ಕನೆಯ ಪರಿಚ್ಛೇದದಲ್ಲಿ 'ಛಂದಸ್ ಎಂಬುದು ಗುರುಲಘುಗಳ ವಿನ್ಯಾಸ' ಎಂದು ಲೇಖಕರು ತಿಳಿಸಿರುವರಷ್ಟೆ; ಐದನೆಯ ಪರಿಚ್ಛೇದದಲ್ಲಿ 'ಗತಿ'ಭೇದಗಳನ್ನು ವಿವರಿಸಿದ್ದಾರೆ. ಗುರುಲಘುಗಳು 'ಛಂದೋದ್ರವ್ಯ' (=ಛಂದೋ-ವಿನ್ಯಾಸದ ಘಟಕ ದ್ರವ್ಯ) ಎಂದು ಸರಿಯಾಗಿಯೆ ನಿರ್ಧರಿಸಿರುವ ಸಂದರ್ಭದಲ್ಲಿ, ಅಕ್ಷರಗಳನ್ನು 'ಶಬ್ದದ್ರವ್ಯ' ಎಂದು ಹೇಳಿ, ತಮ್ಮ ಹೇಳಿಕೆಗೆ 'ಶಬ್ದಮಣಿದರ್ಪಣ'ದ ಎರಡು ಸೂತ್ರಗಳನ್ನು (೯, ೪೪) ಆಧಾರವಾಗಿ ಅಡಿಟಿಪ್ಪಣಿಯಲ್ಲಿ ಉದ್ಧರಿಸಿ-ಕೊಟ್ಟಿದ್ದಾರೆ.[6]

"ನಮ್ಮನ್ನು ಸೆಳೆಯಬಲ್ಲ (ಎಂದರೆ ಅಸಾಮಾನ್ಯತೆಯ ಕಾರಣದಿಂದ ಆಕರ್ಷಕವಾಗಿರುವ) ಛಂದಸ್ಸರಣಿಯೇ 'ಗತಿ' ಎಂದು ಕರೆಯಲ್ಪಡುವುದಾಗಿದೆ" ಎಂದು ಹೇಳಿ, ಶಾರ್ಙ್ಗದೇವನು ತನ್ನ 'ಸಂಗೀತರತ್ನಾಕರ'ದಲ್ಲಿ ಮಾಡಿರುವ ಗದ್ಯಗತಿಭೇದಗಳನ್ನು ಗಮನಿಸಿ, "ಒಂದು ವ್ಯವಸ್ಥೆಗೆ ಒಳಪಟ್ಟ, ಆತ ಏವ ಆಕರ್ಷಕವಾದ, ಗುರುಲಘುಯೋಜನೆಯ ಪರಿಣಾಮವೇ ಗತಿ ಎಂಬುದು ಪೂರ್ವಾಚಾರ್ಯರ ಮತವಾಗಿತ್ತು" ಎಂದು ತಿಳಿಸಿ, ಆ ಗತಿಭೇದಗಳನ್ನು ಸವಿವರವಾಗಿ, ಉದಾಹರಣಪೂರ್ವಕ, ವ್ಯಾಖ್ಯಾನಿಸಿದ್ದಾರೆ, ಶ್ರೀ ಸೇಡಿಯಾಪು ಅವರು. ಅವು ಯಾವುವೆಂದರೆ : ದ್ರುತಗತಿ, ವಿಲಂಬಿತಗತಿ, ಮಧ್ಯಗತಿ, ದ್ರುತ-ಮಧ್ಯಗತಿ, ದ್ರುತವಿಲಂಬಿತಗತಿ, ಮಧ್ಯವಿಲಂಬಿತಗತಿ. ಈ ಗತಿಭೇದಗಳು ಸಂಪೂರ್ಣವಾಗಿ ಸಂಗೀತಪ್ರಪಂಚಕ್ಕೆ ಸೇರಿದವು, ಸಂಕುಚಿತ ವ್ಯಾಪ್ತಿಯುಳ್ಳ ಅವು ಒಂದು ಪಾರಿಭಾಷಿಕ ಸಂಜ್ಞೆ, ಎಂಬುದನ್ನು ಮರೆಯಬಾರದು. ಇದನ್ನು ನಮ್ಮ ಗಮನಕ್ಕೆ ತರಲು ಶ್ರೀಯುತರಾದರೂ ಮರೆತಿಲ್ಲವೆಂಬುದು ಗಮನಾರ್ಹ. ಈ ಸಂಬಂಧದ ಅಡಿಟಿಪ್ಪಣಿ (35, ಪು. ೬೧)ಯಲ್ಲಿ "ಇಲ್ಲಿ ಪ್ರೋಕ್ತವಾದ ದ್ರುತ ವಿಲಂಬಿತಾದಿಗಳು ಛಂದಸ್ತತ್ತ್ವಕ್ಕೆ ನೇರವಾಗಿ ಅನ್ವಯಿಸುವವುಗಳು. ಈ ಗತಿಭೇದ-ಗಳು ಗದ್ಯವನ್ನನುಲಕ್ಷಿಸಿ ಹೇಳಲ್ಪಟ್ಟವುಗಳಾದರೂ ಇವು ಪದ್ಯಕ್ಕೆ ಬಹಿರ್ಭೂತ-ವಾದವುಗಳಲ್ಲ. ಪರೀಕ್ಷಿಸಿ ನೋಡಿದರೆ ಇಲ್ಲಿ ಪ್ರೋಕ್ತವಾದ ಎಲ್ಲ ಗತಿಭೇದಗಳನ್ನು ಪದ್ಯಗಳಲ್ಲಿಯೂ ಕಾಣಬಹುದು" ಎಂದು ಹೇಳಿ, ಆರು ಗತಿಭೇದಗಳಿಗೂ ಗುರುಲಘು ಪ್ರಸ್ತಾರಸಮೇತ ಉದಾಹರಣೆಗಳನ್ನು ಕೊಟ್ಟಿದ್ದಾರೆ. 'ದ್ರುತಗತಿ'ಗೆ ಉದಾಹರಣೆ:

U UU UUUU U UUU UUUU –
ಸುರಪುರಗಣಮೆಸೆದಿರೆ ಜಲನಿಧಿಯೊಳ್ ॥

(ಛಂದೋಂಬುಧಿ)

---

6. ನನ್ನ ಅಲ್ಪಮತಿಗೆ ತೋರುವಂತೆ, ಕೇಶಿರಾಜನ ಸೂತ್ರದಲ್ಲಿ 'ಶಬ್ದ'ದ (ಪದದ) 'ದ್ರವ್ಯ' ಎನ್ನುವುದು 'ನಾದ'ವನ್ನು ಕುರಿತುದಾಗಿದೆ. ಅಕ್ಷರಗಳು (ಅಥವಾ ವರ್ಣಗಳು) ಶಬ್ದದ ಘಟಕಗಳು.

ಈ ಷಡ್ವಿಧ 'ಛಂದೋಗತಿಭೇದ'ಗಳನ್ನು ಸಂಗೀತಶಾಸ್ತ್ರಗ್ರಂಥಗಳಲ್ಲಿ ಹೇಳಿರುವ ಉಚ್ಚಾರವೇಗಭೇದಗಳಾದ ದ್ರುತ – ಮಧ್ಯ – ವಿಲಂಬಿತ ಎಂಬ ಮೂರು ಲಯಭೇದಗಳೆಂದು ಭ್ರಮಿಸಕೂಡದೆಂಬ ಶ್ರೀಯುತರ ಎಚ್ಚರಿಕೆಯ ಮಾತು ಅವರ ಛಂದೋಗತಿಪ್ರಜ್ಞೆ ಮತ್ತು ವಿವೇಕಗಳನ್ನು ಪ್ರತಿಬಿಂಬಿಸುತ್ತದೆ.

ಈ ಪರಿಚ್ಛೇದದಲ್ಲಿಯೇ ಶಾರ್ಙ್ಗದೇವಪ್ರೋಕ್ತ ದ್ರುತವಿಲಂಬಿತಾದಿ ಷಡ್ವಿಧ ಗತಿಗಳ ಸೂಕ್ಷ್ಮಗಳನ್ನು ವಿವರಿಸಿದ ತರುವಾಯ, ಪಿಂಗಳ ಛಂದಶ್ಶಾಸ್ತ್ರದ ಪಂಚಮಾಧ್ಯಾಯದ ಆರಂಭದ ಒಂಬತ್ತು ಸೂತ್ರಗಳಲ್ಲಿ 'ಗ್ಲಿತಿ ಸಮಾನೀ', 'ಲ್ಗಿತಿ ಪ್ರಮಾಣೀ', 'ವಿತಾನಮನ್ಯತ್' ಎಂಬೀ ಮೂರು ಸೂತ್ರಗಳು 'ವೃತ್ತ'ಗಳ ಗತಿಯ ಕುರಿತಾಗಿಯೇ ಹೇಳಲ್ಪಟ್ಟವುಗಳೆಂಬ ಅಂಶವನ್ನು ಗುರುತಿಸಿರುವುದು ಒಂದು ಮುಖ್ಯಶೋಧವೆಂದೇ ಹೇಳಬಹುದು. ಇವುಗಳ ಲಕ್ಷಣವನ್ನು ಶ್ರೀಯುತರು ಗೊತ್ತುಹಚ್ಚಿ ವಿವರಿಸಿದ್ದಾರೆ. ಸಮಾನೀ ಪ್ರಮಾಣೀಗಳು ಸತಾನಗಳೆಂದು ಹೇಳಿ, ಗಾಲ, ಗಾಲ..... (– ᴗ, – ᴗ) ಎಂದು ಏಕಪ್ರಕಾರವಾಗಿ (ಸತಾನವಾಗಿ) ಸಾಗುವ ಛಂದೋರೂಪವು ಸಮಾನೀ ಎಂದೂ ಲಗಂ, ಲಗಂ (ᴗ –, ᴗ –) ಎಂದು ಏಕಪ್ರಕಾರವಾಗಿ ಸಾಗುವುದು ಪ್ರಮಾಣೀ ಎಂದು ವಿಶದಪಡಿಸಿದ್ದಾರೆ. ಒಂದೆಡೆ ದ್ರುತವಾಗಿದ್ದು, ಇನ್ನೊಂದೆಡೆ ವಿಲಂಬಿತವಾಗಿ ಸಾಗುವುದಾದರೆ ಅದು 'ವಿತಾನ' ಛಂದೋರೂಪ. ತಾನ ಎಂದರೆ ಗತಿಯ ಏಕರೂಪತೆ. "ಪಿಂಗ-ಲೋಕ್ತವಾದ ಸಮಾನೀ ಪ್ರಮಾಣೀ ಎಂಬುವು 'ವೃತ್ತನಾಮ'ಗಳಲ್ಲ; ಅವು ವೃತ್ತಗಳ ಗತಿಭೇದಸೂಚಕ ಸಂಜ್ಞೆಗಳು" ಎಂಬುದು ಸೇಡಿಯಾಪು ಅವರ ಸುನಿಶ್ಚಿತ. ಪಿಂಗಲೋಕ್ತ ಈ ಗತಿಗಳ ಜೊತೆಗೆ, ಅವನೇ ಹೇಳುವ ಎಂಟು ಅಕ್ಷರಗಣಗಳೊಳಗೆ ಮಗಣದ ಅಥವಾ ನಗಣದ ಪುನರಾವರ್ತನದಿಂದ ಹುಟ್ಟುವ ಗತಿಗಳು ಏಕತಾನಿಗಳಾಗುವುವೆಂದೂ ಉಳಿದ ಆರು ಗಣಗಳ (ಎಂದರೆ, ಯಗಣ, ತಗಣ, ರಗಣ, ಜಗಣ, ಭಗಣ, ಸಗಣ) ಪುನರಾವರ್ತನದಿಂದ ಹುಟ್ಟುವ ಗತಿಗಳನ್ನು 'ದಂಡಕಗತಿ'ಗಳೆಂದು ಕರೆಯಬಹುದೆಂದೂ ಅವರು ಸೂಚಿಸುತ್ತಾರೆ. ಮೂರಕ್ಷರಗಳಿಗಿಂತ ಅಧಿಕಾಕ್ಷರದ ಛಂದಃಖಂಡದ ಪುನರಾ-ವರ್ತನವಿರುವಲ್ಲಿ ಅದನ್ನು 'ಅತಿದಂಡಕಗತಿ' ಎಂದು ಕರೆಯಬಹುದು ಎನ್ನುತ್ತಾರೆ. ಈ ಎಲ್ಲ ವಿವರವನ್ನೂ ಶಾಸ್ತ್ರೀಯವಾಗಿ ಕ್ರೋಡೀಕರಣ ಮಾಡಿ, ಛಂದೋಂ-ಬುಧಿ ಮುಂತಾದ ಗ್ರಂಥಗಳಿಂದ ಉದಾಹರಣೆಗಳನ್ನು ನೀಡಿ, ತಮ್ಮ ಸಿದ್ಧಾಂತ-ವನ್ನು ಯಶಸ್ವಿಯಾಗಿ ನಿದರ್ಶನಗೊಳಿಸಿದ್ದಾರೆ. ಒಂದು ಉದಾಹರಣೆ – 'ದಂಡಕಗತಿ'ಯಲ್ಲಿ 'ಯಗಣ' ಗತಿಗೆ ('ಛಂದೋಂಬುಧಿ'ಯಿಂದ ಆಯ್ದ 'ಭುಜಂಗಪ್ರಯಾತ' ವೃತ್ತ):

"ಕುಶಂವಾ । ರ್ಧಿಪರ್ಯಾ । ಯಮಕ್ಕುಂ । ವಿರಾಮಂ,"

ಆ ಬಳಿಕ, ಪಿಂಗಳನು ಹೇಳುವ 'ಉದ್ಗತಾ' ಮತ್ತು 'ತನುಮಧ್ಯಾ' ವೃತ್ತಗಳ ಗತಿಸೌಂದರ್ಯವನ್ನು ಹಲಾಯುಧನ ವ್ಯಾಖ್ಯಾನದ ಆಶಯವನ್ನು ಗ್ರಹಿಸಿ ಉನ್ಮೀಲನಮಾಡಿ ತೋರಿಸಿರುವುದರಲ್ಲೂ 'ತನುಮಧ್ಯಾ' ವೃತ್ತದ ಶೀರ್ಷಿಕೆಯ ಸಾರ್ಥಕತೆಯನ್ನು ('ತನುಮಧ್ಯಾ' = 'ನಡುಸಣ್ಣ' : – – । ∪ ∪ । – –) ಮನಗಾಣಿಸಿರುವುದರಲ್ಲೂ ಪ್ರವರ್ತಿಸಿರುವ ಸೇಡಿಯಾಪು ಅವರ ವಿದ್ವತ್ ಪ್ರತಿಭೆಯು ಅಸಾಧಾರಣವಾದದ್ದು; ಅದನ್ನು ಗುರುತಿಸಬಲ್ಲ ಛಂದೋವಿಜ್ಞಾನಿಗಳಿಗೆ ಮಾತ್ರ ವೇದ್ಯವಾಗಬಲ್ಲದ್ದು ಗತಿಸೌಂದರ್ಯಸ್ವರೂಪ.

ಆರನೆಯ ಪರಿಚ್ಛೇದದಲ್ಲಿ, ಸಮಗತಿಯ ಪದ್ಯಗಳಲ್ಲಿ "ಪದ್ಯದ ಪಾದಾವಯವಗಳ ಉಚ್ಚಾರಕಾಲಪರಿಮಾಣವನ್ನು ಅವಲಂಬಿಸಿದ ದ್ರುತತ್ವಾದಿಗಳು ಆ ಪದ್ಯಗಳ ಗತಿಯಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತವೆ" ಎಂದು ಹೇಳಿ, ಅವು ಮೇಲೆ ಪ್ರಸ್ತಾವಿಸಿರುವ ಶಾರ್ಙ್ಗದೇವೋಕ್ತ "ಗತಿಭೇದಗಳಿಗೆ ಬಹಿರ್ಭೂತವಾದವುಗಳೆಂದೂ, ಬೇರೆಯೆ ಕಾರಣದಿಂದ ಉನ್ಮೀಲಿತವಾಗುವಂಥವುಗಳೆಂದೂ" ಸಿದ್ಧಪಡಿಸಿದ್ದಾರೆ, ಶ್ರೀ ಸೇಡಿಯಾಪು ಅವರು. ಪಠನಕಾಲದಲ್ಲಿ ಎಲ್ಲರ ಅನುಭವಕ್ಕೂ ಬಂದೇ ಬರುವುದಾದರೂ ಈ ಗತಿಭೇದಗಳು ಈ ವರೆಗೆ ಯಾವ ಕನ್ನಡ ಛಂದೋಗ್ರಂಥಗಳಲ್ಲಿಯೂ ಉಕ್ತವಾಗದಿರುವುದರಿಂದ ಇವು ಶ್ರೀಯುತರ ಸ್ವೋಪಜ್ಞವಾದ ಹೊಸ ಶೋಧವೆಂದೇ ಹೇಳಬಹುದು. (೧) 'ವಾರ್ಧಕ ಷಟ್ಪದಿ', 'ಲಲಿತವೃತ್ತ' (ಸತಾನವಾದ ಸಮವೃತ್ತ); (೨) 'ಪರಿವರ್ಧಿನಿಷಟ್ಪದಿ', 'ವನಮಂಜರಿ' (ಸತಾನವಾದ ಸಮವೃತ್ತ), 'ಪಣವಕ' (ವಿತಾನವಾದ ಸಮವೃತ್ತ); (೩) 'ಭೋಗಷಟ್ಪದಿ', 'ಮಹೋತ್ಸವ' (ಸತಾನವಾದ ಸಮವೃತ್ತ) – ಈ ಛಂದೋಬಂಧಗಳ ಉದಾಹರಣೆಗಳನ್ನು ಕೊಟ್ಟು, ಈ ವರ್ಗಗಳಲ್ಲಿ ಕಂಡು ಬರುವ ಗತಿಭೇದಸ್ವರೂಪವನ್ನು ವಿಶ್ಲೇಷಿಸಿದ್ದಾರೆ. ಈ ಮೂರು ಪ್ರಕಾರಗಳ ಛಂದೋಬಂಧಗಳ ಛಂದಃಖಂಡಗಳ ಮಾತ್ರಾಸಂಖ್ಯೆಗಳು ಅನುಕ್ರಮವಾಗಿ ೫, ೪, ೩ ಎಂದಿವೆ:

**ವಾರ್ಧಕ** : ಶ್ರೀವಧುವಿ । ನಂಬಕ ಚ । ಕೋರಕಂ । ಪೊರೆಯೆ ಭ । ಕ್ತಾ.....

**ಪರಿವರ್ಧಿನಿ** : ಬಂದಿರೆ । ಪರಿಣಾ । ಮವೆ ಮನೆ । ಯೊಳಗ । ಕ್ಕಂದಿರ....

**ಭೋಗ** : ತಿರುಕ । ನೊರ್ವ । ನೂರ । ಮುಂದೆ ।

ಸಂಗೀತಶಾಸ್ತ್ರದಲ್ಲಿ ಉಕ್ತವಾದ ದ್ರುತವಿಲಂಬಿತಾದಿ 'ತ್ರಿವಿಧಲಯ'ಗಳು ಉಚ್ಚಾರದ ವೇಗಭೇದಗಳ ಪರಿಣಾಮರೂಪವಾಗಿರುವುದರಿಂದ ಸಂಗೀತಸಂಪ್ರದಾಯದಲ್ಲಿ ಇವು ತ್ರಿವಿಧವೇಗಗಳು, ಈ ವೇಗಭೇದಗಳು ವಾಸ್ತವಿಕ ಕಾಲ ಪ್ರಮಾಣಭೇದಗಳು ಎಂಬ ಅಂಶವನ್ನು ತಿಳಿಸಿ, ಛಂದೋಗತಿ 'ದ್ರುತಾದಿಗತಿ ಭೇದಗಳು' ವಾಸ್ತವಿಕ ಕಾಲಭೇದಗಳಾಗಿರದೆ ಕೇವಲ 'ಪ್ರಾತಿಭಾಸಿಕ' (illusory) ವೇಗಭೇದಗಳು ಎಂಬ ಹೊಸ ಸಂಗತಿಯನ್ನು ಶ್ರೀಯುತರು ಪ್ರಸ್ಥಾಪಿಸಿದ್ದಾರೆ.

ಮುಂದುವರಿದು ಶ್ರೀಯುತರು ಪುನಃ ಸ್ಪಷ್ಟಪಡಿಸುವ ಪ್ರಕಾರ, ಶಾರ್ಙ್ಗದೇವಪ್ರೋಕ್ತ ದ್ರುತತ್ವಾದಿ ಗತಿಭೇದಗಳು ಗುರುಲಘುವಿನ್ಯಾಸಪ್ರಕಾರಗಳ ಫಲವಾಗಿ ಭಾಸವಾಗು-ವಂಥವಾಗಿದ್ದು, ಈ ವರ್ಗದ ಗತಿಭೇದಗಳು **'ಅಕ್ಷರಗತಿಭೇದಗಳು'** ಎನ್ನಿಸಿ-ಕೊಳ್ಳುತ್ತವೆ; ಸೇಡಿಯಾಪು ಅವರು ಗುರುತಿಸಿರುವ ಎರಡನೆಯ ವರ್ಗದ ಗತಿಭೇದಗಳು ಗುರುಲಘುವಿನ್ಯಾಸಸ್ವರೂಪನಿರಪೇಕ್ಷವಾಗಿ, ಸಮಾನಮಾತ್ರಾಕಾಲದ ಛಂದಃಖಂಡಗಳ ಪುನಃಪುನರಾವರ್ತನವನ್ನು ಅವಲಂಬಿಸಿರುವುದರಿಂದ ಇವು **'ಆವರ್ತಗತಿಭೇದಗಳು'** ಎಂದು ನಿರ್ದಿಷ್ಟವಾಗಿವೆ. (ಅಡಿಟಿಪ್ಪಣಿ 51, ಪು. ೮೯-೯೦ರಲ್ಲಿ ಯಾವ ಬಂಧಗಳಲ್ಲಿ ಎಂಟು ಮಾತ್ರೆಗಳಿಗೆ ಮೀರದಿರುವ ಆವರ್ತಗಳು ಉನ್ಮೀಲಿತವಾಗುತ್ತವೋ ಅಂತಹ ಛಂದೋಬಂಧಗಳನ್ನು ಮಾತ್ರ ಲಯಾನ್ವಿತ-ವಾದ ಛಂದೋಬಂಧಗಳೆನ್ನಬೇಕೇ ವಿನಾ ಆ ಮಿತಿಯನ್ನು ಮೀರಿದವನ್ನಲ್ಲ ಎಂಬ ವಿಚಾರವನ್ನು ಸಕಾರಣವಾಗಿ ಚರ್ಚಿಸಿದ್ದಾರೆ.) "ಲಯಾನ್ವಿತವಾದ ಎಲ್ಲಾ ಛಂದೋಬಂಧಗಳಲ್ಲಿಯೂ ಯಾವುದೊಂದು ಆವರ್ತಗತಿರೂಪವು ಇದ್ದೇ ಇರುತ್ತದೆ....ಆವರ್ತಗಳಿಲ್ಲದಿದ್ದರೆ ಲಯಪ್ರತೀತಿಯೂ ಇಲ್ಲ." ಇದು ಸೇಡಿಯಾಪು ಅವರ ಸ್ಪಷ್ಟವಾದ ನಿಲವು.

ಲಯಾನ್ವಿತವಾದ ಛಂದೋಬಂಧಗಳಲ್ಲಿ (ಎಂದರೆ ಪದ್ಯಗಳಲ್ಲಿ) ಮುಖ್ಯವಾಗಿ ಆರು ವಿಧದ ಗತಿಭೇದಗಳು ಉನ್ಮೀಲಿಸುತ್ತವೆ, ಎಂದು ಶ್ರೀ ಸೇಡಿಯಾಪು ಅವರು ತಿಳಿಸಿ, ಅವುಗಳನ್ನು ಈ ರೀತಿ ವರ್ಗೀಕರಿಸಿದ್ದಾರೆ:

(೧) **ದ್ರುತಾವರ್ತಗತಿ**: ಮೂರು ಮಾತ್ರೆಯ ಛಂದಃಖಂಡ(=ಗಣ)ಗಳ ಪುನರಾವರ್ತನದ ಪರಿಣಾಮವಾಗಿ ಉನ್ಮೀಲಿಸುವಂಥದು. (ಉದಾ. ಪಂಚ ಚಾಮರ, ಮುಂತಾದ 'ಸತಾನ' ವೃತ್ತಗಳು; 'ಸುಮಾಲತೀ' ಮುಂತಾದ ವಿತಾನ ವೃತ್ತಗಳು; ಕರ್ಣಾಟಕವಿಷಯಜಾತಿಗೆ ಸೇರಿದ 'ಉತ್ಸಾಹ', ಪಂಚವಿಧ ಲಯೋ-ತ್ತರ, ಭೋಗಷಟ್ಪದಿ ಮುಂತಾದ ಮಾತ್ರಾಬಂಧಗಳು.) (೨) **ಮಧ್ಯಾವರ್ತಗತಿ**: ನಾಲ್ಕು ಮಾತ್ರೆಯ ಗಣಗಳ ಪದ್ಯಗಳು (ಉದಾ. ವನಮಂಜರಿ, ತೋಟಕ ಮುಂತಾದ ಸತಾನವೃತ್ತಗಳು; ಕ್ರೀಡಾವೃತ್ತ, ಮತ್ತಮಯೂರ ಇತ್ಯಾದಿ ವಿತಾನ-ವೃತ್ತಗಳು; ಕರ್ಣಾಟವಿಷಯಜಾತಿಯ 'ಅಕ್ಕರಿಕೆ', ಪರಿವರ್ಧಿನಿ, ಮಂದಾನಿಲ ರಗಳೆ ಮುಂತಾದ ಮಾತ್ರಾಬಂಧಗಳು.) (೩) **ವಿಲಂಬಿತಾವರ್ತಗತಿ**: ಐದು ಮಾತ್ರೆಯ ಗಣಗಳ ಪದ್ಯಗಳು (ಉದಾ. ಭುಜಂಗಪ್ರಯಾತ, ಶಂಭು ನಟನ, ಇತ್ಯಾದಿ ಸತಾನವೃತ್ತಗಳು, ವಿಚಿತ್ರಲಲಿತ, ಲಲಿತಪದ ಇತ್ಯಾದಿ ವಿತಾನ ವೃತ್ತಗಳು; ವಾರ್ಧಕಷಟ್ಪದಿ, ಕುಸುಮಷಟ್ಪದಿ, ಲಲಿತರಗಳೆ, ಮುಂತಾದ ಮಾತ್ರಾ ಬಂಧಗಳು.) (೪) **ದ್ರುತಮಧ್ಯಾವರ್ತಗತಿ**: ೩+೪ ಮಾತ್ರೆಯ ಗಣಗಳವು; (ಉದಾ: ಮಲ್ಲಿಕಾಮಾಲೆ, ಇತ್ಯಾದಿ ವೃತ್ತಗಳು; ಭಾಮಿನೀಷಟ್ಪದಿ, ತ್ರಿವುಡೆ, ಮುಂತಾದವು.) (೫) **ಸಂಕಲಿತದ್ರುತಾವರ್ತಗತಿ**: ೪+೨, ೨+೪ ಎಂದು ವಿಭಕ್ತವಾಗುವ ೬ ಮಾತ್ರೆಯ ಗಣಗಳ ಪದ್ಯಗಳು; (ಉದಾ: ಮೃಗನೇತ್ರ, ಶ್ಯಾಮಾಂಗಿ, ಇತ್ಯಾದಿ

ವೃತ್ತಗಳು; ಕರ್ಣಾಟವಿಷಯಜಾತಿಯ 'ಮದನವತಿ'; ಇವನ್ನು ಹೋಲುವ ಯಕ್ಷಗಾನದ, ಹಾಗೂ ಆಧುನಿಕ ಪದ್ಯಗಳು) (೬) **ಸಂಕಲಿತಮಧ್ಯಾವರ್ತಗತಿ:** ೪+೪ ಮಾತ್ರೆಗಳ ರಚನೆಯಲ್ಲಿ ಫಲಿಸುವ ೮ ಮಾತ್ರೆಗಳ ಛಂದಃಖಂಡವು ೩+೫ ಎಂದೋ ೫+೩ ಎಂದೋ ವಿಭಕ್ತವಾಗುವ ಛಂದಃಖಂಡಗಳು ಇರುವ ಪದ್ಯಗಳು [ಉದಾ., ರಥೋದ್ಧತಾ, ಚಂದ್ರವರ್ತ್ಮ, ತರಂಗ ಇತ್ಯಾದಿ ವೃತ್ತಗಳು ಮತ್ತು ಪಂಪಭಾರತದ ರಗಳೆ (ಪಂಪಭಾರತ, ೩-೨೨)].

ಮೇಲೆ ತಿಳಿಸಿದ ಆರು ಬಗೆಯ ಆವರ್ತಗತಿಗಳಲ್ಲಿ ಮೊದಲನೆಯ ನಾಲ್ಕು "ಕೇವಲ ಮಾತ್ರಾಸಂಖ್ಯಾಪರಿಮಿತಿಯುಳ್ಳ ಛಂದಃಖಂಡಗಳ ಪುನಃಪುನ-ರಾವರ್ತನದಿಂದಲೇ ಉನ್ಮೀಲಿಸಬಲ್ಲವುಗಳಾದಕಾರಣ, ಇವನ್ನು 'ಶುದ್ಧಾವರ್ತ-ಗತಿ'ಗಳೆಂದು ಹೆಸರಿಸಬಹುದಾಗಿದೆ"; ಕಡೆಯ "ಎರಡು ಆವರ್ತಗತಿಗಳು ಅಕ್ಷರಗತಿವಿಶೇಷದ ಅಥವಾ ಯತಿಯ ಸಹಯೋಗದಿಂದ ಉತ್ಪನ್ನವಾಗುವ ಕಾರಣ, ಅವನ್ನು 'ಮಿಶ್ರಾವರ್ತಗತಿ'ಗಳೆಂದು ಕರೆಯಬಹುದಾಗಿದೆ."

ಮಾನ್ಯಲೇಖಕರು ಈ ಮೇಲ್ಕಂಡ ಗತಿಭೇದಗಳಿಗೆ ಯಥೋಚಿತ ಉದಾಹರಣೆಗಳನ್ನು ಕೊಟ್ಟು ಗತಿಸ್ವರೂಪಗಳನ್ನು ಮನದಟ್ಟಾಗುವಂತೆ ವಿವರಿಸಿ-ದ್ದಾರೆ. ಕಂದಪದ್ಯದಲ್ಲಿ ಯತಿನಿಯಮ ಹಾಗೂ ಜಗಣನಿಷಿದ್ಧಸ್ಥಾನಗಳು ಇರು-ವುದರಿಂದ "ಇದು ವಿಶಿಷ್ಟವಾದೊಂದು 'ಸಂಶ್ಲಿಷ್ಟಗತಿ'ಯ (= ಆವರ್ತಗತಿ ಹಾಗೂ ಅಕ್ಷರಗತಿಗಳ ವಿಶ್ಲೇಷಣದಿಂದ ಉನ್ಮೀಲಿಸುವ ಗತಿ) ಛಂದೋಬಂಧ-ವಾಗಿರುತ್ತದೆ...ವಿಧವಿಧದ ಗತಿವೈಚಿತ್ರ್ಯಗಳನ್ನು ಪ್ರಕಟಿಸಬಲ್ಲ ಅದ್ಭುತವಾದೊಂದು ಪದ್ಯಭೇದವಾಗಿದೆ"ಎಂದು ತೀರ್ಮಾನಿಸಿ, 'ಕವಿರಾಜಮಾರ್ಗ'ದಿಂದ ಆಯ್ದ ೫ ಪದ್ಯಗಳ ಮೂಲಕ ಆ ವೈವಿಧ್ಯಸ್ವರೂಪವನ್ನು ಪ್ರಸ್ತಾರಮುಖೇನ ವಿಶದಪಡಿಸಿ-ದ್ದಾರೆ. ಕಂದಪದ್ಯಸಂಬಂಧವಾಗಿ ಅಡಿಟಿಪ್ಪಣಿಯಲ್ಲಿ (63) ಹೆಚ್ಚಿನ ವಿವೇಚನೆ ನಡೆಸಿದ್ದಾರೆ. ಇಲ್ಲಿ, 'ನಾನಾವಿಧದ ಗತಿವೈಚಿತ್ರ್ಯಗಳನ್ನು ಲೀಲಾಜಾಲವಾಗಿ ಹೊಮ್ಮಿಸಬಲ್ಲ ಶಕ್ತಿಯಲ್ಲಿ ಕಂದಪದ್ಯಕ್ಕೆ ಸರಿದೊರೆಯದ ಬೇರೊಂದು ಛಂದೋ-ಬಂಧವು ಕನ್ನಡದಲ್ಲಿ ಈ ವರೆಗೆ ಕಾಣಿಸಿಕೊಂಡಿಲ್ಲ' ಎಂದಿರುವ ಅವರ ಮಾತು ಅವರ ಅಧ್ಯಯನದ ಸಮಗ್ರವ್ಯಾಪ್ತಿಯ ದ್ಯೋತಕವಾಗಿದೆ. ಕಂದಪದ್ಯದ ಛಂದೋ ಬಂಧದ ಈ ಶಕ್ತಿಯ ರಹಸ್ಯವಾದರೂ ಏನು? ಇದನ್ನವರು ಸರಿಯಾಗಿಯೇ ಗುರುತಿಸಿದ್ದಾರೆ; "ಕಂದಪದ್ಯದ ಗತಿಚಮತ್ಕೃತಿಗಳೆಲ್ಲವೂ ಅದರಲ್ಲಿ ಅಡಕವಾಗು-ವಂತಹ ಅಕ್ಷರಗತಿರೂಪಗಳ ಹಾಗೂ ಯತಿಸ್ಥಾನಭೇದಗಳ ಫಲವಾಗಿ ಉದ್ಭೂತವಾಗುವವೇ ಹೊರತು, ಅದರ ಆವರ್ತಗತಿಯಲ್ಲಿ ಅಂತಹ ಚಮತ್ಕೃ-ತಿಯೇನೂ ಇಲ್ಲ; ಅದು ಕೇವಲ ಸರಳವಾದ ಮಧ್ಯಾವರ್ತಗತಿ."

ಏಳನೆಯ ಪರಿಚ್ಛೇದದಲ್ಲಿ 'ಪದ್ಯಗತಿ'ಯನ್ನು ಕುರಿತು ವಿಚಾರಮಾಡ-ಲಾಗಿದೆ. ಪದ್ಯದ ಗತಿಯಲ್ಲಿ 'ಪದಗತಿ'ಯ ನಿರ್ಣಾಯಕ ಪಾತ್ರವಿರುವುದನ್ನು ಗಮನಿಸಿ, 'ಪದಗತಿ'ಯ ಸ್ವರೂಪವೇನೆಂಬುದನ್ನು ವಿವರಿಸಲಾಗಿದೆ. ಪದದ

'ಅಕ್ಷರೋಚ್ಚಾರಗಳ ಸ್ಫುಟತ್ವತಾರತಮ್ಯದ ಫಲವಾಗಿ ಶ್ರವಣಗೋಚರವಾಗುವ ಒಂದು ಬಗೆಯ ಧ್ವನಿಸರಣಿ'ಯೆ 'ಪದಗತಿ'. "ಪದ್ಯದ ಛಂದೋಗತಿಯನ್ನು ವಿರೂಪಗೊಳಿಸದೆ ಪಠನಮಾಡುವಾಗ ಅರ್ಥವು ವ್ಯಕ್ತವಾಗಬೇಕಾದರೆ ಪ್ರತಿ-ಯೊಂದು ಪದದ ಆದ್ಯಕ್ಷರವನ್ನು ಆ ಪದದ ಇತರ ಅಕ್ಷರಗಳಿಗಿಂತ ಕಿಂಚಿತ್ ಸ್ಫುಟತರವಾಗಿ ಉಚ್ಚರಿಸಬೇಕಾಗುತ್ತದೆ." (ಈ ಉಚ್ಚಾರಸ್ಫುಟತ್ವ ಆಂಗ್ಲಛಂದಸ್ಸಿನ strees ಅಥವಾ accent ಅಲ್ಲ ಎಂಬುದನ್ನು ಅಡಿಟಿಪ್ಪಣಿ 65ರಲ್ಲಿ ವಿಶದ ಪಡಿಸಿದ್ದಾರೆ. ಈ ವಿಚಾರದಲ್ಲಿ ತೀ. ನಂ. ಶ್ರೀ. ಅವರ ಅಭಿಪ್ರಾಯವನ್ನು ಈ ಹಿಂದೆಯೇ ತಿಳಿಸಿದ್ದಾಗಿದೆ.) 'ಪದ್ಯಗತಿ ಎಂಬುದರಲ್ಲಿ (ಮುಖ್ಯವಾಗಿ ಲಯಾ-ನ್ವಿತವಾದುದರಲ್ಲಿ, ಕ್ವಚಿತ್ ಲಯರಹಿತವಾದುದರಲ್ಲಿಯೂ) 'ಛಂದಃಪದ'ಗಳ ಗತಿ (ಎಂದರೆ, ಛಂದಸ್ಸಿನ ಹಜ್ಜೆ = metrical footಗಳ ಗತಿ) ಮತ್ತು 'ಭಾಷಾಪದ' (word)ಗಳ ಗತಿ (=ಭಾಷೆಯ ಹಜ್ಜೆಗಳ ಗತಿ) ಎಂಬೀ ದ್ವಿವಿಧಗತಿಗಳು ಸಮಾವಿಷ್ಟವಾಗಿರುತ್ತವೆ. ಈ ಎರಡು ಗತಿಗಳೊಳಗೆ ಒಂದು ಬಗೆಯ 'ಮೇಳ' ಎಂದರೆ 'ಮೈತ್ರಿ' ಇಲ್ಲದಿದ್ದರೆ 'ಪದ್ಯಗತಿ' ಸುಗಮವಾಗಿ ಸಾಗುವುದಿಲ್ಲ." ['ಪದ' ಎಂಬುದರ ನಿಜವಾದ ಅರ್ಥವು 'ಭಾಷಾಪದ' (= ಭಾಷೆಯ ಹಜ್ಜೆ) ಎಂದೇ ಆಗಿರುತ್ತದೆ. 'ಪದಗತಿ' (=ಭಾಷಾಪದಗತಿ) ಎಂಬುದನ್ನು 'ಭಾಷಾಗತಿ' ಎಂದೂ ಹೆಸರಿಸಬಹುದಾಗಿದೆ – ಎಂದು 66ನೆಯ ಅಡಿಟಿಪ್ಪಣಿಯಲ್ಲಿ ವಿಶದಪಡಿಸಿದ್ದಾರೆ ಲೇಖಕರು.] ವಿಲಂಬಿತಾವರ್ತಗತಿಯ 'ವಾರ್ಧಕಷಟ್ಪದಿ'ಯ ಉದಾಹರಣ ಮೂಲಕ 'ಛಂದಃಪದಗತಿ'ಗೂ 'ಭಾಷಾಪದಗತಿ'ಗೂ ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸಿದ್ದಾರೆ:

ಛಂದಃಪದಗತಿ ಸ್ವರೂಪ:

> ವಿದ್ವತ್ಸ । ಭಾವಲಯ । ಮರಿಯೆ ವಿರ । ಚಿಸಿದಂ ಭ-।
> ರದ್ವಾಜ । ಗೋತ್ರಭವ । ನಣ್ಣಮಾಂ । ಕನ ಸುತಂ ।

ಭಾಷಾಪದಗತಿ ಸ್ವರೂಪ:

> ವಿದ್ವತ್ । ಸಭಾ । ವಲಯ । ಮರಿಯೆ । ವಿರಚಿಸಿದಂ । ಭ-
> ರದ್ವಾಜ । ಗೋತ್ರಭವ । ನಣ್ಣಮಾಂಕನ । ಸುತಂ ॥

ಇಲ್ಲಿ ಎರಡು ಗತಿಗಳಿಗೂ 'ಮೈತ್ರಿ' ಗಮಿಸಿರುವ ಕಾರಣ 'ಪದ್ಯಗತಿ' ಸುಗಮವಾಗಿದೆ. (ಛಂದಃಖಂಡಗತಿ ಸಮಗತಿಯಾದರೂ 'ಭಾಷಾಪದಗತಿ' ವಿಷಮಗತಿಯದಾಗಿದೆ.) "ಈ ಮೈತ್ರಿ ಪರ್ಯಾಪ್ತವೋ ಅಲ್ಲವೋ ಎಂಬುದಕ್ಕೆ ಪಠನಸಂಪ್ರದಾಯಪ್ರಭಾವಿತವೂ ಪರಿಷ್ಕೃತವೂ ಆದ ಗತಿಪ್ರಜ್ಞೆಯೇ ಪರಮ ಪ್ರಮಾಣ" ಎಂಬ 68ರ ಅಡಿಟಿಪ್ಪಣಿಯಲ್ಲಿನ ಶ್ರೀಯುತರ ಮಾತು ಗಮನಾರ್ಹ. (ಛಂದಸ್ಸಿನ ಅನೇಕ ವಿಚಾರಗಳು 'ಛಂದಃಪ್ರಜ್ಞೆ'ಗೆ ಒಳಪಟ್ಟಿವೆ. ಈ ಗತಿಪ್ರಜ್ಞೆ ಛಂದಃಪ್ರಜ್ಞೆಯ ಒಂದು ಎಳೆ.)

ಇದೇ 'ಪದಗತಿ' ವಿವೇಚನೆಯ ಪ್ರಕರಣದಲ್ಲಿ 'ಯತಿ'ಯ ಮಾತೂ ಪ್ರಾಸ್ತಾವಿಕವಾಗಿ ಬಂದಿದೆ. "ಪದ್ಯವನ್ನು ಅದರ ಛಂದೋಗತಿಗನುಗುಣವಾಗಿ ಪಠಿಸುವಾಗ ತದ್ಗತಪದಸ್ವರೂಪವು ಹೊಳೆಯದಂತಿದ್ದರೆ, ಆ ರಚನಾದೋಷವು 'ಯತಿಭಂಗ'ವೆನಿಸಿಕೊಳ್ಳುತ್ತದೆ. 'ಯತಿಭಂಗ'ವೆಂದರೆ ವಸ್ತುತಃ 'ಪದಗತಿಭಂಗ'ವೇ ಆಗಿದೆ. 'ಪದಗತಿ'ಗೆ ಭಂಗವುಂಟಾದರೆ 'ಪದ್ಯಗತಿ' ಭಗ್ನವಾಗಿಹೋಗುತ್ತದೆ." (ಈ ಹೇಳಿಕೆ ಕಂದಪದ್ಯವೊಂದರ 'ಯತಿಭಂಗ'ಕ್ಕೆ ಸಂಬಂಧಪಟ್ಟಿದೆ. 'ಆರಾರೇರರ್...' ಎಂಬ ಪ್ರಸಿದ್ಧವಾದ ಷಡಕ್ಷರಿಯ ಕಂದಪದ್ಯವನ್ನು ಕಿಟ್ಟೆಲ್ ಮಹಾಶಯ ತನ್ನ ಇಷ್ಟಾನುಸಾರ – ಯತಿಸ್ಥಾನವುಳ್ಳ 'ಮಾ । ರಾರಿಯ ಕೃಪೆಯಿಲ್ಲ*ದಂಗೆ' ಎಂದಿ-ರುವುದನ್ನು 'ತೇ । ಜೋರೂಪಕೃಪೆಯಿರ*ದಂಗೆ' – ಎಂದು ಮಾರ್ಪಡಿಸಿದ್ದಾರೆ. ಪದಗತಿಗೆ ಹೇಗೆ ಭಂಗವುಂಟಾಗಿದೆ ಎಂಬ ಅಂಶವನ್ನು ಶ್ರೀಯುತರು ತಮ್ಮ ಗತಿಪ್ರಜ್ಞೆಯಿಂದ ವಿಶದಪಡಿಸಿದ್ದಾರೆ.) (ಒಂದು ವಿಷಯವಿವೇಚನೆಯಲ್ಲಿ ತಮ್ಮ ಅಭಿಪ್ರಾಯದ ಸ್ಪಷ್ಟೀಕರಣಕ್ಕಾಗಿ ಎಷ್ಟೆಲ್ಲ ಕಡೆಯಿಂದ ಸಾಮಗ್ರಿಯನ್ನು ಸಂಗ್ರಹಿಸಬಲ್ಲುದು ಶ್ರೀ ಸೇಡಿಯಾಪು ಅವರ ಅಧ್ಯಯನವ್ಯಾಪ್ತಿ ಎಂಬುದು ಆಶ್ಚರ್ಯಾವಹವಾಗಿದೆ.)

ಎಂಟನೆಯ ಪರಿಚ್ಛೇದವು ವಿಷಮಗತಿಯ ಛಂದೋಬಂಧಗಳಿಗೆ ಮೀಸ-ಲಾಗಿದೆ. ಸಮಗತಿಯ ಛಂದೋಬಂಧಗಳು ಆವರ್ತಗಳುಳ್ಳವಾದ್ದರಿಂದ ವಿಷಮ ಗತಿಯ ಛಂದೋಬಂಧಗಳು ನಿರಾವರ್ತಗಳಾಗಿರುತ್ತವೆ. ಸಮಗತಿಯ ಛಂದೋ ಬಂಧದ ಗತಿಯನ್ನು ಆವರ್ತಗಳು ನಿಯಂತ್ರಿಸುತ್ತವೆ; "ಛಂದೋಗತಿಯಲ್ಲಿ ನಿಶ್ಚಿತವಾಗಿರುವ 'ಯತಿ'ಗಳೇ 'ನಿರಾವರ್ತಗತಿ'(= ವಿಷಮಗತಿ)ಯ ನಿಯಂತೃ-ಗಳಾಗಿವೆ." (69ನೆಯ ಅಡಿ ಟಿಪ್ಪಣಿಯಲ್ಲಿ 'ಯತಿ' ಎಂಬ ಸಂಜ್ಞೆಯ ಅರ್ಥ ವ್ಯಾಪ್ತಿಯ ಸಂಕ್ಷೇಪವಾದರೂ ನಿಷ್ಕೃಷ್ಟವಾದ ವ್ಯಾಖ್ಯೆ ಇದೆ. ಅಲ್ಲದೆ, 'ಈ ನಿಬಂಧದಲ್ಲಿ ಅವಶ್ಯವೆಂದು ಕಂಡ ಎಡೆಗಳಲ್ಲೆಲ್ಲ 'ಯತಿ' ಎಂದಿಷ್ಟೇ ಹೇಳದೆ – ಛಂದೋಯತಿ, ಪದಯತಿ ಇತ್ಯಾದಿಯಾಗಿ ಸ್ಪಷ್ಟೀಕರಿಸಿ ಹೇಳಲಾಗಿದೆ.' ಎಂಬ ಸೂಚನೆಯೂ ಇದೆ. ಅರ್ಥಯತಿ ಎಂಬ ಶಬ್ದವನ್ನು ಎಲ್ಲಿಯೂ ಬಳಸಿದಂತೆ ಕಂಡುಬರುವುದಿಲ್ಲ.)

ನಿರಾವರ್ತ ಛಂದೋಬಂಧಗಳಲ್ಲಿ 'ವೃತ್ತ'ಗಳು ಸೇರುತ್ತವೆಯಷ್ಟೆ. ವೃತ್ತ-ಗಳಲ್ಲಿಯೂ 'ಗತಿ'ಯ ಹಜ್ಜೆಗಳಿರುವುವಾದರೂ ಅವು ಮಾತ್ರಾಬಂಧಗಳ 'ಗತಿ'ಯ ಹಜ್ಜೆಯ ಗತಿಗಳು ಮಾತ್ರಾಗಣಗಳಿಗೆ ಅನುಗುಣವಾಗಿ ಇರುವಂತೆ ವೃತ್ತಗಳ ಗತಿಯ ಹಜ್ಜೆಗಳು ಅಕ್ಷರಗಣಗಳಿಗನುಗುಣವಾಗಿ ಇರುತ್ತವೆ ಎಂದು ಭ್ರಮಿಸ-ಬಾರದು ಎಂಬ ಎಚ್ಚರಿಕೆಯ ಮಾತನ್ನು ಹೇಳುವ ಸಂದರ್ಭದಲ್ಲಿ, (ಪಿಂಗಳನೂ ಅವನ ಅನುಯಾಯಿಗಳೂ ನಿರೂಪಿಸಿರುವ) 'ಮಯರಸತಜಭನ' ಎಂಬ ಅಕ್ಷರಗಣವಿಧಾನದಲ್ಲಿ ಲಕ್ಷಣಕಾರರು ಈ ಗಣಗಳನ್ನು ಮೂರಕ್ಷರಗಣಗಳನ್ನಾಗಿ ಏಕೆ ಕಲ್ಪಿಸಿದರು? ಎರಡೋ ನಾಲ್ಕೋ ಅಕ್ಷರದವುಗಳಾಗಿ ಏಕೆ ಕಲ್ಪಿಸಲಿಲ್ಲ?

ಎಂಬ ಸಮಸ್ಯೆಯನ್ನು ಬಹಳ ಶಾಸ್ತ್ರೀಯವಾಗಿ ವಿವೇಚನೆ ಮಾಡಿರುವುದು ಮೆಚ್ಚತಕ್ಕದ್ದೆ ಆಗಿದೆ. ಎಚ್. ಡಿ. ವೇಲಣಕರರ ವಿವರಣೆಯೂ ಇದೇ ಆಗಿದೆ.[7] ಎಚ್. ಡಿ. ವೇಲಣಕರರು 'ತ್ರಿ' ಸಂಖ್ಯೆಗೆ ಶಾಸ್ತ್ರೀಯವಾದ ವಿವರಣೆಯನ್ನು ಕೊಟ್ಟಿದ್ದರೂ ಭಾರತೀಯ ತತ್ತ್ವಜ್ಞಾನಾದಿ ವಾಙ್ಮಯದಲ್ಲಿ ಮೂರರ ಸಂಖ್ಯೆಗೆ ಇರುವ ಸ್ಥಾನಮಹತ್ತ್ವವೆ ಪಿಂಗಳನ ತ್ರಿಕವ್ಯವಸ್ಥೆಗೆ ಹೇತುವಾಗಿದ್ದಿತು ಎಂದಿರುವುದು ಮಾತ್ರ ಶ್ರೀ ಸೇಡಿಯಾಪು ಅವರ 'ವ್ಯಾಜಸ್ತುತಿ' ರೂಪದ ಟೀಕೆಗೆ ಒಳಗಾಗಿದೆ. "ವೇಲಣಕರರ ಪ್ರತಿಪಾದನೆಯಲ್ಲಿ ಛಂದಸ್ತತ್ತ್ವ ಯಾವುದೂ ಪ್ರಕಾಶಿತವಾಗಿಲ್ಲ" ಎಂದಿರುವುದಷ್ಟೆ ಸಾಕಾಗಿತ್ತು. ಆದರೂ, 'ಛಂದಸ್ತತ್ತ್ವ ಯಾವುದೂ ಪ್ರಕಾಶಿತವಾಗಿಲ್ಲ' ಎಂಬ ಶ್ರೀಯುತರ ಮಾತನ್ನು ಒಪ್ಪುವುದು ಕಷ್ಟವಾಗುತ್ತದೆ. ವೇಲಣಕರರು 'a matter of principle' ಎಂದು ಸೂಚ್ಯವಾಗಿ ಹೇಳಿರುವುದರಲ್ಲಿ, principle of prosody (ಛಂದಸ್‌ತತ್ತ್ವ) ಅಲ್ಲದೆ ಬೇರೆ ಯಾವ ತತ್ತ್ವ ಸೂಚಿತವಾಗುತ್ತದೆ?[8]

---

7. "The number 3 was generally regarded as the convenient basic unit for the measuring of multiplicity in all spheres. As a matter of fact, multiplicity was considered as a starting point with the number 3 and not with number 2. The smallest number which constitutes 'Bahulatva' is 3 even according to Panini. So, both as a matter of principle and for the sake of convenience, a new unit of three letters called 'Trika' having eight different forms of music or rhythm, was adopted for metrical scanning and also as a basis for defining the many different varieties of sound variation produced by the alteration of short and long letters in different ways that constituted shorter or longer metrical lines in Sanskrit metres." (H.D. Velenakar ; Jayadaman, P. 17).

8. ಸೂಕ್ಷ್ಮವಾದ ಕಲಾಪ್ರಜ್ಞೆ, ಛಂದಃಪ್ರಜ್ಞೆ ಹೊಂದಿದ್ದ ವಿ. ಸೀ. ಅವರೂ ಮೂರಕ್ಷರಗಣದ (ತ್ರಿಕ ಗಣದ) ವಿಚಾರವಾಗಿ ವಿವೇಚನೆ ಮಾಡಿದ್ದಾರೆ. ವೇಲಣಕರರ ಮಾತನ್ನೇ ಅವರೂ ಹೇಳಿದ್ದಾರೆ. "ಉಚ್ಚಾರಣೆಯ ಸ್ತಿಮಿತತೆಗೆ ಸ್ಥೈರ್ಯಕ್ಕೆ, ೩ ಅಕ್ಷರ ಒಂದು ಖಚಿತವಾದ ಉಚ್ಚಾರಖಂಡ. ಸಂಖ್ಯೆ ಮೂರು ವಿಶಿಷ್ಟವಾದದ್ದು. ("There is the first number at which a sequence becomes perceptible and a sequence of more than three masses would, in a painting, tend to be too obvious."- H. Read)- ತ್ರಿಮೂರ್ತಿ, ತ್ರಿಲೋಕ, ತ್ರಿಕರಣ, ತ್ರಿಕಲ, ತ್ರಿಕಾಲ, ತ್ರಿವರ್ಗ, ತ್ರಿಶೂಲ, ತ್ರಿಭಂಗಿ, ತ್ರಿಗುಣ, ತ್ರಿಸ್ಥಾನ, ಇತ್ಯಾದಿ. ನಾದ ಬಿಂದು ಕಲಾ, ಪಶು ಪತಿ ಪಾಶ, ಹೀಗೆ. ಪಾಣಿನಿ ಬಹುಳತ್ವವನ್ನು ಮೂರರಿಂದ ಆರಂಭಿಸುತ್ತಾನೆ ಎನ್ನುತ್ತಾರೆ. -ಮೂರಕ್ಕೆ ಯೋಗದ ಮತ್ತು ಸಂಕೇತದ ಒಂದು ಪ್ರಾಮುಖ್ಯವು ದೊರಕಿದೆ". (ವಿ. ಸೀತಾರಾಮಯ್ಯನವರು ಸಂಪಾದಿಸಿದ 'ಕವಿಕಾವ್ಯಪರಂಪರೆ': 'ಒಂದನೆಯ ನಾಗವರ್ಮ'ದಲ್ಲಿ 'ಸಮೀಕ್ಷೆ'; ೧೯೭೩; ಪು. ೧೪೫-೧೪೬). ಶ್ರೀ ಸೇಡಿಯಾಪು ಅವರು ವಿ.ಸೀ.ಯವರ ಈ ಬರಹವನ್ನು ಗಮನಿಸಿಲ್ಲ.

ವಿಷಮಗತಿಯ ವೃತ್ತಗಳ ವಿಚಾರವನ್ನು ಮುಂದುವರಿಸುತ್ತ ಶ್ರೀ ಸೇಡಿಯಾಪು ಅವರು ಆ ಬಗೆಗೆ ನಡೆಸಿರುವ ವಿಚಾರವಿಮರ್ಶೆಯನ್ನು ಹೀಗೆ ಸಂಕ್ಷೇಪಿಸಿ ಹೇಳಬಹುದು: (೧) ಗುರುಲಘುಸ್ಥಿರವಾದ ಅಕ್ಷರಸಂಖ್ಯಾನಿಯಮ-ವುಳ್ಳ 'ವೃತ್ತ'ಗಳದ್ದು ಒಂದು ವರ್ಗ. (೨) ಅಕ್ಷರಸಂಖ್ಯಾನಿಯಮವುಳ್ಳವಾದರೂ, ಗುರು ಲಘುಸ್ಥಿರತೆ (ಪರಿಪೂರ್ಣವಾಗಿ) ಇಲ್ಲದ ಅಕ್ಷರಜಾತಿಗಳದು ಇನ್ನೊಂದು ವರ್ಗ. (ಇಲ್ಲಿ ಪದ್ಯಗಳ ಎರಡು ಪ್ರಕಾರಗಳಾದ ವೃತ್ತ ಮತ್ತು ಜಾತಿಗಳ ಸ್ವರೂಪವನ್ನು ಸವಿವರವಾಗಿ ತಿಳಿಸಿರುವ 20ನೆಯ ಅಡಿಟಿಪ್ಪಣಿಯ ಕಡೆಗೆ ನಮ್ಮ ಗಮನ ಸೆಳೆದಿದ್ದಾರೆ. ಈ ಟಿಪ್ಪಣಿ ಬಹಳ ಸಮರ್ಥವೂ ಉಪಯುಕ್ತವೂ ಆದ ವಿಷಯವಿವೇಚನೆಯನ್ನು ಒಳಗೊಂಡಿದೆ.) ಎರಡನೆಯದಾದ 'ಅಕ್ಷರಜಾತಿ'ಗಳಲ್ಲಿ ಪಾದಾಂತವು ಮಾತ್ರ ಯತಿಸ್ಥಾನ. ಒಂದನೆಯ ವರ್ಗದ ವೃತ್ತಗಳಲ್ಲಿ ಪಾದ ಮಧ್ಯದಲ್ಲಿ ಯತಿಸ್ಥಾನಗಳಿರುತ್ತವೆ. "ವಿಷಮಗತಿ ಪದ್ಯಗಳ ಛಂದೋಗತಿಯ ನಿಜರೂಪದ ಅರಿವು ನಮಗೆ ಆಗಬೇಕಾದರೆ, ಪದ್ಯದ ಪದಗತಿಯ 'ಜಾಲ'ದಿಂದ ಅದರ ಛಂದೋಗತಿಯನ್ನು ಬಿಡಿಸಿಕೊಳ್ಳಬೇಕು. ಹಾಗೆ ಬಿಡಿಸಿಕೊಳ್ಳುವ ಉಪಾಯವೇನೆಂದರೆ – ಅರ್ಥಹೀನವಾದ ಅಕ್ಷರೋಚ್ಚಾರಗಳ ಮೂಲಕ, ಉದ್ದಿಷ್ಟವಾದ ಪದ್ಯದ ಛಂದೋರೂಪವನ್ನು ಉನ್ಮೀಲನಗೊಳಿಸುವುದಾಗಿದೆ. ಉದಾಹರಣೆಯಾಗಿ ಶಾಲಿನೀವೃತ್ತ("ಮತತಗಂಗಂ")ವನ್ನು ತೆಗೆದುಕೊಂಡು, ಗತಿಪ್ರಜ್ಞೆಯ ನೆರವಿನಿಂದ ಯತಿಸ್ಥಾನವನ್ನು ಗುರುತಿಸಿ, ವೃತ್ತದ ಛಂದೋಗತಿ ರೂಪವನ್ನು ನಿಶ್ಚಯಿಸಿದ್ದಾರೆ. ಅದು ಹೀಗೆ:

ಮ ತ ತ ಗಂ ಗಂ

– – – | – – ∪ | – – ∪ | – –
ನಾನಾನಾ | ನಾನಾನ | ನಾನಾನ | ನಾನಾ

ನಾನಾನಾನಾ : ನಾನನಾನಾನನಾನಾ

ವಿಷಮಗತಿಯ ಹಲಕೆಲವು ವೃತ್ತಗಳಲ್ಲಿ ಯತಿಸ್ಥಾನನಿರ್ಣಯದ ಮೂಲಕ ಪದ್ಯದ ಛಂದೋಗತಿಯನ್ನು ಉನ್ಮೀಲನಗೊಳಿಸುವಲ್ಲಿ ಇರುವ ತೊಡಕುಗಳನ್ನೂ ಅವುಗಳ ಸ್ವರೂಪವನ್ನೂ ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿ, ಈ ಪ್ರಯತ್ನದ ಫಲಿತಾಂಶವನ್ನು ಹೀಗೆ ನಿರೂಪಿಸಿದ್ದಾರೆ: "ಛಂದಃಪದಗಳ ಪರಿ-ಮಾಣವನ್ನು ನಿರ್ಧರಿಸುವವುಗಳು (ಪಾದಮಧ್ಯ ಹಾಗೂ ಪಾದಾಂತ) ಯತಿ-ಸ್ಥಾನಗಳು. ಆ ಸ್ಥಾನಗಳಲ್ಲಿ ಪದಯತಿಯೂ ಇರುವುದಾದರೆ ಛಂದೋಯತಿ ಪ್ರಸ್ಫುಟವಾಗುವುದು ಮಾತ್ರವಲ್ಲ, ಪದ್ಯಪಠನವು ಸುಕರವೂ ಆಗುತ್ತದೆ; ಅಲ್ಲದೆ, ಛಂದೋಗತಿಗೂ ಪದಗತಿಗೂ ಪರಿಪೂರ್ಣವಾದ ಮೈತ್ರಿ ಅಲ್ಲಿ ಏರ್ಪಟ್ಟು, ಪದ್ಯ ಗತಿ ಸುಕುಮಾರಸುಂದರವಾಗುತ್ತದೆ." ಈ ಕಾರಣದಿಂದಲೇ, ಈ ಗತಿಸುಕರತೆ ಇರುವುದರಿಂದಲೇ, "ಅನೇಕರು, ಮುಖ್ಯವಾಗಿ ಕನ್ನಡ ಕವಿಗಳು – 'ಯತಿ' ಎಂಬುದರ ಗೊಡವೆಯೇ ಇಲ್ಲದೆ (ವಿಷಮಗತಿ) ವೃತ್ತಗಳನ್ನು ರಚಿಸುವ

ಸಾಹಸವನ್ನು ಮಾಡಿರುವುದಾಗಿದೆ'' ಎಂಬ ತೀರ್ಮಾನದ ಮಾತು ಬಲುಮಟ್ಟಿಗೆ ಒಪ್ಪತಕ್ಕದ್ದೆ ಆಗಿದೆ. ಕಂದಪದ್ಯದಲ್ಲಿ ಪಾದಮಧ್ಯಯತಿಯನ್ನು ಎಚ್ಚರದಿಂದ ಕಾಪಾಡಿಕೊಂಡು ಬಂದ ಕನ್ನಡ ಕವಿಗಳು, ''ಯತಿಃ ಸರ್ವತ್ರ ಪಾದಾಂತೇ'' ಎಂಬ ಪುರಾತನೋಕ್ತಿಯನ್ನು ಪಾಲಿಸದೆ, ವೃತ್ತಗಳಲ್ಲಿಯೂ ಕಂದಪದ್ಯದಲ್ಲಿಯೂ ಪಾದಾಂತಯತಿಯನ್ನು ಏಕೆ ಮೀರಿರಬಹುದು ಎಂಬುದಕ್ಕೆ ಕವಿರಾಜಮಾರ್ಗ-ಕಾರನು -- ''ದೋಸಮನೆ ಗುಣದವೋಲುದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾ-ಚಾರ್ಯರ್ ॥ ದೇಸಿಯನೆ ನಿಱಿಸಿ ಖಂಡ । ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್'' ಎಂಬ ಪದ್ಯದಲ್ಲಿ ಹೇಳಿರುವ ಕಾರಣವನ್ನು ಅತ್ಯಂತ ಸಮರ್ಥವಾಗಿ ಸುಮಾರು ಎಂಟೂವರೆ ಪುಟಗಳಷ್ಟು ದೀರ್ಘವಾದ ಅಡಿ ಟಿಪ್ಪಣಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ದಾಕ್ಷಿಣಾತ್ಯ ಸಂಗೀತಸಂಪ್ರದಾಯದಲ್ಲಿ ರೂಢ-ಮೂಲವಾಗಿರುವ 'ಪದಗರ್ಭ'ವು ಪಾದಾಂತಯತಿಭಂಗವೇ ಆಗಿದೆ ಎಂದು ಹೇಳಿ, ಪದಗರ್ಭಕ್ಕೆ ದ್ವಿತೀಯಾಕ್ಷರಪ್ರಾಸವು ಅಂಟಿರುವಲ್ಲಿ ಮಾತ್ರ ಅದು ಖಂಡ-ಪ್ರಾಸ ಎಂದು ನಿರ್ಣಯಿಸಿರುವುದು ಗಮನಾರ್ಹ. ಅಂದರೆ, ''(ಪೂರ್ವ ಪಾದಾಂತ) ಯತಿಭಂಗಸಹಿತವಾದ (ಉತ್ತರಪಾದದ) ದ್ವಿತೀಯಾಕ್ಷರಪ್ರಾಸವನ್ನು ಮಾತ್ರ 'ಖಂಡಪ್ರಾಸ'ವೆಂದು ಕವಿರಾಜಮಾರ್ಗಕಾರ ಹೆಸರಿಸಿರುವುದು ನಿಸ್ಸಂದಿಗ್ಧ ಎಂದಿರುವುದಲ್ಲದೆ, 'ಖಂಡಪ್ರಾಸ' ಎಂಬ ಪದ 'ದ್ವಿತೀಯಾಕ್ಷರಪ್ರಾಸ' ಎಂಬ ಪದದ ಪರ್ಯಾಯ ಎಂಬುದು ತಪ್ಪು ಕಲ್ಪನೆ ಎಂದಿದ್ದಾರೆ. ಉತ್ತರಪಾದದ ದ್ವಿತೀಯಾಕ್ಷರಪ್ರಾಸವನ್ನು ನಿರ್ಧರಿಸುವುದು ಪೂರ್ವಪಾದದ ದ್ವಿತೀಯಾಕ್ಷರ ತಾನೆ? ಎರಡೂ ಪಾದಗಳ ದ್ವಿತೀಯಾಕ್ಷರಗಳು ಸಮಾನಾಕ್ಷರಗಳಾಗಿರದಿದ್ದರೆ 'ಪ್ರಾಸ'-ವಾದರೂ ಹೇಗೆ ಘಟಿಸುತ್ತದೆ? ಖಂಡಪ್ರಾಸಕ್ಕೆ ಪೂರ್ವೋತ್ತರ ಪಾದಗಳೆರಡೂ ಅಗತ್ಯವಾದ್ದರಿಂದ 'ಖಂಡಪ್ರಾಸ'ವನ್ನು 'ದ್ವಿತೀಯಾಕ್ಷರಪ್ರಾಸ' ಇಲ್ಲವೆ 'ಆದಿಪ್ರಾಸ' ಎನ್ನಲು ಪ್ರತ್ಯವಾಯ ಯಾವುದೂ ಇಲ್ಲ ಎಂದು ನನಗೆ ತೋರುತ್ತದೆ.

ವಿಷಮಗತಿವೃತ್ತಗಳ ಛಂದೋಗತಿಸೂಕ್ಷ್ಮತೆಗಳನ್ನು ತಳಮುಟ್ಟಿ ವಿಚಾರ ಮಾಡಿಯೂ, ಅವುಗಳ ಗತಿಸೌಂದರ್ಯಸಿದ್ಧಿ ವಿಧಿವಿಧಾನಗಳಿಗೆ ಸಿಲುಕತಕ್ಕದ್ದಲ್ಲ, ''ಪ್ರಬುದ್ಧವಾದ ಛಂದಃಪ್ರತಿಭೆಗೆ ಮಾತ್ರ ಮೆಯ್ದೋರಬಲ್ಲ ಛಂದಃಕಲಾತಥ್ಯಗಳು'' ಎಂಬ ಸತ್ಯವಾದ ಮಾತನ್ನೇ ಶ್ರೀ ಸೇಡಿಯಾಪು ಅವರು ನುಡಿದಿದ್ದಾರೆ.

ಒಂಬತ್ತನೆಯ ಪರಿಚ್ಛೇದದಲ್ಲಿ, ಅಕ್ಷರಸಂಖ್ಯಾನಿಯಮಬದ್ಧವಾಗಿದ್ದರೂ ಗುರುಲಘುಸ್ಥಿರತೆ (ಪರಿಪೂರ್ಣವಾಗಿ) ಇರದ, ವಿಷಮಗತಿಬಂಧಕ್ಕೆ ಸೇರಿದ, 'ಅಕ್ಷರಜಾತಿ' ವರ್ಗದ ಛಂದೋಬಂಧಗಳ ವಿಚಾರ ವಿಮರ್ಶೆ ನಡೆದಿದೆ. 'ಅಕ್ಷರಜಾತಿ'ಗಳಲ್ಲಿ ಪ್ರಧಾನವಾದ 'ಅನುಷ್ಟುಪ್ ಶ್ಲೋಕ'ದ ಛಂದೋವಿನ್ಯಾಸವನ್ನು ಸಮಗ್ರವಾಗಿ ಪರಿಶೀಲನೆ ಮಾಡಿದ್ದಾರೆ – ಶ್ರೀಯುತರು. ಶ್ಲೋಕವು ಪಾದಪರಿ-ಮಾಣ ದೃಷ್ಟಿಯಿಂದ ಸಮಚತುಷ್ಪದಬಂಧವಾದರೂ, ಛಂದೋಗತಿಗನುಗುಣ-ವಾಗಿ ಅದನ್ನು ಒಂದು 'ದ್ವಿಪದಬಂಧ'ವೆಂದು ಹೇಳಲೂಬಹುದಾಗಿದೆ ಎಂದು

ಅಭಿಪ್ರಾಯಪಟ್ಟಿದ್ದಾರೆ. ಕೆಲವು ಛಂದೋಗ್ರಂಥಗಳಲ್ಲಿ ಅನುಷ್ಟುಪ್ ಶ್ಲೋಕವನ್ನು 'ವಿಷಮವೃತ್ತ'ಗಳ ವರ್ಗಕ್ಕೆ ಸೇರಿಸಿರುವುದನ್ನು ಅಲ್ಲಗಳೆದು, ಗುರುಲಘುಸ್ಥಿರವಲ್ಲದ ಅನುಷ್ಟುಪ್ ಶ್ಲೋಕ 'ವೃತ್ತ'ವೇ ಅಲ್ಲವೆಂದು ಶ್ರೀಯುತರು ಸಾಧಿಸಿದ್ದಾರೆ. ಸಮತ್ವ ವಿಷಮತ್ವಗಳು ಗುರುಲಘುಸ್ಥಿರತ್ವವುಳ್ಳ ಛಂದೋಬಂಧಗಳಿಗೆ ಮಾತ್ರ ಅನ್ವಯಿಸ-ತಕ್ಕವು; ಗುರುಲಘುಸ್ಥಿರವಲ್ಲದ 'ಜಾತಿಬಂಧ'ಗಳಿಗೆ ಅನ್ವಯಿಸತಕ್ಕವಲ್ಲ (ಅಡಿಟಿಪ್ಪಣಿ 87). ಅನಂತರ, ಗುರ್ವಕ್ಷರಪ್ರಾಧಾನ್ಯದ ಮಧ್ಯಗತಿಯನ್ನುಳ್ಳ ಲೌಕಿಕಸಂಸ್ಕೃತದ ಜಾಯಮಾನಕ್ಕೆ ಅನುಷ್ಟುಪ್ ಶ್ಲೋಕಬಂಧವು ಸಹಜವಾಗಿ ಒಗ್ಗಿರುವ ಹಾಗೆ ಲಘ್ವಕ್ಷರಗಳ ಪ್ರಾಧಾನ್ಯವಿರುವ ಪದಗಳುಳ್ಳ ಕನ್ನಡಕ್ಕೆ ಸಹಜವಾಗಿಯೇ ಒಗ್ಗಿ ಬಂದಿಲ್ಲ ಎಂಬ ಮಾತು ಒಪ್ಪತಕ್ಕದ್ದು. ಅನುಷ್ಟುಪ್ ಶ್ಲೋಕದಲ್ಲಿ ಕಾಣಬರುವ ಗುರ್ವಕ್ಷರಗಳ ಪ್ರಾಧಾನ್ಯವನ್ನು ಉದಾಹರಣೆಗಳ ಮೂಲಕ ತೋರಗೊಟ್ಟಿದ್ದಾರೆ. ವಾಸ್ತವವಾಗಿ ದ್ವಿಪಾದಬಂಧವಾಗಿರುವ ಅನುಷ್ಟುಪ್ ಶ್ಲೋಕದ ಬಗೆಗೆ ಶ್ರೀಯುತರು ಹೇಳಿರುವ ಕೊನೆಯ ಮಾತು ಗಮನಾರ್ಹ: 'ಉಕ್ತಪರಿಮಿತಿಗಳೊಳಗೆ ಯಥಾಕ್ಷರ ಗುರುಲಘುವಾಗಿಯೇ ಪಠಿಸಲ್ಪಡುವ ೩೨ ಅಕ್ಷರಗಳ ಸಮುದಾಯವಾಗಿರುವ ಮತ್ತು ವಿಭಿನ್ನ ಕಾಲಪರಿಮಾಣದ ಹಾಗೂ ವಿಭಿನ್ನ ಗುರುಲಘುವಿನ್ಯಾಸದ ಈ ವಿಷಮಗತಿಬಂಧದ ನಾನಾಶ್ಲೋಕಗಳೊಳಗೆ ಸಮಾನವೆಂದೇ ಭಾಸವಾಗುವ 'ಧಾಟಿ'ಯೊಂದು ಆವಿರ್ಭವಿಸಿ ನೆಲೆಗೊಂಡಿರುವುದು ಅನಿರ್ವಚನೀಯವೂ ವಿಸ್ಮ-ಯಾವಹವೂ ಆದೊಂದು ಗತಿತತ್ತ್ವರಹಸ್ಯವಾಗಿದೆ.' ಸೇಡಿಯಾಪು ಅವರಂಥ ಛಂದಃಪರಿಣತರ ಗತಿಪ್ರಜ್ಞೆಗೂ ದಕ್ಕದಿರುವುದೇ ಅನುಷ್ಟುಪ್ ಶ್ಲೋಕದ ಗತಿಸೌಂದರ್ಯ !

ಶ್ರೀ ಸೇಡಿಯಾಪು ಅವರು ಸಂಸ್ಕೃತವಾಙ್ಮಯದಲ್ಲಿ ವಿಪುಲವಾಗಿ ಪ್ರಯುಕ್ತವಾಗಿರುವ 'ಉಪಜಾತಿ' ಬಂಧಗಳ ವಿಚಾರವಾಗಿ ಪರಾಮರ್ಶೆಮಾಡುವ ಸಂಬಂಧದಲ್ಲಿ, ಕನ್ನಡದಲ್ಲಿ ಈ ಉಪಜಾತಿಗಳಿಗೆ ಸ್ಥಾನ ಲಭಿಸದಿರುವುದಕ್ಕೆ ಕನ್ನಡ ಪದ್ಯಗಳಲ್ಲಿ 'ಪ್ರಾಸ'ವು ನಿರಪವಾದವಾಗಿ ಇರಲೇಬೇಕಾದ ಒಂದು ನಿಯಮ-ವಾಗಿರುವುದೇ ಕಾರಣವೆನ್ನುತ್ತಾರೆ. ಪ್ರಾಸದ ಪ್ರಸ್ತಾವ ಬಂತೋ ಇಲ್ಲವೋ, ತಟ್ಟನೆ ಪ್ರಾಸಲಕ್ಷಣದ ಕಡೆಗೆ ಅವರ ಗಮನ ಹರಿಯುತ್ತದೆ. ಆ ಕುರಿತು ಜಯಕೀರ್ತಿ ಹೇಳಿರುವ ಪ್ರಾಸಲಕ್ಷಣವನ್ನು ವಿವರಿಸಿ, "ಪ್ರಾಸವೆಂಬುದು ಪಾದಾದಿಯ ಛಂದೋವಿನ್ಯಾಸವನ್ನೂ ನಿಯಂತ್ರಿಸುವ ಕಾರಣ, ಅದು ಅನುಪ್ರಾಸದಂತೆ ಕೇವಲ ಅಲಂಕಾರಶಾಸ್ತ್ರವಿಷಯಕವಾಗಿ ಉಳಿಯದೆ, ಛಂದಃಶಾಸ್ತ್ರದ ಕ್ಷೇತ್ರವನ್ನೂ ಪ್ರವೇಶಿಸಿರುವ ಶಬ್ದಾಲಂಕಾರವಿಶೇಷವಾಗಿರುತ್ತದೆ" ಎಂಬ ಹೊಸ ಸಂಗತಿ-ಯೊಂದನ್ನು ಮುಂದಿಡುತ್ತಾರೆ. ಇದು ವಿಚಾರಾರ್ಹವಾದ ವಿಷಯ: ಕನ್ನಡ ಕಾವ್ಯಗಳಲ್ಲಿ ಬಳಕೆಯಾಗಿರುವ ಯಾವುದೇ ಛಂದೋಬಂಧದ ಪಾದಾದಿಯ ಗಣದ ಛಂದೋವಿನ್ಯಾಸ (ಗುರು ಲಘು ಸ್ಥಾನಗಳು) ಪೂರ್ವನಿಶ್ಚಿತ. ಆದಿಯಲ್ಲಿ ಒಂದು ಗುರು ಇಲ್ಲವೆ ಗುರುಸ್ಥಾನದಲ್ಲಿ ಎರಡು ಲಘು ( – ∪, ∪ ∪ ∪; – ∪

ᴗ, ᴗ ᴗ – ಇತ್ಯಾದಿ) ಇದ್ದೇ ತೀರಬೇಕು. ಪ್ರಥಮ ಪಾದದ ಗಣವಿನ್ಯಾಸಕ್ಕೆ ತಕ್ಕಂತೆ ಒಂದು ಪದ ನಿಕ್ಷಿಪ್ತವಾಗಿರುತ್ತದೆ; ಈ ಪದದ ದ್ವಿತೀಯಾಕ್ಷರವಾದ ಪ್ರಾಸಾಕ್ಷರವನ್ನು ಅನುಸರಿಸಿಯೇ ಉಳಿದ ಪಾದಗಳ ಪ್ರಾಸಾಕ್ಷರವು ನಿಯೋಜಿತ-ವಾಗುತ್ತದೆ. ಹೀಗಿರುವುದರಿಂದ, ಛಂದೋವಿನ್ಯಾಸವೇ ಪ್ರಾಸವನ್ನು ನಿಯಂತ್ರಿಸು-ತ್ತದೆ, ಎಂಬುದು ನನ್ನ ಅಭಿಪ್ರಾಯ. ಪ್ರಾಸರಹಿತವಾಗಿಯೂ ಯಾವುದೇ ಪದ್ಯವನ್ನು ಬರೆಯಲು ಶಕ್ಯವಿರುವುದರಿಂದ ಪ್ರಾಸವನ್ನು ಸಂಪೂರ್ಣವಾಗಿ ಶಬ್ದಾಲಂಕಾರವೆಂದೇ ಪರಿಗಣಿಸಬೇಕಾಗುತ್ತದೆ. ಹೀಗೆ ಹೇಳಿದ್ದರಿಂದ, ಕನ್ನಡ ಪದ್ಯರಚನೆಯಲ್ಲಿ ಪ್ರಾಸಕ್ಕಿರುವ ಸ್ಥಾನಮಹತ್ವವನ್ನು ನಾನು ಅಲ್ಲಗಳೆಯುತ್ತಿಲ್ಲ.

ಒಂಬತ್ತನೆಯ ಪರಿಚ್ಛೇದದಲ್ಲಿ ಶ್ರೀ ಸೇಡಿಯಾಪು ಅವರ ವಿಚಾರಪೂರ್ಣ ಪರಾಮರ್ಶೆಗೆ ಒಳಗಾಗಿರುವ ಒಂದು ಮುಖ್ಯ ಛಂದಸ್ತತ್ತ್ವ ವೈದಿಕಪದ್ಯಗಳ ಉದಾತ್ತಾದಿ 'ತ್ರೈಸ್ವರ್ಯ' ವಿಧಾನ. ಇದನ್ನು ಕುರಿತು ಶ್ರೀ ವೇಲಣಕರರು – "ವೈದಿಕಪದ್ಯಗಳ ಛಂದಸ್ಸೌಂದರ್ಯವು (=ಛಂದೋಗತಿಸೌಂದರ್ಯ = ಶ್ರವ್ಯತ್ವ = metrical music) 'ಸ್ವರಪರಿವರ್ತನ'ವನ್ನು ಆಧರಿಸಿದೆ ಹೊರತು, ಆ ಸೌಂದರ್ಯದ ನಿಷ್ಪತ್ತಿಯಲ್ಲಿ ಅಕ್ಷರೋಚ್ಚಾರದ ಕಾಲಪರಿಮಾಣಕ್ಕೆ ಮಹತ್ತ್ವವಿಲ್ಲ"[9] – ಎಂದಿರು-ವುದನ್ನು ಶ್ರೀಯುತರು "ಶ್ರೀ ವೇಲಣಕರರು – ವೈದಿಕಪದ್ಯಗಳ ಛಂದೋಗತಿ ಸೌಂದರ್ಯವು 'ಕಾಲತತ್ತ್ವ' ನಿರಪೇಕ್ಷವೆಂದೂ, ಕೇವಲ ಸ್ವರಪರಿವರ್ತನಾವ-ಲಂಬಿಯೆಂದೂ ಹೇಳುತ್ತಾರೆ" ಎಂಬಲ್ಲಿ ಪ್ರಬಲವಾಗಿ ಖಂಡಿಸಿದ್ದಾರೆ. ವೇದ ವಾಙ್ಮಯದ ಈಷತ್ಪರಿಚಯವೂ ಇಲ್ಲದ ನಾನು ಈ ಸಂಬಂಧದಲ್ಲಿ ಶ್ರೀ ಸೇಡಿಯಾಪು ಅವರು ವ್ಯಕ್ತಪಡಿಸಿರುವ ವಿಚಾರಧಾರೆಯ ಬಗೆಗೆ ಏನೇ ಹೇಳಿದರೂ ಅದು ಬಾಲಿಶವಾಗಿ ಕಾಣಬಹುದು; ಆದರೆ, ತ್ರೈಸ್ವರ್ಯವಿಷಯಕವಾಗಿ ಶ್ರೀಯುತರು ಅಧಿಕಾರವಾಣಿಯಿಂದ ನಡಸಿರುವ ಚರ್ಚೆ ಉನ್ನತಮಟ್ಟದ್ದೇ ಆದರೂ 'ತ್ರೈಸ್ವರ್ಯವಿಧಾನ'ದಲ್ಲಿ ವೇಲಣಕರರನ್ನು ಮೇಲಕ್ಕೆತ್ತಿ ಕೆಳಕ್ಕಿಳಿಸಿರುವುದು ಸರಿಯಲ್ಲ ಎನ್ನಿಸುತ್ತದೆ. ವೈದಿಕಛಂದಗಳ ಪರಾಮರ್ಶೆಮಾಡುವ ವಿಚಾರಕ್ಕೆ ಸಂಬಂಧಪಟ್ಟಂತೆಯೇ ಮರಾಠಿ ಭಾಷೆಯಲ್ಲಿ ಪ್ರಚಲಿತವಿದ್ದ ಪ್ರಾಚೀನ

---

9. "All these Vedic metres are based on 'swarasangita' or the music of Voice-modulation, where the time element plays no important role in the production of the metrical music" (Jayadaman, p. 9). (ಶ್ರೀ ವೇಲಣಕರರು – ವೈದಿಕ ಪದ್ಯಗಳ ಛಂದೋಗತಿ ಸೌಂದರ್ಯವು 'ಕಾಲತತ್ತ್ವ' ನಿರಪೇಕ್ಷವೆಂದೂ, ಅದು ಕೇವಲ ಸ್ವರಪರಿವರ್ತನಾವಲಂಬಿಯೆಂದೂ ಹೇಳುತ್ತಾರಲ್ಲ! "(ಪು. ೧೮೭) ಎಂದು ಶ್ರೀ ಸೇಡಿಯಾಪು ಅವರು ಹೇಳಿರುವುದರಲ್ಲಿ, ಅವರು ವೇಲಣಕರರ ಆಶಯವನ್ನು ಸರಿಯಾಗಿ ಗ್ರಹಿಸಿಲ್ಲ ಎಂದು ತೋರುತ್ತದೆ. ವೇಲಣಕರರ ಹೇಳಿಕೆಯನ್ನು ಗಮನವಿಟ್ಟು ಓದಿದ್ದೇ ಆದರೆ, 'ಸ್ವರಪರಿವರ್ತನ'ದಲ್ಲಿ ಕಾಲಪರಿಮಾಣದ ಪಾತ್ರ ಮುಖ್ಯವಲ್ಲ ಎಂದಿರುವುದರ ತಾತ್ಪರ್ಯ 'ಅದರ ಪಾತ್ರ ಗೌಣ' ಎಂದಾಗುತ್ತದೆಯೆ ಹೊರತು 'ಇಲ್ಲವೆ ಇಲ್ಲ' ಎಂದಾಗುವುದಿಲ್ಲ.)

ಛಂದೋರೂಪವಾದ 'ಓವಿ'ಯ ಬಗೆಗೂ ವಿಚಾರಮಾಡಿದ್ದಾರೆ. ಈ ಸಂಬಂಧದ ಅಡಿಟಿಪ್ಪಣಿಯಲ್ಲಿ (97, ಪು. ೨೧೪) ಮಾನ್ಯ ಲೇಖಕರು ವ್ಯಕ್ತಪಡಿಸಿರುವ ಅಭಿಪ್ರಾಯವು ವೈದಿಕ ಛಂದಗಳ ಸ್ವರೂಪವನ್ನು ಯಥಾವತ್ತಾಗಿ ತಿಳಿಸುತ್ತದೆ: "ವೈದಿಕ ಛಂದಗಳ ಈ ಸ್ವಚ್ಛಂದತೆಯಿಂದಾಗಿ ಅವುಗಳ ರೂಪವು ಅವ್ಯವಸ್ಥಿತ-ವಾಗಿ ಪರಿಣಮಿಸಿತಾದರೂ, ಅವುಗಳಲ್ಲಿ ಯಾದೃಚ್ಛಿಕವಾಗಿ ಅಲ್ಲಲ್ಲಿ ಉನ್ಮೀಲಿಸಿದ – ಲಯರಹಿತವಾದರೂ ಆಕರ್ಷಕವಾದ – ಅಕ್ಷರಗತಿರೂಪಗಳು, (ಇತರ ಯಾವ ಭಾಷೆಯಲ್ಲಿಯೂ ಹುಟ್ಟದ) ವಿಷಮಗತಿಬಂಧಗಳಿಗೆ ಲೌಕಿಕ ಸಂಸ್ಕೃತದಲ್ಲಿ ಜನ್ಮವಿತ್ತವು; ಮತ್ತು ಛಂದಃಸುವ್ಯವಸ್ಥೆಯ ಹಾಗೂ ಛಂದೋಗತಿ ಸೌಂದರ್ಯದ ಪರಾಕಾಷ್ಠೆಯನ್ನು ಮುಟ್ಟಿರುವ 'ವೃತ್ತಗಳ' ಆವಿರ್ಭಾವಕ್ಕೂ ಕಾರಣವಾದವು."

ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ಸರ್ವಂಕಷವೂ ಅಗಾಧವೂ ಛಂದಃ-ಪ್ರತಿಭಾನ್ವಿತವೂ ಆದ ಛಂದಶ್ಶಾಸ್ತ್ರಪಾಂಡಿತ್ಯದ ಫಲ ಈ 'ಛಂದೋಗತಿ' ಎಂಬ ಶಾಸ್ತ್ರಸಾಹಿತ್ಯರತ್ನ. ಛಂದೋಗತಿಪರಾಮರ್ಶೆ ಒಂದು ವಟವೃಕ್ಷದಂತಿದ್ದು, ಛಂದೋಗತಿವೈವಿಧ್ಯಪೃಥಕ್ಕರಣ ಆ ವೃಕ್ಷದ ಶಾಖೋಪಶಾಖಾವಳಿಯಂತಿದೆ; ವಿಷಯಾಂತರವೆಂದು ಭಾಸವಾಗುವ ಅಡಿಟಿಪ್ಪಣಿಗಳು ಆ ಶಾಖೆಗಳು ಬಿಟ್ಟ ಬಿಳಲುಗಳು. ಈ ವೃಕ್ಷಚ್ಛಾಯೆಯನ್ನು ಆಶ್ರಯಿಸಿ ಛಂದೋಗತಿಸೌಂದರ್ಯಾನು-ಭವವನ್ನು ಪಡೆಯಬಲ್ಲವರು ಕಾವ್ಯಾನುಭವಿಗಳೂ ಆಗಲುಳ್ಳವರು.

ಗ್ರಂಥದಲ್ಲಿ ಪಾರಿಭಾಷಿಕ ಪದಗಳ ಅಕಾರಾದಿ ಇಲ್ಲರುವುದು ಒಂದು ಕೊರತೆ.* ಗ್ರಂಥಮೌಲ್ಯಕ್ಕೆ ಒಪ್ಪಾಗುವಂತೆ ಅಚ್ಚುಕಟ್ಟಾಗಿ ಗ್ರಂಥವನ್ನು ಹೊರತಂದಿ-ರುವ ಮೈಸೂರಿನ ಗೀತಾ ಬುಕ್ ಹೌಸ್ ಅಭಿನಂದನೆಗೆ ಪಾತ್ರರು.



* ಪ್ರಸ್ತುತ 'ಛಂದಸ್ಸಂಪುಟ'ದಲ್ಲಿ ಅಧ್ಯಯನಾಸಕ್ತರಿಗೆ ಅನುಕೂಲವೊದಗಿಸಲು ಏಳು 'ಸೂಚಿ'-ಗಳನ್ನು ಸಿದ್ಧಪಡಿಸಿ ನೀಡಲಾಗಿದೆ. 'ಛಂದೋಗತಿ'ಯ ಬರವಣಿಗೆ ನಡೆದು ಮುದ್ರಣಕ್ಕೆ ಹೋದಾಗ ಸೇಡಿಯಾಪು ಅವರು ದೃಷ್ಟಿದೌರ್ಬಲ್ಯ ಮತ್ತು ದೈಹಿಕ ಅನಾರೋಗ್ಯದಿಂದ ಬಳಲಿದ್ದರು. ಅವರು ಈ ಕೃತಿಗೆ ಬೇಕಾದ ಸೂಚಿಗಳನ್ನು ಸಿದ್ಧಪಡಿಸುವಂತಿರಲಿಲ್ಲ. ಇಡಿಯ ಕೃತಿಯ ಕರಡಚ್ಚು ತಿದ್ದಿದ ಕೆಲಸವೇ ಅವರ ದೃಷ್ಟಿಯಿಂದ ಮಹಾಸಾಹಸಕಾರ್ಯ. ದೈಹಿಕ ದೌರ್ಬಲ್ಯಗಳಿಂದಾಗಿ ಕೊನೆಯ ಪರಿಚ್ಛೇದಗಳು ಸಂಕ್ಷಿಪ್ತವಾದುವೆಂದೂ ೧೨ ಪರಿಚ್ಛೇದಗಳಲ್ಲಿ ಇದು ವಿಸ್ತರಿಸಿಕೊಳ್ಳಬೇಕಿದ್ದು ದೈಹಿಕದೌರ್ಬಲ್ಯದಿಂದಾಗಿಯೇ ಒಂಬತ್ತನೆಯ ಪರಿಚ್ಛೇದದಲ್ಲಿ ಆದಷ್ಟು ವಿಷಯಗಳನ್ನು ಸೇರಿಸಿ ಪುಸ್ತಕರಚನೆಯನ್ನು ತಾವು ಮುಗಿಸಿದ್ದಾಗಿಯೂ, ಈ ಪುಸ್ತಕವನ್ನು ಮುಗಿಸಿದಾಗ ಅಪಾರವಾದ ಶ್ರಮವೊಂದರಿಂದ ಬಿಡುಗಡೆಗೊಂಡ ಅನುಭವ-ವಾಯಿತೆಂದೂ ಸೇಡಿಯಾಪು ಅವರು ನನ್ನಲ್ಲಿ ಹೇಳಿದ್ದುಂಟು. – ಸಂ.

೨

# 'ಛಂದೋಗತಿ'ಯ ವಿಮರ್ಶೆ – ಪ್ರತಿಕ್ರಿಯೆ*

೧೯೮೫ನೆಯ ಇಸವಿಯಲ್ಲಿ ಪ್ರಕಟವಾದ 'ಛಂದೋಗತಿ' ಎಂಬ ನನ್ನ ಪುಸ್ತಕಕ್ಕೆ 'ಲೋಚನ'ದ ಕಳೆದ ವರ್ಷದ ಸಂಚಿಕೆಯೊಂದರಲ್ಲಿ ೨೧ ಪುಟಗಳಷ್ಟು ವಿಸ್ತಾರವುಳ್ಳ ಸುದೀರ್ಘವಾದ ವಿಮರ್ಶಲೇಖನವನ್ನು ಬರೆದು ಪ್ರಕಟಿಸಿ ಉಪಕರಿಸಿದ ಮಾನ್ಯ ಪ್ರೊ ಎಂ. ವಿ. ಸೀತಾರಾಮಯ್ಯನವರು ನನ್ನ ಕೃತಜ್ಞತೆಗೆ ಅರ್ಹರಾಗಿರುತ್ತಾರೆ. ಆದುದರಿಂದ ಅವರಿಗೆ ನನ್ನ ವಂದನೆಗಳನ್ನು ಮೊದಲಾಗಿ ಸಮರ್ಪಿಸಿ, ನನ್ನ ದೃಷ್ಟಿಯಂತೆ, ಅಸಂಗತವಾಗಿ ಕಂಡುಬರುವ ಅವರ ಕೆಲವು ಅಭಿಪ್ರಾಯಗಳ ಕಡೆಗೆ ವಿದ್ವಾಂಸರ ಲಕ್ಷ್ಯವನ್ನು ಎಳೆಯಬಯಸುತ್ತೇನೆ.

ಆಂಗ್ಲಭಾಷೆಯ 'Rhythm' ಎಂಬ ಪದಕ್ಕೆ ನಮ್ಮ ದೇಶದ ಶಾಸ್ತ್ರ ಗ್ರಂಥಗಳಲ್ಲಿ ಪ್ರಯುಕ್ತವಾಗಿರುವ 'ಲಯ' ಎಂಬ ಪದವು ಸಮಾನಾರ್ಥಕವೆಂಬ ಭಾವನೆ ಕನ್ನಡದ ಆಧುನಿಕ ವಿದ್ವಾಂಸರಲ್ಲಿ ರೂಢವಾಗುತ್ತಿರುವುದು ಸಮಂಜಸ-ವಲ್ಲವೆಂದೇ ನನ್ನ ಪುಸ್ತಕದ ಮುಖ್ಯ ಪ್ರತಿಪಾದನೆಗಳಲ್ಲಿ ಮೊತ್ತಮೊದಲನೆಯ-ದಾಗಿದೆ. ನನ್ನ ಪುಸ್ತಕದ ಒಂಬತ್ತು ಪರಿಚ್ಛೇದಗಳೊಳಗೆ ಮೊದಲನೆಯ ಮೂರು ಪರಿಚ್ಛೇದಗಳಲ್ಲಿ ನಮ್ಮ ದೇಶದ ಶಾಸ್ತ್ರಗ್ರಂಥಗಳಲ್ಲಿಯೂ ಶಾಸ್ತ್ರೇತರ ವಾಙ್ಮಯ-ದಲ್ಲಿಯೂ ಲಯವೆಂಬ ಸಂಜ್ಞೆಯನ್ನು ಯಾವ ಯಾವ ಅರ್ಥಗಳಲ್ಲಿ ಬಳಸ-ಲಾಗಿದೆ; ಮತ್ತು *Encyclopaedia Britannica, Oxford Dictionary* ಇತ್ಯಾದಿ ಪ್ರಮಾಣಭೂತವಾದ ಆಂಗ್ಲಗ್ರಂಥಗಳಲ್ಲಿ Rhythm ಎಂಬುದರ ಅರ್ಥವು ಏನೆಂದು ವಿವೃತವಾಗಿದೆ ಎಂಬುದನ್ನು ಆಯಾ ಗ್ರಂಥಭಾಗಗಳ ಉದ್ಧರಣ-ದೊಂದಿಗೆ ನಿರೂಪಿಸಿ Rhythm ಮತ್ತು ಲಯ ಎಂಬಿವು ಸಮಾನಾರ್ಥಕಗಳಲ್ಲ

---

* ಸೇಡಿಯಾಪು ಅವರ 'ಛಂದೋಗತಿ' ಎಂಬ ಗ್ರಂಥವನ್ನು ಕನ್ನಡದ ಸುಪ್ರಸಿದ್ಧ ವಿದ್ವಾಂಸರಾದ ದಿ। ಎಂ. ವಿ. ಸೀತಾರಾಮಯ್ಯನವರು ಬೆಂಗಳೂರಿನಿಂದ ಪ್ರಕಟವಾಗುವ ಲೋಚನ (ಪ್ರಕಾಶಕರು:– ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ) ಪತ್ರಿಕೆಯ ಸಂಪುಟ ೫ರ ಮೊದಲನೆಯ ಸಂಚಿಕೆಯಲ್ಲಿ (ಜೂನ್ ೧೯೮೭) ಒಂದು ಸುದೀರ್ಘ ಲೇಖನ ಬರೆದು ವಿಮರ್ಶಿಸಿದ್ದಾರೆ. (ಗ್ರಂಥಾವಲೋಕನ ಪು. ೧೧೩.-೧೩೩) ಈ ವಿಮರ್ಶೆಯಲ್ಲಿರುವ ಹಲವು ಅಭಿಪ್ರಾಯಗಳಿಗೆ ಸೇಡಿಯಾಪು ಅವರು ಉತ್ತರವನ್ನು ಬರೆಯಿಸಿದರು. ಆ ಲೇಖನವು ಅದೇ ಪತ್ರಿಕೆಯ ಜೂನ್ ೧೯೮೮ನೆಯ ಸಂಚಿಕೆಯಲ್ಲಿ ಪ್ರಕಟಗೊಂಡಿತು. (ಲೋಚನ ಪತ್ರಿಕೆಯು ಈ ಸಂಚಿಕೆಯಿಂದ ಹೆಸರನ್ನು ಬದಲಾಯಿಸಿಕೊಂಡಿತು. ಆ ಬದಲಾದ ಹೆಸರು 'ಕರ್ನಾಟಕ ಲೋಚನ'. ಆದುದರಿಂದ ಈ ಸಂಚಿಕೆಯೆಂದರೆ – ಕರ್ನಾಟಕ ಲೋಚನ–ಸಂಪುಟ–೧, ಜೂನ್ ೧೯೮೮) ಆ ಲೇಖನವಿದು. (ಈ ಲೇಖನವು ಸೇಡಿಯಾಪು ಅವರ ಸಮಗ್ರ ಲೇಖನ ಸಂಕಲನ 'ವಿಚಾರ ಪ್ರಪಂಚ'ದಲ್ಲೂ ಸೇರ್ಪಡೆಗೊಂಡಿದೆ.) –ಸಂ.

ಎಂಬುದನ್ನು ತೋರಿಸಿರುತ್ತೇನೆ. ಈ ವಿಷಯದಲ್ಲಿ ಪ್ರಸ್ತುತ ವಿಮರ್ಶಕರು ಯಾವ ಅಭಿಪ್ರಾಯಭೇದವನ್ನೂ ಸೂಚಿಸದಿರುವುದರಿಂದ ಆ ನನ್ನ ಪ್ರತಿಪಾದನೆ ಅವರಿಗೂ ಸಮ್ಮತವೆಂದೇ ತಿಳಿಯಬೇಕಾಗುತ್ತದೆ. ಹೀಗಿದ್ದರೂ ಅವರು 'ಲಯ-ವೆಂದರೆ Rhythm' ಎಂದು ಹೇಳಿರುವ ದಿ| ತೀ. ನಂ. ಶ್ರೀ.ಯವರ ಅಭಿಪ್ರಾಯ-ವನ್ನೂ ನಾನು ಪ್ರತಿಪಾದಿಸಿದ ಅಭಿಪ್ರಾಯವನ್ನೂ ಸಮಾನವೆಂದು ಹೇಳಿರುವುದು ಆಶ್ಚರ್ಯಕರವಲ್ಲವೆ? ಆ ಸಂದರ್ಭದ ವಿಮರ್ಶಕರ ಮಾತುಗಳು ಹೀಗಿವೆ:– "ಈ ಎರಡೂ ವಾಕ್ಯಗಳಲ್ಲಿ ಮಾತುಗಳು ಬೇರೆಯಾಗಿದ್ದರೂ ಆಶಯ ಒಂದೇ ಆಗಿದೆ." ಅನಂತರದ ವಾಕ್ಯದಲ್ಲಿಯೇ "ತೀ. ನಂ. ಶ್ರೀ. ಲಯ = Rhythm ಎಂದೇ ಬಗೆದಿರುವುದು ಸ್ಪಷ್ಟ. ಆದರೆ ಸೇಡಿಯಾಪು ಅವರು ಈ ಸಮೀಕರಣ-ವನ್ನು ಒಪ್ಪುವುದಿಲ್ಲ" ಎಂದು ಹೇಳುತ್ತಾರೆ! ವಿಮರ್ಶಕರ ಈ ಎರಡು ಅಭಿಪ್ರಾಯಗಳೊಳಗೆ ಪರಸ್ಪರ ಸಾಂಗತ್ಯವಿಲ್ಲವೆಂಬುದನ್ನು ಬೇರೆ ಹೇಳಬೇಕಾ-ಗಿಲ್ಲವಷ್ಟೆ. ಈ ಅಸಂಗತತ್ವವನ್ನು ಗಮನಿಸುವಾಗ ಪ್ರಸ್ತುತ ವಿಮರ್ಶಕರಿಗೆ ಲಯವೆಂದರೇನೆಂಬ ವಿಷಯದಲ್ಲಿ ಖಚಿತವಾದ ಒಂದು ಅಭಿಪ್ರಾಯವಿಲ್ಲವೋ ಎಂದೆಂಬ ಸಂದೇಹವು ನನ್ನನ್ನು ಕಾಡುತ್ತಿದೆ.

ನನ್ನ ಪುಸ್ತಕದ ಮೂರನೆಯ ಪರಿಚ್ಛೇದದಲ್ಲಿ *Encyclopaedia Britannica*ದಿಂದ ನಾನು ಉದ್ಧರಿಸಿಕೊಟ್ಟಿರುವ ವಾಕ್ಯಗಳೊಳಗೆ ಈ ಮುಂದಿನ ಅಭಿಪ್ರಾಯವನ್ನು ವಾಚಕರು ಪರಾಮರ್ಶಿಸಬೇಕು– "A certain swing or balance in bodily movement, music, verse or prose....The early critic of prosody, Aristoxenus (C. 320 B.c.) distinguished three elements in rhythm-the speech (lexis), the melody (melos), and the bodily motion (kinesis somalike); but the later tendency had been to seperate these elements, and emphasize more and more the distinction between them. **Precision, however, has hardly yet been reached;** and there are a few subjects on which opinions, even among experts, differ more widely.... " ಮತ್ತು ಅದೇ ಪರಿಚ್ಛೇದದ ಆರಂಭದಲ್ಲಿ, ಲಯವೆಂಬುದ ಕುರಿತು ನಮ್ಮ ಬೇರೆ ಬೇರೆ ಶಾಸ್ತ್ರಗ್ರಂಥಗಳಲ್ಲಿ ಪ್ರೋಕ್ತವಾದ ಲಕ್ಷಣವನ್ನು ಸಂಗ್ರಹಿಸಿ ಬರೆದಿರುವ ಈ ಕೆಳಗಿನ ವಾಕ್ಯಗಳ ಅಭಿಪ್ರಾಯವನ್ನು ಸಹ ಪರಾಮರ್ಶಿಸ-ಬೇಕಾಗಿ ವಿಜ್ಞಾಪಿಸುತ್ತೇನೆ:– "ಲಯವೆಂದರೆ ಸಮಾನಕಾಲದ ಕರಾಸ್ಫಾಲನಗಳಿಗೆ ಅಳವಡುವಿಕೆ' ಎಂದು ಅಮರಕೋಶವು ಹೇಳುತ್ತದೆ. ಲಯವೆಂದರೆ 'ಛಂದೋ-ಬಂಧದ ಅಕ್ಷರಪುಂಜಗಳ ಮಾತ್ರಾಕಾಲಾವಕಾಶದ ಸಮತ್ವ' ಎಂದು ನಾಟ್ಯಶಾಸ್ತ್ರವು ತಿಳಿಸುತ್ತದೆ. ಲಯವೆಂದರೆ 'ಪದ್ಯದ ಪಾದಾವಯವಗಳ ಮಾತ್ರಾಸಮತ್ವ'ವೆಂದು ಛಂದೋಗ್ರಂಥಗಳಿಂದ ವ್ಯಕ್ತವಾಗುತ್ತದೆ. ಹೀಗೆ ಛಂದೋವಿಷಯಕವಾದ ಲಯಕ್ಕೆ **ಖಚಿತವೂ ಏಕರೂಪವೂ ಆದ ಒಂದು ಅರ್ಥವನ್ನು** ನಮ್ಮ ಶಾಸ್ತ್ರಗ್ರಂಥಗಳು ಹೇಳುತ್ತಿರುವಾಗ...." ಇತ್ಯಾದಿ ಈ ಮೇಲಿನ ಎರಡು ಉದ್ಧರಣಗಳ ಅಭಿ-

ಪ್ರಾಯಗಳನ್ನು ಯಥಾರ್ಥವಾಗಿ ಗ್ರಹಿಸಿದ ಪಕ್ಷದಲ್ಲಿ Rhythm ಮತ್ತು ಲಯ ಎಂಬ ಎರಡು ಸಂಜ್ಞೆಗಳ ಅರ್ಥವೂ ಒಂದೇ ಎಂದು ಹೇಳುವುದು ಅಸಾಧ್ಯವೆಂಬುದರಲ್ಲಿ ಸಂದೇಹವಿರಲಾರದು.

ಪ್ರಸ್ತುತ ವಿಮರ್ಶಕರು ಸೂಚಿಸಿರುವಂತೆ 'ನಿಯತವಾದ ಕಾಲದ ಅಂತರದಲ್ಲಿ ತಾಳಗಳು ಆವರ್ತನೆಯಾಗುವುದಕ್ಕೆ ಲಯ ಎಂದು ಹೆಸರು' ಎಂದು ತೀ. ನಂ. ಶ್ರೀ.ಯವರು ಹೇಳಿರುತ್ತಾರೆಯಷ್ಟೆ. ನಿಯತವಾದ ಕಾಲದ ಅಂತರದಲ್ಲಿ ತಾಳಗಳು ಆವರ್ತನೆಯಾಗುವುದೆಂದರೂ ಸಮಾನಮಾತ್ರಾಕಾಲದ ಆವರ್ತಗಳಿ- ರುವುದೆಂದರೂ ಅರ್ಥ ಒಂದೇ ಆಗಿದೆ. ಆದುದರಿಂದ ಆವರ್ತಗಳ ಮಾತ್ರಾ- ಸಂಖ್ಯೆಯಲ್ಲಿ ವ್ಯತ್ಯಾಸವಿದ್ದರೆ ಮಾತ್ರ ಲಯಹಾನಿಯಾಗುತ್ತದೆಂದು ಅವರೂ ಹೇಳಿದಂತಾಯಿತು. ಆದರೂ ಲಯಹಾನಿಯಾದ ಸಂದರ್ಭಗಳಿಗೆ 'ಸಮಾ- ಲೋಕನ'ದಲ್ಲಿ ತೀ. ನಂ. ಶ್ರೀ. ಯವರು ಕೊಟ್ಟಿರುವ ಉದಾಹರಣೆಗಳನ್ನು ಪರಾಮರ್ಶಿಸುವುದು ಅವಶ್ಯವೆಂದು ಕಾಣುತ್ತದೆ. ಉದಾ:-

"ಧ್ವನಿಸಿ ಬಯಲಾಗುತಿಹ ಸುರಗಾನದಂತೆ
ಕನಸಿನಲಿ ಗೈದಿರುವ । ಮೃತಪಾನ । ದಂತೆ

ಇಲ್ಲಿಯದು ಐದು ಮಾತ್ರೆಯ ಗಣದ ನಡೆ. ಮೊದಲನೆಯ ಚರಣ ಸರಾಗವಾಗಿ ಓಡುತ್ತದೆ. ಎರಡನೆಯದರಲ್ಲಿ ತಾಳ 'ಮೃ' ಎಂಬ ಅಕ್ಷರದ ಮೇಲೆ ಬೀಳಬೇಕಷ್ಟೆ. ಅದಕ್ಕೆ ತಕ್ಕಂತೆ 'ಮೃ' ಎಂಬುದನ್ನು ಒತ್ತಿ ಉಚ್ಚರಿಸಿದರೆ ಇಲ್ಲಿಯ ಪದಚ್ಛೇದವು 'ಗೈದಿರುವ+ಮೃತಪಾನ' ಎಂದಾಗಿ ಕವಿಯ ಆಶಯವೇ ಕೆಡುತ್ತದೆ. 'ಅಮೃತಪಾನ' ಎಂಬ ಪದಸ್ವರೂಪ ಹೊಳೆಯಬೇಕಾದರೆ 'ವ' ಎಂಬ ಅಕ್ಷರವನ್ನು ಒತ್ತಬೇಕು; ಆಗ ಲಯ ಕೆಡುತ್ತದೆ." (ಸಮಾಲೋಕನ-ಪು. ೧೮೮)

ಈ ಉದಾಹರಣದಲ್ಲಿ ಆವರ್ತಗಳ ಮಾತ್ರಾಸಂಖ್ಯೆಯಲ್ಲಿ ವ್ಯತ್ಯಾಸವೆಲ್ಲಿದೆ? ಹಾಗಿದ್ದರೂ ಇಲ್ಲಿ 'ಲಯ ಕೆಡುತ್ತದೆ'ಯೆಂದು ಅವರು ಹೇಳುತ್ತಾರೆ! ವಾಸ್ತವಿಕವಾಗಿ ಹೇಳುವುದಾದರೆ ಇಲ್ಲಿ ಕೆಟ್ಟುಹೋಗಿರುವುದು ಯತಿ; ಲಯವಲ್ಲ.

ಲಯಹಾನಿಗೆ ಅವರು ಕೊಟ್ಟಿರುವ ಇನ್ನು ಉದಾಹರಣಗಳು ಹೀಗಿವೆ:-

೧) ವಿಪ್ಲವ ಮೂರ್ತಿಯ ಸುಖನಾಗಿಹನ್ನೆ
ಕವಿಗರ । ಸುಗಿರಸು । ಗಳ ಋಣವಿಲ್ಲ

೨) ಅಂಧನೃಪ ನೀ ಮರುಳೆ । ಸಗಿ ನಮ್ಮ । ಬರಿಸಿದ್ಯೆ
ಅಂದು ತೋರಿದೆ ವಾರಣಾವತವನು

೩) ಮೂಡಲು ಬಿಳುಪೇರಲು ಬೆಚ್ಚಿದರು
ಓಡಿದರಡವಿಯೆ । ದೆಯ ಸೇ । ರಿದರು

ಈ ಮೂರು ಸಂದರ್ಭಗಳಲ್ಲಿಯೂ ಆದುದು ಯತಿಭಂಗವೇ ಹೊರತು ಲಯಹಾನಿಯಲ್ಲ. ತದನಂತರ ಅವರು ಲಯಹಾನಿಗೆ ಕೊಟ್ಟಿರುವ ಸ್ವಂತ ರಚನೆಯದೊಂದು ಉದಾಹರಣವು ಹೀಗಿದೆ:-

ನನ್ನಳವು ತಿಳಿದರೂ
ನಿನ್ನ ಮುನಿಸಿರಿದರೂ
ಮೊಂಡಾಟವು ಬಿಡದಲ್ಲ

ಇದಕ್ಕೆ ವಿವರಣೆಯಾಗಿ ಅವರು ಹೇಳುವ ಮಾತುಗಳು ಇವು:– "ಕೊನೆಯ ಚರಣವನ್ನು ಏನು ಮಾಡಿದರೂ ೫ ಮಾತ್ರೆಯ ಗಣದ ಲಯಕ್ಕೆ ಹೊಂದಿಸಲು ಆಗಲಿಲ್ಲ... 'ಮೊಂಡಾಟವಣಗದಲ್ಲ' ಎಂದು ಚರಣವನ್ನು ತಿದ್ದಿದ ಮೇಲೆ ಲಯವೂ ಅರ್ಥವೂ ಹೊಂದಿಕೆಯಾದುವು" – ಈ ಸಂದರ್ಭದಲ್ಲಿಯೂ ಮೊದಲು ಆದದ್ದು ಯತಿಭಂಗವೇ ಹೊರತು ಲಯಹಾನಿಯಲ್ಲ. ತಿದ್ದಿದ ಮೇಲೆ 'ಮೊಂಡಾಟವಣಗದಲ್ಲ' ಎಂಬ ರೂಪವು ಸಾಧುವಾಗಿ ಪರಿಣಮಿಸಿದುದಕ್ಕೆ "ಸ್ವರಸಂಧ್ಯಾಪ್ತ ಸೌಂದರ್ಯಾತ್ ತದ್ಭೇದೇಪೀಷ್ಯತೇ ಕ್ವಚಿತ್" ಎಂದು ಪ್ರೋಕ್ತ–ವಾಗಿರುವ ಯತಿಲಕ್ಷಣಾನುಗುಣವಾಗಿ ಇಲ್ಲಿ ಯತಿಶುದ್ಧಿ ಬಂದೊದಗಿದುದೇ ಕಾರಣ ಹೊರತು ಲಯವು ತಿದ್ದುವುದಕ್ಕಿಂತ ಮೊದಲಾಗಲಿ ಮತ್ತಾಗಲಿ ಕೆಟ್ಟು ಹೋದದ್ದೇ ಇಲ್ಲ. ೧೪೯ನೆಯ ಪುಟದಲ್ಲಿ 'ಮೊಂಡಾಟವಣಗದಲ್ಲ' ಎಂದು ಚರಣವನ್ನು ತಿದ್ದಿದ ಮೇಲೆ 'ಲಯವೂ ಅರ್ಥವೂ ಹೊಂದಿಕೆಯಾದುವು' ಎಂದು ಹೇಳಿರುವ ಅವರು ಮುಂದೆ ೧೫೨ನೆಯ ಪುಟದಲ್ಲಿ 'ಮೊಂಡಾಟವು ಬಿಡದಲ್ಲ' ಎಂಬಲ್ಲಿ ಕೆಟ್ಟು ಹೋದ ಯತಿ "ಮೊಂಡಾಟವಣಗದಲ್ಲ" ಎಂಬು–ದರಲ್ಲಿ 'ಹೇಗೆ ಸರಿಹೋಯಿತು'? ಎಂದೂ ಹೇಳುತ್ತಾರೆ. ಹೀಗೆ ಒಮ್ಮೆ ಲಯವೆಂದುದನ್ನೇ ಇನ್ನೊಮ್ಮೆ ಯತಿಯೆಂದು ಹೇಳಿರುವುದನ್ನು ಪರಿಭಾವಿಸಿದರೆ ಲಯ ಮತ್ತು ಯತಿ ಇವುಗಳೊಳಗಿನ ವ್ಯತ್ಯಾಸವಿಷಯದಲ್ಲಿ ಅವರಿಗೆ ಗೊಂದಲವಿದ್ದಂತೆ ತೋರುತ್ತದೆ. ಇಲ್ಲಿ ತೀ.ನಂ. ಶ್ರೀ.ಯವರು ಎಡವಿರುವುದಕ್ಕೆ, ಲಯವೆಂದರೆ Rhythm ಎಂಬ ಭಾವನೆಗೆ ಅವರು ಬದ್ಧರಾಗಿದ್ದುದೇ ಕಾರಣ–ವಾಗಿದೆ. Rhythm ಎಂಬುದರಲ್ಲಿ ನಮ್ಮ ಶಾಸ್ತ್ರಗಳಲ್ಲಿ ಹೇಳಿರುವ ಲಯವೂ ಯತಿಯೂ ಎರಡೂ ಅಂತರ್ಗತವೇ ಆಗಿವೆ. ಅಲ್ಲಿ ಅವರು ಲಯವೆಂಬ ಸಂಜ್ಞೆಯ ಬದಲಾಗಿ **ಗತಿ** ಎಂಬ ಸಂಜ್ಞೆಯನ್ನು ಪ್ರಯೋಗಿಸುತ್ತಿದ್ದರೆ ಈ ಭಾಗದ ಅವರ ಪ್ರತಿಪಾದನೆ ನಿರ್ದುಷ್ಟವಾಗುತ್ತಿತ್ತು. Rhythm ಎಂಬುದರಲ್ಲಿ ಹೇಗೋ ಹಾಗೆ **ಗತಿ** ಎಂಬುದರಲ್ಲಿ ಲಯವೂ ಯತಿಯೂ ಅಡಕವಾಗುವಂಥವುಗಳಾಗಿವೆ. ಲಯಹಾನಿಯಾದರೆ ಛಂದೋಗತಿ ಕೆಡುತ್ತದೆ; ಯತಿಭಂಗವಾದರೆ ಪದಗತಿ ಕೆಡುತ್ತದೆ. 'ಪದ್ಯಗತಿ' ಎಂಬುದರಲ್ಲಿ ಛಂದೋಗತಿ ಮತ್ತು ಪದಗತಿ ಎಂಬ ಎರಡು ಗತಿಗಳೂ ಸಮಾವಿಷ್ಟವಾಗಿರುತ್ತವೆ. ಗತಿಯೆಂಬ ಪದವನ್ನು ಕೇವಲವಾಗಿ ಪ್ರಯೋಗಿಸಿದಾಗ ವಿವಕ್ಷಾನುಸಾರವಾಗಿ ಆ ಎರಡು ಗತಿಗಳ ಸಮಾವೇಶವೂ ಗಮ್ಯವಾಗಬಹುದು; ಅವೆರಡರೊಳಗೆ ಒಂದೇ ಗತಿಯೂ ಗಮ್ಯವಾಗಬಹುದು. ತಾತ್ಪರ್ಯವೆಂದರೆ, ನಮ್ಮ ಶಾಸ್ತ್ರಗಳಲ್ಲಿ ಪ್ರೋಕ್ತವಾಗಿರುವ **ಗತಿಯೆಂಬ ಸಂಜ್ಞೆಯು**

Rhythm ಎಂಬುದರ ಸಂಪೂರ್ಣವಾದ ಅರ್ಥವನ್ನು ಕೊಡಬಲ್ಲುದಾಗಿದೆ. ಈ ತಥ್ಯವನ್ನು ನನ್ನ ಪುಸ್ತಕದಲ್ಲಿ ವಿವರವಾಗಿಯೂ ಸ್ಪಷ್ಟವಾಗಿಯೂ ನಿರೂಪಿಸಿರುತ್ತೇನೆ.

ಪ್ರಸ್ತುತ ವಿಮರ್ಶಲೇಖನದ ೧೧೭-೧೧೮ನೆಯ ಪುಟಗಳಲ್ಲಿ ವಿಮರ್ಶಕರು ಮಾಡಿರುವ ವಿವಿಧ ಟೀಕೆಗಳನ್ನು ಪರಾಮರ್ಶಿಸುವಾಗ 'ಲಯ' ಮತ್ತು 'ಗತಿ' ಎಂಬ ಸಂಜ್ಞೆಗಳ ಅರ್ಥದ ವಿಷಯದಲ್ಲಿ ಅವರಿಗೆ ಸ್ಪಷ್ಟವಾದ ಕಲ್ಪನೆಯಿದ್ದಂತೆ ಕಂಡುಬರುವುದಿಲ್ಲ. ಅಲ್ಲಿ ಅವರು ಪ್ರಕಟಿಸಿದ ಅಭಿಪ್ರಾಯಗಳನ್ನು ಬಿಡಿಬಿಡಿಯಾಗಿ ಪರೀಕ್ಷಿಸದೆ ಅವರ ವಿಚಾರಸರಣಿಯಿಂದ ವ್ಯಕ್ತವಾಗುವ ಒಂದು ಮೂಲಭೂತ ದೋಷದ ಕಡೆಗೆ ವಾಚಕರ ಲಕ್ಷ್ಯವನ್ನೆಳೆದರೆ ಸಾಕಾಗುತ್ತದೆಂದು ಭಾವಿಸುತ್ತೇನೆ. ಅದೇನೆಂದರೆ – ಛಂದಸ್ ಮತ್ತು ಪದ್ಯ ಇವೆರಡೂ ಅಭಿನ್ನವೆಂಬ ಭಾವನೆ ಅವರಲ್ಲಿರುವುದು ಕಂಡುಬರುತ್ತದೆ. 'ಛಂದಃ ಪದ್ಯೇ ಚ ವೇದೇ ಚ' ಎಂಬ ಅಮರಕೋಶದ ವಾಕ್ಯದಲ್ಲಿ ಪದ್ಯಕ್ಕೆ ಛಂದಸ್ ಎಂಬ ಹೆಸರು ಸಲ್ಲುತ್ತದೆಯೆಂದು ಹೇಳಿರುವುದಾದರೂ ವೇದಕ್ಕೆ ಛಂದಸ್ ಎಂಬ ಹೆಸರು ಹೇಗೆ ಔಪಚಾರಿಕವೋ (secondary) ಹಾಗೆಯೇ ಪದ್ಯಕ್ಕೂ ಛಂದಸ್ ಎಂಬ ಹೆಸರು ಔಪಚಾರಿಕವಾಗಿ ಬಂದುದಾಗಿದೆ ಹೊರತು ಛಂದಃಶಬ್ದದ ಮುಖ್ಯಾರ್ಥವು (primary meaning) ವೇದವೆಂದೂ ಅಲ್ಲ; ಪದ್ಯವೆಂದೂ ಅಲ್ಲ. ನನ್ನ ಈ ಮಾತಿಗೆ ಆಧಾರವನ್ನು ವೇದೋಕ್ತಿಗಳಲ್ಲಿಯೇ ಕಾಣಬಹುದು. ಉದಾ:–

> ತಸ್ಮಾದ್ಯಜ್ಞಾತ್ಸರ್ವ ಹುತಃ ಋಚಃ ಸಾಮಾನಿ ಜಜ್ಞಿರೇ ।
> ಛಂದಾಂಸಿ ಜಜ್ಞಿರೇ ತಸ್ಮಾತ್ ಯಜುಸ್ತಸ್ಮಾದಜಾಯತ ।
>
> (ಪುರುಷಸೂಕ್ತ)

ಇಲ್ಲಿ ಪ್ರಯುಕ್ತವಾದ 'ಛಂದಾಂಸಿ' ಎಂಬುದು ವೇದಗಳು ಎಂಬರ್ಥವನ್ನು ಹೇಳುವುದಾಗಿರದೆ ಋಕ್ ರೂಪವಾದ ವೈದಿಕಪದ್ಯಗಳ ಪರಿಮಾಣಗಳನ್ನು ಹೇಳುವ ಸಂಜ್ಞೆಯಾಗಿದೆ. ಮತ್ತು ನಮ್ಮ ಪುರಾತನ ಛಂದೋಮೀಮಾಂಸಕರು 'ಛಂದಸ್' ಎಂಬುದಕ್ಕೆ ಹೇಳಿರುವ ಲಕ್ಷಣೋಕ್ತಿಯಾದರೂ "ಯದಕ್ಷರಪರಿ-ಮಾಣಂ ತಚ್ಛಂದಃ' ಎಂದಾಗಿದೆ. ಹೀಗಿರುವಾಗ 'ಛಂದಸ್' ಮತ್ತು 'ಪದ್ಯ' ಎಂಬಿವು ಸಂಪೂರ್ಣವಾಗಿ ಅಭಿನ್ನ ಎಂದು ಭಾವಿಸುವುದು ಸರ್ವಥಾ ಸರಿಯಲ್ಲ. ಪದ್ಯವೆಂಬುದರಲ್ಲಿ ಛಂದಸ್ ಮತ್ತು ಪದಸಮುದಾಯ ಇವೆರಡೂ ಅಡಗಿರುತ್ತದೆ. ಆದರೆ ಛಂದಸ್ ಎಂಬುದರಲ್ಲಿ 'ಪದ'ಗಳು ಅಡಕವಾಗಿರಬೇಕಾಗಿಲ್ಲ. (ಪದ-ವೆಂಬುದು ಸಾರ್ಥಕ ಶಬ್ದಗಳಿಗೆ ಮಾತ್ರ ಅನ್ವಯಿಸುವ ಸಂಜ್ಞೆ; ನಿರರ್ಥಕ ಶಬ್ದಗಳಿಗೆ ಆ ಸಂಜ್ಞೆ ಅನ್ವಯಿಸಲಾರದು. ಛಂದಸ್ ಎಂಬುದು ಶಬ್ದವಿಹೀನವಾಗಿ ಎಂದೂ ಇರಲಾರದಾದರೂ ಸಾರ್ಥಕ ಶಬ್ದಗಳಿಂದ ಅದು ಹೇಗೆ ಪ್ರಕಟವಾಗು-ತ್ತದೆಯೋ ಹಾಗೆಯೇ ನಿರರ್ಥಕ ಶಬ್ದಗಳಿಂದಲೂ ಅದು ಪ್ರಕಟವಾಗಬಲ್ಲುದು. ಈ ತಥ್ಯವನ್ನು ನನ್ನ ಪುಸ್ತಕದ ಎಂಟನೇ ಪರಿಚ್ಛೇದದಲ್ಲಿ ಕೂಲಂಕಷವಾಗಿ

ಪರಾಮರ್ಶಿಸಿ ಸೋದಾಹರಣವಾಗಿ ನಿರೂಪಿಸಿರುತ್ತೇನೆ.) ವಸ್ತುಸ್ಥಿತಿ ಹೀಗಿರುವಾಗ "ಅರ್ಥಾನುಸಾರಿಯಾಗಿ ಉಚ್ಚಾರವಾಗುವ ಮಾತ್ರಾಕಾಲಖಂಡವೆ 'ಛಂದೋಲಯ' ಎನ್ನಿಸುತ್ತದೆ" ಎಂಬೀ ವಿಮರ್ಶಕರ ಮಾತಿನಲ್ಲಿ ತಥ್ಯವೆಲ್ಲಿದೆ?

ಪದ್ಯದೊಳಗಿನ ಪದಸಮುದಾಯವನ್ನೇ ಅವರು ಛಂದಸ್ಸೆಂದು ಭಾವಿಸಿ-ಕೊಂಡುದು ಈ ಮೇಲಿನ ಅವರ ಹೇಳಿಕೆಗೆ ಹೇತು. ಮತ್ತು ಮಾತ್ರಾಸಂಖ್ಯೆ ಸಮಾನವಾಗಿ ಇಲ್ಲದಿರುವ ಬೇರೆ ಬೇರೆ ಪದಗಳ ಗುಂಫವು ಮಾತ್ರಾಸಮತೆಯೇ ಸ್ವಲಕ್ಷಣವಾಗಿರುವ ಲಯದಿಂದ ಕೂಡಿದುದೆಂದು ಹೇಳುವ ಮೂಲಕ ಲಯ ಶಬ್ದಾರ್ಥವನ್ನು ವಿಕೃತಿಗೊಳಿಸಿದುದಕ್ಕೂ ಅದುವೇ ಹೇತುವಾಗಿದೆ. ಮತ್ತು ಲಯ-ಬದ್ಧವಾಗಿರುವ ಭಾಮಿನಿ ವಾರ್ಧಕಗಳು ಸಮಗತಿಬಂಧಗಳೆಂಬುದನ್ನು ತಾವು ಒಪ್ಪುವುದಿಲ್ಲವೆಂದು ಹೇಳುವುದಕ್ಕೂ ಅವರ ಈ ಭಾವನೆಯೇ ಕಾರಣವಾಗಿದೆ. ಸಮಗತಿ ವಿಷಮಗತಿ ಎಂಬಿವು ಛಂದೋಗತಿಗೆ ಅನ್ವಯಿಸುವ ವಿಷಯಗಳಾಗಿವೆ. ಹೊರತು ಪದಪರಿಮಾಣಸಮತೆ ಹಾಗೂ ವಿಷಮತೆಗಳಿಗೆ ಸರ್ವಥಾ ಅನ್ವಯಿಸು-ವಂಥವುಗಳಲ್ಲ. [ಸಾಮಾನ್ಯವಾಗಿ ಹೇಳುವುದಾದರೆ ಸರ್ವತ್ರ ಪದಪರಿಮಾಣ-ಸಮತೆ ಎಂಬುದು ನಮ್ಮ ದೇಶದ ಭಾಷೆಗಳಲ್ಲಿ ದುರ್ಲಭ. ಉದ್ದೇಶಪೂರ್ವಕವಾಗಿ ಮಾತ್ರಾಸಮತೆಯುಳ್ಳ ಪದಗಳನ್ನೇ ಆರಿಸಿ ಹಾಗೆ ಪದ್ಯ ರಚನೆ ಮಾಡತೊಡಗಿ-ದರೂ ಅಂಥ ನಾಲ್ಕಾರು ಪದ್ಯಗಳನ್ನು ನಿರ್ಮಿಸಬಹುದೇ ಹೊರತು ನಿರರ್ಗಳ-ವಾದ ರಚನೆಯನ್ನು ಮಾಡುವುದು ಅಸಾಧ್ಯ. ಈ ವಿಷಯದಲ್ಲಿ "....ಅಂಥ ಪದವಿನ್ಯಾಸಕ್ಕಿಂತ ಬೇಸರಪಡಿಸುವುದು ಬೇರೊಂದಿಲ್ಲ" (ಸಮಾಲೋಕನ ಪು. ೧೯೦) ಎಂಬ ತೀ. ನಂ. ಶ್ರೀ.ಯವರ ನ್ಯಾಯವೇ ಆದ ಅಭಿಪ್ರಾಯವನ್ನು ವಿಮರ್ಶಕರು ಗಣನೆಗೆ ತೆಗೆದುಕೊಂಡಂತೆ ತೋರುವುದಿಲ್ಲ.]

ಇನ್ನು ಪದ್ಯದ ಪದಾಂತಗಳಲ್ಲಿ (ಅಥವಾ ವಾಕ್ಯಾಂತಗಳಲ್ಲಿ) ವಿಚ್ಛೇದ-ವಿರುವುದಾದರೆ ಅದು ಅರ್ಥಯತಿ ಎಂಬೊಂದು ಯತಿವಿಶೇಷವೆನಿಸುತ್ತದೆಂದು ಅವರ ಹೇಳಿಕೆ. ವಸ್ತುತಃ ಯತಿಯೆಂಬ ಸಂಜ್ಞೆ ಅನ್ವಯಿಸುವುದು ಪದಗಳಿಗೆ ಹೊರತು ಕೇವಲ ಅರ್ಥಕ್ಕಲ್ಲ. (ಪದವೆಂಬುದರಲ್ಲಿ ಅರ್ಥವೂ ಅಡಕವಾಗಿಯೇ ಇರುತ್ತದೆ; ನಿರರ್ಥಕವಾದ ಅಕ್ಷರಸಮುದಾಯಕ್ಕೆ ಪದವೆಂಬ ಹೆಸರು ಸಲ್ಲುವು-ದಿಲ್ಲ.) ಆದುದರಿಂದ ಅರ್ಥಯತಿಯೆಂಬ ಹೆಸರೇ ಅನುಪಯುಕ್ತವಾಗಿದೆ. ಪ್ರಸ್ತುತ ವಿಮರ್ಶಕರು ಯಾವುದನ್ನು ಅರ್ಥಯತಿಯೆಂದು ಕರೆದಿರುವರೋ ಆ ಲಕ್ಷಣ ವಿಶೇಷಕ್ಕೆ ಪದಯತಿ ಎಂಬ ಹೆಸರು (ವಾಕ್ಯಾಂತಗಳಲ್ಲಿ ವಿಚ್ಛೇದವಿರುವುದಾದರೆ ವಾಕ್ಯಯತಿ ಎಂಬ ಹೆಸರು) ಸಮುಚಿತವಾಗಿದೆ. ಮತ್ತು ನನ್ನ ಪುಸ್ತಕದಲ್ಲಿ ಹಾಗೆಯೇ ನಿರ್ದೇಶಿಸಿರುತ್ತೇನೆ. ವಿಮರ್ಶಕರ ಲಕ್ಷ್ಯವು ಆ ಕಡೆಗೆ ಬೀಳದಿದ್ದುದು ಖೇದಾಸ್ಪದ. ಸಾರಾಂಶವೇನೆಂದರೆ, ಛಂದೋಲಯ ಹಾಗೂ ಅರ್ಥಯತಿ ಎಂಬೆರಡು ನವೀನ ಪರಿಭಾಷೆಗಳೂ ನಿರರ್ಥಕಗಳೆಂಬುದರಲ್ಲಿ ಸಂದೇಹವಿಲ್ಲ. ಅಷ್ಟು ಮಾತ್ರವಲ್ಲ. ಈ ಎರಡು ಪಾರಿಭಾಷಿಕ ಸಂಜ್ಞೆಗಳೂ ಲಯ ಮತ್ತು ಯತಿ

ಎಂಬ ಸಂಜ್ಞೆಗಳಿಗೆ ಪರಂಪರಾಗತವಾಗಿ ಬಂದಿರುವ ಅರ್ಥವನ್ನು ಕೆಡಿಸು-ವಂಥವುಗಳಾಗಿವೆ. ಆದುದರಿಂದ ಅವು ತ್ಯಾಜ್ಯವೇ ಸರಿ. ಒಂದು ಹೊಸ ಪಾರಿ-ಭಾಷಿಕ ಪದವನ್ನು ನಿರ್ಮಿಸುವಾಗ, ಅದು ಆ ಶಾಸ್ತ್ರದಲ್ಲಿ ರೂಢವಾಗಿರುವ ಯಾವುದೊಂದು ಪಾರಿಭಾಷಿಕ ಶಬ್ದದ ಅರ್ಥವನ್ನೂ ಕೆಡಿಸುವಂತಿರಬಾರ-ದೆಂಬುದನ್ನು ನಾವು ಸರ್ವಥಾ ಮರೆಯಬಾರದು.

ಕನ್ನಡ ಪದಗಳಲ್ಲಿ ಆದ್ಯಕ್ಷರಗಳ ಸ್ಫುಟೀಕರಣವಿರುವುದರಿಂದ ಆಂಗ್ಲ ಭಾಷೆಯಲ್ಲಿ ಹೇಗೋ ಹಾಗೆ ಕನ್ನಡದಲ್ಲಿಯೂ accent ಎಂಬುದು ಉಂಟೆಂದು ತೀ. ನಂ. ಶ್ರೀ. ಮೊದಲಾದ ಕೆಲವರು ಮಹನೀಯರು ಹೇಳುತ್ತಾರೆ. [ತೀ. ನಂ. ಶ್ರೀ. ಯವರ ಈ ಅಭಿಪ್ರಾಯವನ್ನು ಅವಲಂಬಿಸಿದ ಪ್ರಸ್ತುತ ವಿಮರ್ಶಕರು, ತಮ್ಮ ಈ ವಿಚಾರವು ಅಪರಿಪೂರ್ಣವೆಂದು ತೀ. ನಂ. ಶ್ರೀ.ಯವರೇ ಹೇಳಿದು-ದನ್ನು (ಸಮಾಲೋಕನ – ಪು. ೧೯೦) ತಮ್ಮ ವಿಮರ್ಶೆಯಲ್ಲಿ ಉದ್ಧರಿಸುತ್ತಿದ್ದರೆ ಚೆನ್ನಾಗುತ್ತಿತ್ತು.] ಆಂಗ್ಲಭಾಷೆಯ ಆ ಲಕ್ಷಣವಿಶೇಷದಿಂದ ಅದನ್ನು ಪಡೆದ ಅಕ್ಷರವು (syllable) ಗುರುವೆನಿಸಿಕೊಳ್ಳುವಂತೆ ಕನ್ನಡ ಪದಾದಿಗಳಲ್ಲಿ ತಲೆ ದೋರುವ ಸ್ಫುಟೀಕರಣವು ಆ ಅಕ್ಷರಕ್ಕೆ ಗುರುತ್ವವನ್ನು ತರುವುದಿಲ್ಲವಾದುದರಿಂದ ಅವೆರಡೂ ಸಮಾನವಲ್ಲವೆಂಬ ತಥ್ಯವನ್ನು ನನ್ನ ಪುಸ್ತಕದ 65ನೆಯ ಟಿಪ್ಪಣಿಯಲ್ಲಿ ಸೋದಾಹರಣವಾಗಿ ನಿರೂಪಿಸಿರುತ್ತೇನೆ. ಆ ಕಡೆಗೆ ಪ್ರಸ್ತುತ ವಿಮರ್ಶಕರ ಲಕ್ಷ್ಯವು ಹೋದಂತೆ ಕಾಣುವುದಿಲ್ಲ.

ಸಂಸ್ಕೃತ ಛಂದಃಶಾಸ್ತ್ರವಿಷಯದಲ್ಲಿ ಅಗಾಧ ಪರಿಶ್ರಮವನ್ನು ಮಾಡಿ ಅಸ್ತಪ್ರಾಯವಾಗಿದ್ದ ಛಂದೋಗ್ರಂಥಗಳನ್ನು ಬೆಳಕಿಗೆ ತಂದು ಪರಮೋಪ-ಕಾರವನ್ನೇ ಮಾಡಿರುವ ಶ್ರೀ ಎಚ್. ಡಿ. ವೇಲಣಕರರು ಪಿಂಗಳನಿಂದ ನಿರ್ಮಿತ-ವಾದ ತ್ರಿಕವಿಧಾನದ ಔಚಿತ್ಯವನ್ನು ಪ್ರತಿಪಾದಿಸುವ ಸಂದರ್ಭಗಳಲ್ಲಿ – "ಮೂರು ಎಂಬ ಸಂಜ್ಞೆಗೆ ಭಾರತೀಯ ತತ್ತ್ವಜ್ಞಾನಾದಿಗಳಲ್ಲಿ (ಉದಾ:– ತ್ರಿಗುಣ, ತ್ರಿಮೂರ್ತಿ, ತ್ರಿಕಾಲ, ತ್ರಿಲೋಕ, ತ್ರಿದೋಷ, ತ್ರಿಸಂಧ್ಯಾ, ಇತ್ಯಾದಿ) ಇರುವ ಅಸಾಧಾರಣವಾದ ಸ್ಥಾನವೂ ಪಿಂಗಳನ ತ್ರಿಕವ್ಯವಸ್ಥೆಗೆ ಹೇತುವಾಗಿದ್ದಿತೆನ್ನುತ್ತಾರೆ. ಆದರೆ ಅವರ ಈ ಪ್ರತಿಪಾದನೆಯಿಂದ ತ್ರಿಕವ್ಯವಸ್ಥೆಯನ್ನು ಸಮರ್ಥಿಸುವ ಛಂದಸ್ತತ್ತ್ವವಾವುದೂ ಪ್ರಕಾಶಿತವಾಗಿಲ್ಲ" – ಎಂದು ನಾನು ಹೇಳಿರುವೆನೆಂಬ ನಿರಾಧಾರವಾದ ಆಕ್ಷೇಪವೆತ್ತಿರುವುದಕ್ಕೆ, ಈ ಮೇಲೆ ಉದ್ಧರಿಸಿದ ನನ್ನ ವಾಕ್ಯಗಳಲ್ಲಿರುವ ಪದಗಳೊಳಗೆ ಅಡಿಗೆರೆ ಹಾಕಿ ನಿರ್ದೇಶಿಸಿರುವ ಮಾತುಗಳ ಕಡೆಗೆ ಸಾಕಷ್ಟು ಲಕ್ಷ್ಯವನ್ನು ಅವರು ಕೊಡದಿದ್ದುದೇ ಕಾರಣವಾಗಿರುತ್ತದೆ. ಆದುದರಿಂದ ಮಾನ್ಯ ವಿಮರ್ಶಕರು ನನ್ನ ಪುಸ್ತಕದ 72ನೆಯ ಟಿಪ್ಪಣಿಯನ್ನು ಇನ್ನೊಮ್ಮೆ ಪರಾಮರ್ಶಿಸಿ ನೋಡಿ ಆಕ್ಷೇಪಾರ್ಹವಾದ ಮಾತು ಯಾವುದೂ ಅಲ್ಲಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕಾಗಿ ವಿಜ್ಞಾಪಿಸುತ್ತೇನೆ.

ಆದಿಕಾಲದಿಂದಲೂ ಕನ್ನಡ ಪದ್ಯಗಳ ಅನುಲ್ಲಂಘನೀಯವೆನ್ನಬಹುದಾದ ಲಕ್ಷಣವಾಗಿದ್ದ ಪಾದದ್ವಿತೀಯಾಕ್ಷರಪ್ರಾಸವೇ ಖಂಡಪ್ರಾಸವೆನಿಸಿಕೊಳ್ಳುತ್ತದೆ ಎಂಬ ನಂಬಿಕೆ ಸಾಮಾನ್ಯವಾಗಿ ರೂಢವಾಗಿದೆ. ಆದರೆ ಪಾದದ್ವಿತೀಯಾಕ್ಷರಪ್ರಾಸ-ವೆಂದರೂ ಖಂಡಪ್ರಾಸವೆಂದರೂ ಅರ್ಥವೊಂದೇ ಎಂಬ ಭಾವನೆ ಸರಿಯಲ್ಲ-ವೆಂಬ ಮತ್ತು ಪೂರ್ವಪಾದಾಂತ ಯತಿಭಂಗವಿರುವಲ್ಲಿ ಮಾತ್ರ ಉತ್ತರ ಪಾದಾದಿಯ ದ್ವಿತೀಯಾಕ್ಷರಪ್ರಾಸವು ಖಂಡಪ್ರಾಸವೆಂಬ ಹೆಸರಿಗೆ ಅರ್ಹ-ವಾಗಿದೆಯೆಂಬ ನನ್ನ ಪ್ರತಿಪಾದನೆಯನ್ನು ಮಾನ್ಯ ವಿಮರ್ಶಕರು ಪ್ರಶ್ನಿಸಿ ಹೀಗೆ ಹೇಳುತ್ತಾರೆ – "ಉತ್ತರಪಾದದ ದ್ವಿತೀಯಾಕ್ಷರ ಪ್ರಾಸವನ್ನು ನಿರ್ಧರಿಸಿರುವುದು ಪೂರ್ವಪಾದದ ದ್ವಿತೀಯಾಕ್ಷರ ತಾನೆ? ಎರಡೂ ಪಾದಗಳ ದ್ವಿತೀಯಾಕ್ಷರಗಳು ಸಮಾನಾಕ್ಷರಗಳಾಗಿರದಿದ್ದರೆ 'ಪ್ರಾಸ'ವಾದರೂ ಹೇಗೆ ಘಟಿಸುತ್ತದೆ? ಖಂಡಪ್ರಾಸಕ್ಕೆ ಪೂರ್ವೋತ್ತರ ಪಾದಗಳೆರಡೂ ಅಗತ್ಯವಾದ್ದರಿಂದ 'ಖಂಡಪ್ರಾಸ'ವನ್ನು 'ದ್ವಿತೀಯಾಕ್ಷರಪ್ರಾಸ' ಇಲ್ಲವೆ 'ಆದಿಪ್ರಾಸ' ಎನ್ನಲು ಪ್ರತ್ಯವಾಯ ಯಾವುದೂ ಇಲ್ಲ ಎಂದು ನನಗೆ ತೋರುತ್ತದೆ." ಪದವನ್ನು ಮಧ್ಯದಲ್ಲಿ ಖಂಡಿಸುವ ಕಾರಣದಿಂದಲೇ ಖಂಡಪ್ರಾಸವೆಂಬ ಹೆಸರು ಹುಟ್ಟಿತೆಂಬ ವಿಷಯದಲ್ಲಿ ನನಗೂ ಮಾನ್ಯ ವಿಮರ್ಶಕರಿಗೂ ಅಭಿಪ್ರಾಯಭೇದವಿರುವಂತಿಲ್ಲ. (ನೋಡಿ – ಕವಿ-ರಾಜಮಾರ್ಗ – ಸಂ. : ಎಂ. ವಿ. ಸೀತಾರಾಮಯ್ಯ, ಟಿಪ್ಪಣಿ, ಪು. ೧೫೧). ಆದಕಾರಣ ಯಾವ ಪ್ರಾಸವು ಪದಖಂಡನಪೂರ್ವಕವಾಗಿ ಉದ್ಭವಿಸುತ್ತದೋ ಅದು ಮಾತ್ರ 'ಖಂಡಪ್ರಾಸ'ವೆಂಬ ಹೆಸರಿಗೆ ಯೋಗ್ಯವೆಂದಾಗುತ್ತದೆ. ಪೂರ್ವ-ಪಾದಾದಿಯ ದ್ವಿತೀಯಾಕ್ಷರವು ಉತ್ತರಪಾದಾದಿಯ ದ್ವಿತೀಯಾಕ್ಷರದ ಧ್ವನಿಗೆ ಮಾತ್ರ ಕಾರಣವಾಗುತ್ತದೆ ಹೊರತು ಪೂರ್ವಪಾದಾಂತಯತಿಭಂಗಕ್ಕೆ ಕಾರಣ-ವಾಗುವುದಿಲ್ಲವಷ್ಟೆ. ಆದುದರಿಂದ, ಪದವಿಭಾಜಕವಾದ ಖಂಡಪ್ರಾಸತ್ವಕ್ಕೆ ಪೂರ್ವ-ಪದಾದಿಯ ಪ್ರಾಸವು ಹೇಗೆ ಕಾರಣವಾಗುವುದೋ ನನಗರಿಯದು.

ಪಾದದ್ವಿತೀಯಾಕ್ಷರ ಪ್ರಾಸಗಳೆಲ್ಲವನ್ನೂ ಖಂಡಪ್ರಾಸಗಳೆಂದು ಹೇಳ ತೊಡಗಿದರೆ, ಪದ್ಯದ ನಾಲ್ಕು ಪಾದಗಳೊಳಗೆ ಯಾವುದೊಂದರಲ್ಲಿಯೂ ಪದಖಂಡನಪೂರ್ವಕವಾದ ಪ್ರಾಸವಿಲ್ಲದಿರುವ ಸಂದರ್ಭದಲ್ಲಿ ಆ ಪದ್ಯದ ಪ್ರಾಸಗಳನ್ನೂ ಖಂಡಪ್ರಾಸಗಳೆಂದು ಹೇಳುವ ಅನರ್ಥಕ ಪ್ರಸಂಗವೊದಗುತ್ತದೆ. ಉದಾ:-

ಕೆಲವಂ ಬಲ್ಲವರಿಂದೆ ಕಲ್ತು ಕೆಲವಂ ಗ್ರಂಥಗಳಿಂದೋದುತಂ
ಕೆಲವಂ ಮಾಳ್ಪವರಿಂದೆ ಕಂಡು ಕೆಲವಂ ಸ್ವಜ್ಞಾನದಿಂ ನೋಡುತಂ
ಕೆಲವಂ ಸಜ್ಜನಸಂಗದಿಂದರಿಯುತಂ ಸರ್ವಜ್ಞನಪ್ಪಂ ನರಂ
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀಚೆನ್ನಸೋಮೇಶ್ವರಾ

ಇಂತಹ ಪದ್ಯಗಳಲ್ಲಿ ಕಾಣಿಸಿಕೊಳ್ಳುವ ಪಾದದ್ವಿತಿಯಾಕ್ಷರಪ್ರಾಸಗಳನ್ನು ಖಂಡಪ್ರಾಸಗಳೆಂದು ಹೇಳುವುದರಲ್ಲಿ ಔಚಿತ್ಯಲೇಶವಾದರೂ ಇದೆಯೆ? ಹಾಗೆ

ಹೇಳಿದರೆ ಖಂಡಪ್ರಾಸವೆಂಬ ಶಬ್ದಕ್ಕೆ ಅರ್ಥವೇ ಇಲ್ಲವಾಗುತ್ತದೆಂಬುದರಲ್ಲಿ ಸಂದೇಹವಿಲ್ಲ.

ವಸ್ತುಸ್ಥಿತಿಯೇನೆಂದರೆ, ಕವಿರಾಜಮಾರ್ಗದಲ್ಲಿ ಖಂಡಪ್ರಾಸವೆಂಬ ಸಂಜ್ಞೆ ಬಂದಿರುವುದು ಪ್ರಾಸವಿಚಾರ ಪ್ರಕರಣದಲ್ಲಲ್ಲವೆಂಬುದನ್ನಾಗಲಿ, ಅದು ಯತಿವಿಚಾರ ಪ್ರಕರಣಮಧ್ಯದಲ್ಲಿ ಬಂದುದೆಂಬುದನ್ನಾಗಲಿ, ಕೇವಲ ದ್ವಿತೀಯಾ-ಕ್ಷರಪ್ರಾಸವನ್ನು ಹೆಸರಿಸುವ ಸಂದರ್ಭಗಳಲ್ಲೆಲ್ಲ ಮಾರ್ಗಕಾರನು 'ಖಂಡ' ಎಂಬ ಪೂರ್ವಪದವಿಲ್ಲದೆ **'ಪ್ರಾಸ'** ಎಂದಿಷ್ಟೇ ಹೇಳಿರುವನೆಂಬುದನ್ನಾಗಿ (ಉದಾ:- "ನುತಶಬ್ದಾಳಂಕಾರದೊಳತಿಶಯಮದು ಕನ್ನಡಕ್ಕೆ ಸತತಂ **ಪ್ರಾಸಂ**', '**ಪ್ರಾಸಾ**ನು ಪ್ರಾಸಾಂತ್ಯಪ್ರಾಸಂಗಳ್ ಮೂರುಮತಿಶಯಂಗಳ್") ಗಣನೆಗೆ ತೆಗೆದುಕೊಳ್ಳದೆ ಈ ಶತಮಾನದ ಪೂರ್ವಭಾಗದಲ್ಲಿ ವಿದ್ವಾಂಸರನೇಕರು ಖಂಡಪ್ರಾಸವೆಂಬ ಮಾತು ಬಂದಿರುವ ಪದ್ಯದ 'ನಿಜಿಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್' – ಎಂಬಿಷ್ಟೇ ಮಾತನ್ನು ಪ್ರತ್ಯೇಕಿಸಿಕೊಂಡು ತಾತ್ಪರ್ಯವನ್ನು ಗ್ರಹಿಸುವ ಪ್ರಯತ್ನವನ್ನು ಮಾಡಿದ ಫಲವಾಗಿ ಪಾದದ್ವಿತೀಯಾಕ್ಷರಪ್ರಾಸರಚನೆಯು ಸುಕರ-ವಾಗುವ ಉದ್ದೇಶದಿಂದ ಪೂರ್ವಕವಿಗಳು ಪಾದಾಂತಗಳಲ್ಲಿ ಯತಿಭಂಗವನ್ನು ಮಾಡುವ ರೂಢಿಯನ್ನು ಮಾಡಿಕೊಂಡರು ಎಂಬ ಅಭಿಪ್ರಾಯವು ಹಬ್ಬಿದುದ-ರಿಂದ ಖಂಡಪ್ರಾಸವೆಂದರೆ ಪಾದದ್ವಿತೀಯಾಕ್ಷರಪ್ರಾಸ ಎಂಬ ಭಾವನೆ ಎಲ್ಲರಲ್ಲಿಯೂ ನೆಲೆಗೊಳ್ಳುವಂತಾಯಿತು. ಆ ಭಾವನೆ ಎಷ್ಟರಮಟ್ಟಿಗೆ ರೂಢ-ಮೂಲವಾಗಿದೆಯೆಂದರೆ – ಖಂಡಪ್ರಾಸವೆಂಬ ಪದ ಪ್ರಯುಕ್ತವಾಗಿರುವ ಕವಿರಾಜಮಾರ್ಗದ ಆ ಪದ್ಯವನ್ನು ನಾನು 'ಅತ್ಯಂತ ಸಮರ್ಥವಾಗಿ' ವ್ಯಾಖ್ಯಾನಿಸಿರುವೆನೆಂದು ಮಾನ್ಯ ವಿಮರ್ಶಕರು ಒಪ್ಪಿಕೊಂಡಿರುವರಾದರೂ ಅವರ ಭಾವನೆಯಿಂದಲೂ ಸಂಪೂರ್ಣವಾಗಿ ತೊಲಗಿರುವುದಿಲ್ಲವೆಂಬುದಕ್ಕೆ ಅವರು ಮಾಡಿರುವ ಈ ಮೇಲಿನ ಪ್ರತಿಪಾದನೆಯು ಸಾಕ್ಷ್ಯವಾಗಿದೆ.

ಪ್ರಾಸವೆಂಬುದು ಶಬ್ದಾಲಂಕಾರವೇನೋ ನಿಜ. ಆದರೆ ಕನ್ನಡದಲ್ಲಿ ರೂಢವಾಗಿದ್ದ ಪಾದದ್ವಿತೀಯಾಕ್ಷರಪ್ರಾಸವು ಕೇವಲ ಶಬ್ದಾಲಂಕಾರವಾಗಿ ಉಳಿ-ಯದೆ ಛಂದಸ್ಸಿನ ಕ್ಷೇತ್ರವನ್ನು ಈಷತ್ ಪ್ರವೇಶಿಸಿ ಪಾದಾದಿಗಳ ಛಂದೋ ರೂಪವನ್ನು ಒಂದಿಷ್ಟು ನಿಯಂತ್ರಿಸುವಂತಹದಾಗಿದೆ – ಎಂದು ನಾನು ಮಾಡಿದ ಪ್ರತಿಪಾದನೆಯನ್ನು ಮಾನ್ಯ ವಿಮರ್ಶಕರು ಆಕ್ಷೇಪಿಸಿ ಪಾದಾದಿಯ ಛಂದೋ ರೂಪವೇ ಪ್ರಾಸವನ್ನು ನಿಯಂತ್ರಿಸುವುದೆಂದು ಹೇಳುತ್ತಾರೆ; ಮತ್ತು 'ಕನ್ನಡ ಕಾವ್ಯಗಳಲ್ಲಿ ಬಳಕೆಯಾಗಿರುವ ಯಾವುದೇ ಛಂದೋಬಂಧದ ಪಾದಾದಿಯ ಗಣದ ಛಂದೋವಿನ್ಯಾಸ (ಗುರುಲಘುಸ್ಥಾನಗಳು) ಪೂರ್ವನಿಶ್ಚಿತ' ಎಂದೂ ಹೇಳುತ್ತಾರೆ; ಅವರ ಈ ಮಾತುಗಳು ಗುರುಲಘುಸ್ಥಿರವಾದ ವೃತ್ತಗಳಿಗೆ ಮಾತ್ರ ಅನ್ವಯಿಸಬಲ್ಲವು; ಮಾತ್ರಾಬಂಧಗಳಿಗೆ ಅನ್ವಯಿಸಲಾರವು. ಆದಿಪ್ರಾಸರಹಿತವಾಗಿ ರಚಿತವಾದ ಪದ್ಯರಾಶಿಯಲ್ಲಿ ನನ್ನ ಮಾತಿಗೆ ಉದಾಹರಣಗಳು ಧಾರಾಳವಾಗಿ

ದೊರೆಯುತ್ತವೆ. ಈ ಶತಮಾನದ ಕನ್ನಡ ಪದ್ಯಗಳಲ್ಲಿ ಮಾತ್ರವಲ್ಲ, ಪುರಾತನ ಪದ್ಯಗಳಲ್ಲಿಯೂ ಇದಕ್ಕೆ ಉದಾಹರಣಗಳು ದೊರೆಯುತ್ತದೆ.

ಉದಾ:–

ಎಯ್ದುವುದುಂ ತತ್ಪುರದುಪವನಂಗ
ಳವಿರಳ ಮಲಯಾನಿಲ ಕಂಪಿತಂಗ....

(ಪಂಪ ಭಾರತ)

ಕವಿಗೆ ಇಲ್ಲಿ ಆದಿಪ್ರಾಸವನ್ನಿಡುವ ಬಯಕೆಯಿರುತ್ತಿದ್ದರೆ ಇಲ್ಲಿ ಉದಾಹರಿಸಿರುವ ಪೂರ್ವೋತ್ತರ ಪಾದಗಳ ಆದಿಯ ಛಂದೋವಿನ್ಯಾಸವು ಬೇರೆ ಬೇರಾಗುತ್ತಿತ್ತೆ? ಮಾನ್ಯ ವಿಮರ್ಶಕರು ಪರಿಭಾವಿಸಲಿ. ಆದುದರಿಂದ ಪ್ರಾಸವೇ ಪಾದಾದಿಯ ಛಂದೋವಿನ್ಯಾಸವನ್ನು ನಿಯಂತ್ರಿಸುವಂತಹದಾಗಿದೆ ಎಂಬ ನನ್ನ ಮಾತಿಗೆ ಚ್ಯುತಿಯೆಲ್ಲಿ? ಆದಿಪ್ರಾಸವನ್ನು ದೂರೀಕರಿಸಿದ ಈ ಶತಮಾನದ ರಚನೆಗಳಲ್ಲಂತೂ ಪೂರ್ವೋತ್ತರ ಪಾದಗಳ ಆದಿಯ ಛಂದೋವಿನ್ಯಾಸಗಳ ವ್ಯತ್ಯಾಸವು ಬೇಕುಬೇಕಾದಲ್ಲಿ ದೃಷ್ಟಿಗೋಚರವಾಗುವಂತಹದಾಗಿದೆ. ಪ್ರಖ್ಯಾತರೇ ಆದ ಕವಿಗಳ ರಚನೆಗಳಿಂದ ಒಂದೆರಡು ಉದಾಹರಣಗಳನ್ನು ಇಲ್ಲಿ ಕೊಡುತ್ತೇನೆ.

(1) ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೆ
ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೆ

(ಗೋವಿಂದ ಪೈ)

(೨) ಶೃಂಗಾರವಲ್ಲರಿಯೆ ಲತೆಯೊಡನೆ ಬಳುಕಿ ನೀಂ
ನೃತ್ಯಲಾಸ್ಯದಿನಾರನೊಲಿಸುತಿರುವೆ
ಮಾಧುರ್ಯಮಂಜೂಷೆ ಮಧುರತರ ಮೌನದಿಂದಾರ ಚರಿತೆಗಳ
ಶ್ರುತಿಗೊರೆಯುತಿರುವೆ
ಮುಗ್ಧಮೋಹನವದನೆ ಮುಕುರದೊಳ್ ನೋಡಿ ನೀನಾರ ನೆನೆದಿಂತು
ನಸುನಗುತಲಿರುವೆ
ಪ್ರಣಯ ಪ್ರರೋಹೆ ನೀಂ ಪ್ರಿಯತರಾಕೃತಿಯಿಂದೆ
ರುಷೆಯನಿಂತಾರೊಳಭಿನಯಿಸುತಿರುವೆ

(ಡಿ.ವಿ.ಜಿ.)

ಇಲ್ಲಿ ಉದಾಹರಿಸಿದ ಸಂದರ್ಭಗಳಲ್ಲಿ ಪ್ರಾಸಾಪೇಕ್ಷೆಯಿಲ್ಲದಿರುವುದರಿಂದಲೇ ಪಾದಾದಿಯ ಛಂದೋವಿನ್ಯಾಸಗಳು ಭಿನ್ನರೂಪಗಳನ್ನು ತಳೆದುವೆಂಬುದರಲ್ಲಿ ಸಂದೇಹವುಂಟೆ?

ಮಾನ್ಯ ವಿಮರ್ಶಕರು ಎತ್ತಿರುವ ಆಕ್ಷೇಪಗಳಲ್ಲಿ ಕೆಲವಕ್ಕೆ ಸಮಾಧಾನ ಕೊಡುವ ಪ್ರಯತ್ನವನ್ನು ಇಷ್ಟರವರೆಗೆ ಮಾಡಿದ್ದಾಯಿತು. ಅವರು ಎತ್ತಿದ ಆಕ್ಷೇಪಗಳು ಇವಿಷ್ಟೇ ಅಲ್ಲ; ಇನ್ನೂ ಕೆಲವು ಇವೆ. ಅವುಗಳನ್ನು ನಿರಾಕರಿಸುವ ಪ್ರಯತ್ನವನ್ನು ನಾನಿಲ್ಲಿ ಮಾಡದಿರುವ ಕಾರಣ ಆ ಆಕ್ಷೇಪಗಳನ್ನು ನಾನು ಒಪ್ಪಿಕೊಂಡಿರುವೆನೆಂದು ಯಾರೂ ಭಾವಿಸಬಾರದು. ಅವರು ಎತ್ತಿರುವ ಆಕ್ಷೇಪಗಳಲ್ಲಿ ಮುಖ್ಯವಾದುವುಗಳನ್ನು ಮಾತ್ರ ಇಲ್ಲಿ ಆರಿಸಿಕೊಂಡು ಉಳಿದವುಗಳು ಅಮುಖ್ಯವೆಂದು ಭಾವಿಸಿ ಅವುಗಳನ್ನು ಕಡೆಗಣಿಸಿದ್ದೇನೆ.[1]



1. ಶ್ರೀಮಾನ್ ಸೀತಾರಾಮಯ್ಯನವರು ಅತ್ಯಂತ ಗೌರವಾನ್ವಿತರೂ ಸಾತ್ತ್ವಿಕರೂ ಆದ ನನ್ನ ವಿದ್ವನ್ಮಿತ್ರರು. ನನ್ನ ಪುಸ್ತಕವನ್ನು ಆದರಪೂರ್ವಕವಾಗಿ ವಿಮರ್ಶಿಸಿ ಉಪಕರಿಸಿದ ಅವರ ಅಭಿಪ್ರಾಯಗಳಿಗೆ ಸಮಾಧಾನ ಹೇಳುವ ಪ್ರಸಂಗವು ನನಗೆ ಬಂದೊದಗಿರುವುದು ಒಂದು ಸಂತೋಷದ ವಿಷಯವೇನೂ ಅಲ್ಲ; ಆದರೆ ಶಾಸ್ತ್ರತತ್ತ್ವವಿಚಾರಗಳಲ್ಲಿ ಮಿತ್ರತ್ವ ವ್ಯಕ್ತಿ ಮಹತ್ತ್ವಾದಿಗಳ ಮೋಹಗಳು ಗಣನೀಯವಲ್ಲವೆಂಬ ಅಭಿಪ್ರಾಯವುಳ್ಳವನು ನಾನಾಗಿರುವುದರಿಂದ ಅವಾವುವುಗಳನ್ನೂ ಲೆಕ್ಕಿಸದೆ ನಿರ್ವಿಕಾರಬುದ್ಧಿಯಿಂದ ನನ್ನ ಮಿತ್ರರ ಆಕ್ಷೇಪಗಳಿಗೆ ಸಮಾಧಾನಗಳನ್ನು ಹೇಳುವ ಪ್ರಯತ್ನ ಮಾಡಿದ್ದೇನೆ. ಮಾನ್ಯ ವಿಮರ್ಶಕರು ಮತ್ತು 'ಕರ್ಣಾಟಕ ಲೋಚನ'ದ ವಾಚಕರು ಸಹ ಈ ಬಗೆಯಾಗಿಯೇ ನನ್ನ ಮಾತುಗಳನ್ನು ಅವಲೋಕಿಸಬೇಕೆಂದು ಪ್ರಾರ್ಥಿಸುತ್ತೇನೆ.

೩

# ಛಂದಃಶಾಸ್ತ್ರಕ್ಕೆ ಒಂದು ಅಮೂಲ್ಯ ಕೊಡುಗೆ*

– ಡಾ। ಉಪ್ಪಂಗಳ ರಾಮ ಭಟ್ಟ

ಈ ಶತಮಾನದ ಆದಿಯಿಂದಲೇ ಸಂಶೋಧನೆ ಗ್ರಂಥರಚನೆಗಳಲ್ಲಿ ನಿರಂತರವಾಗಿ ತಮ್ಮನ್ನು ತೊಡಗಿಸಿಕೊಂಡ ಕೆಲವೇ ಕನ್ನಡ ವಿದ್ವಾಂಸರಲ್ಲೊಬ್ಬ–ರಾದ ಶ್ರೀ ಸೇಡಿಯಾಪು ಕೃಷ್ಣ ಭಟ್ಟರು ತಾವೇ ಹೇಳಿಕೊಂಡಂತೆ 'ಹೆಚ್ಚು ಬರೆದವರಲ್ಲ'ವಾದರೂ ಬರೆದಷ್ಟು ಗಟ್ಟಿ ಕಾಳೆಂಬುದರಲ್ಲಿ ಎರಡು ಮಾತಿಲ್ಲ. ಒಂಬತ್ತನೇ ದಶಕದ ವಯೋಮಾನಕ್ಕೆ ಹತ್ತಿರವಾಗಿ ಆರೋಗ್ಯ ಕಡಿಮೆಯಾಗಿ ದೃಷ್ಟಿ ಕಳೆದುಕೊಂಡರೂ ಜ್ಞಾನವೃದ್ಧರಾದ ಅವರು ಇತರರಿಗೆ ದೃಷ್ಟಿ ನೀಡಬಲ್ಲವರೆಂಬುದು ಅವರ ಗ್ರಂಥಗಳ ಅಧ್ಯಯನದಿಂದ ಪ್ರಮಾಣಿತವಾಗುತ್ತದೆ.

ವ್ಯಾಕರಣ ಛಂದಸ್ಸು ಮೊದಲಾದ ಶಾಸ್ತ್ರವಿಷಯಗಳು 'ಕಲಿತು ಮರೆವುದಕೆ' ಎಂದು ಹಿರಿಯ ವಿದ್ವಾಂಸರೇ ಒಬ್ಬರು ಹೇಳಿದ್ದರೂ ಅವುಗಳಲ್ಲೇ ತಮ್ಮನ್ನು ತೊಡಗಿಸಿಕೊಂಡು ಮೌಲಿಕ ವಿಚಾರಗಳನ್ನು ಹೊರಗೆಡಹಿದವರು ಅವರು.

ಛಂದಃಶಾಸ್ತ್ರಕ್ಕೆ ಸಂಬಂಧಿಸಿದ 'ಛಂದೋಗತಿ' ಎಂಬ ಗ್ರಂಥ ೧೯೮೫ರಲ್ಲಿ ಅವರ ಅಪರವಯಸ್ಸಿನಲ್ಲಿ ಅನಾರೋಗ್ಯದ ಸ್ಥಿತಿಯಲ್ಲೇ ಪ್ರಕಟವಾದರೂ ಈ ಶಾಸ್ತ್ರದ ಚಿಂತನೆಯನ್ನು ಬಿಡದೆ ಮತ್ತೆ ೧೯೮೮ರ ಕೊನೆಯಲ್ಲಿ 'ಕನ್ನಡ ಛಂದಸ್ಸು' ಎಂಬ ಈ ಗ್ರಂಥವನ್ನು ಪ್ರಕಟಿಸಿದ್ದಾರೆ. ವಯಸ್ಸಿನೊಂದಿಗೆ ಅವರ ಚಿಂತನೆ ಜ್ಞಾನಗಳ ಪರಿಪಕ್ವತೆ ಇಲ್ಲಿ ವ್ಯಕ್ತವಾಗಿದೆ. ಅವರು ಇದರ ಮುನ್ನುಡಿಯಲ್ಲಿ ಹೇಳಿಕೊಂಡಂತೆ '೧೯೩೨ರಲ್ಲಿ ಮಡಿಕೇರಿಯಲ್ಲಿ ಜರಗಿದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಸ್ತುತಪಡಿಸಿದ ಪ್ರಬಂಧ – ಅದರ ಪೂರ್ಣರೂಪವನ್ನು ಇಲ್ಲಿ ಅಳವಡಿಸಿಕೊಳ್ಳದೆ ಈಗಲೂ ಇನ್ನು ಮುಂದೆಯೂ ವಾಚನೀಯವಾಗಬಹುದಾದ ಭಾಗವನ್ನು ಮಾತ್ರ ಈ ಪ್ರಕಟಣೆಯಲ್ಲಿ ಉಳಿಸಿಕೊಂಡು ಅವಶ್ಯವಿದ್ದಲ್ಲೆಲ್ಲಾ ಟಿಪ್ಪಣಿಗಳನ್ನು ಹೊಸತಾಗಿ ಸೇರಿಸಿ ಪರಿಶಿಷ್ಟ ರೂಪದಲ್ಲಿ ಕೆಲವು ವಿಚಾರಗಳನ್ನು ಪ್ರಕಟಿಸಲಾಗಿದೆ.' ಇದನ್ನು ಒಂದು ರೀತಿಯಲ್ಲಿ 'ಛಂದೋಗತಿ'ಯ ಮುಂದು–ವರಿಸಿದ ರೂಪವೆನ್ನಬಹುದು. ಅದರಲ್ಲಿ ಚರ್ಚಿತವಾದ 'ಲಯ, ಗತಿ' ಮೊದಲಾದ ವಿಷಯಗಳ ಬಗೆಗೆ ಇನ್ನೂ ಹೆಚ್ಚಿನ ವಿಚಾರಗಳನ್ನಿಲ್ಲಿ ಸೇರಿಸಲಾಗಿದೆ.

ಈ ಗ್ರಂಥವನ್ನು ಪೂರ್ವಭಾಗ, ಉತ್ತರಭಾಗ ಎಂದು ವಿಭಾಗಿಸಿ ನಾಲ್ಕು ಪರಿಶಿಷ್ಟಗಳು ನಾಲ್ಕು ಅನುಬಂಧಗಳಲ್ಲದೆ ಇನ್ನೊಂದು ಅವಶಿಷ್ಟದ ನಂತರ ಶುದ್ಧಿ

---

* ೧೮-೬-೧೯೮೯ರ ಉದಯವಾಣಿ ಪತ್ರಿಕೆಯಲ್ಲಿ 'ಕನ್ನಡ ಛಂದಸ್ಸು' ಕೃತಿಯ ಪುಸ್ತಕ ವಿಮರ್ಶೆಯ ರೂಪದಲ್ಲಿ ಪ್ರಕಟಿತ ಲೇಖನ – ಸಂ.

ಪತ್ರವನ್ನೂ ಕೊಡಲಾಗಿದೆ. ಪೂರ್ವಭಾಗದಲ್ಲಿ ಪದ್ಯದ ಸ್ವರೂಪ, ವೈಶಿಷ್ಟ್ಯ, ಛಂದಸ್, ಜಾತಿ ಶಬ್ದಗಳ ಹೆಚ್ಚಿನ ವಿವರ ನೀಡಲಾಗಿದೆ. ಈ ಕುರಿತು 'ಛಂದೋಗತಿ' ಎಂಬ ಮೊದಲಿನ ಗ್ರಂಥದಲ್ಲೇ ಅವರು ವಿವೇಚಿಸಿದ್ದರು. 'ಕರ್ಣಾಟಕ ವಿಷಯಜಾತಿ'ಯಲ್ಲಿ ಸೇರಿದವು ಅಚ್ಚಗನ್ನಡ ಛಂದಸ್ಸುಗಳು ಎಂದು ಪ್ರತಿಪಾದನೆ ಮಾಡುತ್ತಾ "ಕನ್ನಡಿಗರ ಮೋರೆಯಲ್ಲಿ ಹೇಗೆ ಸ್ವಾಭಾವಿಕವಾಗಿ, ತಾನಾಗಿ ಮೀಸೆ ಮೊಳೆಯಿತೋ ಹಾಗೆಯೇ ಕನ್ನಡನುಡಿಯಲ್ಲಿ ಕನ್ನಡಜಾತಿಗಳು ಹುಟ್ಟಿದವು" (ಪುಟ ೧೯) ಎಂದು ಸಾಧಿಸಿದ್ದಾರೆ.

ಉತ್ತರಭಾಗದಲ್ಲಿ ಕರ್ಣಾಟಕ ವಿಷಯಜಾತಿಯ ಹತ್ತು ಪ್ರಭೇದಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ನಿರೂಪಿಸಲಾಗಿದೆ. ಇವುಗಳಲ್ಲಿ ಒಂದೆರಡು ಹೊರತಾಗಿ ಎಲ್ಲಾ ಹೆಸರುಗಳ –ಅಕ್ಕರ, ಗೀತಿಕೆ, ಏಳೆ, ತ್ರಿಪದಿ, ಛಂದೋವತಂಸ, ಸಾಂಗತ್ಯ ಮೊದಲಾದವುಗಳ ಮತ್ತು ರೂಪಗಳ ವಿವೇಚನೆಯಿದೆ. ತ್ರಿಪದಿಗೆ ನಾಲ್ಕು ಪಾದಗಳೇ ಮೂರು ಪಾದಗಳೇ ಎಂದು ಚರ್ಚಿಸಿ ಎರಡನೆಯ ಪಾದದ ಪುನರಾವರ್ತನೆಯ ಹಾಡಿಕೆಯ ಕ್ರಮವನ್ನು ಹೇಳಲಾಗಿದೆ. ಕಪ್ಪೆ ಅರಭಟ್ಟನಲ್ಲ, ಆರಭಟ (ಶೂರ) ಇರಬೇಕೆಂದು ಸೂಚಿಸಿ ಆ ಶಾಸನಗಳ ತ್ರಿಪದಿಗಳನ್ನು ಅರ್ಥ ಸರಿಹೊಂದುವಂತೆ ಪರಿಷ್ಕರಿಸಲಾಗಿದೆ. 'ಬಾಧಿಪ್ಪ ಕಲಿಗೆ ವಿಪರೀತನ್, ಕಲಿಯುಗ ಮಧವನೀತನ್' ಎಂಬ ಪರಿಷ್ಕರಣದಲ್ಲಿ ಶಾಸನದ ಒಂದು ಶಬ್ದವನ್ನೇ ಹಿಂದು ಮುಂದು ಮಾಡಬೇಕಾಗುವುದರಿಂದ ಚಿಂತನೀಯ. ಪ್ರೊ । ಜಿ. ವೆಂಕಟ–ಸುಬ್ಬಯ್ಯನವರು ಇದೇ ಪದ್ಯಕ್ಕೆ ಬರೆದ ಟಿಪ್ಪಣಿ 'ಕಲಿಯುಗವಿಪರೀತನಲ್ಲ, ಕೇವಲ ಯುಗವಿಪರೀತ' (ಸಾಧನೆ – ಸಂಪುಟ ೭, ಸಂಚಿಕೆ ೪, ಅಕ್ಟೋಬರ್ ಡಿಸೆಂಬರ್ ೧೯೭೮) ಎಂಬುದು ಸೂಕ್ತವೆನಿಸುತ್ತದೆ. ತ್ರಿಪದಿ ಅಂಶಗಣ ಬಂಧವಾದರೆ ತ್ರಿವಿಧಿ ಮಾತ್ರಾಬಂಧ. ತ್ರಿಪದಿ ತ್ರಿವಿಧಿ ಎರಡೂ ಬಸವಣ್ಣನ ಕಾಲದಲ್ಲೇ ಇದ್ದುವು. ತ್ರಿಪದಿಯು ಬರಬರುತ್ತಾ ಮಾತ್ರಾಬಂಧವಾದುದಲ್ಲ. ತತ್ತ್ವಪ್ರತಿಪಾದನೆಯೇ ತ್ರಿವಿಧಿಯ ಉದ್ದೇಶ ಎಂದು ಸಾಧಿಸಲಾಗಿದೆ. ಈ ವರೆಗೆ ಅಂಶಗಣ ತ್ರಿಪದಿಯೇ ಮಾತ್ರಾತ್ರಿಪದಿಯಾಯಿತೆಂದು ವಿದ್ವಾಂಸರು ತಿಳಿದುಕೊಂಡಿದ್ದರು. ಅದನ್ನಿಲ್ಲಿ ಖಂಡಿಸಲಾಗಿದೆ. ಮಾತ್ರಾಗಣ ಷಟ್ಪದಿಗೆ ತ್ರಿಮೂರ್ತಿಗಣವೇ ಮೂಲ (ಪುಟ ೫೦), 'ರಘಟಾ' ಎಂದರೆ ರಗಣಘಟಿತವಾದ ಗೀತವೆಂದೇ ಅರ್ಥ (ಪುಟ ೫೨). ಯತಿಯೆಂಬುದು ಉಸಿರ್ವ ತಾಣ (ನಿರ್ದೇಶಿಸಲ್ಪಡುವ ಸ್ಥಾನ: ಶ್ಲೋಕೇಷು ನಿಯತಸ್ಥಾನಂ ಪದಚ್ಛೇದಂ ಯತಿಂ ವಿದುಃ – ದಂಡಿ) ಉಸಿರು ಬಿಡುವ ಸ್ಥಾನವಲ್ಲ (ಪುಟ ೫೯) ಇತ್ಯಾದಿ ಮಹತ್ತ್ವದ ವಿಚಾರಗಳನ್ನು ಪ್ರತಿಪಾದಿಸಿದೆ.

'ಸಾಂಗತ್ಯ' ಎಂಬ ಶಬ್ದಕ್ಕೆ ಒಡಗೂಡಿರುವಿಕೆ ಎಂದು ಅರ್ಥ..... ಎರಡು ಏಳೆಗಳ ಒಕ್ಕೂಟ ಎಂಬ ಕಾರಣದಿಂದ ಇದಕ್ಕೆ ಈ ಹೆಸರು ಬಂದಿರಬೇಕೆಂದು ತೋರುತ್ತದೆ (ಪುಟ ೧೨೬) ಎಂದು ಊಹಿಸುವಾಗ ಇವುಗಳೆರಡರ ಲಕ್ಷಣ–ಗಳಲ್ಲಿರುವ ಅಲ್ಪ ವ್ಯತ್ಯಾಸವನ್ನೂ ಗುರುತಿಸಲಾಗಿದೆ. 'ಯತಿವಿಲಂಘನ' ಕನ್ನಡದ

ವೈಶಿಷ್ಟ್ಯವೆಂದು ವೈಯಾಕರಣ ಹೇಳಿದರೆ ಇಲ್ಲಿ 'ಕನ್ನಡಕ್ಕೆ ಯತಿ ಬೇಡವೆಂಬ ಮಾತಿನಲ್ಲಿ ಹುರುಳಿಲ್ಲ' (ಪುಟ ೭) ಎಂದು ನಿರ್ಧರಿಸಿದೆ.

ಮೊದಲು ಹೇಳಲು ಬಿಟ್ಟ ಕೆಲವು ವಿಚಾರಗಳನ್ನು ಪರಿಶಿಷ್ಟ ಅನುಬಂಧ-ಗಳಲ್ಲಿ ಹೇಳಿದೆ.

ಪರಿಶಿಷ್ಟ ೧ರಲ್ಲಿ ಯತಿಭಂಗ ಗಣಭಂಗಗಳ ವಿಚಾರ; ಪರಿಶಿಷ್ಟ ೨ರಲ್ಲಿ ಹಳೆಹಾಡುಗಳಲ್ಲಿ ತ್ರಿಮೂರ್ತಿಗಣಗಳ ಅಸ್ತಿತ್ವ; ಪರಿಶಿಷ್ಟ ೩ರಲ್ಲಿ ಈಗಿನ ಸರಳ ರಗಳೆ (Biankverse), ಪ್ರಾಸರಹಿತವಾದ ಲಲಿತರಗಳೆಯೇ, ಇದನ್ನು ಹತ್ತೊಂ-ಬತ್ತನೆಯ ಶತಮಾನದ ಪೂರ್ವಾರ್ಧದಲ್ಲೇ ಯಾದವ ಕವಿ 'ಕಲಾವತೀ ಪರಿಣಯ' ಎಂಬ ತನ್ನ ಕೃತಿಯಲ್ಲಿ ಪ್ರಯೋಗಿಸಿದ್ದಾನೆ ಎಂಬ ವಿಚಾರ; ಪರಿಶಿಷ್ಟ ೪ರಲ್ಲಿ ಲಯ, ಗತಿ, ರಿದಂಗಳ ವಿಚಾರಗಳಿವೆ.

ಅನುಬಂಧ ೧ರಲ್ಲಿ ಅಕ್ಕರ ಮತ್ತು ವರ್ಣಗಳ ವಿವೇಚನೆ, ಅನುಬಂಧ ೨ರಲ್ಲಿ ತ್ರಿಪದಿಯ ಲಕ್ಷಣ-ಪ್ರಭೇದಗಳು, ಅನುಬಂಧ ೩ರಲ್ಲಿ ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ, ಅನುಬಂಧ ೪ರಲ್ಲಿ ಛಂದೋವತಂಸದ ವಿವೇಚನಗಳಿವೆ. ಕೊನೆಯ ಅವಶಿಷ್ಟದಲ್ಲಿ 'ಗಮಕ' ಶಬ್ದದ ಅರ್ಥವನ್ನು ವಿವರಿಸಲಾಗಿದೆ.

ಶಾಸ್ತ್ರಗ್ರಂಥಕ್ಕೆ ಬೇಕಾದ ನಿರ್ದಿಷ್ಟ, ಸ್ಪಷ್ಟ ಮತ್ತು ಸಂಸ್ಕೃತಪ್ರಚುರವಾದ ಭಾಷೆ ಲೇಖಕರಿಗೆ ರಕ್ತಗತವಾಗಿದೆ. ಇತರರ ಅಭಿಪ್ರಾಯಗಳನ್ನು ಖಂಡಿಸುವಲ್ಲಿ ತನ್ನದನ್ನು ಸ್ಥಾಪಿಸುವಲ್ಲಿ ನಿಖರತೆ, ತನ್ನ ಹಿಂದಿನ ತಪ್ಪನ್ನು ಒಪ್ಪಿ ತಿದ್ದಿಕೊಳ್ಳುವಲ್ಲಿ, ತನಗೆ ತಿಳಿಯದ್ದನ್ನು ತಿಳಿಯಲಿಲ್ಲವೆನ್ನುವಲ್ಲಿ ಪ್ರಾಮಾಣಿಕತೆ, 'ನನ್ನ ಅಲ್ಪಮತಿ' ಎನ್ನುವವನಲ್ಲಿ ವಿನಯ ಲೇಖಕರ ಸಜ್ಜನಿಕೆಯನ್ನು ಸಾರುತ್ತವೆ. ಛಂದಸ್ಸಿಗೆ ಸಂಬಂಧಿಸಿದಂತೆ ಪಾರಿಭಾಷಿಕ ಶಬ್ದಗಳಿಗೋ ಅವುಗಳ ಲಕ್ಷಣಗಳಿಗೋ ಸಂಬಂಧಪಟ್ಟಂತೆ ಎಷ್ಟೋ ಮೌಲಿಕ ವಿಚಾರಗಳನ್ನು ತಮ್ಮ ಅನುಭವ ಚಿಂತನೆ ಪಾಂಡಿತ್ಯಗಳಿಂದ ಓದುಗರ ಮುಂದಿಟ್ಟಿದ್ದಾರೆ. ಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರ-ಗಳನ್ನು ಚರ್ಚಿಸುವ, ಖಂಡಿಸುವ, ಮಂಡಿಸುವ ಎಂಟೆದೆತನ ಈ ವಾರ್ಧಕ್ಯ-ದಲ್ಲೂ ಲೇಖಕರಿಗಿರುವುದು ಅಭಿನಂದನೀಯ. ಮುಖ್ಯವಿಷಯಗಳಿಗೆ ಸಂಬಂ-ಧಿಸಿದಂತೆ ಕೆಲವೊಮ್ಮೆ ಅವನ್ನು ಮೀರಿ ನಿಲ್ಲುವ ಮತ್ತು ಉಪಯುಕ್ತವೆನಿಸುವ ದೀರ್ಘ ಟಿಪ್ಪಣಿಗಳು ಅವರ ಪಾಂಡಿತ್ಯ ಮತ್ತು ಅನುಭವಗಳನ್ನು ಸಾರುತ್ತವೆ. ಹೆಚ್ಚಿನ ಪರಿಶಿಷ್ಟ ಮತ್ತು ಅನುಬಂಧಗಳು ಅವರ ಮರೆವಿನಲ್ಲೂ ವಿಶೇಷ ಸ್ಮರಣ-ಶಕ್ತಿಯ ದ್ಯೋತಕಗಳು. ಇಂತಹ ಘನಗ್ರಂಥವನ್ನು ನೀಡಿದ ಸೇಡಿಯಾಪು ಕೃಷ್ಣಭಟ್ಟರಿಗೆ ಕನ್ನಡಿಗರೆಲ್ಲರ ಅಭಿನಂದನೆ ಸಲ್ಲಬೇಕು. ಇನ್ನಷ್ಟು ಉಪಯುಕ್ತ ಪ್ರೌಢಗ್ರಂಥಗಳು ಅವರಿಂದ ಬರಲೆಂದು ಹಾರೈಸೋಣ.

ಈ ಜ್ಞಾನವೃದ್ಧರ ಬಾಯಿಯಿಂದ ಜಗುಳಿದ ಅಣಿಮುತ್ತುಗಳನ್ನು ಜತನ-ದಿಂದ ಅಣಿಗೊಳಿಸಿದ, ಲಿಪಿಕಾರರಾಗಿ ಸಹಕರಿಸಿ ಗ್ರಂಥಶಿಶುವಿನ ಪ್ರಸವದಲ್ಲಿ ದಾದಿಯ ಸೇವೆ ಸಲ್ಲಿಸಿದ ಪಾದೇಕಲ್ಲು ವಿಷ್ಣು ಭಟ್ಟರೂ ಅಭಿನಂದನಾರ್ಹರು.



# ಕನ್ನಡ ಛಂದಸ್ಸು – ಒಂದು ವಿವರಣೆ*

ಜೂನ್ ೧೮ರ 'ಮ್ಯಾಗಜಿನ್ ವಿಭಾಗ'ದಲ್ಲಿ ಇತ್ತೀಚೆಗೆ ಪ್ರಕಾಶಿತವಾದ 'ಕನ್ನಡ ಛಂದಸ್ಸು' ಎಂಬ ನನ್ನ ಪುಸ್ತಕದ ಸಮೀಕ್ಷೆಯನ್ನು ಪ್ರಕಟಿಸಿದ್ದೀರಷ್ಟೇ? ಆ ಸಮೀಕ್ಷೆಯಲ್ಲಿ ಬಂದಿರುವ ಒಂದು ಅಭಿಪ್ರಾಯದ ಕುರಿತು ನನ್ನ ವಿವರಣೆಯನ್ನು ಇಲ್ಲಿ ನೀಡುತ್ತಿದ್ದೇನೆ.

ಪ್ರಕಟಿತ ಪುಸ್ತಕ ಸಮೀಕ್ಷೆಯಲ್ಲಿ ಡಾ। ರಾಮಭಟ್ಟರು ಹೀಗೆ ಹೇಳುತ್ತಾರೆ– "ತ್ರಿಪದಿಗೆ ನಾಲ್ಕು ಪಾದಗಳೇ ಮೂರು ಪಾದಗಳೇ ಎಂದು ಚರ್ಚಿಸಿ ಎರಡನೆಯ ಪಾದದ ಪುನರಾವರ್ತನೆಯ ಹಾಡಿಕೆಯ ಕ್ರಮವನ್ನು ಹೇಳಲಾಗಿದೆ. ಕಪ್ಪೆ ಅರ-ಭಟ್ಟನಲ್ಲ, ಆರಭಟ (ಶೂರ) ಇರಬೇಕೆಂದು ಸೂಚಿಸಿ ಆ ಶಾಸನದ ತ್ರಿಪದಿಗಳನ್ನು ಅರ್ಥ ಸರಿಹೊಂದುವಂತೆ ಪರಿಷ್ಕರಿಸಲಾಗಿದೆ. 'ಬಾಧಿಪ್ಪ ಕಲಿಗೆ ವಿಪರೀತನ್, ಕಲಿ-ಯುಗ ಮಾಧವನೀತನ್' ಎಂಬ ಪರಿಷ್ಕರಣದಲ್ಲಿ ಶಾಸನದ ಒಂದು ಶಬ್ದವನ್ನೇ ಹಿಂದುಮುಂದು ಮಾಡಬೇಕಾಗಿರುವುದರಿಂದ ಚಿಂತನೀಯ. ಪ್ರೊ। ಜಿ. ವೆಂಕಟ ಸುಬ್ಬಯ್ಯನವರು ಇದೇ ಪದ್ಯಕ್ಕೆ ಬರೆದ ಟಿಪ್ಪಣಿ 'ಕಲಿಯುಗ ವಿಪರೀತನಲ್ಲ, ಕೇವಲ ಯುಗವಿಪರೀತ' (ಸಾಧನೆ ಸಂಪುಟ ೭, ಸಂಚಿಕೆ ೪, ಅಕ್ಟೋಬರ್, ಡಿಸೆಂಬರ್ ೧೯೭೮) ಎಂಬುದು ಸೂಕ್ತವೆನಿಸುತ್ತದೆ."

ಶಾಸನದಲ್ಲಿರುವಂತೆ ಆ ತ್ರಿಪದಿಯ ಸ್ವರೂಪ ಇದು:

ಸಾಧುಗೆ ಸಾಧು ಮಾಧೂರ್ಯ್ಯಂಗೆ ಮಾಧೂರ್ಯ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ ॥

ಈ ಪದ್ಯದ ಎರಡನೆಯ ಪಾದವನ್ನು ಪ್ರೊ। ವೆಂಕಟಸುಬ್ಬಯ್ಯನವರು 'ಬಾಧಿಪ್ಪ ಕಲಿಗೆ ಕಲಿ/ಯುಗವಿಪರೀತನ್' ಎಂದು ವಿಭಜಿಸಿ ಅರ್ಥಮಾಡುವುದು

---

* ಸೇಡಿಯಾಪು ಅವರ 'ಕನ್ನಡ ಛಂದಸ್ಸು' ಗ್ರಂಥದ ಬಗೆಗೆ ಡಾ। ಉಪ್ಪಂಗಳ ರಾಮ ಭಟ್ಟರು ಬರೆದ ವಿಮರ್ಶೆಯ ಲೇಖನವು ಉದಯವಾಣಿ ಪತ್ರಿಕೆಯ ೧೮-೬-೧೯೮೮ರ (ಭಾನುವಾರ, ಮ್ಯಾಗಜಿನ್ ವಿಭಾಗ) ಸಂಚಿಕೆಯಲ್ಲಿ ಪ್ರಕಟಗೊಂಡಿತು. ಆ ವಿಮರ್ಶೆಯಲ್ಲಿ ಹೇಳಲಾದ ಕೆಲವಂಶಗಳಿಗೆ ಸಮಾಧಾನರೂಪವಾಗಿ ಸೇಡಿಯಾಪು ಅವರು ಬರೆಯಿಸಿದ ಈ ಲೇಖನವು ೧೩-೮-೧೯೮೮ರ ಉದಯವಾಣಿ (ಭಾನುವಾರದ ಮ್ಯಾಗಜಿನ್ ವಿಭಾಗದ) 'ಅಭಿಪ್ರಾಯ' ಕಲಮಿನಲ್ಲಿ ಪ್ರಕಟಗೊಂಡಿತು. ಇದರ ಕೊನೆಯಲ್ಲಿ ಚೌಕಕಂಸದೊಳಗಿರುವ ಅಂಶವು ೧೯೯೦ರಲ್ಲಿ ಸೇರಿಸಿದುದು. ಉದಯವಾಣಿಯಲ್ಲಿ ಪ್ರಕಟಗೊಂಡ ಮೇಲೆ ಸೇಡಿಯಾಪು ಸಮಗ್ರ ಲೇಖನ ಸಂಕಲನವಾದ 'ವಿಚಾರ ಪ್ರಪಂಚ'ದ 'ನಾನಾವಿಚಾರ' ವಿಭಾಗದಲ್ಲಿ ಸೇರ್ಪಡೆಗೊಂಡಿದೆ. – ಸಂ.

ಯುಕ್ತವೆಂದು ಹೇಳಿರುವುದೇ ಸೂಕ್ತವೆಂದು ಡಾ। ರಾಮ ಭಟ್ಟರು ಹೇಳುತ್ತಾರೆ. ನಾನು ತಿದ್ದಿ ಬರೆದಂತೆ ಆ ಪದ್ಯದ ಸ್ವರೂಪವು ಈ ಕೆಳಗಿನಂತಿದೆ:

ಸಾಧುಗೆ ಸಾಧು ಮಾಧೂರ್ಯ್ಯಂಗೆ ಮಾಧೂರ್ಯ್ಯಂ
ಬಾಧಿಪ್ಪ ಕಲಿಗೆ ವಿಪರೀತನ್ । ಕಲಿಯುಗ
ಮಾಧವನೀತನ್ ಪೆಱನಲ್ಲ ॥

ನನ್ನೀ ಪುಸ್ತಕವನ್ನು ಉದ್ಘಾಟಿಸಿದವರು ಮಾನ್ಯರಾದ ಪ್ರೊ । ಜಿ. ವೆಂಕಟ ಸುಬ್ಬಯ್ಯನವರೇ ಆಗಿದ್ದಾರೆ. ಆ ಸಂದರ್ಭದಲ್ಲಿ ಅವರು ಮಾಡಿದ ಭಾಷಣದಲ್ಲಿ ತಾವು ಆ ಮೊದಲು ಉಪರ್ಯುಕ್ತ ಶಾಸನ ಪದ್ಯವನ್ನು ಹೇಗೆ ವಿಭಜಿಸ-ಬೇಕೆಂಬುದನ್ನು ಹೇಳಿದ್ದೆನೆಂದು ತಿಳಿಸಿ, ತದನಂತರ ಆ ಪದ್ಯದ ಸ್ವರೂಪದಲ್ಲಿ ನಾನು ಮಾಡಿದ ತಿದ್ದುಪಡಿಯನ್ನು ಪ್ರಸ್ತಾವಿಸಿ, ಇದೇ ಉಚಿತತರವೆಂದು ಹೇಳಿ ನನ್ನ ಪ್ರಯತ್ನವನ್ನು ಶ್ಲಾಘಿಸಿರುತ್ತಾರೆಂಬುದನ್ನು ಡಾ । ಭಟ್ಟರಿಗೂ ಉದಯ-ವಾಣಿಯ ವಾಚಕರಿಗೂ ತಿಳಿಸಬಯಸುತ್ತೇನೆ. ಶ್ರೀಮಾನ್ ವೆಂಕಟಸುಬ್ಬಯ್ಯ-ನವರು ಆ ಮಾತುಗಳನ್ನು ಹೇಳಿದ್ದು ಅಲ್ಲಿ ಹಾಜರಿದ್ದ ನನ್ನ ಮತ್ತು ನನ್ನ ಅಭಿಮಾನಿಗಳ ಸಂತೋಷಕ್ಕಾಗಿ ಅಲ್ಲ; ತಾನು ಅದನ್ನು ಮೂರು ಸಲ ಓದಿದ್ದೇನೆಂದೂ ಅವರು ತಿಳಿಸಿರುವುದರಿಂದ ಅಲ್ಲಿ ಆಡಿದ ಅವರ ಮಾತುಗಳು ಮನಃಪೂರ್ತಿಯವೇ ಆಗಿದ್ದುವೆಂಬುದರಲ್ಲಿ ಸಂದೇಹವಿಲ್ಲ. ಅವರು ನನ್ನ ಅಭಿಪ್ರಾಯಗಳನ್ನೇ ಸ್ವೀಕರಿಸುವುದಕ್ಕೆ ಕಾರಣಗಳೇನಾಗಿರಬಹುದೆಂಬುದನ್ನು ಇಲ್ಲಿ ಹೇಳುವುದು ಅಪ್ರಸ್ತುತವಾಗಲಾರದೆಂದು ನಂಬುತ್ತೇನೆ. ಅವು ಈ ಕೆಳಗಿನಂತೆ:

೧. ಆ ಶಾಸನದಲ್ಲಿ ಎರಡು ಕಡೆಗಳಲ್ಲಿ 'ಕಲಿಯುಗವಿಪರೀತನ್' ಎಂದೂ ಮತ್ತೆರಡು ಕಡೆಗಳಲ್ಲಿ 'ಕಲಿಗೆ ವಿಪರೀತನ್' ಎಂದೂ ಇರುವುದು ಕಂಡುಬರುತ್ತದೆ. ಹೀಗೆ ನಾಲ್ಕು ಕಡೆಗಳಲ್ಲಿ ಅವನನ್ನು ವಿಶೇಷಿಸಿದ ಸಂದರ್ಭಗಳ್ಲೊಂದರಲ್ಲಾದರೂ ಕೇವಲ 'ಯುಗವಿಪರೀತನ್' ಎಂಬ ವಿಶೇಷಣವಿಲ್ಲ. ಆದುದರಿಂದ ಆ ವಿಶೇಷಣದ ಸ್ವರೂಪವು ಈ ಮೇಲೆ ಸೂಚಿಸಿದ ಎರಡರೊಳಗೊಂದಾಗಿರಬೇಕು ಹೊರತು 'ಯುಗವಿಪರೀತನ್' ಎಂಬುದಲ್ಲ.

೨. 'ಬಾಧಿಪ್ಪ ಕಲಿಗೆ ಕಲಿ' ಎಂದು ವಿಭಜಿಸಿದ ಪಕ್ಷದಲ್ಲಿ ಕಲಿಯೆಂಬುದರ ಕೊನೆಯೇ ಯತಿಸ್ಥಾನವಾಗುತ್ತದೆ. ತ್ರಿಪದಿಯ ಎರಡನೆಯ ಪಾದದ ಮೂರನೆಯ ಗಣದ ಕೊನೆಯೇ ಆ ಛಂದೋಬಂಧದ ಸಹಜವಾದ ಯತಿಸ್ಥಾನವಾಗಿದ್ದು ಇಲ್ಲಿ ಸಾಮಾನ್ಯವಾಗಿ ವಾಕ್ಯಯತಿಯಿರುತ್ತದೆ. ಅಷ್ಟು ಮಾತ್ರವಲ್ಲ, ತ್ರಿಮೂರ್ತಿಗಣ-ಬಂಧಗಳಲ್ಲಿ ಯತಿ ಗಣಾಂತಗಳಲ್ಲಿಯೇ ಇರುವುದು ಹೊರತು ಗಣಮಧ್ಯದಲ್ಲಿ-ರುವುದು ಅಸಾಮಾನ್ಯ. ಕಲಿ ಎಂಬಲ್ಲಿ ವಿಭಜಿಸಿದರೆ ಯತಿಯು ಏಳನೆಯ ಗಣದ ಮಧ್ಯದಲ್ಲಾಗುವುದರಿಂದ ಆ ವಿಭಜನೆ ತ್ರಿಪದಿಯ ಛಂದೋನಿಯಮಕ್ಕೆ ಸಮ್ಮತವೆಂದಾಗಲಾರದು.

೩. ನಾನು ಮಾಡಿದ ಬದಲಾವಣೆ ಸಕೃದ್ದರ್ಶನಕ್ಕೆ ಪದಗಳ ಸ್ಥಾನ ಪಲ್ಲಟವೆಂಬಂತೆ ಕಂಡುಬರಬಹುದಾದರೂ ಅದು ಹಾಗೇನೂ ಅಲ್ಲ; ಆ ಶಾಸನದ ಮೂರು ಪದ್ಯಗಳೊಳಗೆ ಮುಂದಿನ ಎರಡು ಪದ್ಯಗಳಲ್ಲಿಯೂ ಇರುವ 'ಕಲಿಗೆ ವಿಪರೀತ' ಎಂಬ ಪಾಠವನ್ನೇ ನಾನು ಇಲ್ಲಿಗೂ ಅನ್ವಯಿಸಿದ್ದು ಮಾತ್ರ-ವಾಗಿದೆ ಹೊರತು ಆ ಶಾಸನದಲ್ಲಿಲ್ಲದ ಹೊಸಪಾಠವನ್ನೇನೂ ಸೃಷ್ಟಿಸಲಿಲ್ಲ.

ಪ್ರೊ । ವೆಂಕಟಸುಬ್ಬಯ್ಯನವರು ನನ್ನ ಪ್ರಯತ್ನವನ್ನು ಶ್ಲಾಘಿಸಿದುದಕ್ಕೆ ಕಾರಣವೇನಾಗಿರಬಹುದೆಂಬುದು ಉದಯವಾಣಿಯ ವಾಚಕರಿಗೆ ಈ ಮೇಲಿನ ಮಾತುಗಳಿಂದ ಸ್ಪಷ್ಟವಾಗಿರಬಹುದೆಂದು ನಂಬುತ್ತೇನೆ.

ಆ ಶಾಸನದ ಕುರಿತಾಗಿ ನಾನು ಬರೆದಿರುವ ವಿವರಣೆಯಲ್ಲಿ ಶಾಸನ ಸ್ತುತನಾದ ವೀರನ ಹೆಸರು 'ಅರಭಟ್ಟ'ನೆಂದಾಗಿರದೆ 'ಆರಭಟ' ಎಂದಿದ್ದಿರ-ಬಹುದು ಎಂಬೊಂದು ಊಹೆಯನ್ನು ಮಂಡಿಸಿರುತ್ತೇನೆ. ಡಾ । ಭಟ್ಟರು ಇದಕ್ಕೆ ಆಕ್ಷೇಪವೆತ್ತದಿರುವುದು ಮಾತ್ರವಲ್ಲ ಅದನ್ನು ಅವರ ಸಮೀಕ್ಷೆಯಲ್ಲಿ ಎತ್ತಿ ಬರೆದಿರುವುದರಿಂದ ನನ್ನ ಊಹೆ ಅವರಿಗೆ ಮಾನ್ಯವೆಂದೇ ತಿಳಿಯಬೇಕಾಗುತ್ತದೆ. ಇದಕ್ಕಾಗಿ ಅವರಿಗೆ ನನ್ನ ಕೃತಜ್ಞತೆ ಸಲ್ಲತಕ್ಕುದಾಗಿದೆ.

[ಕಲಿ ಎಂಬುದು ಸಂಸ್ಕೃತ ಶಬ್ದ; ಆ ಭಾಷೆಯಲ್ಲಿ ಅದು ಸತ್ಪುರುಷನಿಗೆ ವಿಶೇಷಣವಾಗಿ ಪ್ರಯುಕ್ತವಾಗಿರುವುದನ್ನು ನಾನೆಲ್ಲಿಯೂ ಕಂಡಿಲ್ಲ. ಕನ್ನಡದಲ್ಲಿ ಕಪಟ, ಮೋಸ ಇತ್ಯಾದಿ ಅರ್ಥಗಳುಳ್ಳ ಛಲ ಎಂಬ ಸಂಸ್ಕೃತ ಶಬ್ದಕ್ಕೆ ಕಾಲಾಂ-ತರದಲ್ಲಿ ಸ್ಥೈರ್ಯ, ಹಟ ಇತ್ಯಾದಿ ಅರ್ಥಗಳು ಬಂದ ಹಾಗೆಯೇ, ಕಲಿ ಎಂಬ ಅಸದರ್ಥವನ್ನು ಹೇಳುವ ಶಬ್ದಕ್ಕೆ 'ವೀರ' ಎಂಬ ಸದರ್ಥವು ಬಂದುದಾಗಿದೆ. ಆ ಮೇಲೆ ಉದಾಹರಿಸಿದ ಶಾಸನದ ಕಾಲದಲ್ಲಿ ಬಹುಶಃ ಕಲಿ ಎಂಬ ಶಬ್ದಕ್ಕೆ ಸದರ್ಥವು ಬಂದಿರಲಿಲ್ಲವೆಂದು ಭಾಸವಾಗುತ್ತದೆ. ಆದುದರಿಂದಲೇ ಅದರಲ್ಲಿ 'ಬಾಧಿಪ್ಪ ಕಲಿಗೆ ವಿಪರೀತನ್' ಎಂದು ಕಲಿಯ ಸ್ವಭಾವವನ್ನು ಸೂಚಿಸುವ ವಿಶೇಷಣಯುಕ್ತವಾಗಿ ಆ ಶಬ್ದವು ಪ್ರಯುಕ್ತವಾಗಿದೆಯೆಂದು ತೋರುತ್ತದೆ. ಅಷ್ಟು ಮಾತ್ರವಲ್ಲ, ಮುಂದೆ ಎರಡು ಸಂದರ್ಭಗಳಲ್ಲಿ 'ಕಲಿಗೆ ವಿಪರೀತನ್' ಎಂಬ ಪ್ರಯೋಗವಿರುವುದು ಸಹ ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ಆದಕಾರಣ 'ಬಾಧಿಪ್ಪ ಕಲಿಗೆ ಕಲಿ' ಎಂದು ವಿಭಜಿಸಿದರೆ ಶಾಸನದಲ್ಲಿ ಸ್ತುತನಾದ ವೀರ ಪುರುಷನಿಗೆ ಗೌರವವನ್ನು ತಂದಂತಾಗುವುದಿಲ್ಲ. ಮೂಲತಃ ಕಲಿ ಎಂಬ ಶಬ್ದಕ್ಕೆ ಜಗಳ, ಯುದ್ಧ, ಇತ್ಯಾದಿ ಕೆಡುಕನ್ನು ಸೂಚಿಸುವ ಅರ್ಥಗಳೇ ಇದ್ದುವಾಗಿವೆ. 'ಕಲಿಯುಗ' ಎಂಬ ಶಬ್ದವೂ ಆ ಅಸದರ್ಥಗಳನ್ನೇ ಪೋಷಿಸುತ್ತದೆ. ತಾತ್ಪರ್ಯ-ವೇನೆಂದರೆ, 'ಬಾಧಿಪ್ಪ ಕಲಿಗೆ ಕಲಿ' ಎಂದು ವಿಂಗಡಿಸಿದರೆ ತ್ರಿಪದಿಯ ಛಂದೋ ರೂಪಭಂಗವಾಗುವುದು ಮಾತ್ರವಲ್ಲ, ಅರ್ಥವೂ ಸದೋಷವಾಗಿ ಪರಿಣಮಿಸು-ವುದೆಂಬುದಾಗಿದೆ.]

◊

೫

# ಪಂಡಿತಶ್ರೇಷ್ಠ ಸೇಡಿಯಾಪು – ಛಂದೋವಿಷಯಕ ರಚನೆಗಳು*

– ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ

ಕವಿ, ಕತೆಗಾರ ಹಾಗೂ ವಿದ್ವಾಂಸರೆಂದು ಖ್ಯಾತರಾಗಿರುವ ಪೂಜ್ಯ ಸೇಡಿಯಾಪು ಕೃಷ್ಣ ಭಟ್ಟರ ಹೆಸರು ಮೊದಲು ನನಗೆ ಪರಿಚಯವಾದುದು, ನಾನು ಮೈಸೂರಿನಲ್ಲಿ ಕನ್ನಡ ಎಂ. ಎ. ಪದವಿಗೆ ವ್ಯಾಸಂಗ ಮಾಡುತ್ತಿದ್ದ ವರ್ಷದಲ್ಲಿ, ೧೯೫೩ರಲ್ಲಿ. ಆಗ್ಗೆ ನಮಗೆ ಕನ್ನಡ ಛಂದಸ್ಸಿನ ಪಾಠ ಹೇಳುತ್ತಿದ್ದ ಅಧ್ಯಾಪಕರು ಸೇಡಿಯಾಪು ಅವರು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದ್ದ 'ಕನ್ನಡ ಛಂದಸ್ಸು' ಎಂಬ ಬರೆಹವನ್ನು ಓದುವ ಹಾಗೆ ಮೊದಲ ತರಗತಿಯಲ್ಲೇ ಶಿಫಾರಸು ಮಾಡಿದರೆನ್ನುವುದು ನನ್ನ ನೆನಪು. ಈ ಬರೆಹ, 'ಕನ್ನಡ ಕೈಪಿಡಿ'–ಯೊಳಗಿನ ಛಂದಸ್ಸಿನ ಭಾಗ ಇಷ್ಟು ಹೊರತು ಛಂದಸ್ಸಿನ ವಿಚಾರದಲ್ಲಿ ಯಾವ ಗಣ್ಯವಾದ ಬರವಣಿಗೆಯೂ ಆಗ್ಗೆ ಪ್ರಕಟವಾಗಿರಲಿಲ್ಲ. ಕನ್ನಡ ಛಂದಸ್ಸನ್ನು ಕುರಿತು ಸೇಡಿಯಾಪು ಅವರ ಬರೆಹದ ಮಹತ್ತ್ವ ಐತಿಹಾಸಿಕವಾಗಿ ಮಾತ್ರವಲ್ಲ, ವಸ್ತು ವಿಮರ್ಶೆಯ ದೃಷ್ಟಿಯಿಂದಲೂ ಉಲ್ಲೇಖನಾರ್ಹವಾದುದು. ಇದು ಈಗಾಗಲೇ ತಿಳಿದಿರುವ ವಿಚಾರ. ವಿದ್ಯಾರ್ಥಿಗಳಾಗಿದ್ದ ನಾವು ಆ ಹೊತ್ತಿಗೆ ಅವರ ಪ್ರಬುದ್ಧ ಕರ್ನಾಟಕದೊಳಗಿನ 'ಪಂಚಮೀ ವಿಭಕ್ತಿ' ಕುರಿತ ಲೇಖನವನ್ನೂ ಅಭ್ಯಾಸ ಮಾಡಿದ್ದೆವು. ಈ ಲೇಖನವನ್ನೋದಿ ಆಗ ಮಾಡಿಕೊಂಡ ಟಿಪ್ಪಣಿಗಳು ಈಗಲೂ ನನ್ನಲ್ಲಿ ಉಳಿದಿವೆ.

ಸೇಡಿಯಾಪು ಅವರ ಪ್ರತ್ಯಕ್ಷ ಪರಿಚಯದ ಯೋಗ ನನಗೆ ದೊರೆತುದು, ನಾನು ಹೈದರಾಬಾದ್ ಉಸ್ಮಾನಿಯ ವಿಶ್ವವಿದ್ಯಾಲಯದ ಸೇವೆಯನ್ನು ಬಿಟ್ಟು ಮೈಸೂರು ವಿಶ್ವವಿದ್ಯಾನಿಲಯದ ಸೇವೆಗೆ ಬಂದು ಸೇರಿದ ಆರಂಭದ ದಿನಗಳಲ್ಲಿ, ಅದಾದರೂ ಇಲ್ಲಿಗೆ ಇಪ್ಪತ್ತೆರಡು ವರ್ಷಗಳ ಹಿಂದೆ. ಆಗ ತಾನೆ ಅವರ ಕವಿತೆಗಳ ಸಂಯುಕ್ತ ಸಂಪುಟ ಹೊರಬಂದಿತ್ತು. ಆಗ ಮೈಸೂರಿನಲ್ಲಿ ನೆಲೆಸಿದ್ದ ಅವರ

---

* ದಿನಾಂಕ ೯–೬–೧೯೯೧ರಂದು ಎಂ. ಜಿ. ಎಂ. ಕಾಲೇಜಿನಲ್ಲಿ 'ಸೇಡಿಯಾಪು – ೯೦ ಅಭಿವಂದನೆ' ಕಾರ್ಯಕ್ರಮದಲ್ಲಿ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು ನೀಡಿದ ಉಪನ್ಯಾಸದ ಲಿಖಿತರೂಪದಿಂದ ಆಯ್ದಭಾಗ. ಛಂದಸ್ಸಿಗೆ ಸಂಬಂಧಿಸಿದ ಭಾಗವನ್ನು ಮಾತ್ರ ಇಲ್ಲಿ ಆಯ್ದುಕೊಳ್ಳಲಾಗಿದೆ. ಪೂರ್ಣಲೇಖನವು 'ನಂದಾದೀವಿಗೆ' (ಸೇಡಿಯಾಪು ಸ್ಮರಣ ಸಮುಚ್ಚಯ) ಸಂ. ಎಂ. ರಾಮಚಂದ್ರ, ಪ್ರ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ ೧೯೯೭– ಈ ಕೃತಿಯ ಪುಟ ೧೧೭– ೧೨೪ರಲ್ಲಿದೆ. – ಸಂ.

ಪರಿಚಯವನ್ನು ನನ್ನ ಒಬ್ಬ ಸೋದರ ಸಂಬಂಧಿಯ ಮೂಲಕ ನಾನು ಪಡೆದು-ಕೊಂಡೆ. ಅವರೊಂದಿಗೆ ಸಾಹಿತ್ಯಸಲ್ಲಾಪ ನಡೆಸುವ ಅವಕಾಶ ಸಿಕ್ಕಿತು; ಅವರ ಕಾವ್ಯವಾಚನ ಕೇಳುವ ಸುಯೋಗವೂ ಲಭಿಸಿತು. ಅಂದು ಅವರು ನನಗೆ ಪ್ರೀತಿಯಿಂದ ಹರಸಿಕೊಟ್ಟ ಆ ಕವಿತೆಗಳ ಸಂಕಲನವನ್ನು ಮುಂದೆ ನನ್ನ ಛಂದಸ್ಸಿನ ಅಧ್ಯಯನದಲ್ಲಿ ಒಂದು ಲಕ್ಷ್ಯಗ್ರಂಥವಾಗಿ ಯಥೋಚಿತವಾಗಿ ಬಳಸಿಕೊಂಡೆ. ಅವರ ಸ್ನೇಹಧರ್ಮ, ವಿದ್ವತ್, ಕಿರಿಯರ ವಿಷಯದಲ್ಲಿಯ ಪ್ರೀತಿ ವಿಶ್ವಾಸಗಳು ಹೀಗೆ ನನಗೆ ಮನವರಿಕೆಯಾದವು. ಈಚೆಗೆ ಸಹ, ಅವರ ಮಣಿಪಾಲದ ಮನೆ-ಯಲ್ಲಿ ಅವರನ್ನು ಜಿ. ವೆಂಕಟಸುಬ್ಬಯ್ಯನವರೊಂದಿಗೆ ಕಂಡು ಮಾತನಾಡಿದಾಗ, ನಾವು ಪರಸ್ಪರವಾಗಿ ನಡೆಸಿದ ಶಬ್ದಾರ್ಥಗಳ ಚರ್ಚೆ ನನ್ನ ಮನಸ್ಸಿನಲ್ಲಿ ಇನ್ನೂ ಹಸಿರಾಗಿಯೇ ಇದೆ.

ಇದೀಗ ಸೇಡಿಯಾಪು ಅವರಿಗೆ ೯೦ ಹಿಡಿಯುತ್ತಿರುವ ಈ ಶುಭ ಸಂದರ್ಭದಲ್ಲಿ ಅವರನ್ನು ಕಾಣುವ, ಅವರ ಬಗೆಗೆ ಏರ್ಪಾಡಾಗಿರುವ ಈ ಅಭಿನಂದನಸಮಾರಂಭದಲ್ಲಿ ನಾಲ್ಕು ಮಾತುಗಳನ್ನು ಆಡುವ ಅವಕಾಶ ದೊರೆ-ತಿರುವುದಕ್ಕೆ ನನಗೆ ಬಹುವಾಗಿ ಸಂತೋಷವಾಗಿದೆ. ಇದಕ್ಕೆ ನೆರವಾದ ಮಿತ್ರರಾದ ಎಂ. ರಾಮಚಂದ್ರರಿಗೆ – ಇವರು ಸೇಡಿಯಾಪು ಅವರ ಶಿಷ್ಯೋತ್ತಮರು – ನಾನು ಕೃತಜ್ಞನಾಗಿದ್ದೇನೆ.

ಶಾಸ್ತ್ರಸಾಹಿತ್ಯಕ್ಕೆ ಸೇಡಿಯಾಪು ಅವರಿಂದ ಸಂದಿರುವ ಕೊಡುಗೆಯನ್ನು ಲಕ್ಷಿಸಿ ಇಲ್ಲಿ ಕೆಲವು ಮಾತುಗಳನ್ನಾಡುವುದು ನನ್ನ ಅಪೇಕ್ಷೆ. ಏಕೆಂದರೆ ಇದು ನನ್ನ ಅಧ್ಯಯನಕ್ಷೇತ್ರ. ಇಷ್ಟು ಮಾತ್ರವಲ್ಲ, ಅವರಿಗೆ ಇಷ್ಟವಾದ ಶಾಸ್ತ್ರಭಾಗ-ಗಳಲ್ಲಿಯೇ ನಾನು ಸಹ ಕೃಷಿ ಮಾಡಿರುವುದರಿಂದ, ನನಗೆ ಈ ಉತ್ಸಾಹ ಸಹಜವಾದುದು ಎಂದರೆ ತಾವು ಒಪ್ಪುತ್ತೀರಿ ಎಂದೇ ನನ್ನ ತಿಳಿವಳಿಕೆ. ಹೀಗಾಗಿ ಈ ಅವಕಾಶ ಲಭಿಸಿತೆಂದು ಸಡಗರಿಸಿ, ನಾನು ನನ್ನ ಬೇರೆ ಕೆಲಸಗಳನ್ನೆಲ್ಲ ಹಿಂದಿಟ್ಟು, ಈ ೧೦-೧೨ ದಿವಸಗಳು ಅವರ ಎಲ್ಲ ಶಾಸ್ತ್ರಕೃತಿಗಳನ್ನೂ ಕೆಲವು ಬಿಡಿಬರಹಗಳನ್ನೂ ಮತ್ತೆ ಓದಿದೆ; ಅರ್ಥಮಾಡಿಕೊಳ್ಳುತ್ತ ಸಾಲು ಸಾಲೂ ಓದಿದೆ; ಸಾವಧಾನವಾಗಿಯೇ ಓದಿದೆ. ಇದರಿಂದ ನನಗೆ ವೈಯಕ್ತಿಕವಾಗಿ ತುಂಬ ಪ್ರಯೋಜನವಾಯಿತು. ನನ್ನ ಸ್ವಂತ ಸಂಗ್ರಹದಲ್ಲಿಯೇ ಅವರ ಎಲ್ಲ ಪುಸ್ತಕಗಳನ್ನೂ ಕೈಗೆ ಎಟಕುವಂತೆ ನಾನು ಇರಿಸಿಕೊಂಡಿದ್ದೆನಾದ್ದರಿಂದ, ಅವನ್ನು ದೊರಕಿಸಿ-ಕೊಂಡು ಓದುವುದರಲ್ಲಿ ನನಗೆ ಕಷ್ಟವೇನೂ ಆಗಲಿಲ್ಲ ಎಂದು ನಾನಿಲ್ಲಿ ಹೇಳ-ಬೇಕು. ಈ ಓದಿನಿಂದ ನನಗೆ ಸೇಡಿಯಾಪು ಅವರ ಮನಸ್ಸಿನ ಲಹರಿ ತಿಳಿಯಿತು; ಪಾಂಡಿತ್ಯದ ಆಳ-ಅಗಲಗಳ ಪರಿಚಯ ಕೆಲಮಟ್ಟಿಗಾದರೂ ಆಯಿತು; ವಿಷಯ-ಗಳ ಆಯ್ಕೆಯ ಒಲವರ ಗೊತ್ತಾಯಿತು; ಪ್ರತಿಭಾವಿಲಾಸದ ಸೊಂಪು ಹೇಗೆ ಒಳನೋಟಗಳನ್ನು ಹಾಯಿಸಬಲ್ಲುದು ಎನ್ನುವುದರ ಸುಳಿವು ಸ್ವಲ್ಪ ಸಿಕ್ಕಿತು;

ವಿಚಾರಕ್ರಮ ಎಷ್ಟು ತರ್ಕಬದ್ಧವಾಗಿ, ವಿಚಕ್ಷಣವಾಗಿ ಇರುವುದು ಶಕ್ಯ, ನಿರೂಪಣ ವಿಧಾನ ಎಷ್ಟು ಸಮರ್ಥವಾಗಿ, ಸೊಗಸಾಗಿ ಮೆಯ್ದಳೆಯಬಹುದು ಎನ್ನುವುದು ಕೊಂಚ ಅರಿವಿಗೆ ಬಂದಂತಾಯಿತು; ಭಾಷೆ ಶೈಲಿಗಳ ಪಾರಿಶುದ್ಧ್ಯ, ಪ್ರಯೋಗ ಪಟುತ್ವ, ವೈಖರಿ ವಿಜೃಂಭಣೆಗಳು ಕನ್ನಡವನ್ನು ಹೇಗೆ ಪುಷ್ಟಿಗೊಳಿಸಲು ಶಕ್ತವಾದವು – ಎಂಬುದನ್ನು ಅರ್ಥಮಾಡಿಕೊಳ್ಳುವಂತಾಯಿತು. ಇದಕ್ಕೆ ಅವರು 'ಕಾರಣಪುರುಷ'ರಾದರೂ, ನಾನು ಅವರನ್ನಲ್ಲ – ನನ್ನನ್ನೇ ಅಭಿನಂದಿಸಿಕೊಳ್ಳು-ತ್ತೇನೆ. ದಯವಿಟ್ಟು ತಾವು ನಗಬಾರದು!

* * * * *

ಇನ್ನು ನಾವು ಶ್ರೀಯುತರ ಛಂದೋವಿಷಯಕವಾದ ರಚನೆಗಳನ್ನು ಎತ್ತಿಕೊಳ್ಳೋಣ: ಛಂದಸ್ಸಿನ ವಿಷಯಗಳನ್ನು ಪ್ರತಿಪಾದಿಸುವಾಗ ಅವರು ಬಂಧ-ಗಳ ಸಾಮಾನ್ಯ ಲಕ್ಷಣ ವಿಮರ್ಶೆ, ಭೇದೋಪಭೇದಗಳ ಪರಿಶೀಲನೆ ಹಾಗೂ ಐತಿಹಾಸಿಕವಾಗಿ ಅವುಗಳ ವಿಕಾಸಕ್ರಮ– ಇವುಗಳನ್ನು ಲಕ್ಷಿಸುವುದಕ್ಕಿಂತ ಅವುಗಳ ರಚನೆಯಲ್ಲಿ ಕಂಡುಬರುವ ಛಂದೋಗತಿಯ ಸ್ವರೂಪ ಮತ್ತು ವೈವಿಧ್ಯಗಳ ಕಡೆಗೆ ಹಾಗೂ ವಾಚನಕ್ರಮಗಳ ಕಡೆಗೆ ಬಹುವಾಗಿ ಲಕ್ಷ್ಯಕೊಡುವುದು ಕಂಡುಬರುತ್ತದೆ. ಈ ಸಲುವಾಗಿ ಅವರು ಮಾಡಿರುವ ಕೆಲವು ಸಂಸ್ಕೃತ ಛಂದೋಗ್ರಂಥಗಳ ಅಭ್ಯಾಸ ಅವರಿಗೆ ಸಹಾಯವಾಗಿರುವುದು ದಿಟವಾದರೂ ಅವರು ಸಂಗೀತ ಶಾಸ್ತ್ರವನ್ನೂ ಸ್ವೋಪಜ್ಞವಾದ ಚಿಂತನಗಳನ್ನೂ ಅವಲಂಬಿಸಿರುವುದೇ ಸಾಮಾನ್ಯ-ವಾಗಿ ಹೆಚ್ಚು ಎನ್ನಬಹುದು. ಈ ಮುಖದಲ್ಲಿ ಅವರಿಗಿರುವ ಶಕ್ತಿಸಾಮರ್ಥ್ಯಗಳು ಅನನ್ಯಸಾಧಾರಣವಾದವು; ಅತಿಶಯವೂ ಅಗಾಧವೂ ಆದವು.

ಸೇಡಿಯಾಪು ಅವರ 'ಛಂದೋಗತಿ' ಎಂಬ ರಚನೆ (೧೯೮೫) ಅವರ ಮೇರುಕೃತಿ; ಅವರ ಪ್ರತಿಭೆ ಪಾಂಡಿತ್ಯವನ್ನು ಸಾರ್ಥಕಗೊಳಿಸಿರುವ ಶ್ರೇಷ್ಠ ಕೃತಿ. ಇದೊಂದು ಶಾಸ್ತ್ರರಸಕಾಸಾರವೇ ಸರಿ. ಇದರಲ್ಲಿ ಛಂದಸತ್ತ್ವಗಳ ಹಾಗೂ ಗತಿಭೇದಗಳ ವಿವೇಚನೆ ತಲಸ್ಪರ್ಶಿಯಾಗಿ ನಡೆದಿರುವುದು ಕಾಣುತ್ತದೆ. 'ತಲಸ್ಪರ್ಶಿ' ಎನ್ನುವುದಕ್ಕಿಂತ 'ಕೂಲಂಕಷ' ಎನ್ನುವುದೇ ಸರಿಯಾದ ಮಾತು ಇಲ್ಲಿ. ಇಲ್ಲಿಯ ಒಂಬತ್ತು ಪರಿಚ್ಛೇದಗಳಲ್ಲಿ ಕ್ರಮವಾಗಿ 'ಲಯ' ಎಂಬ ಸಂಜ್ಞೆಯ ಅರ್ಥ, ಛಂದಃಶಾಸ್ತ್ರ ಗ್ರಂಥಗಳಲ್ಲಿ ಲಯದ ಅರ್ಥ ಮತ್ತು ವ್ಯಾಪ್ತಿ, Rhythm ಹಾಗೂ ಗತಿ ಮತ್ತು ಲಯ, ಛಂದಸ್ ಮತ್ತು ಗತಿ, ಛಂದಃಪದಾರ್ಥ ವಿವೇಚನೆ, ಗತಿ ರೂಪಗಳ ವಿವೇಚನೆ, ಛಂದೋಗತಿಭೇದಗಳು, ಗತಿ ಮತ್ತು ಯತಿ, ವಿಷಮಗತಿ ಬಂಧಗಳು ಹಾಗೂ ಅಪರಜಾತಿಗಳು, ಅನುಷ್ಟುಪ್ ಶ್ಲೋಕ, ಉಪಜಾತಿಗಳು ಮತ್ತು ವೈದಿಕಛಂದಸ್ಸುಗಳ ಸ್ವರೂಪ – ಇವುಗಳ ವಿಚಾರ ಸೂಕ್ಷ್ಮವೂ ವಿಸ್ತೃತವೂ ಆಗಿ ಪ್ರತಿಪಾದಿತವಾಗಿದೆ. ಈ ಪ್ರತಿಪಾದನೆಯ ಎಡೆಯೆಡೆಯಲ್ಲಿ ಅನ್ಯವಿದ್ವಾಂಸರ

ವಿಚಾರಗಳ ವಿಮರ್ಶೆಯೂ ತಾವು ತಪ್ಪು ಗ್ರಹಿಕೆಗಳೆಂದು ನಂಬಿದ ವಿಚಾರಗಳ ಖಂಡನೆಯೂ ಸಮಾಧಾನಗಳೂ ಪ್ರಕಟಗೊಂಡಿವೆ.

ಛಂದಸ್ಸಿನ ಮೌಲಿಕ ತತ್ತ್ವಗಳಿಗೆ ಬಳಸುವ ಲಯ, ಗತಿ, ಯತಿ, ಪ್ರಾಸ ಮೊದಲಾದ ಹಲವಾರು ಸಂಜ್ಞೆಗಳು ತಪ್ಪಾಗಿಯೋ ಶಿಥಿಲವಾಗಿಯೋ ಅವ್ಯಾಪ್ತಿ ಅತಿವ್ಯಾಪ್ತಿ ದೋಷಗಳಿಗೆ ಪಕ್ಕಾಗಿಯೋ ಬಳಕೆಯಾಗುವುದು ತಪ್ಪಿ, ಅವುಗಳನ್ನು ಶಾಸ್ತ್ರನಿಷ್ಠೆಯಿಂದ ಬಳಸುವುದೂ ಛಂದೋಬಂಧಗಳ ಲಕ್ಷಣನಿರ್ವಚನದಲ್ಲಿ ಅನ್ವಯಿಸುವುದೂ ಆಗಬೇಕು ಎನ್ನುವುದು ಸೇಡಿಯಾಪು ಅವರ ಕಳಕಳಿ. ಇದು ಮೆಚ್ಚತಕ್ಕುದೇ ಸರಿ. ಆದರೂ ಬೆಳೆಯುತ್ತಿರುವ ಭಾಷೆ, ಶಾಸ್ತ್ರಗಳ ಸಂಜ್ಞೆಗಳನ್ನು ಸಹ ವಿವಿಧ ಅರ್ಥಚ್ಛಾಯೆ ಅರ್ಥವಿಸ್ತಾರಗಳೊಂದಿಗೆ ಸ್ವೀಕರಿಸಿ ಉಪಯೋಗಿಸು-ವುದನ್ನು ನಾವು ನಿಯಂತ್ರಿಸಲಾಗದೇನೋ. ಈ ಬದಲಾವಣೆಗಳು ಒಂದು ಸಮುದಾಯದ ಕಾರ್ಯ ಎನ್ನುವುದನ್ನು ನಾವು ಮರೆಯುವಂತಿಲ್ಲ. ಪ್ರಾಚೀನ-ರಲ್ಲಿಯೇ ವೃತ್ತ, ಜಾತಿ ಎಂಬ ಸಂಜ್ಞೆಗಳ ಬಳಕೆಯಲ್ಲಿ ಉಂಟಾಗಿರುವ ಗೊಂದಲಗಳು ನಮಗೆ ವಿದಿತವಿದೆ. ಹಾಗೆಯೇ ಲಯ-ಗತಿಗಳು, ಯತಿ-ವಡಿಗಳು, ಪ್ರಾಸ-ಖಂಡಪ್ರಾಸ-ಅನುಪ್ರಾಸಗಳು ಮೊದಲಾದ ಸಂಜ್ಞೆಗಳಲ್ಲಿ ಸಹ ಗೊಂದಲಗಳಿಗೆ ಅವಕಾಶವುಂಟು. ಆದರೆ ಸಾಧ್ಯವಾದಷ್ಟು ಎಚ್ಚರ, ಖಚಿತತೆಯ ದೃಷ್ಟಿ ಅವಶ್ಯ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಗ್ರಂಥದಲ್ಲಿ ಪದ್ಯಜಾತಿಗಳಲ್ಲಿ ಲಯ, ಯತಿ, ಗತಿ, ತಾಳ ಇತ್ಯಾದಿಗಳ ಸ್ಥಾನವಿವೇಚನೆಯ ಜೊತೆಗೇ ಅಂತಹ ಸಂಜ್ಞೆಗಳನ್ನು ಅನ್ವಯಿಸಿ ಅವನ್ನು ಲಕ್ಷಣಿಸುವ ವಿಧಿವಿಧಾನಗಳು, ವಾಚನಕ್ರಮಗಳು ಇವನ್ನು ಸಹ ವಿಶದವಾಗಿ ಚರ್ಚಿಸಲಾಗಿದೆ; ವಿವಿಧ ಅಕ್ಷರಗತಿ ಪದಗತಿಗಳು ಹೇಗೆ ವ್ಯವಸ್ಥಿತವಾಗಿ ಇಲ್ಲವೆ ಅವ್ಯವಸ್ಥಿತವಾಗಿ ಗತಿಭೇದಗಳನ್ನು ರೂಪಿಸುತ್ತವೆ ಎನ್ನುವುದನ್ನು ನಿದರ್ಶನ-ಗಳೊಂದಿಗೆ ತೋರಿಸಲಾಗಿದೆ; ಯತಿಯ ಸ್ಥಾನ, ಎಲ್ಲಿ ಹೇಗೆ? ಎಂಬುದನ್ನು ಗುರುತಿಸಿದೆ. ಪದಸಂಘಟನೆ ಗಣಸಂಘಟನೆಗಳ ವಿಪುಲವಿನ್ಯಾಸಗಳ ಮರ್ಮವನ್ನು ಬೆದಕಿ ಅವು ಗತಿಸೌಂದರ್ಯವನ್ನು ವಿವಿಧ ಪದ್ಯಜಾತಿಗಳಲ್ಲಿ ಹೇಗೆ ತರುತ್ತವೆ ಎನ್ನುವುದನ್ನು ಸಮಾಲೋಚಿಸಿದೆ. ಮುಖ್ಯವಾಗಿ ಜಟಿಲ ಗತಿಲಕ್ಷಣವುಳ್ಳ, ವಿಷಮಗತಿಬಂಧಗಳೆಂಬುದಾಗಿ ತಾವು ಕರೆದಿರುವ, ವರ್ಣವೃತ್ತಗಳ ಗತಿಭೇದ-ಗಳನ್ನು ಗುರುತಿಸಲು ಸೇಡಿಯಾಪು ಬಹುವಾಗಿ ಶ್ರಮಿಸಿದ್ದಾರೆ; ಅಂತಹ ವೃತ್ತ-ಗಳನ್ನು ಹೊಸದಾಗಿ ಕಲ್ಪಿಸಲೂ ಲಕ್ಷಣಿಸಲೂ ಏನಾದರೂ ಉಪಾಯಗಳುಂಟೇ ಎನ್ನುವುದನ್ನು ಶೋಧಿಸಿದ್ದಾರೆ. ವೈದಿಕ ಛಂದಸ್ಸುಗಳ ತ್ರೈಸ್ವರ್ಯ ತತ್ತ್ವ ಅರ್ಥಪ್ರವಣವಾದುದು, ಗುರುಲಘುಸ್ಥಿರಗತಿಪ್ರವಣವಾದುದಲ್ಲ ಎಂದು ಅವರು ಹೇಳಿರುವುದು ಸೂಕ್ತವೇ ಆದರೂ – ಈ ಸಂಬಂಧದಲ್ಲಿ ವೇಲಣಕರರ ವಿವೇಚನೆ ಸಲಹೆಗಳನ್ನು ತಳ್ಳಿಹಾಕುವಂತಿಲ್ಲ ಎಂದೇ ನನ್ನ ಭಾವನೆ. ಹಾಗೆಯೇ ರಗಳೆಯ ಲಕ್ಷಣನಿರ್ವಚನದಲ್ಲಿ ಸೇಡಿಯಾಪು ಅವರ ವಿವೇಚನೆ ಸಲಹೆಗಳೂ

ಅವರು ಮಾಡಿರುವ ಜಯಕೀರ್ತಿಯ ಲಕ್ಷಣಪದ್ಯದ ವಿಮರ್ಶೆಯೂ ನಿರ್ದುಷ್ಟ-ವೆಂದು ನಾನು ತಿಳಿಯಲಾರೆ. ಹಾಗೆಯೇ ತೀ.ನಂ.ಶ್ರೀ.ಯವರ 'ಸಮಾಲೋಕನ'-ದೊಳಗಿನ ಪು.೧೬೫ರ ಟಿಪ್ಪಣಿಯ ಮಾತುಗಳನ್ನು ಪೂರ್ತಿಯಾಗಿ ಗಮನಿಸದೆ, "ಶ್ರೀಯುತರ ಮಾತು ಕೇವಲ ಅವಿಚಾರಿತರಮಣೀಯ" ಎಂಬುದಾಗಿ ಆಕ್ಷೇಪಿಸಿರುವುದು ಅನುದಾರವಾದ ಟೀಕೆಯೇ ಆಯಿತೆಂದು ಹೇಳಬೇಕು. ಆದರೆ ಇವೆಲ್ಲ ಸೇಡಿಯಾಪು ಅವರ ಪುಸ್ತಕದ ಘನತೆಯನ್ನು ಎಷ್ಟು ಮಾತ್ರವೂ ಕುಂದಿಸುವುದಿಲ್ಲ.

ಸೇಡಿಯಾಪು ಅವರ ಇನ್ನೊಂದು ಛಂದಸ್ಸಿನ ಕೃತಿ ಎಂದರೆ 'ಕನ್ನಡ ಛಂದಸ್ಸು' (೧೯೮೮). ಇದರಲ್ಲಿ ಪರಿಷತ್ಪತ್ರಿಕೆಯ 'ಕನ್ನಡ ಛಂದಸ್ಸು' ಎಂಬ ಪ್ರಬಂಧದ (೧೯೩೩) ಪರಿಷ್ಕೃತ ರೂಪವೂ ತ್ರಿಪದಿ, ಗೀತಿಕೆ ಮತ್ತು ಛಂದೋ-ವತಂಸಗಳೆಂಬ ಅಂಶವೃತ್ತಗಳನ್ನು ಕುರಿತು ಆಗಾಗ ಬರೆದ ಬೇರೆ ಬೇರೆ ಪ್ರಬಂಧಗಳೂ ಇತರ ಕೆಲವು ಉಪಯುಕ್ತ ಟಿಪ್ಪಣಿಗಳೂ ಸಮಾವೇಶಗೊಂಡಿವೆ. ಕೃತಿ ಮುಖ್ಯವಾಗಿ ಅಂಶವೃತ್ತಗಳ ಲಕ್ಷಣವಿಮರ್ಶೆಗೆ ಮೀಸಲಾಗಿರುವುದರಿಂದ, ಈ ಸಂಬಂಧವಾಗಿ ಅಧ್ಯಯನ ಮಾಡುವವರಿಗೆ ಇದು ತುಂಬ ಉಪಯುಕ್ತ-ವಾದ ಒಂದು ಗ್ರಂಥವಾಗಿದೆ.

ಇದರಲ್ಲಿ ತ್ರಿಮೂರ್ತಿಗಣಬಂಧಗಳ ಪ್ರಸ್ತಾರತತ್ತ್ವವನ್ನೂ ವಾಚನವಿಧಾನ-ವನ್ನೂ ಪ್ರಾಸಂಗಿಕವಾಗಿ ವಿವೇಚಿಸಿದೆ; ಅವು ಪಾಠ್ಯವಾಗುವುದಕ್ಕಿಂತ ಹೆಚ್ಚಾಗಿ ಗೇಯವಾದವು ಎಂದೂ ಅಕ್ಷರಕರ್ಷಣಕ್ಕೆ ಒಳಗಾಗಿ ಹಾಡತಕ್ಕವು ಎಂದೂ ಶ್ರೀಯುತರು ತಿಳಿಸಿರುವುದು ಸ್ವಾರಸ್ಯದ ಪರಿಶೀಲನೆಯಾಗಿದೆ; ಆದರೆ ಹಾಗೆಯೇ ಹಾಡಬೇಕೆನ್ನುವುದು ಅವಶ್ಯ ನಿಯಮವೇ, ಸಾರ್ವತ್ರಿಕವಾಗಿ ಅದು ಸಮ್ಮತ-ವಾಗತಕ್ಕುದೇ – ಎಂಬುದೂ ಇಲ್ಲಿ ವಿಚಾರಯೋಗ್ಯವಾಗಿದೆ. ಸೇಡಿಯಾಪು ತಾವು ಸಲಹೆ ಮಾಡುವ ತ್ರಿಮೂರ್ತಿಗಣಗಳ ವಾಚನಕ್ರಮವನ್ನು ಅಧಿಷ್ಠಾನ-ವಾಗಿಟ್ಟುಕೊಂಡು, ಗೀತಿಕೆಯ ಲಕ್ಷಣವನ್ನು ಗೊತ್ತುಪಡಿಸಲು ತೊಡಗಿ, ಅದನ್ನು ರುದ್ರಗಣಪ್ರಧಾನಬಂಧವನ್ನಾಗಿ ತಿಳಿದಿದ್ದಾರೆ. ಇದನ್ನು ಒಪ್ಪುವುದು ಕಷ್ಟ. ಹೀಗೆಯೇ ಸರ್ವಜ್ಞನ ತ್ರಿಪದಿಗಳಿಗೆ ಸಹ ತ್ರಿಮೂರ್ತಿಗಣಪ್ರಸ್ತಾರವೇ ಮಾನ್ಯ-ವಾಗಬೇಕೆಂಬ ವಿಷಯದಲ್ಲಿ ಸಹ ಭಿನ್ನಾಭಿಪ್ರಾಯಕ್ಕೆ ಅವಕಾಶವುಂಟು. ಈ ಬಗ್ಗೆ ನಾನು ಅನ್ಯತ್ರ ವಿಚಾರಮಾಡಿದ್ದೇನೆ. ಅಲ್ಲದೆ 'ವರ್ಣಕ'ವೆಂಬ ಮಾತಿನ, 'ರಗಳೆ'-ಯೆಂಬ ಹೆಸರಿನ ವಿಚಾರದಲ್ಲಿ, ತ್ರಿಪದಿ-ತ್ರಿವಿಧಿಗಳ ಹಾಗೂ ಚಿತ್ರ-ಚಿತ್ರಲತಾದಿ ಭೇದಗಳ ವಿಚಾರದಲ್ಲಿ, ಬಾದಾಮಿ ಶಾಸನದ ಪಾಠ, ಅರ್ಥ ಮತ್ತು ಛಂದೋ-ವಿವೇಚನೆಗಳಲ್ಲಿ ಅವರ ಸಲಹೆ ಸೂಚನೆಗಳು ತೃಪ್ತಿಕರವೆಂದು ನಾನು ತಿಳಿಯ-ಲಾರೆ. ಏಳೆಗಳ ಜೋಡಿ ಸಾಂಗತ್ಯಕ್ಕೆ ದಾರಿಮಾಡಿತು ಎನ್ನುವುದೂ ದಂಡಕ-ರಗಳೆಗಳ ನಡುವೆ ಜನಕ-ಜನ್ಯ ಸಂಬಂಧವನ್ನು ಕಾಣುವುದೂ ಸೂಕ್ತವಾದ ನಿರ್ಣಯಗಳೆಂದು ನಾನು ಭಾವಿಸಲಾರೆ. ಛಂದೋವತಂಸವನ್ನು ಬ್ರಹ್ಮಗಣ

ಪ್ರಧಾನವನ್ನಾಗಿ, ಚೌಪದಿಯನ್ನು ರುದ್ರಗಣಪ್ರಧಾನವನ್ನಾಗಿ, ಮತ್ತೆ ಛಂದೋ-ವತಂಸವನ್ನು ಪಿರಿಯಕ್ಕರದ ಗೀತಭಾಗದ ಅನುಬಂಧಿ ಬಂಧವನ್ನಾಗಿ ಗ್ರಹಿಸಿರುವುದು ಸಹ – ಹೀಗೆಯೇ ಸರಿ ಎನ್ನುವಂತಿಲ್ಲ. ಲಲಿತರಗಳೆಯನ್ನು ಶಿಥಿಲೀಕರಿಸಿ, ಅದಕ್ಕೆ ಹೊಸ ರೂಪ ಕೊಟ್ಟ ಮೊದಲಿಗನೆಂದು 'ಕಲಾವತೀ ಪರಿಣಯ'ದ ಕರ್ತೃ ಯಾದವನ ಬಗೆಗೆ ಬರೆದಿರುವುದು, ಅವನಿಗೆ ಸಲ್ಲದ ಪ್ರಶಸ್ತಿಯೆಂದೇ ನನ್ನ ಭಾವನೆ.

ಅಂತು ಇವುಗಳ ವಿಚಾರ ಏನೇ ಇರಲಿ, 'ಕನ್ನಡ ಛಂದಸ್ಸು' ಎಂಬ ಸೇಡಿಯಾಪು ಅವರ ಸಂಶೋಧನಪ್ರಬಂಧ ಮೊದಲು ಪ್ರಕಟವಾದಾಗ, ಅದು ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ನೀಡಿದ ಚಾಲನೆ ಅನನ್ಯವಾದುದು. ಪ್ರಥಮ ಮಾರ್ಗಪ್ರವರ್ತಕ ವಿಸ್ತೃತ ಪ್ರಬಂಧವೆಂದರೆ ಇದೇ. ಇಲ್ಲಿ ತ್ರಿಮೂರ್ತಿಗಣ-ರಚನೆಯ ಸಾಮಾನ್ಯಸ್ವರೂಪವನ್ನು ಮೊದಲ ಸಲ ಖಚಿತಪಡಿಸಿದುದು ಕಾಣುತ್ತದೆ; ಅಲ್ಲದೆ ಇವುಗಳಲ್ಲಿ ಕಟ್ಟಿದ ಛಂದೋಬಂಧಗಳಲ್ಲಿ ಲಗವಿನ್ಯಾಸ, ಪಾದಾಂತಾಕ್ಷರದ ನಿಲುಗಡೆ, ಯತಿವಿಚಾರ ಇಂತಹ ಮಾರ್ಮಿಕವಾದ ಅಂಗ-ಗಳು ವಹಿಸುವ ಪಾತ್ರವೇನು ಎನ್ನುವುದನ್ನು ತೌಲನಿಕವಾಗಿ ಶೋಧಿಸಿ ನಿರೂಪಿಸಿರುವುದು ತೃಪ್ತಿಕರವಾಗಿದೆ; ಸ್ವಾರಸ್ಯಕರವಾಗಿದೆ. ತ್ರಿಪದಿ ಸಾಂಗತ್ಯಗಳು ತ್ರಿಮೂರ್ತಿಗಣಬದ್ಧವಾದ ಬಂಧಗಳೆಂದು ಮೊದಲ ಸಲ ತಿಳಿಸಿ, ಅವುಗಳಿಗೆ ಪರಿಷ್ಕೃತವಾಗಿ ಲಕ್ಷಣ ನಿರ್ವಚನೆ ಮಾಡಿದುದು ಇಲ್ಲಿಯೇ ಎನ್ನುವುದನ್ನು ವಿಶೇಷವಾಗಿ ನೆನೆಯಬೇಕು. 'ಸೊಬಗಿನ ಸೋನೆ ಮಟ್ಟು' ಅಪ್ರಚುರವಾಗಿರು-ವುದಕ್ಕೆ ಊಹಿಸಿರುವ ಕಾರಣ ತುಂಬ ತೃಪ್ತಿಕರವಾದ್ದು. ಮೂಲಪ್ರಬಂಧಕ್ಕೆ ಅನಂತರದಲ್ಲಿ ಸೇರ್ಪಡೆಯಾಗಿರುವ ಟಿಪ್ಪಣಿಗಳು ಅತ್ಯಂತ ಉಪಯುಕ್ತವಾದ-ವೆಂದು ಹೇಳಬೇಕು. ಏಳೆಯ ವಿಚಾರವಾಗಿ ಬರೆದಿರುವ ವಿಸ್ತೃತವಾದ ಟಿಪ್ಪಣಿ ತೌಲನಿಕ ಸಮಾಲೋಚನೆಯಿಂದಾಗಿ ವಿಷಯಪುಷ್ಟಿಯಿಂದ ಕೂಡಿ ಸ್ವಾರಸ್ಯಕರ-ವಾಗಿದೆ. 'ಏಳೆ' ಶಬ್ದದ ನಿಷ್ಪತ್ತಿಯ ವಿಚಾರದಲ್ಲಿ, ಅವರು ಅದನ್ನೊಂದು ಸಮಸ್ಯೆ-ಯನ್ನಾಗಿ ಭಾವಿಸಿರುವುದು ಏಕೆಂದು ನನಗೆ ತಿಳಿಯುತ್ತಿಲ್ಲ. ಏಕೆಂದರೆ, 'ಏಳೆ' ಎಂಬುದು ಸಂಸ್ಕೃತ 'ಏಲಾ' ಶಬ್ದದ ಕ್ಷಳಘಟಿತ ರೂಪವೆಂಬುದು ವಿದಿತವೇ ಇದೆ. ಜಯಕೀರ್ತಿ ಕನ್ನಡ 'ಏಳೆ'ಯನ್ನು 'ಏಲಾ' ಎಂಬುದಾಗಿ ಕರೆದಿರುವುದನ್ನೇ ಇದಕ್ಕೆ ಸಮರ್ಥನೆಯ ಸಾಕ್ಷ್ಯವನ್ನಾಗಿ ಅಂಗೀಕರಿಸಲು ಅಡ್ಡಿಯೇನೂ ನನಗೆ ತೋರುತ್ತಿಲ್ಲ.

ಸೇಡಿಯಾಪು ಕೃಷ್ಣ ಭಟ್ಟರು ಕನ್ನಡ ಭಾಷೆ ಸಾಹಿತ್ಯಗಳ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರು; ಬಹುಭಾಷೆಗಳಲ್ಲಿ ತಜ್ಞತೆ ಪಡೆದವರು; ಸಂಗೀತ ಶಾಸ್ತ್ರಜ್ಞರು. ಅವರು ತಮ್ಮ ಬಹುಭಾಷಾಭಿಜ್ಞತೆ ಸಂಗೀತಶಾಸ್ತ್ರಜ್ಞತೆಯನ್ನು ಕನ್ನಡ ಭಾಷೆ ಸಾಹಿತ್ಯಗಳ ಸಂಶೋಧನೆಯಲ್ಲಿ ತುಂಬ ಸಮರ್ಥವಾಗಿ, ಉಪಯುಕ್ತವಾಗಿ ಬಳಸುತ್ತಾರೆ. ಇದರಿಂದ ಇತರ ವಿದ್ವಾಂಸರ ಕಣ್ಣುಗಳು ಹಾಯದ ನೆಲೆಗಳನ್ನೂ

ತಲುಪದ ನೇರಗಳನ್ನೂ ಅವರ ಕಣ್ಣುಗಳು ಹಾಯುತ್ತವೆ, ತಲುಪುತ್ತವೆ. ಆ ಕಣ್ಣುಗಳು ನಿಜವನ್ನು ಯಶಸ್ವಿಯಾಗಿ ಗುರುತಿಸುತ್ತವೆ; ಕತ್ತಲಲ್ಲಿ ಬೆಳಕಿನ ಕಿರಣಗಳನ್ನು ಹೊಮ್ಮಿಸುತ್ತವೆ.

ವಸ್ತುವಿವೇಚನೆಯಲ್ಲಿ ಅವರು ಸಾಕಲ್ಯ, ಸಮಗ್ರತೆ ಮತ್ತು ವೈಖರಿಗಳನ್ನು ಮೆರೆಯುವ ಅಪೂರ್ವ ಶಕ್ತಿಯುಳ್ಳವರು. ಯಾವುದೇ ವಸ್ತುವಿನ ಸ್ವರೂಪವನ್ನು ನಿರೂಪಿಸುವಲ್ಲಿಯೂ, ವಿಮರ್ಶಿಸುವಲ್ಲಿಯೂ, ಮರ್ಮಗಳನ್ನೂ ರಹಸ್ಯಗಳನ್ನೂ ಭೇದಿಸುವಲ್ಲಿಯೂ ಅವರು ಅಪಾರವಾದ ಶಕ್ತಿ, ಸಹನೆ ಮತ್ತು ಸಂಯಮಗಳನ್ನು ಪ್ರಕಟಿಸುತ್ತಾರೆ. ಸಮುಚಿತ ವಾದಗಳನ್ನು ಹೂಡುವುದರಲ್ಲಿ ಸುಸಂಬದ್ಧವಾದ ವಿವರಗಳನ್ನು ಎಳೆಎಳೆಯಾಗಿ ಬಿಡಿಸುತ್ತ, ಕೂದಲು ಸೀಳುವಂತೆ ಅವನ್ನು ಸೀಳುತ್ತ, ಅಣುಗಳನ್ನು ಒಡೆಯುವಂತೆ ಒಡೆಯುತ್ತ ಸಾಗುವ ಅವರ ನಿರ್ವಹಣ ವೈಖರಿ ಅನನ್ಯಸಾಧಾರಣವಾದುದು; ಆಳದಿಂದ ಆಳಕ್ಕೆ ಇಳಿದು ಮರ್ಮಗಳನ್ನು ಗುರುತಿಸುವುದೂ ಸಂಗತಿಗಳನ್ನು ತರ್ಕಬದ್ಧವಾಗಿ ಸಂಯೋಜಿಸುವುದೂ ಒಪ್ಪುವಂತಹ ನಿಗಮನಗಳನ್ನು ಸಾಧಿಸುವುದೂ ಅತಿಶಯ ಸುಂದರವಾದವು, ಪ್ರೌಢವಾದವು.



೬

# ಛಂದೋವಿದ ಸೇಡಿಯಾಪು*

– ಡಾ. ಆರ್. ಗಣೇಶ್

ಛಂದಸ್ಸು ಇಲ್ಲದ ಶಬ್ದವೇ ಇಲ್ಲ (ನಾಚ್ಛಂದಸಾ ವಾಗುಚ್ಚರತಿ). ಆದರೆ ವಿಶಿಷ್ಟಗತಿಸೌಂದರ್ಯವಿರುವ ಗುರುಲಘುವಿನ್ಯಾಸವನ್ನು ಮಾತ್ರ ಛಂದಸ್ಸೆಂದು ಸಾಮಾನ್ಯವಾಗಿ ಗುರುತಿಸುತ್ತೇವೆ. ವೇದಕ್ಕೂ ಛಂದಸ್ಸೆಂಬ ಅಭಿಧಾನ ಉಂಟಲ್ಲದೆ ವೇದಾಂಗವಾಗಿ ಛಂದಸ್ಸು ವಿಖ್ಯಾತ. ಕಾವ್ಯಮೀಮಾಂಸಕರು ಛಂದಸ್ಸಿಗೆ ಕಾವ್ಯ ವಿವೇಚನಾವಸರದಲ್ಲಿ ಗಣ್ಯಸ್ಥಾನವನ್ನು ಕೊಟ್ಟಿದ್ದಾರೆ. ಛಂದೋಲಂಕಾರ ವ್ಯಾಕರಣ ಶಾಸ್ತ್ರಗಳು ಸಾಹಿತ್ಯವಿದ್ಯೆಗೆ ಬೆನ್ನುಲುಬಿನಂತೆ. ಛಂದಸ್ಸಿನ ಬಗ್ಗೆ ಅನೇಕ ಜನ ಪ್ರಾಚೀನರೂ ಅರ್ವಾಚೀನರೂ ಹೇಳಿದ್ದಾರೆ, ಹೇಳುತ್ತಲೂ ಇದ್ದಾರೆ. ಆದರೂ ಸಹ ಛಂದಃಶಾಸ್ತ್ರ ಹೆಚ್ಚು ಜನರನ್ನು ಆಕರ್ಷಿಸುತ್ತಿಲ್ಲ. ಆದಿಯಿಂದಲೂ ಅದು ಸ್ವಲ್ಪ ಮಟ್ಟಿಗೆ ಅವಗಣನೆಗೇ ಒಳಗಾಗಿದೆ. ಈಚೆಗಂತೂ ವಿಶೇಷವಾಗಿ ಮುಕ್ತಛಂದಸ್ಸು ಪ್ರಬಲವಾದ ಬಳಿಕ ಛಂದಸ್ಸಿನ ಅಧ್ಯಯನ ಅಳಿಯುವ ದೆಸೆಯಲ್ಲಿ ಇದೆಯೆಂದರೂ ಸಂದೀತು. ನಮ್ಮ ತಲೆಮಾರಿನ ಮುನ್ನವೇ ಕನ್ನಡ-ದಲ್ಲಿ ಛಂದಃಸಂಶೋಧನಾವಸರದಲ್ಲಿ ವೃತ್ತ-ಕಂದಗಳ ಅಭ್ಯಾಸವು ಪಳೆಯುಳಿಕೆಯ ಪರೀಕ್ಷೆಯಂತಾಗಿದೆಯೇ ಹೊರತು ಜೈವಿಕ ನೋಟ ಅದಕ್ಕೆ ದಕ್ಕಿಲ್ಲ.

ಪಿಂಗಳನಿಂದ ಮೊದಲ್ಗೊಂಡು ಹಲವರು (ಸಂಸ್ಕೃತದಲ್ಲಿ) ಛಂದೋ-ವಿದರು ಖ್ಯಾತರಾಗಿದ್ದರೂ, ಜಯಕೀರ್ತಿ, ಕೇದಾರ ಭಟ್ಟ ಮತ್ತು ಹೇಮಚಂದ್ರರು ಬಹು ಗಣ್ಯರಾಗುತ್ತಾರೆ. ಈ ಸಾಲಿನಲ್ಲಿ ವಿಲಕ್ಷಣವಾದ ಛಂದೋವಿದ ಕ್ಷೇಮೇಂದ್ರ. ಈತನಿಗೆ ಉತ್ತರಾಧಿಕಾರಿಗಳಿಲ್ಲದೆ ಇಂದಿಗೂ ಇವನ ಮನೋಹರಮಾರ್ಗವು ಸಮರ್ಥ ತಜ್ಞರಿಗಾಗಿ ಎದುರು ನೋಡುತ್ತಿದೆ. ಕನ್ನಡದಲ್ಲಿ ನಾಗವರ್ಮ, ಈಶ್ವರ ಕವೀತ್ಯಾದಿ ಪ್ರಾಚೀನರು ವರ್ಣನಾತ್ಮಕವಾಗಿ ಛಂದಸ್ಸನ್ನು ವಿವೇಚಿಸಿದ್ದಾರೆಯೇ ಹೊರತು ಅದರ ತಾತ್ತ್ವಿಕ ಮೀಮಾಂಸೆಯನ್ನು ಕೈಗೊಂಡಿಲ್ಲ. ಈ ಶತಮಾನದಲ್ಲಿ

---

* ಜನವರಿ ೨೬, ೧೯೯೦ರಂದು ಕಾರ್ಕಳ ಶ್ರೀ ಭುವನೇಂದ್ರ ಕಾಲೇಜಿನಲ್ಲಿ ನಡೆದ 'ಸೇಡಿಯಾಪು ಸಾಹಿತ್ಯಗೋಷ್ಠಿ'ಯಲ್ಲಿ ಓದಿದ ಉಪನ್ಯಾಸದ ಭಾಗ. ಉಪನ್ಯಾಸದ ಮೊದಲ ಪೀಠಿಕಾಭಾಗವನ್ನು ಹೊರತುಪಡಿಸಿ ಉಳಿದ ಭಾಗವನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ. ಮೊದಲಿಗೆ ಈ ಲೇಖನವು ಕಾರ್ಕಳ ಭುವನೇಂದ್ರ ಕಾಲೇಜಿನ ವಾರ್ಷಿಕಾಂಕದಲ್ಲಿ ಪ್ರಕಟಗೊಂಡ ಅನಂತರ ಸೇಡಿಯಾಪು ಸ್ಮೃತಿಸಂಚಯರೂಪದ 'ನಂದಾದೀವಿಗೆ' (ಸಂ. ಎಂ. ರಾಮಚಂದ್ರ, ೧೯೯೭, ಪ್ರ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ) ಕೃತಿಯಲ್ಲಿ ಪುನರ್ಮುದ್ರಿತವಾಯಿತು. – ಸಂ.

ಗೆಲುವಿನಿಂದ ಆರಂಭವಾದ ಛಂದಃಶಾಸ್ತ್ರಾಧ್ಯಯನಕ್ಕೆ ಆಚಾರ್ಯ ಬಿ. ಎಂ. ಶ್ರೀ. ನಾಂದಿ ಹಾಡಿದರಾದರೂ ಸ್ಪಷ್ಟರೂಪವನ್ನು ಕೊಡಲಿಲ್ಲ. ದ್ರಾವಿಡ ಚ್ಛಂದೋಭಿಮಾನದಿಂದ ವೃತ್ತಗಳಿಗೆ ಅನ್ಯಾಯವನ್ನೇ ಮಾಡಿದರೆನ್ನಬಹುದು. ಶ್ರೀಯುತರಾದ ತೀ. ನಂ. ಶ್ರೀ. ಸ್ತುತ್ಯಯತ್ನಗಳನ್ನು ಮಾಡಿದರಾದರೂ ಛಂದಸ್ಸಿನ 'ಗತಿ'ಯ ಬಗ್ಗೆ ಅಸ್ಪಷ್ಟ ಪರಿಭಾಷೆ, ಸಂದಿಗ್ಧ ವಿವರಣೆಗಳಿಂದಾಗಿ ಪೂರ್ಣ ಯಶಸ್ಕರಾಗಲಿಲ್ಲ. ಶ್ರೀ. ವಿ. ಸೀ. ಅವರ ಛಂದೋವಿಚಿಕಿತ್ಸೆಯಂತೂ ಬಹುತೇಕ ಬಿ. ಎಂ. ಶ್ರೀ. ಮತ್ತು ಶ್ರೀ. ಹೆಚ್. ಡಿ. ವೇಲಣಕರ್ ಅವರ ವಿವರಣೆಗಳಿಂದ ಪ್ರಭಾವಿತವಾಗಿ ಮತ್ತಷ್ಟು ಅಸ್ಪಷ್ಟತೆ, ದ್ರವತೆಗಳನ್ನು ತುಂಬಿಕೊಂಡಿತು. ಡಾ । ಕರ್ಕಿ, ಡಾ । ಟಿ. ವಿ. ವೆಂಕಟಾಚಲಶಾಸ್ತ್ರೀ, ಡಾ । ಡಿ. ಎಲ್. ನರಸಿಂಹಾಚಾರ್ಯ ಮೊದಲಾದ ಅನೇಕರು ವಿದ್ವತ್ಪೂರ್ಣ ಲೇಖನಗಳನ್ನೂ, ಪುಸ್ತಕಗಳನ್ನೂ ರಚಿಸಿದರಾದರೂ ಇವೆಲ್ಲ ಪಾಶ್ಚಾತ್ಯ ವಿದ್ವತ್ಪದ್ಧತಿಯಂತೆ ವರ್ಣನಾತ್ಮಕ ವಿಮರ್ಶೆ-ಯಾಯಿತೇ ಹೊರತು ತಾತ್ತ್ವಿಕವಾದ ಛಂದಸ್ತತ್ತ್ವದ ಆಂತರಂಗಿಕ ಮೀಮಾಂಸೆ-ಯಾಗಲಿಲ್ಲ. ಹಾಗೆಂದು ಇವರಾರಿಗೂ ಛಂದೋಂತರಂಗಸ್ವರೂಪ ತಿಳಿದಿರಲಿಲ್ಲ-ವೆಂದಲ್ಲ, ಆ ರೀತಿಯ ಗತಿವಿವೇಚನೆ, ಲಯ-ಗತಿ ಭೇದ ವಿಜ್ಞಾನ, ಯತಿ-ಸಾರ್ಥಕ್ಯ ಮೊದಲಾದುವು ಕವಿದೃಷ್ಟಿಯಿಂದ ಪ್ರಯೋಜಕವೇ ಹೊರತು ವಿದ್ವದ್ದೃಷ್ಟಿಯಿಂದ ಅಲ್ಲವೆಂದು ಭಾವಿಸಿದ್ದರೆಂದೂ ಹೇಳಲಾಗದು. ರಾಶಿರಾಶಿ-ಯಾಗಿ ವ್ಯಾಸಂಗಸಾಮಗ್ರಿಯನ್ನು ಕೂಡಿಸಿ, ಪ್ರಸ್ತಾರಗಳ ಗಣಿತವನ್ನು ಮೊಗೆದು ಚಾರಿತ್ರಿಕವಾಗಿ ಉಲ್ಲೇಖಬಾಹುಲ್ಯದಿಂದ ಬಾಹ್ಯವಿವರಣೆಯನ್ನು ಕೊಡುವುದೇ ಬಹುತೇಕ ಛಂದೋವಿದ್ವಾಂಸರ ಬರಹದ ಪಾಡಾಗಿತ್ತೆಂಬುದನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಛಂದಸ್ಸಿನ ಚರಿತ್ರೆಯ ಎರಡು ಸಂಪುಟಗಳಲ್ಲಿ ಕಾಣಬಹುದು. ಛಂದಸ್ಸೌಂದರ್ಯದ ಬಗ್ಗೆ ಹಲವಾರು ಜನರು ಪ್ರಾಸ್ತಾವಿಕವಾಗಿ ನುಡಿದಿದ್ದರಾದರೂ ಶಾಸ್ತ್ರಖಾಚಿತ್ಯ, ವಿವೇಚನೆಯ ನೈಶಿತ್ಯ, ನಿರೂಪಣನೈರ್ದುಷ್ಟ್ಯ ಮೊದಲಾದ ಗುಣಗಳಿಲ್ಲದೆ ಅಪರೀಕ್ಷಿತವೂ ಅಪರಿಷ್ಕೃತವೂ ಆದ ಪರಿಭಾಷೆ-ಯಿಂದ, ಕಾವ್ಯಮಯ ನಿರೂಪಣೆಯಿಂದಾಗಿ ಗುರಿ ಸಾಧಿಸದೆ ಗೊಂದಲ-ವನ್ನುಂಟುಮಾಡಿದ್ದರೆಂದರೆ ತೀರ ತಪ್ಪಾಗಲಾರದು. ಛಂದಸ್ಸಿನ ಬಗೆಗೆ ಸಂಶೋಧನೆಯೆಂದರೆ ಇಷ್ಟೇ ಮತ್ತು ಇದನ್ನುಳಿದಿನ್ನೇನು ಸಾಧ್ಯ? ಎಂಬ ಭಾವನೆಯೂ ಬೆಳೆದಿದ್ದಲ್ಲಿ ಆಶ್ಚರ್ಯವಿರಲಾರದು.[1] ಕವಿಗಳು ಹಲವರು ಮತ್ತು ಕಾವ್ಯ ವಿಮರ್ಶಕರು ಕೆಲವೊಮ್ಮೆ ಛಂದಸ್ಸಿನ ವಿಮರ್ಶನವನ್ನು ಕಾವ್ಯವಿಮರ್ಶನದ

---

1. ಈಚೆಗೆ ಸಂಸ್ಕೃತದ ಅಲಂಕಾರಶಾಸ್ತ್ರದಲ್ಲಿ ಹೆಚ್ಚಿನ ಪರಿಣತಿ ಪಡೆಯಲು ಬೆಂಗಳೂರಿಗೆ ಬಂದ ಅಮೇರಿಕದ ಒಬ್ಬ ಸಂಸ್ಕೃತಜ್ಞರೂ ನನ್ನೊಡನೆ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಗಣಿತೀಯ ಮತ್ತು ಚಾರಿತ್ರಿಕ ರೀತಿಯ ಅಧ್ಯಯನವಲ್ಲದೆ ಛಂದಸ್ಸಿನಲ್ಲಿ ಮತ್ತೇನಿದೆಯೆಂದು ಕೇಳಿದರು!

ಅಂಗವಾಗಿ ಮಾಡುತ್ತಾ ಗತಿಯ ಬಗ್ಗೆ, ಶ್ರವಣಸುಭಗತೆಯ ಬಗ್ಗೆ ಹಲವಾರು ಬಾರಿ ಪರಾಮರ್ಶಿಸಿರುವರಾದರೂ ಪ್ರಾಸಂಗಿಕವಾದ ಇಂಥ ಪ್ರಯತ್ನಗಳು ಗಟ್ಟಿಯಾದ ತಾತ್ತ್ವಿಕ ನೆಲೆಗಟ್ಟು ಮತ್ತು ಸಮಸ್ಯೆಯ ಮೂಲಚೂಲಗಳನ್ನು ನಿಃಶೇಷವಾಗಿ ಕಂಡು ಬಿಡಿಸುವ ಕೃಷಿಯಿಲ್ಲದೆ ಅರೆಬರೆಯಾಗಿ ನಿಂತುಬಿಟ್ಟವು. ಅಷ್ಟೇ ಅಲ್ಲದೆ ಈ ರೀತಿಯ ವಿವೇಚನೆಗಳು ಕೇವಲ ಒಂದೆರಡು ರೀತಿಯ ಛಂದೋಬಂಧಗಳಿಗೂ, ಬಹುತೇಕವಾದ ಆಧುನಿಕ ಕಾವ್ಯದ ಮಾತ್ರಾಗಣ ಅರ್ಥಾತ್ 'ಜಾತಿ' ವಿಭಾಗದ ಮಟ್ಟಿಗೂ ಸೀಮಿತವಾಗಿ ಬಿಟ್ಟುವು. ಇದಲ್ಲದೆ ಪಾಶ್ಚಾತ್ಯ ವಿಮರ್ಶನತತ್ತ್ವಗಳನ್ನೂ, ಮೌಲ್ಯಗಳನ್ನೂ ಸ್ವೀಕರಿಸುವ ಭರದಲ್ಲಿ ಅಲ್ಲಿಯ ಛಂದಸ್ಸೂಕ್ಷ್ಮಗಳನ್ನೂ ವಿವೇಚನೆಯಿಲ್ಲದೆ ಕನ್ನಡದ ಕಾವ್ಯದಲ್ಲಿ ಕಾಣುವ ಮೂಲಕ 'ಲಯ' ಶಬ್ದವನ್ನು ಅನುಚಿತಾರ್ಥದಲ್ಲಿ ಬಳಸುತ್ತಾ, ಗಣನಿಯಮ ಭಂಗವನ್ನು ಯತ್ಯುಲ್ಲಂಘನವೆನ್ನುತ್ತಾ, ಈ ರೀತಿಯ 'ಯತಿಭಂಗ'(?)ವನ್ನು ಏಕತಾನತೆಯನ್ನು ನೀಗುವ ರಚನೌತ್ಕೃಷ್ಟ್ಯವೆನ್ನುತ್ತಾ 'ಆಕ್ಸೆಂಟೆಡ್' ಭಾಷೆಯಾದ ಇಂಗ್ಲೀಷಿನ ಸ್ವರಭಾರಕ್ರಮವನ್ನೇ ಕನ್ನಡ ನುಡಿಗೂ ಅನ್ವಯಿಸುತ್ತಾ ನಮ್ಮ ಭಾಷೆಯ ಹಾಗೂ ಅದಕ್ಕೆ ವಿಶಿಷ್ಟವಾದ ಆಕ್ಷರಿಕ ವಿನ್ಯಾಸವನ್ನೇ ಮರೆಯುವ ಪ್ರಯೋಗಗಳೂ ಹುಲುಸಾಗತೊಡಗಿದವು.

ಈ ತರುಣದಲ್ಲಿ ಪ್ರಕಟವಾದ ಶ್ರೀ ಸೇಡಿಯಾಪು ಅವರ 'ಛಂದೋಗತಿ' ಸರ್ವಪ್ರಕಾರಗಳಿಂದಲೂ ವಿಶಿಷ್ಟಗ್ರಂಥವಾಗಿದೆ. ಇದರ ಮುನ್ನುಡಿಯಲ್ಲಿ ಡಾ । ಶ್ರೀನಿವಾಸ ಹಾವನೂರರೆಂದಿರುವಂತೆ ಈ ಕೃತಿ ಸಂಪೂರ್ಣವಾಗಿ ಛಂದಸ್ಸಿನ ಆಂತರಂಗಿಕ ಮೀಮಾಂಸೆಯನ್ನು ಕುರಿತದ್ದು. 'ಲಯ' ಎಂಬ ಶಬ್ದದ ಅನುಚಿ-ತೋಪಯೋಗವನ್ನು ಕಂಡು ಅದರ ಯಥಾರ್ಥವನ್ನು ತಿಳಿಸಲು ಹೊರಟ ಲೇಖನವು ಪೂರ್ಣಪ್ರಮಾಣದ ಗ್ರಂಥವಾಗಿರುವುದು ನಮ್ಮ ಸುದೈವ. ಈ ಕೃತಿಯು ಸಂಸ್ಕೃತದ ಅಲಂಕಾರಶಾಸ್ತ್ರದಲ್ಲಿಯ ಆಚಾರ್ಯಕೃತಿಯಾದ ಧ್ವನ್ಯಾಲೋಕ-ದಂತೆಯೇ ಸ್ವೋಪಜ್ಞ, ಸ್ವಯಂಪೂರ್ಣ. ಗತಿವೈವಿಧ್ಯಗಳ, ಲಯದ ವಾಸ್ತವಾರ್ಥದ ಹೊಳಹು ಹಲವರಿಗೆ ಅರಿವಾಗಿದ್ದಿರಬಹುದಾದರೂ, ಅನ್ಯತ್ರ ಯತ್ನಗಳು ಮುನ್ನವೇ ನಡೆದಿದ್ದಿರಬಹುದಾದರೂ[2]; ಹೇಗೆ ಆನಂದವರ್ಧನನು 'ಬುಧೈರ್ಯ-ಸ್ಸಮಾಮ್ನಾತ ಪೂರ್ವಃ' ಎಂದು ಹೇಳಿದರೂ ಧ್ವನಿಕಾರನೆಂಬ ಕೀರ್ತಿ ಆತನಿಗೆ ಅದರ ಸಮರ್ಥ-ಸುಭಗ ವಿವೇಚನೆಯಿಂದಾಗಿ ದಕ್ಕಿತೋ ಹಾಗೆಯೇ ಶ್ರೀ

---

2. ಶ್ರೀ ಸೇಡಿಯಾಪು ಅವರೇ ತಮ್ಮ ಗ್ರಂಥದಲ್ಲಿ ಪಿಂಗಳಚ್ಛಂದಃಸೂತ್ರದಲ್ಲಿನ 'ಗ್ಲಿತಿಸಮಾನೀ', 'ಲ್ಗಿತಿ ಪ್ರಮಾಣೀ', 'ವಿತಾನಮನ್ಯತ್' ಗಳಿಗೆ ಗತಿಸೂಚ್ಯಾರ್ಥಗಳನ್ನು ಹೇಳುವಾಗ ಇದು ಸೂತ್ರಕಾರರ ವಿವಕ್ಷೆಯೇ ಇರಬೇಕೆಂದಿರುವುದೂ ಈ ಮಾತಿಗೆ ಪೂರಕ. ಕ್ಷೇಮೇಂದ್ರನೂ ಸ್ವಲ್ಪ ಛಂದಸ್ಸೌಂದರ್ಯ ವಿವೇಚನೆ ನಡೆಸಿದ್ದಾನೆ. ಇತರ ಕೆಲವರು ವಿದ್ವಾಂಸರು ಅನ್ಯ ಭಾಷೆಗಳಲ್ಲಿ ಯತ್ನಿಸಿದ್ದಾರೆ.

ಸೇಡಿಯಾಪು ಅವರೂ, ಅವರ ಕೃತಿಯೂ ಯಶಸ್ಸಿಗೆ ಪಾತ್ರ. ಗತಿತತ್ತ್ವವನ್ನು ಪೂರ್ಣವಾಗಿ, ಸಂಶಯ – ಸಂದಿಗ್ಧತೆಗಳಿಗೆಡೆಯಿಲ್ಲದಂತೆ ಪ್ರಸ್ಫುಟಗೊಳಿಸಿ ಸ್ಥಾಪಿಸಿದ ಕೀರ್ತಿ ಅವರದೇ!

೧೯೮೫ರಲ್ಲಿ ಪ್ರಕಟವಾದ 'ಛಂದೋಗತಿ'ಯು ನವಪರಿಚ್ಛೇದಾತ್ಮಕವಾದ ೨೧೭ ಪುಟಗಳ ಗ್ರಂಥ. ಇದರ ವಿಶೇಷತೆ ಹತ್ತಾರು ತೆರನಾದುದು. ಅಡಿಟಿಪ್ಪಣಿಗಳ ವಿಸ್ತಾರ – ವ್ಯಾಪ್ತಿ, ವಿಷಯಾಂತರವಿವೇಚನಸಾಮರ್ಥ್ಯ ಅಸದೃಶವಾದ ಒಂದಂಶ. ಅನ್ಯರ ಉಕ್ತಿಗಳನ್ನು – ವಿಶೇಷತಃ ನವೀನ ಸಂಶೋಧಕರ ನುಡಿಗಳನ್ನು – ಸಿದ್ಧಾಂತಭಾಗದಲ್ಲಿ ಆಶ್ರಯಿಸದೆ ಸ್ವಯಂವಿಮೃಷ್ಟ ತತ್ತ್ವಗಳನ್ನು ಖಚಿತವಾಗಿ ಹತ್ತಾರು ಪರಿಯ ಶಾಸ್ತ್ರಾಧಾರ, ಅನುಭವಪ್ರಾಮಾಣ್ಯದೊಡನೆ ಸ್ಥಾಪಿಸುವುದು ಮತ್ತೊಂದು ಹೆಗ್ಗಳಿಕೆ. ಅಮರಕೋಶ, ಜಯಕೀರ್ತಿಯ ಛಂದೋನುಶಾಸನ, ಪಿಂಗಲಚ್ಛಂದಃಸೂತ್ರ, ಸಂಗೀತರತ್ನಾಕರ ಮೊದಲಾದ ಆಚಾರ್ಯಕೃತಿಗಳ ನೇರವಾದ ನೆರವು ಪಡೆದು ಅವುಗಳಲ್ಲಿ ಬೀಜರೂಪದಿಂದಿರಬಹುದಾದ, ಅನ್ಯವಿಚಾರವಿವೇಚನಾವಸರದಲ್ಲಿ ಪ್ರಾಸಂಗಿಕವಾಗಿ ಉಲ್ಲಿಖಿತವಾದ ಎಳೆಗಳನ್ನು ಕೂಡಿಸಿ ಅದಕ್ಕೆ ತಮ್ಮ ನಿಶಿತತರ್ಕದಿಂದ ಸಾಮಗ್ರ್ಯವನ್ನು ಕೊಟ್ಟಿರುವುದು ಇನ್ನೊಂದು ವಿಶೇಷತೆ.

ಹೀಗೆ ಹಲವು ಪರಿಯಾದ ವೈದುಷ್ಯಗಳುಳ್ಳ ಈ ಕೃತಿಯನ್ನು ಅರ್ಥಮಾಡಿಕೊಳ್ಳುವುದೂ ಕಷ್ಟಕರವೇ. ಸಂಗೀತ, ಛಂದಸ್ಸು, ಕಾವ್ಯಮೀಮಾಂಸೆ, ಶಬ್ದಸ್ವರೂಪಾದಿಗಳ ಪರಿಚಯವಿಲ್ಲದವರಿಗೆ ತಿಳಿಯಲಾಗದು. ಆದರೆ ಶಾಸ್ತ್ರಜ್ಞರಿಗಿದು ರಸಸಮಾರಾಧನ. ಭಾರತೀಯ ಪರಂಪರೆಯ ಶಾಸ್ತ್ರಸಾಹಿತ್ಯನಿರ್ಮಾಣಕ್ಕಿದೊಂದು ಅತ್ಯುತ್ತಮ ನಿದರ್ಶನ. ನಮ್ಮ ನಾಡು–ನುಡಿಗಳದ್ದಲ್ಲದ ಯಾವೊಂದು ಅನವಶ್ಯಕ ಬಾಹ್ಯತತ್ತ್ವಗಳನ್ನೂ ತುರುಕುವ ಪ್ರಯತ್ನ ಇಲ್ಲಿಲ್ಲ. ಹೀಗಿದ್ದೂ – ಅಥವಾ ಹೀಗಿರುವುದರಿಂದಲೇ ಈ ಕೃತಿ ಹೆಚ್ಚು ಪ್ರಚುರಗೊಂಡಿಲ್ಲವೇನೋ. ಪ್ರೊ । ಎಂ. ವಿ. ಸೀ. ಅವರ 'ಲೋಚನ' ಪತ್ರಿಕೆಯ ವಿಮರ್ಶೆಯೊಂದನ್ನುಳಿದು ಇನ್ನೆಲ್ಲೂ ಈ ಕೃತಿಯ ವಿವೇಚನೆ ನನಗಂತೂ ಕಂಡುಬಂದಿಲ್ಲ. (ಶ್ರೀ ಎಂ. ರಾಜಗೋಪಾಲಾಚಾರ್ಯರು ಒಂದು ಪುಸ್ತಿಕೆಯನ್ನಿದರ ಬಗ್ಗೆ ಪ್ರಕಟಿಸಿದ್ದಾರೆ.)

ಡಾ । ಟಿ. ವಿ. ವೆಂಕಟಾಚಲ ಶಾಸ್ತ್ರೀ, ಪ್ರೊ । ಅ. ರಾ. ಮಿತ್ರ ಮೊದಲಾದ ಹಲವಾರು ವಿದ್ವಾಂಸರು ಈ ಕೃತಿಯ ಮೌಲಿಕತೆಯನ್ನು ಹಲವಾರು ಬಾರಿ ಪ್ರಸ್ತಾವಿಸಿದ್ದಾರೆ. ಆದರೂ ಬಹುತೇಕ ಪ್ರಾಧ್ಯಾಪಕ ವಿದ್ವಾಂಸರುಗಳಿಗೆ ಈ ಕೃತಿಯ ಬೆಲೆ ತಿಳಿದಿಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ ನಾನರಿತಿರುವ ಹಲವಾರು ಭಾರತೀಯ ಭಾಷೆಗಳಾವುದರಲ್ಲೂ ಈ ಪ್ರಮಾಣದ ಕೃತಿ ಬಂದಿಲ್ಲ.[3]

---

3. ಸಂಸ್ಕೃತದಲ್ಲಿ ನಾನೊಂದು ಛಂದೋಗ್ರಂಥವನ್ನು ರಚಿಸುತ್ತಿದ್ದೇನೆ. ಅದರಲ್ಲಿ ನಾನು ಕಂಡುಕೊಂಡ ತತ್ತ್ವಗಳನ್ನು (ಸೇಡಿಯಾಪು ಅವರ ಸಂಶೋಧನೆಗೆ ಸಂವಾದಿಯೂ

ಇನ್ನು ಈ ಕೃತಿಯ ಪರಿಚಯ: ಇದನ್ನು ಪರಿಚಯಿಸುವುದು ಬಹು ಕಷ್ಟದ ಕೆಲಸ. ಕಾರಣ, ಪುನರುಕ್ತಿಯಾಗಲಿ, ಅಮುಖ್ಯಾಂಶಗಳಾಗಲಿ, ಇಲ್ಲವಾಗಿ-ರುವ ಈ ಗ್ರಂಥದ ಪರಿಚಯ ಸ್ವಲ್ಪದರದಲ್ಲಿ ಆಗದು. ಪರಿಚಯವೆಂದರೆ ಇಡೀ ಗ್ರಂಥವನ್ನೇ ಇಲ್ಲಿಡುವ ಪ್ರಯಾಸವಾದೀತು. ಮೇಲಾಗಿ ಈ ಕೃತಿಯನ್ನು ಓದದವರಿಗೆ ಈ ಲೇಖನವೂ ಹೆಚ್ಚು ಪ್ರಯೋಜಕವಲ್ಲ. ಬರಿಯ ಅತಿಶಯೋಕ್ತಿ-ಭೂಯಿಷ್ಠವೆನ್ನಬಹುದಾದ ಈ ಲೇಖನದ ಸ್ವಭಾವೋಕ್ತಿಸತ್ಯವನ್ನು 'ಛಂದೋಗತಿ' ಕೃತಿಯನ್ನು ಓದದೆ ಅರಿಯುವುದು ಕಷ್ಟ. ಆದುದರಿಂದ ಶ್ರೀಯುತರು ಪ್ರಕೃತ ಗ್ರಂಥದಲ್ಲಿ ಸಾಧಿಸಿರುವ ಮಹತ್ತ್ವದ ನಿರ್ಣಯಗಳನ್ನು ಮಾತ್ರ ಕ್ರಮವರಿತು ಸೂಚಿಸುತ್ತೇನೆ.

೧) 'ಲಯ' ಶಬ್ದದ ಅನಿಶ್ಚಿತ, ಅಸಮರ್ಪಕ ವಿನಿಯೋಗದ ಬಗ್ಗೆ ಎತ್ತಿ ತೋರಿ ಅದರ ಮೂಲಸ್ವರೂಪವನ್ನೂ, ಇತಿ-ಮಿತಿಗಳನ್ನೂ ಸ್ಪಷ್ಟವಾಗಿ ತೋರಲಾಗಿದೆ.

ಲಯವು ಕಾಲಖಂಡಗಳ ಸಮತ್ವ, ನಿಯತ ಧ್ವನಿಖಂಡಗಳ ಮುಗಿತಾಯ; ಧ್ವನಿಪುಂಜಗಳ ಕಾಲಸಮತ್ವ, ಕ್ರಿಯಾಕಾಲಗಳ ಪರಸ್ಪರ ಸಮತೆ – ಅರ್ಥಾತ್ ಐಕ್ಯ ಮತ್ತು ಇದೇ ತಾಳದ ಆಧಾರ ಎಂದು ತಿಳಿಸಿ ಸಂಗೀತಲಯ, ಛಂದೋಲಯ-ಗಳ ಭೇದವನ್ನು ಸ್ಪಷ್ಟೀಕರಿಸಲಾಗಿದೆ. ತಾಳಬದ್ಧ ಛಂದೋರಚನೆಯೇ ಲಯಾ-ನ್ವಿತಚ್ಛಂದೋರಚನೆ; ಲಯಗ್ರಾಹಿ, ಲಯಾತ್ತ, ಲಯಾನುಗಾಮೀತ್ಯಾದಿ ವಿಶೇಷಣಗಳು ಇದಕ್ಕೆ ಪೂರಕ ಮತ್ತು ಛಂದಸ್ಸಿನ ಲಯವೆಂದರೆ ಪದ್ಯದ ಪದಾವಯವಗಳ ಮಾತ್ರಾಸಮತೆ ಎಂಬ ಸಾರೋಕ್ತಿಗಳನ್ನು ನೀಡಲಾಗಿದೆ.

೨) ವೃತ್ತ-ಜಾತಿಗಳ ಭೇದವನ್ನು ಅವುಗಳ ಲಕ್ಷಣದಲ್ಲಿಯ ಸರ್ವದೇಶ-ಸ್ಥಿರತೆ ಮತ್ತು ಏಕದೇಶಸ್ಥಿರತೆಗಳ ಮೂಲಕ ಸ್ಪಷ್ಟೀಕರಿಸಿ 'ಉಪಜಾತಿ' ಶಬ್ದದ ಔಚಿತ್ಯವನ್ನು ತಿಳಿಸಿ ತನ್ಮೂಲಕ ಅನುಷ್ಟಪ್ ಶ್ಲೋಕವನ್ನು ಸಮುಚಿತವಾದ 'ಅಕ್ಷರಜಾತಿ'ಯೆಂಬ ನೂತನವಿಭಾಗದಲ್ಲಿ ತರಲಾಗಿದೆ. ಇದು ಅತ್ಯಂತ ಸ್ತುತ್ಯ ನಿರ್ಣಯ.

೩) Rhythm ಶಬ್ದಕ್ಕೆ 'ಲಯ' ಎಂಬ ಅವಶಬ್ದಾರ್ಥ ಅರ್ಥಾತ್ ಅಯುಕ್ತಪ್ರತಿಪದವನ್ನು ಕುರಿತು ವಿಶೇಷವಾಗಿ ವಿಸ್ತೃತ ಜಿಜ್ಞಾಸೆಯನ್ನು ನಡೆಸಿ Rhythm ಶಬ್ದದ ಯೌಗಿಕಾರ್ಥ, ಲಕ್ಷ್ಯಾರ್ಥ, ರೂಢ್ಯರ್ಥಗಳನ್ನು ಪರಿಶೀಲಿಸಿ, ಅವ್ಯಾಪ್ತಿದೋಷವೊದಗಿರುವ 'ಲಯ' ಶಬ್ದಕ್ಕೆ ಬದಲಾಗಿ ಇಡೀ ಮೂರನೆಯ ಪರಿಚ್ಛೇದವನ್ನೆಲ್ಲಾ ವೈಚಾರಿಕ ತರ್ಕಕ್ಕೆ ಮೀಸಲಾಗಿಸಿ 'ಛಂದೋಗತಿ' ಎಂಬುದೇ Metrical Rhythm ಶಬ್ದದ ಸಂವಾದಿಪದವೆಂದು ನಿರ್ಧರಿಸಲಾಗಿದೆ. ಈ

---

ಪೂರಕವೂ ಆದುದನ್ನು) ದಾಖಲಿಸುತ್ತಿದ್ದೇನೆ. ಈ ಕಾರ್ಯಕ್ಕಾಗಿ ಅನ್ಯಭಾಷೆಗಳಲ್ಲಿ ತಡಕಿದಾಗ ನಾನರಿತ ಸತ್ಯ ಮೇಲ್ಕಾಣಿಸಿದ ನುಡಿ.

ಪ್ರಸ್ತಾವದಲ್ಲಿ ಶ್ರೀಯುತರು ಕಲೆ ಹಾಕಿರುವ ಶಾಸ್ತ್ರಸಾಮಗ್ರಿ, ಹೂಡಿರುವ ತರ್ಕ-ಯುಕ್ತಿ ಮತ್ತು ನೀಡಿರುವ ಕಾರಣಬಾಹುಲ್ಯ ಅನನ್ಯವಾದದ್ದು.

೪) ನಾಲ್ಕನೆಯ ಪರಿಚ್ಛೇದದಲ್ಲಿ ಛಂದಶ್ಶಬ್ದದ ನಿರ್ವಚನ ಮಾಡಿ ಸಂಪ್ರದಾಯಸಿದ್ಧವಾದ ಗುರುಲಘ್ವಕ್ಷರನಿಬದ್ಧವಿನ್ಯಾಸಸಮಸ್ತವೂ ಛಂದಸ್ಸೆಂಬ ಸಾಧುಮತವನ್ನು ನಿರೂಪಿಸಿ ಇದರಲ್ಲಿ ನಿಬದ್ಧ ಮತ್ತು ಅನಿಬದ್ಧ ಎಂಬ ಎರಡು ವಿಭಾಗಗಳ ಔಚಿತ್ಯಸಾರ್ಥಕ್ಯವನ್ನು ಕ್ರಮವಾಗಿ ಪದ್ಯ ಮತ್ತು ಗದ್ಯ ಪ್ರಭೇದಗಳಲ್ಲಿ ತೋರಲಾಗಿದೆ. ಅಲ್ಲದೆ ಅನಾಕರ್ಷಕ ಗುರುಲಘುವಿನ್ಯಾಸವು ತಾತ್ತ್ವಿಕವಾಗಿ ಛಂದಸ್ಸೇ ಆದರೂ, ಆಕರ್ಷಕವಾದ ಗುರುಲಘುವಿನ್ಯಾಸ, ತತ್ಫಲಿತವಾದ ವಿಶಿಷ್ಟ ಗತಿಸೌಂದರ್ಯ ಇರುವುದನ್ನೇ ಛಂದಸ್ಸೆಂದು ಸಾಮಾನ್ಯಾರ್ಥದಲ್ಲಿ ಗ್ರಹಿಸಿರುವು-ದನ್ನೂ ತಿಳಿಸಲಾಗಿದೆ.

೫) ಐದನೆಯ ಪರಿಚ್ಛೇದದಲ್ಲಿ 'ಸಂಗೀತರತ್ನಾಕರ'ದ ಸೂಕ್ಷ್ಮಾಧಾರದ ಮೇಲೆ ಗತಿಭೇದಗಳನ್ನು ಛಂದಸ್ಸಿನಲ್ಲಿ ಹೃದ್ಯವಾಗಿ ರೂಪಿಸಲಾಗಿದೆ. ಛಂದೋ-ಗತಿಯನ್ನು ಸತಾಲ ಮತ್ತು ವಿತಾಲ ಅರ್ಥಾತ್ ಲಯಾನ್ವಿತ ಮತ್ತು ಲಯ ರಹಿತಗಳೆಂಬ ವಿಭಾಗದಲ್ಲಿ ವಿಶ್ಲೇಷಿಸಿ ವೃತ್ತಗಳಲ್ಲಿ ಕಂಡುಬರುವ ಉಭಯಗತಿ-ಯನ್ನೂ ಜಾತಿಗಳಲ್ಲಿರುವ ಒಂದೇ ಲಯಾನ್ವಿತತೆಯನ್ನೂ ಎತ್ತಿ ತೋರಲಾಗಿದೆ. ಎಲ್ಲಕ್ಕೂ ಮಿಗಿಲಾಗಿ ಪಿಂಗಲಚ್ಛಂದಸ್ಸೂತ್ರದ ಮೂರು ಸೂತ್ರಗಳಿಂದ (ಗ್ಲಿತಿ ಸಮಾನೀ, ಲ್ಗಿತಿ ಪ್ರಮಾಣೀ, ವಿತಾನಮನ್ಯತ್) ಸಮಸ್ತಗತಿರಹಸ್ಯದ ಬೀಜಾಂ-ಕುರವನ್ನು ಸಂಶೋಧಿಸಿ ಪ್ರಾಚೀನರ ಗತಿಮೀಮಾಂಸೆಯ ಬಗೆಗೆ ಬೆಳಕು ಚೆಲ್ಲಲಾಗಿದೆ. ಅಲ್ಲದೆ ರಗಣಾದಿಗಳ ಆವೃತ್ತಿಯಿಂದ ಬರುವ ದಂಡಕಗತಿ-ವೈವಿಧ್ಯವನ್ನೂ ತಿಳಿಸಲಾಗಿದೆ. ಯತಿಸ್ಥಾನಪಲ್ಲಟದಿಂದಾಗಿ ಗತಿವೈವಿಧ್ಯವುಂಟಾ-ಗುವುದನ್ನೂ, ಅಕ್ಷರಸಂಖ್ಯೆ ಅಥವಾ ಗುರುಲಘುವಿನ್ಯಾಸಗಳಿಗಿಂತ ಗತಿವೈವಿಧ್ಯವೇ ವೃತ್ತವೈವಿಧ್ಯದ ಮೂಲಾಕರ್ಷಣಹೇತುವೆಂದೂ, ಪಿಂಗಳನಲ್ಲಿಯೇ ಈ ತತ್ತ್ವ ಬೀಜರೂಪದಲ್ಲಿರುವುದನ್ನೂ ಸ್ಪಷ್ಟಿಸಲಾಗಿದೆ.

೬) ಆರನೆಯ ಪರಿಚ್ಛೇದದಲ್ಲಿ ವಿತಾಲಪಠನದಿಂದಾಗಿ ಬರುವ ಅರ್ಥ-ವೈಶದ್ಯ ಮತ್ತು ಭಾವಗಾಂಭೀರ್ಯವನ್ನೂ ಸತಾಲಪಠನದ ನರ್ತನೌತ್ಸುಕ್ಯವನ್ನೂ ಸೊಗಸಾಗಿ ನಿರ್ದೇಶಿಸಲಾಗಿದೆ. ಅಂತೆಯೇ ಗಮಕವಾಚನದಲ್ಲಿ ವಿತಾಲವಾಗಿ ಹಾಡುವ ಷಟ್ಪದೀತ್ಯಾದಿ ಸತಾಲಬಂಧಗಳ ಶ್ರವಣಸುಭಗತೆಯನ್ನೂ, ಅರ್ಥ-ಸ್ವಾಷ್ಟ್ಯವನ್ನೂ ವಿಶದೀಕರಿಸಲಾಗಿದೆ. ವೃತ್ತನಾಮನಿರ್ದೇಶನದಲ್ಲಿ ಕ್ವಾಚಿತ್ಕವಾಗಿ ಗತಿನಿರ್ದೇಶನವಿರುವುದನ್ನೂ ತನ್ಮೂಲಕ ಪ್ರಾಚ್ಯರಿಗೆ ಗತಿಭೇದಗಳ ವರ್ಗೀಕರಣದ ಅರಿವಿದ್ದಿತೆನ್ನುವುದನ್ನೂ ಸೂಚಿಸಲಾಗಿದೆ. (ಉದಾ: ದ್ರುತವಿಲಂಬಿತ, ತನುಮಧ್ಯಾ, ಮಂದಾಕ್ರಾಂತಾ, ಭುಜಂಗಪ್ರಯಾತ, ಅಶ್ವಧಾಟೀ ಇತ್ಯಾದಿ) ಗತಿಗಳಲ್ಲಿ ಅಕ್ಷರ ಮತ್ತು ಮಾತ್ರಾಜಾತಿಚ್ಛಂದೋನುಸಾರವಾಗಿ ಅಕ್ಷರಗತಿ ಮತ್ತು ಆವರ್ತಗತಿ ಭೇದಗಳನ್ನೂ ಯುಕ್ತಿಯುಕ್ತವಾಗಿ ವಿಂಗಡಿಸಲಾಗಿದೆ. ಆವರ್ತಗತಿಭೇದಗಳನ್ನೂ

ಅವುಗಳ ಸುಲಭವೇದ್ಯ ವಿಧಾನವನ್ನೂ, ದ್ರುತ, ಮಧ್ಯ ಮತ್ತು ವಿಲಂಬಿತವೆಂಬ ತ್ರಿವಿಧಸ್ವರೂಪದಲ್ಲಿ ತೋರಿಸಿ ಸಂಕಲಿತಗತಿಯ ಮಹತ್ತ್ವವನ್ನೂ ಹೇಳಲಾಗಿದೆ. ಮೂಲತಃ ಮಿಶ್ರಗತಿಯಾಗಿ ೩+೪ ಮಾತ್ರಾಸಂವಿಧಾನ(ಧ್ರುತಮಧ್ಯಗತಿ)ವೊಂದೇ ಇರುವುದೆಂದೂ; ೪+೩ ವಿನ್ಯಾಸದ ಶ್ರುತಿಕಟುತ್ವ ಮತ್ತು ಅಪರಿಚಿತತೆಯನ್ನೂ ತಿಳಿಸಲಾಗಿದೆ.[4] ಅಂತೆಯೇ ೩+೫ ಗಣವಿನ್ಯಾಸ ೫+೩ ಆಗಿಯೂ ಹಲವೊಮ್ಮೆ ೪+೪ ಆಗಿಯೂ ರೂಪಗೊಂಡರೂ ಸಹ ಶ್ರುತಿಕಟುವೂ ಗತಿಚ್ಯುತವೂ ಆಗಲಾರದೆಂದು ಲಕ್ಷ್ಯಗಳ ಮೂಲಕ ತಿಳಿಸಲಾಗಿದೆ. ಇದೇ ತರ್ಕವನ್ನು ೨+೪ಕ್ಕೂ ಹೊಂದಿಸಿ ಅದು ೪+೨ ಆಗಿಯೂ ಹಲವೆಡೆ ವೈವಿಧ್ಯಕ್ಕಾಗಿ ೩+೩ ಆಗಿಯೂ ಬಂದು ಸೊಗಯಿಸಬಹುದೆಂದು ಸ್ಪಷ್ಟಪಡಿಸಲಾಗಿದೆ. (ವಿ.ಸೂ. ೩+೫ ಮಾತ್ರಾ-ಗತಿಗೆ ಸಂಸ್ಕೃತದ ಸುಪ್ರಸಿದ್ಧ ರಥೋದ್ಧತಾವೃತ್ತವೇ ಸಾಕ್ಷಿಯಾಗಿದೆ.

(೩) –u | (೫) –uuu | (೩) –u | (೫) –u– ಎಂಬಂತೆಯೂ (೫) –u– | (೩) uuu | (೫) –u– | (೩) u– ಎಂಬಂತೆಯೂ ಸಹ ಗತಿತೋರಬಲ್ಲ ಈ ವೃತ್ತದ ಸೋದರ ವೃತ್ತವಾದ ಸ್ವಾಗತದಲ್ಲಿ ಈಷನ್ಮಾತ್ರಾ ವೈವಿಧ್ಯವಿದೆ. (೩) –u | (೫) –uuu | (೪) –uu | (೪) – – ಈ ರೀತಿಯಾಗಿ ಉನ್ಮೀಲಿತವಾಗುವ ಗತಿಯು ಶ್ರುತಿಕಟುವಾಗದೆ ವೈವಿಧ್ಯವನ್ನು ತಂದಿರುವುದು ಗಮನಾರ್ಹ. ಅಲ್ಲದೆ (೫) –u– | (೩) uuu | (೪) –uu | (೪) – – ಎಂದೂ ಪಲ್ಲಟಿಸಬಹುದು. ಈ ನಿದರ್ಶನವೂ ಶ್ರೀಯುತ ಸೇಡಿಯಾಪು ಅವರ ಸಾಧುತರ್ಕಕ್ಕೆ ಬೆಂಬಲವಾಗಿದೆ. ಅಲ್ಲದೆ ಮಂದಾನಿಲ ರಗಳೆಯಲ್ಲಿ ಹಲವು ಬಾರಿ ೪+೪ ಗಣವಿನ್ಯಾಸವು ೫+೩ರ ಅಥವಾ ೩+೫ರ ರೂಪ ತಾಳಿ ಬರುವುದನ್ನೂ ಶ್ರೀ ಬೇಂದ್ರೆಯವರ ಮೇಘದೂತ ಛಂದಸ್ಸಿನಲ್ಲಿ ೪+೪ ಗಣವಿನ್ಯಾಸವು ಹದಗೆಡದೆ ಬರುವುದನ್ನೂ ಗಮನಿಸಬಹುದು. (ಆದುದ-ರಿಂದ 'ಸಮಾಲೋಕನ'ದಲ್ಲಿ ಶ್ರೀಯುತ ಶ್ರೀ. ನಂ. ಶ್ರೀ.ಯವರು ಮೂಲಗಣ ವಿನ್ಯಾಸಗಳು ಆರು ವಿಧ ಎಂದಿರುವುದಕ್ಕೆ ಬದಲಾಗಿ ಸೇಡಿಯಾಪು ಅವರು ಮೂಲಗಣವಿನ್ಯಾಸಗಳು ಮೂರೇ ಎಂದೂ, ಮಿಶ್ರಗತಿ ಮತ್ತೊಂದೆಂದೂ, ಸಂಕಲಿತಗತಿಯು ಮೂಲದ ಮೂರು ಗತಿಗಳಲ್ಲಿಯ ದ್ರುತ ಮತ್ತು ಮಧ್ಯ

4. ೪+೩ರ ಮಧ್ಯದ್ರುತಗತಿಯು ಅತಿಪರಿಣತವೂ ಅತಿಸುಶಿಕ್ಷಿತವೂ ಆದ ಮತಿಗೆ ಮಾತ್ರ ವೇದ್ಯವೆಂದೂ ಅನರ್ಗಳ ರಚನಾವಸರದಲ್ಲಿ ಮೂರು ಮಾತ್ರೆಗಳ ಗಣವು ಕೃಷ್ಟವಾಗಿ ನಾಲ್ಕೇ ಆದೀತೆಂದೂ ಅತಿಸುಂದರವಾಗಿ ಶ್ರೀಯುತರು ಸಾಧಿಸಿ ತೋರಿರುವುದಲ್ಲದೆ ಈ ಕಾರಣ-ದಿಂದಲೇ ವಸಂತತಿಲಕವೃತ್ತವು ೪+೩ರಂತೆ ವಿಭಜಿತವಾದರೂ ಲಯಾನ್ವಿತವಾಗಿಲ್ಲವೆಂದೂ ಖಚಿತಪಡಿಸಿದ್ದಾರೆ.

ಗತಿಗಳಲ್ಲಿ ಉಪಜೀವಿಗಳೆಂದೂ ನಿರ್ಣಯಿಸಿರುವುದು ಶಾಸ್ತ್ರನಿಷ್ಕೃಷ್ಟ ದೃಷ್ಟಿಯಿಂದ ಅತ್ಯಂತ ಸಾಧುವಾಗಿದೆ. ಇಷ್ಟೇ ಅಲ್ಲದೆ ಸಂಕಲಿತವಾಗಿ ಒಂದು ಶುದ್ಧಗತಿಯು ಬದಲಾಗಬೇಕಾದರೆ ಅದರ ಮಾತ್ರಾವಿನ್ಯಾಸದಲ್ಲಿ ಅವಶ್ಯವಾಗಿ ಆಗಲೇಬೇಕಾದ ಗುರುಸ್ಥಾನನಿರ್ದೇಶನವೈಶಿಷ್ಟ್ಯವನ್ನೂ ಸಮರ್ಥವಾಗಿ ತಿಳಿಸಲಾಗಿದೆ. (ಇದನ್ನು ರಥೋದ್ಧತಾ ಮತ್ತು ಸ್ವಾಗತ ವೃತ್ತಗಳ ಪ್ರಸ್ತಾರವಿಶೇಷದಿಂದಲೇ ತಿಳಿಯಬಹುದು) ಪರಸ್ಪರ ಪ್ರತೀಪ (inverted) ರೂಪದ ಛಂದೋವಿನ್ಯಾಸವೇ ಸಂಕಲಿತಗತಿಹೇತು.

೭). ಷಟ್ಪದಿಗಳ ಪಟ್ಸಂಖ್ಯಾಕಹೇತುವನ್ನೂ 'ಉದ್ಗತಾ'ವೃತ್ತದ ವಿಷಮತೆ-ಯಲ್ಲಿ ಇರುವ ಸಮತಾರಹಸ್ಯವನ್ನೂ ಚೆನ್ನಾಗಿ ಹೊರಗೆಡವಲಾಗಿದೆ.

೮) ಸುಪ್ರಸಿದ್ಧ 'ಕಂದ'ದ ಗತಿವಿಸ್ತಾರವನ್ನು ವಿಸ್ತಾರವಾಗಿ ವಿವೇಚಿಸಿ ಅದರ ಏಕದೇಶಸ್ಥಿರತೆಯೊಡನೆ ಯತಿನಿಯಮ, ಜಗಣವಿಶೇಷ, ಸಮಪಾದಾಂತ್ಯ ಗುರು, ನಿಯಮಿತಗುರುಲಘುವಿನ್ಯಾಸರಚನೆ (ಸಗಣ, ಭಗಣ, ನಗಣ ಮತ್ತೊಂದು ಲಘು, ದ್ವಿಗುರು, ಜಗಣ) ಇತ್ಯಾದಿ ನಿಬಂಧನಗಳಿಂದಾಗಿ ಬಂದಿರುವ ಬಿಕ್ಕಟ್ಟು ಹಾಗೂ ಈ ಕಾರಣದಿಂದಾಗಿಯೇ ಅದರಲ್ಲಿ ಸಿದ್ಧಿಸಿರುವ ಗತಿವೈವಿಧ್ಯ (ಮಧ್ಯಾವರ್ತ ಮತ್ತು ಸಂಕಲಿತಗತಿಗಳು), ಲಯಸೌಂದರ್ಯಗಳನ್ನು ಪ್ರಥಮ ಬಾರಿಗೆ ವಿವೇಚಿಸಲಾಗಿದೆ.

೯) ಏಳನೆಯ ಪರಿಚ್ಛೇದದಲ್ಲಿ ಯತಿತತ್ತ್ವಮೀಮಾಂಸೆ ಅನುಪಮವಾಗಿ ಮೂಡಿಬಂದಿದೆ. ಪದ(ಭಾಷಾಪದ)ಗತಿ ಮತ್ತು ವೃತ್ತ(ಛಂದಸ್ಸು)ಗತಿಗಳ ಬಗ್ಗೆಯೂ, ಆಯಾ ವೃತ್ತಗಳಿಗೆ ಭಾಷಾನಿರಪೇಕ್ಷವಾಗಿರುವ ಛಂದಃಪದ ಅರ್ಥಾತ್ ಗುರುಲಘುಗತಿಯೂ, ಭಾಷಾಪದಗಳ ಜೋಡಣೆಯ ನಡೆಯೂ ಹದವರಿತು ಹಜ್ಜೆ ಹಾಕದಿದ್ದಲ್ಲಿ ತೋರುವ ಅಸಾಮಂಜಸ್ಯವೇ ಯತಿಭಂಗ ಎಂಬ ವಿವರಣೆ ಅನ್ಯಾದೃಶ. ಶೀಕ್ಷಾಶಾಸ್ತ್ರದ ಹಿನ್ನೆಲೆಯಲ್ಲಿ ಪದಗಳಲ್ಲಿಯ ಅಕ್ಷರಗಳ ಸ್ಫುಟೋಚ್ಚಾರ, ಸಾಮಾನ್ಯೋಚ್ಚಾರಗಳ ಬಗ್ಗೆ ಬೆಳಕುಚೆಲ್ಲಿ (Accented ಮತ್ತು Unaccented ನುಡಿಗಳ, ತನ್ಮೂಲಕ Stressed ಮತ್ತು Unstressed ಶಬ್ದಗಳ ಬಗ್ಗೆಯೂ ಮೀಮಾಂಸೆ ಮಾಡಿ) ಅನೇಕ ದುಷ್ಕಲ್ಪನೆಗಳನ್ನು ನಿರಸಿಸಲಾಗಿದೆ. ಛಂದಃಪದವೂ ಭಾಷಾಪದವೂ ಒಂದೇ ಮಾನದಲ್ಲಿ ನಡೆದರೆ ಬರುವ ಏಕತಾನತೆಯನ್ನೂ ಅವುಗಳ 'ಸರಿಸುಮಾರಾದ' ಹೊಂದಿಕೆಯಲ್ಲಿ ಸಿದ್ಧಿಸುವ ನಾನಾವಿಧಸೌಂದರ್ಯವನ್ನೂ ಸಮರ್ಥವಾಗಿ ಸಾಧಿಸಲಾಗಿದೆ. (ಈ ರಹಸ್ಯವನ್ನರಿ-ಯದ ಅನೇಕ ನವೀನ ಪ್ರಾಜ್ಞಂಮನ್ಯರೂ ವಿದ್ವಾನ್ಮಾನಿಗಳೂ ಛಂದಃಪದದ ಪುನರಾವೃತ್ತಿಯನ್ನು ಭಾಷಾಪದದ ಪುನರಾವೃತ್ತಿಯೆಂದು ತಪ್ಪು ತಿಳಿದು ಛಂದೋಬದ್ಧರಚನೆಯನ್ನೆಲ್ಲಾ ಏಕತಾನವೆಂದು ಹಳಿದು ಅನಿಬದ್ಧಗದ್ಯದ ಗತಿ ಸೌಂದರ್ಯವನ್ನು ಪದ್ಯದಲ್ಲಿ ತರಬೇಕೆಂಬ ಮೃಗತೃಷ್ಣಿಕಾಭ್ರಾಂತಿಯಿಂದ ಸ್ವಯಂಗತಿ ವೈವಿಧ್ಯವುಳ್ಳ ವಿನ್ಯಾಸದಲ್ಲಿ ವಿಷಮವೆನ್ನಿಸುವ ಗಣಾಧಿಕ್ಯವನ್ನೂ ನ್ಯೂನತೆಯನ್ನೂ ಪರಿವೆಯಿಲ್ಲದೆ ಮಾಡಿ ಸಾರ್ಥಕ್ಯ ಪಡೆವೆವೆಂದು ಸಾಧಿಸುವುದು ವಿಷಾದನೀಯ.

ಶ್ರುತಿಕಟುವಿಗೂ ಶ್ರುತಿಪ್ರಾಸಾದಕಗತಿವೈವಿಧ್ಯಕ್ಕೂ ಭೇದವನ್ನೇ ತಿಳಿಯದೆ ಈ ಪ್ರಯೋಗವಿಕೃತಿಯನ್ನೇ ಕವಿವರ್ಗವೂ ಉಪಾದೇಯವೆಂದು ಗ್ರಹಿಸಿರುವುದು ಇನ್ನೊಂದು ಗ್ರಹಚಾರ! ಪಾಶ್ಚಾತ್ಯ ಛಂದೋವಿನ್ಯಾಸದಲ್ಲಿ ಪದಗತಿ ಮತ್ತು ಛಂದೋಗತಿಗಳ ಅತಿನಿಕಟಾನುಸರಣೆ ಇರುವ ಕಾರಣದಿಂದಾಗಿ ಮತ್ತು ಅಲ್ಲಿಯ ಛಂದಸ್ಸುಗಳೆಲ್ಲಾ ಲಯಾನ್ವಿತವೇ ಆದ ಕಾರಣ ವೈವಿಧ್ಯವು ಅಲ್ಲಿ ಮೃಗ್ಯವೆಂಬ ಶ್ರೀಯುತರ ಆಶಯವು ಸತರ್ಕ ಮತ್ತು ವಿಜ್ಞಸಮ್ಮತ. ಈ ಪರಿಜ್ಞಾನವಿಲ್ಲದೆ ಪಾಶ್ಚಾತ್ಯ ಛಂದೋವೈವಿಧ್ಯ ಅಪಾರವೆಂದೂ, ಭಾರತೀಯ ಛಂದೋವೈವಿಧ್ಯವು ಐಕತಾನಿಕವೆಂದೂ ಹಲವು ಪರಪ್ರತ್ಯಯನೇಯಬುದ್ಧಿಗಳು ಇನ್ನೂ ನೆಮ್ಮಿರುವುದು ನಮ್ಮ ಬೌದ್ಧಿಕ ದಿವಾಳಿತನಕ್ಕೆ ದೀಪಸಾಕ್ಷಿ.)

ಆನಂದವರ್ಧನನೂ, ಅಭಿನವಗುಪ್ತರೂ ಸಹೃಯರನ್ನು ಪ್ರಮಾಣವೆಂದು ಅಂಗೀಕರಿಸಿರುವಂತೆ 'ಪಠನಸಂಪ್ರದಾಯಪ್ರಭಾವಿತವೂ ಪರಿಷ್ಕೃತವೂ ಆದ ಗತಿಪ್ರಜ್ಞೆ'ಯನ್ನೇ ಪರಮಪ್ರಮಾಣವೆಂದು ಸರ್ವತ್ರ ಅಂಗೀಕರಿಸಲಾಗಿದೆ.

ಛಂದೋಗತ್ಯುನ್ಮೀಲನವಾಗುವಂತೆ ಪಠಿಸುವಾಗ ತದ್ಗತ ಪದಸ್ವರೂಪವು ಹೊಳೆಯದಂತಿದ್ದರೆ ಆ ರಚನಾದೋಷವು ಯತಿಭಂಗವೆಂದೂ, ವಸ್ತುತಃ ಪದ-ಗತಿಭಂಗವೇ ಯತಿಭಂಗವೆಂದೂ ನಿರ್ಧರಿಸಿರುವುದು ಸಾಧು. ಪದ್ಯಗತಿಶುದ್ಧಿ-ಗಾಗಿಯೇ ಯತಿನಿಯಮಗಳಿರುವುದು ಎಂಬುದನ್ನು ಸರಿಯಾಗಿ ತಿಳಿಸಲಾಗಿದೆ.

೧೦) ಎಂಟನೆಯ ಪರಿಚ್ಛೇದದಲ್ಲಿ ವಿಷಮಗತಿವೃತ್ತಗಳ (ಲಯರಹಿತ ವೃತ್ತಗಳ) ವಿವೇಚನೆ ನಡೆದಿದೆ. ಒಂದು ಪಾದದಲ್ಲಿ ಒಂದಕ್ಕೂ ಹೆಚ್ಚು ಭಿನ್ನ ಛಂದೋಗತಿಘಟಕಗಳಾದ ಗುರುಲಘುವಿನ್ಯಾಸವಿದ್ದಲ್ಲಿ ಅವುಗಳ ಸೇರಿಕೆಯ ಸ್ಥಳದಲ್ಲಿಯೇ ಯತಿಸ್ಥಾನವೇರ್ಪಡುತ್ತದೆಂಬ ಅನ್ವೇಷಣೆ ಅತಿಸ್ತುತ್ಯ. ಸಬಲ ಹಾಗೂ ದುರ್ಬಲ ಯತಿಗಳನ್ನುಳ್ಳ ವೃತ್ತಗಳನ್ನೂ ನಿರ್ದೇಶಿಸಲಾಗಿದೆ. (ಅರ್ಥಯತಿ ಎಂಬ ಅನಗತ್ಯವಾದ ಅಧಿಕ ಪರಿಭಾಷೆಗೆ ಬದಲಾಗಿ ಪದಯತಿಯಲ್ಲಿಯೇ ಅದನ್ನು ಅಡಗಿಸಿರುವುದು ಸರಿಯಾಗಿಯೇ ಇದೆ.) ಪೃಥ್ವಿ, ಮಲ್ಲಿಕಾಮಾಲಾ ಮೊದಲಾದ ಸತಾನಗತಿವೃತ್ತಗಳಿಗೆ ವಿತಾನಶೋಭೆ ಬಂದುದಕ್ಕೆ ಅವುಗಳ ಯತಿ-ಸ್ಥಾನವೇ ಕಾರಣವೆಂಬ ಸಮ್ಮತ ನಿರ್ಣಯವನ್ನು ಅಂಗೀಕರಿಸಲಾಗಿದೆ. ಖಂಡ-ಪ್ರಾಸದ ಬಗ್ಗೆ ವಿಶೇಷವೂ, ವಿಸ್ತೃತವೂ, ಪ್ರಮಾಣಭೂತವೂ ಆದ ತೀರ್ಮಾನಕ್ಕೆ ಬರಲಾಗಿದೆ. (ಶ್ರೀಯುತ ಎಂ. ವಿ. ಸೀತಾರಾಮಯ್ಯನವರು ಈ ಬಗ್ಗೆ ಎತ್ತಿರುವ ಆಕ್ಷೇಪ ಅಸಂಗತ, ಅಸಾಧು. ಇದನ್ನು ಶ್ರೀಯುತ ಸೇಡಿಯಾಪು ಅವರೇ ಖಂಡಿಸಿದ್ದಾರೆ.) ಲಯರಹಿತ ವೃತ್ತಗಳ ಸೌಂದರ್ಯರಹಸ್ಯವನ್ನು ಬಹು ಪ್ರೌಢವಾಗಿ ಬಿಡಿಸಲಾಗಿದೆ. ಅಲ್ಲಿ ಬರುವ ದ್ರುತಾಕ್ಷರ, ಮಧ್ಯಾಕ್ಷರ ಮತ್ತು ವಿಲಂಬಿತಾಕ್ಷರ-ಗತಿಗಳು ಕ್ರಮವಾಗಿ 'ಓಜಃ ಪ್ರಸಾದ ಮಾಧುರ್ಯ'ಮಯ ಗುಣತ್ರಯದಂತೆ ವೃತ್ತಗಳಲ್ಲಿ ಗತಿವೈವಿಧ್ಯಕಾರಕಗಳಾಗಿವೆ. ಬಾಣನ 'ವಿಕಟಾಕ್ಷರಬಂಧ'ದ ಸೊಗಸನ್ನು ಸಂವದಿಸುವಂತೆ ಲೇಖಕರು ಹೇಳುವ 'ಗತಿಯ ಆಕರ್ಷಣೆಯು ಒಂದು ವೃತ್ತದಲ್ಲಿ

ಹೆಚ್ಚಾಗಬೇಕೆಂದರೆ ಅದರಲ್ಲಿ ಅಕ್ಷರವಿಕಟತೆಯೂ ಹೆಚ್ಚಾಗಬೇಕು. ವಿಭಿನ್ನ ಅಕ್ಷರ-ಗತಿಗಳ ಸಾಮ್ಯವೈಷಮ್ಯದ ಆಯೋಜನೆ ಕಲಾಪೂರ್ಣವಾಗಿರಬೇಕು' ಎಂಬಂಥ ಮಾತು ಬಹು ಶ್ಲಾಘ್ಯ ಮತ್ತು ಸತ್ಯವೂ ಹೌದು. ಮಧ್ಯಾಕ್ಷರಗತಿವೃತ್ತಗಳು ಗದ್ಯಗತಿಗೆ ಸಮೀಪವಾದ ಕಾರಣ ಅಕೃತಕವೆನಿಸುತ್ತವೆ. ಆದರೆ ಗತಿವೈಷಮ್ಯಾ-ಧಿಕ್ಯವೇ ಅಸಾಮಾನ್ಯತೆಗೂ ತನ್ಮೂಲಕ ಆಕರ್ಷಣೆಗೂ ಕೇಂದ್ರಸ್ಥಾನವಾದ ಕಾರಣ ಈ ರೀತಿಯ ಗತಿಸಂಗತಛಂದೋನಿರ್ವಹಣೆ ಕ್ಲೇಶದಾಯಕ. ಉದಾ: ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲಾ, ಚಂಪಕಮಾಲಾ, ವಸಂತತಿಲಕಾದಿಗಳು ಮಧ್ಯಾಕ್ಷರಗತಿಯ ದುರ್ಬಲಯತಿವೃತ್ತಗಳಾದ ಕಾರಣ ಸುಲಭನಿರ್ವಹಣೆಗಳು. ಆದರೆ ಸ್ರಗ್ಧರಾ, ಶಿಖರಿಣೀ, ಹರಿಣೀ, ಮಾಲಿನೀ, ಮಂದಾಕ್ರಾಂತಾದಿ ವಿಲಂಬಿತ-ದ್ರುತ-ಮಧ್ಯಾಕ್ಷರಗತಿ-ಸಮ್ಮಿಶ್ರವಾದ ಪ್ರಬಲಯತಿ-ವೃತ್ತಗಳ ನಿರ್ವಹಣ ಕಿಂಚಿತ್ಕಷ್ಟ, ಆದರೆ ಅವುಗಳ ವಿಲಕ್ಷಣ ಆಕರ್ಷಣೆ ಅನನ್ಯಸಾಧಾರಣವಾದದ್ದು. ಅಷ್ಟೇ ಅಲ್ಲದೆ ಗುರ್ವಾಧಿಕ್ಯ ಮತ್ತು ಲಘ್ವಾಧಿಕ್ಯವಿರುವ ಮಧ್ಯಾಕ್ಷರಗತಿಪ್ರಭೇದಗಳಲ್ಲಿ ಮೊದಲ ಗುಂಪಿಗೆ ಶಾರ್ದೂಲವಿಕ್ರೀಡಿತ ಬಂದಲ್ಲಿ ಎರಡನೆಯ ಗುಂಪಿಗೆ ಉತ್ಪಲಮಾಲೆಯು ಸೇರುವುದೆಂಬ ವರ್ಗೀಕರಣ ಪ್ರಯೋಗಸಿದ್ಧವೇ ಹೌದು. ಗತಿಸೌಂದರ್ಯವಿರಲು ಅಕ್ಷರವಿನ್ಯಾಸವೈಷಮ್ಯವಷ್ಟೇ ಅಲ್ಲದೆ ಛಂದಃಪದ ಮತ್ತು ಭಾಷಾಪದಗಳಲ್ಲಿ ಸಾಮರಸ್ಯವಿರಬೇಕೆಂಬ ಸುವರ್ಣಮಧ್ಯಮ ಮಾರ್ಗನಿರ್ದೇಶನವನ್ನೂ ಮಾಡಲಾಗಿದೆ.[5]

೧೧) ಅಕ್ಷರಜಾತಿಯೆಂಬ ವಿಭಾಗದಲ್ಲಿ ಶ್ಲೋಕ, ಉಪಜಾತಿ, ವೈದಿಕ ಛಂದಸ್ಸು ಮೊದಲಾದವುಗಳ ವಿವೇಚನೆ ನಡೆಯಲ್ಪಟ್ಟಿದೆ. ಶ್ಲೋಕದ ರಹಸ್ಯವು ಪರಮದುರ್ಘಟವಾದದ್ದು. ದ್ವಿಪದಬಂಧದಂತೆಯೇ ಇರುವ ಈ ಛಂದಸ್ಸು ಗೌರವ-ಲಾಘವಗಳೆರಡರಲ್ಲೂ ಗತಿಸೌಂದರ್ಯವನ್ನು ಸಮನಾಗಿ ತೋರಿಸಬಲ್ಲ ಅತಿವಿಚಿತ್ರ ಬಂಧ. ಶ್ರೀಯುತ ಸೇಡಿಯಾಪು ಅವರಿಗೂ ಈ ಛಂದಸ್ಸಿನ ಆಮೂಲಾಗ್ರ ಸಂವಿಧಾನರಹಸ್ಯವನ್ನು ಸ್ಫೋಟಗೊಳಿಸಲಾಗಿಲ್ಲ. ಆದರೂ ಈ ದಿಶೆಯಲ್ಲಿ ಪ್ರಸ್ತುತದಲ್ಲಿ ಸಾಧ್ಯವಿರುವ ಎಲ್ಲ ಚಿಕಿತ್ಸೆಯನ್ನೂ ಮಾಡಲಾಗಿದೆ. ಕನ್ನಡದಲ್ಲಿ ಆದಿಪ್ರಾಸವು ಕೇವಲ ಅಲಂಕಾರದ ಸೀಮೆಯಲ್ಲಿ ಮಾತ್ರವಿರದೆ ಛಂದಸ್ಸಿನ ಕಕ್ಷೆಯೊಳಗೂ ಬಂದಿರುವುದರ ಸೂಕ್ಷ್ಮವನ್ನು ಸರಿಯಾಗಿಯೇ ವಿವೇಚಿಸಲಾಗಿದೆ. (ಈ ಬಗ್ಗೆ ಪ್ರೊ। ಎಂ. ವಿ. ಸೀ. ಅವರ ತಪ್ಪು ನಿಲುವು ಶ್ರೀ

---

5. ಶ್ರೀಯುತ ಸೇಡಿಯಾಪು ಅವರು ವಿತಾನವೃತ್ತಗಳ ಸೌಂದರ್ಯವನ್ನು ಹೀಗೆ ವಿವೇಚಿಸಿಯೂ ಕೂಡ ಅವುಗಳ ನಿರ್ಮಾಣರಹಸ್ಯವು ಇನ್ನೂ ನಿಗೂಢವೆಂದು ನುಡಿದಿದ್ದಾರೆ. ಸದ್ಯದಲ್ಲಿ ನಾನು ಈಚಿನ ಹತ್ತು ವರ್ಷಗಳಿಂದ ಈ ರೀತಿಯ ಲಯರಹಿತ ವೃತ್ತಗಳ ಗತಿಸೌಂದರ್ಯ, ನಾದ ಸ್ವಾರಸ್ಯಗಳ ಬಗ್ಗೆ ಸಂಶೋಧನೆಯನ್ನು ನಡೆಸುತ್ತಾ ಹಲವು ವೃತ್ತಗಳ ಅಂತಾರಹಸ್ಯವನ್ನು ಹೊರಗೆಡವುತ್ತಿದ್ದೇನೆ. ಸಂಸ್ಕೃತದ ಸುಪ್ರಸಿದ್ಧವಾದ ಸುಮಾರು ಐವತ್ತು ವೃತ್ತಗಳು ಈಗಾಗಲೇ ತಮ್ಮ ತಮ್ಮ ಅಂತರಂಗಸೌಂದರ್ಯವನ್ನು ಉನ್ಮೀಲಿಸುತ್ತಿವೆ.

ಸೇಡಿಯಾಪು ಅವರಿಂದಲೇ ವಿಮೃಷ್ಟವಾಗಿದೆ.) ವೈದಿಕಚ್ಛಂದಸ್ಸಿಗೂ ಲೌಕಿಕ-ಚ್ಛಂದಸ್ಸಿಗೂ ಕೊಂಡಿಯಂತೆ ಅನುಷ್ಟುಪ್ ಶ್ಲೋಕ, ಉಪಜಾತಿ ಮತ್ತು ಕರಂಬಜಾತಿಗಳು ಬೆಳೆದು ಬಂದ ಪರಿಯೂ ವಿವೇಚಿತವಾಗಿದೆ. ತ್ರೈಸ್ವರ್ಯದ ಬಗ್ಗೆ ಅತ್ಯಮೂಲ್ಯ ಮಾಹಿತಿಯನ್ನೊಳಗೊಂಡ ಸುದೀರ್ಘ ಟಿಪ್ಪಣಿಯೂ ತನ್ಮೂಲಕ ತ್ರೈಸ್ವರ್ಯವು ಭಾಷಾಂಗವೇ ಹೊರತು ಛಂದೋಂಗವಲ್ಲವೆಂಬ ನಿಲುವೂ ಶ್ರೀಯುತ ಎಚ್. ಡಿ. ವೇಲಣಕರ್ ಅವರ ಮತದ ಖಂಡನೆಯೂ ಸಮರ್ಪಕ-ವಾಗಿದೆ. ಅಂತೆಯೇ ವೈದಿಕಚ್ಛಂದಸ್ಸಿನ ಬಗ್ಗೆ ಅತೀವ ಉದ್ಬೋಧಕವಾದ ನಿಲುವನ್ನೂ ತಾಳಲಾಗಿದೆ. ಮರಾಠಿಯ 'ಓವಿ' ಛಂದಸ್ಸನ್ನೂ ವೈದಿಕಚ್ಛಂದಸ್ಸನ್ನೂ ತುಲನಾತ್ಮಕವಾಗಿ ಕಾಲಸನ್ನಿಕರ್ಷತೆಯ ದೃಷ್ಟಿಯಿಂದ ಬದಲಾಗುವುದರ ಬಗ್ಗೆ ವಿವೇಚಿಸಿರುವುದು ಬಹುವಿಸ್ಮಯಾವಹವೂ ಬೋಧಪ್ರದವೂ ಆದ ಘಟಕ. ಲಯಾನ್ವಿತ ಬಂಧಗಳ ಗೇಯತಾಕರ್ಷಣೆಯನ್ನು ತಪ್ಪಿಸಿ ಅರ್ಥಗೌರವದತ್ತ ಮನವನ್ನು ಸೆಳೆಯಲು ಲಯರಹಿತ ರಚನೆಗಳಾದುವೆಂಬ ತರ್ಕದಿಂದ ವೇದದ ಛಂದಸ್ಸಿನ ಮೂಲೋದ್ದೇಶವನ್ನರುಹಿ ಆ ಬಂಧಗಳ ಗತಿಯು ವೈದಿಕ ಸಂಸ್ಕೃತದ ಸಹಜ ಗೌರವಗತಿಗೇ ಹತ್ತಿರವಾದುದೆಂಬ ನಿಲುವು ತಾಳಿರುವುದೂ ಸರಿಯಾಗಿದೆ.

ಹೀಗೆ ಪಂಕ್ತಿ ಪಂಕ್ತಿಗಳಲ್ಲಿಯೂ ಸ್ವಂತಿಕೆಯನ್ನು ಮೆರೆದು ಸನ್ನಿರ್ಣಯ-ಗಳಿಗೆ ಬರುವ ಶ್ರೀಯುತರ ಈ ಕೃತಿಯ ಬಗ್ಗೆ ಸರಿಯಾದ ವಿಮರ್ಶೆಯೇ ನಡೆದಿಲ್ಲ. ನನಗೆ ತಿಳಿದಂತೆ ಶ್ರೀಯುತರಾದ ಪ್ರೊ । ಎಂ. ವಿ. ಸೀ. ಅವರ ಸುದೀರ್ಘ ವಿಮರ್ಶೆಯೊಂದೇ ಈ ದಿಸೆಯಲ್ಲಿ ಬಂದಿರುವುದಾದರೂ ಆ ವಿಮರ್ಶೆಯೂ ತರ್ಕಶುದ್ಧವಾಗಿಲ್ಲ. ಲೇಖಕರ ಆಶಯನ್ನು ಅರಿಯದೆ ಅನ್ಯಥಾ ಭಾವಿಸಿ ಹಲವೆಡೆ ತಪ್ಪು ನಿಲುವನ್ನು ವಿಮರ್ಶಕರು ತಾಳಿದ್ದಾರೆ. ಈ ಬಗ್ಗೆ ಸೇಡಿಯಾಪು ಅವರೇ ಪ್ರತಿಕ್ರಿಯೆ ತಿಳಿಸಿರುವ ಕಾರಣ ಶ್ರೀ ಎಂ. ವಿ. ಸೀ. ಅವರ ನಿಲುವಿನ ಕೂಲಂಕಷ ವಿವೇಚನೆಯನ್ನು ಪ್ರಕೃತದಲ್ಲಿ ಮಾಡಲಾಗುವುದಿಲ್ಲ. ಆದರೆ ಒಂದು ವಿಚಾರದ ಬಗ್ಗೆ ಮಾತ್ರ ಹೇಳಲೇಬೇಕಾಗಿದೆ. ಇದರ ಕುರಿತಾದ ಮಾತನ್ನು ಶ್ರೀ ಸೇಡಿಯಾಪು ಅವರೇ ತಮ್ಮ ಗ್ರಂಥದಲ್ಲಿಯೂ ಮತ್ತು ಪ್ರೊ । ಎಂ. ವಿ. ಸೀ. ಅವರಿಗೆ ಪ್ರತಿಕ್ರಿಯಾರೂಪದ ಲೇಖನದಲ್ಲಿಯೂ ಹೇಳಿರುವ-ರಾದರೂ ಈಚಿನ ಎಲ್ಲಾ ವಿದ್ವಾಂಸರು ಬಹುತೇಕ ಸ್ಥಳಗಳಲ್ಲಿ ಇದನ್ನು ಕುರಿತು ನುಡಿಯುವಾಗ ಜಾರುತ್ತಿರುವ ಕಾರಣ ಈ ಪುನಃಸ್ಪಷ್ಟೀಕರಣ ಅನಿವಾರ್ಯವಾಗಿದೆ. ಅದೇನೆಂದರೆ ಮಾತ್ರಾಸಮತೆ ಗಣಗಳ ನಿಯತ ಪುನರಾವರ್ತನ ಅಥವಾ ಗುರುಲಘ್ವಕ್ಷರಸ್ಥಿರತೆ ಇತ್ಯಾದಿಯಾದ ಛಂದೋವಿನ್ಯಾಸವನ್ನು ಅನುಸರಿಸಿ ಬರೆದ ಅರ್ಥಾತ್ ತಚ್ಛಂದೋಗತಿಬದ್ಧವಾದ ಸಾಹಿತ್ಯ – ಎಂದರೆ ಪದ್ಯವು ತತ್ತನ್ನಿರ್ದಿಷ್ಟ ಗತಿಯದಾಗಿಬಿಟ್ಟರೆ(?) ಏಕತಾನತೆ ಬರುತ್ತದೆ; ಯಾಂತ್ರಿಕತೆ ಒದಗುತ್ತದೆ.... ಇತ್ಯಾದಿಯಾಗಿ ವ್ಯಾಪಕರೂಪದಿಂದ ಹರಡಿರುವ ವಿದ್ವದ್ವಲಯವಿಲಸಿತವಾದ

ಪ್ರಥೆಯೊಂದಿರುವುದಷ್ಟೆ! ಇದರಿಂದಾಗಿ ಛಂದೋಬದ್ಧರಚನೆಯೇ ಯಾಂತ್ರಿಕ; ಗತಿರಮಣೀಯತಾರಹಿತ ಎಂಬ ಭಾವವೂ ತಲೆಯೆತ್ತಿ ಬಲಿತಿದೆ. ಆದರೆ ವಸ್ತುತಃ ಛಂದಃಪದಗತಿ ಅರ್ಥಾತ್ ಆಯಾ ವೃತ್ತಜಾತಿಗಳ ಮೂಲದ ಭಾಷಾನಿರಪೇಕ್ಷ-ವಾದ ನಾದವಿನ್ಯಾಸವೂ, ಆ ಜಾಡಿನಲ್ಲಿ ಮೂಡಿಸುವ ತತ್ತನ್ನಿಯಮಾನು-ಸಾರಿಯಾಗಿ ಘಟಿತವಾದ ಸಾರ್ಥಕಶಬ್ದಸಂಘಾತವೂ ಬೇರೆ ಎಂಬ (ಭಾಷಾ-ಪದಗತಿ) ಯಥಾರ್ಥಜ್ಞಾನವೇ ಆಗದಿರುವುದು ಇದಕ್ಕೆ ಕಾರಣ. ಸಂಗೀತದಲ್ಲಿ ಮಾತು ಧಾತುಗಳಿದ್ದಂತೆ ಛಂದಸ್ಸಿನಲ್ಲಿ ಭಾಷಾಗತಿ ಮತ್ತು ಛಂದೋಗತಿಗಳು. ಅಕ್ಷರವೃತ್ತಗಳಲ್ಲಿ ತ್ರಿಕಗಳಾಗಿಯೋ ಮಾತ್ರಾಜಾತಿಗಳಲ್ಲಿ ಪರಿಮಿತಗಣಮಾನ-ಗಳಾಗಿಯೋ ಮಾತ್ರವೇ ಛಂದಸ್ಸಿನ ಹಂದರದಲ್ಲಿ ನುಡಿಗಡಣ ಮೂಡಬೇಕಿಲ್ಲ; (ಇದನ್ನು ಪ್ರೊ । ತೀ. ನಂ. ಶ್ರೀ ಮೊದಲಾದವರು ಗುರುತಿಸಿದ್ದಾರೆ.) ಮತ್ತು ಹೀಗಿರುವ ಕಾರಣದಿಂದಲೇ ಆಯಾ ತ್ರಿಕಾಂತ್ಯ ಅಥವಾ ಗಣಾಂತ್ಯಗಳಲ್ಲಿ ವಿರಮಿಸುತ್ತಾ ವಾಚಿಸಲೂ ಬೇಕಾಗಿಲ್ಲ. ಆದರೆ ಅದು ಹೇಗೆಯೋ ಈ ರೀತಿಯೇ ಪ್ರಾಚ್ಯರು ಪಠಿಸುತ್ತಿದ್ದರೆಂಬ ಭ್ರಾಂತಿ ಬಂದು ಬಿಟ್ಟಿದೆ ಮತ್ತು ಈ 'ಘೋರಕರ್ಮ'ವನ್ನು ತಡೆಗಟ್ಟಲು ನವ್ಯರು ಅರ್ಥಯತಿ, ಲಯ, ಲಯಗಾರಿಕೆ (?) ಮೊದಲಾದ ಅಸ್ಪಷ್ಟ-ವಿಕೃತ ಪರಿಭಾಷೆಗಳನ್ನು ರೂಪಿಸಿ ಗತಿಸೌಂದರ್ಯಕ್ಕೆ ತಿಲಾಂಜಲಿಯಿತ್ತು, ಧಾಟಿಯಲ್ಲಿ ಓದದೆ ಬೇರೆ ಬೇರೆ ಬಗೆಯಾಗಿ 'ಓದುವ' ಪರಸ್ಪರ ಸಾಂಗತ್ಯವಿಲ್ಲದ, ಗೊಂದಲದಿಂದ ಕೂಡಿದ 'ಪಾಠ್ಯಪದ್ಧತಿ'ಗಳನ್ನು ಬೆಳಸಿಕೊಂಡೂ ಬಿಟ್ಟಿದ್ದಾರೆ. ನನ್ನಂಥವನಿಗಂತೂ ಯಾವುದೇ ಮಹಾಕವಿಗಳ ಪಳಗಿದ ರಚನೆಗಳಲ್ಲಿ ನವ್ಯರು ಕಾಣುವ ಏಕತಾನತೆ (ಧಾಟಿಯಲ್ಲಿ ಪಠಿಸಿದಾಗ) ಕಂಡುಬರುತ್ತಿಲ್ಲ. ಛಂದಸ್ಸಿನ ಗತಿ(ಧಾಟಿ)ಯಲ್ಲಿ ಪಠಿಸುವುದಕ್ಕೂ ಗಣಾನುಸಾರಿ-ಯಾಗಿ ಪಠಿಸುವುದಕ್ಕೂ ವ್ಯತ್ಯಾಸವಿದೆ ನಿಜ. ಆದರೆ ಭಾಷಾಪದಗತಿಯೂ ಛಂದಃಪದಗತಿಯೂ ಸಮರಸದಿಂದ ಹದವರಿತಿರುವ ರಚನೆಗಳನ್ನು ಪಠಿಸುವಾಗ ಛಂದಸ್ಸಿನ ಧಾಟಿಯು (ಗತಿಯು) ಉನ್ಮೀಲಿತವಾಗುವಂತೆಯೇ ತತ್ತದ್ಭಾಷಾ ಪದಗಳ, ತನ್ಮೂಲಕ ಇಡೀ ಪದ್ಯದ ಅರ್ಥವನ್ನೂ ತಿಳಿಯುವಂತೆ ಮಾಡಿಕೊಳ್ಳಬಹುದು.

> ಕೋಳಿ ಮೂರನೆ ಬಾರಿ ಕೂಗಿ ಏಸುವ ಕೊಲ್ಲ-
> ಲೆಳಸಿದ ಯಹೂದ್ಯರ ಮನಃಸಾಕ್ಷಿಯೊಲು ಸುಮ್ಮ-
> ನಾಗೆ..... (ಶ್ರೀ ಎಂ. ಗೋವಿಂದ ಪೈ)

ಎಂಬ ಸಾಲುಗಳನ್ನು ಅರ್ಥಸ್ಪಷ್ಟವಿರುವಂತೆಯೇ ಗತ್ಯುನ್ಮೀಲನವೂ ಆಗುವಂತೆ ವಾಚಿಸಬಹುದು. ಇದಕ್ಕೆ ಈಷನ್ಮಾತ್ರ ನೈಪುಣ್ಯ ಸಾಕು. ಯತಿಭಂಗವಾಗದ ಯಾವುದೇ ಪದ್ಯವನ್ನಾಗಲಿ, ಅರ್ಥಕ್ಕೆ ಘಾಸಿ ಬಾರದಂತೆ ಗತಿಸೌಂದರ್ಯವನ್ನೂ ಉಳಿಸಿಕೊಂಡು ಶ್ರಾವ್ಯವಾಗಿ ಪಲುಕಲು ಸುಸಾಧ್ಯ.

ಆಂಗ್ಲಭಾಷಾ ಛಂದಸ್ಸಿನಲ್ಲಿ ಈ ರೀತಿ ಗತಿಗೂ ಪದಸ್ವರೂಪಕ್ಕೂ ಪೂರ್ಣ ತಾಳಮೇಳವಿರುವಂತೆ ಪಠಿಸುವುದು ಸ್ವಲ್ಪ ಕಷ್ಟವಾದರೂ ತ್ರಿಮೂರ್ತಿಗಣಗಳಲ್ಲಿಯ ಕರ್ಷಣಗಳ ರಹಸ್ಯ ಬಲ್ಲವರು Stressed ಮತ್ತು Unstressed ಪದಗಳನ್ನು ಈಷದ್ಯತ್ನದಿಂದ ನುಡಿಯುತ್ತಾ ಗತಿಯನ್ನೂ ಉಳಿಸಿಕೊಳ್ಳಬಹುದು. ಮುಖ್ಯವಾಗಿ ಪ್ರಾಚೀನ ಪದ್ಯಬಂಧಗಳನ್ನು ಓದುವುದು ಬಾರದಿರುವುದೇ ಈ ತಪ್ಪು ಕಲ್ಪನೆಗಳಿಗೆ ಕಾರಣ. ನಮ್ಮ ಗತಿಪ್ರಜ್ಞೆಯನ್ನು ಸುಧಾರಿಸಿಕೊಳ್ಳದಿದ್ದಲ್ಲಿ ಈ ರೀತಿಯ ಗೊಂದಲ ಉಳಿದೇ ತೀರುತ್ತದೆ. ಇದು ನಮ್ಮ ಪ್ರಾಚ್ಯಬಂಧಗಳ ಪರಿಚಯ ನಮಗೆ ಕಡಮೆಯಾದಷ್ಟು ಹೆಚ್ಚುವುದರಲ್ಲಿ ಸಂಶಯವಿಲ್ಲ.

೧೯೮೮ರಲ್ಲಿ ಪ್ರಕಟವಾದ 'ಕನ್ನಡ ಛಂದಸ್ಸು' ನೂರೈವತ್ತೇಳು ಪುಟಗಳ ಪ್ರಮಾಣದ, 'ಛಂದೋಗತಿ'ಯಷ್ಟೇ ಸ್ವೋಪಜ್ಞವಾದ ವಿಶಿಷ್ಟಗ್ರಂಥ. ಆದರೆ ಇದು ಐತಿಹಾಸಿಕ ಮಹತ್ತ್ವವನ್ನೂ ಹೊಂದಿದೆ. ವಸ್ತುತಃ ೧೯೩೨ನೇ ವರ್ಷದ ಮಡಿಕೇರಿ ಸಾಹಿತ್ಯಸಮ್ಮೇಳನದಲ್ಲಿ ಇದೇ ಹೆಸರಿನಲ್ಲಿ ಓದಿದ ಸುದೀರ್ಘ ಪ್ರಬಂಧದ ಮತ್ತು ಇತರ ಕೆಲವು ಲೇಖನಗಳ ಸಂಕಲನವೇ ಈ ಗ್ರಂಥ. ಆದರೂ ಇದು ಪೂರ್ವರಚಿತ ಲೇಖನಗಳ ಪುನರ್ವಿಮರ್ಶನ, ವಿಸ್ತರಣ, ವಿವರಣ, ಸಂಕ್ಷೇಪಣ ಮೊದಲಾದ ಸಮುಚಿತಸಂಸ್ಕಾರಗಳನ್ನು ಹೊಂದಿ ಹೊರಬಂದ ಕಾರಣ ನವೋನವ್ಯವಾಗಿದೆ. 'ಛಂದೋಗತಿ'ಯಂತೆಯೇ ಇದೂ ಸಹ 'ಪರರೊಡ್ಡವದ ರೀತಿ'ಯ ಕೊಳ್ಳದಗ್ಗಳಿಕೆಯಿಂದ, ಅಡಿಟಿಪ್ಪಣಿ, ಪರಿಶಿಷ್ಟಾದಿಗಳಿಂದ ಪುಷ್ಟವಾಗಿದೆ.

ಈ ಗ್ರಂಥದಲ್ಲಿ ಮುಖ್ಯವಾಗಿ ನಡೆದಿರುವುದೆಲ್ಲಾ ದೇಶೀಛಂದಸ್ಸಾದ ತ್ರಿಮೂರ್ತಿಗಣಾತ್ಮಕ ಬಂಧಗಳ ವಿವೇಚನೆಯೇ ಆಗಿದೆ. ಅಕ್ಕರಗಳು, ಗೀತಿಕೆ, ಸೀಸ, ಚೌಪದಿ, ಛಂದೋವತಂಸ, ತ್ರಿಪದಿ, ಸಾಂಗತ್ಯ ಮೊದಲಾದವುಗಳ ಬಗ್ಗೆ ತಲಸ್ಪರ್ಶಿಯಾಗಿ ಚಿಂತನೆಯನ್ನು ನಡೆಸಲಾಗಿದೆ.

ಸ್ಥೂಲವಾಗಿ ಪುಸ್ತಕದ ಸಾರಾಂಶವನ್ನಿಲ್ಲಿ ಸಂಗ್ರಹಿಸಲಾಗಿದೆ ಮತ್ತು ಸನ್ಮಾನ್ಯ ಲೇಖಕರ ಉಜ್ಜ್ವಲ ವಿಚಾರಧಾರೆಯನ್ನೂ ಅದೇ ಮಾತುಗಳಲ್ಲಿ ಕೊಡಲು ಯತ್ನಿಸಲಾಗಿದೆ.

ಛಂದಸ್ಸಿನ ಬಗ್ಗೆ ಹೇಳುತ್ತಾ ಶ್ರೀ ಸೇಡಿಯಾಪು ಅವರು ತಿಳಿಸುವ ಮಾತುಗಳು ಗಮನಾರ್ಹ. ಅದರಂತೆ ಛಂದಸ್ಸಿನ ಅಧೀನತೆಗೆ ಒಳಗಾಗಿಯೂ ಹರ್ಷದಿಂದಲೇ ಅದನ್ನೊಪ್ಪಿ ಕವಿತೆಯನ್ನು ರಚಿಸಬೇಕೆಂದರೆ ಅದರಲ್ಲೊಂದು ಅನನ್ಯಾಕರ್ಷಣೆ ಇರಬೇಕು; ಮುಕ್ತಚ್ಛಂದದ ಸ್ವಾತಂತ್ರ್ಯ ಸ್ವೈರತೆಗಿಂತ ಈ ಪಾರತಂತ್ರ್ಯದಲ್ಲಿಯೇ ಹೊಸ ಸೊಗಸೂ ಇರಬೇಕು. ಹಾಗೆಯೇ ಗದ್ಯವು ಬರಿ ನಡಿಗೆಯಾದರೆ ಪದ್ಯವು ನರ್ತನ. ಈ ಕೃತಕತೆಯಲ್ಲಿಯೇ ವಿಸ್ಮಯಾವಹ ಸಹಜತೆಯಡಗಿದೆ. ಎಲ್ಲ ಸಾಹಿತ್ಯದ ಮೂಲರೂಪಗಳೂ ಲಯಾನ್ವಿತವಾದ ಗೇಯಗಳೇ. ಲೋಕಸಾಮಾನ್ಯ ಜನತೆಗೆ ಸತಾಲವೃತ್ತಗಳಲ್ಲಿಯೇ ಪ್ರೀತಿ. ಇವು ಆಪಾತಮಧುರ. ಆದರೆ ವಿತಾನವೃತ್ತಗಳು ಆಲೋಚನಾಮೃತ.

ಅಂಶಚ್ಛಂದಸ್ಸು ಎನ್ನುವುದಕ್ಕಿಂತ ತ್ರಿಮೂರ್ತಿಗಣಚ್ಛಂದಸ್ಸೆಂದು ಹೆಸರಿ-ಸುವುದಕ್ಕೆ ಹೆಚ್ಚು ಶಾಸ್ತ್ರಾಧಾರವಿರುವುದನ್ನೂ ತಿಳಿಸಿದ್ದಾರೆ. ಮೊತ್ತಮೊದಲ ಬಾರಿಗೆ ಬ್ರಹ್ಮ, ವಿಷ್ಣು ಮತ್ತು ರುದ್ರಗಣಗಳ ಚಾಕ್ಷುಷ ರೂಪವನ್ನಲ್ಲದೆ ಶ್ರಾವಣರೂಪ-ವನ್ನೂ ಕೊಡಲಾಗಿದೆ. ಹಾಡುವಾಗ ಬ್ರಹ್ಮಗಣವು ಚತುರ್ಮಾತ್ರಾಕರ್ಷಣಕ್ಕೂ, ವಿಷ್ಣುಗಣವು ಷಣ್ಮಾತ್ರಾಕರ್ಷಣಕ್ಕೂ ಮತ್ತು ರುದ್ರಗಣವು ಅಷ್ಟಮಾತ್ರಾಕರ್ಷಣಕ್ಕೂ ಬರುತ್ತವೆ. ಅಲ್ಲದೆ ಇವುಗಳಲ್ಲಿ ಆದಿ ಲಘುಯುಗ್ಮವಿದ್ದಲ್ಲಿ ಅವು ಮಾತ್ರ ಯಥಾಕ್ಷರಲಘುವಾಗಿ ನುಡಿಯಲ್ಪಟ್ಟು ಉಳಿದ ಲಘುಗಳು (ಇದ್ದಲ್ಲಿ) ಎಲ್ಲೂ ಅಪವಾದವಿಲ್ಲದೆ ಕೃಷ್ಟವಾಗುತ್ತವೆ. ತ್ರಿಮೂರ್ತಿಗಣಗಳು ಈ ಕಾರಣದಿಂದಲೇ ಚಾಕ್ಷುಷರೂಪದಲ್ಲಿ ಕ್ರಮವಾಗಿ ೪, ೮, ೧೬ ಬಗೆಗಳಾಗಿದ್ದರೂ ಶ್ರವ್ಯರೂಪದಲ್ಲಿ ಎರಡೇ ಬಗೆಯಾಗುತ್ತವೆ. ಬ್ರಹ್ಮಗಣವು ಬ್ರಹ್ಮಂ (– –), ದ್ರುಹಿಣಂ (ᴗᴗ–) ಎಂದೂ, ವಿಷ್ಣುಗಣವು ಗೋವಿಂದಂ (– – –), ಜಲಜಾಕ್ಷಂ (ᴗᴗ – –) ಎಂದೂ ರುದ್ರಗಣವು ಗಂಗಾಧೀಶಂ (– – – –), ಗಿರಿಜಾಕಾಂತಂ (ᴗ ᴗ – – –) ಎಂದೂ ಕೇಳಿಸುವುವು. ಜಗಣ ಮತ್ತು ಯಗಣಗಳು ಪದ್ಯಕ್ಕೊಂದು ಅನಿರೀಕ್ಷಿತ ಬಳುಕನ್ನು ನೀಡುತ್ತವೆ. ಆದಕಾರಣ ಅವು ಈ ತ್ರಿಮೂರ್ತಿಬಂಧಗಳ working technique – ಬಳಕೆಯ ತಂತ್ರವು ಸುಲಭವೇದ್ಯವಾಗಿ ಮುಂದಿನ ಮೀಮಾಂಸೆ ತೊಡಕಿಲ್ಲದೆ ಸಾಗುತ್ತದೆ.

ಚತುರಸ್ರತೆಯು ಗಾಯನಕ್ಕೆ ಅತ್ಯವಶ್ಯ. ವಿಶೇಷವಾಗಿ ಪಾದಾಂತ್ಯದಲ್ಲಿ ಊನಗಣಗಳಿದ್ದಲ್ಲಿ, ಹಾಡುವಾಗ ಕರ್ಷಣದಿಂದಾಗಿ ಅಲ್ಲಿ ಕಾಲವನ್ನು ತುಂಬಿ-ಕೊಂಡು ಗೇಯತೆಯನ್ನು ಹೆಚ್ಚಿಸಿ ತನ್ಮೂಲಕ ಆವೃತ್ತಿಗಳಿಗೆ ಪೂರ್ಣತೆಯನ್ನು ಕೊಡುವುದು ಸುವೇದ್ಯ. ಇದನ್ನು ಶ್ರೀಯುತರು ಹಲವು ಬಗೆಯಾಗಿ ವಿಭಿನ್ನ ಭಾಷೆಗಳಲ್ಲೂ ಉದಹರಿಸಿ ಸಮರ್ಥಿಸಿದ್ದಾರೆ. (Twinkle twinkle little star ಮತ್ತು ಓಂಕಾರಪಂಜರಶುಕೀಂ ಎಂಬ ಉದಾಹರಣೆಗಳು.) ಸಾಮಾನ್ಯವಾದ ಹಾಡಿಕೆಗೆ ಎಂಟು ತಾಲಖಂಡಗಳಿರಬೇಕೆಂದೂ ಇದಕ್ಕೆ ಕಾರಣ ಅತಿಸುಲಭವಾದ ಆದಿತಾಳದ (ಏಕತಾಳದ) ನಡೆಯೇ ಇದೆಂದೂ ಸರಿಯಾಗಿಯೇ ತರ್ಕಿಸಲಾಗಿದೆ. ಪಾದವೊಂದಕ್ಕೆ ನಾಲ್ಕು ಅಥವಾ ಎಂಟು ಖಂಡಗಳೂ, ಪದ್ಯವೊಂದಕ್ಕೆ ಎರಡು ಅಥವಾ ನಾಲ್ಕು ಪದಗಳೂ ಇರಲೇಬೇಕೆಂಬುದು ಎಲ್ಲಾ ಗೇಯಬಂಧಗಳ ಲಕ್ಷಣ. ಈ ಪಾದಘಟಕಗಳ ಗಣಗಳು ಪಾದಾಂತ್ಯದಲ್ಲಿ ಊನವಾಗಿಯೋ ಮೌನವಾಗಿಯೋ ಇದ್ದರೂ ಕರ್ಷಣದ ಮೂಲಕ ಗಣಗಳ ಕೊರತೆಯನ್ನು ತುಂಬಿಕೊಂಡೇ ತೀರಬೇಕು. ಅಲ್ಲದೆ ಯಾವ ಛಂದಸ್ಸಿನಲ್ಲಿ ಯಾವ ಗಣ-ಪ್ರಾಧಾನ್ಯವು ಬರುವುದೋ ಅದರ ಧಾಟಿಯು ಅದೇ ಗಣಗತಿಯನ್ನೇ ಆಧರಿಸಿ-ರುತ್ತದೆ. ಕನ್ನಡದಲ್ಲಿ ವಿಷ್ಣುಗಣಾಧಿಕ್ಯವೇ ಬಹುತೇಕ ಕಾಣುತ್ತದೆ. ಅಂತೆಯೇ ಪಿರಿಯಕ್ಕರವೂ ತನ್ನ ಸಪ್ತಘಟಕಗಳಲ್ಲಿ ಆದ್ಯಂತದ ಬ್ರಹ್ಮ-ರುದ್ರರನ್ನುಳಿದು ವಿಷ್ಣುಗಣಘಟಿತವಾದ ಕಾರಣ ಆದಿಯ ಬ್ರಹ್ಮಗಣವು ಕೃಷ್ಟವಾಗಿ ಅಂತ್ಯದ

ರುದ್ರಚ್ಛೇದದಿಂದ ವಿಷ್ಣುಗಣವೂ ಮತ್ತೊಂದು ಗುರ್ವೈಕವಾದ ಊನಗಣವು ರೂಪಗೊಂಡು ಎಂಟು ಗಣಗಳ ಪಾಳಿಗೇ ಸಲ್ಲುತ್ತದೆ. ಇವೆಲ್ಲ ವಿಚಾರಗಳನ್ನೂ ಶ್ರೀಯುತರು ಅತಿಸಮರ್ಥವಾಗಿ ನಿರೂಪಿಸಿದ್ದಾರೆ.

ಮಹತ್ತ್ವದ ಮಾತೆಂದರೆ ಶ್ರೀಯುತರಾದ ಬಿ.ಎಂ.ಶ್ರೀ., ವಿ.ಸೀ., ತೀ.ನಂ.ಶ್ರೀ. ಮೊದಲಾದವರೆಲ್ಲರೂ ಪಿರಿಯಕ್ಕರದ ಚೆಲುವನ್ನು ಎಣೆ ಇಲ್ಲದೆ ಕೊಂಡಾಡುತ್ತ ಅದಕ್ಕೆ ಸಲ್ಲದ ಸಾಮರ್ಥ್ಯಗಳನ್ನಾರೋಪಿಸುತ್ತಿರುವಾಗ ಶ್ರೀ ಸೇಡಿ-ಯಾಪು ಅವರು ಇಡೀ ತ್ರಿಮೂರ್ತಿಚ್ಛಂದದ ಇತಿಮಿತಿಗಳ ಬಗ್ಗೆ ಬಹುಮನ-ನೀಯವಾದ ನಿರ್ಣಾಯಕ ವಾಕ್ಯಗಳನ್ನಾಡಿದ್ದಾರೆ.[6] ಇದು ಅವರ ನಿಷ್ಕೃಷ್ಟಮತಿಗೆ ಸೂರ್ಯಸಾಕ್ಷಿ. ಅದೇನೆಂದರೆ ಈ ತ್ರಿಮೂರ್ತಿಚ್ಛಂದಗಳಲ್ಲಿ ಪ್ರಕೃಷ್ಟಬಂಧಗಳು (ನಿಬಿಡವಾದ ಬಂಧಗಳು) ಬರಲಾರವು. ಸುಕುಮಾರಬಂಧವೇ ಪ್ರಚುರವಾಗಿರು-ವುದು ಇದಕ್ಕೆ ಕಾರಣ. ಪ್ರತಿಖಂಡದಲ್ಲೂ ಕರ್ಷಣವಿರುವುದರಿಂದ ಆಯಾ ಖಂಡಾಂತ್ಯದಲ್ಲಿ ನಿಲುಗಡೆ ಬೇಕು. ಇದಿಲ್ಲದಿದ್ದಲ್ಲಿ ಅರ್ಥಕ್ಲೇಶ. ಹೀಗಾಗಿ ಈ ತೆರನಾದ ಸುಕುಮಾರಬಂಧಗಳಲ್ಲಿ ಏಕತಾನತೆ ಅನಿವಾರ್ಯ.

'ವರ್ಣಕ' ಶಬ್ದದ ವಿವೇಚನೆಯನ್ನೂ ಆನುಷಂಗಿಕವಾಗಿ ನಡೆಸಿ ವರ್ಣಕವೆಂದರೆ 'ಲಯಾನ್ವಿತಬಂಧನಿಬದ್ಧಕಾವ್ಯ'ವೆಂಬ ನಿಲುವಿಗೆ ಬರಲಾಗಿದೆ. ಅಕ್ಕರವು ಅಕ್ಷರದ ತದ್ಭವವೆಂದೂ ಅಕ್ಷರವು 'ವರ್ಣ' ಸಂವಾದಿಯೆಂದೂ ಸಕ್ರಮವಾಗಿ ತರ್ಕಿಸಿರುವ ರೀತಿ ಸುಗ್ರಾಹ್ಯ.

ತ್ರಿಪದಿಯ ಲಕ್ಷಣವನ್ನೂ ಅದರ ಶ್ರಾವಣರೂಪದಲ್ಲಿಯ ಚತುಷ್ಪದ ಸ್ವರೂಪವನ್ನೂ ತಿಳಿಸುತ್ತಾ, ಕಪ್ಪೆ ಅರಭಟ್ಟನ ಶಾಸನಪದ್ಯಪಾಠವನ್ನು ಚರ್ಚಿಸುತ್ತಾ ತಳೆದಿರುವ ನೂತನಪಾಠದ ನಿಲುವು ಅನನ್ಯ, ಶ್ಲಾಘ್ಯ. ಅಂಶ ಅರ್ಥಾತ್ ತ್ರಿಮೂರ್ತಿಗಣ ತ್ರಿಪದಿಯು 'ತ್ರಿವಿಧಿ'ಯೆಂಬ ಮಾತ್ರಾಮಾನಬಂಧವಾಗಿರು-ವುದನ್ನು ಚರ್ಚಿಸುತ್ತಾ ಗೇಯ-ಪಾಠ್ಯ ಬಂಧಗಳಲ್ಲಿಯ ರೂಪಾಕರ್ಷಣೆ, ಅರ್ಥಾಕರ್ಷಣೆಗಳ ಬಹಿರ್ಮುಖಾಂತರ್ಮುಖಸೌಂದರ್ಯಮೀಮಾಂಸೆ ನಡೆಸಿರು-ವುದು ಯುಕ್ತಿಯುಕ್ತ.

---

6. ಸಂಸ್ಕೃತ ವೃತ್ತಗಳ ಮೇಲೆ ಕತ್ತಿಮಸೆಯುವಾತುರದಲ್ಲಿ ಹಲವರು ವಿದ್ವಾಂಸರು ದ್ರಾವಿಡಪ್ರೀತಿಯಿಂದ ತ್ರಿಮೂರ್ತಿಚ್ಛಂದಸ್ಸುಗಳಿಗೆ ಅತಿಮನ್ನಣೆಯನ್ನಿತ್ತಿರುವುದು ವಿಜ್ಞವೇದ್ಯ. ವಾಸ್ತವದಲ್ಲಿ ಈ ಬಂಧಗಳಲ್ಲಿ ಗತಿವೈವಿಧ್ಯ ಬಲು ಕಡಮೆ. ಬಹುತೇಕ ವಿಷ್ಣುಗಣಾಧಿಕ್ಯದ ಕಾರಣದಿಂದಾಗಿಯೇ ಚಾಕ್ಷುಷರೂಪವೇನೇ ಇರಲಿ, ಐದು-ಆರು ಮಾತ್ರೆಗಳಾಗಿ ವಾಚನ-ಗಾಯನಗಳಲ್ಲಿ ಉನ್ಮೀಲಿತವಾಗುವ ಖಂಡಗಳ ಸ್ವರೂಪದಲ್ಲಿ ದ್ರುತ, ಮಧ್ಯಾದಿಗತಿಗಳೂ ಮಿಶ್ರ, ಸಂಕಲಿತಾದಿ ಪ್ರಭೇದಗಳೂ ಇಲ್ಲದ ಮಾತ್ರಾಛಂದಸ್ಸಿಗಿಂತಲೂ ವೈವಿಧ್ಯದಲ್ಲಿ ಕೊರೆ-ಗೂಂಡಿವೆ. ಅಕ್ಷರವೃತ್ತಗಳಿಗಿಂತಲೂ ಅತೀವ ಏಕತಾನಿಕವಾಗಿ ಗಾಯನ ಮಾತ್ರ ಮೋಹಕತೆ-ಯನ್ನು ಈಷದ್ರಕ್ಷಿಸಿಕೊಂಡಿವೆ.

'ಏಳೆ'ಯು ಮರಾಠೀ 'ಓವಿ'ಯಿಂದಾಗಲಿ, ತಮಿಳಿನ 'ಕುರುಳ್'ನಿಂದಾಗಲಿ ಬಂದಿಲ್ಲವೆಂದೂ ಸಪ್ತಗಣಾತ್ಮಕತೆಯಿಂದಾಗಿ ಅದಕ್ಕೆ 'ಏಳೆ' ಎಂಬ ಹೆಸರು ಬಂದಿಲ್ಲವೆಂದೂ ಸರಿಯಾಗಿ ವಿವೇಚಿಸಲಾಗಿದೆ. ಸಾಂಗತ್ಯವು ಎರಡು ಏಳೆಗಳ ಜೋಡಣೆಯೆಂಬುದು ಸುವ್ಯಕ್ತ.

ಷಟ್ಪದ(ತ್ರಿಮೂರ್ತಿಗಣನಿಬದ್ಧವಾದ ಒಂದೇ ಬಗೆಯ ಷಟ್ಪದೀ)ವು ಬಹುತೇಕವಾಗಿ ಪಿರಿಯಕ್ಕರವನ್ನೇ ಹೋಲುತ್ತದೆ ಮತ್ತು ಪಿರಿಯಕ್ಕರದ ಆದಿಯ ಬ್ರಹ್ಮಗಣವು ಇಲ್ಲಿ ವಿಷ್ಣುವೇ ಆಗಿದೆ. ಅಂತೆಯೇ ಮಾತ್ರಾಷಟ್ಪದಿಗಳನ್ನು ಪರಾಮರ್ಶಿಸಿ ಪ್ರೌಢಷಟ್ಪದಿ ಎಂಬ (೪+೫) ಮಾತ್ರಾವಿನ್ಯಾಸದ ಬಂಧದ ಶ್ರುತಿಕಟುತೆಯನ್ನೂ, ಅಸುಭಗ ನಿರ್ವಹಣೆಯನ್ನೂ ತಿಳಿಸಲಾಗಿದೆ.[7] ರಗಳೆಗಳಲ್ಲಿ ಊನಖಂಡಗಳು ಪಾದಾಂತ್ಯದಲ್ಲಿಲ್ಲದ ಕಾರಣ ಅಕೃಷ್ಟವಾಗಿಯೇ ಪಠಿಸುತ್ತಾ ಅವುಗಳನ್ನು ಸಾಗಿಸಿಕೊಂಡು ಹೋಗಬೇಕೆಂದಿರುವುದು ಅನುಭವವೇದ್ಯ. ರಗಳೆಗಳ ಪ್ರಾಕೃತಮೂಲ ಸಾಧುವಾದವಾಗಿದೆ.

ಗೀತಿಕೆಯ ಲಕ್ಷಣವಿವೇಚನೆಯೂ ತ್ರಿಪದಿಯ ವಿವೇಚನೆಯಂತೆ ತಲ-ಸ್ಪರ್ಶಿಯಾಗಿ ಸಾಗಿದೆ. ಬಹುವಿರಳತಮವಾಗಿ, ಅಸ್ತಂಗತಿಸಿಯೇ ಬಿಟ್ಟಿರುವ ಈ ಪ್ರಕಾರದ ರೂಪ-ಶಿಲ್ಪಗಳನ್ನು ಪುನರ್ನಿರ್ಮಿಸಿ ನಿರ್ವಚಿಸುವುದು ದುಷ್ಕರಯತ್ನ. ಇದರಲ್ಲೂ ಶ್ರೀಯುತರು ಸಫಲರಾಗಿದ್ದಾರೆ.

ಛಂದೋವತಂಸವನ್ನು ಕುರಿತು ವಿವೇಚಿಸುತ್ತಾ ಅದರ ಲಕ್ಷಣವನ್ನು ನಿಷ್ಕರ್ಷೆಯಾಗಿ ತಿಳಿಸುವುದಲ್ಲದೆ ನಾಮಾಂಕಿತ ಜಿಜ್ಞಾಸೆಯನ್ನೂ ನಡೆಸಿ ಬಹು ವಿಸ್ಮಯಾವಹ ಸಂಶೋಧನೆಯನ್ನೇ ಮಾಡಿದ್ದಾರೆ. ಸೀಸಪದ್ಯಕ್ಕೆ ಅಂಟಿಕೊಂಡು ಬಂದ ಆಟವೆಲದಿ, ತೇಟಗೀತಿಗಳಂತೆಯೇ ಛಂದೋವತಂಸವು ಪಿರಿಯಕ್ಕರಕ್ಕೆ ಅವಶಿಷ್ಟದಂತೆ ಅಂಟಿಕೊಂಡು ಬಂದಿರಬಹುದೆಂದು ತರ್ಕಿಸಿ ವಿಚಾರವನ್ನು ವ್ಯವಸ್ಥೀಕರಿಸುವುದು ಅತಿಶಯಪ್ರಜ್ಞಾಪಾಟವದ ನಿದರ್ಶನ. ಈ ಅನುಮಿತಿಗೆ

---

7. ೪+೫ ಮಾತ್ರಾಗತಿಗಿಂತ ೫+೪ ಮಾತ್ರಾಗತಿಯು ಶ್ರಾವ್ಯ. ಆದರೆ ಪ್ರತಿ ೯ ಮಾತ್ರೆಗಳ ಬಳಿಕವೂ ಯತಿಖಾಚಿತ್ಯವೂ ೮ ಮತ್ತು ೯ನೆಯ ಮಾತ್ರೆಗಳು ಸೇರಿ ಒಂದು ಗುರುವೂ ಅದರಲ್ಲಿ ಛಂದೋಗತಿ ಹದವಾಗುತ್ತದೆ. ಈ ತೆರನಾದ ಧಾಟಿಗೆ ಸಂಸ್ಕೃತದ ಸುಪ್ರಸಿದ್ಧ ಇಂದ್ರವಜ್ರಾವೃತ್ತವೇ ನಿದರ್ಶನ. – – ∪ | – – – | ∪∪ – ∪ | – – ಎಂಬ ವಿನ್ಯಾಸದಲ್ಲಿ ಇದನ್ನು ಅರಿಯಬಹುದು. ಈ ಬಗ್ಗೆ ಹೆಚ್ಚಿನ ವಿವೇಚನೆ ಅಗತ್ಯವಿದೆ. ಕಂದಪದ್ಯವು ಮಾತ್ರಾಬಂಧವಾದರೂ ಜಗಣಗಳ ಬಗೆಗೆ ಹೆಚ್ಚಿನ ನಿಬಂಧನೆಗಳು ಯತಿಖಾಚಿತ್ಯ ಗುರ್ವಂತ್ಯಾದಿಗಳಿಂದ ವೃತ್ತಗಳ ಪೆಡಸುತನವನ್ನು ಸ್ವಲ್ಪಮಟ್ಟಿಗೆ ಉಳಿಸಿಕೊಂಡಿರುವಂತೆ ಈ ೫+೪, ೫+೪ ಬಂಧವೂ ಸಹ ಕೆಲವು ನಿಯಮಗಳಿಂದ ಮಾತ್ರಾಗತಿಯಲ್ಲಿ ಹಿತವಾಗಿಯೇ ಸಾಗುತ್ತದೆ. ಇದನ್ನು ನಾನು ಸುಮಾರು ಎಂಟೊಂಬತ್ತು ವರ್ಷಗಳ ಹಿಂದೆಯೇ ಬಳಸಿ ಶ್ರೀಮದ್ವಾಲ್ಮೀಕಿರಾಮಾಯಣದ ಕಿಷ್ಕಿಂಧಾಕಾಂಡದ ೨೮ ಹಾಗೂ ೩೦ನೆಯ ಸರ್ಗಗಳನ್ನು ಸರಳವಾಗಿ ಕನ್ನಡಿಸಿದ್ದೇನೆ. ಈಗಲೂ ಈ ಬಂಧದಲ್ಲಿ ಹಲವು ರಚನೆಗಳನ್ನು ಮಾಡುತ್ತಿದ್ದೇನೆ.

ಸಾಕ್ಷಾತ್ಪ್ರಯೋಗಾಧಾರಗಳಿಲ್ಲದಿದ್ದರೂ ಛಂದೋವತಂಸವು ಪಿರಿಯಕ್ಕರಕ್ಕೆ ಉಪ-ಷ್ಟಂಭಕವಾಗಿರಹುದೆಂದು ಗ್ರಹಿಸುವುದು ತಪ್ಪಾಗಲಾರದು.

ಪ್ರಾಸಂಗಿಕವಾಗಿ ಯತಿಯ ಬಗ್ಗೆ ಹೇಳಿರುವ ಮಾತುಗಳು 'ಛಂದೋಗತಿ' ಗ್ರಂಥದ ವಿಚಾರಧಾರೆಗೆ ಪೂರಕವಾಗಿವೆ 'ಯತಿಯೆಂಬುದುಸಿರ್ವ ತಾಣಂ' ಎಂಬ ಕವಿರಾಜಮಾರ್ಗಕಾರನ ಮಾತೂ 'ಯತಿಯೆಂಬುದುಸಿರ್ದಾಣಂ' ಎಂಬ ನಾಗವರ್ಮನ ನುಡಿಯೂ ವಿಭಿನ್ನ. ದಂಡಿಯ ಮತವು ಪಿಂಗಲಸಮ್ಮತ ಮತ್ತು ಅದುವೇ ಕವಿರಾಜಮಾರ್ಗಕಾರನ ಆಶಯ. ಛಂದೋಗತಿಗೆ ಭಂಗಬಾರದ ಅರ್ಥಾತ್ ಛಂದೋಗತಿಯನ್ನು ಸರಾಗವಾಗಿ ಅನುಸರಿಸುತ್ತಾ ಪದಪುಂಜಗಳ ಕ್ರಮಾನುಗತ ವಿಚ್ಛೇದ ಮಾಡುವುದು ಯತಿಯ ವ್ಯಾಪ್ತಿಗೆ ಬರುವುದಿಲ್ಲ ಎಂಬಿವೇ ನಿರ್ಣಯಗಳು ಅತೀವ ಸುಗ್ರಾಹ್ಯ.

"ದಂಡಾಕಾರದಲ್ಲಿ ಓದುತ್ತಾ ಪ್ರತಿ ಛಂದಃಖಂಡಕ್ಕೂ ನಿಲ್ಲಿಸದೆ, ಸಾಹಿತ್ಯದ ಶಬ್ದಖಂಡಗಳಿಗನುಸಾರವಾಗಿ ಗತಿ ತಪ್ಪದೆ, ಛಂದಃಖಂಡಗಳ ಆದ್ಯಕ್ಷರಗಳನ್ನು ಕಿಂಚಿತ್ ಸ್ಫುಟತರವಾಗಿ ಉಚ್ಚರಿಸುವುದೇ ಮಾತ್ರಾಬಂಧಗಳ ಪಠನವಿಧಾನ" ಎಂಬ ಸಾರೋಕ್ತಿಗೆ ಯಾವ ಪ್ರತ್ಯವಾಯವೂ ಇಲ್ಲ.

'ಕನ್ನಡಕ್ಕೆ ಯತಿ ಬೇಡವೆಂಬ ಮಾತಿನಲ್ಲಿ ಹುರುಳಿಲ್ಲ' ಎಂಬ ಸತ್ಯವಾಕ್ಯವನ್ನು ಮರೆಯದೆ ವಿವೇಚಿಸಿ ಅನುಭವದಿಂದ ಸಾಕ್ಷಾತ್ಕರಿಸಿಕೊಳ್ಳಬೇಕು. ಇದನ್ನು ಬಹುತೇಕ ವಿದ್ವಾಂಸರು ಗಮನಿಸಿಯೇ ಇಲ್ಲ. ಯತಿಯಿಲ್ಲದ ಪದ್ಯದ ಧಾಟಿ ವೃತ್ತಗಳಲ್ಲಂತೂ ತಿಳಿಯುವುದೇ ಕಷ್ಟ. ಶ್ರುತಿಹಿತವೂ, ರಸವ್ಯಂಜಕವೂ, ಅರ್ಥಪೋಷಕವೂ ಆದ ಯತಿಭಂಗ, ವಾಸ್ತವದಲ್ಲಿ ಇದು ಯತಿಭಂಗವಲ್ಲ, ಅದು ಗಣವಿಕಲ್ಪ ಮತ್ತು ಯತಿಸ್ಥಾನವಿಕಲ್ಪವೆಂದೆನ್ನಬಹುದು – ಕ್ವಾಚಿತ್ಕವಾಗಿ ಪದ್ಯಗಳಲ್ಲಿ (ಮೂಲ ಗಣಪರಿವೃತ್ತಿಯನ್ನು ಮರೆಸುವಷ್ಟಾಗಲಿ, ನಿಯತವೆಂಬಷ್ಟು ಅಸಕೃತ್ತಾಗಿಯಾಗಲೀ ಬರಬಾರದು) ಬಂದಾಗ ಸ್ವಾಗತಾರ್ಹವಾಗುತ್ತದೆ.

ಧ್ವನಿಸ್ವರೂಪವೆಂದರೆ ಶ್ರುತಿಭೇದ, ಪರಿಮಾಣವೆಂದರೆ ಹ್ರಸ್ವ ದೀರ್ಘ ಭೇದ ಎಂಬದನ್ನರಿಯದೆ, ಇವೆರಡೂ ನಮ್ಮಲ್ಲಿ ಸಂಪೂರ್ಣ ವಿಭಿನ್ನ ಘಟಕಗಳೆಂಬುದನ್ನು ಮರೆತು, ಆಂಗ್ಲಭಾಷೆಯಲ್ಲಿ ಇವೆರಡಕ್ಕಿರುವ ಸಾಪೇಕ್ಷ ಮೈತ್ರಿಯನ್ನೂ ಅಸ್ಪಾಷ್ಟ್ಯವನ್ನೂ ನಮ್ಮ ನುಡಿಯಲ್ಲಿ ಆರೋಪಿಸಿಕೊಂಡು ಗಣರೂಪವಿಕಲ್ಪವೆಂಬ ಹೆಸರಿನಲ್ಲಿ ವಿಷಮಗಣವಿನ್ಯಾಸವನ್ನೂ, ಮಾತ್ರಾಧಿಕ್ಯ ನ್ಯೂನತಾದಿಗಳನ್ನೂ ಸಮಬಂಧದಲ್ಲಿ ಹೇರಿ ಶ್ರುತಿಕಟುರಚನೆಗಳನ್ನು ಮಾಡುತ್ತಿ-ರುವುದರ ಬಗ್ಗೆ ಎಚ್ಚರಿಸಿರುವುದು ಸಕಾಲಿಕವಾಗಿದೆ. ನಮ್ಮ ಪ್ರಮುಖಕವಿಗಳಾದ ಶ್ರೀ ಕುವೆಂಪು, ಪ್ರೊ । ಗೋಕಾಕ್, ಶ್ರೀ ಕೆ. ಎಸ್. ಎನ್., ಪ್ರೊ । ಜಿ. ಎಸ್. ಎಸ್. ಮೊದಲಾದವರಿಂದ ಬಹುತೇಕ ಈ ತಲೆಮಾರಿನ ಎಲ್ಲ ಕವಿಗಳಲ್ಲೂ ಈ ವಿಪರ್ಯಾಸವನ್ನು ಕಾಣಬಹುದು. ಶ್ರೀಯುತರಾದ ಡಿ. ವಿ. ಜಿ., ಗೋವಿಂದ ಪೈ, ಶ್ರೀ ಮೊದಲಾದವರಲ್ಲಿ ಈ ಅಸಾಂಗತ್ಯವಿಲ್ಲದಿರುವುದು ಗಮನಾರ್ಹ.

ಅಕ್ಷರ-ವರ್ಣಗಳ ಮೀಮಾಂಸೆ ಅದ್ಭುತವಾಗಿದೆ. ಈ ತೆರನಾದ ಮೀಮಾಂಸೆಯಲ್ಲಿ ಲೇಖಕರ ಧಿಷಣೌತ್ಕೃಷ್ಟ್ಯವನ್ನೂ, ಚಿಕಿತ್ಸಕ ವೈದುಷ್ಯವನ್ನೂ ಮತ್ತೆ ಮತ್ತೆ ಕಾಣಬಹುದು. ಅತಿಸೂಕ್ಷ್ಮ-ಗಹನ ಪ್ರಕ್ರಿಯೆಗಳ ರಹಸ್ಯವನ್ನು ಬಿಡಿಸಿ ತೋರುವ ಚಾತುರ್ಯ ಅನನ್ಯಸಾಧಾರಣ.

ಛಂದಸ್ಸಿನ ಧಾಟಿಯಲ್ಲಿ ಒದಗುವ ಸ್ವರಾರೋಹಾವರೋಹಗಳು ರಾಗ-ಸುಖವಲ್ಲ, ಅದೊಂದು ಸ್ಪಂದನಸುಖ ಎಂಬ ಮಾತು ಮನನೀಯವಾದುದು.

ಈ ರೀತಿ ಪುಟಪುಟಗಳಲ್ಲಿಯೂ ಸ್ವಂತಿಕೆಯ ಸಿರಿಯನ್ನುಕ್ಕಿಸುತ್ತಾ, ಸುಸಂಬದ್ಧ ತರ್ಕಯುಕ್ತಿಗಳಿಂದ ಹತ್ತಾರು ನಿಟ್ಟಿನಲ್ಲಿ ವಿಚಾರಗಳನ್ನು ಪರಾಮರ್ಶಿಸಿ 'ಇದಮಿತ್ಥಂ' ಎಂಬ ನಿಸ್ಸಂದಿಗ್ಧ ನಿಲುವನ್ನು ತಳೆಯುವ ಶ್ರೀ ಸೇಡಿಯಾಪು ಅವರ ಕೃತಿದ್ವಯಗಳು ಅವರ ಯಶಸ್ತಂಭಗಳೇ ಸರಿ. ಸ್ಥೂಲವಾದ ನೀಲನಕ್ಷೆ-ಯಂತಿರುವ ಈ ಲೇಖನದಲ್ಲಿ ಅವರ ಪ್ರತಿಭಾಪಾಂಡಿತ್ಯಗಳ ಸಿದ್ಧಿಸ್ವರೂಪ-ಗಳನ್ನು ಭಾಗಶಃ ಮಾತ್ರ ಕಾಣಿಸಲಾಗಿದೆಯಾದರೂ ಇಷ್ಟರಲ್ಲಿಯೇ ವಿಜ್ಞರು ಶ್ರೀಯುತರ ಕೃತಿಗಳ ಸಾರ್ವಕಾಲೀನ ಮೌಲ್ಯಗಳನ್ನರಿಯಬಹುದಾಗಿದೆ. ವರ್ಣ-ನಾತ್ಮಕವಾದ ಬಾಹ್ಯ ವಿಚಿಕಿತ್ಸೆಯಲ್ಲಿ ಛಂದಸ್ಸಿನ ಅಂತಸ್ತತ್ತ್ವಗಳ ಬಗ್ಗೆ ಅಸ್ಖಲಿತ-ವಾದ ಅರಿವೇ ಇಲ್ಲದಿರುವಾಗ ಪೂರ್ಣಪ್ರಜ್ಞೆಯಿಂದ ರಚಿಸಿದ ಈ ಕೃತಿಗಳೆರಡು ಛಂದಃಶಾಸ್ತ್ರಕ್ಷೇತ್ರದಲ್ಲಿ ಅಜರಾಮರವಾಗಿ ಉಳಿದು ದಾರಿ ತೋರುತ್ತವೆಂಬುದರಲ್ಲ ಅತಿಶಯೋಕ್ತಿ ಇಲ್ಲ.

ಛಂದೋಽಂತರಂಗರಸರಂಗತರಂಗಭಂಗಿ
ವ್ಯಾವಲ್ಗನಸ್ಫುರಣಬಂಧುರಧೀವಿಲಾಸಂ ।
ಶ್ರೀಸೇಡಿಯಾಪುಬುಧಬದ್ಧ ಕೃತಿದ್ವಯೇನ
ವಿಂದನ್ ಜನೋಽಯಮಿಹವಂದನಲಗ್ನಚಿತ್ತಃ ॥

ಸ್ವೋಪಜ್ಞಂ ಭವದೀಯವಾಗ್ವಿಭವಜಂ ಧೀಃಶಿಲ್ಪಿತಂ ಕಲ್ಪಿತಂ
ಸ್ವೂಪಾಭಂ ಶ್ರುತಿಸೌಖ್ಯಕಾರಿ ಲಲಿತಚ್ಛಂದೋಗತಿಪ್ರಾಣಿತಂ ।
ದೀಪಪ್ರಾಯಮುದಾರಕನ್ನಡಲಸದ್ವೃತ್ತೋದಯವ್ಯಂಜಕಂ
ಮಾಪಪ್ರೀತಿಗಮಿರ್ಕೆ ಸತ್ಕೃತಿಯುಗಂ ಶ್ರೀಕೃಷ್ಣ ಭಟ್ಟಾರಕಾ ॥

ಆಧಾರಗ್ರಂಥಗಳು:

1. **'ಛಂದೋಗತಿ'** – ಸೇಡಿಯಾಪು ಕೃಷ್ಣ ಭಟ್ಟ, ಗೀತಾಬುಕ್ ಹೌಸ್ ಮೈಸೂರು, ೧೯೮೫
2. **'ಕನ್ನಡ ಛಂದಸ್ಸು'** – ಸೇಡಿಯಾಪು ಕೃಷ್ಣ ಭಟ್ಟ, ಮಣಿಪಾಲ ಸಾಹಿತ್ಯ ಸಂಘ, ಮಣಿಪಾಲ, ೧೯೮೮.

3. **'ಲೋಚನ'** – ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ವಿದ್ವತ್ಪತ್ರಿಕೆ; ಜೂನ್ ೧೯೮೭ ಮತ್ತು ಜೂನ್ ೧೯೮೮ರ ಸಂಚಿಕೆಗಳು.
4. **'ಸಮಾಲೋಕನ'** – ತೀ. ನಂ. ಶ್ರೀಕಂಠಯ್ಯ, ಕಾವ್ಯಾಲಯ, ಮೈಸೂರು, ೧೯೫೮.
5. **'ಕನ್ನಡ ಛಂದಃಸ್ವರೂಪ'** – ಟಿ. ವಿ. ವೆಂಕಟಾಚಲ ಶಾಸ್ತ್ರೀ, ಡಿ. ವಿ. ಕೆ. ಮೂರ್ತಿ, ಮೈಸೂರು, ೧೯೭೮.
6. **'ಕನ್ನಡಛಂದೋವಿಕಾಸ'** – ಡಿ. ಎಸ್. ಕರ್ಕಿ, ಧಾರವಾಡ, ೧೯೫೬.
7. **'ಕನ್ನಡ ಕೈಪಿಡಿ'** (ಸಂಪುಟ ೧) – ಮೈಸೂರು ವಿ. ವಿ. ಮೈಸೂರು, ೧೯೫೫.
8. **'ಕನ್ನಡ ಛಂದಸ್ಸು'** – ಟಿ. ವಿ. ವೆಂಕಟಾಚಲ ಶಾಸ್ತ್ರೀ, ಮೈಸೂರು, ೧೯೭೦.
9. **'ಒಂದನೆಯ ನಾಗವರ್ಮ'** – ಸಂ. ವಿ. ಸೀತಾರಾಮಯ್ಯ, ಐ. ಬಿ. ಎಚ್. ಪ್ರಕಾಶನ, ಬೆಂಗಳೂರು, ೧೯೭೩.



೭

# ಭಾರತೀಯಛಂದಶ್ಶಾಸ್ತ್ರಕ್ಕೆ ಸೇಡಿಯಾಪು ಕೊಡುಗೆ*

– ಶತಾವಧಾನಿ ಡಾ। ಆರ್. ಗಣೇಶ್

೧

ಹತ್ತೊಂಬತ್ತನೆಯ ಶತಾಬ್ದಿಯಿಂದ ಈಚೆಗೆ ಎಲ್ಲ ಭಾರತೀಯ ಭಾಷೆಗಳೂ ಪಾಶ್ಚಾತ್ಯಪ್ರಭಾವದಿಂದ – ವಿಶೇಷತಃ ಇಂಗ್ಲಿಷ್ ಭಾಷೆಯ ಸಂಸ್ಕಾರದಿಂದ – ಪ್ಲಾವಿತವಾಗಿ ಹೊಸ ಹೊಸ ವಸ್ತುವಿಷಯಗಳನ್ನೂ ವಿನಿಯೋಗ–ನಿರೂಪಣ ಕ್ರಮಗಳನ್ನೂ ಮೆಯ್ಗೂಡಿಸಿಕೊಂಡಿತೆಂಬುದು ಇದೀಗ ಸಕಲಜನಸುವೇದ್ಯ. ಅಂತೆಯೇ ಈ ಸಂವಿಧಾನವು ಕೇವಲ ಸರ್ಜನಾತ್ಮಕ ಸಾಹಿತ್ಯವೆನ್ನಬಹುದಾದ ಕಥೆ–ಕಾದಂಬರಿ–ಕವಿತೆ–ರೂಪಕಗಳಿಗೆ ಮಾತ್ರವೇ ಸೀಮಿತವಾಗದೆ ಗ್ರಂಥ–ಸಂಪಾದನೆ – ಸಂಶೋಧನೆಗಳಿಗೂ ವ್ಯಾಕರಣ – ಕಾವ್ಯಮೀಮಾಂಸೆ – ಛಂದ–ಶ್ಶಾಸ್ತ್ರಗಳಂಥವುಗಳಿಗೂ ವಿಸ್ತರಿಸಿತು. ಇದರ ಪರಿಣಾಮದಿಂದ ಒಳಿತೂ ಆಯಿತು, ಕೆಡುಕೂ ಆಯಿತು. ಹೊಸತನದ ಲವಲವಿಕೆ, ಹೊಸಹೊಸ ಶಿಸ್ತುಗಳ ಅಳವಡಿಕೆ, ಜಡತೆಯ ನಿವಾರಣೆ, ಸ್ವತಂತ್ರಜೀವನಕ್ಕೆ ಅಗ್ರಪೂಜೆ, ಐತಿಹಾಸಿಕ – ತೌಲನಿಕ ವಿಮರ್ಶೆ ಹಾಗೂ ವಿಶ್ಲೇಷಣೆಯೇ ಮುಂತಾದ ಅನೇಕ ರೀತಿಯ ಒಳಿತುಗಳು ವಿದ್ವತ್ಕಾರ್ಯಗಳಲ್ಲಿ, ಸಂಶೋಧನ – ಮೀಮಾಂಸನ ಪ್ರಪಂಚಗಳಲ್ಲಿ ಆದುವು. ಇದೇ ರೀತಿ ಪರಂಪರಾಪ್ರಾಪ್ತವಾದ ಸಂಪ್ರದಾಯದ ತಿರುಳನ್ನು ಸರಿಯಾಗಿ ಅರಿಯದ ಕಾರಣ, ದಾಸ್ಯದ ಕೀಳರಿಮೆಯೂ ಸೇರಿದ ಕಾರಣ ನಮ್ಮ ನೆಲದ ಮೌಲ್ಯಗಳನ್ನೆಲ್ಲ ಲಘುವಾಗಿಯೇ ಸಂಶಯದಿಂದಲೇ ಕಾಣುವ ಪ್ರವೃತ್ತಿ ಬೆಳೆಯಿತು; ಸಾರಾಸಗಟಾಗಿ ತಳ್ಳಿಹಾಕುವ ಉದ್ದಾಮತೆಯೂ ಬಲಿಯಿತು. ಮಾತ್ರವಲ್ಲ, ಅಂಧಾನುಕರಣೆಯೆಂಬಂತೆ ಇಂಗ್ಲಿಷ್ ಮುಂತಾದ ಭಾಷೆಗಳ ರಚನಾಪದ್ಧತಿ–ಯನ್ನೂ ಮೀಮಾಂಸಾಕ್ರಮವನ್ನೂ – ವೈಜ್ಞಾನಿಕವಾಗಿ ಅವು ಎಷ್ಟೇ ಅಸಿಂಧು–ವಾಗಿದ್ದರೂ ಅಯುಕ್ತವಾಗಿದ್ದರೂ – ನಮ್ಮ ದೇಶಭಾಷೆಗಳ ಕಾವ್ಯ–ಶಾಸ್ತ್ರ ಸ್ವರೂಪಗಳ ಪುನಾರಚನೆಗೂ ವಿಶ್ಲೇಷಣೆಗೂ ನಿರ್ಲಜ್ಜೆಯಿಂದ ಆಮದುಮಾಡಿ–ಕೊಳ್ಳುವ ಮತ್ತೊಂದು ಬಗೆಯ ಮತಮೌಢ್ಯವೆನ್ನಬಹುದಾದ ಪ್ರಜ್ಞಾದಾಸ್ಯವೂ ದಾಂಗುಡಿಯಿಟ್ಟಿತು. ಇದು ನಮಗೂ ನಮ್ಮ ಸಂಸ್ಕೃತಿಗೂ ಆದ ಕೆಡುಕು.

---

* ಸೇಡಿಯಾಪು ಅವರ ಶತಮಾನೋತ್ಸವ ಸಂದರ್ಭದಲ್ಲಿ ಅವರ ಸಂಸ್ಮರಣರೂಪದಲ್ಲಿ ಪ್ರಕಟಗೊಂಡ ಲೇಖನಸಮುಚ್ಚಯರೂಪದ ಗ್ರಂಥ 'ಶತಾಂಜಲಿ'ಯಲ್ಲಿ ಪ್ರಕಟಿತ ಲೇಖನ. (೨೦೦೨, ಪ್ರಕಾಶನ – ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ) – ಸಂ.

ಇಂಥ ಸತ್ಪರಿಣಾಮ – ದುಷ್ಪರಿಣಾಮಗಳು ಎಲ್ಲ ಕ್ಷೇತ್ರಗಳಲ್ಲಿಯೂ ನಿರಪವಾದವಾಗಿ ಆದುವೆನ್ನಬಹುದು. ಆದರೆ ದುರ್ದೈವವೇನೆಂದರೆ ಸತ್ಪರಿಣಾಮ–ವೊಂದೇ ಎದ್ದು ತೋರುವಂತಾಗಿ (ಅಥವಾ ಎಲ್ಲರೂ ಒಕ್ಕೊರಲಿನಿಂದ ಕೊಂಡಾಡುವಂತಾಗಿ; ಇದೂ ಅಂಧವಿಶ್ವಾಸದ ಫಲವೇ!) ದುಷ್ಪರಿಣಾಮದ ಆಯಾಮಗಳನ್ನು, ಭಯಕರತೆಯನ್ನು ನಮ್ಮ ಭದ್ರಲೋಕ (ಎಲೀಟ್) ಜನರು ಕಾಣುವುದೇ ಆಗಲಿಲ್ಲ. ಇದೇ ನಮ್ಮ ದೇಶದ ಅತಿಭೀಕರ ದುರಂತ. ನಮ್ಮ ವಿದ್ಯಾವಂತರು ಸಾಹಿತ್ಯಸಂಶೋಧನೆ ಹಾಗೂ ಶಾಸ್ತ್ರಮೀಮಾಂಸೆಗಳಂಥ 'ನಿರುಪದ್ರವ' ನಿಷ್ಕೃಷ್ಟ ವಿದ್ಯಾವಲಯಗಳಲ್ಲಿಯೂ ಪಾಶ್ಚಾತ್ಯಾನುಕರಣ–ಲೋಲುಪತೆಯ ಫಲವಾಗಿ ಅವೈಜ್ಞಾನಿಕವೂ ಆರ್ಷಸಂಸ್ಕೃತಿದೂರವೂ ಆದ ಅಪಸಿದ್ಧಾಂತಗಳು ದೃಢವಾಗಿ ಪ್ರತಿಷ್ಠಿತವಾಗುತ್ತವೆಂಬುದನ್ನು ಅರಿಯದಾದರು. ಎಲ್ಲಿಯೋ ಒಬ್ಬ ಆನಂದ ಕುಮಾರಸ್ವಾಮಿ, ಎಂ. ಹಿರಿಯಣ್ಣ, ಪಿ. ವಿ. ಕಾಣೆ, ಡಿ. ವಿ. ಜಿ., ಕೆ. ಕೃಷ್ಣಮೂರ್ತಿ, ಶ್ರೀಪಾದ ದಾಮೋದರ ಸಾತವಲೇಕರ್, ಶ್ರೀಕಂಠ ಶಾಸ್ತ್ರಿ ಮುಂತಾದ ಹಲಕೆಲವರು ಮಾತ್ರ ಇದನ್ನು ಗಮನಿಸಿ ಜನಜಾಗರಣಕ್ಕೂ ತಥ್ಯದರ್ಶನ ಮಾಡಿಸುವುದಕ್ಕೂ ಕಾರಣರಾದರು. ಆದರೆ ಇಂದೂ ಸಹ ಇಂಥವರ ಕಾಣ್ಕೆ – ಜಾಣ್ಮೆಗಳನ್ನು ನಮ್ಮ ಜಗತ್ತು ಸರಿಯಾಗಿ ಗ್ರಹಿಸಿಲ್ಲ, ವಿದ್ವಲ್ಲೋಕವಂತೂ ಅಷ್ಟಾಗಿ ಆದರಿಸಿಯೇ ಇಲ್ಲ.

ಈ ಮುನ್ನ ಹೇಳಿದ ವಿರಳತಮ ಸಾಹಿತ್ಯ–ಸಂಸ್ಕೃತಿ–ಸಂಶೋಧನ ದಾರ್ಶನಿಕರಲ್ಲಿ ಒಬ್ಬರು ನಮ್ಮ ಸೇಡಿಯಾಪು. ಛಂದಶ್ಶಾಸ್ತ್ರಕ್ಷೇತ್ರದಲ್ಲಿ ಅನುಚಿತವಾದ ಪಾಶ್ಚಾತ್ಯವಿದ್ಯಾಪ್ರಭಾವದಿಂದ ನಮ್ಮ ವಿದ್ವಾಂಸರು ಮಾಡಿದ್ದ ಅಸದ್ಗ್ರಹಣವನ್ನು ನೀಗುವುದರಲ್ಲಷ್ಟೇ ಅಲ್ಲ, ನಮ್ಮ ಪರಂಪರೆಯ ಹಿಂದಿನ ಪಂಡಿತರು ಸುವ್ಯವ–ಸ್ಥಿತವಾಗಿ ಈ ಶಾಸ್ತ್ರವನ್ನು ಬೆಳೆಸದಿದ್ದ ಕೊರತೆಯನ್ನು ಸಹ ಕಳೆಯುವುದರಲ್ಲಿ ಇವರು ತೋರಿದ ವೈದುಷ್ಯ, ವಿವೇಕ, ಅಂತರ್ದೃಷ್ಟಿ ಮತ್ತು ಸಾಕಲ್ಯಗಳು ಅಸಮಾನ.

ಶ್ರೀ ಸೇಡಿಯಾಪು ಕೃಷ್ಣ ಭಟ್ಟರು ಕೇವಲ ಛಂದಶ್ಶಾಸ್ತ್ರದಲ್ಲಿ ಮಾತ್ರವಲ್ಲದೆ ಭಾಷಾಶಾಸ್ತ್ರ, ವ್ಯಾಕರಣ, ಅಲಂಕಾರ, ಇತಿಹಾಸ, ಸಂಸ್ಕೃತಿ, ಕಲೆಗಳಿಗೆ ಸಂಬಂಧಿಸಿಯೂ ಇಂಥ ಪ್ರತ್ಯಭಿಜ್ಞಾನಕಾರ್ಯಗಳನ್ನು ಮಾಡಿದ್ದಾರೆ. ಆದರೆ ಪ್ರಕೃತ ಪ್ರಬಂಧದ ವಿಷಯಕ್ಕೆ ಕಟ್ಟುಬಿದ್ದು ಕೇವಲ ಅವರ ಛಂದಸ್ಸಂಬಂಧಿತ ಯೋಗದಾನವನ್ನು ಮಾತ್ರ ಪರಿಚಯಿಸಿಕೊಡಲಿರುವೆ. ಮುಖ್ಯವಾಗಿ ಸೇಡಿಯಾಪು ಅವರ ಮಹತ್ತ್ವವಿರುವುದು ಅವರು ಯಾವುದೇ 'ಪೂರ್ವಗ್ರಹ' ಅಥವಾ 'ಪಶ್ಚಿಮಗ್ರಹ'ಗಳಿಲ್ಲದೆ ನಿರ್ಭಾವುಕತೆಯ ವೈಜ್ಞಾನಿಕ ಚಿಂತನಕ್ರಮದಿಂದ ಮೌಲಿಕವಾದುದನ್ನೆಲ್ಲ ಗುರುತಿಸಿ ಅವುಗಳನ್ನು ಸಾಧಾರವಾಗಿ ಸಮರ್ಥಿಸಿ ತರ್ಕ – ಅನುಭವ – ಶಾಸ್ತ್ರಗಳೆಲ್ಲವೂ ಮುಪ್ಪುರಿಗೊಂಡ ಬಗೆಯಲ್ಲಿ ಅವರು ಕೈಗೊಂಡ ಯಾವುದೇ ವಿಚಾರವನ್ನು ಪ್ರಪಂಚಿಸಿರುವಲ್ಲಿ, ಪ್ರತಿಷ್ಠಿಸಿರುವಲ್ಲಿ. ಆದುದರಿಂದ ಈ

ನನ್ನ ಲೇಖನವೂ ಸಹ ಅದೇ ನಿರ್ಮೋಹ ನಿಷ್ಪಕ್ಷಪಾತತೆಯಿಂದಲೇ ವಿಷಯವನ್ನು ನಿರೂಪಿಸಲೆಳಸಿದಲ್ಲಿ ಅದು ಶ್ರೀ ಸೇಡಿಯಾಪು ಅವರಿಗೆ ನಾವು ಸಲ್ಲಿಸಬಹುದಾದ ಪ್ರಾಮಾಣಿಕ ಪುಷ್ಪಾಂಜಲಿಯೆಂದು ತಿಳಿಯುವೆ.

೨

ಛಂದಶ್ಶಾಸ್ತ್ರದಂಥ ತರ್ಕನಿಷ್ಕರ್ಷೆ ತಕ್ಕ ಮಟ್ಟಿಗೆ ಚೆನ್ನಾಗಿಯೇ ಇರುವ ಕ್ಷೇತ್ರದಲ್ಲಿಯೂ ಸಾಕಷ್ಟು ಅಪಕಲ್ಪನೆಗಳಿದ್ದುವೆಂದರೆ ಅಚ್ಚರಿಯಾಗದಿರದು. ಭಾರತೀಯಚ್ಛಂದಃಶಾಸ್ತ್ರದ ಬಗೆಗೆ ಪ್ರಾಚೀನರಲ್ಲಿಯೇ ಸಾಕಷ್ಟು ಗೊಂದಲಗಳಿ-ದ್ದುವು. ಅವಿಚಾರಿತರಮಣೀಯಗೃಹೀತಗಳೂ ಇದ್ದುವು, ವಿಶೇಷತಃ ಛಂದಸ್ಸಿನ ಸೌಂದರ್ಯಮೀಮಾಂಸೆಯನ್ನು ಎಲ್ಲಿಯೋ ಒಬ್ಬ ಕ್ಷೇಮೇಂದ್ರ (ಈತನೂ ಸಾಕಷ್ಟು ತಪ್ಪುಗಳನ್ನು ಮಾಡಿದ್ದಾನೆ) ಮತ್ತೊಬ್ಬ ಭೋಜರಾಜ (ತೀರ ಆನುಷಂಗಿಕವಾಗಿ) ಅಥವಾ ಕೆಲಮಟ್ಟಿಗೆ ನಾಟ್ಯಶಾಸ್ತ್ರದಲ್ಲಿ ಭರತಮುನಿಯೇ ಮಾಡಿರುವುದನ್ನು ಕಾಣಬಹುದು (ವ್ಯಾಖ್ಯಾನಕಾರ ಅಭಿನವಗುಪ್ತನೂ ಇದನ್ನು ಅಲ್ಲಲ್ಲಿ ಸ್ವಲ್ಪ ಹೇಳಿದ್ದಾನೆ). ಆದರೆ ಇದು ಒಂದಿಷ್ಟೂ ಸಮಗ್ರವಾಗಿಲ್ಲ. ಅಲ್ಲದೆ ಛಂದ-ಸ್ಸೌಂದರ್ಯೇತರವಾದ ತಾಂತ್ರಿಕ – ಮಾಂತ್ರಿಕ ಸಂಗತಿಗಳನ್ನು ಅಳವು ಮೀರಿ ಬೆಳೆಸಿರುವುದೂ ಉಂಟು. (ವಿಶೇಷತಃ ತೆಲುಗು ಭಾಷೆಯಲ್ಲಿದು ಪ್ರಚುರ. ಕನ್ನಡದಲ್ಲಿಯೂ ಈಶ್ವರಕವಿಯ ಕವಿಜಿಹ್ವಾಬಂಧನದಂಥ ಬರೆಹಗಳಿವೆ) ಪ್ರಾಸ-ವಡಿ-ಯತಿಗಳಂಥವುಗಳ ಬಗೆಗೆ ಶುಷ್ಕವೂ ಅವೈಜ್ಞಾನಿಕವೂ ಆದ ಬಹಳಷ್ಟು ನಿಯಮಗಳನ್ನು ಹಾಕಿರುವುದೂ ಉಂಟು. ಹೇಮಚಂದ್ರ, ವಿರಹಾಂಕಾದಿಗಳ ನಿರ್ವಿಶಿಷ್ಟ ಕಲ್ಪವಿಭಾಗ – ವರ್ಗೀಕರಣೋತ್ಸಾಹ ಬೇಸರವೆನಿಸುವುದೂ ಸಹಜ. ಆದರೆ ಇವೆಲ್ಲವನ್ನೂ ಮೀರಿಸುವಂತೆ ಕೆಲವೊಮ್ಮೆ ಆಧುನಿಕರ ಊಹಾಪೋಹ-ಗಳು, ಅವೈಜ್ಞಾನಿಕ ತರ್ಕಗಳು, ಸೌಂದರ್ಯಮೀಮಾಂಸಾಬಾಹ್ಯಚಿಂತನೆಗಳು, ಶುಷ್ಕಸಂವೇದನಗಳು ಜುಗುಪ್ಸೆ ತರುವುದುಂಟು. ಈ ಹಿನ್ನಲೆಯಲ್ಲಿ ಸೇಡಿಯಾಪು ಅವರ ಛಂದಶ್ಚಿಂತನದ ಮೌಲಿಕತೆ ಮತ್ತೂ ಮಹನೀಯವೆನಿಸುತ್ತದೆ.

೩

ಕಳೆದ ಶತಮಾನದ (ಇಪ್ಪತ್ತನೆಯ ಶತಾಬ್ದ) ನಡುವಿನ ಹೊತ್ತಿಗೆ ಕನ್ನಡದ ಛಂದೋಽಧ್ಯಯನದಲ್ಲಿ ಛಂದಸ್ಸೌಂದರ್ಯಮೀಮಾಂಸಾದೃಷ್ಟಿಯಿಂದ ಹಾಗೂ ಕೆಲವು ಮೂಲಭೂತ ಪರಿಕಲ್ಪನೆ – ಲಕ್ಷಣಗಳ ದೃಷ್ಟಿಯಿಂದ ಅದೆಷ್ಟೋ ಅಪಕಲ್ಪನೆಗಳು ಭದ್ರಪ್ರತಿಷ್ಠಿತವಾಗಿದ್ದುವು. ಅವುಗಳಲ್ಲಿ ಮುಖ್ಯವಾದುದನ್ನು ಹೀಗೆ ಪಟ್ಟಿ ಮಾಡಬಹುದು.

೧) ಇಂಗ್ಲಿಷ್ ಭಾಷೆಯ metrical rhythmಗೆ ಸಂವಾದಿಯಾದ ಭಾರತೀಯ ಪರಿಕಲ್ಪನೆ ಛಂದೋಲಯವೇ ಹೌದು.

೨) 'ಲಯ'ವೆಂದರೆ ಎಲ್ಲ ಬಗೆಯ ಪದ್ಯಬಂಧಗಳಲ್ಲಿ ಕಂಡುಬರುವ ನಡಿಗೆಯ ಸೊಗಸು.

೩) ವೃತ್ತಗಳಲ್ಲಿ ಗಣಾನುಸಾರಿಯಾಗಿ ಪದಗಳನ್ನಿಡುವ ಕಾರಣ ಅವುಗಳ ರಚನೆ ಯಾಂತ್ರಿಕ.

೪) ಕಂದ – ಷಟ್ಪದಿಗಳಂಥ ಮಾತ್ರಾಬಂಧಗಳಲ್ಲಿಯೂ ಏಕತಾನತೆ ಹೆಚ್ಚು. ಹೀಗಾಗಿಯೇ ರಗಳೆ–ಸರಳರಗಳೆ–ಚೌಪದಿಗಳಂಥ ಮಾತ್ರಾಬಂಧಗಳಲ್ಲಿ ಗಣಗಳ ಏಕತಾನತೆಯನ್ನು ಮುರಿಯಲು ಇಂಗ್ಲಿಷ್ ಛಂದಸ್ಸಿನಲ್ಲಿ ಮಾಡುವಂಥ ಗಣಪಲ್ಲಟಗಳನ್ನು ಮಾಡಬೇಕು.

೫) ವೈದಿಕಚ್ಛಂದಸ್ಸು ತ್ರೈಸ್ವರ್ಯದ ಆಧಾರದ ಮೇಲೆಯೂ ನಿಂತಿದೆ.

೬) ತ್ರಿಮೂರ್ತಿಗಣಚ್ಛಂದಸ್ಸು (ಅಂಶಚ್ಛಂದಸ್ಸು) ತುಂಬ ವೈವಿಧ್ಯವುಳ್ಳ ನಡಿಗೆಯಿಂದ ಕೂಡಿದೆ, ಇಲ್ಲಿಯ ಗಣಗಳ ಅಮಿತಸಂಖ್ಯೆಯ ವೈಕಲ್ಪಿಕತೆಯೇ ಈ ವೈವಿಧ್ಯಕ್ಕೆ ಕಾರಣ.

೭) ಯತಿಭಂಗವೇ ಅತಿಶಯಸೌಂದರ್ಯಕ್ಕೆ ಕಾರಣ. ಯತಿಭಂಗವೆಂದರೆ ಮಾತ್ರಾಚ್ಛಂದಸ್ಸುಗಳಲ್ಲಿ ಗಣಭಂಗವೇ ಹೌದು.

ಹೆಚ್ಚೇನು, ಇದೇ ರೀತಿ ಮುಂದುವರಿದ ಅಪಕಲ್ಪನೆಗಳ ಸರಮಾಲೆಯಲ್ಲಿ ಮೂಲಭೂತಪರಿಭಾಷೆಗಳಿಗೇ ಚ್ಯುತಿ ಬಂದಿತ್ತು; ಸಾಂಕರ್ಯವೊದಗಿತ್ತು. ಇಂಥ ಸಂದರ್ಭದಲ್ಲಿ ಸೇಡಿಯಾಪು ಅವರ 'ಛಂದೋಗತಿ' ಮತ್ತು 'ಕನ್ನಡ ಛಂದಸ್ಸು' ಗ್ರಂಥಗಳು (ಕ್ರಮವಾಗಿ ೧೯೮೫ ಮತ್ತು ೧೯೮೮ರಲ್ಲಿ ಪ್ರಕಟವಾದವು) ದಿಟವಾಗಿ ಪಥಪ್ರದರ್ಶಕ ಪ್ರದೀಪಿಕೆಗಳಾದವು; ಲಕ್ಷ್ಯಸಾಧನಸಂಪನ್ಮೂಲಗಳೂ ಆದವು. ಇದು ಸಕಲಾರ್ಥದಲ್ಲಿಯೂ ಕೇವಲ ಕನ್ನಡನುಡಿಯ ಛಂದಸ್ಸುಗಳ ಒಳ–ಹೊರಗನ್ನು ಅರಿತುಕೊಳ್ಳುವ ಸಫಲಯತ್ನವಾಗಿ ಪರಿಣಮಿಸದೆ ಸಮಸ್ತ ಭಾರತೀಯಚ್ಛಂದೋಹೃದಯವನ್ನೂ ತಿಳಿಯುವ ಮಹತ್ತರ ಪ್ರಕಲ್ಪವಾಗಿಯೂ ಪರ್ಯವಸಿಸಿದುದು ನಮ್ಮೆಲ್ಲರ ಸುಕೃತವೇ ಸೈ.

ಕನ್ನಡದಲ್ಲಿ (ಅಷ್ಟೇಕೆ, ಭಾರತವ್ಯಾಪ್ತಿಯಲ್ಲಿಯೂ ಸಹ) ಛಂದಸ್ಸುಗಳ ತೌಲನಿಕಚಿಂತನೆ, ಐತಿಹಾಸಿಕವಿಕಾಸ, ಛಂದೋಗ್ರಂಥಗಳ ಸಂಪಾದನ ಹಾಗೂ ಪಾಠಪರಿಷ್ಕರಣ, ವಿವಿಧಚ್ಛಂದಸ್ಸುಗಳ ವರ್ಣನಾತ್ಮಕ ಹಾಗೂ ಗಣಿತೀಯ ಪರಾಮರ್ಶೆಗಳಂಥ ಕೆಲಸಗಳು ಈ ವರೆಗೆ ಹೆಚ್ಚಾಗಿ ಸಾಗಿದ್ದುವೇ ಹೊರತು ತಾತ್ತ್ವಿಕವೂ ಸೌಂದರ್ಯಪ್ರಜ್ಞಾನುಪ್ರಾಣಿತವೂ ಆದ ಆಂತರಂಗಿಕಚ್ಛಂದೋಗತಿ – ಲಯಮೀಮಾಂಸೆಯು ಸಮರ್ಪಕವಾಗಿ ಬೆಳೆಯಲೇ ಇಲ್ಲ. ಷಟ್ಪದಿಗಳಂಥ ಹಾಡುಗಬ್ಬಗಳ ತಾಳಾತ್ಮಕತೆಯ ಬಗೆಗೆ ಕಡಬದ ನಂಜುಂಡ ಶಾಸ್ತ್ರಿಗಳು ಬರೆದ ಲೇಖನ ಹಾಗೂ ಕನ್ನಡ ಕೈಪಿಡಿಯಲ್ಲಿ ಬಂದ ಬಿ. ಎಂ. ಶ್ರೀ. ಯವರ ಸುದೀರ್ಘರಚನೆಗಳಷ್ಟೇ ಪ್ರಾಯಶಃ ಕನ್ನಡದಲ್ಲಿ ಛಂದಸ್ಸಿನ ಬಗೆಗೆ ಹೊಸ ಕೆಲಸಗಳೆಂಬಂಥ ಪರಿಸ್ಥಿತಿಯಿದ್ದಾಗ ೧೯೩೭ರಲ್ಲಿ ಸೇಡಿಯಾಪು ಅವರ 'ಕನ್ನಡ

ಛಂದಸ್ಸು' ಎಂಬ ಸುದೀರ್ಘನಿಬಂಧವು ಉದಿಸಿತಾದರೂ ಮುಂದೆ ೧೯೮೫ರಲ್ಲಿ 'ಛಂದೋಗತಿ' ಹಾಗೂ ೧೯೮೮ರಲ್ಲಿ ಕನ್ನಡ ಛಂದಸ್ಸಿನದೇ ಪರಿವರ್ಧಿತ ಪರಿಷ್ಕೃತಮುದ್ರಣಗಳೂ ಹೊಮ್ಮುವ ವೇಳೆಯಲ್ಲಿ ಸಹ ಅನವದ್ಯವಾದ ರೀತಿಯಲ್ಲಿ ಛಂದೋಮೀಮಾಂಸೆಯ ಬಗೆಗೆ ಪ್ರಶಂಸನೀಯವೂ ಶಾಸ್ತ್ರನಿಷ್ಕೃಷ್ಟವೂ ಆದ ಮೌಲಿಕಯತ್ನಗಳಾವುವೂ ನಡೆದಿರಲಿಲ್ಲವೆಂದರೆ ವಿ.ಸೀ., ತೀ.ನಂ.ಶ್ರೀ., ಡಿ. ಎಸ್. ಕರ್ಕಿ, ಟಿ. ವಿ. ವೆಂಕಟಾಚಲಶಾಸ್ತ್ರೀ, ಡಿ.ಎಲ್.ಎನ್., ಭೀಮಸೇನ ರಾವ್ ಚಿಟಗುಪ್ಪಿ, ಕೆ. ಶಿವರಾಮ ಐತಾಳ, ಕುಕ್ಕಿಲ ಕೃಷ್ಣ ಭಟ್ಟ, ಎಂ. ಚಿದಾನಂದಮೂರ್ತಿ ಮುಂತಾದವರನ್ನೆಲ್ಲ ಅವಗಣಿಸಿದಂತೆ ಅಲ್ಲ. ಏಕೆಂದರೆ ಇವರಲ್ಲಿ ಯಾರಿಗೂ ಸಹ ಲಯ ಹಾಗೂ ಗತಿಗಳ ನಡುವಣ ವ್ಯತ್ಯಾಸ, ಸತಾನ – ವಿತಾನ ವೃತ್ತಗಳ ರಹಸ್ಯ, ಯತಿಯ ದಿಟವಾದ ಸ್ವರೂಪ, ವೈದಿಕ – ಲೌಕಿಕ ಅಕ್ಷರವೃತ್ತಗಳ ವೈಸಾದೃಶ್ಯ, ತ್ರಿಮೂರ್ತಿಚ್ಛಂದೋಗಣಗಳ ಶ್ರಾವಣ–ಚಾಕ್ಷುಷರೂಪಭಿನ್ನತೆ ಮುಂತಾದ ಯಾವ ಮೂಲಭೂತತತ್ತ್ವಗಳ ಬಗೆಗೂ ನಿಸ್ಸಂದಿಗ್ಧವಾದ ಹೊಳಹು ಬಂದಿರಲಿಲ್ಲವೆಂಬುದು ಅಪ್ರತಿಹತವಾಗಿಯೇ ನಿಲ್ಲುತ್ತದೆ. ದಿಟವೇ, ಛಂದೋ-ವಿದ್ಯೆಯಲ್ಲಿ ಬರಿಯ ಗತಿಮೀಮಾಂಸೆಯೊಂದೇ ಇಲ್ಲವೆಂಬುದೇನೋ ಹೌದು. ಆದರೆ ಈ ವಲಯದಲ್ಲಿ ಸೇಡಿಯಾಪು ಅವರದೇ ಅದ್ವಿತೀಯ ಸ್ಥಾನ. ಅಂತೆಯೇ ಕಾವ್ಯಶಾಸ್ತ್ರದಲ್ಲಿ ರಸ–ಧ್ವನಿ–ಔಚಿತ್ಯ–ವಕ್ರೋಕ್ತಿಗಳ ಮೀಮಾಂಸಾಪ್ರಸ್ಥಾನಕ್ಕೆ ಅದೆಂತು ಸಮುನ್ನತಸ್ಥಾನವೋ ಛಂದಶ್ಶಾಸ್ತ್ರದಲ್ಲಿ ಕೂಡ ಛಂದೋಗತಿವಿವೇಕವೇ ಅತ್ಯುಚ್ಚ-ವೆಂಬುದನ್ನು ಮರೆಯಬಾರದು.

ಇದೀಗ ಇಂಥ ಮನಸ್ಸಿದ್ಧತೆಯೊಡನೆ ಸೇಡಿಯಾಪು ಅವರ ಛಂದೋವೈಷಯಿಕ ವೈದುಷ್ಯವನ್ನು ನೋಡೋಣ.

೪

'ಛಂದೋಗತಿ'ಯು ಅದರ ಲೇಖಕರೇ ಹೇಳುವಂತೆ ಛಂದಸ್ತತ್ತ್ವಗಳ ಹಾಗೂ ಗತಿಭೇದಗಳ ವಿವೇಚನೆ ಮತ್ತು ವಿವೃತಿ.

'ಕನ್ನಡ ಛಂದಸ್ಸು' ಅಂತೆಯೇ ಕನ್ನಡದ ಆದಿಕಾಲದ ಛಂದೋಬಂಧಗಳ ಸಮಗ್ರಮೀಮಾಂಸೆ.

ಈ ಎರಡು ಗ್ರಂಥಗಳ ಮೂಲಕ ಸೇಡಿಯಾಪು ಅವರು ಕ್ರಮವಾಗಿ ಅಕ್ಷರ (ವೈದಿಕ ಮತ್ತು ಲೌಕಿಕ), ಮಾತ್ರಾ ಹಾಗೂ ಕರ್ಷಣಾತ್ಮಕಗಣ ಸಂವಿ-ಧಾನವುಳ್ಳ, ಬಹುಮಟ್ಟಿನ ಭಾರತೀಯಭಾಷಾಸಾಹಿತ್ಯಗಳಲ್ಲೆಲ್ಲ ಹಾಸುಹೊಕ್ಕಾಗಿ-ರುವ ಛಂದೋಬಂಧಗಳ ವಾಸ್ತವವನ್ನೂ ರೂಪ–ರಚನೆಗಳನ್ನೂ ಅಂದ-ಚೆಂದಗಳನ್ನೂ ನಡಿಗೆ–ಬೆಡಗುಗಳನ್ನೂ ಕುಂದು–ಕೊರತೆಗಳನ್ನೂ, ವಿಕಾಸ-ವಿನ್ಯಾಸಗಳನ್ನೂ ನೆಲೆ–ಬೆಲೆಗಳನ್ನೂ ಪ್ರಾಯಶಃ ಪ್ರಶ್ನಾತೀತವಾಗಿ ಸ್ಥಾಪಿಸಿದ್ದಾರೆ. ಯಾವುದೇ ಭಾಷಾಛಂದಸ್ಸಿನ ರೂಪವಾಗಲಿ ಈ ಮೂರು ಬಗೆಗಿಂತ

ಭಿನ್ನವಾಗಿರದೆಂದೂ ವಿಶೇಷತಃ ಭಾರತೀಯಚ್ಛಂದಸ್ಸುಗಳಲ್ಲಿ ಮಾತ್ರ ಈ ಮೂರು ಬಗೆಗಳು ಪರಿನಿಷ್ಠಿತವಾಗಿವೆಯೆಂದೂ (ವಿಶೇಷತಃ ವಿತಾನವರ್ಣವೃತ್ತಗಳು) ಈ ಮೂಲಕ ಸೇಡಿಯಾಪು ಧ್ವನಿಸಿದ್ದಾರೆ. ಆದುದರಿಂದ ಅವರ ಸ್ಥಾನವು ಎಚ್. ಡಿ. ವೇಲಣಕರರಿಗಿಂತಲೂ ಒಂದು ಕೈ ಮಿಗಿಲೆನ್ನಬೇಕು.

ಮೊದಲಿಗೆ 'ಛಂದೋಗತಿ'ಯಲ್ಲಿರುವ ಮಹತ್ತ್ವಗಳನ್ನು ಪರಿಭಾವಿಸೋಣ.

ಆದಿಯಲ್ಲಿಯೇ 'ಲಯ' ಶಬ್ದದ ಅಸಮರ್ಪಕವಿನಿಯೋಗವನ್ನು ಪರಾಮರ್ಶಿಸಿ ಲಯವೆಂದರೆ ಕಾಲಖಂಡಗಳ ಸಮತ್ವ, ನಿಯತಧ್ವನಿಖಂಡಗಳ ಮುಗಿತಾಯ, ಧ್ವನಿಪುಂಜಗಳ ಕಾಲಸಮತ್ವ, ಕ್ರಿಯಾಕಾಲಗಳ ಪರಸ್ಪರ ಸಮತೆ ಅರ್ಥಾತ್ ಐಕ್ಯವೆನ್ನಲಾಗಿದೆ. ಇದೇ ತಾಳದ ಆಧಾರವೆಂದು ತಿಳಿಸಿ ಸಂಗೀತ ಲಯ ಮತ್ತು ಛಂದೋಲಯಗಳ ಸಾಮ್ಯವೈಷಮ್ಯಗಳನ್ನೂ ಮಾತ್ರಾಮಾನದ ಆಧಾರದ ಮೇಲೆ ವಿವರಿಸಲಾಗಿದೆ. ಇದಿಷ್ಟನ್ನು ಸಾಧಿಸಲು ಸೇಡಿಯಾಪು ಕಲೆಹಾಕಿರುವ ಯುಕ್ತಿ – ಆಧಾರಗಳು ಅದ್ಭುತವಾಗಿವೆ.

ವೃತ್ತ ಮತ್ತು ಜಾತಿ(ಅಕ್ಷರವೃತ್ತ – ಮಾತ್ರಾಜಾತಿ)ಗಳ ನಡುವಣ ಭೇದವನ್ನು ಅವುಗಳ ಕ್ರಮವಾದ ಸರ್ವದೇಶಸ್ಥಿರತೆ ಮತ್ತು ಏಕದೇಶಸ್ಥಿರತೆಗಳ ಮೂಲಕ ಸ್ಪಷ್ಟೀಕರಿಸಿ ಉಪಜಾತಿ, ಅಕ್ಷರಜಾತಿಗಳಂಥ ಹಳೆಯ ಸಂಜ್ಞೆಯ, ಹೊಸ ಸಂಜ್ಞೆಯ ಔಚಿತ್ಯವನ್ನು ಮನಗಾಣಿಸಿರುವ ಪರಿಯಂತೂ ಅನನ್ಯ.

Rhythm ಶಬ್ದಕ್ಕೆ 'ಲಯ'ವೆಂಬ ಸಂಜ್ಞೆಯು ಅನುಚಿತವೆಂದು ಸಾಬೀತು ಮಾಡಿತೋರುವ ಹಂತದಲ್ಲಿ ಸೇಡಿಯಾಪು 'ರಿಧಮ್' ಶಬ್ದದ ಸಕಲಾರ್ಥವನ್ನೂ ಜಾಲಾಡಿದ್ದಾರೆ. ಇದರ ಯೋಗ – ರೂಢಿ – ಲಕ್ಷ್ಯಾರ್ಥಗಳ ಎಳೆಗಳನ್ನೆಲ್ಲ ಮೀಟಿ 'ಲಯ'ವೆಂಬ ಅವ್ಯಾಪ್ತಿದೋಷವಿರುವ ಸಂಜ್ಞೆಗಿಂತಲೂ 'ಗತಿ'ಯೆಂಬ ಸರ್ವಗ್ರಾಸಿಸಂಜ್ಞೆಯೇ ಶ್ರೇಷ್ಠವೆಂಬ ನಿರ್ಣಯಕ್ಕೆ ಬಂದಿರುವ ಹದವಂತೂ ತರ್ಕ ಯುಕ್ತಿಗಳ ಆಡುಂಬೊಲವಾಗಿದೆ; ಆಕರಮಾಹಿತಿಗಳ ಆರಾಮವೂ ಆಗಿದೆ. ಲಯವು ಕೇವಲ ಸತಾನವಾಗುವ ಕಾರಣ ವಿತಾನಬಂಧಗಳಿಗೂ Rhythmನಲ್ಲಿ ಎಡೆಯೊದಗಿಸಲು ಗತಿ, ಧಾಟಿ ಎಂಬಂಥ ಪದಗಳೇ ಅವಶ್ಯವೆಂಬ ಸೇಡಿಯಾಪು ಅವರ ನಿಲುವು ಕನ್ನಡದ (ಕೆಲಮಟ್ಟಿಗೆ ಇನ್ನಿತರ ಭಾಷೆಗಳ) ಅತಿಮುಖ್ಯ ಛಂದೋದುರ್ಗ್ರಹಣದ ನಿರಾಸಕ್ಕೆ ನಾಂದಿಯಾಗಿದೆ.

ಮುಂದೆ ಛಂದಶ್ಶಬ್ದದ ನಿರ್ವಚನವನ್ನು ಮಾಡಿ, ಸಾಂಪ್ರದಾಯಿಕ ವಿಧಿ-ಯಿಂದಲೇ ಗತಿಸುಭಗತಾನಿರಪೇಕ್ಷವಾದ ಸಮಸ್ತಗುರುಲಘುವಿನ್ಯಾಸವೂ ಛಂದಸ್ಸೇ ಆದರೂ ಇದು ಅನಿಬದ್ಧವೆಂದೂ ಅಂತೆಯೇ ಗದ್ಯವೆಂದೂ ಗುರುತಿಸಲ್ಪಟ್ಟಿದೆ. ಅಂತೆಯೇ ಅನಾಕರ್ಷಕಗತ್ಯೈಕ್ಯವಿದ್ದರೂ ಛಂದಸ್ಸೆಂಬ ಪೆಂಪು ಬಾರದ ಕಾರಣ ಆಕರ್ಷಕ ಗತಿಸೌಂದರ್ಯ ಸಮೈಕ್ಯವಿರುವ ಗುರುಲಘುವಿನ್ಯಾಸವೇ ಛಂದಸ್ಸೆಂಬ ನಿಷ್ಕೃಷ್ಟಲಕ್ಷಣದ ಸ್ಥಾಪನೆಯಾಗಿದೆ.

ಸಂಗೀತರತ್ನಾಕರದ ಆಧಾರದ ಮೇಲೆ ಗತಿಭೇದಗಳ ಸುಂದರನಿರೂಪಣೆ ಇಲ್ಲಿ ನಡೆದಿದೆ. ಗತಿಭೇದಾದಿಗಳನ್ನು ಈ ಮುನ್ನವೇ ಇತರ ಸಂಶೋಧಕರೆಲ್ಲ ಹೇಳಿದ್ದರೂ ಅವುಗಳಿಗೆಲ್ಲ ಶಾಸ್ತ್ರೀಯಸ್ಪಷ್ಟತೆ, ನಿರ್ದಿಷ್ಟತೆ- ನಿರ್ದುಷ್ಟತೆಗಳು ದಕ್ಕಿರುವುದು ಇಲ್ಲಿಯೇ. ದ್ರುತ, ವಿಲಂಬಿತ, ಮಧ್ಯ, ದ್ರುತಮಧ್ಯ, ದ್ರುತವಿಲಂಬಿತ, ಮಧ್ಯವಿಲಂಬಿತ ಮುಂತಾದ ಗತಿಗಳನ್ನು ತೋರಿಸಿ ತನ್ಮೂಲಕವೇ ಅಕ್ಷರ ವೃತ್ತಗಳಲ್ಲಿರುವ ಸತಾನ ಮತ್ತು ವಿತಾನಗಳೆಂಬ ಎರಡು ಮೂಲಭೂತ ಭೇದಗಳತ್ತ ಬೆರಳು ತೋರಲಾಗಿದೆ. ಇದು ಅಭೂತಪೂರ್ವ ನಿರ್ದೇಶನ. ಇವನ್ನು ಲಯಸಹಿತ ಮತ್ತು ಲಯರಹಿತಗಳೆಂದೂ ಸ್ಪಷ್ಟೀಕರಿಸಲಾಗಿದೆ. ಅಂತೆಯೇ ಸತಾನವೃತ್ತಗಳ ಮಾತ್ರಾಸಮತೆಯನ್ನೂ ಎತ್ತಿತೋರಲಾಗಿದೆ. ಇದು ಪೂರ್ವಸೂರಿವಿದಿತವಾರ್ತೆಯೇ ಆಗಿದ್ದರೂ ಇಲ್ಲಿ ಬಂದಂಥ ನಿಷ್ಕರ್ಷೆ - ಲಕ್ಷಣಗಳು ಹಿಂದಿನವರ ಹೇಳಿಕೆಗಳಲ್ಲಿ ಪರಿಷ್ಕೃತವಾಗಿಲ್ಲವೆಂಬುದು ಸ್ಮರಣೀಯ. ಅನಂತರ ಪಿಂಗಳನ ಮೂರು ಸೂತ್ರಗಳ ಆಧಾರದಿಂದ (ಗ್ಲಿತಿ ಸಮಾನೀ, ಲ್ಗಿತಿ ಪ್ರಮಾಣೀ, ವಿತಾನಮನ್ಯತ್) ಈ ಎಲ್ಲಕ್ಕೂ ಶಾಸ್ತ್ರಾಧಾರವನ್ನು ಒದಗಿಸಿರುವುದು ದಿಟವಾಗಿ ಸೇಡಿಯಾಪು ಅವರ ಧೀಶಕ್ತಿಗೆ ದೀಪಸಾಕ್ಷಿ. ಇದರ ಮೂಲಕವೇ ದಂಡಕಗತಿವೈವಿಧ್ಯನಿರ್ವಚನಕ್ಕೂ ಸೇಡಿಯಾಪು ದಾಪಿಟ್ಟಿದ್ದಾರೆ. ಇದರ ತರ್ಕವೂ ಕ್ಷೋದಕ್ಷಮವೇ. ಇಲ್ಲೆಲ್ಲ ಪ್ರಾಚೀನರ ಗತಿಮೀಮಾಂಸಾವೈವಿಧ್ಯವೇ ಎದ್ದು ಕಾಣುವುದೆಂಬ ಸೇಡಿಯಾಪು ಅವರ ಒಳನೋಟ ದಿಟವಾಗಿ ಪರಿಣಾಮ ರಮಣೀಯ. ಜೊತೆಗೆ ಯತಿಸ್ಥಾನಪಲ್ಲಟದಿಂದಾಗಿ ಗತಿವೈವಿಧ್ಯವು ಹೇಗೆ ಉಂಟಾಗುವುದೆಂಬುದರ ಚಿಂತನೆ ಆವರೆಗೆ ಯಾರೂ ನಡೆಸಿರದ ಕೇವಲ ಪರಂಪರಾಗೃಹೀತತತ್ತ್ವವಾಗಿತ್ತು. ಇದನ್ನು ತರ್ಕಸಹವಾಗಿ ಉನ್ಮೀಲಿಸಿದವರು ಸೇಡಿಯಾಪು. ಅಕ್ಷರಸಂಖ್ಯೆ, ಮಾತ್ರಾಸಮತ್ವಾದಿಗಳನ್ನೆಲ್ಲ ಗತಿವೈವಿಧ್ಯಮೂಲಾ-ಕರ್ಷಣೆಯೇ ನಿಯಂತ್ರಿಸಿ ಛಂದಸ್ಸೌಂದರ್ಯದ ಆದಿತತ್ತ್ವವಾಗಿದೆಯೆಂಬ ಇವರ ಕಾಣ್ಕೆ ಅದ್ಭುತ.

ಬಳಿಕ ವಿತಾಲಪಠನದ ಅರ್ಥವೈಶದ್ಯ, ಭಾವಗಾಂಭೀರ್ಯಗಳನ್ನೂ ಸತಾಲಪಠನದ ನರ್ತನೌತ್ಸುಕ್ಯವನ್ನೂ ನಿರ್ದೇಶಿಸಿ ಅರ್ಥವೈಶದ್ಯಕ್ಕಾಗಿಯೇ ಸತಾನಷಟ್ಪದೀತ್ಯಾದಿಗಳು ಗಮಕವಾಚನಕಾಲದಲ್ಲಿ ವಿತಾಲವಾಗಿ ಪಠಿತವಾಗು-ವುದರ ರಹಸ್ಯವನ್ನೂ ಸೇಡಿಯಾಪು ಗಮನಿಸಿದ್ದಾರೆ. ಅಂತೆಯೇ ವಸ್ತುಕ ಕಾವ್ಯಗಳಲ್ಲಿ ಸತಾಲಬಂಧಗಳೆನಿಸಿದ ವೃತ್ತಗಳ ಬಳಕೆಯ ನಿರಸನ ಮತ್ತು ಸ್ತುತಿ-ಭಕ್ತಿಗಳಲ್ಲಿ ಮಾತ್ರ ಅಂಥವುಗಳ ಅಧಿಕವಿನಿಯೋಗದ ಬಗೆಗೂ ಆಲಂಕಾರಿಕರು ಹೇಳಿದ ಆನುಷಂಗಿಕಾಂಶಗಳ ಬಗೆಗೆ ಸುನಿಶಿತಪರಾಮರ್ಶೆ ನಡೆಸಿದ್ದಾರೆ. ಜೊತೆಗೆ ವೃತ್ತನಾಮನಿರ್ದೇಶನದಲ್ಲಿರುವ ಗತಿಸೌಂದರ್ಯತತ್ತ್ವದ ಅಭಿಜ್ಞಾನವನ್ನೂ ಮರೆಯದೆ ಪ್ರಸ್ತಾವಿಸಿದ್ದಾರೆ. ಇದಕ್ಕೇ ದ್ರುತವಿಲಂಬಿತ, ತನುಮಧ್ಯಾ, ಮಂದಾ-ಕ್ರಾಂತಾ, ಭುಜಂಗಪ್ರಯಾತ, ಅಶ್ವಧಾಟೀ ಮುಂತಾದ ವೃತ್ತಗಳ ವಿಮರ್ಶೆ

ಬಂದಿದೆ. ಇಂಥ ಹೊಳಹುಗಳು ಇತರ ಸಂಶೋಧಕರ ಬರೆಹಗಳಲ್ಲಿಯೂ ಅಲ್ಲಲ್ಲಿ ಉಂಟು. ಆದರೆ ಅವುಗಳಿಗೆ ಸೇಡಿಯಾಪು ಅವರ ಸುನಿಶಿತತರ್ಕಪ್ರತಿಷ್ಠಿತ ಶಾಸ್ತ್ರಾಧಾರವಿಲ್ಲದಿರುವುದೂ ಸುವ್ಯವಸ್ಥಿತನಿರೂಪಣೆ ಬಾರದಿರುವುದೂ ಅರಕೆ-ಗಳಾಗಿವೆ.

ಮುಂದೆ ಗತಿಯನ್ನು ಅಕ್ಷರ-ಮಾತ್ರಾಚ್ಛಂದೋವಿಧಗಳಿಗೆ ಅನುಸಾರವಾಗಿ ಯುಕ್ತಿಯುಕ್ತವಾಗಿ ವಿಂಗಡಿಸಿ ಅಕ್ಷರಗತಿ ಮತ್ತು ಆವರ್ತಗತಿಗಳೆಂಬ ಎರಡು ಪ್ರಧಾನವರ್ಗಗಳಲ್ಲಿ ನೆಲೆಗೊಳಿಸಿರುವುದು ಅತ್ಯಂತ ಸ್ವೋಪಜ್ಞವಾಗಿದೆ. ಆವರ್ತಗತಿಗಳಲ್ಲಿ ಮೂರು-ನಾಲ್ಕು-ಐದು ಮಾತ್ರಾಗಣಗಳ ದ್ರುತ-ಮಧ್ಯ-ವಿಲಂಬಿತ ಭೇದಗಳನ್ನು ತೋರಿದ ಬಳಿಕ ಮಿಶ್ರಗತಿಯಾಗಿ ಕೇವಲ ಮೂರು ಮತ್ತು ನಾಲ್ಕು ಮಾತ್ರೆಗಳ ಭಾಮಿನೀಲಯವೊಂದಲ್ಲದೆ ಮತ್ತಾವುದೂ ಬರಲು ಸಾಧ್ಯವಿಲ್ಲ; ೩+೫ ಅಥವಾ ೫+೩ ಮಾತ್ರಾ ಗಣಗಳಾಗಲೀ ೨+೪ ಅಥವಾ ೪+೨ ಮಾತ್ರಾಗಣಗಳಾಗಲೀ ಅಷ್ಟಮಾತ್ರಾ - ಷಣ್ಮಾತ್ರಾಮಿಶ್ರಗಣಗಳಾಗುವುದಿಲ್ಲ; ಇವೇನಿದ್ದರೂ ಕ್ರಮವಾಗಿ ಸಂತುಲಿತಮಧ್ಯಾವರ್ತ ಮತ್ತು ಸಂತುಲಿತದ್ರುತಾ-ವರ್ತಗತಿಗಳ ಅನುಲೋಮ-ವಿಲೋಮಗಣಗಳಾಗುತ್ತವೆಂಬ ಸತ್ಯವನ್ನು ಮೊತ್ತ ಮೊದಲು ಸಾರಿದವರು ಸೇಡಿಯಾಪು. ಈ ಮುನ್ನ ತೀನಂಶ್ರೀ ಮುಂತಾದವರು ಕನ್ನಡದ ಮಾತ್ರಾಛಂದಸ್ಸಿನ ಮೂಲಲಯಗಳು ಆರು ಎಂದಿದ್ದನ್ನು ಈ ಮೂಲಕ ಸೇಡಿಯಾಪು ಅವು ನಾಲ್ಕೇ ಹೊರತು ಆರಲ್ಲ, ಸಂತುಲಿತಗತಿಗಳಿಗೆ ಸ್ವತಂತ್ರತಾಸಿದ್ಧಿಯಿಲ್ಲದ ಕಾರಣವೇ ಅವು ೫+೩ ಅಥವಾ ೩+೫ ಇಲ್ಲವೇ ೪+೪ ಎಂಬ ಮಧ್ಯಾವರ್ತಕ್ಕೂ, ೪+೨ ಅಥವಾ ೨+೪ ಇಲ್ಲವೇ ೩+೩ ಎಂಬ ದ್ರುತಾವರ್ತಕ್ಕೂ ಗಣವಿಪರ್ಯಯದ ಮೂಲಕ ಜಾರಿದಾಗಲೂ ಛಂದೋಗತಿ-ಯಲ್ಲಿ ಶ್ರುತಿಕಟುತ್ವವನ್ನು ತಾಳದೆ ಲಯಚ್ಯುತವೂ ಆಗದೆ ಉಳಿಯುತ್ತವೆಂದು ಸಾಧಿಸಿ ತೋರಿರುವುದು ವಿಶೇಷವಾಗಿ ಉಲ್ಲೇಖಾರ್ಹ. ಇದಕ್ಕೆ ಅವರು ರಥೋದ್ಧತಾ, ಸ್ವಾಗತ, ಮಂದಾನಿಲರಗಳೆ, ಮಟ್ಟರಗಳೆ, ಮುಂತಾದುವುಗಳ ಸಾಕ್ಷ್ಯವನ್ನು ನೀಡಿರುವುದೂ ಯಥೋಚಿತವಾಗಿದೆ. ಜೊತೆಗೆ ಸಂತುಲಿತಗತಿ-ಗಳಾಗಿ ದ್ರುತ ಹಾಗೂ ಮಧ್ಯಗತಿಗಳು ತಮ್ಮ ನಿಯತ ತ್ರಿಮಾತ್ರಾ - ಚತು-ರ್ಮಾತ್ರಾಲಯಗಳನ್ನು ಕಿಂಚಿತ್ತಲ್ಲಟಿಸಿಕೊಳ್ಳಬೇಕಾದರೆ ಅವು ತಮ್ಮ ಗಣವ್ಯವಸ್ಥೆ-ಯಲ್ಲಿ ಗುರುವನ್ನೊಂದನ್ನು ಕೀಲಕಸ್ಥಾನಲ್ಲಿ ಉಳಿಸಿಕೊಳ್ಳಬೇಕಾಗುತ್ತದೆ. (ಸಂತುಲಿತದ್ರುತಾವರ್ತಗತಿಯಲ್ಲಿ ಮೂರು - ನಾಲ್ಕನೆಯ ಮಾತ್ರೆಗಳು ಸೇರಿ ಒಂದು ಗುರುವಾಗಬೇಕು. ಸಂತುಲಿತ ಮಧ್ಯಾವರ್ತಿಗತಿಯಲ್ಲಿ ನಾಲ್ಕು-ಐದನೆಯ ಮಾತ್ರೆಗಳು ಸೇರಿ ಒಂದು ಗುರುವಾಗಬೇಕು). ಹೀಗಲ್ಲವಾದರೆ ೨+೪ ಅಥವಾ ೪+೨ ಇಲ್ಲವೇ ೩+೫ ಅಥವಾ ೫+೩ ಮಾತ್ರೆಗಳ ಲಯವಿಲಾಸವೇ ಉನ್ಮೀಲಿಸುವುದಿಲ್ಲವೆಂಬ ಅದ್ಭುತಸಂಶೋಧನೆಯನ್ನು ಇದಂಪ್ರಥಮವಾಗಿ ಅನ-ವದ್ಯವಿಧಾನದಿಂದ ಸೇಡಿಯಾಪು ಹೊರತೆಗೆದಿದ್ದಾರೆ. ಆದುದರಿಂದಲೇ ಈ ಎಲ್ಲ

ಚಿಂತನೆಗಳ ಫಲವಾಗಿ ಷಟ್ಪದಿಗಳು ಏಕೆ ಆರೇ ಆರು ಎಂಬ ಬಹುಚರ್ಚಿತ ಪ್ರಶ್ನೆಗೂ ಆನುಷಂಗಿಕವಾಗಿ ಸಮರ್ಪಕವಾದ ಉತ್ತರ ದೊರೆತಿದೆ; ಮೂಲ ಮಾತ್ರಾಲಯಗಳ ನಾಲ್ಕೇ ಬಗೆಗಳ ಕಾರಣದಿಂದಾಗಿಯೇ ಉದ್ಗತಾ, ಸ್ವಾಗತ, ರಥೋದ್ಧತಾ, ಪೃಥ್ವೀ ಮುಂತಾದ ಛಂದೋರಹಸ್ಯಗಳೂ (ವಿಶೇಷತಃ 'ವಿಷಮ-ವೃತ್ತ'ವೆನಿಸಿದ ಉದ್ಗತೆಯ 'ಸಮತೆ'ಯೂ) ಸೊಗಸಾಗಿ ತೆರೆದುಕೊಂಡಿದೆ. ತನ್ಮೂಲಕ ಅಕ್ಷರವೃತ್ತ ಹಾಗೂ ಮಾತ್ರಾಜಾತಿಗಳ ನಂಟು – ಗಂಟುಗಳ ಪರಿಯೂ ಪ್ರಸ್ಫುಟವಾಗಿದೆ. ಇದೆಲ್ಲ ಸೇಡಿಯಾಪು ಅವರ ಉಪಜ್ಞೆಯೇ.

ಆ ಬಳಿಕ ಮಾತ್ರಾಛಂದಃಪ್ರಕಾರಗಳಲ್ಲಿಯೇ ಅನಿತರಸಾಧಾರಣವಾದ ಕಂದಪದ್ಯದ ಗತಿರಹಸ್ಯವಿವೃತಿಯಿದೆ. ಇದರ ಏಕದೇಶಸ್ಥಿರತೆಗೆ ಮತ್ತಷ್ಟು ಬಿಗಿ ತಂದ ಯತಿನಿಯಮ, ಯುಕ್ಪಾದಾಂತಗುರುತ್ವನಿಯಮ, ಜಗಣದ ಆಗಮನಾ-ನಾಗಮನನಿರ್ಬಂಧಾದಿಗಳು, ಚತುರ್ಮಾತ್ರಾಗಣಘಟಕಗಳ ಸೀಮಿತವಿನ್ಯಾಸಗಳು (– –,∪∪–,∪∪∪∪,–∪∪) ಮುಂತಾದುವುಗಳಿಂದ ಬಂದೊದಗಿದ ಬನಿ – ಹದಬೆಡಗುಗಳ ಮೂಲಕ ಉಂಟಾಗಿರುವ ಮೂಲಭೂತ ಚತುರ್ಮಾತ್ರಾಗಣ-ಗತಿಯೊಡವರಿದ ಸಂತುಲಿತದ್ರುತಾವರ್ತಗತಿಚಮತ್ಕಾರಾದಿಗಳನ್ನು ನಿರುಪಮವಾಗಿ ಸೇಡಿಯಾಪು ಇದಂಪ್ರಥಮವಾಗಿ ನಿರೂಪಿಸಿದ್ದಾರೆ, ಇಂಥ ಲಯಸೌಂದರ್ಯವೇ ಕಂದದ ವಿಶೇಷತೆಯಾಗಿರುವ ಕಾರಣ ಇದು ಕವಿಗಳೆಲ್ಲರ ಕಲ್ಪಕಂದವಾಯಿತೆಂಬ ತಥ್ಯವೂ ತನ್ಮೂಲಕ ಸ್ಫುರಿಸಿದೆ.

ಅನಂತರ ಯತಿತತ್ತ್ವಮೀಮಾಂಸೆಯಂತೂ ಅತ್ಯುನ್ನತ ಮೇಧಾಫಲವಾಗಿ ಉದಿಸಿದೆ. ಭಾಷಾಪದಗತಿ, ಛಂದಃಪದಗತಿಗಳೆರಡೂ ಸೇರಿ ಪದ್ಯಗತಿಯು ರೂಢಿಸುತ್ತದೆ; ಇವೆರಡರ ಸಾಮರಸ್ಯ – ಗತಿಸುಭಗತೆಗಳಲ್ಲಿಯೇ ಯತಿಸಿದ್ಧಿ-ಯಿದೆಯೆಂಬ ಹೊಸ ಕಾಣ್ಕೆ ಸೇಡಿಯಾಪು ಅವರದಾಗಿದೆ. ಇಲ್ಲಿಯ ಪರಿಭಾಷೆಗಳೆಲ್ಲ ಅವರ ಧಿಷಣಾಫಲಗಳೇ. ಶಿಕ್ಷಾಶಾಸ್ತ್ರದ ಹಿನ್ನೆಲೆಯಲ್ಲಿ ಪದಗಳ ಮೊದಲಿನ ವರ್ಣೋಚ್ಚಾರಸ್ಫುಟತ್ವ ಹಾಗೂ ಸಾಮಾನ್ಯೋಚ್ಚಾರಾದಿಗಳ ಬಗೆಗೆ ಬೆಳಕು ಚೆಲ್ಲುವ ಸೇಡಿಯಾಪು ಛಂದಃಪದಗತಿಗೆ ಪ್ರತಿಶತ ನೂರರಷ್ಟು ಸಂವಾದಿ-ಯಾದ ಭಾಷಾಪದಗತಿಯಿಂದ ಹೊಮ್ಮುವ ಪದ್ಯಗತಿಯು ಅತ್ಯಂತ ಯಾಂತ್ರಿಕ – ಏಕತಾನತೆಯ ನೀರಸರಾಶಿಯಾಗುವುದೆಂದು ಹೇಳಿ ಇಂಥ ಗಡಚ್ಚಿಕ್ಕುವ ಏಕಲಯವೈರಸ್ಯವು ಪಾಶ್ಚಾತ್ಯಸಾಹಿತ್ಯದಲ್ಲಿ ಹೆಚ್ಚೆಂದೂ ಆದ ಕಾರಣದಿಂದಲೇ (ಅಂದರೆ ಈ ಏಕತಾನತೆಯ ನಿವಾರಣೆಗಾಗಿಯೇ) ಅಲ್ಲಿ ಭಿನ್ನಗಣಗಳನ್ನು ಆಗಾಗ – ವೈವಿಧ್ಯಕ್ಕಾಗಿ – ನಿರ್ದಿಷ್ಟಚ್ಛಂದೋಬಂಧದಲ್ಲಿ ವಿಜಾತೀಯವಾಗಿ ತರುವರೆಂದೂ [ಉದಾ:– ಐಯಾಂಬಿಕ್ ಗಣಪ್ರಚುರ – ಪಾದವೆನಿಸಿದ ಲಗಂ ಲಗಂ ಲಗಂ. . . ವಿನ್ಯಾಸದಲ್ಲಿ ಸ್ಪಾಂಡೆಯನ್ನು (ಗಂಗಂ) ತರುವುದು] ಇದಕ್ಕೆ ಅಲ್ಲಿಯ ಭಾಷೆಯಲ್ಲಿ ಉಚ್ಚಾರಣೆಯ ಸ್ವರಭಾರವ್ಯತ್ಯಾಸಗಳನ್ನು ಮಾಡಿಕೊಳ್ಳು-ತ್ತಿದ್ದಂತೆಯೇ ಛಂದೋಲಯದ ಗುರುತ್ವಲಘುತ್ವಗಳ ವ್ಯತ್ಯಾಸಗಳು ಅನಿಯಂತ್ರಿತ-

ವಾಗಿ ಆಗುವುದೊಂದು ಅನುಕೂಲತೆಯೆಂದೂ ಸೇಡಿಯಾಪು ಮೊದಲ ಬಾರಿಗೆ ಬಿಡಿಸಿತೋರಿದ್ದಾರೆ. ಅಷ್ಟೇ ಅಲ್ಲ, ಬಹುಮಟ್ಟಿಗೆ ಎಲ್ಲ ಪಾಶ್ಚಾತ್ಯ (ವಿಶೇಷತಃ ಇಂಗ್ಲಿಷ್) ಭಾಷೆಗಳ ಭಾಷಾಪದಗಳೂ ಛಂದಃಪದಗಳಿಗೆ ತಕ್ಕ ಅಳತೆಯವಾಗುವ ಕಾರಣದಿಂದಲೇ, ಅಲ್ಲಿಯ ಛಂದೋವೈವಿಧ್ಯವೆಲ್ಲವೂ ಕೇವಲ ಸತಾನಾತ್ಮಕ - ಲಯಸಹಿತವರ್ಗದ್ದೇ ಆಗಿರುವ ಕಾರಣದಿಂದಲೇ ಏಕತಾನತೆಯ ತೀವ್ರತೆ ಅತಿಯಾಗಿ ಉಲ್ಬಣಿಸಿದೆಯೆಂದೂ ಸಾಧಾರವಾಗಿ ನಿಸ್ಸಂದಿಗ್ಧವಾಗಿ ಸ್ಥಾಪಿಸಿದ್ದಾರೆ. ಹೀಗಾಗಿಯೇ ಪಾಶ್ಚಾತ್ಯಾನುಕರಣೆಯ ಭ್ರಮೆಯಲ್ಲಿ ನಮ್ಮವರೂ ಸಹ ಸತಾನ-ವಿತಾನಚ್ಛಂದೋಬಂಧಗಳೆರಡೂ ಇರುವ, ಭಾಷಾಪದಗತಿ ಮತ್ತು ಛಂದಃಪದ-ಗತಿಗಳಿಗೆ ಸಾಕಷ್ಟು ಆಕರ್ಷಕ-ವೈವಿಧ್ಯಾತ್ಮಕ ಗತಿಚ್ಛೇದವೂ ಇರುವ, ಭಾಷೆ-ಯಲ್ಲಿಯೇ ಗುರು-ಲಘುಸ್ಥಿರವಾದ ಸ್ವರಭಾರರಹಿತ (ಅಂದರೆ ಸ್ವರಭಾರಕ್ಕೇ ವ್ಯತ್ಯಾಸಗೊಳ್ಳುವಂಥ ದ್ರವೀಯಗುರುತ್ವ-ಲಘುತ್ವಗಳಿಲ್ಲದ) ವ್ಯವಸ್ಥೆಯುಳ್ಳ ಹಾಗೂ ಎಲ್ಲಕ್ಕಿಂತ ಮಿಗಿಲಾಗಿ, ಲಯಾತ್ಮಕಚ್ಛಂದೋಗಣಗಳ ಆಕೃತಿಯನ್ನೇ (ಅಂದರೆ ಲಗಂ, ಗಾಲ, ಗಂಗಂ ಎಂಬಂಥ ೩, ೩, ೪, ಇತ್ಯಾದಿ) ಸರ್ವದಾ ತಳೆದಿರುವಂಥ ನಿರ್ಬಂಧವಿಲ್ಲದೆ ಸರ್ವಲಘು, ಸರ್ವಗುರು, ಮಿಶ್ರ ಎಂಬಿವೇ ಮುಂತಾದ ರೀತಿಗಳಲ್ಲಿರಬಲ್ಲ ಪದರಚನೆಗಳನ್ನು ಹೊಂದಿರುವ ಅಜಂತಭಾಷಾವ್ಯವಸ್ಥೆಯಿರುವ (ಅರ್ಥಾತ್ ಅಕ್ಷರಾತ್ಮಕವಾಗಿಯೇ ಪ್ರತೀತವಾಗುವ) ನಮ್ಮ ಸರ್ವಸಂಪನ್ನ-ಭಾಷೆಗಳಲ್ಲಿಯೂ ಪಾಶ್ಚಾತ್ಯಲೋಕದ ಛಂದೋಗತ್ಯೈಕತಾನತಾದೋಷವನ್ನು ಆರೋಪಿಸಿಕೊಂಡು, ಆ ಇಲ್ಲದ 'ದೋಷ'ವನ್ನು ನಿವರಣೆಮಾಡಲು ಗಣಭಂಗ-ವೆಂಬ ದುರ್ವ್ಯವಸ್ಥೆಯನ್ನೂ ಅವಲಯವನ್ನೂ ಸಹಜಸುಂದರವಾದ ವೈವಿಧ್ಯ-ಮಯ ಭಾರತೀಯಚ್ಛಂದೋಬಂಧಗಳೊಳಗೆ ತಂದಿದ್ದಾರೆ, ಆದುದರಿಂದಲೇ ಕುವೆಂಪು ಅಂಥವರೂ ಅವಿಚಾರಿತವಾಗಿ ತಮ್ಮ ಮಹಾಚ್ಛಂದಸ್ಸಿನಲ್ಲಿ, ಗೋಕಾಕರು ತಮ್ಮ ಸಂಕೀರ್ಣಚ್ಛಂದಸ್ಸಿನಲ್ಲಿ ಹಾಗೂ ಇನ್ನಿತರರೆಷ್ಟೋ ಕವಿಗಳು ತಮ್ಮ ತಮ್ಮ ರಚನೆಗಳಲ್ಲಿ ವಸ್ತುತಃ ಛಂದೋದೋಷಗಳನ್ನೇ ಅಜ್ಞಾನದಿಂದ ಮಾಡಿ ಜ್ಞಾನಭ್ರಮೆಯಲ್ಲಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಇದೆಲ್ಲವೂ ಸೇಡಿಯಾಪು ಅವರ ಆದ್ಯ ಸಂಶೋಧನೆಯ ಫಲವಾಗಿಯೇ ಸ್ಫುಟವಾಗಿವೆ. ಈ ಮಾತುಗಳಲ್ಲಿ ಒಂದಿಷ್ಟು ಕಾಠಿನ್ಯ ತೋರಬಹುದಾದರೂ ಡಾ। ಡಿ. ಎಸ್. ಕರ್ಕಿ, ಡಾ। ಟಿ. ವಿ. ವೆಂಕಟಾಚಲಶಾಸ್ತ್ರೀ, ಡಾ। ಕೆ. ಜಿ. ನಾರಾಯಣಪ್ರಸಾದ್ ಮುಂತಾದ ಉತ್ತರೋತ್ತರಸಕಲಚ್ಛಂದಸ್ತಜ್ಞರೂ ಇಂಥ ಭ್ರಮಾವಿಷ್ಟ ಪರಪ್ರತ್ಯಯನೇಯವೂ ಅಶಾಸ್ತ್ರೀಯವೂ ಆದ ಸಂಗತಿಗಳನ್ನೇ ತಮ್ಮ ತಮ್ಮ ವಿಶ್ಲೇಷಣೆಗಳಲ್ಲಿ ನೆಮ್ಮಿ ಇದನ್ನೊಂದು ಸತ್ಯವೆಂಬಂತೆ ರೂಪಿಸಿರುವ ಹಿನ್ನೆಲೆಯಿಂದ ಕಂಡಾಗ ಇದೊಂದು ವಿದ್ವದ್ವ್ಯಾಕುಲತಾಕಟೂಕ್ತಿಯೆಂದಷ್ಟೇ ಗಣಿಸಬೇಕು. ನಮ್ಮಲ್ಲಾದ ಈ ಬಗೆಯ ಬೌದ್ಧಿಕದಿವಾಳಿತನಕ್ಕೆ ಅಂಧಾನುಸರಣೆ ಹಾಗೂ ಬೇರುಗಳಲ್ಲಿ ಭದ್ರವಿಲ್ಲದಿರು-ವಿಕೆಗಳಷ್ಟೇ ಕಾರಣವಲ್ಲವೇ! ಈ ಅವಿವೇಕದಿಂದಾಗಿಯೇ ಅಡಿಗರಂಥವರೂ

ಕುಮಾರವ್ಯಾಸನಲ್ಲಿ ಛಂದ ಏಕತಾನತೆಯುಂಟು ಎಂದೂ, ಬಿ. ಎಂ. ಶ್ರೀ.ಯವರು ಶ್ಲೋಕಚ್ಛಂದಸ್ಸಿನಲ್ಲಿ ಪ್ರವಾಹಶೀಲತೆ ಇಲ್ಲವೆಂದೂ ವೃಥಾ ಆರೋಪಿಸುವಂತಾ-ಯಿತು.

ಬಳಿಕ ಸೇಡಿಯಾಪು ಅವರು ಛಂದೋಗತ್ಯುನ್ಮೀಲನವಾಗುವಂತೆ ಪದ್ಯ-ವನ್ನು ವಾಚಿಸುವಾಗ ತದ್ಗತ ಭಾಷಾಪದಸ್ವರೂಪವು ಪ್ರತೀತಿಗೆ ಬಾರದಂತಿದ್ದಲ್ಲಿ ಅದು ಯತಿಭಂಗವೆಂದು ಹೇಳಿ ಯತಿಭಂಗಕ್ಕೆ ಮೊತ್ತಮೊದಲು ಅತ್ಯುತ್ತಮ ಲಕ್ಷಣ ನೀಡಿದ್ದಾರೆ. ವಸ್ತುತಃ ಪದಗತಿಭಂಗವೇ ಯತಿಭಂಗ. ಪದ್ಯಗತಿಶುದ್ಧಿ-ಗಾಗಿಯೇ ಯತಿನಿಯಮ. ಇದು ಸೇಡಿಯಾಪು ಅವರ ಕಾಣ್ಕೆ.

ಮುಂದೆ ವಿಷಮಗತಿ(ವಿತಾನ)ವೃತ್ತಗಳ ಲಯರಹಿತತೆಯೊಳಗೆ ಅಡಗಿದ ಸೌಂದರ್ಯದ ಮೀಮಾಂಸೆ ಅತಿಹೃದಯಗ್ರಾಹಿಯಾಗಿ ಗಂಭೀರತರ ವಿವೇಚನೆ-ಯೊಡನೆ ಬಂದಿದೆ. ಗುರುಪ್ರಚುರ, ಲಘುಪ್ರಚುರ ಮತ್ತು ಮಿಶ್ರವೆಂಬ ಮೂರು ವಿಭಿನ್ನಛಂದಃಪದಫಣಿತಿಗಳ ಬೆಸೆಯುವಿಕೆಯ ತಾಣವೇ ಇಲ್ಲಿ ಯತಿಸ್ಥಾನ-ವಾಗುತ್ತದೆ. ಇಂಥ ಗತಿಸಂಗಮಗಳಿಗೆ ಕಾರಕವಾಗುವ ಗುರುಲಘುವಿನ್ಯಾಸಗಳಲ್ಲಿ ಎಷ್ಟೆಷ್ಟು ವಿಕಟತೆಯಿರುವುದೋ ಅಷ್ಟಷ್ಟರ ಮಟ್ಟಿಗೆ ಆಯಾ ಛಂದಃಪ್ರಭೇದಗಳು ಯತಿಪ್ರಬಲವಾಗುತ್ತವೆ. ವಿಭಿನ್ನ ಗುರು – ಲಘುವಿನ್ಯಾಸಗಳ ಘಟಕಗಳ ನಡುವೆ ಅಂಥ ವ್ಯತ್ಯಾಸವಿಲ್ಲದಿದ್ದಾಗ ಆ ಛಂದಸ್ಸು ಯತಿದುರ್ಬಲವೆಸಿಸುತ್ತದೆ. (ಇವಕ್ಕೆ ಕ್ರಮವಾಗಿ ಸ್ರಗ್ಧರಾ, ಶಿಖರಿಣೀ, ಮಂದಾಕ್ರಾಂತಾ, ಹರಿಣಿಗಳನ್ನೂ; ಚಂಪಕ ಮಾಲೆ, ಉತ್ಪಲಮಾಲೆ, ವಸಂತತಿಲಾಕಾದಿಗಳನ್ನೂ ಉದಾಹರಣೆಯಾಗಿ ನೀಡ-ಬಹುದು) ಇವೆಲ್ಲವೂ ಮತ್ತೆ ಸೇಡಿಯಾಪು ಅವರ ದರ್ಶನವೇ. 'ಅರ್ಥಯತಿ' ಎಂಬ ಅನವಶ್ಯವಾದ ನೂತನ ಸಂಜ್ಞೆಯನ್ನು ಸಾಧಾರವಾಗಿ ನಿರಾಕರಿಸಿ ಅದಕ್ಕೆ ಪದಗತಿಯಲ್ಲಿಯೇ ಅನ್ವಯವನ್ನು ಹೇಳಿದ ಸೇಡಿಯಾಪು ಪೃಥ್ವೀ, ಮಲ್ಲಿಕಾ-ಮಾಲೆ, ವಸಂತತಿಲಕಾದಿ ವಸ್ತುತಃ ಸತಾನವೃತ್ತಗಳಿಗೆ ವಿತಾನವೃತ್ತಶೋಭೆಯು ಬಂದಿರುವುದರ ಕಾರಣ ಅವುಗಳ ಯತಿಸ್ಥಾನಪಲ್ಲಟ ಮತ್ತು ಗಣಪ್ರತೀಪನ-ಗಳೆಂದು ಸಾಬೀತುಮಾಡಿದ ಪರಿಯಂತೂ ರೋಮಹರ್ಷಕ. ಅಂತೆಯೇ ಈ ಎಡೆಯಲ್ಲೊಂದೆಡೆ ಅಡಿಟಿಪ್ಪಣಿಯಾಗಿ ಬೆಳೆದಿರುವ ಖಂಡಪ್ರಾಸದ ಸಮಸ್ಯಾ-ಪೂರಣವೂ ಸಹ ಮೌಲಿಕ. ಇಲ್ಲಿ ಕನ್ನಡ–ತೆಲುಗು–ತಮಿಳಿನಂಥ ಭಾಷಾಪ್ರಬಂಧ ನಿರ್ಮಾಪಕರು ಪಾದಾಂತಯತಿಯನ್ನು ದಾಟಿ ದಂಡಾಕಾರವಾಗಿ ಪದ್ಯಪಠನ-ವನ್ನು ಛಂದೋಧಾಟ್ಯನುಸಾರವಾಗಿ ಮಾಡುವಾಗ ತೊರೆಯೋಟವನ್ನು ಸಾಧಿಸಲು ಹೇಗೆ ಖಂಡಪ್ರಾಸವೆಂಬ ಅತಿಶಯವನ್ನು ಸಾಧಿಸಿರುವರೆಂಬ ತಥ್ಯವನ್ನು ಹೇಳುತ್ತಾ ಲಯಸಹಿತಚ್ಛಂದಸ್ಸುಗಳು ಸುಕುಮಾರಬಂಧವನ್ನು ಹೊಂದಿದಾಗ ಪ್ರತಿಯೊಂದು ಆವರ್ತಕ್ಕೂ ಗಣಾಂತದ (ಛಂದಃಪದಾಂತದ) ಯತಿ ಹಾಗೂ ಪಾದಾಂತಕ್ಕೂ ಯಥೋಚಿತಯತಿಯನ್ನು ಅನುಸರಿಸುವ ಬಗೆಯತ್ತ ಬೆರಳು ತೋರಿದ್ದಾರೆ. ಅಲ್ಲದೆ ನಿಬಿಡಬಂಧದಲ್ಲಿ ಇಂಥ ಪೇಶಲತೆಯಿರದೆಂದೂ ನಿದರ್ಶಿಸಿದ್ದಾರೆ. (ಈ

ತತ್ತ್ವವನ್ನೇ ಮುಂದೆ 'ಕನ್ನಡಚ್ಛಂದಸ್ಸು' ಗ್ರಂಥದಲ್ಲಿ ಗೇಯಬಂಧಗಳಾದ ತ್ರಿಮೂರ್ತಿಗಣಘಟಿತರೂಪಗಳಲ್ಲಿ ಸುಕುಮಾರಬಂಧವೂ ಇವುಗಳಲ್ಲಿ ಕೆಲವನ್ನು – ಉದಾ:– ತ್ರಿಪದಿಯಿಂದ ತ್ರಿವಿಧಿ, ಷಟ್ಪದದಿಂದ ಷಟ್ಪದಿ ಇತ್ಯಾದಿ ಬಿಗಿಗೊಳಿಸಿ–ದಾಗ ಮಾತ್ರಾಗಣಾತ್ಮಕ ನಿಬಿಡಬಂಧವೂ ಹೇಗೆ ಬಂದೊದಗುವುದೆಂಬುದನ್ನು ತೋರುವಲ್ಲಿ ಸೇಡಿಯಾಪು ವಿಸ್ತರಿಸಿರುವುದು ಸ್ಮರಣೀಯ.) ವಿತಾನಚ್ಛಂದೋ–ಬಂಧವೊಂದರ ಆಕರ್ಷಣೆಯ ಪರಾಕಾಷ್ಠೆಯಿರುವುದು ಅದರ ವಿಕಟಾಕ್ಷರ (ಗುರು–ಲಘು) ಸಂಘಟನೆಯಲ್ಲಿ, ಯತಿಸಂಧಾನದಲ್ಲಿ ಮತ್ತು ವಿಭಿನ್ನಾಕ್ಷರಗತಿಗಳ ಕಲಾಪೂರ್ಣ ಸಾಮ್ಯ–ವೈಷಮ್ಯಗಳಲ್ಲಿ ಎಂದು ಸೇಡಿಯಾಪು ಸಮರ್ಥವಾಗಿ ಸಾರಿದ್ದಾರೆ. ಇದುವೇ ವಿತಾನವರ್ಣವೃತ್ತಗಳ ಸೌಂದರ್ಯವರಿವಸ್ಯೆಯಾಗಿದೆ. ಹೀಗಿದ್ದೂ ಭಾಷೆಯೊಂದರ ಸರ್ವಸಾಧಾರಣ–ಪದಾಕ್ಷರಗತಿಗೆ ನಿಕಟವಾಗಬಲ್ಲ ಛಂದಸ್ಸಿನಲ್ಲಿಯೇ ಹೆಚ್ಚಿನ ಬರವಣಿಗೆ ಸಾಧ್ಯ ಎಂಬುದನ್ನರಿತು ತೋರುವ ಸೇಡಿ–ಯಾಪು ಸಂಸ್ಕೃತದ ಗುರುಪ್ರಚುರಭಾಷಾಗತಿಗೆ ಶ್ಲೋಕ, ಶಾರ್ದೂಲವಿಕ್ರೀಡಿತ, ಉಪಜಾತ್ಯಾದಿಗಳೂ ಕನ್ನಡದ ಲಘುಪ್ರಚುರ–ಮಧ್ಯಮಭಾಷಾಗತಿಗೆ ಕಂದ, ಷಟ್ಪದಿ, ರಗಳೆಗಳಂಥವೂ ಹೆಚ್ಚು ಸಹಜಾಭಿವ್ಯಕ್ತಿಗಳಾಗಿವೆಯೆಂಬುದನ್ನು ವೈಜ್ಞಾನಿಕವಾಗಿ ಕ್ಷೋದಕ್ಷಮವಾಗಿ ಮೊದಲಿಗೆ ಪ್ರಮಾಣೀಕರಿಸಿ ನಿರೂಪಿಸಿದ್ದಾರೆ. ಮಧ್ಯಾಕ್ಷರಗತಿವೃತ್ತಜಾತಿಗಳು ಅಕೃತಕ. ಹೀಗಲ್ಲದ ಬಂಧಗಳಲ್ಲಿ ಕವಿತೆ ಕಿಂಚಿತ್ಪ್ರಯತ್ನಜನ್ಯವಾಗುವುದೆಂದೂ ಅವುಗಳ ಆಕರ್ಷಣೆ ಹೆಚ್ಚೆಂದೂ ಹೃದ್ಯವಾಗಿ ಹೇಳಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಯತಿಪ್ರಬಲಚ್ಛಂದಸ್ಸುಗಳ ನಿರ್ವಹಣೆಯು ಯತಿದುರ್ಬಲಚ್ಛಂದಸ್ಸುಗಳಿಗಿಂತ ಈಷನ್ಮಾತ್ರಕ್ಲೇಶಕರವೆಂದೂ ಗತಿಸೌಂದರ್ಯಕ್ಕೆ ಅಕ್ಷರವಿನ್ಯಾಸವೈಲಕ್ಷಣ್ಯದಷ್ಟೇ ಛಂದಃಪದಭಾಷಾಪದಸಾಮರಸ್ಯವೂ ಅವಶ್ಯವೆಂದೂ ಸುವರ್ಣಮಧ್ಯಮಮಾರ್ಗನಿರ್ದೇಶನ ಮಾಡಿರುವುದು ಮನನೀಯ.

'ಅಕ್ಷರಜಾತಿ' ಎಂಬ ಹೊಸತೊಂದು ಶಾಸ್ತ್ರೀಯವಿಭಾಗವನ್ನು ಮೊದಲ ಬಾರಿಗೆ ಕಲ್ಪಿಸಿರುವ ಸೇಡಿಯಾಪು ಇದರಲ್ಲಿ ಅನುಷ್ಟುಪ್‌ಶ್ಲೋಕ, ಉಪಜಾತಿ, ಕರಂಬಜಾತಿ ಹಾಗೂ ವೈದಿಕಚಚ್ಛಂದಸ್ಸು(ತ್ರಿಷ್ಟುಪ್–ಜಗತಿ–ಪಂಕ್ತಿ ಇತ್ಯಾದಿ)–ಗಳನ್ನು ಸೇರಿಸಿ ವಿವೇಚಿಸಿರುವ ಪರಿ ಅಭಿನವವಾಗಿದೆ. ವಿಶೇಷತಃ ಶ್ಲೋಕದ ರಹಸ್ಯವನ್ನು ಸಾಕಷ್ಟು ವಿಸ್ತರಿಸಿ ಹೇಳಲಾಗಿದೆ. (ಆದರೂ ಅದರ ಕೆಲವೊಂದಿಷ್ಟು ರಹಸ್ಯಗಳಿನ್ನೂ ಉಳಿದಿವೆಯೆಂದೇ ನನ್ನ ಭಾವನೆ.) ಉಪಜಾತಿ ವೃತ್ತಗಳೇಕೆ ಕನ್ನಡಕ್ಕೆ ಬರಲಿಲ್ಲವೆಂಬುದನ್ನು ವಿವೇಚಿಸಿದಾಗ ಆದಿಪ್ರಾಸದ ಬಗೆಗೂ ಆನುಷಂಗಿಕಚರ್ಚೆ ಬಂದಿದೆ. ಇಲ್ಲಿ ಆದಿಪ್ರಾಸವು ನಮ್ಮಲ್ಲಿ ಅದೆಂತು ಬರಿದೊಂದು ಶಬ್ದಾಲಂಕಾರಮಾತ್ರವಾಗದೆ ಕೆಲಮಟ್ಟಿಗೆ ಛಂದೋವಿನ್ಯಾಸಾಂಗವೂ ಆಗಿದೆಯೆಂಬುದರ ವಿಮರ್ಶೆ(ವಿಶೇಷತಃ ಪ್ರೊ। ಎಂ. ವಿ. ಸೀ. ಅವರ ವಾದಗಳಿಗೆ ಉತ್ತರಿಸುವಾಗ) ಸೊಗಸಾಗಿ ಸಾಗಿದೆ. (ಆದರೆ ಕಂದದಲ್ಲಿ ಸಹ ದ್ವಿತೀಯ – ಚತುರ್ಥಪಾದಾದಿಗಳಲ್ಲಿ ಜಗಣವು ಬಂದಾಗ ಆದಿಪ್ರಾಸದ

ಮುಖ್ಯಾಂಶವಾದ ಸಮಾನಸ್ವರಶ್ರುತಿಪ್ರತೀತಿಯು ಆಗುವುದಿಲ್ಲವೆಂಬುದರ ಬಗೆಗೆ ಸೇಡಿಯಾಪು ಏನನ್ನೂ ಹೇಳದಿರುವುದು ಕಿಂಚಿದ್ವಿಸ್ಮಯಜನಕವಾಗಿದೆ.)

ಅನಂತರ ವೈದಿಕ ತ್ರೈಸ್ವರ್ಯದ ಬಗೆಗೆ ಅಮೂಲ್ಯ ಸ್ವೋಪಜ್ಞಚಿಂತನೆಯನ್ನು ಮಾಡಿರುವ ಸೇಡಿಯಾಪು ಅವರು ಎಚ್. ಡಿ. ವೇಲಣಕರ್, ವಿಂಟರ್ನಿಟ್ಸ್, ಮ್ಯಾಕ್ಡೊನೆಲ್, ಅರ್ನಾಲ್ಡ್, ಬಿ.ಎಂ.ಶ್ರೀ. ಮುಂತಾದ ಎಲ್ಲ ಪೂರ್ವಸೂರಿಗಳೂ ನಿರಪವಾದವಾಗಿ ಛಂದಸ್ಸನ್ನು ಶಿಕ್ಷಾಶಾಸ್ತ್ರದೊಡನೆ ತಳಿಕೆಹಾಕಿ ಸ್ವರಭಾರವ್ಯತ್ಯಾಸ-ಘಟಿತ ವೇದಸಂಸ್ಕೃತಚ್ಛಂದಸ್ಸುಗಳಿಗೆ ಅಂಥದ್ದೊಂದು ಆರೋಪವನ್ನಿರಿಸಿ ಗದ್ಯ-ಮಯಮಂತ್ರಗಳಿಗೂ ನಿರಪವಾದವಾಗಿ ಸ್ವರಗಳು ಇರಲಾಗಿ ಇವನ್ನು ಪದ್ಯ ಬಂಧಗಳ ಮೂಲಲಕ್ಷಣವೆಂಬಂತೆ ವಿವೇಚಿಸಿ ಶಾಸ್ತ್ರೋಪಪ್ಲವವನ್ನೇ ಮಾಡಿರುವ ಬಗೆಗೆ ನಿರ್ದಾಕ್ಷಿಣ್ಯವಾದ ಯುಕ್ತವಿಮರ್ಶೆಯನ್ನೇ ಮಾಡಿ ಬೆಳಕು ಬೀರಿರುವ ತೆರನಂತೂ ದಿಟವಾಗಿ ರಸಸಾಹಸ, ವಿದ್ವದ್ವಿಲಾಸ. ಈ ಸಂದರ್ಭದಲ್ಲಿ ಮರಾಠಿಯ ಜಾನಪದಚ್ಛಂದೋಬಂಧ ಓವಿಯ ಬಗೆಗೆ ನಡೆಸಿರುವ ಚರ್ಚೆಯೂ ಸಾಧಿಸಿರುವ ನಿಗಮನವೂ ಅತಿಸಮಂಜಸ, ಸಂದರ್ಭಶುದ್ಧಿಯುತ. ಮುಖ್ಯವಾಗಿ ಲಯಾತ್ಮಕ ಬಂಧಗಳ ಗೇಯತಾಕರ್ಷಣೆಯಿಂದ ಉಂಟಾಗುವ ಚಿತ್ತವಿಚ್ಛಿತ್ತಿಯನ್ನು ತಪ್ಪಿಸಿ ಅರ್ಥಗೌರವದತ್ತ ಮನಸ್ಸನ್ನು ಸೆಳೆಯಲು ವೈದಿಕಚ್ಛಂದಸ್ಸುಗಳು ಲಯರಹಿತ-ವಾದುವಲ್ಲವೆ ಮಂತ್ರದ್ರಷ್ಟಾರರಿಗೆ ಲಯಾತ್ಮಕತೆಯ ಅಜ್ಞಾನವಿರಲಿಲ್ಲ. ಹೆಚ್ಚೇನು, ಯಾವುದೇ ಭಾಷೆಯ ಪ್ರಾಥಮಿಕ ಸಾಹಿತ್ಯಾಭಿವ್ಯಕ್ತಿಯು ಲಯಾನ್ವಿತಪದ್ಯಬಂಧ-ದಲ್ಲಲ್ಲದೆ ಲಯರಹಿತಬಂಧದಲ್ಲಾಗದು; ಲಯರಹಿತಪದ್ಯಾಭಿವ್ಯಕ್ತಿಯು ತತ್ತ್ವ ಪ್ರಬುದ್ಧತಾದರ್ಶನ. ಇಲ್ಲಿ ಗತಿಸೌಂದರ್ಯವಿದ್ದೂ ಲಯವಿಕ್ಷೇಪವು ಬಾರದೆಂದು ಸೇಡಿಯಾಪು ಸಾಧಿಸಿರುವ ರೀತಿ ಅತ್ಯಂತ ಸುಭಗ, ಮನೋಗ್ರಾಹಿ. ಮುಖ್ಯವಾಗಿ ಗತಿಪ್ರಜ್ಞಾಸಂಪನ್ನವಾದ ಪದ್ಯವಾಚನವೇ ಛಂದಃಸಂಬಂಧಿತವಾದ ಅನೇಕ ಸಂದೇಹ - ಕ್ಲೇಶಗಳನ್ನು ಪರಿಹರಿಸಬಲ್ಲುದೆಂದು ಸೇಡಿಯಾಪು ಅವರು ಆನಂದವರ್ಧನನು ಸಹೃದಯನಿಗೇ ಕಾವ್ಯಸ್ವಾರಸ್ಯಮರ್ಮಜ್ಞತೆಯ ಪಟ್ಟವನ್ನಿತ್ತಂತೆ ರೂಪಿಸಿದ ಕಾರಣ ಪರಮಾನುಭವಸ್ಥಾಯಿಯಾದ ಛಂದೋಗತಿಹೃದಯಜ್ಞತೆ-ಯುಳ್ಳ ಇವರ ಸಂಶೋಧನೆಯು ಅಲಂಕಾರಶಾಸ್ತ್ರಲೋಕದಲ್ಲಿ ಧ್ವನ್ಯಾಲೋಕಕ್ಕಿರುವ ಪ್ರಾಶಸ್ತ್ಯವನ್ನೇ ಎಳ್ಳಷ್ಟೂ ತಗ್ಗಿಸಿಕೊಳ್ಳದೆ ಛಂದಶ್ಶಾಸ್ತ್ರಪ್ರಪಂಚದಲ್ಲಿ ಗಳಿಸಿಕೊಂಡಿದೆ. ಈ ದೃಷ್ಟಿಯಿಂದ ದಿಟವಾಗಿ ಸೇಡಿಯಾಪು ಅವರ ಸ್ಥಾನವು ಆಧುನಿಕಚ್ಛಂದೋವಿದರಾರೊಡನೆಯೂ ಇಲ್ಲ; ಅದೇನಿದ್ದರೂ ಪಿಂಗಳ, ಭರತಾದಿ ಮಹರ್ಷಿಗಳೊಡನೆ ಮಾತ್ರ ಎಂದರೆ ಸರ್ವಥಾ ಅಭಿಮಾನದ ಅತ್ಯುಕ್ತಿಯಾಗದು. ಅವರೆನ್ನುವಂತೆ ನಮ್ಮ ಪ್ರಾಚೀನ ಪದ್ಯಬಂಧಗಳನ್ನು ಛಂದಃಪದಭಾಷಾಪದಗತಿ-ಸಮರಸತಾನುಕೂಲವಾಗಿ ಓದಲು ಬಾರದಿರುವುದೇ ಸರ್ವಾನರ್ಥಹೇತುವೆಂದಿ-ರುವುದು ಪರಮಸತ್ಯ. ಇದರಿಂದಾಗಿಯೇ ನಮ್ಮ ವಿದ್ವಾಂಸರ, ವಿದ್ಯಾರ್ಥಿಗಳ

ಪಶ್ಚಿಮಮುಖತೆ ಅದೆಷ್ಟು ಉಲ್ಬಣಿಸಿದೆಯೆಂದೂ ಅಸ್ಮಿತಾಪ್ರತ್ಯಭಿಜ್ಞಾನವೆಷ್ಟು ಅಸ್ತಂಗತಿಸಿದೆ ಎಂದೂ ತಿಳಿಯುತ್ತದೆ.

ಹೀಗೆ ಛಂದೋಗತಿಯ ಆದ್ಯಂತ ಸೇಡಿಯಾಪು ಅವರ ಧಿಷಣಾದಕ್ಷತೆ ಮತ್ತೇಭವಿಕ್ರೀಡಿತವನ್ನೇ ನಡೆಸಿ ಭಾರತೀಯಚ್ಛಂದಶ್ಶಾಸ್ತ್ರದ ಶಿಖರಗಳನ್ನು ನಿರ್ಮಿಸಿದೆ; ಶಾಸ್ತ್ರಸಂಪನ್ನತೆಗೇ ಒಂದು ಅಭಿನವಾಲಂಕಾರವೆನಿಸಿದೆ.

೫

'ಕನ್ನಡ ಛಂದಸ್ಸು' ಮುಖ್ಯವಾಗಿ ಗೇಯಬಂಧಗಳಾಗಿ ದಕ್ಷಿಣಭಾರತೀಯ ಭಾಷೆಗಳಲ್ಲೆಲ್ಲ ವಿಶ್ರುತವಾಗಿರುವ ತ್ರಿಮೂರ್ತಿಗಣಘಟಿತಚ್ಛಂದೋವಿನ್ಯಾಸಗಳ ವಿಶ್ಲೇಷಣೆಗೆ ಮೀಸಲಾದ ಕೃತಿ. ವಸ್ತುತಃ ತಮಿಳಿನ ಛಂದಸ್ಸೂ ಇದಕ್ಕಿಂತ ತಾತ್ತ್ವಿಕಪ್ರಾಯೋಗಿಕರೂಪಗಳಿಂದ ಭಿನ್ನವಾಗಿಲ್ಲ. ಇನ್ನು ಮಲೆಯಾಳ ಮತ್ತು ತೆಲುಗು ಭಾಷೆಗಳ ಬಂಧಗಳೂ ಅಷ್ಟೇ. ಹೀಗಾಗಿ ಕನ್ನಡಚ್ಛಂದಸ್ಸನ್ನು ಕುರಿತ ಈ ನಿಬಂಧವು ಪ್ರಧಾನವಾಗಿ ಕನ್ನಡದ ದೇಶೀಯ ಬಂಧಗಳ ವಿವೃತಿಯೆನಿಸಿದ್ದರೂ ಮೂಲತಃ ಸಮಗ್ರ ದಕ್ಷಿಣಭಾರತ ಭಾಷೆಗಳ ಮಾತ್ರವಲ್ಲ, ಇಡಿಯ ಭಾರತೀಯ ಗೇಯಚ್ಛಂದಸ್ಸುಗಳ ಮೀಮಾಂಸೆಯೂ ಆಗುತ್ತದೆ. ಓವೀ, ಘನಾಕ್ಷರೀ, ಛಂದ, ಪದ್ಧಳೀ, ದ್ವಿಪದಿಕಾ, ಖಂಡಚರ್ಚರೀ, ಭಿನ್ನಕ, ಖಂಡ, ಚರ್ಚರೀ ಮುಂತಾದ ಪ್ರಾಕೃತಾಪಭ್ರಂಶಚ್ಛಂದಸ್ಸುಗಳ ಕರ್ಷಣಮೂಲೀಯವೂ ಮಾತ್ರಾಮೂಲೀಯವೂ ಆದ ಸಕಲಗತಿವಿಭಾಗಗಳಿಗೂ ಅನ್ವಿತವಾಗಬಲ್ಲ ಮೂಲಸಾಮಗ್ರಿಯನ್ನು ಇದು ಹೊಂದಿದೆ. ಇವೆಲ್ಲವನ್ನೂ ಸೇಡಿಯಾಪು ವಿಸ್ತರಿಸಿಲ್ಲವಾದರೂ ಅವರು ನೀಡಿರುವ ನೀಲನಕ್ಷೆಯ ಆಧಾರದ ಮೇಲೆ ತರ್ಕ – ಯುಕ್ತಿಗಳನ್ನವಲಂಬಿಸಿ ಸಂಗೀತದ ತಾಳಗಳನ್ನು ಹಿಡಿದು ಸಾಗಿದರೆ ಈ ಎಲ್ಲ ತಥ್ಯಗಳತ್ತ ಕಣ್ಣೋಡಿಸಬಹುದೆಂಬ ಕಾರಣದಿಂದಲೇ 'ಕನ್ನಡ ಛಂದಸ್ಸು' ಗ್ರಂಥವನ್ನು ಈಗ ಅದಕ್ಕಿರುವ ವ್ಯಾಪ್ತಿಗಿಂತಲೂ ಹೆಚ್ಚಿನ ಹರಹಿನಲ್ಲಿ ಕಾಣಬೇಕೆಂದು ನನ್ನ ಇರಾದೆ. ವಸ್ತುತಃ 'ರತಿ–ಬಾಣ–ಮದನ' ಅಥವಾ 'ಬ್ರಹ್ಮ–ವಿಷ್ಣು–ರುದ್ರ' ಗಣಗಳ ಹಾಸುಬೀಸಿನ ಒಳಗೇ ನಮ್ಮ ಸಂಗೀತದ ಎಲ್ಲ ಮುಖ್ಯ ಹಾಗೂ ಸುಸಂಗತ ತರ್ಕಾನು–ಭವಸಹತಾಳಗಳು (ಆದಿ, ರೂಪಕ, ಖಂಡಛಾಪು, ಮಿಶ್ರಛಾಪು, ಝಂಪೆ, ಅಟ್ಟ, ಧ್ರುವಾದಿಗಳು) ಅಡಗುತ್ತವೆ. ಹೀಗಾಗಿ ಎಲ್ಲ ಗೇಯಬಂಧಗಳಿಗೂ ಇಲ್ಲಿ ಅಡಕವಿದೆ, ಎಡೆಯಿದೆ. ಆದುದರಿಂದ 'ಕನ್ನಡ ಛಂದಸ್ಸು' ಕೃತಿಯ ಮೂಲಕ ಸೇಡಿಯಾಪು 'ಛಂದೋಗತಿ'ಯಲ್ಲಿ ವಿಮೃಷ್ಟವಾಗದೆ ಉಳಿದಿದ್ದ ಉಳಿದೆಲ್ಲ ಮಹತ್ತ್ವದ ಅಂಶಗಳನ್ನು ಬಹುಮಟ್ಟಿಗೆ ಸ್ಪರ್ಶಿಸಿ ದಿಗ್ದರ್ಶನಮಾಡಿಸಿದ್ದಾರೆ. ಹೀಗಾಗಿ ಭಾರತೀಯಚ್ಛಂದಶ್ಶಾಸ್ತ್ರದ ಮೂರು ಮುಖ್ಯಪ್ರಕಾರಗಳಾದ ಲಯರಹಿತ ಬಂಧಗಳು, ಲಯಾನ್ವಿತಪಾಠ್ಯಬಂಧಗಳು ಮತ್ತು ಲಯಾನ್ವಿತಗೇಯ(ಕರ್ಷಣಕ್ಕೆ

ತುತ್ತಾಗುವ)ಬಂಧಗಳ ತತ್ತ್ವ-ತಂತ್ರಗಳೆಲ್ಲ ಇವರಿಂದ ಕ್ಷೋದಕ್ಷಮವಾಗಿ ಪರಿಶೀಲಿತಗೊಂಡಿವೆಯೆಂಬುದು ನನ್ನ ನಿಲವು.

'ಕನ್ನಡ ಛಂದಸ್ಸಿ'ನ ಆರಂಭದಲ್ಲಿಯೇ ಸೇಡಿಯಾಪು ಅವರು ಛಂದೋ-ಬಂಧಗಳಿಗೆ ಗದ್ಯದ (ಛಂದೋಮುಕ್ತಮಾಧ್ಯಮದ) ಸ್ವಾತಂತ್ರ್ಯವಿಲ್ಲದಿದ್ದರೂ ಅನುಪಮವೂ ಅನಿರ್ವಾಚ್ಯವೂ ಆದ ಪಾರತಂತ್ರ್ಯದ ಆನಂದವಿರುವ ಕಾರಣ ಛಂದಸ್ಸಿನ ಮಹಿಮೆ ಅದ್ಭುತ, ಅನ್ಯಾದೃಶ, ಅನರ್ಘವೆಂದು ಒಕ್ಕಣಿಸಿದ್ದಾರೆ. ಇಲ್ಲಿಯ ಈ ತೆರನಾದ ಬಂಧಕೃತಕತೆಯಲ್ಲಿಯೇ ಕಲಾವಿದನ ಕೃತಕೃತ್ಯತೆ ಅಡಗಿದೆ. ಸತಾಲಬಂಧಗಳು ಆಪಾತಮಧುರವಾದರೆ ವಿತಾಲಬಂಧಗಳು ಆಲೋಚನಾಮೃತ.

ಮೊದಲಿಗೆ ಅಂಶಚ್ಛಂದಸ್ಸೆಂಬ ಹೆಸರು ಪ್ರಾಚೀನವೂ ವಿಶುದ್ಧವೂ ಅಲ್ಲದ ಕಾರಣ ಅದನ್ನು ಹಳೆಯ ಬಳಕೆಯಂತೆ ತ್ರಿಮೂರ್ತಿಗಣಚ್ಛಂದಸ್ಸೆಂದೇ ಹೇಳಿರುವುದಲ್ಲದೆ ಇದಂಪ್ರಥಮವಾಗಿ ಬ್ರಹ್ಮ, ವಿಷ್ಣು ಮತ್ತು ರುದ್ರಗಣಗಳಿಗೆ ಶಾಸ್ತ್ರಗ್ರಂಥಪ್ರಸಿದ್ಧವಿರುವ ನಾಲ್ಕು, ಎಂಟು ಹಾಗೂ ಹದಿನಾರು ವಿವಿಧರೂಪ-ಗಳಿಗೆ ಬದಲಾಗಿ ಸಾಕ್ಷಾತ್ತಾಗಿ ಪ್ರಯೋಗದಲ್ಲಿ ತೋರಿಕೊಳ್ಳುವ ತಲಾ ಎರಡೆರಡು ರೂಪಗಳಿಗೆ ಮಣೆ ಹಾಕಿದ್ದಾರೆ. ಹೀಗಾಗಿ ಇಲ್ಲಿ ಚಾಕ್ಷುಷರೂಪ (theory)ಹಾಗೂ ಶ್ರಾವಣರೂಪ (practice) ಎಂಬೆರಡು ಮುಖಗಳು ಮೊತ್ತಮೊದಲಿಗೆ ತೋರಿ-ಕೊಂಡು ತನ್ಮೂಲಕ ಆವರೆಗೂ ಎಲ್ಲರೂ ಎಡವಿದ್ದ ಕಾಲುಗಳ ಗಾಯಗಳೆಲ್ಲ ಮಾಗುವಂತಾದುವು; ಗೇಯಚ್ಛಂದಸ್ಸುಗಳ ರಹಸ್ಯ ಬಟ್ಟಬಯಲಾಯಿತು. ಈ ನಿರ್ವಾಹತಂತ್ರ(working technique)ದ ಮೂಲಕ ತ್ರಿಮೂರ್ತಿಬಂಧಗಳನ್ನು ಯಾರೂ ತಪ್ಪಿಲ್ಲದೆ ಲಯಾನುಸಾರಿಯಾಗಿ ಹಾಡಬಹುದಾಗಿದೆ. ಈ ಹತೋಟಿ ದೊರೆತೊಡನೆ ತ್ರಿಮೂರ್ತಿಬಂಧಗಳ ಲಯವೈವಿಧ್ಯದ ಬಗೆದಿದ್ದ ಅನೇಕ ಭ್ರಾಂತಿಗಳೂ ಕರಗುವಂತಾದುವು. ಇದನ್ನು ದ್ರಾವಿಡಾಭಿಮಾನದ ಬಿ. ಎಂ. ಶ್ರೀ., ತಿ. ಸೀ., ಕ. ವೆಂ. ರಾಘವಾಚಾರ್ಯರಂಥವರಾರೂ ಗಮನಿಸಿರಲಿಲ್ಲ. ಅಂತೆಯೇ 'ಲಗಂ' ವಿನ್ಯಾಸವಾಗಲಿ ಜಗಣ - ಯಗಣಗಳ ಆದಿಗಳಾಗಲಿ ಏಕೆ ಇವುಗಳಲ್ಲಿ ಬರಬಾರದೆಂಬ ಗುಟ್ಟೂ ರಟ್ಟಾಗಿ, ಒಡಪು ಒಡೆಯಿತು.

ಗಾನಕ್ಕೆ ಅತ್ಯಾವಶ್ಯವಾದ ಚತುರಸ್ರತೆಯನ್ನು ಎತ್ತಿಹೇಳುವ ಸೇಡಿಯಾಪು ಸಮಾವರ್ತನಗಳ ಅಂತ್ಯದ ಊನಗಣಗಳಿಂದ ಉಂಟಾಗುವ ಕರ್ಷಣಾಧಿಕ್ಯ-ಫಲವಾದ ಗೇಯತೆಯ ಬಗೆಗೂ ನಾನೋಪಪತ್ತಿಗಳಿತ್ತು ತಿಳಿಸಿದ್ದಾರೆ. ಎಲ್ಲ ತಾಳಗಳಿಗಿಂತ ಮೂಲಭೂತವಾದ ಆದಿತಾಳ ಹಾಗೂ ಎಲ್ಲ ಗೇಯಗಣಗಳಿಗಿಂತ ಮೂಲಭೂತವಾದ ವಿಷ್ಣುಗಣದ ಬಗೆಗೆ ಇವರು ಹಾಕಿರುವ ಅವಧಾರಣೆಯೂ ಗಮನಾರ್ಹ. ಯಾವುದೇ ಗೇಯಬಂಧದ ಲಯಗತಿಯು ಅದರಲ್ಲಿ ಪ್ರಧಾನ-ವೆನಿಸುವ ಗಣದ ನಡಿಗೆ - ತಾಳಗಳನ್ನಾಧರಿಸುತ್ತದೆಂಬುದು ಇವರ ವಿಪ್ರತಿ-ಪತ್ತಿಯಿಲ್ಲದ ನಿಯಮ. ಅಂತೆಯೇ ಕನ್ನಡದ ಎಲ್ಲ ಮೂಲಭೂತ ಗೇಯ-ಪ್ರಬಂಧಗಳೂ (ಅಕ್ಕರಗಳು, ಷಟ್ಪದ, ಗೀತಿಕೆ, ಏಳೆ, ಸಾಂಗತ್ಯ, ಚೌಪದ,

ಛಂದೋವತಂಸ ಇತ್ಯಾದಿ) ಸಮಸಂಖ್ಯೆಯ ಆವರ್ತಗಳನ್ನೇ ಹೊಂದಿ ಯಥಾ-ವಕಾಶವಾಗಿ ಊನಗಣಗಳನ್ನು ತಳೆದು ಗೇಯತಾಕರ್ಷಣೆಯಲ್ಲಿ ಭಿನ್ನೈಸುತ್ತ-ವೆಂದು ತೀರ್ಮಾನಿಸುತ್ತಾರೆ. ಬ್ರಹ್ಮಗಣದ ಕರ್ಷಣ ಅಥವಾ ರುದ್ರಚ್ಛೇದದಂಥ ಪ್ರಕ್ರಿಯೆಗಳನ್ನು ನಿರೂಪಿಸುವ ಮೂಲಕ ಸೇಡಿಯಾಪು ತಮ್ಮ ಈ ವಾದಗಳನ್ನು ಅಕುಂಠಿತವಾಗಿಸಿದ್ದಾರೆ.

ಜೊತೆಗೆ ತ್ರಿಮೂರ್ತಿಗಣಬಂಧಗಳ ಸುಕುಮಾರಸಂಘಟನೆ, ಛಂದಃಪದ ಹಾಗೂ ಭಾಷಾಪದಗಳ ಐಕತಾನಿಕಸಂಯೋಗ ಮತ್ತು ಪ್ರತಿಗಣಕ್ಕೂ ಪ್ರಾತಿನಿಧಿಕ-ವಾಗುವ ಪೂರ್ಣಪದಗಳ ಕರ್ಷಣ ಮುಂತಾದ ಅಂಶಗಳ ಕಾರಣ ಈ ಛಂದಸ್ಸುಗಳಿಗೆ ಒದಗಿಬಂದ ಏಕತಾನತೆಯ ದುರ್ನಿವಾರ್ಯತೆಯನ್ನೂ ಇದನ್ನು ಮೀರಲೆಳಸಿದರೆ ಉಂಟಾಗುವ ಅರ್ಥಾಪ್ರತೀತಿಯನ್ನೂ ನಿರ್ಮಮರಾಗಿ ಸೇಡಿಯಾಪು ನಿರೂಪಿಸಿ ಮೌಲ್ಯಮಾಪನ ಮಾಡಿದ್ದಾರೆ.

ಮುಂದೆ ವಸ್ತುಕ-ವರ್ಣಕಗಳೆಂಬ ಕಾವ್ಯರಚನಾನಾಮಧೇಯರಹಸ್ಯವಿವೃತಿ ಸಹ ಸೊಗಸಾಗಿ ಬಂದಿದೆ. ಆ ಪ್ರಕಾರ ವರ್ಣಕವೆಂದರೆ ಲಯಾನ್ವಿತವಾದ ಬಂಧಗಳಿಂದ ನಿಬದ್ಧವಾದ ಅರ್ಥಾತ್ ಗೇಯಮಯವಾದ ಕಾವ್ಯವೆಂದರ್ಥ. ಹಾಗೆಯೇ ಅಕ್ಕರ<ಅಕ್ಷರ, 'ಅಕ್ಷರ' ಹಾಗೂ 'ವರ್ಣ' ಮೀಮಾಂಸೆಗಳೂ ಅತಿಮೌಲಿಕ, ಸ್ವೋಪಜ್ಞ. ಇವೆಲ್ಲ ಸೇಡಿಯಾಪು ಅವರ ಛಂದಶ್ಚಿಂತನೆಯ ಉದ್ಯಮದ ಉಪಫಲಗಳು.

ತ್ರಿಪದಿಯ ಕೂಲಂಕಷವಿವೇಚನೆಯೊಡನೆ ಆನುಷಂಗಿಕವಾಗಿ ಕಪ್ಪೆ ಆರಭಟ್ಟನ 'ಸಾಧುಗೆ ಸಾಧು... ' ಪದ್ಯದ ಪಾಠಶುದ್ಧಿಯ ಬಗೆಗೆ ಇವರು ಮಾಡಿರುವ ತೀರ್ಮಾನವು ಛಂದೋವ್ಯಾಕರಣಾಲಂಕಾರಶಾಸ್ತ್ರಗಳೆಲ್ಲವುಗಳ ದೃಷ್ಟಿಯಿಂದ ದಿಟವಾಗಿ ಅನವದ್ಯ. ಇದಕ್ಕೆ ಪ್ರತಿರೋಧ ಸಲ್ಲದು. ಆದರೆ ಶಾಸನದಲ್ಲಿ ಅಪಪಾಠವುಂಟೆಂದ ಮಾತ್ರಕ್ಕೆ ಸೇಡಿಯಾಪು ತಪ್ಪಾಗುವುದಿಲ್ಲ. ಈ ಬಗೆಗೆ ಆಕ್ಷೇಪಗಳನ್ನೆತ್ತಿದವರು ಮೌಲ್ಯಕ್ಕಿಂತ ದ್ರವ್ಯಕ್ಕೆ ಶಾಸ್ತ್ರವಲಯದಲ್ಲಿ ಹೆಚ್ಚಿನ ಬೆಲೆ ನೀಡಿದ ಸ್ಥೂಲಮತಿಗಳಾಗುತ್ತಾರಷ್ಟೆ. ಆ ಶಾಸನದಲ್ಲಿ ಈಗಿರುವ ಪಾಠವನ್ನು ಛಂದೋಲಂಕಾರವ್ಯಾಕರಣಗಳ ಯಾವ ಹಾದಿಯಿಂದಲೂ ಸಾಧುವೆಂದು ಸಾಬೀತು ಮಾಡಲಾಗದೆಂಬುದನ್ನು ನೆನಪಿಡಬೇಕು. ಈ ಸಂದರ್ಭದಲ್ಲಿಯೇ ಅವರು ತ್ರಿಪದಿ>ತ್ರಿವಿಧಿಗಳ ಬಗೆಗೆ ಗೇಯ-ಪಾಠ್ಯ ಪದ್ಧತಿಗಳ ರಂಜನ - ಚಿಂತನ ದೃಷ್ಟಿಕೋನಗಳ ವಿಮರ್ಶೆ ನೀಡಿರುವುದೂ ಮಾರ್ಮಿಕವಾಗಿದೆ. ಏಳೆಯ ವಿವೇಚನೆಯೂ ಹದವಾಗಿದೆ. ಇದು ಓವಿಗಾಗಲಿ, ಕುರಳ್‌ಗಾಗಲಿ ಸೇರುವುದಿಲ್ಲ-ವೆಂಬ ತರ್ಕ ಸಹ ಸರಿಯಾಗಿದೆ. ಸಾಂಗತ್ಯವು ಏಳೆಯ ಬೆಳೆವಳಿಗೆಯೆಂಬುದೂ ಸಂಮತವೇ.

ಷಟ್ಪದ(ಷಟ್ಪದಿಕೆ)ಗಳ ಚಿಂತನೆಯ ಸಂದರ್ಭದಲ್ಲಿಯೇ ಮಾತ್ರಾಷಟ್ಪದಿಗಳ ಉಗಮ ಹಾಗೂ ಪ್ರೌಢಷಟ್ಪದಿ (೪+೫ ಗಣಗಳ ಸಂಕೀರ್ಣಗತಿ) ಸಾಧ್ಯತೆಯ

ಅಸಿಂಧುತ್ವವನ್ನು ಕುರಿತ ಚಿಂತನೆ ತುಂಬ ಸುಭಗವಾಗಿದೆ. ಆದರೆ ಸೇಡಿಯಾಪು ಅವರು ೪+೫ರ ಪ್ರತೀಪವಾದ ೫+೪ ಮಾತ್ರಾಗತಿಯ ಎಳೆಯನ್ನುಳ್ಳ ಇಂದ್ರವಜ್ರಾ, ಇಂದ್ರವಂಶಾದಿವೃತ್ತಗಳ ಬಗೆಗೊಂದಿಷ್ಟು ಚಿಂತಿಸಬಹುದಿತ್ತೆನಿಸುತ್ತದೆ. ಇಲ್ಲಿಯೇ ರಗಳೆಗಳ ಪ್ರಾಕೃತಭಾಷಾಮೂಲನಿರ್ದೇಶನವೂ ಇತರ ಸಂಶೋಧಕರಿಗೆ ಬೆಂಬಲವಾಗಿ ಬಂದಿದೆ.

ಗೀತಿಕೆಯ ಪುನರ್ನಿರ್ಮಾಣವೊಂದು ತೀರ ತೊಡಕಿನ ಸಾಹಸ. ಇದೂ ಅತೃಪ್ತಿಕರವೆನ್ನುವವರು ಗೀತಿಕೆಯ ರಚನೆಯಲ್ಲಿಯೇ ಮೂಲತಃ ನೆಲೆನಿಂತ ಇಂಥ ಅಸುಭಗತೆಯನ್ನು ಮೊದಲು ಮನಗಾಣಬೇಕು. ಇದೇ ರೀತಿ ಛಂದೋವತಂಸ ಹಾಗೂ 'ಎತ್ತುಗೀತಿ'ಗಳ ಸಮೀಕರಣವೂ ಯಥೋಪಪನ್ನ ಸಾಕ್ಷ್ಯಗಳೊಳಗೆ ಸಂಗತವೇ ಸರಿ. ಆದರೆ ಸೀಸ ಮತ್ತು ಪಿರಿಯಕ್ಕರಗಳ ಸಂವಾದ ಮಾತ್ರ ಪ್ರಶ್ನಾತೀತ. ಸೀಸಕ್ಕೆ ಎತ್ತುಗೀತಿಯಿದ್ದಂತೆ ಪಿರಿಯಕ್ಕರಕ್ಕೆ ಛಂದೋವತಂಸವು ಅಂಟಿಬಂದ ಉಲ್ಲೇಖಗಳು ಸಿಗುವವರೆಗೆ ಸೇಡಿಯಾಪು ಅವರ ನಿಗಮನವು ಆ ಮಟ್ಟಿಗೆ ಚಿಂತ್ಯವಾದರೂ ಸ್ವೀಕಾರ್ಯ.

ಈ ಗ್ರಂಥದಲ್ಲಿಯೂ ಪ್ರಾಸಂಗಿಕವಾಗಿ ಯತಿಯ ಬಗೆಗೆ ಹೇಳಿರುವ ಮಾತುಗಳು ತುಂಬ ಮನನೀಯವಾಗಿವೆ. ವಿಶೇಷತಃ 'ಯತಿಯೆಂಬುದಿಸಿರ್ವ-ತಾಣಂ' ಹಾಗೂ 'ಯತಿಯೆಂಬುದುಸಿರ್ದಾಣಂ' ಎಂಬ ಕವಿರಾಜಮಾರ್ಗಕಾರ ಹಾಗೂ ನಾಗವರ್ಮರ ನುಡಿಗಳ ಅಭಿನ್ನತಾನಿರೂಪಣ, ದಂಡಿ ಮತ್ತು ಪಿಂಗಲ-ಮತಾನುಷಂಗತೆ ಮುಂತಾದುವುಗಳ ವಿವೇಚನೆ ಅತ್ಯದ್ಭುತ. ಛಂದೋಗತಿಗೆ ಭಂಗಬಾರದಂತೆ ಪದಪುಂಜಗಳ ಕ್ರಮಾನುಗತವಿಚ್ಛೇದನವು ಯತಿಭಂಗವಲ್ಲ, ಯತಿವ್ಯಾಪ್ತವೂ ಅಲ್ಲ ಎಂಬ ಸೇಡಿಯಾಪು ಅವರ ನಿಲುವು ದಿಟವಾಗಿ ಸುಸ್ಥಿರ. ಅಂತೆಯೇ 'ದಂಡಾಕಾರದಲ್ಲಿ ಓದುತ್ತಾ ಪ್ರತಿಯೊಂದು ಛಂದಃಖಂಡಕ್ಕೂ ನಿಲ್ಲಿಸದೆ, ಸಾಹಿತ್ಯದ ಶಬ್ದಖಂಡಗಳಿಗನುಸಾರವಾಗಿ ಗತಿ ತಪ್ಪದೆ, ಛಂದಃ-ಖಂಡಗಳ ಆದ್ಯಕ್ಷರಗಳನ್ನು ಕಿಂಚಿತ್ ಸ್ಫುಟತರವಾಗಿ ಉಚ್ಚರಿಸುವುದೇ ಮಾತ್ರಾ-ಬಂಧಗಳ ಪಠನವಿಧಾನ'ವೆಂಬ ಅವರ ಸಾರೋಕ್ತಿಗೆ ಯಾವ ಪ್ರತ್ಯವಾಯವೂ ಇಲ್ಲ. ಜೊತೆಗೆ 'ಕನ್ನಡಕ್ಕೆ ಯತಿ ಬೇಡವೆಂಬ ಮಾತಿನಲ್ಲಿ ಹುರುಳಿಲ್ಲ' ಎನ್ನುವ ಸೇಡಿಯಾಪು ಯತಿಮಾಹಾತ್ಮ್ಯದ ವಿಶ್ವರೂಪವನ್ನೇ ತೆರೆದಿಟ್ಟಿದ್ದಾರೆ. ಅಲ್ಲದೆ ಶ್ರುತಿಹಿತವೂ ರಸವ್ಯಂಜಕವೂ ಧ್ವನಿದೀಪ್ತವೂ ಆದ ಯತಿಭಂಗವು ವಸ್ತುತಃ ಯತಿಭಂಗವೇ ಅಲ್ಲ, ಅಲ್ಲಿರುವುದು ಕೇವಲ ಗಣವಿಕಲ್ಪ – ಗಣವಿಪರ್ಯಾಯ ಅಥವಾ ಯತಿಸ್ಥಾನವಿಕಲ್ಪವೆಂಬ ವಿವೇಕದ ನಿಲುವಂತೂ ತುಂಬ ಮನನೀಯ. ಅಲ್ಲದೆ ಇಂಥ ವಿಕಲ್ಪಗಳು ನಿಯಮದಷ್ಟು ನಿಯತವಾಗಬಾರದು; ಹಾಗಾದಲ್ಲಿ ಅದರ ಅರ್ಥವಂತಿಕೆ, ವ್ಯವಸ್ಥೆಗಳೇ ನಶಿಸುತ್ತವೆಂಬ ಎಚ್ಚರವೂ ಗಮನಾರ್ಹ. ಇಲ್ಲಿಯೂ ಪುನಃ ಸೇಡಿಯಾಪು ಅವರು ಧ್ವನಿಸ್ವರೂಪವೆಂದರೆ ಶ್ರುತಿಭೇದ, ಪರಿಮಾಣವೆಂದರೆ ಹ್ರಸ್ವ-ದೀರ್ಘ ಭೇದಗಳೆಂಬುದನ್ನರಿಯದೆ ಇವೆರಡೂ

ನಮ್ಮಲ್ಲಿ ಸಂಪೂರ್ಣ ವಿಭಿನ್ನಘಟಕಗಳೆಂಬುದನ್ನರಿಯದೆ ಆಂಗ್ಲಬಾಷೆಯಲ್ಲಿ ಇವೆರಡಕ್ಕಿರುವ ಸಾಪೇಕ್ಷತೆ ಮತ್ತು ಅಸ್ಪಷ್ಟತೆಗಳನ್ನು ಇಲ್ಲಿಯೂ ಆರೋಪಿಸಿ-ಕೊಂಡು ಗಣರೂಪವಿಕಲ್ಪಗಳ ಹೆಸರಿನಲ್ಲಿ ವಿಷಮಗಣನ್ಯಾಸ, ಮಾತ್ರಾಧಿಕ್ಯ ಹಾಗೂ ಮಾತ್ರಾನ್ಯೂನತೆಗಳನ್ನು ಸಮಬಂಧಗಳಲ್ಲಿ ಹೇರಿ ಹೊಲೆಗೆಡಿಸುತ್ತಿರುವ ಛಂದೋಮರ್ಮಕಿಂಪ್ರಜ್ಞರನ್ನು ಸೂಚ್ಯವಾಚ್ಯವಿಧಿಗಳಿಂದ ಅಧಟಿಸಿದ್ದಾರೆ.

ಕಡೆಯದಾಗಿ ಛಂದೋಧಾಟಿಯಲ್ಲಿ ಒದಗುವ ಸ್ವರಾವರೋಹಾರೋಹ-ಗಳು ರಾಗಸುಖವಲ್ಲ, ಅದೊಂದು ಸ್ಪಂದನಸುಖವೆಂಬ ಸೇಡಿಯಾಪು ಅವರ ನುಡಿಯಲ್ಲಿ ಛಂದಸ್ಸು ಮತ್ತು ಸಂಗೀತಗಳಿಗಿರುವ ಎಲ್ಲೆಗಳೂ ಸ್ಫುರಿಸಿವೆ. ಹೀಗೆ ಪ್ರತಿಯೊಂದು ಅಂಶದಿಂದಲೂ ಹೊಸತೊಂದು ಜಗತ್ತನ್ನೇ ನಮ್ಮ ಪಾಲಿಗೆ ನಿರ್ಮಿಸಿಕೊಟ್ಟು ಅದರ ಉನ್ನತಿ-ಉಚಿತತೆಗಳನ್ನೂ ಮನಗಾಣಿಸುವ ಶ್ರೀ ಸೇಡಿ-ಯಾಪು ಅವರು ಭಾರತೀಯಚ್ಛಂದಶಾಸ್ತ್ರಕ್ಕೆ ನೀಡಿದ ಕೊಡುಗೆಯು ಎಂದೆಂದೂ ಮಾಸದ ತವನಿಧಿ, ಧ್ರುವತೇಜ. ಆದುದರಿಂದ ಎಷ್ಟು ಹೇಳಿಯೂ ಮತ್ತೆ ಉಳಿದೇ ತೀರುವ ಅವರ ಉದಾರಯೋಗದಾನಕ್ಕೆ ಯಥಾಶಕ್ತಿ ಅಂಜಲಿಕರ್ಮವನ್ನಷ್ಟೇ ಸಲ್ಲಿಸಬಹುದು.

ಪಡುಗಣಲಿಂಗೆಣೆ ಕಾಣ್ಮೆಯ
ನಿಡುವಿನೊಳೆನೆ, ಬಲ್ಮೆಯಲ್ಲಿ ಗೊಮ್ಮಟನಂತೀ ।
ಸೆಡಿಯಾಪು ಕೃಷ್ಣ ಭಟ್ಟಂ
ಕಡವರಮಪ್ಪೆಮ್ಮ ನುಡಿಗಮೊರೆಗಲ್ ದಿಟದಿಂ ॥

ವಿ.ಸೂ:– ಶ್ರೀ ಸೇಡಿಯಾಪು ಅವರ ಛಂದಶ್ಚಿಂತನದ ಬಗೆಗಿನ ನನ್ನ ಮತ್ತಷ್ಟು ಅನಿಸಿಕೆ – ವಿವೃತಿಗಳಿಗಾಗಿ ಆಸಕ್ತರು 'ನಂದಾದೀವಿಗೆ' (ಛಂದೋವಿದ ಸೇಡಿಯಾಪು; ಪು.೮೩ – ೯೭) ಮತ್ತು 'ತುರಾಯಿ' (ಪಂಡಿತ ಪರಮೇಷ್ಠಿ ಶ್ರೀ ಸೇಡಿಯಾಪು; ಪು.೭೫ – ೮೪) ಎಂಬ ಎರಡು ಪುಸ್ತಕಗಳನ್ನು ಪರಾಂಬರಿಸ-ಬಹುದು. ಇವೆರಡರ ಸಂಪಾದಕರು ಪ್ರೊ ॥ ಎಂ. ರಾಮಚಂದ್ರ.*



* ಇಲ್ಲಿ ಹೇಳಿದ ಎರಡು ಲೇಖನಗಳೂ ಪ್ರಸ್ತುತ ಸಂಪುಟದಲ್ಲಿ ಸೇರಿವೆ. 'ಪಂಡಿತ ಪರಮೇಷ್ಠಿ ಸೇಡಿಯಾಪು' ಪ್ರಸ್ತಾವನಾವಿಭಾಗದಲ್ಲಿದೆ. 'ಛಂದೋವಿದ ಸೇಡಿಯಾಪು' – ಈ ಲೇಖನಕ್ಕೆ ಮುಂಚಿತವಾಗಿ ಇದೆ. ಈ ಲೇಖನಗಳಲ್ಲಿ ಒಂದಿಷ್ಟು ಪುನರುಕ್ತಿಯಿದ್ದರೂ ಇವು ವಿಶಿಷ್ಟವಾದ ಸೇಡಿಯಾಪು ಅವರ ಛಂದಸ್ಸಂಬಂಧಿಯಾದ ಚಿಂತನಗಳನ್ನು ವಿಶದಪಡಿಸುವುದರಿಂದ ಅವನ್ನು ಒಟ್ಟಿಗೆ ನೀಡಲಾಗಿದೆ. – ಸಂ.

೮

# ಛಂದೋಗತಿ – ಒಂದು ವೈಚಾರಿಕ ಕೃತಿ*

– ಪಾದೆಕಲ್ಲು ನರಸಿಂಹ ಭಟ್ಟ

'ಛಂದೋಗತಿ'ಯ ಒಳಗೆ ಪ್ರವೇಶಮಾಡಿದಾಗ ಮೂರು ಭಾಗಗಳು ಈ ಗ್ರಂಥದೊಳಗೆ ಕಾಣಿಸುತ್ತವೆ :

೧) ಮೊದಲ ಮೂರು ಪರಿಚ್ಛೇದಗಳು– ಇವುಗಳಲ್ಲಿ ಉದ್ದೇಶಿತವಾಗಿರುವುದು ಗ್ರಂಥದ ಪ್ರಧಾನಕಲ್ಪನೆಯಾದ ಗತಿತತ್ತ್ವದ ಬಗೆಗಿನ ಸಮಗ್ರ ಸ್ಪಷ್ಟನೆ. ಇಲ್ಲಿಯ ಸಾರಭೂತವಾದ ಅಂಶವೆಂದರೆ: ಬಹು ಮಂದಿಯಿಂದ 'ಗತಿ'ಗೆ ಬದಲಾಗಿ ಪ್ರಯುಕ್ತವಾಗುವ 'ಲಯ'ದ ಸ್ಪಷ್ಟನೆಯ ಮೂಲಕ ಗತಿ–ಲಯಗಳ ಪ್ರತ್ಯೇಕ ವ್ಯಾಪ್ತಿಯ ವಿವೇಚನೆ ಮತ್ತು ಸ್ಪಷ್ಟನೆ; ಇದಕ್ಕೆ ಪಾರ್ಶ್ವೀಯವಾಗಿ ಪಾಶ್ಚಾತ್ಯ ಗ್ರಹೀತಗಳ ಸಾರ್ವತ್ರಿಕ ಪರಿಣಾಮದ ನಿರೂಪಣೆ ಮತ್ತು ಆ ಬಗೆಗೆ ಆಕ್ಷೇಪ. ಒಟ್ಟಿನಲ್ಲಿ ಈ ಮೂರು ಪರಿಚ್ಛೇದಗಳ ವಸ್ತು ಗ್ರಂಥದ ಪ್ರಧಾನವಿಷಯವಾದ ಗತಿನಿರೂಪಣೆಗೆ ಬೇಕಾದ ತಳಹದಿಯ ಸ್ಥಾಪನೆ ಎನ್ನಬಹುದು.

೨) ಅನಂತರದ ಐದು ಪರಿಚ್ಛೇದಗಳು – ಈ ಭಾಗ ಗ್ರಂಥದ ಕೇಂದ್ರ ಎನ್ನಬಹುದು. ಇಲ್ಲಿ ಪ್ರತಿಪಾದಿತವಾಗುವ ವಿಷಯ ಛಂದಃಶಾಸ್ತ್ರೀಯ ಕಲ್ಪನೆ–ಯಾಗಿ ಬರುವ 'ಗತಿ'ಯ ಸ್ಪಷ್ಟ ಪರಿಚಯ. ಇದರ ಸಹಪ್ರತಿಪಾದನೆಯಾಗಿ ಪದ್ಯಬಂಧಗಳ ಗತ್ಯಾಧಾರಿತ ವರ್ಗೀಕರಣ ಮತ್ತು ಸಂಬಂಧಿತ ಸಂವೇದ್ಯಾಂಶ–ಗಳೂ ನಿರೂಪಿತವಾಗುತ್ತವೆ. ಇಲ್ಲಿ ಸೋದಾಹರಣವಾಗಿ ಲಕ್ಷಿಸಲ್ಪಡುವ ಸಮ–ಗತಿ–ವಿಷಮಗತಿಗಳೆಂಬ ಪದ್ಯಪ್ರಭೇದಗಳು ಮತ್ತು ಅವುಗಳ ಒಳಪ್ರಭೇದಗಳು ಗ್ರಂಥದ ಅತಿ ಮುಖ್ಯ ಅಂಶ.

೩) ಮೂರನೆಯ ಭಾಗವಾದ ಒಂಬತ್ತನೆಯ ಪರಿಚ್ಛೇದದಲ್ಲಿ ಸಂಸ್ಕೃತದಲ್ಲಿಯ ಲೌಕಿಕ–ವೈದಿಕ ಛಂದಸ್ಸುಗಳ ವಿವರಣೆ ಇದ್ದು ಕನ್ನಡ ಸಂಸ್ಕೃತಗಳನ್ನು

---

* ೧೯೭೨ರ ಫೆಬ್ರವರಿ ತಿಂಗಳ ೮ ಮತ್ತು ೯ನೇ ದಿನಾಂಕಗಳಲ್ಲಿ ಪುತ್ತೂರಿನಲ್ಲಿ ಪ್ರೊ. ಕು. ಶಿ. ಹರಿದಾಸ ಭಟ್ಟರ ಅಧ್ಯಕ್ಷತೆಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಜರಗಿದ್ದು ಅದರ 'ವಿಚಾರ ಸಾಹಿತ್ಯ ಗೋಷ್ಠಿ'ಯಲ್ಲಿ ಶ್ರೀ ಪಾದೆಕಲ್ಲು ನರಸಿಂಹ ಭಟ್ಟರು 'ಸೇಡಿಯಾಪು ಅವರ ವೈಚಾರಿಕ ಕೃತಿಗಳು' ಎಂಬ ವಿಷಯದಲ್ಲಿ ನೀಡಿದ ಉಪನ್ಯಾಸದಿಂದ ಉದ್ಧೃತ ಭಾಗ. ಇಡಿಯ ಉಪನ್ಯಾಸವು ೧೯೭೩ರಲ್ಲಿ ಪ್ರಕಟಗೊಂಡ ಸಮ್ಮೇಳನದ ಭಾಷಣಗಳು ಮತ್ತು ಪ್ರಬಂಧಗಳ ಸಂಪುಟವಾದ 'ಸ್ವಾಭಿಮಾನ' (ಪ್ರಕಾಶಕರು – ಸ್ವಾಗತಸಮಿತಿ, ದ. ಕ. ಜಿಲ್ಲಾ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಪುತ್ತೂರು, ೧೯೭೩) ಎಂಬ ಕೃತಿಯಲ್ಲಿ (ಪು. ೬೨ – ೬೮) ಪ್ರಕಟಗೊಂಡಿದೆ. – ಸಂ.

ಛಾಂದಸವಾಗಿ ಬೆಸೆಯಲಾಗಿದೆ. ಹೀಗೆ ಗ್ರಂಥದ ಮುಖ್ಯ ವಿಷಯವಾಗಿ 'ಗತಿ' ಎಂಬ ಒಂದು ನಿರ್ದಿಷ್ಟ ತತ್ತ್ವ ಸ್ವೀಕೃತವಾಗಿದ್ದು ಅದರ ಸ್ಪಷ್ಟನೆಯ ಸಂದರ್ಭದಲ್ಲಿ ಅದಕ್ಕೆ ಸಂಬಂಧಿಸಿದ, ಆದರೆ ಅದಕ್ಕಿಂತ ಸಂಪೂರ್ಣ ಭಿನ್ನವೂ ಆದ, 'ಲಯ' ಎಂಬ ತತ್ತ್ವದ ವಿವೇಚನೆಯೂ ಸಮಾಪಕವಾಗಿ ನಡೆಯುತ್ತದೆ.

ಗ್ರಂಥದ ವಿಷಯದಲ್ಲಿರುವಂತೆ ನಿರೂಪಣೆಯಲ್ಲಿಯೂ ಅನನ್ಯತೆ ಇದೆ. ತತ್ತ್ವಗಳ ವಿವೇಚನೆಯ ಸಂದರ್ಭದಲ್ಲಿ ಉಪಯೋಗಿಸಲಾದ ಗ್ರಂಥಗಳೂ ಮೂರು ಬಗೆಯವು: ೧) ಪ್ರಸಕ್ತ ಹಾಗೂ ಪೂರ್ವಯುಗದ ನಿಘಂಟುಗಳು ೨) ಛಂದಃಶಾಸ್ತ್ರೀಯ ಗ್ರಂಥಗಳು ೩) ಛಂದಃಶಾಸ್ತ್ರಪೂರಕವಾದ ಶಿಕ್ಷಾ-ಸಂಗೀತ ಶಾಸ್ತ್ರೀಯ ಗ್ರಂಥಗಳು. ನಿಘಂಟುಗಳ ಉಪಯೋಗ ಎಷ್ಟು ತಳಸ್ಪರ್ಶಿಯಾಗಿ ನಡೆದಿದೆ ಎಂದರೆ ನಿಘಂಟುಗಳ ಸಮರ್ಪಕತೆ-ಪರಿಮಿತಿಗಳೆರಡರ ಮೇಲೂ ಬೆಳಕು ಬೀಳುತ್ತದೆ. 'ಸಮರ್ಪಕವಾದ ನಿಘಂಟುಗಳು ಶಾಸ್ತ್ರಾರ್ಥವನ್ನು ಖಚಿತ-ಗೊಳಿಸುವಲ್ಲಿ ಬಾಹ್ಯ ಆಧಾರವಾಗಿ ನಿಲ್ಲಬಲ್ಲುವು; ಹಾಗೆಯೇ ಅಸಮರ್ಪಕ-ವಾದುವು ದಾರಿ ತಪ್ಪಿಸಬಲ್ಲವು' ಎಂಬ ಶೈಕ್ಷಣಿಕ ಸತ್ಯ ಈ ಗ್ರಂಥದ ಅಧ್ಯಯನ-ದಿಂದ ದೊರೆಯುವ ಒಂದು ಲಾಭ. ಪ್ರಸ್ತಾವಿಸಲಾದ ಛಂದೋಗ್ರಂಥಗಳು ಮೂಲ ಹಾಗೂ ವ್ಯಾಖ್ಯಾನಗಳ ರೂಪದಲ್ಲಿದ್ದು ಗ್ರಂಥಕಾರರಲ್ಲಿ ಕಾಲದೋಷ-ದಿಂದ ಮೂಡಿರಬಹುದಾದ ತಪ್ಪು ಕಲ್ಪನೆಗಳ ವಿವೇಚನೆಯ ಮೂಲಕ ಶಾಸ್ತ್ರಾ-ಧ್ಯಯನದ ಸ್ವರೂಪವನ್ನೇ ಬದಲಿಸಬಹುದಾದ ಸತ್ಯಗಳನ್ನು ಈ ಬರವಣಿಗೆಯಲ್ಲಿ ಹೊರತರಲಾಗಿದೆ. ಶಿಕ್ಷಾ-ಸಂಗೀತ ಗ್ರಂಥಗಳನ್ನು ಬಳಸಿದುದರ ಪರಿಣಾಮವಾಗಿ ಶಾಸ್ತ್ರಗಳ ಪರಸ್ಪರ ಪೂರಕತೆ ಮತ್ತು ವೇದಾಂಗ-ಉಪವೇದ ಸಂಬಂಧಿತ್ವದಂತಹ ಸಾರ್ವಕಾಲಿಕ ಮೌಲ್ಯದ ತಳಸ್ಪರ್ಶಿ ಅಂಗಗಳು ಹೊರಬಂದಿವೆ. ಸಂಗೀತ ಗ್ರಂಥಗಳನ್ನು ಉಪಯೋಗಿಸಿದುದರ ಪರಿಣಾಮವಾಗಿ ಛಂದಸ್ಸು ಭಾಷೆಯನ್ನು ಕೃತಕಗೊಳಿಸುವ ಕಟ್ಟುಪಾಡು ಎಂಬ ಭ್ರಾಂತಿ ತೊಲಗಿ ಅದಕ್ಕೂ ಸಂವೇದನೆಗೂ ಇರುವ ಸೂಕ್ಷ್ಮಸಂಬಂಧ ಹೊರಬಂದಿದೆ. ನಿರೂಪಣೆಯಲ್ಲಿಯ ಇನ್ನೊಂದು ಗಮನಾರ್ಹ ಅಂಶವೆಂದರೆ - ಉಪಯೋಗಿಸಲ್ಪಟ್ಟ ಗ್ರಂಥಗಳಲ್ಲಿ ಮತ್ತು ಉದಾಹರಣಗಳ ಆಯ್ಕೆಯಲ್ಲಿ ಕನ್ನಡ-ಸಂಸ್ಕೃತಗಳೆಂಬ ಭೇದ ಇಲ್ಲದಿರುವುದು. ಇದರಿಂದಲಾಗಿ ಈ ಎರಡು ಭಾಷೆಗಳೊಳಗೆ ಮೇಲ್ನೋಟಕ್ಕೆ ಕಾಣುವ ಪರಸ್ಪರ ಭಿನ್ನತೆಗಿಂತ ಸೂಕ್ಷ್ಮ ಐಕ್ಯವೇ ಹೆಚ್ಚು ಪರಿಣಾಮಕಾರಿ ಎಂಬ ಅಂಶ ಸ್ಪಷ್ಟವಾಗು-ತ್ತದೆ. ಉದಾಹರಣೆಗಳ ಸಮರ್ಪಕತೆ ಶಾಸ್ತ್ರೀಯ ವಿಷಯಗಳ ಸ್ಪಷ್ಟತೆಗೂ ಪರಿಪೂರ್ಣತೆಗೂ ಕಾರಣವಾಗಿದೆ. ಅಡಿಟಿಪ್ಪಣಿಗಳು ಸ್ವತಂತ್ರ ಪ್ರಬಂಧಗಳ ಗಾತ್ರವನ್ನೂ ಸ್ವಯಂಪೂರ್ಣತೆಯನ್ನೂ ಹೊಂದಿವೆ.

ಗ್ರಂಥದ ಮೂರು ಭಾಗಗಳ ಪೈಕಿ ಮೊದಲನೆಯದರಲ್ಲಿ ಲೇಖಕರು ಪಾಶ್ಚಾತ್ಯ - ಭಾರತೀಯ ಸಂಬಂಧದ ಕುರಿತು ಒಂದು ವಿಚಾರವನ್ನು ಮಂಡಿಸುತ್ತಾರೆ: ಈಗಿನ ಕಾಲದ ಛಂದಃಸಂಬಂಧಿ ಬರವಣಿಗೆಗಳಲ್ಲಿ 'ಗತಿ'

ಪದದ ಬದಲಿಗೆ 'ಲಯ' ಪದವನ್ನು ಬಳಸುವುದು ರೂಢಿಯಾಗಿ ಕಾಣಿಸುತ್ತದೆ; ಇದಕ್ಕೆ ಕಾರಣ ಪಾಶ್ಚಾತ್ಯರು ಭಾರತೀಯ – ಆಂಗ್ಲಪದಗಳನ್ನು ವಿನಿಮಯಿಸುವ ರೀತಿ. ಲೇಖಕರು ಅಭಿಪ್ರಾಯಪಡುವಂತೆ, ಭಾರತೀಯ ಶಾಸ್ತ್ರಗ್ರಂಥಗಳಲ್ಲಿನ ಪಾರಿಭಾಷಿಕ ಕಲ್ಪನೆಗಳ ಖಚಿತ ವ್ಯಾಪ್ತಿ ಹಾಳಾದುದು ಪಾಶ್ಚಾತ್ಯರ ಸಂಪರ್ಕವಾದ ಮೇಲೆಯೇ.

ಈ ನಿರ್ಣಯ ಎಷ್ಟರ ಮಟ್ಟಿಗೆ ಸಮಂಜಸ ಎಂದು ಪುನರ್ವಿಚಾರ ಮಾಡಬೇಕಾಗಿದೆ. ಯಾಕೆಂದರೆ, ಸಂಸ್ಕೃತಭಾಷೆಯಲ್ಲಾಗಲೀ ಆ ಭಾಷೆಯ ಗ್ರಂಥಗಳ ರೂಪದಲ್ಲಿ ಉಳಿದುಬಂದಿರುವ ಶಾಸ್ತ್ರಗಳಲ್ಲಾಗಲೀ ಎಷ್ಟೋ ಸಂದರ್ಭಗಳಲ್ಲಿ ಅರ್ಥಖಚಿತತೆ ಕಂಡುಬರುವುದಿಲ್ಲ. ಉದಾಹರಣೆಗೆ, ಕಾವ್ಯ ಮೀಮಾಂಸೆಯಲ್ಲಿ 'ಅಲಂಕಾರ' ಎಂಬ ಪರಿಭಾಷೆಗೆ ಕಾವ್ಯಸೌಂದರ್ಯ ಎನ್ನುವಷ್ಟು ವಿಶಾಲವಾದ ಅರ್ಥದ ಜೊತೆಯಲ್ಲಿಯೇ 'ಉಪಮೆ'ಯಂತಹ ಉಕ್ತಿ ವೈಚಿತ್ರ್ಯಗಳನ್ನು ನಿರ್ದೇಶಿಸುವ ಸಂಕುಚಿತ ಅರ್ಥವೂ ಇದೆ. ಕೆಲವೊಮ್ಮೆ ಈ ಅತಿವ್ಯಾಪ್ತಿ ಪರಸ್ಪರ ಅರ್ಥವಿರೋಧಗಳನ್ನೂ ಒಳಗೊಳ್ಳುವಷ್ಟು ಮುಂದು-ವರಿಯುತ್ತದೆ. ಉದಾಹರಣೆಗೆ, 'ರಾಕ್ಷಸ' ಎಂಬ ಅರ್ಥದಲ್ಲಿ 'ಪುಣ್ಯಜನ' ಎಂಬ ಪದವನ್ನು ಅಮರಕೋಶ ಹೇಳುತ್ತದೆ. 'ಅದ್ವೈತ' ಎಂಬ ಅರ್ಥದಲ್ಲಿ 'ದ್ವೈತ' ಎಂಬ ಪದ ಪ್ರಯುಕ್ತವಾದುದನ್ನು ವ್ಯಾಖ್ಯಾನಕಾರರು ಎತ್ತಿತೋರಿಸಿದ್ದಿದೆ. ಕಾವ್ಯ-ಮೀಮಾಂಸಾಗ್ರಂಥವೊಂದರಲ್ಲಿ 'ವಾಚ್ಯ' ಮತ್ತು 'ಪ್ರತೀಯಮಾನ'ಗಳೆಂದು ಅರ್ಥಸ್ತರಗಳನ್ನು ವಿವೇಚಿಸುವ ಸಂದರ್ಭದಲ್ಲಿಯೇ 'ವಾಚ್ಯ(ದ) ಪ್ರತೀತಿ' ಎಂದು ಪ್ರಯೋಗಿಸಿರುವುದು ಕಂಡುಬರುತ್ತದೆ. ಭಾಷಾಸಾಮಾನ್ಯದಲ್ಲಿಯೂ ಶಾಸ್ತ್ರಗ್ರಂಥಗಳಲ್ಲೂ ಕಂಡು ಬರುವ ಈ ಅತಿವ್ಯಾಪ್ತಿ ಗತಿ-ಲಯಗಳ ಸಂದರ್ಭ-ದಲ್ಲಿಯೂ ಕೆಲಸಮಾಡಿರಲಾರದೇ? ಎಂದು ಸಂಶಯಪಡಲು ಅವಕಾಶವಿದೆ. ಈ ಅಂಶವನ್ನು ಸೇಡಿಯಾಪು ಅವರ ಗಮನಕ್ಕೆ ತಂದಾಗ ಗತಿ-ಲಯಗಳ ಕುರಿತಾದ ಗೊಂದಲಕ್ಕೆ ಈ ವಿದ್ಯಮಾನ ಕಾರಣವಾಗಿಲ್ಲವೆಂದು ಖಂಡಿತವಾಗಿ ಹೇಳಬಹುದೆಂದೂ ಈ ಗೊಂದಲ ಪಾಶ್ಚಾತ್ಯ ಮೂಲವೇ ಎಂದೂ ಉತ್ತರಿಸಿದ್ದಾರೆ ಎಂದು ತಿಳಿದು ಬಂದಿದೆ.

ಪ್ರಸ್ತುತ ಸಮೀಕ್ಷೆಯ ದೃಷ್ಟಿಯಿಂದ ಒಂದು ಅತಿಮುಖ್ಯ ಅಂಶವಾಗಿ ಕಾಣುವುದು ಐದನೆಯ ಪರಿಚ್ಛೇದದಲ್ಲಿ ಬರುವ ಪಿಂಗಲಸೂತ್ರಗಳ ಮೌಲಿಕ ವಿವರಣೆ. ಛಂದೋಗ್ರಂಥಗಳಲ್ಲಿ ಪುರಾತನತಮವಾದ 'ಪಿಂಗಲ ಛಂದಃಸೂತ್ರ'ದ ಐದನೆಯ ಅಧ್ಯಾಯದ ಮೊದಲ ಒಂಬತ್ತು ಸೂತ್ರಗಳ ಪೈಕಿ ೬, ೭, ೮ನೆಯ-ವನ್ನು ಪಿಂಗಲವ್ಯಾಖ್ಯಾತೃವಾದ ಹಲಾಯುಧನೂ ಜಯದೇವಾದಿ ಛಂದೋ-ಗ್ರಂಥಕಾರರೂ ಹೇಗೆ ತಪ್ಪಾಗಿ (ಸಮವೃತ್ತವರ್ಗಕ್ಕೆ ಅನ್ವಯಿಸುವಂತಹವು ಎಂದು) ಅರ್ಥೈಸಿರುವರೆಂಬುದನ್ನು ಸೇಡಿಯಾಪು ಅವರು ತೋರಿಸಿಕೊಡುತ್ತಾರೆ. ವಸ್ತುತಃ ಈ ಸೂತ್ರಗಳು ಗತಿಭೇದದ ಮೇಲೆ ಮಾಡಬಹುದಾದ ವೃತ್ತವರ್ಗೀಕರಣಕ್ಕೆ

ಅನ್ವಯಿಸುವಂತಹವು ಎಂಬುದನ್ನು ಸಂದೇಹಕ್ಕೆ ಎಡೆ ಇಲ್ಲದಂತೆ ಸೇಡಿಯಾಪು ಅವರು ಸ್ಪಷ್ಟಪಡಿಸಿರುತ್ತಾರೆ. ಇಂತಹ ಪರಂಪರಾವಿಚ್ಛೇದ ಛಂದಃಶಾಸ್ತ್ರದಲ್ಲಿ ಮಾತ್ರವಲ್ಲ, ಇತರ ಶಾಸ್ತ್ರಗಳಲ್ಲೂ ಆಗಿದೆ ಎಂಬುದು ಮೌಲಿಕ ಅಧ್ಯಯನ ನಡೆಸಿದ ಶಾಸ್ತ್ರವಿದ್ಯಾರ್ಥಿಗಳಿಗೆಲ್ಲರಿಗೂ ಅರಿವಾಗುವ ವಿಚಾರ. ಉದಾಹರಣೆಗೆ, ನಾಟಕಲಕ್ಷಣಕಾರನಾದ ಭರತಮುನಿಯ ಕೆಲವು ಉಕ್ತಿಗಳಿಗೂ ಅನಂತರದವರಾದ ಧನಂಜಯನಂಥವರ ಉಕ್ತಿಗಳಿಗೂ ಇರುವ ಪರಸ್ಪರ ಭಿನ್ನತೆ ಇಂತಹ ವಿಚ್ಛೇದವನ್ನೇ ಎತ್ತಿ ತೋರಿಸುವಂತಹುದು. ಆದರೂ ಇಂದಿನ ಸಂಶೋಧಕರು ಈ ವಿದ್ಯಮಾನದ ಪರಿಣಾಮಕಾರಿತ್ವದ ಕಡೆಗೆ ಸಾಕಷ್ಟು ಗಮನ ಹರಿಸಿಲ್ಲ. ಸೇಡಿಯಾಪು ಅವರು ಈ ವಿಷಯದಲ್ಲಿ ಛಂದಃಶಾಸ್ತ್ರದ ವಿದ್ಯಾರ್ಥಿಗಳಿಗೆ ಮಾತ್ರವಲ್ಲ, ಎಲ್ಲಾ ಶಾಸ್ತ್ರಗಳ ವಿದ್ಯಾರ್ಥಿಗಳಿಗೂ ಮಾರ್ಗದರ್ಶಕರಾಗಿದ್ದಾರೆ ಎಂದು ನಿಃಸಂದೇಹವಾಗಿ ಹೇಳಬಹುದು.



೬

# ಪ್ರೌಢಚಿಂತನ ಗ್ರಂಥ – ಕನ್ನಡ ಛಂದಸ್ಸು*

– ಪ್ರೊ. ಅ. ರಾ. ಮಿತ್ರ

ಛಂದಶ್ಚಿಂತನೆಯ ರಂಗದಲ್ಲಿ ಕನ್ನಡಭಾಷೆಯಲ್ಲಿ ಅಗಾಧಪ್ರಮಾಣದ ಮತ್ತು ಅಷ್ಟೇ ಅಗಾಧಗುಣದ ಕೆಲಸ ನಡೆದಿದೆ. ಅನೇಕರು ವಿವರ ವಿವರವಾಗಿ ಈ ಕ್ಷೇತ್ರದ ಅಂಗಾಂಗಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಆದರೆ ಸೇಡಿಯಾಪು ಕೃಷ್ಣ ಭಟ್ಟರಂತೆ ಸಂಶೋಧನೆ ಮತ್ತು ಸ್ವೋಪಜ್ಞ ಚಿಂತನೆಗಳನ್ನು ಒಡಬೆರೆಸಿದ ಛಂದಸ್ತತ್ತ್ವಜ್ಞರು ವಿರಳ.

'ಕನ್ನಡ ಛಂದಸ್ಸು' ಒಂದು ಪ್ರೌಢಚಿಂತನ ಗ್ರಂಥ. ಶ್ರೀ ಸೇಡಿಯಾಪು ಅವರು ಸ್ವತಃ ಯಶಸ್ವೀ ಕವಿಗಳಾಗಿರುವುದರಿಂದ ಪದ್ಯಗಳ ಲಯನೃತ್ಯ ಅವರಿಗೆ ಪರಿಚಿತವಾದುದಾಗಿದೆ. ಹಲವಾರು ಭಾಷೆಗಳನ್ನು ಬಲ್ಲವರಾದುದರಿಂದ ಪದ-ಗತಿಗಳ ವಿಶಿಷ್ಟ ಸೌರಭವನ್ನು ಕಂಡುಕೊಳ್ಳುವ ಶಕ್ತಿ ಅವರಿಗೆ ಸಿದ್ಧಿಸಿದೆ. ಇಂಗ್ಲಿಷ್ ಸಂಸ್ಕೃತ ಕನ್ನಡ ಕಾವ್ಯಗಳ ಚಿಂತನಶೀಲ ಅಧ್ಯಯನದಿಂದ ಅವರ ಬೌದ್ಧಿಕ ಎಟಕು ಬೆರಗುಗೊಳಿಸುವಂತಿದೆ. ದ್ರಾವಿಡ ಛಂದಸ್ಸಿನ ವಿಶೇಷ ಪರಿಚಯ-ವಿರುವುದರಿಂದ ಕನ್ನಡದ ದೇಶೀಗಣಗಳನ್ನು ಬೇರೊಂದು ದಿಕ್ಕಿನಿಂದ ನೋಡುವ ಒಳನೋಟ ಅವರಿಗೆ ಸಿದ್ಧಿಸಿದೆ. ಅವರ 'ಕನ್ನಡ ಛಂದಸ್ಸು' ಗ್ರಂಥವನ್ನು ಪರಿಶೀಲಿಸುವಾಗ ಸೇಡಿಯಾಪು ಅವರ ಈ ಎಲ್ಲ ಸಕಾರಾತ್ಮಕ ತೇಜೋಂಶಗಳನ್ನು ಗಮನಿಸಬೇಕಾಗುತ್ತದೆ.

ಶ್ರೀ ಸೇಡಿಯಾಪು ಅವರ ಪದ್ಧತಿ ಎಂದರೆ ನೈಜವಿಜ್ಞಾನಿಗಳ ಪದ್ಧತಿ. ಒಂದು ಸಣ್ಣ ಸಂಗತಿಯ ಎಳೆಯನ್ನು ಹಿಡಿದು ಅವರು ಆ ಕ್ಷೇತ್ರದ ಎಲ್ಲ ಬೇರುಗಳನ್ನು ಹುಡುಕಿಕೊಳ್ಳುತ್ತಾರೆ, 'ಪಾಂಡಿ' ಎಂಬ ಒಂದು ಶಬ್ದದ ಎಳೆಯನ್ನು ಹಿಡಿದು ಅವರು ಭಾಷಾಶಾಸ್ತ್ರಲೋಕದಲ್ಲಿ ಎಲ್ಲೆಲ್ಲಿಗೆ ಪ್ರಯಾಣ ಮಾಡಿದ್ದಾ-ರೆಂಬುದನ್ನು ಅವರ ವಿದ್ವತ್ ಪ್ರಬಂಧವೊಂದು ತೋರಿಸಿಕೊಡುತ್ತದೆ. ಹಾಗೆಯೇ ಈ ಕನ್ನಡ ಛಂದಸ್ಸಿಗೆ ಪ್ರೇರಕವಾದದ್ದು ೧೯೨೭ರಲ್ಲಿ ಮಂಗಳೂರಿನಲ್ಲಿ ಕನ್ನಡ ವಿದ್ವಾಂಸರೊಬ್ಬರು ಪಿರಿಯಕ್ಕರದ ವಾಚನಮಾಡುವುದು ಹೇಗೆ ಎಂದು ವಾಚಿಸಿ ವಿವರಿಸಿದಾಗ ಸೇಡಿಯಾಪು ಅವರಿಗೆ ಅದು ವಾಚನದ ಧಾಟಿಯಲ್ಲ ಎನ್ನಿಸಿ-ತಂತೆ. ಈ ಹುಳುವನ್ನು ಅವರ ತಲೆಯಲ್ಲಿ ಬಿಟ್ಟುಕೊಂಡ ಸೇಡಿಯಾಪು ಅವರು 'ಕರ್ಣಾಟಕ ವಿಷಯಜಾತಿ' ಎಂದು ನಾಗವರ್ಮನು ಹೇಳುವ ಪದ್ಯರಾಶಿಯನ್ನೆಲ್ಲ

---

* ಸೇಡಿಯಾಪು ಸಂಸ್ಮರಣಗ್ರಂಥ 'ಶತಾಂಜಲಿ'(೨೦೦೨)ಯಲ್ಲಿ ಪ್ರಕಟಿತ ಲೇಖನ – ಸಂ.

ಕೆದಕಿದರು. ದಾಸರಪದಗಳಲ್ಲಿ, ಯಕ್ಷಗಾನಕೃತಿಗಳಲ್ಲಿ, ಸಾಂಗತ್ಯಕೃತಿಗಳಲ್ಲಿ ಬರುವ ಪದ್ಯಗಳ ವಾಚನಪದ್ಧತಿಯನ್ನು ಪಿರಿಯಕ್ಕರಕ್ಕೆ ವಿಸ್ತರಿಸಿದರು. ಇವೆಲ್ಲದರ ಫಲವಾಗಿ ೧೯೩೨ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಮಡಿಕೇರಿಯಲ್ಲಿ ನಡೆದಾಗ 'ಕನ್ನಡ ಛಂದಸ್ಸು' ಎಂಬ ವಿಷಯವಾಗಿ ಮಾಡಿದ ಉಪನ್ಯಾಸವೇ ಮುಂದೆ ಅದೇ ಹೆಸರಿನ ಗ್ರಂಥರೂಪದಲ್ಲಿ ಪ್ರಕಟವಾಯಿತು. ವಿದ್ವಜ್ಜನರ ಮನಸ್ಸು ತಮ್ಮ ಒಂದು ಕಾಲದ ಸಾಧನೆಗೆ ತೃಪ್ತಿಪಡುವಂಥದಲ್ಲವಾದ್ದರಿಂದ ಸೇಡಿಯಾಪು ಅವರು ೧೯೮೮ರಲ್ಲಿ ಈ ಗ್ರಂಥವನ್ನು ವಿಸ್ತಾರವಾಗಿ ಪರಿಷ್ಕರಿಸಿ ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತಂದರು. ಮೂಲಮುದ್ರಣಕ್ಕೆ ಹೆಚ್ಚು ತೊಂದರೆ ಕೊಡದೆ ಟಿಪ್ಪಣಿ ಮತ್ತು ಪರಿಶಿಷ್ಟಗಳ ರೂಪದಲ್ಲಿ ಅವರು ಸೇರಿಸಿರುವ ವಿಚಾರ-ಸಾಮಗ್ರಿಯನ್ನು ನೋಡಿದರೆ ಅವರ ಪರಿಷ್ಕಾರಪ್ರಿಯ ನವಚೇತನವನ್ನು ಕಂಡು ಆಶ್ಚರ್ಯಪಡುವಂತಾಗುತ್ತದೆ. ಸೇಡಿಯಾಪು ಅವರು ಛಂದೋವಿಚಾರಗಳಲ್ಲಿ ಲಯ, ಗತಿ, ಧಾಟಿಗಳ ಮೂಲಕ ಅಭಿವ್ಯಕ್ತಿಸುವುದು ಮುಖ್ಯವೆಂದೂ ಗಣ-ಗಣನೆಯ ಗಣಿತವೃತ್ತಿ ಮುಖ್ಯವಲ್ಲವೆಂದೂ ಪ್ರತಿಪಾದಿಸಿದ್ದು ಕನ್ನಡ ಛಂದ-ಶ್ಚಿಂತನೆಯಲ್ಲಿ ಹೊಸ ದಿಕ್ಕನ್ನು ಸೂಚಿಸಿದುದನ್ನು ಮರೆಯುವಂತಿಲ್ಲ. ನಾನಿಲ್ಲಿ ೧೯೮೮ರ ಪರಿಷ್ಕೃತ ಆವೃತ್ತಿಯನ್ನು ಇರಿಸಿಕೊಂಡು ವಿವೇಚಿಸುತ್ತಿದ್ದೇನೆ. ಮೂಲ ಲೇಖನದ ಗಾತ್ರದ ಎರಡರಷ್ಟು ಅನುಬಂಧ, ಪರಿಶಿಷ್ಟ, ಟಿಪ್ಪಣಿಗಳು ಈ ಮುದ್ರಣದಲ್ಲಿ ಸೇರಿಕೊಂಡಿದ್ದು ನಾನು ತಿಳಿದಮಟ್ಟಿಗೆ ಕನ್ನಡದ ಬೇರಾವ ಗ್ರಂಥವೂ ಈ ಪ್ರಮಾಣದಲ್ಲಿ ಪರಿಷ್ಕರಣಗೊಂಡು ಮುದ್ರಿತವಾಗಿಲ್ಲ. ಇದು ಕೇವಲ ದಾಖಲೆ ಮಾತ್ರವಾಗದೆ 'ಗುಣದರ್ಶನ'ದ ದೃಷ್ಟಿಯಿಂದಲೂ ಅದ್ವಿತೀ-ಯವಾಗಿದೆ. ಜಯಕೀರ್ತಿಯ ಛಂದೋನುಶಾಸನದಲ್ಲಿ ಬರುವ ಕರ್ನಾಟಕ ಛಂದೋರೂಪಗಳ ಬೆಳಕಿನಲ್ಲಿ ತಮ್ಮ ಮೂಲ ಚಿಂತನೆಯುನ್ನು ಪರಿಷ್ಕರಿಸಿದ್ದಾರೆ.

ಕನ್ನಡದಲ್ಲಿ ಸಂಸ್ಕೃತದ ಪ್ರವೇಶವಾದ ಮೇಲೆಯೇ ಕನ್ನಡ ಛಂದೋ-ರೂಪಗಳು ನಾಮನಿರ್ದೇಶನ ಪಡೆದಿದೆ ಎನ್ನುವ ಲೇಖಕರು ಅವೆಲ್ಲಕ್ಕೆ ಇರುವ ಸಂಸ್ಕೃತ ಹೆಸರುಗಳ ಉದಾಹರಣೆಯನ್ನು ಕೊಟ್ಟಿರುವುದು ಸಮಂಜಸವಾಗಿದೆ.

ಕನ್ನಡ ಛಂದಸ್ಸು ವಿಶಿಷ್ಟವಾದುದು. ಅದು ಸಂಸ್ಕೃತದ ಅಕ್ಷರಸಂಖ್ಯಾ-ನಿಯಮಕ್ಕೆ ಮತ್ತು ಸಂಸ್ಕೃತ ಪ್ರಾಕೃತಗಳ ಮಾತ್ರಾಸಂಖ್ಯಾನಿಯಮಕ್ಕೆ ಬಹಿ-ರ್ಭೂತವಾದುದು. ಉದಾಹರಣೆಗೆ ಸೇಡಿಯಾಪು ಅವರು ಕನ್ನಡ ಪದ್ಯಗಳಲ್ಲಿ ಆದಿಯ ಲಗೋಚ್ಚಾರ (ᴗ–) ಎಷ್ಟು ಅಪರಿಚಿತ ಎಂಬುದನ್ನು ತೋರಿಸಿಕೊಡು-ತ್ತಾರೆ. ಜಗಣಗಳು 'ಕನ್ನಡಜಾತಿ'ಗಳ ಜೀವವನ್ನೇ ಹೀರುವಂಥವಾಗಿವೆ ಎನ್ನುತ್ತಾರೆ. ಈ ನಿಯಮಕ್ಕೆ ಅಪವಾದವೇ ಇಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತಾರೆ. 'ಲಘುಪ್ರಥಮದ ಮೇಲಿನ ಗುರುನಿಷೇಧವು ಕನ್ನಡದ ಹುಟ್ಟುಗುಣ' ಎಂಬ ಅಂಶವನ್ನು ಕಂಡುಕೊಂಡಿರುವ ಲೇಖಕರು ತೆಂಕತಿಟ್ಟಿನ ಯಕ್ಷಗಾನದ ಹಾಡು-ಗಾರರ ವಾಚನವನ್ನು ಉದಾಹರಿಸಿ ತ್ರಿಮೂರ್ತಿಗಣಘಟಿತ ಪದ್ಯಗಳನ್ನು ಅದರ

ಪದಸ್ವರೂಪ ಮತ್ತು ಛಂದೋಗತಿ ಕೆಡದಂತೆ ಹಾಡುವುದು ಹೇಗೆ ಎಂದು ತೋರಿಸಿಕೊಟ್ಟಿದ್ದಾರೆ. ಅಕ್ಷರ ಎಂಬ ಶಬ್ದಕ್ಕೆ 'ವರ್ಣ' ಎಂಬ ಸಂಸ್ಕೃತದ ಅರ್ಥ-ವನ್ನು ಕೊಟ್ಟು ಅದಕ್ಕೆ ಹಾಡು ಎಂದೇ ಅರ್ಥ ಎಂಬುದಾಗಿ ನಿರ್ಣಯಿಸಿದ್ದಾರೆ. ಕನ್ನಡದ ಓದುಗಬ್ಬಗಳಿಗೆ 'ವರ್ಣಕ' ಎಂಬ ಹೆಸರಿರುವುದನ್ನು ನೆನಪಿಸಿ ಈ ರೂಢಿಯ ಪುರಾತನತ್ವವನ್ನು ತೋರಿಸಿಕೊಡುತ್ತಾರೆ. ಅಲ್ಲದೆ ನಮ್ಮ ತ್ರಿಮೂರ್ತಿ-ಗಣಗಳಲ್ಲಿ ವಿಷ್ಣುಗಣಗಳೇ ಪ್ರಧಾನವಾಗಿರುವುದನ್ನು ಗುರುತಿಸಿ ಅಪೂರ್ಣಖಂಡ-ಗಳಾಗುವ ಬ್ರಹ್ಮಗಣಗಳನ್ನು ಸೌಂದರ್ಯಾವಾಪ್ತಿಗಾಗಿ ಎಳೆದು ಓದಬೇಕೆಂಬ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ.

ಅನಂತರ ಸೇಡಿಯಾಪು ಅವರು ಸಹಜವಾಗಿ ಕನ್ನಡ ಛಂದಸ್ಸಿನ ಹೊಕ್ಕುಳ ಹುರಿ ಎಂದು ಪ್ರಸಿದ್ಧವಾಗಿರುವ ತ್ರಿಪದಿಯನ್ನು ಕುರಿತ ಪ್ರೌಢವ್ಯಾಖ್ಯಾನ ಮಾಡಿ-ದ್ದಾರೆ. ವಾಸ್ತವವಾಗಿ ಇದು ಮುಕ್ಕಾಲುವಾಡು ಆದರೂ ಕೆಲವರು ನಾಲ್ಕು ಪಾದಗಳ ರಚನೆ ಎಂದು ಏಕೆ ಕರೆದರು ಎಂಬ ಪ್ರಶ್ನೆಯನ್ನು ಎತ್ತಿ 'ಪದ್ಯಂ ಚತುಷ್ಪದಂ' ಎಂಬ ಶಾಸ್ತ್ರನಿಯಮವನ್ನು ಗುರುತಿಸಿದ್ದಾರೆ. ತ್ರಿಪದಿಯನ್ನು ಕುರಿತು ಕನ್ನಡದಲ್ಲಿ ಪ್ರ. ಗೋ. ಕುಲಕರ್ಣಿ, ಡಿ. ಎಲ್. ನರಸಿಂಹಾಚಾರ್, ತೀ.ನಂ.ಶ್ರೀ, ಎಂ. ಚಿದಾನಂದ ಮೂರ್ತಿ, ಎಂ. ಎಂ. ಕುಲಬುರ್ಗಿ, ಟಿ. ವಿ. ವೆಂಕಟಾಚಲ ಶಾಸ್ತ್ರೀ, ಡಿ. ಎಸ್. ಕರ್ಕಿ ಮೊದಲಾದ ವಿದ್ವಾಂಸರು ತಲಸ್ಪರ್ಶಿಯಾದ ಅಧ್ಯಯನ ಮಾಡಿರುವುದರಿಂದ ತೌಲನಿಕವಾಗಿ ನೋಡಿದರೆ ಸೇಡಿಯಾಪು ಅವರು ಪ್ರಾಸೋಲ್ಲಂಘನ, ಅಕ್ಷರಸ್ಖಾಲಿತ್ಯ, ಕಾವ್ಯಸೌಂದರ್ಯ, ತ್ರಿವಿಧಿ – ತ್ರಿಪದಿಗಳು ಮೂಲತಃ ಭಿನ್ನಲಕ್ಷಣದ ಛಂದೋರೂಪಗಳೆಂದು ಗುರುತಿಸುವಿಕೆ, (ತ್ರಿಪದಿ = ಕರ್ಷಣಯುಕ್ತವಾದ ತ್ರಿಮೂರ್ತಿ ಗಣಬಂಧ; ತ್ರಿವಿಧಿ = ವಿರಾಮಾವಕಾಶಗಳ ಹೊರತು ಬೇರೆಲ್ಲಿಯೂ ಕರ್ಷಣವಿರದ ಮಾತ್ರಾಬಂಧ) ತ್ರಿಪದಿಗಳ ಪಾಠ-ನಿರ್ಣಯ ಮೊದಲಾದ ಸಂಕೀರ್ಣ ನೆಲೆಗಳಲ್ಲಿ ಚಿಂತಿಸಿರುವುದನ್ನು ಕಾಣಬಹು-ದಾಗಿದೆ. ಸುಪ್ರಸಿದ್ಧ ತ್ರಿಪದಿ 'ಸಾಧುಗೆ ಸಾಧು ಮಾಧೂರ್ಯಂಗೆ .....' ಎಂಬ ಪದ್ಯವನ್ನು ಅವರು ತಿದ್ದಿರುವ ಪರಿಯಂತೂ ಅದ್ಭುತವೆನಿಸುತ್ತದೆ. ಕಪ್ಪೆ ಅರಭಟ್ಟನ ಈ ಶಾಸನ ಪದ್ಯವನ್ನು ಅವರು ಪರಿಷ್ಕರಿಸಿದ್ದು ಹೀಗಿದೆ:

> "ಸಾಧುಗೆ ಸಾಧು ಮಾಧೂರ್ಯಂಗೆ ಮಾಧೂರ್ಯನ್
> ಬಾಧಿಪ್ಪ ಕಲಿಗೆ ವಿಪರೀತನ್ । ಕಲಿಯುಗ
> ಮಾಧವನೀತನ್ ಪೆಱನಲ್ಲ."

ಇಲ್ಲಿ ಮಾಧೂರ್ಯವೇ ಸರಿ, ಮಧುರಗುಣಾತ್ಮಕ ಎಂಬ ಅರ್ಥ ಸರಿಯಲ್ಲ, ಧುರೀಣಾಗ್ರೇಸರ ಎಂಬರ್ಥವೇ ಸರಿ ಎಂದು ಸಕಾರಣವಾಗಿ ವಾದಿಸಿದ್ದಾರೆ. 'ಕಲಿಯುಗವಿಪರೀತನ್' ಎಂಬುದನ್ನು 'ಕಲಿಗೆ ವಿಪರೀತನ್' ಎಂದೂ, ಅನ್ವಯವನ್ನು 'ಕಲಿಯುಗ ಮಾಧವನ್' ಎಂದೂ ತಿದ್ದಿರುವುದು ಅವರ

ಗ್ರಂಥಸಂಪಾದನಪ್ರತಿಭೆಯನ್ನು ಮನಗಾಣಿಸುತ್ತದೆ. ತಮ್ಮ ಲೇಖನಗಳಲ್ಲಿ ಭಿನ್ನ ಶಿಸ್ತುಗಳನ್ನು ಒಳಹಾಯಿಸುವ ಲೇಖಕರ ಪ್ರತಿಭೆ ಮೆಚ್ಚಬೇಕಾದದ್ದು. "ವೀರಶೈವ ಕವಿಗಳು ತತ್ತ್ವಪ್ರತಿಪಾದನೆಗೆ ಎಂದರೆ ಅರ್ಥಪ್ರಧಾನವಾದ ನಿರೂಪಣೆಗೆ 'ತ್ರಿವಿಧಿ'ಗಳನ್ನು ಸೃಷ್ಟಿಸಿಕೊಂಡರು." ಎಂಬ ಅವರ ಮಾತು ಚರ್ಚೆಗೆ ಯೋಗ್ಯವಾಗಿದೆ.

ಕನ್ನಡದ ಪುಟ್ಟ ಛಂದಸ್ಸು ಏಳೆಯನ್ನು ವಿವರಿಸುತ್ತ ಸೇಡಿಯಾಪು ಅವರು ತ್ರಿಪದಿಯ ಎರಡನೆಯ ಪಾದವನ್ನು ತೆಗೆದುಹಾಕಿದರೆ ಉಳಿಯುವ ಪದ್ಯ-ಸ್ವರೂಪವನ್ನು ಏಳೆ ಎನ್ನುತ್ತಾರೆ. ಏಳೆಗಳೆರಡರ ಜೋಡಿಯಿಂದ ಸಾಂಗತ್ಯ ಅಥವಾ ಚರಿತೆ ಅಥವಾ ಸಂಗತಿಗಳು ಆವಿರ್ಭವಿಸಿದುವು ಎನ್ನುತ್ತಾರೆ. ಇದು ಚರ್ಚೆಗೆ ಗ್ರಾಸವಾಗುವ ವಿಷಯವೇ ಆಗಿದೆ. ಏಳೆಯಂಥ ಪ್ರಾಚೀನ ಕಿರುಛಂದಸ್ಸು ಮೊದಲೇ ಹುಟ್ಟಿತೆಂದೂ ಅದರಿಂದ ತ್ರಿಪದಿ ಬೆಳೆಯಿತೆಂದೂ ವಾದಿಸಲು ಇಲ್ಲಿ ಅವಕಾಶವಿದೆ ಎಂಬುದನ್ನು ಮರೆಯಬಾರದು. ಅನುಬಂಧದಲ್ಲಿರುವ 'ತ್ರಿಪದಿಯ ಲಕ್ಷಣ' ಒಂದು ಮೌಲಿಕ ಪ್ರಬಂಧವಾಗಿದೆ.

ಷಟ್ಪದಿಗಳ ವಿಷಯವಾಗಿ ಸೇಡಿಯಾಪು ಅವರ ವಿಚಾರಗಳು ಗಮನಾರ್ಹವಾಗಿವೆ. 'ಷಟ್ಪದ' ಎಂದು ನಮ್ಮ ಛಂದಸ್ತತ್ತ್ವಜ್ಞರು ಗುರುತಿಸಿರುವ ಮೂಲಷಟ್ಪದಿ ತ್ರಿಮೂರ್ತಿಗಣಮೂಲದಿಂದ ಬಂದದ್ದು. ಆದರೆ ಮುಂದೆ ಪ್ರಾಕೃತ ಭಾಷೆಯ ಸಂಸರ್ಗದಿಂದ ಕನ್ನಡಿಗರಿಗೆ ಮಾತ್ರಾಗಣಗಳ ಸದೃಢತೆ ವ್ಯಕ್ತವಾಗ-ತೊಡಗಿದ ಪರಿಣಾಮವಾಗಿ ಇವು ಮಾತ್ರಾಬಂಧಗಳಾದವು. ಶರಷಟ್ಪದಿಯಿಂದ ಕ್ರಮವಾಗಿ ಸಾಲಿಗೆ ೮, ೧೦, ೧೨, ೧೪, ೧೬ ಮತ್ತು ೨೦ ಈ ಅನುಕ್ರಮದಲ್ಲಿ ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನೀ ವಾರ್ಧಕಗಳು ಬಂದಿವೆಯಷ್ಟೇ. ಹೀಗೆ ಇವು ಮಾತ್ರೆಗಳ ಆಧಿಕ್ಯದೃಷ್ಟಿಯಿಂದ ರಚಿತವಾದ ಛಂದೋರೂಪಗಳು ಎಂಬ ವಾದವನ್ನು ಸೇಡಿಯಾಪು ಅವರು ಒಪ್ಪುವುದಿಲ್ಲ. ಅಕ್ಷರವೃತ್ತಗಳಲ್ಲಿ ಹೀಗೆ ಒಂದರಿಂದ ೨೬ರವರೆಗೆ ವಿಸ್ತರಿಸುವ ಪರಿಕ್ರಮವಿದೆಯೇ ಹೊರತು ಮಾತ್ರಾ-ಬಂಧಗಳಲ್ಲಿ ಈ ಕ್ರಮವಿಲ್ಲ ಎನ್ನುತ್ತಾರೆ. ಗಣಗಳ ದೃಷ್ಟಿಯಿಂದ ಈ ಷಟ್ಪದಿಗಳನ್ನು ಬೆಳೆಸಲಾಗಿದೆ ಎಂಬುದು ಅವರ ವಾದ.

ಕನ್ನಡದಲ್ಲಿ ಎಲ್ಲ ಛಂದಃಸಂಶೋಧಕರ ಗಮನವನ್ನು ಸೆಳೆದಿರುವ ಒಂದು ಛಂದೋರೂಪವೆಂದರೆ ರಗಳೆ. ಆದ್ದರಿಂದಲೇ ಸೇಡಿಯಾಪು ಅವರು ಈ ರಗಳೆಯನ್ನು ವಿಸ್ತಾರವಾದ ವ್ಯಾಖ್ಯೆಗೆ ಅಳವಡಿಸಿದ್ದಾರೆ. ಈ ರಗಳೆಯ ಮೂಲ 'ರಗಣ' ಎಂಬುದು ಅವರ ವಾದ. ರಘಟೆ ಎಂಬ ಶಬ್ದಕ್ಕೂ ಅವರು 'ರಗಣ ಘಟಿತವಾದ ಗೀತ' ಎಂದೇ ಅರ್ಥಮಾಡಿದ್ದಾರೆ. ಮೂಲತಃ ಎಲ್ಲ ರಗಣಬದ್ಧ, ಮುಂದೆ ರಗಣೇತರವಾದ ಇತರ ಮಾತ್ರಾಬಂಧಗಳು ಕೂಡ ಅದೇ ಹೆಸರನ್ನು ಬಳಸಿದುವು ಎಂಬುದು ಅವರ ಕಾಣ್ಕೆಯಾಗಿದೆ. ಉದಾಹರಣೆಗೆ ರಗಣೇತರವಾದ ಪಜ್ಝಟಿಕೆ, ಮಟ್ಟ, ತೋಮರ, ತ್ವರಿತ ರಗಳೆಗಳು ರಗಣಬಂಧಗಳನ್ನು ಹೋಲುವ

ಕಾರಣದಿಂದ ಆ ಹೆಸರನ್ನು ಪಡೆದಿವೆ ಎಂಬುದು. ಅವುಗಳ ಇತಿಹಾಸವನ್ನು ಬರೆಯುವವರು ಗಮನಿಸಬೇಕಾದ ಸಂಗತಿ ಇದು.

ಹಾಗೆಯೇ ಸಾಂಗತ್ಯದ ಬಗೆಗೆ ಚರ್ಚೆ ನಡೆಸುತ್ತ ಅಚಾನಕವಾಗಿ ಗೋವಿನ ಕಥೆಯ ಬಂಧವು ಸಾಂಗತ್ಯ ಮತ್ತು ಮಾತ್ರಾಗಣಬದ್ಧ ಷಟ್ಪದಿ ಇವೆರಡರ ಸಂಕರವಾಗಿದೆ ಎಂದು ಸೂಚಿಸಿದ್ದಾರೆ.

ಹಾಗೆಯೇ ಛಂದೋವತಂಸ, ಅಕ್ಕರಿಕೆ, ಗೀತಿಕೆ ಮೊದಲಾದ ವಿಶಿಷ್ಟ ಕನ್ನಡ ಛಂದೋರೂಪಗಳನ್ನು ಕುರಿತು ಅವರು ಪಠ್ಯ ಹಾಗೂ ಅನುಬಂಧಗಳಲ್ಲಿ ವಿಸ್ತಾರವಾಗಿ ಚರ್ಚಿಸಿದದ್ದಾರೆ. ಶುದ್ಧಕನ್ನಡ ಛಂದಸ್ಸುಗಳ ಚಿಂತನೆಗೆ ತಮ್ಮ ಗ್ರಂಥವನ್ನು ಮೀಸಲಾಗಿಟ್ಟವರುಗಳಲ್ಲಿ ಸೇಡಿಯಾಪು ಪ್ರಥಮರು.

ಛಂದಸ್ಸಿನ ಪರಿಭಾಷೆಗಳ ವಿಷಯವಾಗಿ ಕೂಡ ಸೇಡಿಯಾಪು ಅವರು ಮೌಲಿಕ ಚಿಂತನೆ ನಡೆಸಿದ್ದಾರೆ. ಉದಾಹರಣೆಗೆ 'ಯತಿ'ಯ ವಿಷಯವನ್ನು ತೆಗೆಕೊಳ್ಳಬಹುದು.

"ಯತಿಯೆಂಬುದು. . . ಉಸಿರ್ದಾಣಂ" – ಇದು ನಾಗವರ್ಮನ ಮಾತು. ಆದರೆ ಕವಿರಾಜಮಾರ್ಗಕಾರನು 'ಯತಿಯೆಂಬುದುಸಿರ್ವ ತಾಣಂ' ಎಂದು ಭಿನ್ನವಾಗಿ ಹೇಳಿದ್ದಾನೆ. ಮೊದಲನೆಯ ನಾಗವರ್ಮನ ಮಾತು. 'ವಿರಾಮೋ ಯತಿಃ, ಯತಿರ್ವಿಚ್ಛೇದಸಂಜ್ಞಿತಾ' ಎಂಬ ಮಾತುಗಳ ಅನುವಾದ–ದಂತಿದೆ. ಅಂದರೆ ಪದ್ಯವಾಚನದ ಸಂದರ್ಭದಲ್ಲಿ ಯತಿ ಎಂಬುದು ಉಸಿರು ನಿಲ್ಲಿಸಬೇಕಾದ ಅಥವಾ ನಿಲ್ಲಿಸಲು ಅವಕಾಶವುಳ್ಳ ಸ್ಥಾನ ಎಂಬರ್ಥ ಕನ್ನಡದಲ್ಲಿ ಪರಂಪರಾಗತವಾಗಿ ಬಂದಿದೆ. ಸೇಡಿಯಾಪು ಅವರ ಪ್ರಕಾರ ಕವಿರಾಜಮಾರ್ಗ–ಕಾರನ ಅಭಿಪ್ರಾಯ ಬೇರೆ. 'ಉಸಿರ್ವ' ಎಂದರೆ ಹೇಳುವ, ಖಚಿತಪಡಿಸುವ ನಿರ್ದಿಷ್ಟವಾದ ಜಾಗ ಎಂದರ್ಥವೇ ಹೊರತು ಉಸಿರು ತೆಗೆದುಕೊಳ್ಳುವ ಅಥವಾ ಬಿಡುವ ಎಂಬರ್ಥ ಇಲ್ಲಿ ಘಟಿಸುವುದೇ ಇಲ್ಲ. ಉಸಿರ್ ಎಂಬ ಹಳೆಗನ್ನಡದ ಕ್ರಿಯಾವಾಚಕವು ಹೇಳು ಎಂಬರ್ಥದಲ್ಲಿ ಮಾತ್ರ ಬಳಕೆಗೊಂಡಿದೆಯೇ ಹೊರತು 'ಉಸಿರುಬಿಡು' ಎಂಬರ್ಥದಲ್ಲಿ ಅಲ್ಲ ಎನ್ನುವಾಗ ಅವರ ಶಬ್ದಜ್ಞಾನದ ಮೌಲಿಕತೆ ಬೆರಗು ಹುಟ್ಟಿಸುತ್ತದೆ. ಅವರ ವಾದಕ್ಕೆ ಪುಷ್ಟಿ ತರುವ ಈ ಮಾತುಗಳನ್ನು ಗಮನಿಸಿ:

'......ಉಸಿರ್ವತಾಣಂ ಎಂಬ ಮಾತಿಗೆ 'ಉಸಿರುಬಿಡುವ ಅಥವಾ ಉಸಿರು ತೆಗೆದುಕೊಳ್ಳುವ ಸ್ಥಾನ' ಎಂದು ಅರ್ಥಮಾಡುವುದು ಸರಿಯಾಗು–ವಂತಿಲ್ಲ. ಆ ಮಾತಿಗೆ 'ಹೇಳುವ ಸ್ಥಾನ' ಎಂಬರ್ಥವನ್ನೇ ಮಾಡಬೇಕಾಗಿದೆ. ಯತಿಯೆಂಬುದು ಉಸಿರಾಡುವ ಸ್ಥಾನ ಎಂಬುದೇ ಕವಿರಾಜಮಾರ್ಗಕಾರನ ಆಶಯವಾಗಿರುತ್ತಿದ್ದರೆ 'ಯತಿಯೆಂಬುದುಸಿರ ತಾಣಂ' ಎಂದು ನೇರವಾಗಿ ಅವನು ಹೇಳಬಹುದಾಗಿತ್ತು.'

ಈ ಅಭಿಪ್ರಾಯವು ಮೌಲಿಕವಾಗಿದೆ. ಏಕೆಂದರೆ ನಾವು ಯತಿನಿರ್ದೇಶನ ಮಾಡುವಾಗ ಸ್ರಗ್ಧರಾವೃತ್ತದಲ್ಲಿ ಯತಿಯು ಏಳನೇ ಅಕ್ಷರದ ಮೇಲೆ, ಹದಿನಾಲ್ಕನೆಯ ಅಕ್ಷರದ ಮೇಲೆ ಮತ್ತು ಇಪ್ಪತ್ತೊಂದನೆಯ ಅಕ್ಷರದ ಮೇಲೆ ಬರುತ್ತದೆ ಎಂದು ಸ್ಪಷ್ಟವಾಗಿ ಸಂಖ್ಯಾನಿರ್ದೇಶ ಮಾಡಿ ಹೇಳುತ್ತೇವೆ. ಆದುದರಿಂದ ನಾವು ಗೊತ್ತುಪಡಿಸಿದ ಸ್ಥಾನದಲ್ಲಿ ಬರುವ ವಿರಾಮವೇ ಯತಿ. ಹೀಗಾಗಿ ಯತಿ ಎಂದರೆ ಶ್ವಸನಕ್ರಿಯಾಸ್ಥಾನವಲ್ಲ ಎಂದು ಅವರು ಸ್ಪಷ್ಟಪಡಿಸಿದ್ದಾರೆ. ಯತಿವಿವೇ-ಚನೆಯ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಅವರು ಕವಿರಾಜಮಾರ್ಗಕಾರನ ಹಾಗೂ ನಾಗವರ್ಮನ ಪದ್ಯಗಳಿಗೆ ಅರ್ಥ ಹಚ್ಚಿರುವ ರೀತಿ ಅದ್ಭುತವಾದದ್ದು. ಯತಿ ಶಬ್ದಕ್ಕೆ ಅವರು ಪ್ರಾಚೀನವಾದ ವಿಶ್ರಾಮಸ್ಥಾನ ಎಂಬರ್ಥವನ್ನು ಹೇಳು-ವುದಲ್ಲದೆ ಎರಡನೆಯದಾಗಿ ಪದವಿಚ್ಛೇದವನ್ನು ಗಮನಿಸಿ ಮೂರನೆಯದಾಗಿ 'ಪದಯತಿ' ಎಂಬ ಸೂಕ್ತ ನವನಾಮನಿರ್ದೇಶನವನ್ನೂ ಮಾಡಿದ್ದಾರೆ. ನಾಲ್ಕನೆಯದಾಗಿ 'ವಾಕ್ಯಯತಿ'ಯನ್ನೂ ಹೇಳಿದ್ದಾರೆ. ಈ ಸೂಕ್ಷ್ಮವ್ಯತ್ಯಾಸಗಳನ್ನು ಗಮನಿಸದೆ ಪದವಿಚ್ಛೇದವನ್ನು ಮಾತ್ರ ಯತಿ ಎಂದು ಕರೆಯುವ ಕೆಲವರು ಆಧುನಿಕ ವಿಮರ್ಶಕರುಗಳಿಂದ ಪದ್ಯದ 'ಗತಿ'ಗೂ 'ಯತಿ'ಗೂ ಇರಲೇಬೇಕಾದ ಸಂಬಂಧವು ಶಿಥಿಲಗೊಂಡಿದೆ ಎಂದು ಕೊರಗಿದ್ದಾರೆ. ಮುಂದೆ ಮಾತ್ರಾಗಣ-ಗಳಲ್ಲಿ ಈ ಯತಿಗೆ ನಿರ್ದಿಷ್ಟ ಪೂರ್ವನಿಶ್ಚಿತಸ್ಥಾನನಿರ್ದೇಶವಿಲ್ಲ ಎಂದು ಹೇಳಿದ್ದಾರೆ. ವಿರಾಮಸ್ಥಾನದಲ್ಲಿ ಹೊರತು ಬೇರೆಲ್ಲೂ ನಿಲ್ಲಿಸದೆ ತಾಳತಪ್ಪದೆ ವಾಚಿಸುವ ಪದ್ಧತಿಯನ್ನು ಮಾತ್ರಾಬಂಧಗಳಲ್ಲಿ ಗುರುತಿಸಿದ್ದಾರೆ. ಈ ವಿಧಾನವನ್ನು ಹಿಂದಿನ-ವರು 'ದಂಡಾಕಾರದಲ್ಲಿ ಓದುವುದು' ಎನ್ನುತ್ತಿದ್ದರಂತೆ! ಕನ್ನಡ ಛಂದೋರೂಪ-ಗಳಲ್ಲಿ ಸಾಮಾನ್ಯವಾಗಿ ಶಬ್ದಾಂತಗಳೇ ಯತಿಯ ಕಾರ್ಯವನ್ನು ನಿರ್ವಹಿಸುವು-ದರಿಂದ 'ಕನ್ನಡಕೆ ಯತಿಯಿಲ್ಲ – ಕೋಣನಿಗೆ ಮತಿಯಿಲ್ಲ' ಎಂಬ ಗಾದೆ ಸಾರ್ಥಕವಾಗಿದೆ. ಯತಿಭಂಗದೋಷಗಳು ಕಾವ್ಯವಾಚನದ ಸಲೀಲತೆಗೆ ಹೇಗೆ ತೊಡರುಗಾಲು ಹಾಕುತ್ತವೆಂಬುದನ್ನು ಸೇಡಿಯಾಪು ಅವರು ಹಲವಾರು ಸುಂದರ ನಿದರ್ಶನಗಳಿಂದ ಸ್ಪಷ್ಟಪಡಿಸಿದ್ದಾರೆ. "ಒಂದು ಛಂದೋರೂಪವು ಪದ್ಯವೆನ್ನಿಸಿ-ಕೊಳ್ಳಬೇಕಾದರೆ ಅದೊಂದು ಸಾರ್ಥಕಪದಸಮುದಾಯ ಅರ್ಥಾತ್ ವಾಕ್ಯ-ರೂಪವಾಗಿರಬೇಕಾಗುತ್ತದೆ. ಆ ವಾಕ್ಯದಲ್ಲಿ ಕಾಣಿಸಿಕೊಳ್ಳುವ ಪದಗಳೊಳಗೆ ಪರಿಮಾಣಸಾಮ್ಯವು ಸರ್ವತ್ರ ಇರುವುದು ಶಕ್ಯವಲ್ಲ, ಆದರೂ ಆ ಪದಗಳಿಗೂ ಛಂದೋಗತಿಯ ಅವಯವಗಳಾದ ಗಣಗಳಿಗೂ ಒಂದು ಬಗೆಯ ಮೈತ್ರಿ ಇರುವುದು ಅವಶ್ಯವಾಗಿರುತ್ತದೆ. (ಗಣಾಂತದಲ್ಲಿ ಪದಪೂರ್ತಿ ಆಗಿರುವಾಗ ಮೈತ್ರಿಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಲ್ಲಿ ಅದು ಸ್ವತಃಸಿದ್ಧ.) ಈ ಮೈತ್ರಿ ಎಲ್ಲಿ ಇಲ್ಲವೋ ಅಲ್ಲಿ ಯತಿಭಂಗವೆಂಬ ದೋಷವು ತಲೆಯೆತ್ತುತ್ತದೆ...."

ಯಾವ ವಿದ್ವಾಂಸರ ಹೆಸರನ್ನೂ ಹೇಳದೆ ಅವರು ಹೇಳಿರುವ ವಿಷಯವನ್ನು ಮಾತ್ರ ವಸ್ತುನಿಷ್ಠ ವಿಮರ್ಶೆಗೆ ಒಳಪಡಿಸುವುದು ಶ್ರೀ ಸೇಡಿಯಾಪು

ಅವರ ಪದ್ಧತಿ. ಅವರ ದೃಷ್ಟಿಯಲ್ಲಿ ತೇಲುವ ವಿಚಾರಗಳು ಮುಖ್ಯವೇ ಹೊರತು ಹೇಳಿದವರಾರು ಎಂಬ ಸಂಗತಿಯಲ್ಲ. ಈ ವಿದ್ವತ್ಸಂಪ್ರದಾಯದ ಆಚಾರ್ಯರೂ ಸೇಡಿಯಾಪು ಅವರೇ. ಎರಡನೆಯದಾಗಿ ಅವರು ಒಂದು ವಿಷಯವನ್ನು ಪ್ರತಿಪಾದಿಸಿದಾಗ ಅದರ ಸುತ್ತ ಇರುವ ಅಭಿಪ್ರಾಯವಲಯಗಳನ್ನು ಖಚಿತವಾಗಿ ಗುರುತಿಸುವ ಶಕ್ತಿ ಅವರಿಗಿದೆ. ಉದಾಹರಣೆಗೆ ಅವರು ತ್ರಿಪದಿ – ಏಳೆಗಳಲ್ಲಿ ಯಾವುದು ಮೂಲ ಎಂಬ ಚರ್ಚೆಯನ್ನು ಎತ್ತಿಕೊಂಡು ತ್ರಿಪದಿಯೇ ಮೂಲ ಎನ್ನುತ್ತಾರೆ. ಅವರು ವೈಜ್ಞಾನಿಕವಾಗಿ ವಿಷಯವನ್ನು ಕೆದಕುವ ಬಗೆಗೆ ಈ ಚರ್ಚೆಯನ್ನೇ ಉದಾಹರಣೆಗೆ ತೆಗೆದುಕೊಳ್ಳಬಹುದು. ಅವರೆನ್ನುತ್ತಾರೆ: "ನಮಗೆ ಈ ವರೆಗೆ ದೊರೆತಿರುವ ಕನ್ನಡಜಾತಿ ಛಂದೋಬಂಧಗಳಲ್ಲಿ ತ್ರಿಪದಿ ಅತಿ ಪುರಾತನವೆನ್ನುವುದಕ್ಕೆ ಶಾಸನದ ದಾಖಲೆ ಇದೆ. ಏಳೆಯೂ ತ್ರಿಪದಿಯೂ ಏಕೋದರಬಂಧಗಳಾಗಿದ್ದು ಇವುಗಳೊಳಗೆ ಏಳೆ ಕಿರಿದಾಗಿರುವುದರಿಂದ, ತ್ರಿಪದಿ-ಗಿಂತ ಏಳೆಯೇ ಪುರಾತನ ಬಂಧವೆಂದು ಕೆಲವರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಕಿರಿದೆಂಬುದರಿಂದ ಮಾತ್ರ ಅದು ಪ್ರಾಚೀನತರವೆಂದು ಹೇಳುವುದಾದರೆ, ಅಕ್ಕರಜಾತಿಯೊಳಗಣ ಕಿರಿಯಕ್ಕರವೇ ಪ್ರಾಚೀನತಮವೆಂದೂ ಪಿರಿಯಕ್ಕರವು ಅವುಗಳೊಳಗೆ ಅತ್ಯಾಧುನಿಕವೆಂದೂ ಹೇಳುವ ಪ್ರಸಂಗ ಉದ್ಭೂತ-ವಾಗುತ್ತದೆ. ಅದಕ್ಕೆ ಪ್ರಮಾಣವೆಲ್ಲಿದೆ? ಆದ ಕಾರಣ ಏಳೆ ಪೂರ್ವತರವೋ ತ್ರಿಪದಿ ಪೂರ್ವತರವೋ ಎಂಬುದನ್ನು ನಿರ್ಧರಿಸುವುದಕ್ಕೆ ತೃಪ್ತಿಕರವಾದ ಸಾಧನವು ಉಪಲಬ್ಧವಾಗಿಲ್ಲವೆಂದು ಹೇಳುವುದೇ ಸೂಕ್ತ...." ಸುಷ್ಠುವಾದ, ನಿರ್ಮತ್ಸರದ, ನಿರ್ದುಷ್ಟವಾದ ಸತ್ಯೈಕನಿಷ್ಠವಾದ ಬರವಣಿಗೆ ಎಂದರೆ ಇದೇ ಅಲ್ಲವೆ?

ನಾನು ಕೆಲವು ವಿಚಾರಗಳನ್ನು ಸ್ಥೂಲವಾಗಿ ಚರ್ಚಿಸಿ ಸೇಡಿಯಾಪು ಕೃಷ್ಣ ಭಟ್ಟರ ಚಿಂತನೆಯ ದಿಕ್ಕನ್ನು ಪರಿಚಯಮಾಡಿಕೊಡಲು ಪ್ರಯತ್ನಿಸಿದ್ದೇನೆ. 'ಕನ್ನಡ ಛಂದಸ್ಸು' ಗ್ರಂಥದ ೧೯೮೮ನೇ ವರ್ಷದ ಪರಿಷ್ಕೃತ ಮುದ್ರಣದಲ್ಲಿ ಗಮನಿಸಬೇಕಾದ ಕೆಲವು ಸಂಗತಿಗಳಿವೆ. ಲೇಖಕರು ತುಂಬ ಗಂಭೀರ ಚಿಂತಕರಾಗಿರುವುದರಿಂದ ಅಕ್ಯಾಡೆಮಿಕ್ ಚಿಂತನಪದ್ಧತಿ ಅವರಲ್ಲಿಲ್ಲ. ಅವರಿವರ ತಪ್ಪುಗಳನ್ನಿರಲಿ ತಾವು ಹಿಂದೆ ಮಾಡಿದ್ದ ತಪ್ಪುಗಳನ್ನು ಕೂಡ ಅವರು ಕಟುಟೀಕೆಗೆ ಒಳಪಡಿಸುವ ಪ್ರಾಂಜಲಮನಸ್ಕರು! ಅವರು ಛಂದಸ್ಸಿನ ಪರಿಭಾಷೆಗೆ ಒಂದು ದೊಡ್ಡ ಕೊಡುಗೆಯನ್ನು ಕೊಡಬಲ್ಲಷ್ಟು ವಿಪುಲವಾಗಿ ಶಬ್ದಕೃಷಿ ಮಾಡಿದ್ದಾರೆ. ಅವರ ಅಧ್ಯಯನದ ಹರಹು, ಸ್ಮೃತಿ, ಸತ್ತ್ವ ಮತ್ತು ತರ್ಕಬದ್ಧ ವಿಚಾರಸರಣಿ ಅನುಸರಣಯೋಗ್ಯವಾದವು. ಛಂದಸ್ಸಿನ ಕಡಲ ತೀರದ ಗುಂಟ ಯಾರಾದರೂ ಸಾಗಿದರೆ ಅವರಿಗೆ ಸೇಡಿಯಾಪು ಅವರ ವೈಚಾರಿಕ ಹೆಜ್ಜೆಗಳ ಗುರುತು ಸ್ಪಷ್ಟವಾಗಿ ಗೋಚರಿಸುತ್ತದೆ.



# ಸೂಚಿ ೧

# ಶೀರ್ಷಿಕೆ ಉಪಶೀರ್ಷಿಕೆಗಳ ಸೂಚಿ

ಸೇಡಿಯಾಪು ಅವರು ತಮ್ಮ ಎರಡೂ ಛಂದೋಗ್ರಂಥಗಳಲ್ಲಿ ಶೀರ್ಷಿಕೆ-ಉಪಶೀರ್ಷಿಕೆಗಳನ್ನು ಬಳಸಿಲ್ಲ. 'ಛಂದೋಗತಿ'ಯಲ್ಲಿ ಮಾತ್ರ ಪರಿವಿಡಿಯಲ್ಲಿ ಪರಿಚ್ಛೇದ ಶೀರ್ಷಿಕೆಗಳನ್ನು ನೀಡಿದ್ದಾರೆ. ಪ್ರಸ್ತುತ ಸಂಪುಟದಲ್ಲಿ ಆ ಶೀರ್ಷಿಕೆಗಳನ್ನು ಆಯಾ ಪರಿಚ್ಛೇದಗಳ ಮೊದಲಿಗೇ ಹಾಕಿದ್ದು ಅವಶ್ಯವಿದ್ದಲ್ಲೆಲ್ಲ ಉಪಶೀರ್ಷಿಕೆಗಳನ್ನು ಸಂಪಾದಕೀಯ ನೆಲೆಯಲ್ಲಿ ನೀಡಲಾಗಿದೆ (ನೋಡಿರಿ: ಪ್ರಸ್ತಾವನೆ, ಪು. 16–17). ಆ ಶೀರ್ಷಿಕೆ ಉಪಶೀರ್ಷಿಕೆಗಳನ್ನು ಅಕಾರಾದಿಕ್ರಮದಲ್ಲಿ ಇಲ್ಲಿ ಜೋಡಿಸಿ ಕೊಡಲಾಗಿದೆ. ಟಿಪ್ಪಣಿಗಳಲ್ಲಿರುವ ಉಪಶೀರ್ಷಿಕೆಗಳಿಗೆ ಪುಟಸಂಖ್ಯೆಯ ಮೊದಲಿಗೆ (ಟಿ) ಎಂಬ ಸಂಕೇತವನ್ನು ನೀಡಲಾಗಿದೆ. ಗ್ರಂಥದೊಳಗೆ ಬೇಕಾದ ವಿಷಯವನ್ನು ಶೀಘ್ರವಾಗಿ ಹುಡುಕಿಕೊಳ್ಳಲು ಈ ಸೂಚಿಯು ಅನುಕೂಲವೊದಗಿಸುತ್ತದೆ. ಉಪಕ್ರಮವಿಭಾಗ ಮತ್ತು ಪೂರಕವಿಚಾರವಿಭಾಗದ ಶೀರ್ಷಿಕೆಗಳನ್ನು ಸೂಚಿಯಲ್ಲಿ ಸೇರಿಸಿಲ್ಲ. ಸೇಡಿಯಾಪು ಅವರೇ ನೀಡಿದ ಪರಿಚ್ಛೇದಶೀರ್ಷಿಕೆಗಳನ್ನು ಮತ್ತು ಅನುಬಂಧ ಲೇಖನಗಳ ಶೀರ್ಷಿಕೆಗಳನ್ನು ದಪ್ಪ ಅಕ್ಷರಗಳಲ್ಲಿ ನೀಡಲಾಗಿದೆ. – ಸಂ.

***

# ಸೂಚಿ ೨

# ಉಲ್ಲೇಖಿಸಿದ ಗ್ರಂಥನಾಮಗಳ ಸೂಚಿ

ಸೇಡಿಯಾಪು ಅವರು ಎರಡು ಛಂದೋಗ್ರಂಥಗಳಲ್ಲಿ (ಗ್ರಂಥದ ಕಾಂಡಭಾಗದಲ್ಲಿ ಮತ್ತು ಟಿಪ್ಪಣಿಗಳಲ್ಲಿ) ಉದ್ಧರಿಸಿದ, ಆಧರಿಸಿದ, ಉಲ್ಲೇಖಿಸಿದ ವಿವಿಧ ಗ್ರಂಥಗಳ ಹೆಸರು-ಗಳನ್ನೂ ಅವು ಕಾಣಿಸಿಕೊಳ್ಳುವ ಪುಟಗಳ ಸಂಖ್ಯೆಗಳನ್ನೂ ಈ ಸೂಚಿಯಲ್ಲಿ ನೀಡಲಾಗಿದೆ. 'ಛಂದೋಗತಿ' ಮತ್ತು 'ಕನ್ನಡ ಛಂದಸ್ಸು' ಕೃತಿಗಳಲ್ಲಿ (ಪ್ರಸ್ತುತ ಸಂಪುಟದಲ್ಲಿ 'ಛಂದೋಗತಿ ವಿಭಾಗ' ಮತ್ತು 'ಕನ್ನಡಛಂದೋವಿಭಾಗ' – ಎಂಬೆರಡು ಖಂಡಗಳಲ್ಲಿ) ಉಲ್ಲೇಖಿಸಲಾದ ಕೃತಿಗಳನ್ನು ಮಾತ್ರ ಈ ಸೂಚಿಯಲ್ಲಿ ಸೇರಿಸಿದ್ದು 'ಉಪಕ್ರಮವಿಭಾಗ' ಮತ್ತು 'ಪೂರಕವಿಚಾರ-ವಿಭಾಗ'ಗಳಲ್ಲಿ ಉಲ್ಲೇಖಿಸಿದ ಕೃತಿಗಳನ್ನು ಇಲ್ಲಿ ಸೇರಿಸಿಲ್ಲ. 'ಛಂದೋಗತಿವಿಭಾಗ' ತೊಡಗಿ-ದೊಡನೆ 'ಈ ಕೃತಿಯಲ್ಲಿ ನಿರ್ದಿಷ್ಟವಾಗಿರುವ ಗ್ರಂಥಾದಿಗಳ ನಾಮಾವಳಿ' ಎಂಬ ಹೆಸರಿನಲ್ಲಿ ಒಂದು ಸೂಚಿಯಿದೆ. ಇದು ಛಂದೋಗತಿಯ ಪ್ರಥಮಮುದ್ರಣದಲ್ಲಿ ದಿ. ಸೇಡಿಯಾಪು ಕೃಷ್ಣ ಭಟ್ಟರೇ ಸಿದ್ಧಪಡಿಸಿದ ಸೂಚಿಯಾಗಿದ್ದು ಈ ಸೂಚಿ ಹೆಸರುಗಳನ್ನು ಮಾತ್ರ ಹೊಂದಿದೆ; ಪುಟಗಳ ಸಂಖ್ಯೆಗಳನ್ನು ಇದರಲ್ಲಿ ನಿರ್ದೇಶಿಸಲಾಗಿಲ್ಲ. ಮತ್ತು ಇದು ಅಕಾರಾದಿಯಾಗಿ ಜೋಡಿಸಲ್ಪಟ್ಟಿಲ್ಲ. ಆದರೂ ಮೂಲದಲ್ಲಿದ್ದ ಪಟ್ಟಿಯಾದುದರಿಂದ ಇದನ್ನು 'ಛಂದೋಗತಿ' ಕೃತಿಪ್ರಾರಂಭಕ್ಕೆ ಮೊದಲು (ಪು. 48–50) ಪ್ರಸ್ತುತ ಸಂಪುಟದಲ್ಲಿ ಮುದ್ರಿಸಿದೆ. (ಸೇಡಿಯಾಪು ಅವರು ಕೆಲವೆಡೆಗಳಲ್ಲಿ ಛಂದೋವಿಷಯಕವಾಗಿ ವಿವರಗಳಿಗಾಗಿ ತಮ್ಮದೇ ಬೇರೆ ಲೇಖನ-ವನ್ನು ಅಥವಾ ಕೃತಿಯನ್ನು ನೋಡುವಂತೆ ಅಲ್ಲಲ್ಲಿ ಸೂಚಿಸಿದ್ದುಂಟು. ಕೆಲವೆಡೆ ತಮ್ಮದೇ ರಚನೆಗಳನ್ನು ಉದಾಹರಣೆಗಾಗಿ ಎತ್ತಿಕೊಟ್ಟುದುಂಟು. ಅಂತಹವನ್ನೂ ಈ ಸೂಚಿಯಲ್ಲಿ ಸೇರಿಸಿದೆ.) – ಸಂ.

***

## ಸೂಚಿ ೩

# ಉಲ್ಲೇಖಿಸಿದ ವ್ಯಕ್ತಿನಾಮಸೂಚಿ

ಸೇಡಿಯಾಪು ಅವರು ಎರಡೂ ಛಂದೋಗ್ರಂಥಗಳಲ್ಲಿ ಉಲ್ಲೇಖಿಸಿದ ವಿವಿಧ ಗ್ರಂಥಕಾರರು, ಶಾಸ್ತ್ರಜ್ಞರು ಮತ್ತು ಇತರರ ಹೆಸರುಗಳ ಸೂಚಿಯನ್ನು ಇಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪುಟದ ಪು. 53ರಿಂದ 444ರ ವರೆಗಿನ ('ಛಂದೋಗತಿ ವಿಭಾಗ' ಮತ್ತು 'ಕನ್ನಡ ಛಂದೋವಿಭಾಗ' – ಎಂಬ ಎರಡು ಖಂಡಗಳಲ್ಲಿರುವ) ವ್ಯಕ್ತಿನಾಮಗಳನ್ನು ಅಕಾರಾದಿ-ಯಾಗಿ ನೀಡಿ ಹೆಸರಿನ ಮುಂದೆ ಹಾಗೆ ಉಲ್ಲೇಖಿಸಲಾದ ಪುಟಸಂಖ್ಯೆಗಳನ್ನೂ ನೀಡಲಾಗಿದೆ. – ಸಂ.

***

# ಸೂಚಿ ೪

# ಸೂತ್ರ, ಸೂತ್ರಾತ್ಮಕ ವಾಕ್ಯಸೂಚಿ

ಸೇಡಿಯಾಪು ಅವರು ಉದ್ಧರಿಸಿದ (ಸಂಸ್ಕೃತ, ಕನ್ನಡ ಮತ್ತಿತರ) ಸೂತ್ರಗಳು ಮತ್ತು ಸೂತ್ರಾತ್ಮಕ ವಾಕ್ಯಗಳನ್ನು ಈ ಸೂಚಿಯಲ್ಲಿ ಅಕಾರಾದಿಕ್ರಮದಲ್ಲಿ ನೀಡಲಾಗಿದೆ. ಇಡಿಯ ಪದ್ಯ, ಶ್ಲೋಕ ಇತ್ಯಾದಿಗಳನ್ನು ಬೇರೆ ಸೂಚಿಯಲ್ಲಿ ನೀಡಿದ್ದು ಆವಶ್ಯಕವಾದ ಸೂತ್ರರೂಪದ ತುಣುಕುಗಳನ್ನು ಮಾತ್ರ ಉದ್ಧರಿಸಿದ್ದಲ್ಲಿ ಅವುಗಳನ್ನು ಈ ಸೂಚಿಯಲ್ಲಿ ಸೇರಿಸಿಕೊಂಡಿದೆ.– ಸಂ.

***

## ಸೂಚಿ ೫

# ಛಂದೋಬಂಧಸೂಚಿ

ಈ ಸೂಚಿಯಲ್ಲಿ ಸೇಡಿಯಾಪು ಅವರು ಹೆಸರಿಸಿದ, ಉದ್ಧರಿಸಿದ, ಲಕ್ಷಣ ನಿರೂಪಣೆ ಮಾಡಿದ ಉದಾಹರಿಸಿದ ಮತ್ತು ಗತಿವಿಶ್ಲೇಷಣೆ ಮಾಡಿದ ಛಂದೋಬಂಧಗಳನ್ನು ಅಕಾರಾದಿ ಕ್ರಮದಲ್ಲಿ ನೀಡಲಾಗಿದೆ. ಅವುಗಳ ಮುಂದೆ ಪುಟಸೂಚನೆ ಮಾಡಿಲ್ಲ. ಏಕೆಂದರೆ, ಕೆಲವು ಛಂದೋಬಂಧಗಳ ಹೆಸರುಗಳು ಹತ್ತಾರು ಬಾರಿ ಹಲವು ಪುಟಗಳಲ್ಲಿ ಕಾಣಿಸಿಕೊಳ್ಳುತ್ತವೆ; ಕೆಲವು ಒಂದೇ ಪುಟದಲ್ಲಿ ಹಲವು ಬಾರಿ ಕಾಣಿಸಿಕೊಳ್ಳುತ್ತವೆ. ಆದುದರಿಂದ ಪುಟಸೂಚನೆ-ಯನ್ನು ನೀಡದೆ ಕೇವಲ ಹೆಸರಿಸಲಾಗಿದೆ. ಸಂಸ್ಕೃತ, ಕನ್ನಡ ಮತ್ತು ಇತರ ಭಾಷೆಗಳ ಛಂದೋಬಂಧಗಳ ನಾಮಗಳು ಇಲ್ಲಿವೆ. (ಛಂದೋಬಂಧನಾಮಗಳೊಡನೆ ಛಂದೋವರ್ಗ-ನಾಮಗಳೂ ಈ ಸೂಚಿಯಲ್ಲಿವೆ.) ಈ ಹೆಸರುಗಳಲ್ಲಿ ಕೆಲವು ಒಂದೇ ಪದ್ಯದ ವಿಭಿನ್ನ ನಾಮಗಳಾಗಿವೆ.

ತ್ರಿಮೂರ್ತಿಬಂಧ
ತ್ರಿವಿಧಿ
ತ್ರಿವುಡೆ
ತ್ರಿಷ್ಟುಪ್ ಛಂದ
ತ್ವರಿತಗತಿ
ತ್ವರಿತ ರಗಳೆ
ದಂಡಕ
ದಿಕ್ಪಾಲ
ದೊರೆಯಕ್ಕರ
ದ್ರುತಮಧ್ಯಾ
ದ್ರುತವಿಲಂಬಿತ
ದ್ವಿಪದಿ
ನತೋನ್ನತ
ಪಂಕ್ತಿ
ಪಂಚಕಾವಲೀ
ಪಂಚಚಾಮರ
ಪಜ್ಝಟಿಕಾ
ಪಣವಕ
ಪಥ್ಯಾ
ಪದಚತುರೂರ್ಧ್ವ
ಪದ್ಧಡೀ
ಪದ್ಧತಿ
ಪದ್ಧಲೀ
ಪರಿವರ್ಧಿನೀಷಟ್ಪದಿ
ಪಿರಿಯಕ್ಕರ
ಪೃಥ್ವೀ
ಪ್ರಮಾಣಿಕಾ
ಬೃಹತೀ
ಭಾಮಿನಿಷಟ್ಪದಿ
ಭುಜಂಗಪ್ರಯಾತ
ಭುಜಂಗವಿಜೃಂಭಿತ
ಭೋಗಷಟ್ಪದಿ
ಭ್ರಮರವಿಲಸಿತ
ಮಟ್ಟರಗಳೆ
ಮಣಿಗುಣನಿಕರ
ಮತ್ತಮಯೂರ
ಮತ್ತಾಕ್ರೀಡಾ
ಮತ್ತೇಭವಿಕ್ರೀಡಿತ
ಮದನವತಿ
ಮಂದಾಕ್ರಾಂತಾ
ಮಂದಾನಿಲರಗಳೆ
ಮಂದಾನಿಲವೃತ್ತ
ಮಲ್ಲಿಕಾಮಾಲೆ
ಮಹಾಸ್ರಗ್ಧರಾ
ಮಹೋತ್ಸವ
ಮಾಣವಕ
ಮಾತ್ರಾಜಾತಿ
ಮಾತ್ರಾಬಂಧ
ಮಾತ್ರಾಸಮಕ
ಮಾಲಾ
ಮಾಲಿನೀ
ಮುಕ್ತಹರ
ಮೃಗನೇತ್ರ
ಮೌಕ್ತಿಕದಾಮ
ರಗಳೆ
ರಘಟಾ
ರಘಟಾಬಂಧ
ರಥೋದ್ಧತಾ
ಲಯಗ್ರಾಹಿ
ಲಯೋತ್ತರ
ಲಲಿತ
ಲಲಿತಗತಿ
ಲಲಿತಪದ
ಲಲಿತರಗಳೆ
ಲಹರಿಕಾ
ಲೌಕಿಕಛಂದ
ವಂಜಿಪ್ಪಾಟ್
ವಂಶಸ್ಥವೃತ್ತ
ವನಮಂಜರೀ
ವನಮಯೂರ
ವಸಂತತಿಲಕಾ
ವಾತೋರ್ಮೀ
ವಾರ್ಧಕಷಟ್ಪದಿ
ವಿಚಿತ್ರಲಲಿತ
ವಿಜಾತಿಗಾಥಾ
ವಿತಾಲಬಂಧ
ವಿದ್ಯುನ್ಮಾಲಾ
ವಿನಿಮ್ನ
ವಿಪುಲಾ
ವಿಬುಧಪ್ರಿಯಾ
ವಿಷಮವೃತ್ತ
ವೈತಾಲೀಯ
ವೈದಿಕಛಂದ
ಶಂಭುನಟನ
ಶರಷಟ್ಪದಿ
ಶಶಿವದನಾ
ಶಾರ್ದೂಲ
ಶಾರ್ದೂಲವಿಕ್ರೀಡಿತ
ಶಾಲಿನೀ
ಶೀರ್ಷಕ
ಶ್ಯಾಮಾಂಗೀ
ಶ್ಲೋಕ
ಷಟ್ಪದಿ
ಷಟ್ಪದಿಕೆ
ಸಂಗತಿ
ಸತಾಲಬಂಧ
ಸಮಪಾದಗೀತಿಕೆ
ಸರಲ
ಸಮವೃತ್ತ
ಸರಳರಗಳೆ
ಸಾಂಗತ್ಯ
ಸೀಸ
ಸೀಸಪದ್ಯ
ಸುಬದ್ಧಸೀಸ
ಸುಮಾಲತೀ
ಸೈನಿಕ
ಸೊಬಗಿನ ಸೋನೆ
ಸ್ಕಂಧಜಾತಿ
ಸ್ರಗ್ಧರಾ
ಸ್ರಗ್ವಿಣೀ
ಹಂಸಕ್ರೀಡಾ
ಹಂಸಗತಿ
ಹರಿಣೀಪ್ಲುತ
ಹರಿಣೀವೃತ್ತ

## ಸೂಚಿ ೬

# ಉಲ್ಲೇಖಿಸಿದ, ಉದ್ಧರಿಸಿದ ಪದ್ಯಗಳ ಅಕಾರಾದಿ ಸೂಚಿ

ಉದ್ಧೃತಪದ್ಯಗಳ ಮೊದಲ ಸಾಲಿನ ಭಾಗಗಳನ್ನು ಮಾತ್ರ ಇಲ್ಲಿ ಎತ್ತಿಕೊಟ್ಟು ಅವುಗಳ ಮುಂದೆ ಪುಟಸಂಖ್ಯೆಗಳನ್ನು ಗುರುತಿಸಲಾಗಿದೆ. ಕನ್ನಡ, ಸಂಸ್ಕೃತ ಮತ್ತು ಇತರ ಭಾಷಾ ಪದ್ಯಗಳನ್ನು ವಿಂಗಡಿಸಿ ಬೇರೆ ಬೇರಾಗಿ ನೀಡಲಾಗಿದೆ.

### ಕನ್ನಡ ಪದ್ಯಗಳು

## ಸಂಸ್ಕೃತ ಪದ್ಯಗಳು

## ಇತರ ಭಾಷಾಪದ್ಯಗಳು



***

# ಸೂಚಿ ೭

## ಪಾರಿಭಾಷಿಕಪದಸೂಚಿ

ಸೇಡಿಯಾಪು ಅವರು ಛಂದೋವಿಷಯಗಳ ನಿರೂಪಣೆಗೆ ಶಾಸ್ತ್ರದಲ್ಲಿ ಅದಾಗಲೇ ರೂಢಿಯಲ್ಲಿದ್ದ ಪಾರಿಭಾಷಿಕಪದಗಳೊಡನೆ ತಾವೇ ಟಂಕಿಸಿದ ಪದಗಳನ್ನೂ ಸಾಕಷ್ಟು ಬಳಸಿಕೊಂಡಿದ್ದಾರೆ. ಆದರೆ ಆ ಪದಗಳನ್ನು ಅವರೇ ಮೊದಲು ಪ್ರಯೋಗಿಸಿದ್ದೆಂದು ಭಾಸವಾಗದಂತೆ ನಿರೂಪಣೆಯಲ್ಲಿ ಅವು ಹೊಂದಿಕೊಂಡು ಪ್ರಯುಕ್ತವಾಗಿವೆ. ಅವರು ಪ್ರಯೋಗಿಸಿದ ಮುಖ್ಯವಾದ, ಗಮನಾರ್ಹವಾದ ಪಾರಿಭಾಷಿಕಪದಗಳನ್ನು ಈ ಸೂಚಿಯಲ್ಲಿ ನೀಡಲಾಗಿದೆ. ಅವರೇ ಟಂಕಿಸಿದ, ಮೊದಲು ಉಪಯೋಗಿಸಿದ ಅಥವಾ ವಿಶಿಷ್ಟಾರ್ಥದಲ್ಲಿ ಪ್ರಯೋಗಿಸಿದ ಪದಗಳನ್ನು ದಪ್ಪ ಅಕ್ಷರಗಳಲ್ಲಿ ಸೂಚಿಸಿದೆ. ಅಂತಹವುಗಳಲ್ಲಿ ಕೆಲವು ಪದಗಳು ಕ್ವಚಿತ್ತಾಗಿಯೂ ಕೆಲವು ಹೆಚ್ಚು ಬಾರಿಯೂ ಬಳಕೆಗೊಂಡುದುಂಟು. ಉದಾಹರಣೆಗೆ 'ಛಂದೋಗತಿ' 'ಗತಿ' 'ಲಯ' – ಈ ಪದಗಳು ಹಲವಾರು ಬಾರಿ ಬಳಕೆಗೊಂಡಿವೆ. ಆದುದರಿಂದ ಅಂತಹ ಪದಗಳ ಮುಂದೆ ಪುಟಸಂಖ್ಯೆಯನ್ನು ಕೊಡದೆ ಕೆಲವು ವಿಶಿಷ್ಟಪದಗಳ ಮುಂದೆ ಮಾತ್ರವೇ ಸಂಖ್ಯೆಯನ್ನು ನಮೂದಿಸಿದೆ. ಛಂದಃಶಾಸ್ತ್ರದ ಪಾರಿಭಾಷಿಕಪದಗಳೊಡನೆ ಸಂಗೀತಶಾಸ್ತ್ರದ ಮತ್ತು ವ್ಯಾಕರಣಶಾಸ್ತ್ರದ ಪಾರಿಭಾಷಿಕ ಪದಗಳನ್ನೂ ಸೇಡಿಯಾಪು ಅವರು ಬಳಸಿರುವುದರಿಂದ ಅವೆಲ್ಲವನ್ನೂ ಒಟ್ಟು ಸೇರಿಸಿಯೇ ಈ ಸೂಚಿಯನ್ನು ರಚಿಸಲಾಗಿದೆ. ಛಂದಸ್ಸಿನಲ್ಲಿ ತೀರ ಸಾಮಾನ್ಯವಾದ ಗುರು, ಲಘು, ಗಣ, ಮಾತ್ರೆ, ಚರಣ ಇತ್ಯಾದಿಗಳನ್ನೂ ಛಂದೋಬಂಧಗಳ ಹೆಸರುಗಳನ್ನೂ ಈ ಸೂಚಿಯಲ್ಲಿ ಸೇರಿಸಿಲ್ಲ. (ಛಂದೋಬಂಧಗಳ ಹೆಸರುಗಳಿಗೆ ೬ನೆಯ ಸೂಚಿಯನ್ನು ಗಮನಿಸಬಹುದು.) ಇದು ಪಾರಿಭಾಷಿಕಪದಸೂಚಿಯೂ ಹೌದು, ವಿಶಿಷ್ಟಪದಸೂಚಿಯೂ ಹೌದು. – ಸಂ.

***